# ಶ್ರೀಮದ್ವಾಲ್ಮೀಕಿರಾಮಾಯಣಮ್

# ಯುದ್ಧಕಾಂಡಃ

## ಉತ್ತರಾರ್ಧಃ

೬೮–೧೩೧ ಸರ್ಗಗಳು

( ಕನ್ನಡ ಅನುವಾದ ಸಹಿತ )

ಮುನ್ನುಡಿ

ಡಾ|| ಡಿ. ವಿ. ಗುಂಡಪ್ಪನವರಿಂದ

ಅನುವಾದಕರು

ವಿದ್ವಾನ್ ಎನ್. ರಂಗನಾಥಶರ್ಮಾ

ಪ್ರಕಾಶಕರು

ರಾಮಾಯಣ ಪ್ರಕಾಶನ ಸಮಿತಿ

ನರಸಿಂಹರಾಜ ಕಾಲೊನಿ, ಬೆಂಗಳೂರು–೧೯

# ಬಿನ್ನಹ

ನಾವು ಆರಂಭಿಸಿದ ಶ್ರೀಮದ್ರಾಮಾಯಣ ಪ್ರಕಾಶನ ಕಾರ್ಯವು ಬಹು ಮಟ್ಟಿಗೆ ಪೂರ್ಣವಾದಂತೆಯೇ ಆಯಿತು ಶ್ರೀರಾಮಪಟ್ಟಾಭಿಷೇಕ ಪರ್ಯಂತವಾಗಿ ಯುದ್ಧಕಾಂಡದ ದ್ವಿತೀಯ ಸಂಪುಟವನ್ನು ವಾಚಕರ ಕೈಯಲ್ಲಿಡಲು ನಮಗೆ ಬಹಳ ಸಂತೋಷವಾಗಿದೆ ಶ್ರೀ ಸೀತಾರಾಮರ ಅನುಗ್ರಹದಿಂದಲೇ ಇಷ್ಟು ಕಾರ್ಯವು ಸಾಧ್ಯವಾಯಿತೆಂದು ನಾವು ನಂಬಿದ್ದೇವೆ.

ಮಾನ್ಯರಾದ ಡಾ|| ಡಿ. ವಿ. ಗುಂಡಪ್ಪನವರು ಪ್ರತಿಯೊಂದು ಸಂಪುಟಕ್ಕೂ ಪಾಂಡಿತ್ಯಪೂರ್ಣವಾದ ಮುನ್ನುಡಿಯನ್ನು ಕೃಪೆಯಿಂದ ಬರೆದುಕೊಟ್ಟು ಪ್ರೋತ್ಸಾಹಿಸಿದ್ದಾರೆ. ಅವರಿಗೆ ಸಮಿತಿಯು ಕೃತಜ್ಞತೆಯಿಂದ ವಂದನೆಗಳನ್ನು ಅರ್ಪಿಸುತ್ತದೆ.

ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರು ಮೊದಲಿನಿಂದಲೂ ರಸವತ್ತಾದ ಕನ್ನಡ ಅನುವಾದವನ್ನು ಆಸಕ್ತಿಯಿಂದ ಬರೆದುಕೊಟ್ಟು ಉಪಕರಿಸಿದ್ದಾರೆ. ಪ್ರಭಾ ಮುದ್ರಣಾಲಯದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು ಹೆಚ್ಚಿನ ಶ್ರದ್ಧೆಯನ್ನು ವಹಿಸಿ ಸುಂದರವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಇವರುಗಳಿಗೆ ಸಮಿತಿಯು ಋಣಿಯಾಗಿದೆ.

ಇನ್ನು ಉಳಿದಿರುವ ಉತ್ತರಕಾಂಡವನ್ನು ಸಹ ಮುಂದಿನ ವರ್ಷ ಪ್ರಕಟಿಸಬೇಕೆಂಬ ಉದ್ದೇಶವಿದೆ. ವಾಚಕಮಹಾಶಯರು ಎಂದಿನಂತೆ ಉದಾರ ಪ್ರೋತ್ಸಾಹವನ್ನಿತ್ತು ದಯವಿಟ್ಟು ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ. ಪುಸ್ತಕಗಳ ಮಾರಾಟದಲ್ಲಿ ಅನೇಕ ಮಹನೀಯರು ನಮ್ಮೊಡನೆ ಸಹಕರಿಸಿ ಉಪಕಾರಮಾಡಿರುತ್ತಾರೆ. ಅವರೆಲ್ಲರ ನೆರವನ್ನೂ ನಾವು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಬೆಂಗಳೂರು
29-3-1970

**ಡಿ. ಸಿ. ಅನಂತರಾಮಯ್ಯ**
**ಕಾರ್ಯದರ್ಶಿ**

# ರಾಮಾಯಣ ಪ್ರಕಾಶನ ಸಮಿತಿ



## ಸದಸ್ಯರು

ಶ್ರೀಯುತರಾದ

೧ ಹೆಚ್. ಎಸ್. ಕೃಷ್ಣಸ್ವಾಮಿ

೨ ಎಸ್. ಎನ್. ಮೂರ್ತಿ

೩ ಹೆಚ್. ಸಿ. ನಂಜುಂಡಭಟ್ಟ

೪ ಬಿ. ಕೆ. ಅನಂತರಾಮಯ್ಯ

೫ ಟಿ. ಆರ್. ಶಾಮಣ್ಣ

೬ ಹೆಚ್. ವಿ. ಅಪ್ರಮೇಯ

೭ ಕೆ. ಸಿ. ಎಸ್. ರಾಮನ್

೮ ಜಿ. ನಾರಾಯಣರಾವ್

೯ ಎನ್. ರಂಗನಾಥಶರ್ಮಾ

೧೦ ಡಿ ಸಿ. ಅನಂತರಾಮಯ್ಯ (ಕಾರ್ಯದರ್ಶಿ)

# ನಿವೇದನೆ

ಕೌಸಲ್ಯಾನಯನೋತ್ಸವೋ ದಶರಥಸ್ಯೋದ್ಯತ್ತಪಸ್ಯಾಫಲಂ
ವಿಶ್ವಾಮಿತ್ರಮನೋರಥೋ ಜನಕಭೂಪಾಲಸ್ಯ ಭಾಗ್ಯೋದಯಃ ।
ವೈದೇಹೀವದನಾರವಿಂದಮಧುಪಃ ಕೋದಂಡಝಂಕಾರಭೂಃ
ಧರ್ಮಸ್ಯೈಕಪರಾಯಣಂ ವಿಜಯತೇ ಶ್ರೀರಾಮಚಂದ್ರಃ ಪ್ರಭುಃ ॥

ಆರು ವರ್ಷಗಳ ಹಿಂದೆ ಸುಂದರಕಾಂಡದ ಅನುವಾದವನ್ನಾರಂಭಿಸಿದಾಗ ಸಮುದ್ರಲಂಘನವು ನನಗೆ ಸಾಧ್ಯವೆ ಎನ್ನಿಸಿತು. ಭಗವದನುಗ್ರಹದಿಂದ ಅದು ಸಾಧ್ಯವಾಯಿತು. ಅನಂತರ ಬಾಲಕಾಂಡದ ಅನುವಾದವನ್ನು ಉಪಕ್ರಮಿಸಿದಾಗ ಯುದ್ಧಕಾಂಡವನ್ನು ಹೊಕ್ಕು ಜಯಗಳಿಸಲು ಶಕ್ಯವೆ ಎಂದು ಭೀತಿಯುಂಟಾಯಿತು. ಸೀತಾರಾಮರ ಕೃಪೆಯಿಂದ ಭೀತಿಯು ನೀಗಿ ಇಲ್ಲಿಯವರೆಗೆ ನಾಗಿಬಂದದ್ದಾಯಿತು. ದೇವತಾಕೃಪೆಯಿದ್ದಲ್ಲಿ ಯಾವುದು ಅಶಕ್ಯ? 'ಪಂಗುಂ ಲಂಘಯತೇ ಗಿರಿಮ್' ಇನ್ನು ಉತ್ತರಕಾಂಡ ಒಂದುಂಟು. ಆ ಕಾರ್ಯವೂ ಮುಂದಿನ ವರ್ಷ ಸಾಧ್ಯವಾದೀತು.

ನನಗೆ ನೆರವುನೀಡಿದ ಸಕಲ ಮಹನೀಯರನ್ನೂ ಸ್ಮರಿಸಿಕೊಂಡು "ಮಿತ್ರಕಾರ್ಯಂ ಕೃತಮಿದಂ ಸುಹೃದ್ಭಿಃ" ಎಂದು ಕೃತಜ್ಞತೆಯಿಂದ ನಿವೇದಿಸಿಕೊಳ್ಳುತ್ತಿದ್ದೇನೆ. ಶ್ರೀರಾಮಾಯಣ ಪ್ರಕಾಶನ ಸಮಿತಿಯವರಿಂದ ನನಗಾದ ಉಪಕಾರ ಅಷ್ಟಿಷ್ಟಲ್ಲ. ಅವರ ಆಶ್ರಯವಿಲ್ಲದಿದ್ದರೆ ಈ ದೊಡ್ಡ ಕೆಲಸ ನನ್ನಿಂದ ಆಗುತ್ತಿರಲಿಲ್ಲ. ಅವರು ಸಮಸ್ತ ಸಹಾಯವನ್ನೂ ಕೊಟ್ಟು ಪ್ರೋತ್ಸಾಹಿಸಿದ್ದರ ಫಲವಾಗಿ ಶ್ರೀರಾಮಪಟ್ಟಾಭಿಷೇಕವನ್ನು ನೋಡಿ ನಲಿಯುವಂತಾಯಿತು. ಸೀತಾಸಮೇತನಾದ ಶ್ರೀರಾಮಚಂದ್ರನ ಸೇವೆಯನ್ನು ಯತ್ಕಿಂಚಿತ್ ನಡೆಸುವ ಪುಣ್ಯ ನನಗಿದ್ದುದರಿಂದ ಸಮಿತಿಯವರು ಈ ಕಾರ್ಯವನ್ನು ನನಗೆ ವಹಿಸಿದರೆಂದು ತಿಳಿದಿದ್ದೇನೆ. ಸಮಿತಿಯ ಸಕಲ ಸದಸ್ಯರಿಗೂ ಮಂಗಳವಾಗಲೆಂದು ಹಾರೈಸುತ್ತೇನೆ. ಮೂಲಶ್ಲೋಕಗಳನ್ನು ಕನ್ನಡಲಿಪಿಯಲ್ಲಿ ಬರೆದುಕೊಟ್ಟುದಲ್ಲದೆ, ಪ್ರಕಾಶನ ಕಾರ್ಯದಲ್ಲಿ ಅವಿಶ್ರಾಂತವಾಗಿ ದುಡಿಯುತ್ತಿರುವ ಸಮಿತಿಯ

ಕಾರ್ಯದರ್ಶಿಗಳಾದ ಶ್ರೀ. ಡಿ. ಸಿ. ಅನಂತರಾಮಯ್ಯನವರ ಉಪಕಾರವನ್ನು ಕೃತಜ್ಞತೆಯಿಂದ ಎಷ್ಟು ಸಲ ನೆನೆದರೂ ಸಾಲದು.

ಪೂಜ್ಯರಾದ ಡಾ|| ಡಿ. ವಿ. ಗುಂಡಪ್ಪನವರು ನನ್ನನ್ನು ವಾತ್ಸಲ್ಯದಿಂದ ಹರಸಿ ಪ್ರೋತ್ಸಾಹಿಸುತ್ತ ಬಂದಿದ್ದಾರೆ. ಪ್ರತಿಯೊಂದು ಸಲವೂ ಅನುವಾದಶೈಲಿಯು ರಸವತ್ತಾಗಿದೆಯೆಂದು ಪ್ರಶಂಸೆಮಾಡಿದ್ದಾರೆ. ಅವರ ಪ್ರಶಂಸೆಗೆ ತಕ್ಕ ಅರ್ಹತೆ ನನಗಿಲ್ಲವೆಂಬುದನ್ನು ನಾನು ಚೆನ್ನಾಗಿ ಬಲ್ಲೆ. ಆ ಪ್ರಶಂಸೆಯಿಂದ ಒಂದು ಉಪಕಾರವೇನೋ ಆಯಿತು. ನನ್ನಲ್ಲಿ ಆತ್ಮವಿಶ್ವಾಸ ಮೂಡಿತು. ನನ್ನ ಲೇಖನಿಗೆ ಬಲ ಬಂದಿತು. ಶ್ರೀ. ಡಿ. ವಿ. ಜಿ. ಯವರ ಮಾರ್ಗದರ್ಶನದಿಂದ ಬಹುವಿಧದಲ್ಲಿ ನಾನು ಉಪಕೃತನಾಗಿದ್ದೇನೆ.

ಶ್ರೀಮದ್ರಾಮಾಯಣದಲ್ಲಿ ಭಕ್ತ್ಯಾದರಗಳೂ ಉತ್ತಮಸಾಹಿತ್ಯದಲ್ಲಿ ಅಭಿರುಚಿಯೂ ಇನ್ನೂ ಉಳಿದಿವೆಯೆಂಬುದನ್ನು ಸಂತೋಷದಿಂದ ಹೇಳಿಕೊಳ್ಳಬಹುದಾಗಿದೆ. ಹಿಂದಿನ ಕಾಂಡಗಳ ಪ್ರಚಾರಬಾಹುಳ್ಯದಿಂದ ಇದು ವ್ಯಕ್ತವಾಗಿದೆ. ವಾಚಕರೂ ವಿಮರ್ಶಕರೂ ಈ ಕನ್ನಡ ಅನುವಾದದಿಂದ ಸಂಪ್ರೀತರಾಗಿ ಒಳ್ಳೆಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಆ ಮಹನೀಯರೆಲ್ಲರಿಗೂ ವಂದನೆಗಳನ್ನರ್ಪಿಸುತ್ತೇನೆ.

ಅನುವಾದಕಾರ್ಯವು ಕೆಲವು ಅಂಶಗಳಲ್ಲಿ ಕ್ಲಿಷ್ಟವಾದುದು. ಮೂಲದ ಆಶಯವನ್ನು ಗ್ರಹಿಸುವುದೂ ಗ್ರಹಿಸಿದ್ದನ್ನು ದೇಶಭಾಷೆಯಲ್ಲಿ ಸ್ಪಷ್ಟಮಾಡುವುದೂ ಕ್ಲೇಶಕರಮೇ ಸರಿ. ವಾಲ್ಮೀಕಿರಾಮಾಯಣದಲ್ಲಂತೂ ಸ್ಫುರಿಸುವ ಧ್ವನಿಗಳು ಹಲವಾರು. ಅನುವಾದದಲ್ಲಿ ಅವುಗಳಲ್ಲೊಂದನ್ನು ಹಿಡಿಯಬಹುದೇ ಹೊರತು ಎಲ್ಲವನ್ನೂ ಅಲ್ಲ. ಎಲ್ಲವನ್ನೂ ವಿವರಿಸುವುದಕ್ಕೆ ಪ್ರವಚನದಲ್ಲಿ ಸಾಧ್ಯವಾದೀತು. ಪ್ರವಚನಕಾರನು ವಿವರಿಸುವ ಅರ್ಥಗಳಲ್ಲದೆ ಮತ್ತೊಂದು ಭಾವವೂ ಶ್ರೋತೃವಿಗೆ ಹೊಳೆಯಬಹುದು. ಮಹಾಕಾವ್ಯದ ಸ್ವರೂಪವೇ ಇಷ್ಟು.

ನನ್ನ ಪರಿಶ್ರಮವು ರಸಜ್ಞರಾದ ವಾಚಕರ ಮುಂದಿದೆ. ಎದುರಿಗಿರುವ ಕಬ್ಬನ್ನು ಬಣ್ಣಿಸುವುದಾದರೂ ಏಕೆ? ಬಾಯಿಂದ ಅಗಿದಾಗ ಕಬ್ಬು ಬಲಿತಿದೆಯೆ, ರಸವಿದೆಯೆ, ಇದ್ದರೆ ಸಿಹಿಯಾಗಿದೆಯೆ? ಎಂಬುದು ತಾನೇ

ತಿಳಿಯುತ್ತದೆ. ಇಲ್ಲವೆ—ಕಬ್ಬು ಬಲಿತಿಲ್ಲ, ರಸವಿಲ್ಲ, ಇದ್ದರೂ ಸಪ್ಪೆ ಎಂಬು ದಾದರೂ ಗೊತ್ತಾಗುತ್ತದೆ.

ಕಳೆದ ಹಲವು ವರ್ಷಗಳಿಂದಲೂ ಶ್ರೀರಾಮನ, ಜಾನಕಿಯ, ಲಕ್ಷ್ಮಣನ, ಭರತನ, ಹನುಮಂತನ ಸಂತತ ಚಿಂತನೆಗಳಿಂದ ನನ್ನ ಮನಸ್ಸು ಆನಂದದಲ್ಲಿ ಮುಳುಗಿದೆ. ವಾಲ್ಮೀಕಿಮುನಿಗಳ ಅನುಪಮ ಕಾವ್ಯಾಮೃತ ವನ್ನು ಕುಡಿದು ಹೃದಯಕ್ಕೆ ನೆಮ್ಮದಿಯಾಗಿದೆ. ಜಾನಕೀಸಹಿತನಾದ ಶ್ರೀರಾಮಚಂದ್ರನ ಅಪಾರಮಹಿಮೆಯ ವಿಸ್ತಾರಕ್ಕೆ, 'ಬಲಂ ವಿಷ್ಣೋಃ ಪ್ರವರ್ಧತಾಮ್' ಎಂಬ ಉಪದೇಶವನ್ನನುಸರಿಸಿ ಯತ್ಕಿಂಚಿತ್ ಅಳಿಲು ಸೇವೆಯನ್ನು ಸಲ್ಲಿಸಿದ್ದೇನೆಂದು ನನ್ನ ಅಂತರಂಗವು ತೃಪ್ತಿಗೊಂಡಿದೆ:

ಸೃಷ್ಟಿಂ ಸ್ವಾಮವಲೋಕ್ಯ ಕಷ್ಟಬಹುಲಾಂ ನೀಚೋಚ್ಚಭಾವಂ ಗತಾಂ
ಕೃಷ್ಟಾನ್ ಮೋಹತಮಸ್ಯ ದಮ್ಯವಿಷಯಾಸಂಗೈಶ್ಚ ಖಿನ್ನಾನ್ ಜನಾನ್ |
ಸ್ರಷ್ಟುಂ ಲೋಕಮದುಃಖಮದ್ಭುತಮಮರ್ತ್ಯಾನಾಂ ಸ್ಪೃಹಾಯಾಃಪದಂ
ವಾಲ್ಮೀಕಿಂ ವಿಭುರಾದಿಶನ್ಮುನಿವರಂ ಪ್ರೀತ್ಯಾ ಸ್ವಯಂಭೂಃ ಸ್ವಯಮ್ ||

'ಲೋಕೇಶ್ವರನಾದ ಬ್ರಹ್ಮದೇವನು ತನ್ನ ಸೃಷ್ಟಿಯು ನೀಚೋಚ್ಚ ಭಾವಗಳಿಂದ ತುಂಬಿ ಕಷ್ಟಮಯವಾಗಿರುವುದನ್ನೂ ದುರ್ನಿವಾರವಾದ ವಿಷಯಲೋಲುಪ್ತಿಗೆ ಸಿಕ್ಕಿದ ಜನರು ಮೋಹಾಂಧಕಾರದಲ್ಲಿ ಎಳೆಯ ಲ್ಪಟ್ಟು ದಾರಿತೋರದೆ ವಿಷಣ್ಣರಾಗಿ ಬಳಲುವುದನ್ನೂ ನೋಡಿದನು. ಆಗ ಪ್ರಜೆಗಳ ಮೇಲಿರುವ ವಾತ್ಸಲ್ಯದಿಂದ ವಾಲ್ಮೀಕಿಮಹರ್ಷಿಗಳನ್ನು ಕಂಡು "ವಾಲ್ಮೀಕಿ, ನನ್ನ ಸೃಷ್ಟಿಗೆ ವಿಲಕ್ಷಣವಾದ ಇನ್ನೊಂದು ಅದ್ಭುತಲೋಕ ವನ್ನು ನಿರ್ಮಿಸು. ಅದರಲ್ಲಿ ದುಃಖದ ಲೇಶವೂ ಇರಬಾರದು. ದೇವತೆ ಗಳೂ ಅದರಲ್ಲಿ ವಿಹರಿಸಲು ಬಯಸುವಂತಿರಬೇಕು" ಎಂದು ಆದೇಶ ವನ್ನಿತ್ತನು.'

ಸೋಽಯಂ ಲೋಕಃ ಪರಮತಪಸಾ ತೇನ ರಾಮಾಯಣಾತ್ಮಾ
ಸೃಷ್ಟಃ ಕ್ಲೇಶಪ್ರಶಮನಕರಃ ಕಾಮನೀಯಃ ಸುರಾಣಾಮ್ |
ಯಸ್ಮಿನ್ನಿತ್ಯಂ ನವರಸಮಯಃ ಸ್ಯಂದತೇ ವಾಗ್ವಿಲಾಸಃ
ಯಸ್ಯಾಸ್ವಾದಾನ್ನಿರವಧಿ ಸುಖಂ ವಿಂದತೇ ಸಜ್ಜನೌಘಃ ||

ಆಗ ಪರಮತಪಸ್ವಿಗಳಾದ ವಾಲ್ಮೀಕಿಮುನಿಗಳು ತಮ್ಮ ತಪೋಬಲದಿಂದ ರಾಮಾಯಣವೆಂಬ ಈ ಶಬ್ದಲೋಕವನ್ನು ಸೃಜಿಸಿದರು. ಈ ಲೋಕವು ಜನರ ಸಕಲವಿಧವಾದ ಕಷ್ಟವನ್ನೂ ನೀಗಿಸತಕ್ಕದ್ದಾಗಿದೆ. ದೇವತೆಗಳೂ ಇದರಲ್ಲಿ ವಿಹರಿಸಲು ಬಯಸುತ್ತಾರೆ. ಈ ರಾಮಾಯಣಲೋಕದಲ್ಲಿ ನವರಸಮಯವಾದ ವಾಗ್ವಿಲಾಸವೆಂಬ ನದಿಯು ಪ್ರವಹಿಸುತ್ತಿದೆ. ಸಜ್ಜನರು ಇದನ್ನು ಆಸ್ವಾದಿಸಿ ಅನುಪಮವಾದ ಸೌಖ್ಯವನ್ನು ಪಡೆಯುತ್ತಿದ್ದಾರೆ.'

ರಾಮಾಯಣಂ ರಘುಕುಲೋತ್ತಮಸಚ್ಚರಿತ್ರಂ
ಲೋಕಸ್ಯ ಭಾಗ್ಯವಶತೋ ಭಗವಾನ್ ಮಹರ್ಷಿಃ |
ಯದ್ವ್ಯಾಜಹಾರ ರಮಣೀಯಗಿರಾಮರಾಣಾಂ
ಕರ್ಣಾಟವಾಚಿ ಮಯಕಾ ತದಿದಂ ನಿಬದ್ಧಮ್ ||

ವಿಶ್ವಾಮಿತ್ರಾನ್ವವಾಯೇನ ರಂಗನಾಥಾಭಿಧಾಜುಷಾ |
ಶ್ರೀರಾಮಚಂದ್ರಪ್ರೀತ್ಯರ್ಥಂ ರಾಮಾಯಣಮನೂದಿತಮ್ ||

ಬೆಂಗಳೂರು
೧೨-೩-೧೯೭೦

ಅನುವಾದಕ

# ಮುನ್ನುಡಿ

ಅಯೋಧ್ಯಾನಗರೀ ಧನ್ಯಾ
ಯಾ ದದರ್ಶ ಜಯೋಜ್ಜ್ವಲಮ್ ।
ಸೀತಾತೃಪ್ತಂ ಲಕ್ಷ್ಮಣಾಪ್ತಂ
ಶ್ರೀರಾಮಂ ಪುನರಾಗತಮ್ ॥

ಧನ್ಯಸ್ತಪಸ್ವೀ ಭರತಃ
ಸೌಭ್ರಾತ್ರಾವಿಷ್ಟಮಾನಸಃ ।
ರಾಜಪೀಠಮನಾರುಹ್ಯ
ಯೋಽಭೂದ್ರಾಜ್ಯಧುರಂಧರಃ ॥

ಪರಮಮಂಗಲನಿಧಿಯಾದ ಯಾವ ವಿಶ್ವಚೈತನ್ಯವು ವಾಲ್ಮೀಕಿಗಳ ಹೃದಯದಿಂದ ಕಾವ್ಯಪ್ರವಾಹವನ್ನು ಹೊರಹೊಮ್ಮಿಸಿತೋ, ಯಾವ ಮಹಾಚೈತನ್ಯವು ಕನ್ನಡಜನದ ಪ್ರಯೋಜನಕ್ಕಾಗಿ ಆ ಕಾವ್ಯಪ್ರವಾಹ ವನ್ನು ಹರಿಯಿಸಬೇಕೆಂದು ನಮ್ಮ ರಾಮಾಯಣ ಪ್ರಕಾಶನ ಸಮಿತಿಯ ಸದಸ್ಯರಲ್ಲಿ ಪ್ರೇರಣೆಯುಂಟುಮಾಡಿತೋ, ಮತ್ತು ಯಾವ ದಿವ್ಯ ಚೈತನ್ಯವು ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರವರ ಲೇಖನಿಯಲ್ಲಿ ಅನುಗ್ರಹ ತುಂಬಿತೋ ಆ ಭಗವಚ್ಚೈತನ್ಯದ ಕೃಪೆಯಿಂದ ಈಗ ನಾವು ಈ ಪರಮಪಾವನವಾದ ಪ್ರಯತ್ನದ ಉಪಾಂತಘಟ್ಟವನ್ನು ಮುಟ್ಟಿದ್ದೇವೆ. ಇಲ್ಲಿಯವರೆಗೆ ನಮ್ಮನ್ನು ಕಾಪಾಡಿ ನಡಸಿಕೊಂಡು ಬಂದಿರುವ ಶ್ರೀ ಸೀತಾರಾಮ ಭಗವಂತರ ಕರುಣೆ ಇನ್ನುಮುಂದೆಯೂ ನಮ್ಮನ್ನು ನಡಸಿ ಉತ್ತರಕಾಂಡದ ಸಮಾಪ್ತಿಯನ್ನು ಮುಟ್ಟಿಸೀತೆಂದು ನಂಬಿ ಈಗ ನಮ್ಮ ಕೃತಜ್ಞತೆಯ ನಮಸ್ಕಾರಗಳನ್ನು ಸಲ್ಲಿಸೋಣ.

## ಕಥಾಸ್ವಾರಸ್ಯ

ಯುದ್ಧಕಾಂಡದ ಪೂರ್ವಾರ್ಧದ ಕಥೆ ಸೇತುಬಂಧನದ ಪ್ರಕರಣ ದಿಂದ ಪ್ರಾರಂಭವಾಗಿ ಕುಂಭಕರ್ಣವಧೆಯವರೆಗೆ ಸಾಗಿದೆಯಷ್ಟೆ? ಈಗಿನ ಉತ್ತರಾರ್ಧಭಾಗದಲ್ಲಿ ಯುದ್ಧಪ್ರಸಂಗ ಮುಂದುವರಿಯುತ್ತದೆ.

ಕಥಾಧಾರೆ ಏಕಪ್ರಕಾರವಾದ ಸ್ವಾರಸ್ಯದಿಂದ ತುಂಬಿ ಹರಿದಿದೆ. ವಾಲ್ಮೀಕಿಗಳದು ಕಥೆ ಹೇಳುವುದರಲ್ಲಿ ನಿಸ್ಸೀಮವಾದ ನಿಪುಣತೆ. ಕಥೆ ಹೇಳುವ ಅಜ್ಜನ ಸುತ್ತಮುತ್ತ ಚಿಕ್ಕಮಕ್ಕಳು ನೆರೆಯುವಂತೆ ನಾವು ಸರಳಹೃದಯರಾಗಿ, ಸ್ವಸ್ಥಚಿತ್ತರಾಗಿ ಕಥೆ ಕೇಳಬೇಕು. ಯಾವ ಚಮತ್ಕಾರವನ್ನೂ ನಿರೀಕ್ಷಿಸಬಾರದು. ಯಾವ ಪ್ರಶ್ನೆಯನ್ನೂ ಎತ್ತಬಾರದು. ಯುದ್ಧವರ್ಣನೆಯಲ್ಲಿ ಸ್ವಾರಸ್ಯ ಕಾಣಬೇಕಾದರೆ ಈ ಸ್ವಾಭಾವಿಕವಾದ ಸರಳತೆಯೂ ಕೃತಕವಲ್ಲದ ಕುತೂಹಲವೂ ನಮ್ಮಲ್ಲಿರಬೇಕು. ಆಗ ನಮಗೆ ಅನುಭವವಾಗುತ್ತದೆ ವಾಲ್ಮೀಕಿಗಳ ಕೌಶಲ. ಹೇಗೆ ಕಥೆ ಹೇಳುತ್ತಾರೆ! ಕ್ಷಣಕ್ಷಣವೂ ನಮ್ಮ ಮನಸ್ಸು ಕೆರಳಿರುತ್ತದೆ. ಆ ಹೆಸರುಗಳನ್ನೇ ನೋಡಿರಿ: ದೇವಾಂತಕ, ನರಾಂತಕ, ಮಹೋದರ, ಮಹಾಪಾರ್ಶ್ವ, ಕುಂಭ, ನಿಕುಂಭ, ಅತಿಕಾಯ, ಮಹಾಕಾಯ. ವೀರರಸವನ್ನು ಕಲಕುವುದಕ್ಕೆ ಈ ಹೆಸರುಗಳೇ ಸಾಕು; ಆಮೇಲೆ ಅವರು ಬಿಡುವ ಅಸ್ತ್ರಪ್ರತ್ಯಸ್ತ್ರಗಳು: ಇತ್ತ ಕಡೆಯಿಂದ ಆಗ್ನೇಯಾಸ್ತ್ರ, ಅತ್ತಕಡೆಯಿಂದ ವಾರುಣಾಸ್ತ್ರ. ಇಲ್ಲಿಂದ ಐಂದ್ರಾಸ್ತ್ರ, ಅಲ್ಲಿಂದ ಪಾಶುಪತಾಸ್ತ್ರ. ಇವನು ಮೂರು ಬಾಣಗಳನ್ನು ಬಿಟ್ಟ; ಅವನು ಐದು ಬಾಣಗಳಿಂದ ಅದನ್ನು ಕತ್ತರಿಸಿದ. ಇವನು ಬಂಡೆ ತಂದು ಅಪ್ಪಳಿಸಿದ; ಅವನು ಮೋಡ ಕವಿಸಿ ಕುರುಡುಮಾಡಿದ. ಹೀಗೆ ವರ್ಣನೆಗಳು ರಾಮಲಕ್ಷ್ಮಣರ ಬಾಣಗಳಂತೆ ಪುಂಖಾನುಪುಂಖವಾಗಿ ಹೊರಟು ನಮ್ಮನ್ನು ಬೆರಗುಗೊಳಿಸುತ್ತವೆ.

## ಮಾಯಾಸೀತೆ

ರಾವಣನ ಮಗನಾದ ಇಂದ್ರಜಿತ್ತು ಮಾಯಾಯುದ್ಧಕ್ಕೆ ತೊಡಗುತ್ತಾನೆ. ಗಗನಮಂಡಲದಲ್ಲಿ ಮೋಡಗಳನ್ನು ಕವಿಸಿ ಅವುಗಳ ಮರೆಯಲ್ಲಿ ತಾನು ನಿಂತು ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತಾನೆ. ಈ ಘಳಿಗೆ ಈ ಕಡೆಯಿಂದ; ಇನ್ನೊಂದು ಘಳಿಗೆ ಬೇರೊಂದು ದಿಕ್ಕಿನಿಂದ; ಮತ್ತೊಂದು ಘಳಿಗೆ ಮಗದೊಂದು ದಿಕ್ಕಿನಿಂದ. ಹೀಗೆ ಅವನು ಎಲ್ಲಿದ್ದಾನೆಂದು ಗೊತ್ತುಮಾಡುವುದೇ ರಾಮಲಕ್ಷ್ಮಣರಿಗೆ ಕಷ್ಟವಾಗುತ್ತದೆ. ಕಡೆಗೆ ಇಂದ್ರಜಿತ್ತು ಮಾಯಾಸೀತೆಯನ್ನು ತರುತ್ತಾನೆ.

ಮೋಹನಾರ್ಥಂ ತು ಸರ್ವೇಷಾಂ
ಬುದ್ಧಿಂ ಕೃತ್ವಾ ಸುದುರ್ಮತಿಃ |
ಹನ್ತುಂ ಸೀತಾಂ ವ್ಯವಸಿತಃ
ವಾನರಾಭಿಮುಖೋ ಯಯೌ ||

—ಸರ್ಗ ೮೧, ಶ್ಲೋಕ ೬, ಪುಟ ೧೫೪

ಆ ಸ್ಥಿತಿಯಲ್ಲಿ ಸೀತೆಯನ್ನು ನೋಡಿ,

ಬಾಷ್ಪಪರ್ಯಾಕುಲಮುಖಃ
ಹನೂಮಾನ್ ವ್ಯಥಿತೋಽಭವತ್ ||

—ಸರ್ಗ ೮೧, ಶ್ಲೋ. ೧೨, ಪು. ೧೫೫

ಹನುಮಂತನು ಮಿಕ್ಕ ವಾನರರಿಂದ ಕೂಡಿ ಇಂದ್ರಜಿತುವಿನ ಕಡೆಗೆ ನುಗ್ಗಿದ. ಇಂದ್ರಜಿತ್ತು ಸುಮ್ಮನಿದ್ದನೆ?

ತಾಂ ಸ್ತ್ರಿಯಂ ಪಶ್ಯತಾಂ ತೇಷಾಂ
ತಾಡಯಾಮಾಸ ರಾವಣಿಃ ||

—ಸರ್ಗ ೮೧, ಶ್ಲೋ. ೧೬, ಪು. ೧೫೬

ದೃಶ್ಯ ಕಣ್ಣಿಗೆ ಕಟ್ಟಿದಹಾಗಿದೆ. ಇಂದ್ರಜಿತ್ತು ಕೋಪೋದ್ದೀಪ್ತನಾಗಿ ಸೀತಮ್ಮನನ್ನು ಹೊಡೆದನಂತೆ. ಇವನ ಏಟು ಬಿದ್ದಂತೆ ಆಕೆ "ರಾಮ! ರಾಮ!" ಎಂದು ಕೂಗಿಕೊಂಡಳಂತೆ. ಇಂದ್ರಜಿತ್ತು ಆಕೆಯ ತಲೆಗೂದಲನ್ನು ಹಿಡಿದು ಸೆಳೆದನಂತೆ. ಹನುಮಂತನು ಇಂದ್ರಜಿತ್ತುವನ್ನು ಕುರಿತು ಶಾಪವಿಡುತ್ತಾನೆ. ಇಂದ್ರಜಿತ್ತಾದರೋ ತನ್ನ ಹಟವನ್ನು ಬಿಡದೆ ಖಡ್ಗದಿಂದ ಸೀತೆಯನ್ನು ಹೊಡೆಯುತ್ತಾನೆ.

ಸಾ ಪೃಥಿವ್ಯಾಂ ಪೃಥುಶ್ರೋಣೀ
ಪಪಾತ ಪ್ರಿಯದರ್ಶನಾ ||

—ಸರ್ಗ ೮೧, ಶ್ಲೋ. ೩೨, ಪು. ೧೫೯

ಯಾವ ಹೆಂಗಸು ನೆಲಕ್ಕೆ ಬಿದ್ದರೂ ಅದು ದುಃಖಕಾರಕವೇ. ಸೀತೆಯಂಥ ಪರಮಸುಂದರಿ ಅಂಥ ಕ್ರೂರತೆಗೆ ತುತ್ತಾದಾಗ ಅದನ್ನು ಯಾರು ಸಹಿಸಿಯಾರು? ಇದನ್ನು ನೋಡಿದ ಎಲ್ಲರೂ ಭಯವಿಷಾದಗಳಿಗೆ ವಶರಾದರು. ಆಂಜನೇಯ ಮೊದಲಾದವರು ಇಂದ್ರಜಿತ್ತನ್ನು ಸಂಹಾರ

ಮಾಡುವುದು ತಮಗೆ ಸಾಧ್ಯವಾಗದೆಂದು ಭಾವಿಸಿ, ಅದು ಹಾಗಿದ್ದರೂ ತಾವು ಹಿಮ್ಮೆಟ್ಟತಕ್ಕದ್ದಲ್ಲವೆಂದು ನಿಶ್ಚಯಿಸಿ ತಮ್ಮ ಪ್ರಾಣವನ್ನು ತ್ಯಜಿಸುವವರೆಗೂ ತಾವು ಹೋರಾಡತಕ್ಕದ್ದೇ ಸರಿ ಎಂದು ಪ್ರತಿಜ್ಞೆಮಾಡಿಕೊಂಡರು. ಇಂದ್ರಜಿತ್ತಾದರೋ ತನ್ನ ಪ್ರಯತ್ನ ನಾಗುವುದು ಕಷ್ಟವೆಂದು ಕಂಡುಕೊಂಡು ಲಂಕಾಪಟ್ಟಣದ ನಿಕುಂಭಿಳಾದೇವಿಯ ಗುಹೆಯೊಳಗೆ ಆ ದೇವಿಯನ್ನೊಲಿಸಿಕೊಳ್ಳಲು ಹೋಮಮಾಡತೊಡಗಿದನು.

## ಲಕ್ಷ್ಮಣನ ನಿರಾಶೆ

ಶ್ರೀರಾಮನಾದರೋ ಈ ವೃತ್ತಾಂತವನ್ನು ಕೇಳಿ ತನ್ನ ಮನಸ್ಸಿನ ಕಳವಳವನ್ನು ವಾನರನಾಯಕನಾದ ಜಾಂಬವಂತನಲ್ಲಿ ಹೇಳಿಕೊಂಡ. ಆ ದುಃಖಸಮಯದಲ್ಲಿ ಲಕ್ಷ್ಮಣನು ಹೇಳಿದ ಒಂದು ಮಾತು ಸ್ಮರಣಾರ್ಹವಾಗಿದೆ.

ಶುಭೇ ವರ್ತ್ಮನಿ ತಿಷ್ಠಂತಂ
ತ್ವಾಮಾರ್ಯ ವಿಜಿತೇಂದ್ರಿಯಮ್ |
ಅನರ್ಥೇಭ್ಯೋ ನ ಶಕ್ನೋತಿ
ತ್ರಾತುಂ ಧರ್ಮೋ ನಿರರ್ಥಕಃ ||

—ಸರ್ಗ ೮೩, ಶ್ಲೋ. ೧೪, ಪು ೧೬೭

ನಮಗೆಲ್ಲ ಹೀಗೆ ಪದೇ ಪದೇ ಅನ್ನಿಸುತ್ತಿಲ್ಲವೆ? "ಧರ್ಮೋ ನಿರರ್ಥಕಃ"—ಈ ಎರಡು ಸಣ್ಣ ಮಾತುಗಳಲ್ಲಿ ಎಷ್ಟು ಅಪಾರವಾದ ಉದ್ವೇಗ ಅಡಗಿದೆ!

ಧರ್ಮೋ ಭವತ್ಯಧರ್ಮಶ್ಚ
ಪರಸ್ಪರವಿರೋಧಿನೌ ||
ಧರ್ಮೇಣೋಪಲಭೇದ್ಧರ್ಮಂ
ಅಧರ್ಮಂ ಚಾಪ್ಯಧರ್ಮತಃ ||

—ಸರ್ಗ ೮೩, ಶ್ಲೋಕಗಳು ೧೮–೧೯, ಪು. ೧೬೮

ಹೀಗೆ ಹತಾಶನಾದ ಲಕ್ಷ್ಮಣಸ್ವಾಮಿಯೇ ಇಂದ್ರಜಿತುವನ್ನು ಸಂಹಾರ ಮಾಡಿದ ಧೀರ. ಆತನು ಅಣ್ಣನನ್ನು ತೊಡೆಯಮೇಲೆ ಮಲಗಿಸಿಕೊಂಡು

ಸಮಾಧಾನ ಹೇಳುತ್ತಿದ್ದಾನೆ. ಆಗ ಅಲ್ಲಿಗೆ ಬಂದ ವಿಭೀಷಣನು ರಾಮನಿಗೆ ಹೇಳುತ್ತಾನೆ: "ಆ ಸೀತಾವಧೆಯು ನಿಜವಾದದ್ದಲ್ಲ. ಅದು ಮಾಯಾ ದೃಶ್ಯ. ಸೀತೆಯನ್ನು ಯಾರೂ ಕೊಂದಿಲ್ಲ. ಯಾರಿಂದಲೂ ಆಕೆಯನ್ನು ಕೊಲ್ಲಲಾಗದು. ಇಂದ್ರಜಿತ್ತು ಈ ಮಾಯೆಯಿಂದ ನಿಮಗೆ ಮೋಹ ಕವಿಸಿ ನಿಮ್ಮನ್ನು ಎದೆಗುಂದಿಸಿ, ತಾನು ನಿಕುಂಭಿಳೆಗೆ ಹೋಗಿ ಹೋಮ ಮಾಡುತ್ತಿದ್ದಾನೆ. ನಾನು ಈ ರಾವಣನ ಉಪಾಯವನ್ನು ಬಲ್ಲೆ. ನೀನು ನಮ್ಮನ್ನು ಲಕ್ಷ್ಮಣನೊಡನೆ ಕಳುಹಿಸು. ಲಕ್ಷ್ಮಣನು ಇಂದ್ರಜಿತುವನ್ನು ಸಂಹರಿಸಿಯಾನು."

ಅದರಂತೆ ವಾನರಸೇನಾಸಮೇತನಾಗಿ ಲಕ್ಷ್ಮಣನು ಇಂದ್ರಜಿತುವನ್ನು ಎದುರಿಸಲು ಉದ್ಯುಕ್ತನಾಗಿ ನಿಕುಂಭಿಳೆಗೆ ಹೋಗುತ್ತಾನೆ. ಲಕ್ಷ್ಮಣನಿಗೂ ಇಂದ್ರಜಿತುವಿಗೂ ಯುದ್ಧ ಪ್ರಾರಂಭವಾಗಿದೆ. ಇಂದ್ರಜಿತುವಿನ ಪರಾಕ್ರಮ ವೆಂಥಾದ್ದೆಂಬುದನ್ನು ಲಕ್ಷ್ಮಣನು ಕಂಡುಕೊಂಡಿದ್ದಾನೆ. ಕೇವಲ ಶಸ್ತ್ರಾಸ್ತ್ರಗಳ ಶಕ್ತಿಯಿಂದ ಇಂದ್ರಜಿತುವನ್ನು ವಧಿಸಲಾಗದೆಂಬುದನ್ನು ಲಕ್ಷ್ಮಣನು ತಿಳಿದುಕೊಂಡಿದ್ದಾನೆ. ಶಸ್ತ್ರಬಲಕ್ಕಿಂತ ಮಹತ್ತರವಾದ ಬಲ ತನ್ನ ಕಾರ್ಯಕ್ಕೆ ಅವಶ್ಯವೆಂಬುದನ್ನು ಲಕ್ಷ್ಮಣನು ಮನಗಂಡು, ಅದಕ್ಕಾಗಿ ಮೊದಲು ತನ್ನ ಅಣ್ಣ ಶ್ರೀರಾಮನ ಬಳಿ ಹೋಗಿ ಆತನ ಪಾದಗಳನ್ನು ಸೇವಿಸುತ್ತಾನೆ.

ಬಳಿಕ ಯುದ್ಧಾರಂಭವಾಗುತ್ತದೆ. ಕೊಂಚ ಶಸ್ತ್ರಾಸ್ತ್ರಗಳ ವಿನಿಮಯ ನಡೆಯುತ್ತದೆ. ವಿಭೀಷಣನು ಲಕ್ಷ್ಮಣನಿಗೆ ಉಪಾಯಸೂಚನೆಮಾಡಿ ಅವನನ್ನು ಹುರಿದುಂಬಿಸುತ್ತಾನೆ. ಇಂದ್ರಜಿತುವಿಗೂ ಲಕ್ಷ್ಮಣನಿಗೂ ವಾಗ್ವಾದ ನಡೆಯುತ್ತದೆ. ಆ ವಿವಾದದಲ್ಲಿ ಸ್ವಾರಸ್ಯ ತುಂಬಿದೆ.

## ಲಕ್ಷ್ಮಣಶಪಥ

ಲಕ್ಷ್ಮಣನು ತನ್ನ ಕಟ್ಟಕಡೆಯ ಬಾಣವನ್ನು ಪ್ರಯೋಗಿಸುವಾಗ ಒಂದು ಶಪಥಮಾಡುತ್ತಾನೆ. ಇದು ಪ್ರಸಿದ್ಧವಾದದ್ದು. ಈ ವಾಕ್ಯದಲ್ಲಿ ಲಕ್ಷ್ಮಣನು ಶ್ರೀರಾಮನ ವಿಷಯದಲ್ಲಿ ಇಟ್ಟುಕೊಂಡಿದ್ದ ನಂಬಿಕೆ ಅಭಿವ್ಯಕ್ತ ವಾಗಿದೆ. ಅದು ಹೀಗೆ:

ಧರ್ಮಾತ್ಮಾ ಸತ್ಯಸಂಧಶ್ಚ
ರಾಮೋ ದಾಶರಥಿರ್ಯದಿ |
ಪೌರುಷೇ ಚಾಪ್ರತಿದ್ವಂದ್ವಃ
ಶರೈನಂ ಜಹಿ ರಾವಣಿಮ್ ||

—ಸರ್ಗ ೯೧, ಶ್ಲೋ. ೭೩, ಪು. ೨೩೭

“ಶ್ರೀರಾಮನು (೧) ಧರ್ಮಾತ್ಮನಾಗಿದ್ದಲ್ಲಿ, (೨) ಸತ್ಯಸಂಧನಾಗಿದ್ದಲ್ಲಿ, (೩) ದಶರಥಪುತ್ರನಾಗಿದ್ದಲ್ಲಿ, (೪) ಪರಾಕ್ರಮದಲ್ಲಿ ಎದುರಾಳಿಲ್ಲದವನಾಗಿದ್ದಲ್ಲಿ, ಎಲೈ ಬಾಣವೆ, ನೀನು ರಾವಣಪುತ್ರನಾದ ಇವನನ್ನು ಹೊಡೆದು ಕೊಲ್ಲು.”

ಈ ವಾಕ್ಯದಲ್ಲಿ ನಾಲ್ಕು ಕರಾರುಗಳನ್ನು ಹೇಳಿದ್ದಾನೆ ಲಕ್ಷ್ಮಣ. ಇದರಮೇಲೆ ವ್ಯಾಖ್ಯಾನಕಾರರ ಯುಕ್ತಿ ಬೆಳೆಯಲು ಅವಕಾಶ ದೊರೆತಿದೆ. ಅವರ ತಕರಾರಿಗೆ ಮುಖ್ಯಾಧಾರವಾದದ್ದು “ರಾಮೋ ದಾಶರಥಿರ್ಯದಿ” ಎಂಬ ಪದಸಮುಚ್ಚಯ. ಈ ತಕರಾರನ್ನು ದಾಟಲು ಸುಲಭವಾದ ದಾರಿಯೊಂದುಂಟು. “ದಾಶರಥಿ” ಎಂಬುದನ್ನು ರಾಮ ಎಂಬ ಪದಕ್ಕೆ ವಿಶೇಷಣಮಾಡಿಕೊಂಡರಾಯಿತು. “ದಶರಥಪುತ್ರನಾದ ರಾಮನು” ಎಂದರ್ಥ. “ದಶರಥಪುತ್ರನಾದ” ಎಂದು ಹೇಳಬೇಕಾದದ್ದೇಕೆ ಎಂದರೆ ಭಾರ್ಗವರಾಮ ಮೊದಲಾದವರಿಂದ ಪ್ರತ್ಯೇಕವೆಂದು ತೋರಿಸುವುದಕ್ಕೆ.

ಹೀಗೆ ಮಾಡದೆ “ರಾಮನು ದಶರಥಪುತ್ರನಾಗಿರುವ ಪಕ್ಷದಲ್ಲಿ” ಎಂದು ಅರ್ಥಮಾಡುವುದು ಸಾಧ್ಯವಿದೆ. ಇದು ಲೋಕದಲ್ಲಿ ಶಪಥ ನುಡಿಯುವ ರೀತಿಯಾಗಿ ಪ್ರಸಿದ್ಧವಾಗಿದೆ. ಈಗಲೂ ಸಾಮಾನ್ಯಜನರು ರೋಷಾವೇಶದಲ್ಲಿ ಮಾತನಾಡುವಾಗ “ನಾನು ಇಂಥಾವನ ಮಗನಾಗಿ ಹುಟ್ಟಿ ಇಂಥಾವನ ಹೆಸರು ಹೇಳಿಕೊಂಡು”—ಹೀಗೆ ಆಣೆಯಿಡುವುದು ರೂಢಿಯಲ್ಲಿದೆ. ಈ ಲೋಕರೂಢಿಯನ್ನು ಲಕ್ಷ್ಮಣನು ಅನುಸರಿಸಿದನೆಂದು ಭಾವಿಸುವುದರಲ್ಲಿ ತಪ್ಪೇನಿದೆ? ಆ ಧೋರಣೆಯಲ್ಲಿ ಒಂದು ಧೀರತನ, ಒಂದು ದಿಟ್ಟತನ ಕಾಣುತ್ತದೆ. ಕುಲದ ಹೆಸರನ್ನು ಹೇಳಿಕೊಳ್ಳುವುದು ಒಂದು ಹೆಮ್ಮೆ.

ಇನ್ನೊಂದು ಪ್ರಶ್ನೆ. "ರಾಮೋ ದಾಶರಥಿರ್ಯದಿ"—ಇದರ ವಿಷಯ ದಲ್ಲಿ ಸಂದೇಹ ಉಂಟೇನು? ರಾಮಲಕ್ಷ್ಮಣಾದಿಗಳು ಯಜ್ಞಪುರುಷನು ಕೊಟ್ಟ ಪಾಯಸದ ಪ್ರಭಾವದಿಂದ ಹುಟ್ಟಿದವರಲ್ಲವೆ? ಹೌದು. ಪಾಯಸ ದಿಂದ ಕೌಸಲ್ಯೆ ಮೊದಲಾದವರಿಗೆ ಗರ್ಭಧಾರಣಯೋಗ್ಯತೆ ಬಂದಿತು. ಈ ಕಾರಣದಿಂದ ಕೌಸಲ್ಯಾದಿಗಳ ಮಕ್ಕಳು ದಶರಥನ ಔರಸಪುತ್ರರಲ್ಲ ವೆಂದು ಸಾಧಿಸಲಾಗುತ್ತದೆಯೆ? ಹಾಗಾಗಲಾರದು. ಇಷ್ಟರಮೇಲೆ ದಶರಥನ ಜನಕತ್ವವನ್ನು ಅಂಗೀಕರಿಸಿದ್ದರಿಂದ ತಾನೆ ಶ್ರೀರಾಮನಿಗೆ ಪಿತೃ ವಾಕ್ಯಪಾಲನೆಯು ಕರ್ತವ್ಯವು ವಿಹಿತವಾದದ್ದು? ಹೀಗೆ ಶ್ರೀರಾಮನ ಮಾತಿ ನಿಂದಲೇ ಆತನ ದಾಶರಥಿತ್ವ ಸಿದ್ಧವಾಗುತ್ತದೆ.

ಹಾಗಾದರೆ ಸಿದ್ಧವಿಷಯವನ್ನು ಲಕ್ಷ್ಮಣನು ಸಂದೇಹಾಸ್ಪದ ತೋರುವಂತೆ ನುಡಿದದ್ದೇಕೆ? ಲಕ್ಷ್ಮಣನಿಗೆ ತಾನು ಉಪಯೋಗಿಸಿದ ನಾಲ್ಕು ವಿಶೇಷಣಗಳಲ್ಲಿ ಯಾವುದರ ವಿಷಯದಲ್ಲಿಯೂ ಸಂದೇಹ ಕೊಂಚ ಮಾತ್ರವೂ ಇರಲಿಲ್ಲ. ಆತನಿಗೆ ಶ್ರೀರಾಮಚಂದ್ರನು ಧರ್ಮಾತ್ಮನೆಂಬುದು ಸ್ವತಸ್ಸಿದ್ಧವಾದ ಮಾತು. ಹಾಗೆಯೇ ರಾಮನು ಸತ್ಯಸಂಧನೆಂಬ ಮಾತು. ಹಾಗೆಯೇ ರಾಮನು ದಶರಥಪುತ್ರನೆಂಬ ಮಾತು. ಹಾಗೆಯೇ ರಾಮನು ಅಪ್ರತಿಮವೀರನೆಂಬ ಮಾತು. ಹೀಗೆ ತನ್ನ ತಿಳಿವಳಿಕೆಗೆ ಸಿದ್ಧಾಂತ ವಾಗಿದ್ದದ್ದರಲ್ಲಿ 'ಯದಿ' ಎಂಬ ವಿಶೇಷಣದಿಂದ ಪ್ರಶ್ನಾವಕಾಶ ಕಲ್ಪಿಸಿರುವುದು ಆತನ ವೀರೋದ್ವೇಗದ ಧ್ವನಿ.

ಯಾವುದು ಪರಮಸತ್ಯವೋ ಅದನ್ನು ಕುರಿತು ಲಕ್ಷ್ಮಣನು ಪ್ರತಿಜ್ಞೆ ಮಾಡುತ್ತಾನೆ. "ನಾನು ಹೇಳುವ ನಾಲ್ಕು ಮಾತುಗಳೂ ನಿಸ್ಸಂದೇಹ ವಾದವು ಆದದ್ದರಿಂದ ಆ ಸತ್ಯಪರೀಕ್ಷೆಗಾಗಿ ಈ ಬಾಣವನ್ನು ಬಿಡುತ್ತೇನೆ. ಸತ್ಯ ಗೆಲ್ಲುತ್ತದೆ. ಆದದ್ದರಿಂದ ಈ ನಾಲ್ಕು ಸತ್ಯಗಳನ್ನು ಹೇಳುತ್ತೇನೆ. ಶ್ರುತಿ ಹೇಳುತ್ತದೆ, 'ಸತ್ಯಮೇವ ಜಯತೇ, ನಾನೃತಮ್' ಎಂದು ಪೂರ್ವಿಕರು ಹೇಳುತ್ತಾರೆ, 'ಯತೋ ಧರ್ಮಸ್ತತೋ ಜಯಃ' ಎಂದು. ಈ ವಾಕ್ಯಗಳು ನಿಜವಾಗಿರುವ ಪಕ್ಷಕ್ಕೆ ಸತ್ಯಧರ್ಮನಿಷ್ಠನಾದವನ ಹೆಸರನ್ನು ಹೇಳಿ ಈ ಬಾಣವನ್ನು ಬಿಡುತ್ತೇನೆ. ಅದು ನನ್ನ ಮಾತನ್ನು ಸುಳ್ಳುಮಾಡಲಾರದು"—ಹೀಗೆಂಬುದು ಲಕ್ಷ್ಮಣನ ಅಂತರ್ಭಾವ.

"ನನ್ನ ಬಾಣವು ನನಗಾಗಿ ಗೆಲ್ಲಬೇಕಾಗಿಲ್ಲ. ಸತ್ಯಧರ್ಮಗಳಿಗಾಗಿ ಅದು ಗೆಲ್ಲಲಿ. ನನ್ನಲ್ಲಿ ಸತ್ತ್ವ ಸಾಲದಿದ್ದರೂ ರಾಮಮಹಿಮೆಯಿಂದ ಅದಕ್ಕೆ ಸತ್ತ್ವ ಬರಲಿ"—ಹೀಗೆಂಬುದು ಲಕ್ಷ್ಮಣನ ಅಂತರಂಗ.

ಇನ್ನೂ ವಿಚಾರಮಾಡಿ ನೋಡುವುದಾದರೆ ಧರ್ಮಾತ್ಮಾ, ಸತ್ಯಸಂಧಃ ಎಂಬೆರಡು ಮಾತುಗಳೇ ಲಕ್ಷ್ಮಣಶಪಥದ ಜೀವಾಳ. "ರಾಮೋ ದಾಶರಥಿರ್ಯದಿ" ಎಂಬುದು ಅಷ್ಟು ಮುಖ್ಯವಲ್ಲ. "ಪೌರುಷೇ ಚಾಪ್ರತಿ-ದ್ವಂದ್ವಃ" ಎಂಬುದೂ ಗೌಣವೇ. ರಾಮನ ಶೌರ್ಯವು ಇನ್ನೂ ಪರೀಕ್ಷೆಗೆ ಬರಬೇಕಾಗಿದ್ದದ್ದು; ಆ ಹೊತ್ತಿಗೆ ಅದು ಇನ್ನೂ ಸಿದ್ಧವಾಗಿ ಇದ್ದದ್ದಾಗಿರಲಿಲ್ಲ. ಆಗಿಗೆ ಅದು ಸಾಧ್ಯವಸ್ತು; ಉತ್ತರೋತ್ತರ ದೃಷ್ಟಾಂತಕ್ಕೆ ಬರಬೇಕಾಗಿದ್ದದ್ದು. ಲಕ್ಷ್ಮಣನು ಒಂದು ವಿಶ್ವಾಸದ ಧೈರ್ಯದಿಂದ ಆ ಮಾತನ್ನಾಡುತ್ತಾನೆ. ಆದರೆ ರಾಮನ ಧರ್ಮಶ್ರದ್ಧೆ, ಸತ್ಯಸಂಧತೆ—ಇವೆರಡೂ ಆ ವೇಳೆಗೆ ಹಿಂದೆ ಎಷ್ಟೋ ಸಾರಿ ಸಿದ್ಧವಾಗಿದ್ದ ಸಂಗತಿ. ಲೋಕಕ್ಕೆ ಅತ್ಯಂತ ಅವಶ್ಯವಾಗಿದ್ದ ಗುಣಗಳು ಅವೆರಡು: ರಾಮನ ಧರ್ಮನಿಷ್ಠೆ, ರಾಮನ ಸತ್ಯನಿಷ್ಠೆ, ರಾಮನ ವಿರಕ್ತಿ, ನಿಃಸ್ವಾರ್ಥತೆ, ಸತ್ತ್ವಶುದ್ಧಿ, ಭೂತಹಿತಶ್ರದ್ಧೆ, ಶೌರ್ಯೌದಾರ್ಯಗಳು—ಇವೆಲ್ಲ ಜನ್ಯ ಗುಣಗಳು. ಇವಕ್ಕೆಲ್ಲ ಜನಕಗುಣವಾದದ್ದು ಧರ್ಮಶ್ರದ್ಧೆ, ಸತ್ಯಶ್ರದ್ಧೆಗಳು.

ಇನ್ನೂ ಒಂದು ಮಾತು. "ರಾಮೋ ದಾಶರಥಿರ್ಯದಿ" ಎಂಬುದರ ಧ್ವನಿಯನ್ನು ನಾವು ಗಮನಿಸಬೇಕು. "ದಶರಥನು ಸತ್ಯಕ್ಕಾಗಿ ಬದುಕಿದವನು. ಯಾರು ಸತ್ಯಧರ್ಮಗಳಿಗಾಗಿ ತನ್ನ ಸರ್ವಸ್ವವನ್ನೂ ಮುಡುಪಾಗಿಟ್ಟಿದ್ದನೋ ಅಂಥ ದಶರಥನ ಮಗ ಶ್ರೀರಾಮ. ವಂಶಗುಣ ಪ್ರಬಲತರವಾದದ್ದು. ಅದು ಈಗ ಗೆಲ್ಲುತ್ತದೆ"—ಎಂಬುದು ಲಕ್ಷ್ಮಣನ ನಂಬಿಕೆ.

## ಇಂದ್ರಜಿದ್ವಧೆ

ಲಕ್ಷ್ಮಣನು ಹೀಗೆ ವೀರಪ್ರತಿಜ್ಞೆಮಾಡಿ ಪ್ರಯೋಗಿಸಿದ ಬಾಣವು ವ್ಯರ್ಥವಾಗಲಿಲ್ಲ.

ಹತಸ್ತು ನಿಪಪಾತಾಶು ಧರಣ್ಯಾಂ ರಾವಣಾತ್ಮಜಃ |

—ಸರ್ಗ ೯೧, ಶ್ಲೋ. ೭೭, ಪು. ೩೩೮

ಇಂದ್ರಜಿತುವಿನ ಪತನದಿಂದ ಯುದ್ಧವನ್ನು ಮುಪ್ಪಾಗಪಾಲು ಗೆದ್ದಂತಾಯಿತು. ಈಗ ಉಳಿದಿದ್ದವನು ನಿಸ್ಸಹಾಯನಾದ ರಾವಣನೊಬ್ಬ. ಕಪಿಸಮೂಹಕ್ಕೆ ಸಂತೋಷವಾದದ್ದು ಹಾಗಿರಲಿ; ವಾಲ್ಮೀಕಿಗಳಿಗೇ ಮೈಮರೆತುಹೋಯಿತು. ನೋಡಿ, ಹೇಗೆ ಹೇಳುತ್ತಾರೆ :

ಕ್ಷ್ವೇಲಂತಶ್ಚ ನದಂತಶ್ಚ ಗರ್ಜಂತಶ್ಚ ಪ್ಲವಂಗಮಾಃ ||
ಲಾಂಗೂಲಾನಿ ಪ್ರವಿಧ್ಯಂತಃ ಸ್ಫೋಟಯಂತಶ್ಚ ವಾನರಾಃ ||
ಲಕ್ಷ್ಮಣೋ ಜಯತೀತ್ಯೇವಂ ವಾಕ್ಯಂ ವಿಶ್ರಾವಯಂಸ್ತದಾ |

—ಸರ್ಗ ೯೧, ಶ್ಲೋಕಗಳು ೯೫–೯೭, ಪು. ೨೪೧

ನಮ್ಮ ಕಾಲದಲ್ಲಿ ಕಾಲ್ಚೆಂಡಾಟ (Football) ನಡೆಯುತ್ತಿರುವಾಗ ಆಟ ಆಡುತ್ತಿರುವವರ ರಭಸ ಹಾಗಿರಲಿ, ನೋಡುತ್ತಿರುವವರಲ್ಲಿ ಯಾರು ಯಾರೋ ತಮತಮಗೆ ಬೇಕಾದ ಆಟಗಾರನು ಮುನ್ನುಗ್ಗಿ ಚೆಂಡನ್ನು ಒದ್ದಾಗ ಹೇಗೆ ಕೂಗಿಕೊಳ್ಳುತ್ತಾರೆ ? ಹಾಗೆ ಕೂಗಿಕೊಂಡರಂತೆ ಕಪಿಗಳು, ಲಕ್ಷ್ಮಣನ ಜಯವನ್ನು ಕುರಿತು.

## ರಾವಣನ ಕೋಪ

ರಾವಣಾಸುರನಿಗೆ ಪುತ್ರನಾಶದ ವಾರ್ತೆಯನ್ನು ಕೇಳಿದಾಗ ದುಃಖ ವಾದದ್ದಕ್ಕಿಂತ ಹೆಚ್ಚಾಗಿ ಕೋಪ ಬಂತು.

ದಂತಾನ್ ವಿದಶತಸ್ತಸ್ಯ ಶ್ರೂಯತೇ ದಶನಸ್ವನಃ ||

—ಸರ್ಗ ೯೩, ಶ್ಲೋ. ೨೪, ಪು. ೨೫೨

ಹಲ್ಲುಗಳನ್ನು ಕಟಕಟಾಯಿಸಿದನಂತೆ.

ಸಂಕ್ರುದ್ಧಃ ಖಡ್ಗಮಾದಾಯ ||
ಅಭಿದುದ್ರಾವ ವೈದೇಹೀಂ ರಾವಣಃ ಕ್ರೋಧಮೂರ್ಛಿತಃ |

—ಸರ್ಗ ೯೩, ಶ್ಲೋಕಗಳು ೪೦-೪೫, ಪುಟಗಳು ೨೫೫-೨೫೬

ರಾವಣನನ್ನು ಪರಿವಾರದವರು ತಡೆದರು. ಸೀತಾದೇವಿಯು "ರಾವಣನು ನನ್ನನ್ನು ವಧಿಸುವುದಕ್ಕಾಗಿ ಬರುತ್ತಿದ್ದಾನೋ ಅಥವಾ ರಾಮ ಲಕ್ಷ್ಮಣರನ್ನು ಸಂಹರಿಸುವುದಕ್ಕಾಗಿ ಬರುತ್ತಿದ್ದಾನೋ ? ನನ್ನ ಕಾರಣ

ದಿಂದ ಇಷ್ಟೊಂದು ಅನರ್ಥಗಳು ನಡೆಯುತ್ತಿವೆಯಲ್ಲ! ಹನುಮಂತನು ಅಂದು ಹೇಳಿದ ಮಾತಿನಂತೆ ನಾನು ಅವನ ಬೆನ್ನೇರಿ ಹೋಗಿದ್ದಿದ್ದರೆ ಆಗಿತ್ತೋ ಹೇಗೋ!" ಎಂದು ಪ್ರಲಪಿಸಿದಳು. ಅಷ್ಟರಲ್ಲಿ ಸುಪಾರ್ಶ್ವನೆಂಬ ರಾಕ್ಷಸನು ದಶಕಂಠನನ್ನು ಕುರಿತು—

ಕಥಂ ನಾಮ ದಶಗ್ರೀವ
ಸಾಕ್ಷಾದ್ವೈಶ್ರವಣಾನುಜ ||
ವೇದವಿದ್ಯಾವ್ರತಸ್ನಾತಃ
ಸ್ವಕರ್ಮನಿರತಸ್ಸದಾ ||
ಸ್ತ್ರಿಯಾಃ ಕಸ್ಮಾದ್ವಧಂ ವೀರ
ಮನ್ಯಸೇ ರಾಕ್ಷಸೇಶ್ವರ ||

—ಸರ್ಗ ೯೩, ಶ್ಲೋಕಗಳು ೬೨-೬೪, ಪು. ೨೫೯

—ಎಂದು ಮೊದಲಾಗಿ ಹೇಳಿ, "ನಿನ್ನ ಕೋಪವನ್ನು ರಾಮನಲ್ಲಿ ತೀರಿಸಿಕೋ" ("ರಾಘವೇ ಕೋಪಮುತ್ಸೃಜ") ಎನ್ನುತ್ತಾನೆ.

ಬಳಿಕ ರಾವಣನು ತನ್ನ ಪರಿಜನದ ಸಭೆಯನ್ನು ಕುರಿತು ಯುದ್ಧ ಸನ್ನದ್ಧರಾಗುವಂತೆ ಪ್ರೇರಿಸುತ್ತಾನೆ. ಅವರು ಯುದ್ಧಾರಂಭಮಾಡುತ್ತಾರೆ. ಶ್ರೀರಾಮನು ಧನುಸ್ಸನ್ನೆತ್ತಿ ಅವರಮೇಲೆ ಬಾಣಗಳನ್ನು ಮಳೆಗರೆಯುತ್ತಾನೆ. ಆ ಬಾಣಗಳಿಂದ ಪೆಟ್ಟುತಿಂದು ಮೈ ಕೈ ಮುರಿದುಕೊಂಡ ರಾಕ್ಷಸರು ದಿಗ್ಭ್ರಾಂತರಾಗಿ ರಾಮನ ಆಕಾರವನ್ನು ಕಾಣಲಾರದವರಾಗಿ ತಮ್ಮ ತಮ್ಮಲ್ಲಿಯೇ ಒಬ್ಬರನ್ನೊಬ್ಬರು ರಾಮನೆಂದುಕೊಂಡು ಬಡಿದಾಡಿದರು.

ಯುದ್ಧ ಹೀಗೆ ಮುಂದೆ ಸಾಗಿತು. ಲಕ್ಷ್ಮಣನು ಏಳು ಬಾಣಗಳಿಂದ ರಾವಣನ ಧ್ವಜವನ್ನೂ ಸಾರಥಿಯ ತಲೆಯನ್ನೂ ಕುದುರೆಗಳ ತಲೆಗಳನ್ನೂ ತರಿದನು. ರಾವಣನನ್ನು ಐದು ಬಾಣಗಳಿಂದ ಗಾಯಪಡಿಸಿದನು. ರಾವಣನು ಅತ್ಯಂತ ಕ್ರುದ್ಧನಾಗಿ, ತನ್ನಮೇಲೆ ಗದಾಪ್ರಹಾರ ಮಾಡುತ್ತಿದ್ದ ವಿಭೀಷಣನ ಮೇಲೆ ಶಕ್ತ್ಯಸ್ತ್ರವನ್ನು ಪ್ರಯೋಗಿಸಿದನು. ಲಕ್ಷ್ಮಣನು ಮೂರು ಬಾಣಗಳಿಂದ ಆ ಅಸ್ತ್ರವನ್ನು ಕತ್ತರಿಸಿಹಾಕಿದನು. ರಾವಣನು—

ಇತ್ಯೇವಮುಕ್ತ್ವಾ ತಾಂ ಶಕ್ತಿಂ
ಅಷ್ಟಘಂಟಾಂ ಮಹಾಸ್ವನಾಮ್ |
ಮಯೇನ ಮಾಯಾವಿಹಿತಾಂ
ಅಮೋಘಾಂ ಶತ್ರುಘಾತಿನೀಮ್ |
ರಾವಣಃ ಪರಮಕ್ರುದ್ಧಃ
ಚಿಕ್ಷೇಪ ಚ ನನಾದ ಚ |

—ಸರ್ಗ ೧೦೧, ಶ್ಲೋಕಗಳು ೩೦-೩೧, ಪು. ೩೨೨

ಈ ಶಕ್ತ್ಯಾಯುಧದಿಂದ ಲಕ್ಷ್ಮಣನು ಹೃದಯಭಾಗದಲ್ಲಿ ಏಟು ತಿಂದು ನೆಲದಮೇಲೆ ಬಿದ್ದನು. ರಾಮನು ಎದೆಗುಂದದೆ ಲಕ್ಷ್ಮಣನನ್ನು ತಬ್ಬಿಕೊಂಡು ಹನುಮಂತನನ್ನು ಕುರಿತು "ನೀವುಗಳೆಲ್ಲ ಲಕ್ಷ್ಮಣನನ್ನು ಸುತ್ತುಗಟ್ಟಿ ಸಲಹಿಕೊಂಡಿರಿ. ನಾನು ಮಿಕ್ಕೆಲ್ಲವನ್ನೂ ಬಿಟ್ಟು ರಾವಣನನ್ನು ಕೊನೆಗಾಣಿಸುತ್ತೇನೆ."

ಅರಾವಣಮರಾಮಂ ವಾ
ಜಗದ್ದ್ರಕ್ಷ್ಯತ ವಾನರಾಃ ||
ಅದ್ಯ ರಾಮಸ್ಯ ರಾಮತ್ವಂ
ಪಶ್ಯಂತು ಮಮ ಸಂಯುಗೇ ||

—ಸರ್ಗ ೧೦೧, ಶ್ಲೋಕಗಳು ೪೯-೫೫, ಪುಟಗಳು ೩೨೫-೩೨೬

ಇನ್ನು ಲೋಕದಲ್ಲಿ ರಾವಣನಿರುವುದಿಲ್ಲ, ಅಥವಾ ರಾಮನಿರುವುದಿಲ್ಲ. ಈ ನಿರ್ಣಾಯಕವಾದ ಯುದ್ಧವನ್ನು ಈಗ ಕಾಣುವಿರಿ. "ಈಗ ನೋಡಿರಿ ರಾಮನ ರಾಮತ್ವವನ್ನು"—ಎಂದು ಪ್ರತಿಜ್ಞೆ ಮಾಡುತ್ತಾನೆ.

## ರಾವಣನ ಹಟ

ಇತ್ತ ರಾವಣನಾದರೋ ರಾಮಪರಾಕ್ರಮವನ್ನು ನೋಡಿ ಚಿಂತಾಕ್ರಾಂತನಾಗಿ ಅಂತಃಪುರಕ್ಕೆ ಹೋಗಿ ತನ್ನ ಜ್ಯೇಷ್ಠಭಾರ್ಯೆಯಾದ ಮಂಡೋದರಿಯೊಡನೆ ತನ್ನ ವ್ಯಾಕುಲವನ್ನು ತೋಡಿಕೊಂಡ.

ರಾವಣನ ಕಣ್ಣಿಗೆ ಎಲ್ಲೆಲ್ಲಿಯೂ ರಾಮನೇ.

ಏಕಂ ರಾಮಸಹಸ್ರಾಣಿ
ಪಶ್ಯಾಮ್ಯದ್ಯ ಸುಮಧ್ಯಮೇ |
ಅದ್ಯ ರಾಮಾಭಿಭೂತೋಽಹಂ
ದೃಷ್ಟ್ವಾ ವಿಷಮಲೋಚನಮ್ |

"ಈಗ ನನಗಿರುವ ಗತಿ ಪರಮೇಶ್ವರನೊಬ್ಬನೇ. ಕೈಲಾಸಾಧಿಪತಿಯು ನನಗೆ ವರಪ್ರದಾನ ಮಾಡಿದ್ದಾನೆ, 'ನೀನು ಹೋಮಮಾಡಿದಾಗ ಯಜ್ಞಕುಂಡದಿಂದ ರಥ ಉತ್ಪತ್ತಿಯಾಗುತ್ತದೆ. ಅದರಲ್ಲಿ ಕುಳಿತು ಯುದ್ಧ ಮಾಡಿದಲ್ಲಿ ಎಲ್ಲ ಶತ್ರುಗಳನ್ನೂ ಸಂಹರಿಸಲು ಸಮರ್ಥನಾಗುತ್ತೀಯೆ',— ಎಂದು. ಆದದ್ದರಿಂದ ಶಿವಾಲಯಕ್ಕೆ ಹೋಗಿ ಶಿವಾರ್ಚನೆ ಮಾಡುತ್ತೇನೆ."

ಮಂಡೋದರಿಯು ಗಂಡನಿಗೆ ಹಿತವಚನ ಹೇಳುತ್ತಾಳೆ: "ನಾಥ, ನೀನು ಎಲ್ಲ ದೇವತೆಗಳನ್ನೂ ದಿಕ್ಪಾಲಕರನ್ನೂ ಜಯಿಸಿದವನು. ಈಗ ಈ ದುಷ್ಟಾಲೋಚನೆಯನ್ನು ಬಿಟ್ಟುಬಿಡು."

ಜಹೀದಂ ಲೋಕಗರ್ಹಿತಮ್ |
ಚೌರ್ಯಕರ್ಮಾಣ್ಯಕಾರ್ಷೀಸ್ತ್ವಮ್ |
ಮಾರೀಚಸ್ಯ ವಚಃ ಪಥ್ಯಂ
ನ ಕೃತಂ ತು ಮಹಾತ್ಮನಃ |
ನ ಹಿ ಧರ್ಮವರಿಷ್ಠಂ ತತ್
ವಿಭೀಷಣವಚಃ ಕೃತಮ್ ||

ಈ ಉಪದೇಶವನ್ನು ರಾವಣನು ಲಾಲಿಸಿಯಾನೆ?

ಹವಿರ್ಹುತ್ವಾ ಸುನಯನೇ
ಹನಿಷ್ಯೇ ರಾಘವಂ ರಣೇ ||*

## ಲಕ್ಷ್ಮಣನ ಮೂರ್ಛೆ, ಚಿಕಿತ್ಸೆ

ಲಕ್ಷ್ಮಣನು ಶಕ್ತ್ಯಾಯುಧದ ಪೆಟ್ಟಿನಿಂದ ಮೂರ್ಛಿತನಾಗಿ ಬಿದ್ದಿದ್ದನಲ್ಲವೆ? ಶ್ರೀರಾಮನು ವ್ರಣಚಿಕಿತ್ಸೆಯಲ್ಲಿ ನಿಪುಣನಾದ ಸುಷೇಣನೆಂಬ

* ಈ ಪ್ರಕರಣವು ಪಾಠಾಂತರದಲ್ಲಿದೆ. ಪ್ರಕೃತಗ್ರಂಥದಲ್ಲಿಲ್ಲ.

ಕಪಿಶ್ರೇಷ್ಠನಲ್ಲಿ ತನ್ನ ದುಃಖವನ್ನು ಹೇಳಿಕೊಂಡ. ಸುಷೇಣನು ಚಿಕಿತ್ಸೆ ಮಾಡುವುದಕ್ಕಾಗಿ ಓಷಧಿಗಳನ್ನು ತರುವಂತೆ ಆಂಜನೇಯನನ್ನು ಬೇಡಿದನು. "ಜಾಂಬವಂತನು ಆ ಓಷಧಿಗಳು ಸಿಕ್ಕುವ ಸ್ಥಳಗಳನ್ನು ತಿಳಿಸಿಯಾನು. ನೀನು ಈ ರಾತ್ರಿ ಮುಗಿಯುವುದರೊಳಗಾಗಿ, ಸೂರ್ಯೋದಯಕ್ಕೆ ಮುಂಚೆ ಓಷಧಿಗಳನ್ನು ತರಬೇಕಾದದ್ದು" ಎಂದು ನಿಯಮಿಸಿದನು. ಆಗ ಶ್ರೀರಾಮನು ನುಡಿದ ನುಡಿ ನಾವು ಗಮನದಲ್ಲಿರಿಸಬೇಕಾದದ್ದಾಗಿದೆ.

ಗಚ್ಛ ಶೀಘ್ರಂ ಮಹಾಬಾಹೋ
ಭ್ರಾತೃಭಿಕ್ಷಾ ಪ್ರದೀಯತಾಮ್ ।
ಚತುರ್ಣಾಮೇವ ಭ್ರಾತೄಣಾಂ
ಅಸ್ಮಾಕಂ ಪಂಚಮೋ ಭವಾನ್ ।

ಇದರಂತೆ ಆಂಜನೇಯಸ್ವಾಮಿ ನಡಸಿಕೊಡುತ್ತಾನೆ. ಆ ಕಾರ್ಯಾವಸರದಲ್ಲಿ ಕಾಲನೇಮಿ ಎಂಬ ರಾಕ್ಷಸಸಂನ್ಯಾಸಿಯಿಂದ ಕಾಲಯಾಪನೆಯಾದದ್ದು, ಆಂಜನೇಯಪ್ರಭು ಅದನ್ನು ಸಕಾಲದಲ್ಲಿ ಕಂಡುಕೊಂಡು ಎಚ್ಚತ್ತದ್ದು, ಆತನು ತಂದ ದಿವ್ಯೌಷಧದಿಂದ ಪುನಃ ಪ್ರಜ್ಞೆ ಬಂದದ್ದು ಮನೋವೇಧಕವಾದ ಕಥೆ. ಆಂಜನೇಯನು ವಂಚಿತನಾದದ್ದು ನಮ್ಮ ಕಾಲದ ಕೆಲವು ರಾಜಕೀಯ ಪ್ರಸಂಗಗಳಂತಿದೆ. ನೀರು ಕುಡಿಯಲು ಹೋಗಿ ಮೊಸಳೆಗೆ ಸಿಕ್ಕಿಕೊಂಡದ್ದು, ಮೊಸಳೆಯನ್ನು ಬಡಿದು ಹೊರಕ್ಕೆ ಬಂದದ್ದು—ಇವೆಲ್ಲ ಕುತೂಹಲಕಾರಿಗಳಾದ ಉಪಕಥೆಗಳು. ಆಗ ಆ ಹೆಣ್ಣು ಮೊಸಳೆ ತನ್ನ ಪೂರ್ವಕಥೆಯನ್ನು ನಿರೂಪಿಸುವ ವ್ಯಾಜದಲ್ಲಿ ರಾವಣಾಸುರನ ಹಿಂದಿನ ಒಂದು ಅಪಕಾರ್ಯವನ್ನು ವಿವರಿಸುತ್ತಾಳೆ. ಪೂರ್ವಜನ್ಮದಲ್ಲಿ ಆಕೆ ಮಾಲಿನಿಯೆಂಬ ಅಪ್ಸರಃಸ್ತ್ರೀಯಾಗಿದ್ದಳು. ಆಕೆ ಒಂದು ದಿನ ನದಿಯಲ್ಲಿ ಸ್ನಾನಮಾಡುತ್ತಿದ್ದಾಗ ರಾವಣನು ಬಂದು ಆಕೆಯನ್ನು ಯಾಚಿಸಿದ.

ಆಗ ಆಕೆ ತಾನು ಬ್ರಾಹ್ಮಣಭಾರ್ಯೆಯೆಂದೂ ರಜಸ್ವಲೆಯಾಗಿ ಅಸ್ಪೃಶ್ಯಳೆಂದೂ ಹೇಳಿದಳು. ರಾವಣನು ಅದಕ್ಕೆ ಹೆದರಿಯಾನೆ?

ದೇವಾಂಗನಾಽಸಿ ಬಾಲೇ ತ್ವಂ
ಸರ್ವಲೋಕಸ್ಯ ಸಮ್ಮತಾ ।
ಪುಷ್ಪಿಣೀ ಚ ವಿಶೇಷೇಣ
ರೋಚತೇ ಮಮ ಭಾಮಿನಿ ।

ಇದನ್ನು ಆಕೆಯು ಪತಿ ತಿಳಿದು ಕೊಟ್ಟ ಶಾಪದ ಕಾರಣದಿಂದ ಅವಳಿಗೆ ಮೊಸಳೆಯ ಜನ್ಮ ಬಂದಿತು. ಆ ಶಾಪದಿಂದ ಈಗ ವಿಮೋಚನೆ.

ಹನುಮಂತನು ಅಲ್ಲಿಂದ ಹೊರಡುವುದಕ್ಕೆ ಮುಂಚೆ ಕಾಲನೇಮಿ ರಾಕ್ಷಸನು

ಗೃಹಾಣ ಮಮ ಮಂತ್ರಾಂಸ್ತ್ವಂ
ಶಿಷ್ಯೋ ಮೇ ಭವ ಪುತ್ರಕ ।

ಎಂದು ತನ್ನ ಗುರುಸ್ಥಾನೀಯತೆಯನ್ನು ಹೇಳಿಕೊಂಡ. ಆಂಜನೇಯ ನಾದರೋ

ಮಂತ್ರಾನಧೀತ್ಯ ಶಿಷ್ಯೇಣ
ದಾತವ್ಯಾ ಗುರುದಕ್ಷಿಣಾ ।
ಗೃಹಾಣ ದಕ್ಷಿಣಾಮೇತಾಂ
ಇತ್ಯುಕ್ತ್ವಾ ರೋಷತಾಂ ಗತಃ ॥
ಜಘಾನೋರಸಿ ರಾಕ್ಷಸಮ್ ।

ಆ ಮುಷ್ಟಿಪ್ರಹಾರವಾದ ಮೇಲೆ ಕಾಲನೇಮಿಯ ರಾಕ್ಷಸರೂಪ ಸ್ಪಷ್ಟ ವಾಯಿತು.*

ಇಂಥ ಉಪಕಥೆಗಳಿಂದ ಯುದ್ಧದ ಘೋರಪ್ರಕರಣವು ಸಾಧುಗಳಿಗೆ ಮನೋರಂಜಕವಾಗಿದೆ.

## ರಾವಣನ ಹೋಮಭಂಗ

ರಾವಣಾಸುರನು ಇಂದ್ರಜಿದ್ವಧಾನಂತರ ದಿಕ್ಕೆಟ್ಟವನಾಗಿ ಪಾತಾಳ ಗುಹೆಯನ್ನು ಹೊಕ್ಕು ಮಾರಣಹೋಮಮಾಡುವುದಕ್ಕಾಗಿ ಹೊರಟ.

ಕಾಕಾನ್ ಗೃಧ್ರಾನ್ ವಯಶ್ಶ್ಯೇನಾನ್
ಭಲ್ಲೂಕಾನ್ ಕುಕ್ಕುಟಾನಪಿ ।....

ಹೀಗೆ ನಾನಾ ಜಂತುಗಳನ್ನು ಆಹುತಿಕೊಟ್ಟ.

ಹುತ್ವಾ ರೋಮಾಣಿ ಕೇಶಾಂಶ್ಚ
ಜುಹಾವ ರಣಕೋವಿದಃ ॥

---

* ಇದು ಪಾಠಾಂತರ. ಈ ಕಥೆ ಅಧ್ಯಾತ್ಮರಾಮಾಯಣದಲ್ಲಿಯೂ ಇದೆ.

ಈ ಭಯಂಕರ ಹೋಮದಿಂದ ವಿಭೀಷಣನಿಗೆ ಕೂಡ ತಲ್ಲಣವುಂಟಾಯಿತು. ಆ ಹೋಮವನ್ನು ಧ್ವಂಸಮಾಡಬೇಕೆಂದು ಚಿಂತಿಸಿದಾಗ ವಿಭೀಷಣನ ಹೆಂಡತಿ ಸರಮಾ ಎಂಬಾಕೆ ಆ ಹೋಮ ನಡೆಯುತ್ತಿದ್ದ ರಹಸ್ಯ ಸ್ಥಳವನ್ನು ಕೈ ಸನ್ನೆಯಿಂದ ತೋರಿಸಿದಳು. ಅಂಗದನು ಆಗ ಮಂಡೋದರಿಯ ಮುಂದಲೆ ಹಿಡಿದು ಆ ಕಡೆಗೆ ಎಳೆದುತಂದ. ಮಂಡೋದರಿ ಅಳುತ್ತಾ ಗಂಡನನ್ನು ಕುರಿತು "ನಿನಗೆ ನಾಚಿಕೆಯಿಲ್ಲವೆ ?" ಎಂದು ಮೂದಲಿಸಿದಳು. ಅದರಿಂದ ಉದ್ರಿಕ್ತನಾದ ರಾವಣನು ಖಡ್ಗ ಹಿಡಿದು ಅಂಗದನಮೇಲೆ ನುಗ್ಗಿದನು. ಹಾಗೆ ಹೋಮವಿಘ್ನವಾಯಿತು.

ರಾವಣನು ಮಂಡೋದರಿಗೆ ಸಾಂತ್ವವಚನಗಳನ್ನು ಹೇಳಿ ಹೀಗೆಂದನು: "ನಾನು ರಾಮಲಕ್ಷ್ಮಣರನ್ನೂ ಕಪೀಶ್ವರರನ್ನೂ ಸಂಹಾರ ಮಾಡುವವನಾಗಿದ್ದೇನೆ. ಹಾಗೆ ಆಗದೆ ರಾಮನು ನನ್ನನ್ನು ಬೀಳಿಸಿದ್ದೇ ಆದರೆ, ಆಗ ನೀನು ನನ್ನ ಉತ್ತರಕ್ರಿಯೆಗಳನ್ನು ಮಾಡಿಸತಕ್ಕದ್ದು. ಆಗ ನೀನು ವೈದೇಹಿಯನ್ನು ಸಮಾಧಾನಪಡಿಸಿ ನನ್ನೊಡನೆ ಸಾಯತಕ್ಕದ್ದು. 'ಮರ್ತವ್ಯಂ ತು ಮಯಾ ಸಹ |' "

ಹೀಗೆ ಮರ್ಮಭೇದಕವಾದ ರೀತಿಯಲ್ಲಿ ವಾಗ್ವಾದ ನಡೆಯುತ್ತದೆ. ರಾಮನು ಅವಧ್ಯನೆಂದು ಆಕೆ ಹೇಳುತ್ತಾಳೆ.

ಮರಣಂ ನ ಜರಾ ಚೈವ
　　ಕಥಂ ಯಾಮಿ ತ್ವಯಾ ಸಹ |
ದಾಸೀ ಭವಾಮಿ ರಾಮಸ್ಯ
　　ವಿಭೀಷಣಗೃಹೇಽಥವಾ |

ಹೀಗೆ ನಿರಾಶೆಯಿಂದ ವಿಲಪಿಸುತ್ತಿದ್ದವಳನ್ನು ಕುರಿತು ರಾವಣನು ಹೇಳಿದ: "ಹೇ ಮಂಡೋದರಿ, ನಿನ್ನಿಂದ ತಿರಸ್ಕರಿಸಲ್ಪಟ್ಟು ನಾನು ಹೇಗೆ ಬದುಕಲಿ ?"

ಜೀವನೇ ಚ ನ ಮೇ ಸ್ಪೃಹಾ ||
ವಿಮುಚ್ಯ ತ್ವಾಂ ಚ ಸಂಸಾರಂ
　　ಗಮಿಷ್ಯೇ ಮುಕ್ತಿವಲ್ಲಭಾಮ್ |

ಚಿದಾನಂದಮಯೀ ಶುದ್ಧಾ
ಸೇವ್ಯತೇ ಯಾ ಮುಮುಕ್ಷುಭಿಃ |
ತಾಂ ಗತಿಂ ತು ಗಮಿಷ್ಯಾಮಿ
ಹತೋ ರಾಮೇಣ ಸಂಯುಗೇ | *

ಎಂಥ ಮಾತು ! ವೇದಾಂತಸಾರವನ್ನು ಇದರಲ್ಲಿ ಹಿಂಡಿದ್ದಾನೆ ರಾವಣ.

## ದೈವವೈಕಟ್ಯ

ಇದು ರಾವಣನ ಹೃದಯವನ್ನು ಎತ್ತಿತೋರಿಸತಕ್ಕ ಮಾತು. ರಾವಣನು ವಾಸ್ತವವಾಗಿ ಅಸಂಸ್ಕೃತನಲ್ಲ. ಪುಣ್ಯಪಾಪವಿವೇಕವಿಲ್ಲದವನಲ್ಲ. ಮಹಾತೇಜಸ್ವಿ; ಬ್ರಹ್ಮಕುಲಸಂಭೂತನಾದವನು. ಅವನನ್ನು ಅವನ ಶಕ್ತಿಗೆ ಒಳಗಾಗದ ಯಾವುದೋ ಒಂದು ಕಾಮಚೋದನೆ ಪೀಡಿಸುತ್ತಿತ್ತು. ಆ ಕಾಮಚೋದನೆಯನ್ನು ದಮನಮಾಡಬೇಕೆಂದು ಅವನು ಎಷ್ಟೋ ಬಗೆಯಾಗಿ ಪ್ರಯಾಸಪಟ್ಟ; ತನಗೆ ತಾನೇ ಬುದ್ಧಿ ಹೇಳಿಕೊಂಡ. ಸಾವಿರಾರುಸಲ ತನ್ನ ಆಸೆ ಅನಭ್ಯವಾದದ್ದೆಂದೂ ಕಲುಷಿತವಾದದ್ದೆಂದೂ ನೆನೆನೆನೆದುಕೊಂಡಿದ್ದ. ಅವನು ಎಷ್ಟು ಪಶ್ಚಾತ್ತಾಪಪಟ್ಟಿದ್ದರೂ, ಎಷ್ಟು ಆತ್ಮಸಂಯಮಪ್ರಯತ್ನ ಮಾಡಿದ್ದರೂ ಅವನ ಮನಸ್ಸಿನಲ್ಲಿದ್ದ ಕಾಮವು ಅವನ ವಿವೇಕಕ್ಕಿಂತಲೂ, ಅವನ ಆತ್ಮಸಂಯಮಕ್ಕಿಂತಲೂ ಪ್ರಬಲವಾಗಿ ಅವನನ್ನು ಬಾಧಿಸುತ್ತಿತ್ತು. ಇದನ್ನು ರಾವಣನು ತಿಳಿದುಕೊಂಡು, ಆ ದೇಹ ಇರುವವರೆಗೂ ತನಗೆ ಆ ಪಾಪದ ಬಾಧೆ ತಪ್ಪಿದ್ದಲ್ಲವೆಂದೂ ದೇಹಪಾತ ದಿಂದಲೇ ತನಗೆ ಪಾಪದಿಂದ ಬಿಡುಗಡೆಯೆಂದೂ ನಿಶ್ಚಯಮಾಡಿಕೊಂಡಿದ್ದ.

ಇದನ್ನೇ ಇಂಗ್ಲಿಷಿನಲ್ಲಿ 'ಟ್ರ್ಯಾಜಿಕ್ ಎಲಿಮೆಂಟ್' (Tragic element) ದೈವವೈಕಟ್ಯಾಂಶವೆನ್ನುತ್ತಾರೆ. ಸರ್ವಗುಣಸಂಪನ್ನನಾದ ಒಬ್ಬ ಮಹಾಪುರುಷನು ಸರ್ವಬಲೋಪೇತನಾದವನು, ಸರ್ವವಿದ್ಯಾ ಸಂಪನ್ನನಾದವನು ತನ್ನ ಜೀವನಕ್ಕೆ ಸಂಬಂಧಪಟ್ಟ ನೂರು ಅಂಶಗಳ ಪೈಕಿ ತೊಂಭತ್ತೊಂಭತ್ತರಲ್ಲಿ ಉದ್ದಾಮನಾಗಿದ್ದುಕೊಂಡು, ಮಹಾವೀರನಾಗಿದ್ದು ಕೊಂಡು, ಯಾವುದೋ ಒಂದೇ ಒಂದು ಅಂಶದಲ್ಲಿ ಮಾತ್ರ ದುರ್ಬಲ

* ಈ ಪ್ರಕರಣ ಪಾಠಾಂತರದಲ್ಲಿದೆ. ಪ್ರಕೃತ ಗ್ರಂಥದಲ್ಲಿಲ್ಲ.

ನಾಗಿರುತ್ತಾನೆ. ಆ ಒಂದು ಅಂಶವನ್ನು ಬಿಟ್ಟರೆ ಮಿಕ್ಕೆಲ್ಲದರಲ್ಲೂ ಅವನು ಧೀರ. ಆ ಒಂದು ಅಂಶದಲ್ಲಿ ಮಾತ್ರ ಅವನು ದುರ್ಬಲ. ಆ ಒಂದು ದೌರ್ಬಲ್ಯದ ಕಾರಣದಿಂದ ಅವನ ಮಿಕ್ಕೆಲ್ಲ ಗುಣಸಂಪತ್ತುಗಳೂ ಮಣ್ಣು ಪಾಲಾಗುತ್ತವೆ. ಆನೆಯನ್ನು ಕಟ್ಟುವ ಕಬ್ಬಿಣದ ಸರಪಳಿಯಲ್ಲಿ ನೂರು ಕೊಂಡಿಗಳಿರುತ್ತವೆ. ಒಂದೇ ಒಂದು ಕೊಂಡಿ ಮಾತ್ರ ಸವೆದಿರುತ್ತದೆ. ಮಿಕ್ಕ ತೊಂಭತ್ತೊಂಭತ್ತು ಕೊಂಡಿಗಳು ಗಟ್ಟಿಯಾಗಿ ಪಟುವಾಗಿರುತ್ತವೆ. ಆದರೆ ಸವೆದ ಒಂದು ಕೊಂಡಿ ಗಟ್ಟಿಯಾದ ತೊಂಭತ್ತೊಂಭತ್ತು ಕೊಂಡಿಗಳಿಗೆ ವ್ಯರ್ಥಪ್ರಾಯವಾಗುತ್ತದೆ. ಇದೇ ಟ್ರ್ಯಾಜಿಕ್ ಕಥಾನಾಯಕನ ಲಕ್ಷಣ. ಇದು ರಾವಣನಲ್ಲಿ ಕಾಣಬರುತ್ತದೆ. ಅವನ ಶೌರ್ಯ ಸಾಹಸಗಳೂ ವಿದ್ಯೆ ವಿವೇಕಗಳೂ ಅವನ ಒಂದೇ ಒಂದು ಅಂತರಂಗವೈಕಲ್ಯದಿಂದ ನಿರರ್ಥಕಗಳಾಗುತ್ತವೆ. ಆ ಅಂತರಂಗಪೀಡೆಯ ಬಲಿಷ್ಠತೆಯನ್ನು ರಾವಣನು ಮನಸಾ ಕಂಡುಕೊಂಡ ಘಳಿಗೆಯಲ್ಲಿ ಅವನ ಬಾಯಿಂದ ಹೊರಟ ಮಾತು ಇದು.

ಜೇತವ್ಯಮಿತಿ ಕಾಕುತ್ಸ್ಥಃ
ಮರ್ತವ್ಯಮಿತಿ ರಾವಣಃ |

## ದಶಕಂಠಪತನ

ಘೋರವಾದ ಯುದ್ಧ ನಡೆಯುತ್ತದೆ. ಅದನ್ನು ವರ್ಣಿಸುವುದು ವಾಲ್ಮೀಕಿಗಳಿಗೇ ಕಷ್ಟವೆಂದು ತೋರಿರಬೇಕು :

ಗಗನಂ ಗಗನಾಕಾರಂ
ಸಾಗರಸ್ಸಾಗರೋಪಮಃ |
ರಾಮರಾವಣಯೋರ್ಯುದ್ಧಂ
ರಾಮರಾವಣಯೋರಿವ |

—ಸರ್ಗ ೧೧೦, ಶ್ಲೋಕಗಳು ೨೩-೨೪, ಪುಟಗಳು ೩೮೯-೩೯೦

ರಾಮನು ತನ್ನ ಬಾಣಗಳಿಂದ ದಶಮುಖನ ಶಿರಸ್ಸುಗಳನ್ನು ಛೇದಿಸುತ್ತಾನೆ. ಅದರಿಂದ ಆದದ್ದೇನು? ಒಂದು ಶಿರಸ್ಸು ಬಿದ್ದರೆ ಇನ್ನೊಂದು ಹುಟ್ಟಿತು; ಮತ್ತೊಂದು ಶಿರಸ್ಸು ಬಿದ್ದರೆ ಮತ್ತೊಂದು ಹುಟ್ಟಿತು. ಹೀಗೆ ರಾವಣಪರಂಪರೆ ಏಳುತ್ತಿರುವುದನ್ನು ನೋಡಿ ರಾಮನು ವಿಸ್ಮಿತನಾಗಿದ್ದಾಗ

ರಾಮನ ಸಾರಥಿಯಾದ ಮಾತಲಿಯು ರಾಮನಿಗೆ ಜ್ಞಾಪಕಕೊಡುತ್ತಾನೆ, ಆತನಿಗೆ ಅಗಸ್ತ್ಯಮಹರ್ಷಿಗಳು ಕೊಟ್ಟಿದ್ದ ಬ್ರಹ್ಮಾಸ್ತ್ರದ ವಿಷಯವನ್ನು.

ರಾಮನು ಬ್ರಹ್ಮಾಸ್ತ್ರವನ್ನು ರಾವಣನ ಎದೆಯಮೇಲೆ ಪ್ರಯೋಗಿಸಿದ. ಆಗ ದಶಕಂಠಪತನವಾಯಿತು.

ದೇವತೆಗಳು ಸಂತೋಷಿಸಿ ಪುಷ್ಪವೃಷ್ಟಿ ಕರೆದರು.

## 'ಆದಿತ್ಯಹೃದಯ'

ಈ ಪ್ರಕರಣದಲ್ಲಿ ಕುತೂಹಲವಾದ ಇನ್ನೊಂದು ಸಂಗತಿ—ಶ್ರೀರಾಮನಿಗೆ ಅಗಸ್ತ್ಯರು 'ಆದಿತ್ಯಹೃದಯ'ವನ್ನು ಉಪದೇಶಮಾಡಿದ್ದು. ಶ್ರೀರಾಮನು ಯುದ್ಧಶ್ರಮದಿಂದ ಬಳಲಿ ಬೇಸತ್ತಿದ್ದಾನೆ, ಜಯೋಪಾಯವನ್ನು ಕಾಣದೆ ಚಿಂತಾಕ್ರಾಂತನಾಗಿದ್ದಾನೆ. ಆಗ ಅಗಸ್ತ್ಯಮಹರ್ಷಿಗಳು ಅಲ್ಲಿಗೆ ಬಂದು ಸೂರ್ಯೋಪಾಸನೆಯಿಂದ ರಾಮನಿಗೆ ಜಯಲಾಭವಾಗುವುದೆಂದು ಭರವಸೆ ಕೊಟ್ಟು ಧೈರ್ಯ ತುಂಬುತ್ತಾರೆ. ಇದೇ ಆದಿತ್ಯಹೃದಯವೆಂಬ ಪ್ರಸಿದ್ಧ ಪ್ರಕರಣ. ಆ ಪ್ರಸಿದ್ಧಿ ಆ ಮಂತ್ರದ ಮಹಿಮೆಯನ್ನು ಅವಲಂಬಿಸಿದ್ದೆಂದು ಬಹುಮಂದಿ ತಿಳಿದುಕೊಂಡಿದ್ದಾರೆ. ಅದರಲ್ಲಿ ನನಗೇನೂ ದೋಷ ಕಾಣುವುದಿಲ್ಲ. ಆದರೆ ನನ್ನ ಮನಸ್ಸಿಗೆ ಈ ಶ್ಲೋಕಗಳ ಮಂತ್ರಮಹಿಮೆಗಿಂತ ಕಡಮೆಯಲ್ಲದ ಶಕ್ತಿ ಅದರ ಕಾವ್ಯಸೌಂದರ್ಯದ್ದು. ಇದಕ್ಕೆ ಸಮಾನವಾದ ಸೂರ್ಯಪ್ರಭೆಯ ವರ್ಣನೆ ವೇದಗಳಿಂದ ಹೊರಗೆ ಇಲ್ಲವೆಂದು ನಾನು ತಿಳಿದುಕೊಂಡಿದ್ದೇನೆ. "ತಪ್ತಚಾಮೀಕರಾಭಾಯ", "ತಮೋಽಭಿನಿಘ್ನಾಯ", "ಲೋಕಸಾಕ್ಷಿಣೇ"—ಎಂಥ ಅರ್ಥಸಮೃದ್ಧವಾದ ಮಾತುಗಳು! ಎಂಥ ಪ್ರತ್ಯಕ್ಷೀಕಾರಕ ಉಪಮಾನಗಳು! ಪದಗಳ ಸೌಂದರ್ಯಕ್ಕಾಗಿಯಾದರೂ, ಭಾವಗಳ ಸೌಂದರ್ಯಕ್ಕಾಗಿಯಾದರೂ ಈ ಆದಿತ್ಯಹೃದಯಸ್ತೋತ್ರವನ್ನು ಜನ ಮುಖಸ್ಥಮಾಡಿಕೊಳ್ಳತಕ್ಕದ್ದಾಗಿದೆ. ಆದಿತ್ಯಹೃದಯವನ್ನು ನೂರಾರುಮಂದಿ ನಿತ್ಯಪಾರಾಯಣದಲ್ಲಿರಿಸಿಕೊಂಡವರಿದ್ದಾರೆ. ಅವರ ಮುಖ್ಯ ಆಶಯವು ಮಂತ್ರವಿಷಯದ್ದಾಗಿದ್ದರೆ ಹಾಗಿರಲಿ. ಅದರ ಜೊತೆಗೆ ಅವರು ಸತ್ಕಾವ್ಯವನ್ನೂ ಅನುಭವಿಸುತ್ತಿದ್ದಾರೆ.

## ಶ್ರೀರಾಮನು ಅಗಸ್ತ್ಯರಿಂದ ಉಪದೇಶ ಪಡೆದ ಬಳಿಕ

ತ್ರಿರಾಚಮ್ಯ ಶುಚಿರ್ಭೂತ್ವಾ
ಧನುರಾದಾಯ ವೀರ್ಯವಾನ್ ।

—ಸರ್ಗ ೧೦೬, ಶ್ಲೋ. ೨೯, ಪು. ೩೭೨

ರಾಮನು ಮತ್ತೆ ಯುದ್ಧೋಪಕ್ರಮ ಮಾಡುವುದಕ್ಕೆ ಮುಂಚೆ ಶುಚಿಯಾದನಂತೆ; ಮೂರುಸಲ ಆಚಮನ ಮಾಡಿದನಂತೆ. ಯುದ್ಧ ಕಾರ್ಯ ಆತನಿಗೆ ಮಡಿಯ ಕೆಲಸ; ಪವಿತ್ರವಾದ ಕೆಲಸ. ಅದು ಮೈಲಿಗೆ ಯಿಂದ ಮಾಡಲಾಗುವ ಕೆಲಸವಲ್ಲ. ಈ ಭಾವ ಅನೇಕ ಕಡೆ ದೊರೆಯು ತ್ತದೆ. ಯುದ್ಧವೆಂಬುದು ಉಗ್ರವಾದ ಕರ್ತವ್ಯ; ಹಗುರದ ಆಟವಲ್ಲ. ಮನಸ್ಸು ಬಂದಂತೆ ಹಿಡಿದು ಹೊಡೆಯತಕ್ಕದ್ದಲ್ಲ. ಅದಕ್ಕೆ ನಿಯಮ ಗಳುಂಟು. ಹೀಗೆ ನಿಯಮವಿಧೇಯವಾಗಿದ್ದದ್ದು ಪೂರ್ವಯುಗಗಳ ಯುದ್ಧ. ಯಾರೆಂದರೆ ಅವರನ್ನು, ಎಲ್ಲೆಂದರಲ್ಲಿ, ಯಾವಾಗೆಂದರೆ ಆವಾಗ ಕೊಲ್ಲುವುದು ನರಹತ್ಯೆಯಾದೀತೇ ಹೊರತು ಯುದ್ಧವೆಂಬ ಗೌರವವನ್ನು ಪಡೆಯಲಾರದು. ಈ ವಿಶೇಷವನ್ನು ಇಂದಿನ ಐರೋಪ್ಯ ಯುದ್ಧಗಳ ರೀತಿಯೊಡನೆ ಹೋಲಿಸಿ ನೋಡುವುದು ಬೋಧಪ್ರದವಾದೀತು.

ಯುದ್ಧವು ಒಂದು ಧರ್ಮಕ್ರಿಯೆ. ಅದು ಒಂದು ವಿಶೇಷಧರ್ಮ, ಸಾಮಾನ್ಯಧರ್ಮವಲ್ಲ. ಅದು ಮಹಾವ್ರಣಕ್ಕೆ ಬೇಕಾಗುವ ಶಸ್ತ್ರಚಿಕಿತ್ಸೆಯ ಹಾಗೆ: ಭಯಂಕರ ಹೌದು, ಆದರೆ ಶುಭಂಕರವೂ ಹೌದು. ಅದರಲ್ಲಿ ಅಪಾಯವುಂಟು. ಆದರೆ ಸಮರ್ಥನ ಕೈಯಿಂದ ಆದಾಗ ಅಪಾಯವಾಗದೆ ಅನಪಾಯ ಕ್ಷೇಮಲಾಭವೇ ಆಗುತ್ತದೆ.

ರಾವಣಪತನಾನಂತರ ವಿಭೀಷಣ, ಮಂಡೋದರಿ ಮೊದಲಾದವರು ಪ್ರಲಾಪಮಾಡುತ್ತಾರೆ. ಶ್ರೀರಾಮನು ಅವರಿಗೆ ಸಮಾಧಾನ ಹೇಳುತ್ತಾನೆ.

ವಿಭೀಷಣನು ರಾವಣನಿಗೆ ಔರ್ಧ್ವದೇಹಿಕಗಳನ್ನು ಮಾಡದೆ ಹಿಂಜರಿದಾಗ ರಾಮನು ಉತ್ತರಕ್ರಿಯೆಗಳನ್ನು ಯಥಾಕ್ರಮವಾಗಿ ನಡಸುವಂತೆ ವಿಭೀಷಣನನ್ನು ಒಡಂಬಡಿಸುತ್ತಾನೆ.

ಕ್ರಿಯತಾಮಸ್ಯ ಸಂಸ್ಕಾರಃ
ಮಮಾಪ್ಯೇಷ ಯಥಾ ತವ ||

—ಸರ್ಗ ೧೧೩, ಶ್ಲೋ. ೨೬, ಪು. ೪೦೬

" ಈತನಿಗೆ ಉತ್ತರಕ್ರಿಯೆಗಳನ್ನು ನಡಸು. ಈ ರಾವಣನು ನಿನಗೆ ಹೇಗೋ ನನಗೂ ಹಾಗೆ ಗೌರವಾರ್ಹನು."

ಇಲ್ಲಿ ಕಾಣುತ್ತದೆ ರಾಮನ ದೊಡ್ಡಮನುಷ್ಯತನ.

ಅನಂತರ ಶ್ರೀರಾಮನು ವಿಭೀಷಣನಿಗೆ ರಾಜ್ಯಾಭಿಷೇಕ ಮಾಡಿಸಬೇಕೆಂದು ಲಕ್ಷ್ಮಣನಿಗೆ ಆಜ್ಞೆ ಮಾಡಿದ. ವಿಭೀಷಣನಿಗೆ ಲಂಕೆಯಲ್ಲಿ ಕ್ರಮವಾಗಿ ಪಟ್ಟಾಭಿಷೇಕ ನಡೆಯಿತು.

## ವಿಜಯವಾರ್ತೆಯ ನಿವೇದನೆ

ಆಮೇಲೆ ವಿಜಯವಾರ್ತೆಯನ್ನು ಸೀತಾದೇವಿಗೆ ತಿಳಿಸಬೇಕೆಂದು ಆಂಜನೇಯನನ್ನು ಶ್ರೀರಾಮನು ಬೇಡಿದ. ಆಂಜನೇಯನು ಆಕೆಯನ್ನು ನೋಡಿದಾಗ ಆಕೆಯ ಮುಖ ಸೌಮ್ಯದಿಂದ ಕೂಡಿತ್ತಂತೆ. ಆಂಜನೇಯನಿಂದ ಎಲ್ಲ ಸಂಗತಿಯನ್ನೂ ಕೇಳಿದಾಗ ಆಕೆಯ ಪ್ರತಿವರ್ತನೆ ಹೇಗಿತ್ತು? ಒಬ್ಬ ಸಾಧ್ವಿಯೂ ಆಕೆಯ ಪತಿಯೂ ಹದಿನಾಲ್ಕು ವರ್ಷ ಒಬ್ಬರಿಂದೊಬ್ಬರು ಅಗಲಿದ್ದು, ಅನಿರೀಕ್ಷಿತವಾಗಿದ್ದ ನಾನಾ ವಿಪತ್ತುಗಳನ್ನೂ ಸಂಕಟಗಳನ್ನೂ ಸಹಿಸಿ, ಆ ಬಳಿಕ ದೈವಾನುಗ್ರಹದಿಂದ ಒಬ್ಬರನ್ನೊಬ್ಬರು ಮತ್ತೆ ಸೇರುವ ಅನುಕೂಲದಶೆ ಬಂದಾಗ, ಅವರಿಬ್ಬರ ಪರಸ್ಪರ ಚರ್ಯೆ ಹೇಗಿದ್ದೀತು? ನಮ್ಮ ಜೀವನದಲ್ಲಿ ಇಂಥ ಸಂದರ್ಭ ದಿನದಿನವೂ ಬರುವುದಿಲ್ಲ; ಬಹು ವಿರಳ. ಅಂಥ ಸಂದರ್ಭದಲ್ಲಿ ಮುಖ್ಯ ಪಾತ್ರಗಳ ಮನಃಸ್ಥಿತಿ ಎಂಥಾದ್ದು, ವರ್ತನೆ ಎಂಥಾದ್ದು—ಇದು ನಾವು ನೋಡಬೇಕೆನಿಸುವ ಸಂಗತಿ. ಸೀತಾದೇವಿಯಾದರೋ ಆಂಜನೇಯವಾಕ್ಯವನ್ನು ಕೇಳಿ ಏನನ್ನೂ ನುಡಿಯಲಿಲ್ಲವಂತೆ: " ವ್ಯಾಜಹಾರ ನ ಕಿಂಚನ."

ಹೃದಯದಲ್ಲಿ ಭಾವದ ಒತ್ತಡ ಅತಿಶಯವಾದಾಗ ಮಾತು ಹೊರಡುವುದಿಲ್ಲ.

ಆಂಜನೇಯಸ್ವಾಮಿ—

ಕಿಂ ನು ಚಿಂತಯಸೇ ದೇವಿ
ಕಿಂ ನು ಮಾಂ ನಾಭಿಭಾಷಸೇ ||

—ಸರ್ಗ ೧೧೬, ಶ್ಲೋ. ೧೬, ಪು. ೪೪೧

ಎಂದು ಕೇಳುತ್ತಾನೆ. ಆಕೆ ಹೇಳುತ್ತಾಳೆ:

ಪ್ರಹರ್ಷವಶಮಾಪನ್ನಾ
ನಿರ್ವಾಕ್ಯಾಸ್ಮಿ ಕ್ಷಣಾಂತರಮ್ ||

—ಸರ್ಗ ೧೧೬, ಶ್ಲೋ. ೧೮, ಪು. ೪೪೨

ಸಂತೋಷ ಉಕ್ಕುಕ್ಕಿ ಬಂದಾಗ ಮಾತು ಹೊರಡಲಾರದು.

## ಸೀತೆಯ ಔಚಿತ್ಯಪರಿಜ್ಞಾನ

ಆಗ ಆಂಜನೇಯಸ್ವಾಮಿ ಅಲ್ಲಿದ್ದ ರಾಕ್ಷಸಿಯರನ್ನು ನೋಡಿ ಅವರಿಂದ ಸೀತಾದೇವಿಗೆ ಹಿಂಸೆಯಾದದ್ದನ್ನು ನೆನೆಸಿಕೊಂಡು ಅವರನ್ನು ಒದೆದು ಕೊಲ್ಲುವೆನೆಂದು ಹೊರಟ.

ಇಚ್ಛಾಮಿ ವಿವಿಧೈರ್ಘಾತೈಃ
ಹಂತುಮೇತಾಸ್ಸುದಾರುಣಾಃ |
ಘಾತೈರ್ಜಾನುಪ್ರಹಾರೈಶ್ಚ
ದಶನಾನಾಂ ಚ ಪಾತನೈಃ |
ಭಕ್ಷಣೈಃ ಕರ್ಣನಾಸಾನಾಂ
ಕೇಶಾನಾಂ ಲುಂಛನೈಸ್ತಥಾ |

—ಸರ್ಗ ೧೧೬, ಶ್ಲೋಕಗಳು ೩೩-೩೪, ಪು. ೪೪೫

ಸೀತಾದೇವಿ ಅದು ಕೂಡದೆನ್ನುತ್ತಾಳೆ. "ಆ ರಾಕ್ಷಸಿಯರು ತಮ್ಮ ಸ್ವಾಮಿಯ ಆಜ್ಞೆಯಂತೆ ನಡೆದರು. ಅದು ಅವರಿಗೆ ಯುಕ್ತವೇ ತಾನೆ?"

ರಾಜಸಂಶ್ರಯವಶ್ಯಾನಾಂ
ಕುರ್ವತೀನಾಂ ಪರಾಜ್ಞಯಾ |

ವಿಧೇಯಾನಾಂ ಚ ದಾಸೀನಾಂ
 ಕಃ ಕುಪ್ಯೇದ್ವಾನರೋತ್ತಮ ।

—ಸರ್ಗ ೧೧೬, ಶ್ಲೋ. ೩೮, ಪು. ೪೪೫

ಇಲ್ಲಿ ನೋಡಿರಿ ದೊಡ್ಡತನವನ್ನ. ಎಂಥ ವಿವೇಕ! ಮತ್ತು ಎಷ್ಟು ಜಾಗರೂಕವಾದ ವಿವೇಕ!

× × ×

ಆಂಜನೇಯಸ್ವಾಮಿ ಸೀತೆಯನ್ನು ಕುರಿತು "ನಿನ್ನಿಂದ ಶ್ರೀರಾಮನಿಗೆ ನಾನು ಹೇಳಬೇಕಾದ ಪ್ರತಿಸಂದೇಶವೇನು ?" ಎಂದು ಕೇಳುತ್ತಾನೆ. ಆಕೆ "ದ್ರಷ್ಟುಮಿಚ್ಛಾಮಿ ಭರ್ತಾರಮ್" ಎಂದು ಹೇಳುತ್ತಾಳೆ. ಹನುಮಂತ ನಿಂದ ಈ ವಾರ್ತೆಯನ್ನು ಶ್ರೀರಾಮನು ಕೇಳಿದ.

ಅಗಚ್ಛತ್ ಸಹಸಾ ಧ್ಯಾನಂ
 ಈಷದ್ಬಾಷ್ಪಪರಿಪ್ಲುತಃ ॥
ದೀರ್ಘಮುಷ್ಣಂ ವಿನಿಃಶ್ವಸ್ಯ
 ಮೇದಿನೀಮವಲೋಕಯನ್ ॥

—ಸರ್ಗ ೧೧೭, ಶ್ಲೋಕಗಳು ೫-೬, ಪು. ೪೫೦

ಕಣ್ಣಿನಲ್ಲಿ ಕಂಬನಿ ತುಂಬಿ ಬಂದಿತು. ಕಂಠ ಗದ್ಗದಿತವಾಯಿತು. ಉಸಿರು ಬಿಸಿಯಾಯಿತು. ನೆಲವನ್ನು ದಿಟ್ಟಿಸಿಕೊಂಡು ರಾಮಚಂದ್ರನು ಹೇಳಿದ, ಆಗ ಪಕ್ಕದಲ್ಲಿದ್ದ ವಿಭೀಷಣನಿಗೆ :

ದಿವ್ಯಾಂಗರಾಗಾಂ ವೈದೇಹೀಂ
 ದಿವ್ಯಾಭರಣಭೂಷಿತಾಮ್ ।
ಇಹ ಸೀತಾಂ ಶಿರಃಸ್ನಾತಾಂ
 ಉಪಸ್ಥಾಪಯ ಮಾ ಚಿರಮ್ ।

—ಸರ್ಗ ೧೧೭, ಶ್ಲೋ. ೭, ಪು. ೪೫೦

"ಸೀತೆಯು ಅಭ್ಯಂಜನಸ್ನಾನ ಮಾಡಿ ಅಲಂಕೃತಳಾಗಿ ಬರಲಿ ; ಬೇಗ ಕರೆದುಕೊಂಡು ಬಾ." ಈ ಮಾತನ್ನು ವಿಭೀಷಣನು ಸೀತೆಗೆ ತಿಳಿಸಿದಾಗ ಆಕೆ ಏನೆನ್ನುತ್ತಾಳೆ ?

ಅಸ್ನಾತಾ ದ್ರಷ್ಟುಮಿಚ್ಛಾಮಿ
ಭರ್ತಾರಂ ರಾಕ್ಷಸಾಧಿಪ |

—ಸರ್ಗ ೧೧೭, ಶ್ಲೋ. ೧೧, ಪು. ೪೫೦

ಈ ಮಾತಿಗೆ ವಿಭೀಷಣನು

ಯದಾಹ ರಾಜಾ ಭರ್ತಾ ತೇ
ತತ್ತಥಾ ಕರ್ತುಮರ್ಹಸಿ |

—ಸರ್ಗ ೧೧೭, ಶ್ಲೋ. ೧೧, ಪು. ೪೫೦

"ಸ್ವಾಮಿಯೂ ಪತಿಯೂ ಆದಾತನು ಏನು ಹೇಳಿದ್ದಾನೋ ಅದನ್ನು ನೀನು ಮಾಡಬೇಕಾದದ್ದು" ಎನ್ನುತ್ತಾನೆ. ಆಗ ಸೀತಾದೇವಿ ಒಪ್ಪಿಕೊಂಡಳು.

ತತಸ್ಸೀತಾಂ ಶಿರಃಸ್ನಾತಾಂ
ಯುವತೀಭಿರಲಂಕೃತಾಮ್ |....

—ಸರ್ಗ ೧೧೭, ಶ್ಲೋ. ೧೪, ಪು. ೪೫೦

ಸ್ನಾನಮಾಡಿ ಅಲಂಕೃತಳಾಗಿ ಬರುತ್ತಾಳೆ.

## ಒಂದು ವಿಚಾರಘಟ್ಟ

ಇಲ್ಲಿ ಕಾಣುತ್ತದೆ ವಿಚಾರಘಟ್ಟ. ಮೊದಲು ರಾಮನು, ಸೀತೆಯು ಸ್ನಾತಳಾಗಿ ಅಲಂಕೃತಳಾಗಿ ಬರಬೇಕೆಂದು ಹೇಳಿದಾಗ ಆತನ ಮನಸ್ಸಿನಲ್ಲೇನಿತ್ತು? ಸೀತೆ ಅಸ್ನಾತಳಾಗಿಯೇ ಪತಿದರ್ಶನ ಮಾಡುವೆನೆಂದಾಗ ಆಕೆಯ ಮನಸ್ಸಿನಲ್ಲೇನಿತ್ತು? ಇದನ್ನು ನಾವು ಮನುಷ್ಯನೈಜದ ದೃಷ್ಟಿಯಿಂದ ನೋಡಬೇಕೆಂದು ನನಗನ್ನಿಸುತ್ತದೆ. ಒಂದೇ ಸಂದರ್ಭದಿಂದ ಬೇರೆಬೇರೆ ಮನಸ್ಸುಗಳು ಬೇರೆಬೇರೆ ಪ್ರತಿವರ್ತನೆಗಳನ್ನು ಮಾಡಿಸುತ್ತವೆ. ಆ ಪ್ರತಿವರ್ತನೆಗಳು ಬಹುಶಃ ಸಮ್ಮಿಶ್ರಿತಗಳು. ಕರುಣೆ, ಜುಗುಪ್ಸೆ, ಪ್ರೀತಿ, ಕ್ರೋಧ, ಸಮಾಧಾನ, ಅತೃಪ್ತಿ—ಹೀಗೆ ನಾನಾ ಭಾವಗಳು ಬೆರೆತುಕೊಂಡಿರುತ್ತವೆ, ಒಂದಾನೊಂದು ಸಂದರ್ಭವಿಶೇಷದ ಕಾರಣದಿಂದ. ಮೇಲೆ ನೋಡಿದ್ದೇವಲ್ಲವೆ, ಭಾವಾತಿಶಯದ ಕಾರಣದಿಂದ

ರಾಮನು ಮೂಕನಾಗಿದ್ದದ್ದನ್ನು? ಸೀತೆ ಮೂಕಳಾಗಿದ್ದದ್ದನ್ನು? ನಮ್ಮ ಜೀವಮಾನದ ಎಷ್ಟೋ ಸಂಧಿಕ್ಷಣಗಳಲ್ಲಿ ಮಾತು ಹೊರಡಲಾರದು. ಹೃದಯವೇನೋ ಶೂನ್ಯವಲ್ಲ. ಅಲ್ಲಿ ಸಂವೇದನೆ ನಷ್ಟವಾಗಿರುವುದಿಲ್ಲ. ಅದಕ್ಕೆ ಪ್ರತಿಯಾಗಿ ಸಂವೇದನೆ ಬಹುವಾಗಿರುತ್ತದೆ, ಜಡೆಜಡೆಯಾಗಿರುತ್ತದೆ, ಭರ್ತಿಯಾಗಿರುತ್ತದೆ. ಆಗ ಯಾವುದನ್ನು ಮೊದಲು ಹೇಳಬೇಕು? ಇದನ್ನು ನಮ್ಮ ವಾಕ್ಶಕ್ತಿ ಗೊತ್ತುಮಾಡಲಾರದು. ಯಾವುದೋ ಒಂದು ಭಾವವನ್ನು ನುಡಿಯಲು ಮೊದಲುಮಾಡುತ್ತದೆ. ಆ ನುಡಿತ ಕೂಡ ಭಾವನೆಗಳ ಒತ್ತಡದಿಂದ ನಮ್ಮ ಎದೆಯೊತ್ತಿ ತಮ್ಮ ಭಾರವನ್ನು ಕೊಂಚವಾದರೂ ಹಗುರಮಾಡಿಕೊಂಡ ಹೊರತು ತಾನು ಅದನ್ನು ಸಹಿಸುವುದು ಇನ್ನು ಅಸಾಧ್ಯವೆಂದು ತೋರಿದಾಗ. ಆ ಒತ್ತಡದ ನಿರ್ಬಂಧದಲ್ಲಿ ತುಟಿಯಿಂದ ಒಂದು ಮಾತು ಹೊರಡುತ್ತದೆ. ಆ ಒಂದು ಮಾತೇ ನಮ್ಮ ಹೃದಯದ ಸರ್ವಸ್ವವಲ್ಲ. ನಮ್ಮ ಹೃದಯಭಾವ ಏಕೈಕವಲ್ಲ, ಅದು ಸಂಕೀರ್ಣವಾದದ್ದು. ಆದದ್ದರಿಂದ ಬಾಯಿನಿಂದ ಆಡಿದ ಒಂದು ಮಾತಿನಿಂದ ನಮ್ಮ ಅಂತರಂಗವೆಲ್ಲವೂ ಹೊರಪಟ್ಟಿತೆಂದು ತಿಳಿಯಲಾಗದು.

ಈಗ ಶ್ರೀರಾಮನ ಅಭಿಪ್ರಾಯವನ್ನು ಊಹಿಸೋಣ. ಅದು ಹೀಗಿರಕೂಡದೆ?: (೧) "ಸೀತೆ ಬಹು ಖಿನ್ನಳಾಗಿರಬೇಕು. ಬಹು ದೀನಳಾಗಿರಬೇಕು. ಆ ಸ್ಥಿತಿಯಲ್ಲಿ ಆಕೆ ಇರುವಾಗ ನಾನು ಆಕೆಯನ್ನು ಏಕೆ ನೋಡಬೇಕು? ಆಕೆ ಗೆಲುಮುಖವನ್ನು ತೊಟ್ಟಿರುವಾಗ ನಾನು ಆಕೆಯನ್ನು ನೋಡುವುದು ಉಚಿತ."

(೨) "ಸೀತೆ ರಾಕ್ಷಸಿಯರ ಮಧ್ಯದಲ್ಲಿದ್ದು ಬೇಸರಪಟ್ಟು ಮೈಲಿಗೆಯಲ್ಲಿದ್ದವಳು. ಈಗ ಆಕೆಯನ್ನು ನೋಡಿದರೆ ಆಕೆಯ ರೂಪಲಾವಣ್ಯಕ್ಕೆ ನ್ಯಾಯಮಾಡಿದಂತಾದೀತೆ? ಆಕೆ ಸುಸ್ನಾತಳಾಗಿ ತನಗೆ ಸ್ವಾಭಾವಿಕವಾದ ದಶೆಯಲ್ಲಿ ಬರಲಿ. ಆಗ ಆಕೆಗೆ ಸಮಾಧಾನವಾಗುತ್ತದೆ. ಅದು ನನಗೂ ಸಮಾಧಾನ."

(೩) "ಸೀತೆ ಇಷ್ಟು ದಿನವೂ ಅಶೌಚದಲ್ಲಿದ್ದಂತಿದ್ದಾಳೆ. ಈಗ ಆ ಮಾಲಿನ್ಯವನ್ನು ಕಳೆದು ಸ್ವೀಕೃತಶುಭಳಾಗಿ ಬರಲಿ. ಅದು ನಮ್ಮಿಬ್ಬರಿಗೂ ಶುಭವಾಗುತ್ತದೆ."

ಶ್ರೀರಾಮನ ಮನಸ್ಸಿನಲ್ಲಿ ಹೀಗೆ ಆಲೋಚನೆಗಳು ಪರಂಪರೆಯಾಗಿ, ತರಂಗತರಂಗವಾಗಿ ಏಳುತ್ತಿದ್ದವೆಂದು ನಾವು ಭಾವಿಸಬಹುದು. ಆತನು ಆಲೋಚನೆಮಾಡಿ ಸೀತೆ ತನ್ನಲ್ಲಿಗೆ ಶುಭಲಕ್ಷಣಸಂಪನ್ನಳಾಗಿ ಬರುವುದು ಯುಕ್ತವೆಂದು ಸಿದ್ಧಾಂತಮಾಡಿರಬಹುದು.

ಇನ್ನು ಸೀತಮ್ಮನ ಮಾತು. ಆಕೆಯ ಮನಸ್ಸು ರೋಸಿಹೋಗಿತ್ತು. ಉತ್ಸಾಹ ಹಾರಿಹೋಗಿ ಎಷ್ಟೋ ದಿನವಾಗಿದ್ದಿರಬೇಕು. ಅಂಥಾದ್ದರಲ್ಲಿ ಆಕೆ ಹೀಗೆ ಯೋಚಿಸಿರಬಹುದು :

(೧) "ಈಗ ನನಗೇಕೆ ಸ್ನಾನಾಲಂಕಾರಗಳು ? ಹೀಗೆಯೇ ಅವತಾರ ಮುಗಿಸಿಕೊಂಡೇನು. ನಾನು ಹೇಗಿದ್ದರೂ ನನ್ನ ತಾಯಿ ಭೂದೇವಿ ನನ್ನ ಕೈ ಬಿಡಲಾರಳು."

(೨) "ಪತಿಯ ಮನಸ್ಸು ಹೇಗಿದೆಯೋ ! ಅದನ್ನು ತಿಳಿದುಕೊಳ್ಳುವುದಕ್ಕೆ ಮುಂಚೆಯೇ ನಾನು ಸ್ನಾನಾಲಂಕಾರಗಳಿಗೆ ಆತುರಪಡಲೆ ? "

(೩) "ಶ್ರೀರಾಮನು ಇಂಗಿತಜ್ಞನಲ್ಲವೆ ? ನಾನು ಆತನಿಗೆ ನನ್ನ ಸ್ನಾನಾಲಂಕಾರಗಳಿಂದ ಪ್ರಿಯಳಾಗಬೇಕೋ, ಅಥವಾ ನನ್ನ ನೈಜದಿಂದಲೇ ನಾನು ಆತನಿಗೆ ಪ್ರಿಯಳೊ ? ಆತನನ್ನು ನೋಡಿದಮೇಲೆ ಆತನ ಮನಸ್ಸೆಂಥಾದ್ದೆಂದು ತಿಳಿದುಬಂದೀತು."

ಸೀತಾದೇವಿ ಬಾಹ್ಯಾಲಂಕಾರಗಳಿಗಿಂತ ಆತ್ಮಗುಣಕ್ಕೆ ಹೆಚ್ಚು ಬೆಲೆ ಸಲ್ಲುತ್ತದೆಂದು ನಿಶ್ಚಯಮಾಡಿಕೊಂಡಿದ್ದವಳು. ಈಗ ತಾನಿದ್ದ ಸ್ಥಿತಿಯಲ್ಲಿ ಸ್ನಾನಭೂಷಣಗಳಿಂದ ತನಗೆ ಆಗಬೇಕಾದದ್ದೇನು ಎಂದು ನಿರ್ವಿಣ್ಣಳಾಗಿದ್ದಿರಬಹುದು.

ಹೀಗೆ ಸೀತಾರಾಮರಿಗೆ ಹೃದಯಭಾವನೆಗಳ ದಾರಿ ಬೇರೆ ಬೇರೆಯಾಯಿತು. ಆದರೂ ಸಾಧ್ವಿಗೆ ಸಹಜವಾದಂತೆ ಸೀತೆ ನಡೆದುಕೊಂಡಳು.

## ರಾಮನ ಮನಃಪ್ರತಿವರ್ತನೆ

ಸೀತೆಯನ್ನು ನೋಡಿದಾಗ ಶ್ರೀರಾಮನು ಧ್ಯಾನಾರೂಢನಾಗಿದ್ದನಂತೆ. ಏನೇನನ್ನೋ ಯೋಚಿಸುತ್ತಿದ್ದ. ಸೀತೆಯು ಬಂದದ್ದನ್ನು ಕೇಳಿದಾಗ ರಾಮನ ಮನಸ್ಸಿನಲ್ಲಿ ಏನಾಯಿತು ? ವಾಲ್ಮೀಕಿಗಳು ಹೇಳುತ್ತಾರೆ :

ಹರ್ಷೋ ದೈನ್ಯಂ ಚ ರೋಷಶ್ಚ
ತ್ರಯಂ ರಾಘವಮಾವಿಶತ್ |

—ಸರ್ಗ ೧೧೬, ಶ್ಲೋ. ೧೬, ಪು. ೪೫೨

ರಾಮನ ಪ್ರತಿಭಾವನೆ ಒಂದಲ್ಲ; ಎರಡಲ್ಲ; ಮೂರು. ಹರ್ಷ, ದೈನ್ಯ, ರೋಷ.

(೧) ಹರ್ಷ ಬಂತು, ಸರಿ. ಸೀತೆಯನ್ನು ಕಂಡದ್ದಾಯಿತು. ರಾವಣನನ್ನು ವಧಿಸಿದ್ದಾಯಿತು. ಋಷಿಗಳಿಗೆ ಕೊಟ್ಟಿದ್ದ ವಚನವನ್ನು ನಡಸಿದ್ದಾಗಿತ್ತು.

(೨) ದೈನ್ಯವೇಕೆ? ವಂಚನೆಗೆ ತುತ್ತಾದೆನಲ್ಲ! ದೈವದ ಎದುರಿನಲ್ಲಿ ದುರ್ಬಲನಾದೆನಲ್ಲ! ಮತ್ತೊಬ್ಬರ ಸಹಾಯವನ್ನು ಅಪೇಕ್ಷಿಸಬೇಕಾಯಿತಲ್ಲ! ಬಹುಕಾಲ ತನ್ನ ಕೈ ಸಾಗದೆಹೋಯಿತಲ್ಲ! ಹೀಗೆ.

(೩) ರೋಷ. ಯಾರಮೇಲೆ? ದೈವದಮೇಲೆ. ವಿಧಿಯಮೇಲೆ. ಯಾರಮೇಲೆಂದು ಈಗ ನಿಷ್ಕರ್ಷೆಯಾಗಿ ಹೇಳುವಂತಿಲ್ಲ. ಅದು ಮೂಕ ರೋಷ. ಹೆಸರಿಲ್ಲದ ರೋಷ. ಲೋಕಾನುಭವವುಳ್ಳವರು ಅದರ ಸ್ವಭಾವವನ್ನು ಗುರುತಿಸಬಲ್ಲರು. ಅನುಭವವಿಲ್ಲದವರಿಗೆ ಅದನ್ನು ತಿಳಿಸಲಾಗದು.

ಮನೆಯಲ್ಲಿ ಯಾವುದೋ ಪ್ರಮಾದ ನಡೆದಾಗ, ತಲೆನೋವು ಬಂದು ಸಹನೆ ಮೀರಿದಾಗ, ನಮಗೆ ಪ್ರಿಯರಾದವರನ್ನು ಮೃತ್ಯು ಕೊಂಡೊಯ್ದಾಗ, ವಿಧೇಯರಾಗಿರಬೇಕಾದವರು ಎದುರುನುಡಿ ನುಡಿದಾಗ ನಾವು ತಲೆತಲೆ ಚಚ್ಚಿಕೊಳ್ಳುತ್ತೇವೆ. ರೇಗಾಡುತ್ತೇವೆ. ಹುಚ್ಚುಹುಚ್ಚಾಗಿ ಕೂಗಾಡುತ್ತೇವೆ. ಯಾರಮೇಲೆ ರೇಗಾಟ? ಗೊತ್ತಿಲ್ಲ. ಗೊತ್ತಿಲ್ಲದ್ದನ್ನು ದೈವವೆನ್ನುತ್ತೇವೆ.

ಇದು ಸಾಮಾನ್ಯ ಮನುಷ್ಯನ ರೀತಿ. ಶ್ರೀರಾಮನದೂ ಒಂದು ಪರೀಕ್ಷೆಯ ನಿಮಿಷದಲ್ಲಿ ಅಂಥಾದ್ದಾಗಿತ್ತು. ಆದರಿಂದ ಆತ ಚೇತರಿಸಿಕೊಂಡ. ಸಾಮಾನ್ಯನು ಅದರಿಂದ ಇನ್ನೂ ಕೆಳಕ್ಕೆ ಬೀಳುತ್ತಾನೆ.

## ಸೀತಾತಿರಸ್ಕಾರ

ಆದರೂ ರಾಮನ ಮಾತಿನಲ್ಲಿ ಉತ್ಸಾಹವಿಲ್ಲ. ಲಕ್ಷ್ಮಣ ಸುಗ್ರೀವ ಹನುಮಂತರು ಹೀಗೆ ಯೋಚಿಸಿದರು :

ಕಲತ್ರನಿರಪೇಕ್ಷೈಶ್ಚ
ಇಂಗಿತೈರಸ್ಯ ದಾರುಣೈಃ |
ಅಪ್ರೀತಮಿವ ಸೀತಾಯಾಂ
ತರ್ಕಯಂತಿ ಸ್ಮ ರಾಘವಮ್ ||

—ಸರ್ಗ ೧೧೭, ಶ್ಲೋ. ೩೨, ಪು. ೪೫೪

ಸೀತೆಯಾದರೋ—

ಸಾ ವಸ್ತ್ರಸಂರುದ್ಧಮುಖೀ
ಲಜ್ಜಯಾ ಜನಸಂಸದಿ |
ರುರೋದಾಸಾದ್ಯ ಭರ್ತಾರಂ
ಆರ್ಯಪುತ್ರೇತಿ ಭಾಷಿಣೀ |

—ಸರ್ಗ ೧೧೭, ಶ್ಲೋ. ೩೪, ಪು. ೪೫೫

ಎಂಥ ಹೃದಯವಿದ್ರಾವಕವಾದ ಸನ್ನಿವೇಶ!

ಬಳಿಕ ರಾಮನು—

ಹೃದಯಾಂತರ್ಗತಕ್ರೋಧಃ
ವ್ಯಾಹರ್ತುಮುಪಚಕ್ರಮೇ ||
ಪೌರುಷಾದ್ಯದನುಷ್ಠೇಯಂ
ತದೇತದುಪಪಾದಿತಮ್ ||
ದೈವಸಂಪಾದಿತೋ ದೋಷಃ
ಮಾನುಷೇಣ ಮಯಾ ಜಿತಃ ||

—ಸರ್ಗ ೧೧೮, ಶ್ಲೋಕಗಳು ೧-೨-೫, ಪುಟಗಳು ೪೫೬-೪೫೭

ಈ ಮಾತುಗಳನ್ನು ಕೇಳಿ ಸೀತೆಯು ಕಂಬನಿತುಂಬಿದವಳಾದಳು. ರಾಮನ ಕೋಪವು ಇನ್ನೂ ಇಳಿಯಲಿಲ್ಲ.

ಪಶ್ಯತಸ್ತಾಂ ತು ರಾಮಸ್ಯ
ಭೂಯಃ ಕ್ರೋಧೋ ವ್ಯವರ್ಧತ |

—ಸರ್ಗ ೧೧೮, ಶ್ಲೋ. ೧೧, ಪು. ೪೫೮

ಯಾರಮೇಲೆ ಕ್ರೋಧ? ಸೀತೆಯಮೇಲೆಯೆ? ಹಾಗೆಂದು ಆಕೆಯನ್ನು ಬಾಯಿಬಿಟ್ಟು ಆಕ್ಷೇಪಿಸಲು ರಾಮನಿಗೆ ಕಾರಣವಿಲ್ಲ. ಹಾಗೆ

ಮಾಡಲು ಆತನಿಗೆ ಬಾಯಿಲ್ಲ. ಆದರೂ ಏನೋ ಕೋಪ. ನಿಷ್ಠುರವಾದ ಮಾತನ್ನಾಡುತ್ತಾನೆ.

ವಿದಿತಶ್ಚಾಸ್ತು ತೇ ಭದ್ರೇ
  ಯೋಽಯಂ ರಣಪರಿಶ್ರಮಃ ।
ಸ ತೀರ್ಣಃ ಸುಹೃದಾಂ ವೀರ್ಯಾತ್
  ನ ತ್ವದರ್ಥಂ ಮಯಾ ಕೃತಃ ।

—ಸರ್ಗ ೧೧೮, ಶ್ಲೋ. ೧೫, ಪು. ೫೫೮

ಏನು ನಿಷ್ಠುರ ಇದು! ಅಲ್ಲಿಗೆ ಮುಗಿಯಲಿಲ್ಲ ರಾಮನ ರೇಗಾಟ. ಆ ರೋಷ ತನ್ನಷ್ಟಕ್ಕೆ ತಾನೇ ಬೆಳೆಯಿತು. ಬೆಳೆಯುತ್ತ ಬೆಳೆಯುತ್ತ ಕಠೋರವಾಯಿತು. ಮೈಮೇಲೆ ಸ್ಮೃತಿ ತಪ್ಪಿತೆಂದೆನಿಸುವಷ್ಟು ಬೆಳೆಯಿತು. ಆಗ ಹೊರಟಿತು ರಾಮಮುಖದಿಂದ ಇಂಥ ಕ್ರೂರವಾದ ವಾಗ್ಬಾಣ ಪರಂಪರೆ :

ಪ್ರಾಪ್ತಚಾರಿತ್ರಸಂದೇಹಾ ॥
ಪ್ರತಿಕೂಲಾಸಿ ಮೇ ॥
ಗಚ್ಛ ಯಥೇಷ್ಟಂ ॥
ಪರಗೃಹೋಷಿತಾ ॥
ರಾವಣಾಂಕಪರಿಭ್ರಷ್ಟಾ ॥
ದೃಷ್ಟಾ ದುಷ್ಟೇನ ಚಕ್ಷುಷಾ ॥
ನಾಸ್ತಿ ಮೇ ತ್ವಯ್ಯಭಿಷ್ವಂಗಃ ॥

—ಸರ್ಗ ೧೧೮, ಶ್ಲೋಕಗಳು ೧೬-೨೧, ಪುಟಗಳು ೫೫೯-೬೦

ಲಕ್ಷ್ಮಣೇ ಭರತೇ ವಾ ತ್ವಂ
  ಕುರು ಬುದ್ಧಿಂ ಯಥಾಸುಖಮ್ ॥
ಸುಗ್ರೀವೇ ವಾನರೇಂದ್ರೇ ವಾ
  ರಾಕ್ಷಸೇಂದ್ರೇ ವಿಭೀಷಣೇ ॥

—ಸರ್ಗ ೧೧೮, ಶ್ಲೋಕಗಳು ೨೨-೨೪, ಪು. ೫೬೦

## ಒಂದು ನೆನಪು

ಈ ಸಂದರ್ಭದಲ್ಲಿ ಒಬ್ಬ ಹಳೆಯ ಸ್ನೇಹಿತನ ನೆನಪು ಬರುತ್ತದೆ. ಆತನ ಹೆಸರು ನರಸಿಂಹಾಚಾರಿ ಎಂದು. ಆತ ಸ್ಕೂಲ್‌ಮೇಷ್ಟರು. ತುಂಬ ಒಳ್ಳೆಯ ಮನುಷ್ಯ. ಒಂದು ಕಳಂಕವೂ ಇಲ್ಲದ ನಡತೆ ಆತನದು. ಆದರೆ ಒಂದು ವಿಶೇಷ. ಕಥೆಯನ್ನು ಕೇಳಿದರೆ ಅದು ಸ್ಪಷ್ಟವಾಗುತ್ತದೆ. ನರಸಿಂಹಾಚಾರಿ ಶ್ರೀವೈಷ್ಣವ. ಕೊಂಚ ಸಂಸ್ಕೃತ ತಿಳಿದಿತ್ತು. ವಿದ್ವಾಂಸರ ಮಗ. ಆಚಾರಸಂಪನ್ನ.

ಆತ ಒಂದು ದಿನ ಹನ್ನೊಂದು ಘಂಟೆಯ ಹೊತ್ತಿಗೆ ಮಾಮೂಲಿ ನಂತೆ ಮನೆಗೆ ಬಂದ. ತಲೆಬಾಗಿಲು ದಾಟಿ ಒಳಗೆ ಬರುತ್ತಲೇ ಹೆಂಡತಿ ಹೊರಗಿದ್ದಾಳೆಂದು ತೋರಿತು. ಅಡಿಗೆಮನೆಯೊಳಗೆ ನೋಡಿದ. ಆಕೆ ಒಲೆಯಮೇಲೆ ಪಾತ್ರೆಯಿಟ್ಟು ತಾನು ಹೊರಗಿದ್ದಳು. ಮನೆಯಲ್ಲಿದ್ದವರು ಅವರಿಬ್ಬರೇ. ಆದದ್ದರಿಂದ ಬೇರೆ ಯಾರೂ ಅಡಿಗೆಮಾಡುವವರಿರಲಿಲ್ಲ. ನರಸಿಂಹಾಚಾರಿಗೆ ಬಲು ಕೋಪ ಬಂತು. ಅಡಿಗೆಮನೆಯ ಬಾಗಿಲ ಹಿಂದಿದ್ದ ಪೊರಕೆ ಕಟ್ಟನ್ನು ತೆಗೆದುಕೊಂಡು 'ಛೆ! ಕತ್ತೆ!' ಎಂದು ಹೇಳುತ್ತ ಪೊರಕೆಯನ್ನು ಹೆಂಡತಿಯಮೇಲೆ ಜೋರಾಗಿ ಎಸೆದ. ಮತ್ತು ಅದರೊಡನೆ ಬಾಳೆನಾರನ್ನು ಆಕೆಯಮೇಲೆ ಎಸೆದು, ಪೊರಕೆಯಮೇಲಿನ ದಾರವನ್ನು ಬಿಚ್ಚಿ ಬಾಳೆನಾರನ್ನು ಸುತ್ತುವಂತೆ ಹೇಳಿದ. ಆಕೆ ಹಾಗೆಮಾಡಿ ಪೊರಕೆ ಯನ್ನು ಹಿಂದಕ್ಕೆಸೆದಳು. ಈತ ಮತ್ತೆ ಅದನ್ನು ಅವಳಮೇಲೆಸೆದ. ಮತ್ತೆ ಅವಳು ಹಿಂದಕ್ಕೆಸೆಯಬೇಕಾಯಿತು. ಮರಳಿ ಆಕೆಯಮೇಲೆಸೆದು ತನ್ನ ಕಡೆಗೆ ತರಿಸಿಕೊಂಡ. ಹೀಗೆ ನಾಲ್ಕೈದುಸಾರಿ ಬಾಳೆನಾರಿನಿಂದ ಸುತ್ತಿದ ಪೊರಕೆಯನ್ನು ಆಕೆಯಮೇಲೆ ಪ್ರಯೋಗಿಸಿದ. ಬಾಳೆನಾರು ಮಡಿ; ನೂಲು ಮೈಲಿಗೆ. ಹೀಗೆ ಮಡಿಯ ಪೊರಕೆಯಿಂದ ತನ್ನ ಕೈ ಸೋಲುವ ವರೆಗೂ ದಂಡಿಸಿದ್ದಾಯಿತು. ಇದು ನಡೆಯುತ್ತಿದ್ದಾಗ ಆಕೆ ಕೊಂಚ ಕೊಂಚ ನಗುತ್ತಿದ್ದಳು. ಇದು ನಾನು ಚೆನ್ನಾಗಿ ಬಲ್ಲ ಸಂಗತಿ. ನರಸಿಂಹಾ ಚಾರಿಗೆ ಹೆಂಡತಿಯಮೇಲಿದ್ದ ಪ್ರೀತಿಯೋ—ಮಾತುಗಳಿಂದ ಹೇಳಲಾಗದು. ಆಕೆಗೆ ಕೊಂಚವೂ ಆಯಾಸವಾಗಬಾರದು, ನೋವಾಗಬಾರದು,

ಯಾವುದಕ್ಕೂ ಕೊರತೆಯಾಗಬಾರದು. ಆದರೆ ಕೋಪ ಬಂದಿದೆಯಲ್ಲ, ಹೊಟ್ಟೆ ಹಸಿವಿನ ಕಾರಣದಿಂದ.

× × ×

ಇಂಥದು ಕೋಪದ ಸ್ವಭಾವ. ಅದು ಬಂದಾಗ ಕಾರ್ಯಕಾರಣ ವಿವೇಕ ನುಣುಚಿಕೊಂಡು ಹೋಗಿಬಿಡುತ್ತದೆ. ಆದದ್ದರಿಂದಲೇ ಮಹರ್ಷಿಗಳು ಕೋಪವನ್ನು ಒಂದು ದೈವವೆಂದೆಣಿಸಿದರು.

ನಮಸ್ತೇ ರುದ್ರ ಮನ್ಯವ
ಉತೋ ತ ಇಷವೇ ನಮಃ |
ನಮಸ್ತೇ ಅಸ್ತು ಧನ್ವನೇ
ಬಾಹುಭ್ಯಾಮುತ ತೇ ನಮಃ ||

"ಎಲೈ ರುದ್ರನೆ, ನಿನ್ನ ಕೋಪಕ್ಕೆ ನಮಸ್ಕಾರ, ನಿನ್ನ ಬಾಣಕ್ಕೆ ನಮಸ್ಕಾರ, ಧನುಸ್ಸಿಗೆ ನಮಸ್ಕಾರ, ನಿನ್ನ ಸರ್ವಾಂಗಗಳಿಗೂ ನಮಸ್ಕಾರ. ಯಾವ ಕ್ಷಣದಲ್ಲಿ ನೀನು ನಮ್ಮನ್ನು ಹೇಗೆ ನಡಸುತ್ತೀಯೊ!" ಎಂದು ಋಷಿಗಳು ಉದ್ಗರಿಸುತ್ತಾರೆ.

ಮನ್ಯುವು ಶ್ರೀರಾಮನನ್ನೂ ಬಿಡಲಿಲ್ಲ. ಆತನ ಬಾಯಿಂದ ಆಡಬಾರದ್ದನ್ನು ಆಡಿಸಿತು.

ಮನ್ಯುರಕಾರ್ಷೀನ್ನಮೋ ನಮಃ ||

## ಅಗ್ನಿಪ್ರವೇಶ

ಸೀತೆ ಈಗ ಏನು ಮಾಡಿಯಾಳು? ಕಣ್ಣೀರಿಟ್ಟಳು.

ಕಾಮಕಾರೋ ನ ಮೇ ತತ್ರ
ದೈವಂ ತತ್ರಾಪರಾಧ್ಯತಿ ||
ಪರಾಧೀನೇಷು ಗಾತ್ರೇಷು
ಕಿಂ ಕರಿಷ್ಯಾಮ್ಯನೀಶ್ವರಾ ||
ಮಮ ಭಕ್ತಿಶ್ಚ ಶೀಲಂ ಚ
ಸರ್ವಂ ತೇ ಪೃಷ್ಠತಃ ಕೃತಮ್ ||

—ಸರ್ಗ ೧೧೯, ಶ್ಲೋಕಗಳು ೮-೯-೧೦, ಪುಟಗಳು ೪೬೩-೪೬೪

ಹೀಗೆ ಹೇಳಿ ಲಕ್ಷ್ಮಣನನ್ನು ಕುರಿತು—

> ಚಿತಾಂ ಮೇ ಕುರು ಸೌಮಿತ್ರೇ
> ವ್ಯಸನಸ್ಯಾಸ್ಯ ಭೇಷಜಮ್ |
> ಮಿಥ್ಯಾಪವಾದೋಪಹತಾ
> ನಾಹಂ ಜೀವಿತುಮುತ್ಸಹೇ ||

—ಸರ್ಗ ೧೧೯, ಶ್ಲೋ. ೧೮, ಪು. ೪೬೪

ಅನಂತರ ಅಗ್ನಿಪರೀಕ್ಷೆ ನಡೆಯಿತು. ಆ ಮಹಾತಾಯಿ ಅಗ್ನಿಪ್ರವೇಶ ಮಾಡುವಾಗ ಹೇಳುವ ಪ್ರಾರ್ಥನೆಯ ಮಾತುಗಳು ಕರುಣಾಜನಕಗಳಾಗಿವೆ. ಆ ಮಾತುಗಳನ್ನು ಶ್ರೀರಾಮನು ಕೇಳಿ—

> ದಧ್ಯೌ ಮುಹೂರ್ತಂ ಧರ್ಮಾತ್ಮಾ
> ಬಾಷ್ಪವ್ಯಾಕುಲಲೋಚನಃ ||

—ಸರ್ಗ ೧೨೦, ಶ್ಲೋ. ೧, ಪು. ೪೬೮

ಮಹಾದೇವನೂ ದೇವಾಧಿದೇವತೆಗಳೂ ಆ ಅದ್ಭುತವನ್ನು ನೋಡಿದರು. ಅವರೆಲ್ಲ ರಾಮನ ನಡವಳಿಕೆಯ ವಿಷಯದಲ್ಲಿ ಅಸಮಾಧಾನ ಸೂಚಿಸಿದರು.

> ಉಪೇಕ್ಷಸೇ ಚ ವೈದೇಹೀಂ
> ಮಾನುಷಃ ಪ್ರಾಕೃತೋ ಯಥಾ ||

—ಸರ್ಗ ೧೨೦, ಶ್ಲೋ. ೧೦, ಪು. ೪೬೯

ಇಷ್ಟೆಲ್ಲ ಆದಮೇಲೆ ರಾಮನು ಹೇಳುತ್ತಾನೆ :

> ಪ್ರತ್ಯಯಾರ್ಥಂ ತು ಲೋಕಾನಾಮ್ ||

—ಸರ್ಗ ೧೨೧, ಶ್ಲೋ. ೧೫, ಪು. ೪೭೭

ಲೋಕಕ್ಕೆ ನಂಬಿಕೆಯುಂಟಾಗಬೇಕೆಂದು ಹಾಗೆ ಮಾಡಿದನಂತೆ!

ಈ ಸಬೂಬು ನನ್ನ ಮನಸ್ಸಿಗೆ ಕುಂಟುಸಬೂಬಾಗಿ ಕಾಣುತ್ತದೆ. ಶ್ರೀರಾಮನ ಬಾಯಿಂದ ಹೀಗೆ ಆಡಿಸಿದವರು ವಾಲ್ಮೀಕಿಮಹರ್ಷಿಗಳೋ, ಅಥವಾ ಬೇರೊಬ್ಬ ರಾಮಭಕ್ತರಾದ ಕವಿಗಳೋ ಎಂದು ನನ್ನ ಮನಸ್ಸಿನಲ್ಲಿ ಶಂಕೆ ಹುಟ್ಟುತ್ತದೆ.

ಅದು ಹೇಗಾದರಿರಲಿ. ಕಥೆಯ ಸಮಾಪ್ತಿಯೇನೋ ಚೆನ್ನಾಗಿದೆ.

## ಸ್ವದೇಶಪ್ರೀತಿ

ಶ್ರೀ ಸೀತಾರಾಮರು ಲಂಕೆಯಿಂದ ಪುಷ್ಪಕವಿಮಾನದಲ್ಲಿ ಪ್ರಯಾಣ ಬೆಳಸಿ ಬರುತ್ತಿದ್ದಾಗ ಅಯೋಧ್ಯೆ ಕಣ್ಣಿಗೆ ಕಾಣಿಸಿದ ಕೂಡಲೆ ಶ್ರೀರಾಮನು ಹೀಗೆಂದನು :

ಏಷಾ ಸಾ ದೃಶ್ಯತೇ ಸೀತೇ ಸರಯೂರ್ಯೂಪಮಾಲಿನೀ |
ನಾನಾತರುಲತಾಕೀರ್ಣಾ ಸಂಪ್ರಪುಷ್ಪಿತಕಾನನಾ ||

ಏಷಾ ಸಾ ದೃಶ್ಯತೇಽಯೋಧ್ಯಾ ರಾಜಧಾನೀ ಪಿತುರ್ಮಮ |
ಅಯೋಧ್ಯಾಂ ಕುರು ವೈದೇಹಿ ಪ್ರಣಾಮಂ ಪುನರಾಗತಾ ||

—ಸರ್ಗ ೧೨೬, ಶ್ಲೋಕಗಳು ೪೯-೫೧, ಪು. ೫೧೧

ಇದು ಸ್ವದೇಶಪ್ರೀತಿಯ ಮಾತು.

## ಭರತಸಮಾಗಮ

ಈ ಹೃದಯಮಂಥಿಯಾದ ಪ್ರಕರಣವಾದ ಬಳಿಕ ಅಯೋಧ್ಯೆಗೆ ಪುನರಾಗಮನ ; ಭರತನೊಡನೆ ಪುನಸ್ಸಮಾಗಮ. ಭರತನು ನಂದಿಗ್ರಾಮ ದಲ್ಲಿ ತಪಸ್ವಿಯಾಗಿದ್ದನಷ್ಟೆ.

ಚೀರಕೃಷ್ಣಾಜಿನಾಂಬರಮ್ ||
ಕೃಶಮಾಶ್ರಮವಾಸಿನಮ್ ||
ಜಟಿಲಂ ಮಲದಿಗ್ಧಾಂಗಂ
ಭ್ರಾತೃವ್ಯಸನಕರ್ಶಿತಮ್ |
ನಿಯತಂ ಭಾವಿತಾತ್ಮಾನಂ
ಬ್ರಹ್ಮರ್ಷಿಸಮತೇಜಸಮ್ ||
ಪಾದುಕೇ ತೇ ಪುರಸ್ಕೃತ್ಯ
ಶಾಸತಂ ವೈ ವಸುಂಧರಾಮ್ ||

—ಸರ್ಗ ೧೨೮, ಶ್ಲೋಕಗಳು ೨೮-೨೯-೩೦, ಪು. ೫೨೨

ಅನಂತರ ಅಣ್ಣತಮ್ಮಂದಿರ ಕುಶಲಸಂಭಾಷಣೆ. ಈ ಪ್ರಸಂಗದಲ್ಲಿ ಭರತನು ತನ್ನ ಅಣ್ಣನಿಗೆ ಸ್ವಾಗತ ನೀಡುವುದಕ್ಕಾಗಿ ಅಯೋಧ್ಯಾಪುರದ ರಸ್ತೆಗಳನ್ನು ಹೇಗೆ ಅಲಂಕಾರಮಾಡಿಸಿದ್ದನೆಂಬುದರ ವರ್ಣನೆ ಸೊಗಸಾಗಿದೆ.

ರಾಮನ ವಿಮಾನ ಕಾಣಿಸಿದ ಕೂಡಲೆ ಅಯೋಧ್ಯಾಪಟ್ಟಣದ ಜನ ಉತ್ಸಾಹಭರಿತರಾಗಿ ಜಯಘೋಷಗಳೊಡನೆ ಕೈಮುಗಿದರು. ಭರತನು ಅಣ್ಣನನ್ನು ಗೌರವಿಸಿದ್ದು ಹಾಗಿರಲಿ; ಸುಗ್ರೀವನನ್ನು ಕುರಿತು ಅವನು ಹೇಳಿದ್ದನ್ನು ನೋಡಿರಿ :

ತ್ವಮಸ್ಮಾಕಂ ಚತುರ್ಣಾಂ ತು
ಭ್ರಾತಾ ಸುಗ್ರೀವ ಪಂಚಮಃ |

**—ಸರ್ಗ ೧೩೦, ಶ್ಲೋ. ೪೩, ಪು. ೫೪೫**

ಆಮೇಲೆ ಭರತನು ಹೀಗೆ ಹೇಳಿದನಂತೆ :

ಅದ್ಯ ಜನ್ಮ ಕೃತಾರ್ಥಂ ಮೇ
ಸಂವೃತ್ತಶ್ಚ ಮನೋರಥಃ |

**—ಸರ್ಗ ೧೩೦, ಶ್ಲೋ. ೫೪, ಪು. ೫೪೭**

ಪೂಜಿತಾ ಮಾಮಿಕಾ ಮಾತಾ
ದತ್ತಂ ರಾಜ್ಯಮಿದಂ ಮಮ |
ತದ್ದದಾಮಿ ಪುನಸ್ತುಭ್ಯಂ
ಯಥಾ ತ್ವಮದದಾ ಮಮ ||

**—ಸರ್ಗ ೧೩೧, ಶ್ಲೋ. ೨, ಪು. ೫೪೯**

## ರಾಜ್ಯಾಭಿಷೇಕ

ಈಗ ಸಮಾಪ್ತಿ. ಶ್ರೀ ಸೀತಾರಾಮರಿಗೆ ರಾಜ್ಯಾಭಿಷೇಕ. ಇತರ ಕವಿಗಳು ಇಂಥ ಪ್ರಸಂಗದಲ್ಲಿ " ಭೇರೀ ದುಂದುಭಿ ಶಂಖ ಢಕ್ಕಿಕಾ " ಹೀಗೆ ಒಂದು ನೂರು ವಾದ್ಯಗಳ ಘೋಷಣೆಯನ್ನು ಅನುಕರಿಸುವಂತೆ ನಾಲ್ಕು ಶಾರ್ದೂಲವೃತ್ತಗಳನ್ನೂ, ನಾಲ್ಕು ಸ್ರಗ್ಧರೆಗಳನ್ನೂ, ನಾಲ್ಕು ಮಹಾಸ್ರಗ್ಧರೆಗಳನ್ನೂ ಹೊಸೆದು ಆರ್ಭಟಿಸಮಾಡುತ್ತಿದ್ದರು. ವಾಲ್ಮೀಕಿಗಳು

ನಿರಾಡಂಬರವಾಗಿ, ಬಹು ಸಾಮಾನ್ಯವಾದ ಪ್ರಸಂಗವೆಂಬಂತೆ ಸರಳವಾಗಿ ಮುಗಿಸಿದ್ದಾರೆ.

ಅಭ್ಯಷಿಂಚನ್ನರವ್ಯಾಘ್ರಂ
ಪ್ರಸನ್ನೇನ ಸುಗಂಧಿನಾ |
ಸಲಿಲೇನ ಸಹಸ್ರಾಕ್ಷಂ
ವಸವೋ ವಾಸವಂ ಯಥಾ |

—ಸರ್ಗ ೧೩೧, ಶ್ಲೋ. ೬೧, ಪು. ೫೬೦

ಇದು ಸಾಲದೆನ್ನಿಸುತ್ತದೆ ನಮ್ಮ ಮನಸ್ಸಿಗೆ. ಇಂಥ ಮಹಾಕಥೆಗೆ ಇಂಥ ಸಾಮಾನ್ಯವಾದ ಸಮಾಪ್ತಿಯೆ ? ಆಡಂಬರವೇ ಇಲ್ಲವಲ್ಲ !

ಮಾತಿನ ಆಡಂಬರ ಬೇಕಿಲ್ಲ. ಪರ್ಯವಸಾನದಲ್ಲಿ ಕಥೆ ಗದ್ದಲವನ್ನೆಬ್ಬಿಸತಕ್ಕದ್ದಲ್ಲ. ಶಾಂತಿಯನ್ನು ತಂದುಕೊಡಬೇಕಾದದ್ದು. ಮುಖ್ಯ ಮೂರ್ತಿಗಳು ತಪಸ್ವಿಗಳು. ನಿರಹಂಕಾರಿಗಳು. ನಾನು ಗೆದ್ದೆ, ನಾನು ಸಾಧಿಸಿದೆ—ಎಂಬ ರೀತಿಯ ಅಹಂತೆ ಅವರಲ್ಲಿರಲಿಲ್ಲ. ಅಂಥವರಿಗೆ ಗದ್ದಲವೇಕೆ ? ನಡಸಬೇಕಾಗಿದ್ದ ಧರ್ಮವನ್ನು ನಡಸಿದ್ದಾಯಿತು. ಧರ್ಮಾಚರಣೆಯಿಂದ ಏನು ಫಲ ? ಧರ್ಮಸಮಾಧಾನವೇ ಫಲ. ಲೋಕಕ್ಕೆ ಬೇಕಾದ ಉಪದೇಶ ಅದು.

ಏವಮೇತತ್ ಪುರಾವೃತ್ತಂ
ಆಖ್ಯಾನಂ ಭದ್ರಮಸ್ತು ವಃ |
ಪ್ರವ್ಯಾಹರತ ವಿಸ್ರಬ್ಧಂ
ಬಲಂ ವಿಷ್ಣೋಃ ಪ್ರವರ್ಧತಾಮ್ ||

—ಸರ್ಗ ೧೩೧, ಶ್ಲೋ. ೧೨೨, ಪು. ೫೭೨

ಈಗ ಫಲಶ್ರುತಿ.

## ಕಾವ್ಯಪ್ರಯೋಜನ

ಶ್ರೀಮದ್ರಾಮಾಯಣವನ್ನು ಪುಣ್ಯಗ್ರಂಥವೆಂಬ ನಂಬಿಕೆಯಿಂದ ಪಾರಾಯಣಮಾಡುವುದು ಬಹುಕಾಲದಿಂದ ಬಂದಿರುವ ಪದ್ಧತಿ. ಅದು ಕಾಲವಶದಿಂದ ಕುಂದದೆ ಬೆಳೆಯುತ್ತಿರಲಿ. ನಮ್ಮ ಕಾಲದ ಅತಿಬುದ್ಧಿವಂತಿಕೆಯಿಂದ ಆ ಪವಿತ್ರ ಸಂಪ್ರದಾಯಕ್ಕೆ ನ್ಯೂನತೆ ಬಾರದಿರಲಿ.

ಪಾರಾಯಣಮಾಡುವ ಭಕ್ತರಿಗೆ "ಐಶ್ವರ್ಯಂ ಪುತ್ರಲಾಭಶ್ಚ", "ಕುಟುಂಬ ವೃದ್ಧಿರ್ಧನಧಾನ್ಯವೃದ್ಧಿಃ"—ದೀರ್ಘಾಯುಸ್ಸು, ಆರೋಗ್ಯ, ಕೀರ್ತಿ—ಇವು ಲಭ್ಯಗಳೆಂದು ಪ್ರಾಚೀನರ ನಂಬಿಕೆ. ಶ್ರೀ ಸೀತಾರಾಮರ ಕೃಪಾಮಹಿಮೆ ಯಿಂದ ಭಕ್ತರಿಗೆ ಈ ಬಹುವಿಧವಾದ ಭೋಗಭಾಗ್ಯಸಂಪತ್ತು ಲಭ್ಯ ವಾಗಲಿ.

ಆದರೆ ರಾಮಾಯಣಭಕ್ತರಲ್ಲಿ ಇನ್ನೊಂದು ವರ್ಗವುಂಟು. ಅದು ಕಾವ್ಯೋಪಾಸಕರದು. ಅವರು ಐಶ್ವರ್ಯ ಪುತ್ರಲಾಭಾದಿಗಳು ಬೇಡ ವೆನ್ನುವವರಲ್ಲ. ಆದರೆ ಅವರ ಮನಸ್ಸಿನಲ್ಲಿ ಬೇರೊಂದು ಉದ್ದೇಶವೂ ಇರು ತ್ತದೆ. ಅದು ಎರಡು ಭಾಗಗಳುಳ್ಳದ್ದು:

(೧) ಮನೋರಂಜನೆ;

(೨) ಜೀವನೋನ್ನತಿಯ ದರ್ಶನ.

ರಾಮಾಯಣಕಾವ್ಯದಿಂದ ಎಲ್ಲರಿಗೂ ಅವರವರ ಸಂಸ್ಕಾರಾನುಸಾರ ವಾಗಿ ಮನೋರಂಜನೆಯಾದೀತೆಂದು ನಾನು ತಿಳಿದುಕೊಂಡಿದ್ದೇನೆ. ಕಥನ ಚಮತ್ಕಾರದಲ್ಲಿ ವಾಲ್ಮೀಕಿಗಳು ಅಪ್ರತಿಮರು. ಆದರೂ ನಮ್ಮದು ಸಿನೆಮಾ ಯುಗ; ಪತ್ತೆದಾರಿ ಕಾದಂಬರಿಗಳ ಯುಗ; ಪ್ರಣಯ ಸಾಹಸ ಗಳ ಅಪೂರ್ವವಿನ್ಯಾಸಗಳ ಯುಗ. ಇಂಥ ನವೀನಸಾಹಿತ್ಯದಲ್ಲಿ ರುಚಿ ಕಂಡವರಿಗೆ ಈ ಹಳೆಯ ಕಂದಾಚಾರದ ಕಥೆ ಎಷ್ಟು ಮಾತ್ರ ರುಚಿಸೀತೋ ಅದನ್ನು ತಿಳಿಯುವುದು ನನ್ನಂಥ ಸಂಪ್ರದಾಯಜಡನಿಗೆ ಸುಲಭವಲ್ಲ ಇದು "ಏವಮೇತತ್ ಪುರಾವೃತ್ತಂ." ಪುರಾತನದಲ್ಲಿಯೂ ಸ್ವಾರಸ್ಯವಿರಬಹು ದೆಂದು ಯಾರು ಒಪ್ಪಿಯಾರೋ ಅಂಥವರಿಗೆ ಕುತೂಹಲಕರವಾದ ಸಂದರ್ಭ ಗಳೂ, ಉಲ್ಲಾಸಕರಗಳಾದ ವರ್ಣನೆ ಸಂಭಾಷಣೆಗಳೂ, ರೋಮಾಂಚನ ಕಾರಿಗಳಾದ ಸನ್ನಿವೇಶಗಳೂ, ಹೃದಯವಿದ್ರಾವಕ ಘಟನೆಗಳೂ ಈ ಕಾವ್ಯ ದಲ್ಲಿ ಅಡಿಗಡಿಗೂ ಬರುತ್ತವೆ. ವಾಲ್ಮೀಕಿಗಳ ಮಾತೇ ಸೊಗಸು. ಅವರ ವಾಕ್ಯರಚನೆಯೇ ಸೊಗಸು. ನಮ್ಮ ಜನ ಈ ಅಮೇಯವಾದ ಸೊಗಸನ್ನು ಅನುಭವಿಸುವ ಶಕ್ತಿಯುಳ್ಳವರಾಗಲಿ.

ಇನ್ನು ಕಾವ್ಯದಿಂದಾಗುವ ಎರಡನೆಯ ಪ್ರಯೋಜನ. ಅದು ಜೀವನೌನ್ನತ್ಯದರ್ಶನ; ಸಮ್ಯಗ್ಜೀವನದರ್ಶನ; ಜೀವನಸೌಂದರ್ಯದರ್ಶನ.

ಮನುಷ್ಯಪ್ರಾಣಿ ತಾನು ಧರ್ಮವೆಂದು ನಂಬಿದ ಒಂದು ಧ್ಯೇಯಕ್ಕಾಗಿ ಎಷ್ಟನ್ನು ಎದುರಿಸಬಲ್ಲ? ಎಷ್ಟನ್ನು ತ್ಯಜಿಸಬಲ್ಲ? ಎಷ್ಟನ್ನು ಸಹಿಸಬಲ್ಲ? ಅವನ ಧೈರ್ಯ ಎಷ್ಟು ಮೇಲಕ್ಕೆ ಹೋಗಬಲ್ಲದ್ದು? ಅವನ ಸಹನೆ ಎಷ್ಟು ನಿರಂತರವಾದದ್ದು! ಅವನ ಶ್ರದ್ಧೆ ಎಷ್ಟು ದೃಢವಾದದ್ದು! ಇದನ್ನು ನಾವು ಶ್ರೀರಾಮಪ್ರಪಂಚದಲ್ಲಿ ಕಾಣಲಾಗುತ್ತದೆ. ಅದು ಮಾನುಷಸತ್ತ್ವದ ವಿಕಾಸ. ಕಥೆ ಈ ಸತ್ತ್ವೋದ್ರೇಕಪ್ರದರ್ಶನಕ್ಕೆ ಅವಕಾಶ ಕಲ್ಪಿಸುತ್ತದೆ. ರಾಮ, ಸೀತೆ, ಲಕ್ಷ್ಮಣ, ಭರತ, ಆಂಜನೇಯ—ಈ ನಾನಾ ವ್ಯಕ್ತಿಗಳು ಅವರವರಿಗೆ ಸೇರಿದ ಬೇರೆಬೇರೆ ದಾರಿಗಳಲ್ಲಿ ಧರ್ಮಪೋಷಣೆಗಾಗಿ ಎಷ್ಟೆಷ್ಟನ್ನು ತ್ಯಾಗಮಾಡಿದ್ದಾರೆ! ಎಷ್ಟೆಷ್ಟನ್ನು ಪಟ್ಟಿದ್ದಾರೆ! ಎಷ್ಟೆಷ್ಟನ್ನು ಸಾಧಿಸಿದ್ದಾರೆ!

ಈ ಭೋಗವಿರಕ್ತಲೋಕಕ್ಕೆ ಪ್ರತಿದ್ವಂದ್ವಿಯಾದದ್ದು ರಾವಣನ ಭೋಗಸಂಸಕ್ತಲೋಕ. ಸತ್ಯವೋ ಮಿಥ್ಯೆಯೋ, ಮರ್ಯಾದೆಯೋ ಉತ್ಕ್ರಾಂತಿಯೋ, ಹೇಗೋ ಸೇಡು ತೀರಿಸಿಕೊಂಡರೆ ಸರಿ; ಬೇಕೆನಿಸಿದ್ದನ್ನು ಗಿಟ್ಟಿಸಿಕೊಂಡರೆ ಸರಿ. ಹೀಗೆ ಭೋಗೈಶ್ವರ್ಯಪ್ರಸಕ್ತವಾದದ್ದು ರಾವಣಲೋಕ.

## ದೈವವೈಪರೀತ್ಯನಿರೂಪಣೆ

ಈ ಎರಡು ಲೋಕಗಳ ಘರ್ಷಣೆಯನ್ನು ನಾವು ನೋಡುವುದಾಗುತ್ತದೆ. ಈ ವ್ಯಾಜದಲ್ಲಿ ದೈವವು ತಂದೊಡ್ಡುವ ವಿಷಮಪರೀಕ್ಷೆಗಳು ನಮ್ಮ ಅನುಭವಕ್ಕೆ ಗೋಚರಿಸುತ್ತವೆ. ಶ್ರೀರಾಮಚಂದ್ರನು ಹೇಳುವಂತೆ

ಪೌರುಷಾದ್ಯದನುಷ್ಠೇಯಂ
ತದೇತದುಪಪಾದಿತಮ್ ।

—ಸರ್ಗ ೧೧೮, ಶ್ಲೋ. ೨, ಪು. ೪೫೭

ಈ ಪರಮತತ್ತ್ವದ ನಿರೂಪಣೆಯೇ ನಮಗೆ ದೊರೆಯುವ ಮಹಾಫಲ. ಪಾಶ್ಚಾತ್ಯರಲ್ಲಿ 'ಟ್ರ್ಯಾಜೆಡಿ' (Tragedy) ಎಂಬ ಕಾವ್ಯಪ್ರಭೇದವು ಸರ್ವೋತ್ಕೃಷ್ಟವಾದದ್ದೆಂದು ಒಂದು ಮತವುಂಟು. ಒಬ್ಬ ಮನುಷ್ಯನು ಬಹುಸತ್ತ್ವಸಂಪನ್ನನಾಗಿ ಬಹುಪರಾಕ್ರಮಿಯಾಗಿ ತನ್ನ ಉದ್ದೇಶಸಾಧನೆ

ಯಲ್ಲಿ ಶಿಖರಾಗ್ರಕ್ಕೇರುತ್ತಿರುವನೆಂದು ಜನ ನಿರೀಕ್ಷಿಸಿಕೊಂಡಿರುವಾಗ, ಅವನಲ್ಲಿ ಗೂಢವಾಗಿ ಅಡಗಿರುವ ಒಂದಾನೊಂದು ನ್ಯೂನತೆಯ ಕಾರಣ ದಿಂದ, ಒಂದಾನೊಂದು ದೌರ್ಬಲ್ಯದ ಕಾರಣದಿಂದ, ಅವನು ಉನ್ನತ ಸ್ಥಾನದಿಂದ ಉರುಳಿ ಅಧಃಪಾತಾಳಕ್ಕೆ ಬಿದ್ದರೆ ಅದನ್ನು 'ಟ್ರ್ಯಾಜೆಡಿ' ಎಂದು ಪಾಶ್ಚಾತ್ಯರು ಕರೆಯುತ್ತಾರೆ. ಈ ಬಗೆಯ ಕಾವ್ಯನಾಟಕಗಳು ೨೫೦೦ ವರ್ಷಗಳ ಹಿಂದೆ ಗ್ರೀಸ್‌ದೇಶದಲ್ಲಿ ಪ್ರಚಾರದಲ್ಲಿದ್ದವು. ಐಸ್ಕಿಲಸ್, ಸೋಫೊಕ್ಲೀಸ್, ಯುರಿಪಿಡೀಸ್—ಇವರು 'ಟ್ರ್ಯಾಜೆಡಿ' ನಾಟಕಗಳ ರಚನೆಯಿಂದ ಪ್ರಸಿದ್ಧರಾದವರು. ಅನೇಕ ಮಂದಿ ಇಂಗ್ಲಿಷ್ ಕವಿಗಳು—ಷೇಕ್ಸ್‌ಪಿಯರ್ ಮೊದಲುಗೊಂಡು—ಇಂಗ್ಲಿಷಿನಲ್ಲಿ 'ಹ್ಯಾಮ್ಲೆಟ್', 'ಮ್ಯಾಕ್ಬೆತ್' ಮೊದಲಾದ ನಾಟಕಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಸೋಫೊಕ್ಲೀಸನ 'ಏಜಾಕ್ಸ್' ನಾಟಕದ ಆಧಾರದ ಮೇಲೆ 'ಅಶ್ವತ್ಥಾಮನ್' ಎಂಬ ಶ್ರೇಷ್ಠವಾದ ಕೃತಿಯನ್ನು ರಚಿಸಿದ್ದಾರೆ.

ಶ್ರೀಕಂಠಯ್ಯನವರು 'ಟ್ರ್ಯಾಜೆಡಿ' ಎಂಬ ಮಾತಿಗೆ 'ರುದ್ರನಾಟಕ' ಎಂಬ ಹೆಸರನ್ನು ಕೊಟ್ಟಿದ್ದಾರೆ. ಕೆಲವರು ಅದನ್ನು 'ದುರಂತನಾಟಕ' ಎಂದೂ ಕರೆದಿದ್ದಾರೆ. ನನ್ನ ಮನಸ್ಸಿಗೆ ಅದು 'ವಿಧಿವೈಕಟ್ಯನಾಟಕ', 'ದೈವವೈಪರೀತ್ಯನಾಟಕ' ಎಂದೆನಿಸುತ್ತದೆ. ವಿಧಿ ಒಬ್ಬ ಮನುಷ್ಯನಿಗೆ ತೊಂಭತ್ತೊಂಭತ್ತು ವರಗಳನ್ನು ಅನುಗ್ರಹಿಸಿ ಇನ್ನೊಂದು ವರವನ್ನು ಮಾತ್ರ ಕೊಡಲೊಲ್ಲದೆ, ಆ ತೊಂಭತ್ತೊಂಭತ್ತು ವರಗಳೂ ಅನರ್ಥಕಾರಿ ಯಾಗುವಂತೆ ಕೃತ್ರಿಮ ಮಾಡುತ್ತದೆ. ಸರ್ವಲಕ್ಷಣಸಂಪನ್ನರಾದ ಯುವಕ ಯುವತಿಯರನ್ನನುಗೂಡಿಸಿ ಮಾಂಗಲ್ಯ ಕಟ್ಟುವ ವೇಳೆಗೆ ವರನ ಕೈಬೆರಳು ಉಳುಕಿಯೋ ವಧುವಿನ ಕೊರಳು ಸೊಟ್ಟಾಗಿಯೋ ಮಾಂಗಲ್ಯದ ದಾರ ತುಂಡುತುಂಡಾಗುವಂತೆ ಮಾಡುತ್ತದೆ. ಶುಭವಾಗಬೇಕಾಗಿದ್ದದ್ದು ಅಶುಭ ದಲ್ಲಿ ಪರ್ಯವಸಾನವಾಗುತ್ತದೆ. ಇದು ಟ್ರ್ಯಾಜೆಡಿ. ಅದರಲ್ಲಿ ಕಾರ್ಯ ಕಾರಿಯಾದದ್ದು ಅನಿರೀಕ್ಷಿತವಾದ ಯಾವುದೋ ಒಂದು ವಿಧಿಕೌಟಿಲ್ಯ. ಇದು ಟ್ರ್ಯಾಜೆಡಿಯ ಲಕ್ಷಣ. ರಾವಣನು ಈ ವಿಧಿಕೌಟಿಲ್ಯಕ್ಕೆ ಬಲಿಯಾದ ವನು.

ಜನ್ಮ ಬ್ರಹ್ಮಕುಲೇಽಗ್ರಜೋ ಧನಪತಿ-
ರ್ಯಃ ಕುಂಭಕರ್ಣಾಗ್ರಜಃ |
ಸೂನುರ್ವಾಸವಜಿತ್ಸ್ವಯಂ ದಶಶಿರಾ
ದೋರ್ದಂಡಕಾ ವಿಂಶತಿಃ |
ಅಸ್ತ್ರಂ ಕಾಮಗಮಂ ವಿಮಾನಮಜಯಂ
ಮಧ್ಯೇ ಸಮುದ್ರಂ ಪುರೀ |
ಸರ್ವಂ ನಿಷ್ಫಲಮೇತದೇವ ನಿಯತಂ
ದೈವಂ ಪರಂ ದುರ್ಜಯಮ್ ||

ಇಂಥ ಸನ್ನಿವೇಶಗಳನ್ನು ನಮ್ಮ ಮನಸ್ಸು ಚಿಂತಿಸಿ ಚಿಂತಿಸಿ ಅಂತರಂಗಕ್ಕೆ ಶೋಧನೆ ನಡೆದಂತೆಲ್ಲ ಮನದಟ್ಟುವಂತೆ ತತ್ತ್ವ ತಿಳಿದುಬರುತ್ತದೆ :

ಐಶ್ವರ್ಯಕ್ಕಿಂತ ದೊಡ್ಡದು ಧರ್ಮ. ದೈವದ ಮೇಲೆ ಎದ್ದು ನಿಲ್ಲ ಬೇಕಾದದ್ದು ಪೌರುಷ. ಭೋಗಕ್ಕಿಂತ ಹೆಚ್ಚಿನದು ಶಾಂತಿ.

ಕುಂಭೋದ್ಭವಾದಿಸ್ತುತ್ಯಾಯ
ಕ್ಷೇಮಾಭ್ಯುದಯದಾಯಿನೇ |
ಜೀವತಾರಕನಾಮ್ನೇಽಸ್ತು
ಜಗದೀಶಾಯ ಮಂಗಲಮ್ ||

## ಅಭಿನಂದನೆ

ಈಗ ನಮ್ಮ ಉಪಕಾರಿಗಳಿಗೆ ಅಭಿನಂದನೆ. ೧೯೬೪ರಲ್ಲಿ ಈ ಕಾರ್ಯವನ್ನು ಉಪಕ್ರಮಿಸಿದಾಗ ನಮ್ಮ ಮನಸ್ಸುಗಳಲ್ಲಿ ಉತ್ಸಾಹ ತುಂಬಿತ್ತು. ಚಿಂತೆಯೂ ತುಂಬಿತ್ತು. ನಾವು ಕೈಹಚ್ಚಿದ್ದ ಪ್ರಯತ್ನ ಮಹತ್ತರವಾದದ್ದು. ಇಂಥ ದೊಡ್ಡ ಕಾರ್ಯವನ್ನು ಸಾಧಿಸಲು ನಮ್ಮಿಂದ ಆದೀತೆ? ಇಷ್ಟಕ್ಕೆ ಬೇಕಾದ ಶಕ್ತಿ ಸಂಪತ್ತುಗಳನ್ನು ದೇವರು ನಮಗೆ ಅನುಗ್ರಹಿಸಿಯಾನೆ? ನಾವು ಅಷ್ಟು ಪುಣ್ಯವಂತರೆ? ಎಂದು ಆಗ ಪೇಚಾಡಿಕೊಂಡಿದ್ದೆವು. ಕೆಲವು ವಿಘ್ನಗಳೂ ಬಂದವು. ಭಗವಂತನ ಕಟಾಕ್ಷದಿಂದ ಆ ವಿಘ್ನಗಳು ಹೇಗೋ ನಿವಾರಣೆಯಾಗಿ ಹಿಡಿದ ಕೆಲಸ ಈಗ ಸಮಾಪ್ತಿಯ ಸಮೀಪಕ್ಕೆ ಬಂದಿದೆ. ಇದಕ್ಕಾಗಿ ಭಗವಂತನಿಗೆ ಸಹಸ್ರ ನಮಸ್ಕಾರಗಳು. ವಾಲ್ಮೀಕಿಸಮುದ್ರ

ದಿಂದ ಭಗವದನುಗ್ರಹರೂಪವಾದ ಅಮೃತ ಹರಿದುಬರಲು ನಾಳಗಳಂತಿರುವ ರಾಮಾಯಣ ಪ್ರಕಾಶನ ಸಮಿತಿಯ ಸದಸ್ಯರಿಗೂ ಅವರ ಮಿತ್ರವರ್ಗಕ್ಕೂ ಕನ್ನಡ ಜನರಿಂದ ಅಭಿನಂದನೆ ಸಲ್ಲುತ್ತದೆ. ಶ್ರೀ ಸೀತಾರಾಮ ಭಗವಂತರ ಅನುಗ್ರಹ ಅವರಿಗೆ ಸರ್ವದಾ ಸಿದ್ಧವಾಗಿರುತ್ತದೆ.

ಇನ್ನು ವಿದ್ವಾನ್ ಶ್ರೀ ರಂಗನಾಥಶರ್ಮರವರ ಲೇಖನಿಗೆ ಅಭಿನಂದನೆ. ಗ್ರಂಥದ ಈ ಭಾಗವನ್ನೂ ನಾನು ಬಹು ಕಡೆ ಓದಿ ನೋಡಿದ್ದೇನೆ. ಇದು ಭಾಷಾಂತರವಲ್ಲ, ಸ್ವತಂತ್ರಕೃತಿ ಎನ್ನಿಸುವಷ್ಟು ಅಕೃತಕವಾಗಿ, ಗಂಭೀರವಾಗಿ, ಸಹಜಸುಂದರವಾಗಿ ಪ್ರವಹಿಸಿದೆ ಅವರ ಶೈಲಿ. ಅವರ ಬರವಣಿಗೆಯನ್ನು ಅದರ ಸೊಗಸಿಗಾಗಿಯೇ ನಮ್ಮ ಜನ ಓದಬೇಕೆಂದು ಬಿನ್ನಯಿಸುತ್ತೇನೆ. ರಂಗನಾಥಶರ್ಮರವರು ಪದವೈವಿಧ್ಯವನ್ನು ತೋರಿಸುವುದರಲ್ಲಿಯೂ ಮೂಲದ ನವುರುಗಳನ್ನು ಕನ್ನಡಕ್ಕಿಳಿಸುವುದರಲ್ಲಿಯೂ ಪರಿಣತರಾಗಿದ್ದಾರೆ. ಕನ್ನಡ ಮಹಾಜನರು ಅವರ ಈ ರಸವತ್ಪಾಂಡಿತ್ಯದ ಪ್ರಯೋಜನವನ್ನು ಪಡೆದು ಅವರಿಂದ ಸಂಸ್ಕೃತದ ಇತರ ಸಾಹಿತ್ಯರತ್ನಗಳನ್ನು ಕನ್ನಡಕ್ಕೆ ರೂಪಾಂತರ ಮಾಡಿಸಿ ಸಂತೋಷಿಸಲಿ ಎಂದು ಹಾರೈಸುತ್ತೇನೆ. ಪರಮಾತ್ಮನು ಅವರಿಗೆ ಸಮಸ್ತ ಶುಭಗಳನ್ನೂ ಕರುಣಿಸಲಿ.

ವಾಲ್ಮೀಕಿಗಿರಿಸಂಭೂತಾ
ರಾಮಸಾಗರಗಾಮಿನೀ |
ಪುನಾತು ಭುವನಂ ಪುಣ್ಯಾ
ರಾಮಾಯಣಮಹಾನದೀ ||

ಡಿ. ವಿ. ಜಿ.

# ಅನುಕ್ರಮಣಿಕೆ

॥ ಶ್ರೀಃ ॥

# ॥ ಶ್ರೀಮದ್ವಾಲ್ಮೀಕಿ ರಾಮಾಯಣಮ್ ॥

## ಯುದ್ಧಕಾಂಡಃ

### ಉತ್ತರಾರ್ಧಃ

### ಅಷ್ಟಷಷ್ಟಿತಮಃ ಸರ್ಗಃ

ರಾವಣಾನುಶೋಕಃ

**ಕುಂಭಕರ್ಣಂ ಹತಂ ದೃಷ್ಟ್ವಾ ರಾಘವೇಣ ಮಹಾತ್ಮನಾ ।**
**ರಾಕ್ಷಸಾ ರಾಕ್ಷಸೇಂದ್ರಾಯ ರಾವಣಾಯ ನ್ಯವೇದಯನ್ ॥** ೧

**ರಾಜನ್ ಸ ಕಾಲಸಂಕಾಶಃ ಸಂಯುಕ್ತಃ ಕಾಲಧರ್ಮಣಾ ।**
**ವಿದ್ರಾವ್ಯ ವಾನರೀಂ ಸೇನಾಂ ಭಕ್ಷಯಿತ್ವಾ ಚ ವಾನರಾನ್ ॥** ೨

**ಪ್ರತಪಿತ್ವಾ ಮುಹೂರ್ತಂ ಚ ಪ್ರಶಾಂತೋ ರಾಮತೇಜಸಾ ।**
**ಕಾಯೇನಾರ್ಧಪ್ರವಿಷ್ಟೇನ ಸಮುದ್ರಂ ಭೀಮದರ್ಶನಮ್ ॥** ೩

## ಯುದ್ಧಕಾಂಡ

### ಸರ್ಗ ೬೮

**ಕುಂಭಕರ್ಣನ ಮರಣವಾರ್ತೆಯನ್ನು ಕೇಳಿ ರಾವಣನ ಶೋಕ.**

ಮಹಾತ್ಮನಾದ ಶ್ರೀರಾಮನಿಂದ ಕುಂಭಕರ್ಣನು ಹತನಾದುದನ್ನು ನೋಡಿ ರಾಕ್ಷಸಭಟರು ಲಂಕೆಗೆ ಹಿಂದಿರುಗಿದರು. ಅವರು ರಾಕ್ಷಸೇಂದ್ರನಾದ ರಾವಣನ ಬಳಿಗೆ ಹೋಗಿ "ಮಹಾರಾಜ, ನಿನ್ನ ತಮ್ಮನಾದ ಕುಂಭಕರ್ಣನು ಕಾಲಾಂತಕನಂತೆ ವಾನರಸೇನೆಯೊಡನೆ ಹೋರಾಡಿದನು. ಬಹುಮಂದಿ ವಾನರರನ್ನು ಭಕ್ಷಿಸಿಬಿಟ್ಟನು (೧-೨). ಕೆಲಕಾಲದವರೆಗೆ ಅದ್ಭುತವಾಗಿ ಯುದ್ಧಮಾಡಿ ಶತ್ರುಗಳನ್ನು ಉರುಬಿ, ಕಡೆಯಲ್ಲಿ ಮಹಾ-

ನಿಕೃತ್ತಕಂಠೋರುಭುಜೋ ವಿಕ್ಷರನ್ ರುಧಿರಂ ಬಹು ।
ರುದ್ಧ್ವಾ ದ್ವಾರಂ ಶರೀರೇಣ ಲಂಕಾಯಾಃ ಪರ್ವತೋಪಮಃ ॥ ೪

ಕುಂಭಕರ್ಣಸ್ತವ ಭ್ರಾತಾ ಕಾಕುತ್ಸ್ಥಶರಪೀಡಿತಃ ।
ಅಗಂಡಭೂತೋ ವಿಕೃತೋ ದಾವದಗ್ಧ ಇವ ದ್ರುಮಃ ॥ ೫

ಮಮಾರ ರಾಕ್ಷಸೋ ಘೋರಃ ಕುಂಭಕರ್ಣೋ ಮಹಾದ್ಯುತಿಃ ।
ತಂ ಶ್ರುತ್ವಾ ನಿಹತಂ ಸಂಖ್ಯೇ ಕುಂಭಕರ್ಣಂ ಮಹಾಬಲಮ್ ॥ ೬

ರಾವಣಃ ಶೋಕಸಂತಪ್ತೋ ಮುಮೋಹ ಚ ಪಪಾತ ಚ ।
ಪಿತೃವ್ಯಂ ನಿಹತಂ ಶ್ರುತ್ವಾ ದೇವಾಂತಕನರಾಂತಕೌ ॥ ೭

ತ್ರಿಶಿರಾಶ್ಚಾತಿಕಾಯಶ್ಚ ರುರುದುಃ ಶೋಕಪೀಡಿತಾಃ ।
ಭ್ರಾತರಂ ನಿಹತಂ ಶ್ರುತ್ವಾ ರಾಮೇಣಾಕ್ಲಿಷ್ಟಕರ್ಮಣಾ ॥ ೮

---

ಪ್ರಭು, ಕಾಲಧರ್ಮವನ್ನೈದಿದನು. ರಾಮತೇಜಸ್ಸಿನಿಂದ ಶಾಂತನಾದನು. ಅವನ ಅರ್ಧದೇಹವು ಸಮುದ್ರವನ್ನು ಪ್ರವೇಶಿಸಿತು. ಕುತ್ತಿಗೆ, ತೊಡೆ, ತೋಳುಗಳು ಕತ್ತರಿಸಿಹೋದವು. ಭೀಕರವಾದ ರಕ್ತಸ್ರಾವವಾಯಿತು. ಪರ್ವತಾಕಾರನಾದ ಅವನ ದೇಹದ ಒಂದು ಭಾಗವು ಲಂಕಾದ್ವಾರಕ್ಕೆ ಅಡ್ಡಲಾಗಿ ಬಿದ್ದಿತು (೩-೪). ಮಹಾಸ್ವಾಮಿ, ರಾಮನ ಶರಗಳು ನಿನ್ನ ಸೋದರನ ತಲೆ ಕೈಕಾಲುಗಳನ್ನು ಕಡಿದು ವಿಕಾರವಾದ ಒಂದು ಕಬಂಧವನ್ನಾಗಿ ಮಾಡಿದವು. ಕಾಳ್ಗಿಚ್ಚಿನಿಂದ ಸುಟ್ಟುಹೋದ ಮರದಂತೆ ಕುಂಭಕರ್ಣನು ಸುಟ್ಟು ಗರುಕಾದನು. ಅತ್ಯಂತ ತೇಜಸ್ವಿಯೂ ಭೀಕರನೂ ಆದ ಆ ರಾಕ್ಷಸೋತ್ತಮನು ನಿಧನವನ್ನು ಹೊಂದಿದನು" ಎಂದು ಅರಿಕೆ ಮಾಡಿದರು (೫-೬). ಮಹಾಬಲಾಢ್ಯನಾದ ಕುಂಭಕರ್ಣನು ಯುದ್ಧದಲ್ಲಿ ಹತನಾದನೆಂಬ ಸುದ್ದಿಯನ್ನು ಕೇಳಿದೊಡನೆ, ರಾವಣನು ಶೋಕಸಂತಪ್ತನಾಗಿ ಬಸವಳಿದು ನೆಲದಮೇಲೊರಗಿದನು. ದೇವಾಂತಕನರಾಂತಕರೂ, ತ್ರಿಶಿರ ಅತಿಕಾಯರೂ ತಮ್ಮ ಚಿಕ್ಕಪ್ಪನು ಮೃತನಾದನೆಂಬು

ಮಹೋದರಮಹಾಪಾರ್ಶ್ವೌ ಶೋಕಾಕ್ರಾಂತೌ ಬಭೂವತುಃ ।
ತತಃ ಕೃಚ್ಛ್ರಾತ್ ಸಮಾಸಾದ್ಯ ಸಂಜ್ಞಾಂ ರಾಕ್ಷಸಪುಂಗವಃ ॥ ೯

ಕುಂಭಕರ್ಣವಧಾದ್ದೀನೋ ವಿಲಲಾಪ ಸ ರಾವಣಃ ।
ಹಾ ವೀರ ರಿಪುದರ್ಪಘ್ನ ಕುಂಭಕರ್ಣ ಮಹಾಬಲ ॥ ೧೦

ತ್ವಂ ಮಾಂ ವಿಹಾಯ ವೈ ದೈವಾದ್ಯಾತೋಽಸಿ ಯಮಸಾದನಮ್ ।
ಮಮ ಶಲ್ಯಮನುದ್ಧೃತ್ಯ ಬಾಂಧವಾನಾಂ ಮಹಾಬಲ ॥ ೧೧

ಶತ್ರುಸೈನ್ಯಂ ಪ್ರತಾಪ್ಯೈಕಃ ಕ್ವ ಮಾಂ ಸಂತ್ಯಜ್ಯ ಗಚ್ಛಸಿ ।
ಇದಾನೀಂ ಖಲ್ವಹಂ ನಾಸ್ಮಿ ಯಸ್ಯ ಮೇ ದಕ್ಷಿಣೋ ಭುಜಃ ॥ ೧೨

ಪತಿತೋ ಯಂ ಸಮಾಶ್ರಿತ್ಯ ನ ಬಿಭೇಮಿ ಸುರಾಸುರಾತ್ ।
ಕಥಮೇವಂವಿಧೋ ವೀರೋ ದೇವದಾನವದರ್ಪಹಾ ॥ ೧೩

---

ದನ್ನು ಕೇಳಿ ಶೋಕಾರ್ತರಾಗಿ ಅಳತೊಡಗಿದರು (೭-೮). ಮಹೋದರ ಮಹಾಪಾರ್ಶ್ವರೂ ಕೂಡ ತಮ್ಮ ಅಣ್ಣನಾದ ಕುಂಭಕರ್ಣನನ್ನು ಅಷ್ಟು ಸುಲಭವಾಗಿ ರಾಘವನು ಸಂಹರಿಸಿದನೆಂಬುದನ್ನು ಕೇಳಿ ದುಃಖಸಂತಪ್ತ ರಾದರು. ರಾಕ್ಷಸೇಂದ್ರನು ಬಹಳ ಹೊತ್ತಿನಮೇಲೆ ಮೂರ್ಛೆಯಿಂದೆದ್ದು ಕುಂಭಕರ್ಣನ ವಧೆಯನ್ನು ನೆನೆಸಿಕೊಂಡು ದೈನ್ಯದಿಂದ ಹಲುಬತೊಡಗಿ ದನು: “ಹಾ ಕುಂಭಕರ್ಣ—ವೀರಶಿರೋಮಣಿ, ವೈರಿಗಳ ದರ್ಪವನ್ನು ವಿಧ್ವಂಸಗೊಳಿಸಿದ ಬಲಾಢ್ಯನಲ್ಲವೆ ನೀನು? (೯-೧೦). ನನ್ನನ್ನು ತ್ಯಜಿಸಿದೆಯಾ? ನನ್ನ ದುರ್ದೈವದಿಂದ ಯಮಲೋಕವನ್ನು ಸೇರಿದೆಯಾ? ನನ್ನ ಕಷ್ಟವನ್ನೂ ಬಂಧುಗಳ ಸಂಕಟವನ್ನೂ ಪರಿಹರಿಸದೆ ಹೊರಟು ಬಿಟ್ಟಿಯಾ? ಶತ್ರುಸೈನ್ಯವನ್ನು ಸುಟ್ಟು ಉರುಬಿ, ತಮ್ಮ, ನನ್ನನ್ನು ಬಿಟ್ಟು ಒಂಟಿಯಾಗಿ ಎಲ್ಲಿಗೆ ಹೋಗುವೆ? ಅಯ್ಯೊ, ಈಗ ನಾನು ಬದುಕಿ ದ್ದರೂ ಸತ್ತಂತೆಯೇ! ನನ್ನ ಬಲಗೈ ಬಿದ್ದುಹೋಯಿತು! (೧೧-೧೨). ನಿನ್ನ ಅವಲಂಬನೆಯಿಂದ ದೇವಾಸುರರನ್ನೂ ನಾನು ಲೆಕ್ಕಿಸದಿದ್ದೆನು. ದೇವ ದಾನವರ ದರ್ಪವನ್ನು ಭಗ್ನಗೊಳಿಸಿ ಕಾಲಾಗ್ನಿರುದ್ರನಂತೆ ಮೆರೆಯುತ್ತಿದ್ದ

ಕಾಲಾಗ್ನಿರುದ್ರಪ್ರತಿಮೋ ರಾಘವೇಣ ರಣೇ ಹತಃ ।
ಯಸ್ಯ ತೇ ವಜ್ರನಿಷ್ಪೇಷೋ ನ ಕುರ್ಯಾದ್ವ್ಯಸನಂ ಸದಾ ॥ ೧೪

ಸ ಕಥಂ ರಾಮಬಾಣಾರ್ತಃ ಪ್ರಸುಪ್ತೋಽಸಿ ಮಹೀತಲೇ ।
ಏತೇ ದೇವಗಣಾಃ ಸಾರ್ಧಮೃಷಿಭಿರ್ಗಗನೇ ಸ್ಥಿತಾಃ ॥ ೧೫

ನಿಹತಂ ತ್ವಾಂ ರಣೇ ದೃಷ್ಟ್ವಾ ನಿನದಂತಿ ಪ್ರಹರ್ಷಿತಾಃ ।
ಧ್ರುವಮದ್ಯೈವ ಸಂಹೃಷ್ಟಾ ಲಬ್ಧಲಕ್ಷ್ಯಾಃ ಪ್ಲವಂಗಮಾಃ ॥ ೧೬

ಆರೋಕ್ಷ್ಯಂತಿ ಹಿ ದುರ್ಗಾಣಿ ಲಂಕಾದ್ವಾರಾಣಿ ಸರ್ವಶಃ ।
ರಾಜ್ಯೇನ ನಾಸ್ತಿ ಮೇ ಕಾರ್ಯಂ ಕಿಂ ಕರಿಷ್ಯಾಮಿ ಸೀತಯಾ ॥ ೧೭

ಕುಂಭಕರ್ಣವಿಹೀನಸ್ಯ ಜೀವಿತೇ ನಾಸ್ತಿ ಮೇ ರತಿಃ ।
ಯದ್ಯಹಂ ಭ್ರಾತೃಹಂತಾರಂ ನ ಹನ್ಮಿ ಯುಧಿ ರಾಘವಮ್ ॥ ೧೮

ನನು ಮೇ ಮರಣಂ ಶ್ರೇಯೋ ನ ಚೇದಂ ವ್ಯರ್ಥಜೀವಿತಮ್ ।
ಅದ್ಯೈವ ತಂ ಗಮಿಷ್ಯಾಮಿ ದೇಶಂ ಯತ್ರಾನುಜೋ ಮಮ ॥ ೧೯

---

ಅಪ್ರತಿಮನಾದ ಈ ವೀರನನ್ನು ರಾಮನು ಹೇಗೆ ಸಂಹರಿಸಿರಬಹುದು ? ಹಾ ಕುಂಭಕರ್ಣ, ವಜ್ರನಿರ್ಘಾತದಿಂದಲೂ ನೋಯದ ರಣಮಲ್ಲನಾದ ನೀನು ರಾಮಬಾಣದಿಂದ ನೊಂದು ಹೇಗೆ ನೆಲದಮೇಲೆ ಮಲಗಿದೆ ? (೧೩-೧೪). ಈ ದೇವತೆಗಳು ಋಷಿಗಳೊಡನೆ ಆಕಾಶದಲ್ಲಿ ನಿಂತು, ರಣದಲ್ಲಿ ಹತನಾದ ನಿನ್ನನ್ನು ನೋಡಿ ಹರ್ಷೋದ್ಗಾರಮಾಡುತ್ತಿರುವರಲ್ಲವೆ ? ಸರಿಯಾದ ಸಮಯವು ದೊರಕಿತೆಂದು ವಾನರರು ದುರ್ಗಮವಾದ ಲಂಕಾದ್ವಾರಗಳನ್ನು ಈ ದಿನವೇ ಹತ್ತಿಬರುವುದು ನಿಶ್ಚಯ. ಅಯ್ಯೋ, ಇನ್ನು ನನಗೆ ರಾಜ್ಯದಿಂದೇನಾಗಬೇಕು ? ಸೀತೆಯನ್ನು ಕಟ್ಟಿಕೊಂಡೇನು ಮಾಡಲಿ ? (೧೫-೧೭). ಕುಂಭಕರ್ಣನನ್ನು ಕಳೆದುಕೊಂಡಮೇಲೆ ಈ ಪ್ರಾಣದಲ್ಲಿಯೂ ನನಗೆ ಆಸೆ ಇಲ್ಲ. ನನ್ನ ತಮ್ಮನನ್ನು ಕೊಂದಿರುವ ರಾಮನನ್ನು ಕೊಲ್ಲಲಾರೆನಾದರೆ, ನಾನು ಸತ್ತುಹೋಗುವುದೇ ಉತ್ತಮ ! ವ್ಯರ್ಥವಾಗಿ ನಾನು ಬದುಕಿರುವುದು ಸರಿಯಲ್ಲ. ನನ್ನ ತಮ್ಮನಿರುವ

ನ ಹಿ ಭ್ರಾತೄನ್ ಸಮುತ್ಸೃಜ್ಯ ಕ್ಷಣಂ ಜೀವಿತುಮುತ್ಸಹೇ ।
ದೇವಾ ಹಿ ಮಾಂ ಹಸಿಷ್ಯಂತಿ ದೃಷ್ಟ್ವಾ ಪೂರ್ವಾಪಕಾರಿಣಮ್ ॥ ೨೦

ಕಥಮಿಂದ್ರಂ ಜಯಿಷ್ಯಾಮಿ ಕುಂಭಕರ್ಣ ಹತೇ ತ್ವಯಿ ।
ತದಿದಂ ಮಾಮನುಪ್ರಾಪ್ತಂ ವಿಭೀಷಣವಚಃ ಶುಭಮ್ ॥ ೨೧

ಯದಜ್ಞಾನಾನ್ಮಯಾ ತಸ್ಯ ನ ಗೃಹೀತಂ ಮಹಾತ್ಮನಃ ।
ವಿಭೀಷಣವಚೋ ಯಾವತ್ ಕುಂಭಕರ್ಣಪ್ರಹಸ್ತಯೋಃ ॥ ೨೨

ವಿನಾಶೋಽಯಂ ಸಮುತ್ಪನ್ನೋ ಮಾಂ ವ್ರೀಡಯತಿ ದಾರುಣಃ ।
ತಸ್ಯಾಯಂ ಕರ್ಮಣಃ ಪ್ರಾಪ್ತೋ ವಿಪಾಕೋ ಮಮ ಶೋಕದಃ ॥

ಯನ್ಮಯಾ ಧಾರ್ಮಿಕಃ ಶ್ರೀಮಾನ್ ಸ ನಿರಸ್ತೋ ವಿಭೀಷಣಃ ॥

---

ದೇಶಕ್ಕೆ ಇಂದೇ ಹೊರಟುಬಿಡುವೆನು! (೧೮–೧೯). ಸೋದರರನ್ನು* ಕಳೆದುಕೊಂಡು ಒಂದು ಕ್ಷಣವೂ ನಾನು ಬದುಕಿರಲಾರೆ. ಪೂರ್ವವೈರವನ್ನು ಸ್ಮರಿಸಿಕೊಂಡು ದೇವತೆಗಳು ನನ್ನನ್ನು ನೋಡಿ ಈಗ ನಗುವರು. ಹಾ ಕುಂಭಕರ್ಣ, ಮೃತನಾದೆಯಾ? ಇನ್ನು ನಾನು ದೇವೇಂದ್ರನನ್ನು ಜಯಿಸುವ ಬಗೆ ಯಾವುದು? ವಿಭೀಷಣನಾಡಿದ ಮಾತು ಈಗ ನನ್ನ ಅನುಭವಕ್ಕೆ ಬಂದಿತು (೨೦–೨೧). ಆ ಮಹಾತ್ಮನ ಬುದ್ಧಿವಾದವನ್ನು ಅಜ್ಞಾನದಿಂದ ನಾನು ಗ್ರಹಿಸದೆಹೋದೆನು. ವಿಭೀಷಣ, ಕುಂಭಕರ್ಣ, ಪ್ರಹಸ್ತ—ಈ ಮೂವರ ಮಾತನ್ನೂ ನಾನು ಕೇಳಲಿಲ್ಲ. ಭೀಕರವಾದ ಸರ್ವನಾಶವೂ ಒದಗಿಬಂದಿತು. ನನಗೆ ನಾಚಿಕೆಯಾಗುವುದಲ್ಲ! †(೨೨). ಧಾರ್ಮಿಕನಾದ ವಿಭೀಷಣನನ್ನು ಮನೆಯಿಂದ ಹೊರಗೆ ತಳ್ಳಿದೆನು.

* ಮೂಲದಲ್ಲಿ ಭ್ರಾತೄನ್ ಎಂದು ಬಹುವಚನವಿದೆ. ರಾವಣನಿಗೆ ಖರ ಮತ್ತು ವಿಭೀಷಣರ ಸ್ಮರಣೆಯೂ ಆಗಿರಬಹುದು. ಅಥವಾ ಲೋಕೋಕ್ತಿಯನ್ನನುಸರಿಸಿ ಬಹುವಚನವಿರಬಹುದು.

† ಕುಂಭಕರ್ಣ ಮತ್ತು ಪ್ರಹಸ್ತ—ಇವರಿಬ್ಬರ ವಿನಾಶವಾದ್ದರಿಂದ ವಿಭೀಷಣನ ಮಾತು ನನ್ನನ್ನು ಲಜ್ಜೆಗೊಳಿಸುತ್ತಿದೆ, ಪೀಡಿಸುತ್ತಿದೆ ಎಂದು ವ್ಯಾಖ್ಯಾನಕಾರರು ಅರ್ಥಮಾಡಿದ್ದಾರೆ.

ಇತಿ ಬಹುವಿಧಮಾಕುಲಾಂತರಾತ್ಮಾ
ಕೃಪಣಮತೀವ ವಿಲಪ್ಯ ಕುಂಭಕರ್ಣಮ್ ।
ನ್ಯಪತದಥ ದಶಾನನೋ ಭೃಶಾರ್ತ-
ಸ್ತಮನುಜಮಿಂದ್ರರಿಪುಂ ಹತಂ ವಿದಿತ್ವಾ ॥ ೨೪

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಚತುರ್ವಿಂಶತಿಸಹಸ್ರಿಕಾಯಾಂ ಸಂಹಿತಾಯಾಂ
ಯುದ್ಧಕಾಂಡೇ ಅಷ್ಟಷಷ್ಟಿತಮಃ ಸರ್ಗಃ



ಆ ಕರ್ಮದ ಫಲವು ಹೀಗೆ ದಾರುಣವಾಗಿ ಪರಿಣಮಿಸಿತು" ಎಂದು ರಾವಣನು ವ್ಯಾಕುಲಚಿತ್ತನಾಗಿ ಬಗೆಬಗೆಯಲ್ಲಿ ಹಲುಬಿ ಗೋಳಾಡಿದನು. ದೇವೇಂದ್ರನನ್ನು ಜಯಿಸಿದ ತಮ್ಮನು ಹತನಾದನೆಂದು ಶೋಕಾಕುಲನಾಗಿ ನೆಲದಮೇಲೊರಗಿದನು (೨೩-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಅರುವತ್ತೆಂಟನೆಯ ಸರ್ಗ



## ಏಕೋನಸಪ್ತತಿತಮಃ ಸರ್ಗಃ

### ನರಾಂತಕವಧಃ

ಏವಂ ವಿಲಪಮಾನಸ್ಯ ರಾವಣಸ್ಯ ದುರಾತ್ಮನಃ ।
ಶ್ರುತ್ವಾ ಶೋಕಾಭಿತಪ್ತಸ್ಯ ತ್ರಿಶಿರಾ ವಾಕ್ಯಮಬ್ರವೀತ್ ॥ ೧

ಏವಮೇವ ಮಹಾವೀರ್ಯೋ ಹತೋ ನಸ್ತಾತಮಧ್ಯಮಃ ।
ನ ತು ಸತ್ಪುರುಷಾ ರಾಜನ್ ವಿಲಪಂತಿ ಯಥಾ ಭವಾನ್ ॥ ೨

ನೂನಂ ತ್ರಿಭುವನಸ್ಯಾಪಿ ಪರ್ಯಾಪ್ತಸ್ತ್ವಮಸಿ ಪ್ರಭೋ ।
ಸ ಕಸ್ಮಾತ್ ಪ್ರಾಕೃತ ಇವ ಶೋಚಸ್ಯಾತ್ಮಾನಮೀದೃಶಮ್ ॥ ೩

ಬ್ರಹ್ಮದತ್ತಾಸ್ತಿ ತೇ ಶಕ್ತಿಃ ಕವಚಃ ಸಾಯಕೋ ಧನುಃ ।
ಸಹಸ್ರಖರಸಂಯುಕ್ತೋ ರಥೋ ಮೇಘಸ್ವನೋ ಮಹಾನ್ ॥ ೪

### ಸರ್ಗ ೬೯

ರಾವಣನ ಮಗನಾದ ತ್ರಿಶಿರನು ತಂದೆಗೆ ಧೈರ್ಯ ಹೇಳುವುದು.
ದೇವಾಂತಕ ನರಾಂತಕಾದಿಗಳು ಯುದ್ಧಕ್ಕೆ ತೆರಳುವುದು.
ಅಂಗದನಿಂದ ನರಾಂತಕನ ವಧೆ.

ದುರಾತ್ಮನಾದ ರಾವಣನು ಈ ರೀತಿಯಲ್ಲಿ ದುಃಖದಿಂದ ವಿಲಪಿಸುತ್ತಿರಲು, ಅವನ ಮಗನಾದ ತ್ರಿಶಿರನು “ ಮಹಾರಾಜ, ಮಹಾಶೂರನಾದ ನಮ್ಮ ಚಿಕ್ಕಪ್ಪನು ದುರ್ದೈವದಿಂದ ಈ ಪ್ರಕಾರದಲ್ಲಿ ಹತನಾದನು. ಆದರೆ ಸತ್ಪುರುಷರಾದ ನಿನ್ನಂಥವರು ಹೀಗೆ ಅಳುತ್ತ ಕುಳಿತುಕೊಳ್ಳಬಾರದು (೧-೨). ಮಹಾಪ್ರಭುವಾಗಿರುವ ನೀನು ತ್ರಿಭುವನಗಳನ್ನೂ ಜಯಿಸಲು ಶಕ್ತನಾಗಿರುವೆ. ಹೀಗಿರಲು ಒಬ್ಬ ಸಾಮಾನ್ಯನಂತೆ ನಿನ್ನನ್ನೇ ನಿಂದಿಸಿಕೊಳ್ಳುತ್ತ ಹೀಗೆ ಶೋಕಿಸಬಹುದೆ? ಸಾಕ್ಷಾತ್ ಬ್ರಹ್ಮದೇವನೇ ನಿನಗೆ ಶಕ್ತ್ಯಾಯುಧವನ್ನು ಅನುಗ್ರಹಿಸಿದ್ದಾನೆ. ಕವಚ, ಧನುರ್ಬಾಣಗಳೂ ಬ್ರಹ್ಮದತ್ತವಾದವು. ಸಾವಿರ ಖರಗಳಿಂದ ಸಂಯುಕ್ತವಾಗಿ ಮೇಘದಂತೆ

ತ್ವಯಾಸಕೃದ್ವಿಶಸ್ತ್ರೇಣ ವಿಶಸ್ತಾ ದೇವದಾನವಾಃ ।
ಸ ಸರ್ವಾಯುಧಸಂಪನ್ನೋ ರಾಘವಂ ಶಾಸ್ತುಮರ್ಹಸಿ ॥ ೫

ಕಾಮಂ ತಿಷ್ಠ ಮಹಾರಾಜ ನಿರ್ಗಮಿಷ್ಯಾಮ್ಯಹಂ ರಣಮ್ ।
ಉದ್ಧರಿಷ್ಯಾಮಿ ತೇ ಶತ್ರೂನ್ ಗರುಡಃ ಪನ್ನಗಾನಿವ ॥ ೬

ಶಂಬರೋ ದೇವರಾಜೇನ ನರಕೋ ವಿಷ್ಣುನಾ ಯಥಾ ।
ತಥಾದ್ಯ ಶಯಿತಾ ರಾಮೋ ಮಯಾ ಯುಧಿ ನಿಪಾತಿತಃ ॥ ೭

ಶ್ರುತ್ವಾ ತ್ರಿಶಿರಸೋ ವಾಕ್ಯಂ ರಾವಣೋ ರಾಕ್ಷಸಾಧಿಪಃ ।
ಪುನರ್ಜಾತಮಿವಾತ್ಮಾನಂ ಮನ್ಯತೇ ಕಾಲಚೋದಿತಃ ॥ ೮

ಶ್ರುತ್ವಾ ತ್ರಿಶಿರಸೋ ವಾಕ್ಯಂ ದೇವಾಂತಕನರಾಂತಕೌ ।
ಅತಿಕಾಯಶ್ಚ ತೇಜಸ್ವೀ ಬಭೂವುರ್ಯುದ್ಧಹರ್ಷಿತಾಃ ॥ ೯

ತತೋಽಹಮಹಮಿತ್ಯೇವಂ ಗರ್ಜಂತೋ ನೈರ್ಋತರ್ಷಭಾಃ ।
ರಾವಣಸ್ಯ ಸುತಾ ವೀರಾಃ ಶಕ್ರತುಲ್ಯಪರಾಕ್ರಮಾಃ ॥ ೧೦

---

ಭೋರ್ಗರೆಯುವ ಮಹಾರಥವು ನಿನಗುಂಟು (೩-೪). ಆಯುಧವನ್ನೇ ಹಿಡಿಯದೆ ನೀನು ಎಷ್ಟೋ ಸಲ ದೇವದಾನವರನ್ನು ಮರ್ದಿಸಿದ್ದೀಯೆ. ಹೀಗಿರುವಾಗ ಸರ್ವಾಯುಧಸಂಪನ್ನನಾಗಿ ಹೊರಟರೆ ರಾಮನನ್ನು ನಿಶ್ಚಯವಾಗಿಯೂ ನೀನು ದಂಡಿಸಬಲ್ಲೆ (೫). ಅಥವಾ, ಮಹಾರಾಜ, ನೀನು ಯುದ್ಧಕ್ಕೆ ಹೊರಡುವುದೇ ಬೇಡ ನಾನೇ ಹೋಗುವೆನು. ಗರುಡನು ಸರ್ಪಗಳನ್ನು ಹಿರಿದು ಕೊಲ್ಲುವಂತೆ, ನಿನ್ನ ಶತ್ರುಗಳನ್ನು ವಿಧ್ವಂಸಗೊಳಿಸುವೆನು. ದೇವೇಂದ್ರನಿಂದ ಶಂಬರನೂ ವಿಷ್ಣುವಿನಿಂದ ನರಕಾಸುರನೂ ಹತರಾದಂತೆ, ರಾಮನು ಯುದ್ಧದಲ್ಲಿ ನನ್ನಿಂದ ಹತನಾಗಿ ಒರಗುವನು" ಎಂದು ಹೇಳಿದನು (೬-೭) ತ್ರಿಶಿರನ ವಚನವನ್ನು ಕೇಳಿ ರಾಕ್ಷಸೇಶ್ವರನಾದ ರಾವಣನು ಕಾಲಚೋದಿತನಾದ್ದರಿಂದ, ತಾನು ಪುನಃ ಹುಟ್ಟಿ ಬಂದನೋ ಎಂಬಂತೆ ನವೋತ್ಸಾಹವನ್ನು ತಳೆದನು. ತ್ರಿಶಿರನ ನುಡಿಯನ್ನಾಲಿಸಿ ದೇವಾಂತಕ ನರಾಂತಕರೂ ತೇಜಸ್ವಿಯಾದ ಅತಿಕಾಯನೂ ಮತ್ತೆ ಯುದ್ಧವು ಒದಗಿತೆಂದು ಹರ್ಷದಿಂದ ಉಬ್ಬಿದರು (೮-೯). ಶಕ್ರತುಲ್ಯಪರಾಕ್ರಮಿಗಳಾದ ಆ ರಾವಣತನಯರು ನಾನು

ಅಂತರಿಕ್ಷಗತಾಃ ಸರ್ವೇ ಸರ್ವೇ ಮಾಯಾವಿಶಾರದಾಃ ।
ಸರ್ವೇ ತ್ರಿದಶದರ್ಪಘ್ನಾಃ ಸರ್ವೇ ಚ ರಣದುರ್ಜಯಾಃ ॥ ೧೧

ಸರ್ವೇ ಸುಬಲಸಂಪನ್ನಾಃ ಸರ್ವೇ ವಿಸ್ತೀರ್ಣಕೀರ್ತಯಃ ।
ಸರ್ವೇ ಸಮರಮಾಸಾದ್ಯ ನ ಶ್ರೂಯಂತೇ ಪರಾಜಿತಾಃ ॥ ೧೨

ದೇವೈರಪಿ ಸಗಂಧರ್ವೈಃ ಸಕಿನ್ನರಮಹೋರಗೈಃ ।
ಸರ್ವೇಽಸ್ತ್ರವಿದುಷೋ ವೀರಾಃ ಸರ್ವೇ ಯುದ್ಧವಿಶಾರದಾಃ ॥ ೧೩

ಸರ್ವೇ ಪ್ರವರವಿಜ್ಞಾನಾಃ ಸರ್ವೇ ಲಬ್ಧವರಾಸ್ತಥಾ ॥
ಸ ತೈಸ್ತದಾ ಭಾಸ್ಕರತುಲ್ಯವರ್ಚಸೈಃ
ಸುತೈರ್ವೃತಃ ಶತ್ರುಬಲಪ್ರಮರ್ದನೈಃ ।
ರರಾಜ ರಾಜಾ ಮಘವಾನ್ ಯಥಾಮರೈ-
ರ್ವೃತೋ ಮಹಾದಾನವದರ್ಪನಾಶನೈಃ ॥ ೧೪

ಸ ಪುತ್ರಾನ್ ಸಂಪರಿಷ್ವಜ್ಯ ಭೂಷಯಿತ್ವಾ ಚ ಭೂಷಣೈಃ ।
ಆಶೀರ್ಭಿಶ್ಚ ಪ್ರಶಸ್ತಾಭಿಃ ಪ್ರೇಷಯಾಮಾಸ ಸಂಯುಗೇ ॥ ೧೫

---

ಮುಂದು, ತಾನು ಮುಂದು ಎಂದು ಗರ್ಜಿಸುತ್ತ ರಣೋತ್ಸುಕರಾದರು. ದೇವಾಂತಕ, ನರಾಂತಕ, ಅತಿಕಾಯ, ತ್ರಿಶಿರ—ಎಂಬ ಆ ನಾಲ್ವರೂ ಅಂತರಿಕ್ಷದಲ್ಲಿ ನಿಂತು ಮಾಯಾಯುದ್ಧವನ್ನು ನಡೆಸುವುದರಲ್ಲಿ ವಿಶಾರದರು. ಸರ್ವರೂ ದೇವತೆಗಳ ದರ್ಪವನ್ನಡಗಿಸಿದವರು. ಸರ್ವರೂ ರಣದುರ್ಜಯರು (೧೦-೧೧). ಸರ್ವರೂ ಬಲಾಢ್ಯರು, ಕೀರ್ತಿಶಾಲಿಗಳು. ಅವರು ರಣರಂಗದಲ್ಲಿ ಹೋರಾಡುವಾಗ ಸೋತುದನ್ನು ಯಾರೂ ಕೇಳಿದುದೇ ಇಲ್ಲ. ದೇವಗಂಧರ್ವರಿಂದಲೂ ಕಿನ್ನರಮಹೋರಗರಿಂದಲೂ ಅವರು ಪರಾಜಿತರಾಗಿಯೇ ಇರಲಿಲ್ಲ. ಎಲ್ಲರೂ ಅಸ್ತ್ರವಿದ್ಯಾಪರಿಣತರು, ಯುದ್ಧವಿಶಾರದರು. ಎಲ್ಲರೂ ಶಾಸ್ತ್ರಜ್ಞಾನಸಂಪನ್ನರು, ವರಬಲಸಂಯುಕ್ತರು (೧೨-೧೩). ಹೀಗೆ ಶತ್ರುಬಲವಿಧ್ವಂಸಕರೂ ಸೂರ್ಯಸಮಾನತೇಜಸ್ವಿಗಳೂ ಆದ ದೇವಾಂತಕಾದಿಸುತರಿಂದ ಪರಿವೃತನಾದ ರಾಕ್ಷಸರಾಜನು, ದಾನವದರ್ಪವನ್ನು ದಮನಗೊಳಿಸಿದ ದೇವತೆಗಳಿಂದ ಸಮೇತನಾದ ದೇವೇಂದ್ರನಂತೆ ವಿರಾಜಿಸಿದನು (೧೪). ರಾವಣನು ನಾಲ್ವರು ಪುತ್ರರನ್ನೂ ಆಲಿಂಗಿಸಿಕೊಂಡು ವಿವಿಧಭೂಷಣಗಳಿಂದ ಅವರನ್ನು

ಯುದ್ಧೋನ್ಮತ್ತಂ ಚ ಮತ್ತಂ ಚ ಭ್ರಾತರೌ ಚಾಪಿ ರಾವಣಃ ।
ಮಹಾಪಾರ್ಶ್ವಂ ಪ್ರಮತ್ತಂ ಚ ಭ್ರಾತರಂ ಚ ಮಹೋದರಮ್ ॥ ೧೬

ರಕ್ಷಣಾರ್ಥಂ ಕುಮಾರಾಣಾಂ ಪ್ರೇಷಯಾಮಾಸ ಸಂಯುಗೇ ।
ತೇಽಭಿವಾದ್ಯ ಮಹಾತ್ಮಾನಂ ರಾವಣಂ ರಿಪುರಾವಣಮ್ ॥ ೧೭

ಕೃತ್ವಾ ಪ್ರದಕ್ಷಿಣಂ ಚೈವ ಮಹಾಕಾಯಾಃ ಪ್ರತಸ್ಥಿರೇ ।
ಸರ್ವೌಷಧೀಭಿರ್ಗಂಧೈಶ್ಚ ಸಮಾಲಭ್ಯ ಮಹಾಬಲಾಃ ॥ ೧೮

ನಿರ್ಜಗ್ಮುರ್ನೈರ್ಋತಶ್ರೇಷ್ಠಾಃ ಷಡೇತೇ ಯುದ್ಧಕಾಂಕ್ಷಿಣಃ ।
ತ್ರಿಶಿರಾಶ್ಚಾತಿಕಾಯಶ್ಚ ದೇವಾಂತಕನರಾಂತಕೌ ॥ ೧೯

ಮಹೋದರಮಹಾಪಾರ್ಶ್ವೌ ನಿರ್ಜಗ್ಮುಃ ಕಾಲಚೋದಿತಾಃ ।
ತತಃ ಸುದರ್ಶನಂ ನಾಗಂ ನೀಲಜೀಮೂತಸಂನಿಭಮ್ ॥ ೨೦

---

ಸಿಂಗರಿಸಿ, ಆಶೀರ್ವಾದಗಳಿಂದ ಅಭಿನಂದಿಸಿ ರಣಭೂಮಿಗೆ ಕಳಿಸಿಕೊಟ್ಟನು. ಅಲ್ಲದೆ ರಾವಣನು ಆ ಪುತ್ರರ ಸಂರಕ್ಷಣಾರ್ಥವಾಗಿ ಮಹೋದರ, ಮಹಾಪಾರ್ಶ್ವ ಎಂಬ ತನ್ನ ಸಹೋದರರನ್ನೂ ಯುದ್ಧಭೂಮಿಗೆ ಕಳಿಸಿದನು. ಮಹೋದರನಿಗೆ ಯುದ್ಧೋನ್ಮತ್ತನೆಂದೂ ಮಹಾಪಾರ್ಶ್ವನಿಗೆ ಮತ್ತನೆಂದೂ ನಾಮಾಂತರಗಳಿದ್ದವು.* (೧೫-೧೬). ಬೃಹತ್ಕಾಯರೂ ಮಹಾಬಲರೂ ಆದ ಆ ರಾಕ್ಷಸವೀರರು ರಿಪುರಾವಣನೆನಿಸಿದ ರಾವಣನಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಹೊರಟರು. ತ್ರಿಶಿರ, ಅತಿಕಾಯ, ದೇವಾಂತಕ, ನರಾಂತಕ, ಮಹೋದರ, ಮಹಾಪಾರ್ಶ್ವ-ಎಂಬ ಆರು ಜನರು ಆಯುಧಪ್ರಹಾರ ನಿವಾರಕಗಳಾದ ಸರ್ವಮೂಲಿಕೆಗಳನ್ನೂ † ತೆಗೆದುಕೊಂಡು, ಅವುಗಳ ಗಂಧವನ್ನು ಮೈಗೆ ತೊಡೆದುಕೊಂಡು ಯುದ್ಧಕ್ಕೆ ಪ್ರಯಾಣಮಾಡಿದರು (೧೭-೧೯). ಏನಾದರೇನು ? ಮೃತ್ಯುವು ಅವರನ್ನು ಚೋದಿಸಿತ್ತು. ಐರಾವತಕುಲದಲ್ಲಿ ಜನಿಸಿ

* ಮಹಾಪಾರ್ಶ್ವನಿಗೆ ಮತ್ತನೆಂದೂ ಮತ್ತಾನೀಕನೆಂದೂ ನಾಮಾಂತರಗಳಿದ್ದವೆಂದು ಮುಂದೆ ಎಪ್ಪತ್ತನೆಯ ಸರ್ಗದಲ್ಲಿ ಗೊತ್ತಾಗುತ್ತದೆ. ಇವರಿಬ್ಬರೂ ರಾವಣನ ಸಹೋದರರು ರಾವಣನಿಗೆ ಇವರಲ್ಲದೆ ಮಹೋದರ, ಮಹಾಪಾರ್ಶ್ವ ಎಂಬ ಹೆಸರಿನ ಇಬ್ಬರು ಮಂತ್ರಿಗಳೂ ಇದ್ದರು.

† ಅನುಬಂಧವನ್ನು ನೋಡಿ.

ಐರಾವತಕುಲೇ ಜಾತಮಾರುರೋಹ ಮಹೋದರಃ ।
ಸರ್ವಾಯುಧಸಮಾಯುಕ್ತಸ್ತೂಣೀಭಿಶ್ಚ ಸ್ವಲಂಕೃತಃ ॥ ೨೧
ರರಾಜ ಗಜಮಾಸ್ಥಾಯ ಸವಿತೇವಾಸ್ತಮೂರ್ಧನಿ ।
ಹಯೋತ್ತಮಸಮಾಯುಕ್ತಂ ಸರ್ವಾಯುಧಸಮಾಕುಲಮ್ ॥ ೨೨
ಆರುರೋಹ ರಥಶ್ರೇಷ್ಠಂ ತ್ರಿಶಿರಾ ರಾವಣಾತ್ಮಜಃ ।
ತ್ರಿಶಿರಾ ರಥಮಾಸ್ಥಾಯ ವಿರರಾಜ ಧನುರ್ಧರಃ ॥ ೨೩
ಸವಿದ್ಯುದುಲ್ಕಃ ಶೈಲಾಗ್ರೇ ಸೇಂದ್ರಚಾಪ ಇವಾಂಬುದಃ ।
ತ್ರಿಭಿಃ ಕಿರೀಟೈಃ ಶುಶುಭೇ ತ್ರಿಶಿರಾಃ ಸ ರಥೋತ್ತಮೇ ॥ ೨೪
ಹಿಮವಾನಿವ ಶೈಲೇಂದ್ರಸ್ತ್ರಿಭಿಃ ಕಾಂಚನಪರ್ವತೈಃ ।
ಅತಿಕಾಯೋಽಪಿ ತೇಜಸ್ವೀ ರಾಕ್ಷಸೇಂದ್ರಸುತಸ್ತದಾ ॥ ೨೫
ಆರುರೋಹ ರಥಶ್ರೇಷ್ಠಂ ಶ್ರೇಷ್ಠಃ ಸರ್ವಧನುಷ್ಮತಾಮ್ ।
ಸುಚಕ್ರಾಕ್ಷಂ ಸುಸಂಯುಕ್ತಂ ಸ್ವನುಕರ್ಷಂ ಸುಕೂಬರಮ್ ॥ ೨೬

---

ನೀಲಮೇಘದಂತಿದ್ದ ಸುದರ್ಶನವೆಂಬ ಆನೆಯನ್ನು ಮಹೋದರನು ಹತ್ತಿ ಕುಳಿತನು (೨೦). ಸಮಸ್ತಾಯುಧಗಳಿಂದಲೂ ಬತ್ತಳಿಕೆಗಳಿಂದಲೂ ಸನ್ನದ್ಧನಾದ ಆ ದೈತ್ಯನು ಸುದರ್ಶನವನ್ನೇರಿ ಕುಳಿತಾಗ, ಅಸ್ತಾದ್ರಿಯನ್ನೇರಿದ ಸೂರ್ಯನಂತೆ ಕಾಣಿಸಿದನು. ರಾವಣಾತ್ಮಜನಾದ ತ್ರಿಶಿರನು ಉತ್ತಮಾಶ್ವಗಳನ್ನು ಹೂಡಿ ಸರ್ವಾಯುಧಗಳಿಂದ ಸಜ್ಜಾಗಿದ್ದ ಒಂದು ಶ್ರೇಷ್ಠ ರಥವನ್ನೇರಿದನು (೨೧-೨೨). ಧನುರ್ಧಾರಿಯಾದ ತ್ರಿಶಿರನು ರಥದಲ್ಲಿ ಕುಳಿತಾಗ, ವಿದ್ಯುದುಲ್ಕೆಗಳಿಂದಲೂ ಇಂದ್ರಚಾಪದಿಂದಲೂ ಯುಕ್ತವಾದ ಮೇಘವು ಗಿರಿಶಿಖರದಲ್ಲಿ ಕಂಗೊಳಿಸುವಂತೆ ಶೋಭಿಸಿದನು. ಮೂರು ಶಿರಸ್ಸುಗಳಲ್ಲಿ ಮೂರು ಕಿರೀಟಗಳನ್ನು ಧರಿಸಿದ್ದ ಆ ರಾಕ್ಷಸನು, ಮೂರು ಕಾಂಚನಶಿಖರಗಳಿಂದ ರಾಜಿಸುವ ಹಿಮಾಲಯದಂತೆ ಕಾಣಿಸುತ್ತಿದ್ದನು (೨೩-೨೪). ರಾಕ್ಷಸೇಂದ್ರತನಯನೂ ಧನುರ್ಧರರಲ್ಲಿ ಅಗ್ರಗಣ್ಯನೂ ಆದ ಅತಿಕಾಯನು ಒಂದು ಉತ್ತಮರಥವನ್ನಾರೋಹಿಸಿದನು. ಆ ರಥದ ಗಾಲಿಗಳೂ ಅಚ್ಚೂ ಬಹಳ ದೃಢವಾಗಿದ್ದವು. ಉತ್ತಮಾಶ್ವಗಳನ್ನು ಹೂಡಲಾಗಿತ್ತು. ಅಚ್ಚಿನಮೇಲಿರುವ ದಾರುಫಲಕವೂ

ತೂಣೀಬಾಣಾಸನೈರ್ದೀಪ್ತಂ ಪ್ರಾಸಾಸಿಪರಿಘಾಕುಲಮ್ ।
ಸ ಕಾಂಚನವಿಚಿತ್ರೇಣ ಮುಕುಟೇನ ವಿರಾಜತಾ ॥ ೨೭

ಭೂಷಣೈಶ್ಚ ಬಭೌ ಮೇರುಃ ಕಿರಣೈರಿವ ಭಾಸ್ವತಃ ।
ಸ ರರಾಜ ರಥೇ ತಸ್ಮಿನ್ ರಾಜಸೂನುರ್ಮಹಾಬಲಃ ॥ ೨೮

ವೃತೋ ನೈರ್ಋತಶಾರ್ದೂಲೈರ್ವಜ್ರಪಾಣಿರಿವಾಮರೈಃ ।
ಹಯಮುಚ್ಚೈಃಶ್ರವಃಪ್ರಖ್ಯಂ ಶ್ವೇತಂ ಕನಕಭೂಷಣಮ್ ॥ ೨೯

ಮನೋಜವಂ ಮಹಾಕಾಯಮಾರುರೋಹ ನರಾಂತಕಃ ।
ಗೃಹೀತ್ವಾ ಪ್ರಾಸಮುಲ್ಕಾಭಂ ವಿರರಾಜ ನರಾಂತಕಃ ॥ ೩೦

ಶಕ್ತಿಮಾದಾಯ ತೇಜಸ್ವೀ ಗುಹಃ ಶಿಖಿಗತೋ ಯಥಾ ।
ದೇವಾಂತಕಃ ಸಮಾದಾಯ ಪರಿಘಂ ವಜ್ರಭೂಷಣಮ್ ॥ ೩೧

ಪರಿಗೃಹ್ಯ ಗಿರಿಂ ದೋರ್ಭ್ಯಾಂ ವಪುರ್ವಿಷ್ಣೋರ್ವಿಡಂಬಯನ್ ।
ಮಹಾಪಾರ್ಶ್ವೋ ಮಹಾಕಾಯೋ ಗದಾಮಾದಾಯ ವೀರ್ಯವಾನ್

---

ಮೂಕಿಯೂ ಪ್ರಬಲವಾಗಿದ್ದವು (೨೫–೨೬). ಬತ್ತಳಿಕೆ, ಬಿಲ್ಲು, ಪ್ರಾಸ, ಕತ್ತಿ, ಪರಿಘ ಮುಂತಾದ ಆಯುಧಗಳನ್ನು ರಥದಲ್ಲಿ ತುಂಬಲಾಗಿತ್ತು. ಸುವರ್ಣಾಲಂಕೃತವಾದ ಕಿರೀಟದಿಂದಲೂ ಕನಕಾಭರಣಗಳಿಂದಲೂ ಭೂಷಿತನಾದ ಅತಿಕಾಯನು ಸೂರ್ಯಕಿರಣಗಳಿಂದ ಶೋಭಿಸುವ ಮೇರುಗಿರಿಯಂತೆ ಕಂಗೊಳಿಸುತ್ತಿದ್ದನು. ರಥದಲ್ಲಿ ಕುಳಿತಿದ್ದ ಬಲಾಢ್ಯನಾದ ಆ ರಾಜಪುತ್ರನು ರಾಕ್ಷಸಭಟರಿಂದ ಪರಿವೃತನಾಗಿ, ವಜ್ರಾಯುಧವನ್ನು ಹಿಡಿದ ದೇವೇಂದ್ರನು ಸುರರಿಂದ ಪರಿವೃತನಾದಂತೆ ಶೋಭಿಸುತ್ತಿದ್ದನು (೨೭–೨೮). ನರಾಂತಕನು ಕನಕಾಲಂಕೃತವೂ ಮನೋವೇಗವುಳ್ಳದ್ದೂ ಮಹಾದೇಹವುಳ್ಳದ್ದೂ ಆಗಿ ಉಚ್ಚೈಃಶ್ರವದಂತೆ ವಿರಾಜಿಸುತ್ತಿದ್ದ ಒಂದು ಶ್ವೇತಾಶ್ವವನ್ನೇರಿದನು. ಉಲ್ಕೆಯಂತೆ ಬೆಳಗುತ್ತಿದ್ದ ಪ್ರಾಸವನ್ನು ಹಿಡಿದ ನರಾಂತಕನು, ಶಕ್ತಿಯನ್ನು ಹಿಡಿದು ಮಯೂರದಮೇಲೆ ಮಂಡಿಸಿದ ತೇಜಸ್ವಿಯಾದ ಷಣ್ಮುಖನಂತೆ ರಾರಾಜಿಸಿದನು (೨೯–೩೦) ವಜ್ರಭೂಷಿತವಾದ ಪರಿಘವನ್ನು ಧರಿಸಿದ ದೇವಾಂತಕನು ಸಮುದ್ರಮಥನಕಾಲದಲ್ಲಿ ಮಂದರಪರ್ವತವನ್ನು ಹಿಡಿದಿದ್ದ ವಿಷ್ಣುವಿನಂತೆ ಕಾಣಿಸುತ್ತಿದ್ದನು (೩೧). ಗದೆಯನ್ನು ಧರಿಸಿ ಹೊರಟ ವೀರನಾದ ಮಹಾಪಾರ್ಶ್ವನು ಗದಾಪಾಣಿ

ವಿರರಾಜ ಗದಾಪಾಣಿಃ ಕುಬೇರ ಇವ ಸಂಯುಗೇ ।
ಪ್ರತಸ್ಥಿರೇ ಮಹಾತ್ಮಾನೋ ಬಲೈರಪ್ರತಿಮೈರ್ವೃತಾಃ ॥ ೩೩

ಸುರಾ ಇವಾಮರಾವತ್ಯಾ ಬಲೈರಪ್ರತಿಮೈರ್ವೃತಾಃ ।
ತಾನ್ ಗಜೈಶ್ಚ ತುರಂಗೈಶ್ಚ ರಥೈಶ್ಚಾಂಬುದನಿಸ್ವನೈಃ ॥ ೩೪

ಅನುಜಗ್ಮುರ್ಮಹಾತ್ಮಾನೋ ರಾಕ್ಷಸಾಃ ಪ್ರವರಾಯುಧಾಃ ।
ತೇ ವಿರೇಜುರ್ಮಹಾತ್ಮಾನಃ ಕುಮಾರಾಃ ಸೂರ್ಯವರ್ಚಸಃ ॥ ೩೫

ಕಿರೀಟಿನಃ ಶ್ರಿಯಾ ಜುಷ್ಟಾ ಗ್ರಹಾ ದೀಪ್ತಾ ಇವಾಂಬರೇ ।
ಪ್ರಗೃಹೀತಾ ಬಭೌ ತೇಷಾಂ ಛತ್ರಾಣಾಮಾವಲಿಃ ಸಿತಾ ॥ ೩೬

ಶಾರದಾಭ್ರಪ್ರತೀಕಾಶಾ ಹಂಸಾವಲಿರಿವಾಂಬರೇ ।
ಮರಣಂ ವಾಪಿ ನಿಶ್ಚಿತ್ಯ ಶತ್ರೂಣಾಂ ವಾ ಪರಾಜಯಮ್ ॥ ೩೭

ಇತಿ ಕೃತ್ವಾ ಮತಿಂ ವೀರಾ ನಿರ್ಜಗ್ಮುಃ ಸಂಯುಗಾರ್ಥಿನಃ ।
ಜಗರ್ಜುಶ್ಚ ಪ್ರಣೇದುಶ್ಚ ಚಿಕ್ಷಿಪುಶ್ಚಾಪಿ ಸಾಯಕಾನ್ ॥ ೩೮

---

ಯಾದ ಕುಬೇರನಂತೆ ರಾಜಿಸಿದನು. ಅಸದೃಶಪರಾಕ್ರಮಿಗಳಾದ ರಾಕ್ಷಸಭಟರಿಂದ ಸಮಾವೃತರಾದ ಆ ಶೂರರು ಅಮರಾವತಿಯಲ್ಲಿರುವ ಸುರಭಟರಿಂದ ಪರಿವೃತರಾದ ದೇವತೆಗಳಂತೆ ಕಂಗೊಳಿಸಿದರು. ಗಜತುರಂಗಮಗಳಿಂದಲೂ ಮೇಘನಿರ್ಘೋಷಗೈಯುತ್ತಿದ್ದ ರಥಗಳಿಂದಲೂ ಯುಕ್ತರಾಗಿ ಅವರು ಹೊರಟರು (೩೨-೩೪). ಉಜ್ಜ್ವಲಾಯುಧಗಳನ್ನು ಹಿಡಿದು ಕಿರೀಟಗಳನ್ನು ಧರಿಸಿ ಸೂರ್ಯವರ್ಚಸ್ವಿಗಳಾಗಿದ್ದ ಆ ರಾಜಕುಮಾರರು ಅಂಬರದಲ್ಲಿ ಪ್ರಜ್ವಲಿಸುವ ಗ್ರಹಗಳಂತೆ ತೋರುತ್ತಿದ್ದರು. ಅವರ ಶಿರೋಭಾಗಗಳಮೇಲೆ ಶೋಭಿಸುತ್ತಿದ್ದ ಶ್ವೇತಚ್ಛತ್ರಗಳ ಸಮೂಹವು, ಶರತ್ಕಾಲದ ಮೋಡದಂತೆಯೂ ಹಂಸಗಳ ಪಂಕ್ತಿಯಂತೆಯೂ ಕಾಣಿಸುತ್ತಿದ್ದಿತು (೩೫-೩೬). ಯುದ್ಧೋತ್ಸುಕರಾದ ಆ ವೀರರು ಸಂಗ್ರಾಮದಲ್ಲಿ ಶತ್ರುಗಳನ್ನು ಪರಾಜಯಗೊಳಿಸಬೇಕು, ಇಲ್ಲವೆ ತಾವೇ ಹತರಾಗಬೇಕು ಎಂದು ನಿರ್ಧರಿಸಿ ರಣಭೂಮಿಗೆ ಪ್ರಯಾಣಮಾಡಿದರು (೩೭). ದರ್ಪೋದ್ಧತರಾದ ಆ ಶೂರರು ಗರ್ಜಿಸಿದರು; ಕೋಲಾಹಲಮಾಡಿದರು; ವೈರಿಗಳನ್ನು ಧಿಕ್ಕರಿಸಿ ಮಾತಾಡಿದರು; ಸರಳುಗಳನ್ನು ಕೈಗೆ ಸೆಳೆದು

ಜಗೃಹುಶ್ಚಾಪಿ ತೇ ವೀರಾ ನಿರ್ಯಾಂತೋ ಯುದ್ಧದುರ್ಮದಾಃ ।
ಕ್ಷ್ವೇಲಿತಾಸ್ಫೋಟನಿನದೈಶ್ಚಚಾಲ ಚ ವಸುಂಧರಾ ॥ ೩೯

ರಕ್ಷಸಾಂ ಸಿಂಹನಾದೈಶ್ಚ ಪುಸ್ಫೋಟೇವ ತದಾಂಬರಮ್ ।
ತೇಽಭಿನಿಷ್ಕ್ರಮ್ಯ ಮುದಿತಾ ರಾಕ್ಷಸೇಂದ್ರಾ ಮಹಾಬಲಾಃ ॥ ೪೦

ದದೃಶುರ್ವಾನರಾನೀಕಂ ಸಮುದ್ಯತಶಿಲಾನಗಮ್ ।
ಹರಯೋಽಪಿ ಮಹಾತ್ಮಾನೋ ದದೃಶುರ್ನೈರ್ಋತಂ ಬಲಮ್ ॥ ೪೧

ಹಸ್ತ್ಯಶ್ವರಥಸಂಬಾಧಂ ಕಿಂಕಿಣೀಶತನಾದಿತಮ್ ।
ನೀಲಜೀಮೂತಸಂಕಾಶಂ ಸಮುದ್ಯತಮಹಾಯುಧಮ್ ॥ ೪೨

ದೀಪ್ತಾನಲರವಿಪ್ರಖ್ಯೈಃ ಸರ್ವತೋ ನೈರ್ಋತೈರ್ವೃತಮ್ ।
ತದ್ದೃಷ್ಟ್ವಾ ಬಲಮಾಯಾಂತಂ ಲಬ್ಧಲಕ್ಷಾಃ ಪ್ಲವಂಗಮಾಃ ॥ ೪೩

ಸಮುದ್ಯತಮಹಾಶೈಲಾಃ ಸಂಪ್ರಣೇದುರ್ಮಹಾಬಲಾಃ ।
ಅಮೃಷ್ಯಮಾಣಾ ರಕ್ಷಾಂಸಿ ಪ್ರತಿನರ್ದಂತಿ ವಾನರಾಃ ॥ ೪೪

---

ಕೊಂಡರು. ಅವರ ಸಮರಘೋಷಗಳಿಂದಲೂ ಸೆಡ್ಡುಹೊಡೆಯುವ ಶಬ್ದಗಳಿಂದಲೂ ರಾಕ್ಷಸಭಟರ ಸಿಂಹನಾದಗಳಿಂದಲೂ ಭೂಮಿಯು ಅಲ್ಲಾಡಿತು, ಗಗನವು ಬಿರಿಯಿತು (೩೮-೩೯). ಬಲಾಢ್ಯರಾದ ಆ ರಾಕ್ಷಸಯೋಧರು ಹರ್ಷೋನ್ಮತ್ತರಾಗಿ ಹೊರಟುಬಂದು, ಬಂಡೆಗಳನ್ನೂ ಮರಗಳನ್ನೂ ಹೊತ್ತುನಿಂತಿದ್ದ ವಾನರಸೇನೆಯನ್ನು ಕಂಡರು. ಧೀರರಾದ ಕಪಿಯೋಧರೂ ರಾಕ್ಷಸಸೇನೆಯನ್ನು ವೀಕ್ಷಿಸಿದರು (೪೦-೪೧). ರಾಕ್ಷಸರ ಪಡೆಯಾದರೋ ಹಸ್ತ್ಯಶ್ವರಥಗಳಿಂದ ಕಿಕ್ಕಿರಿದಿತ್ತು. ಅವುಗಳಿಗೆ ಕಟ್ಟಿದ ಕಿರುಗೆಜ್ಜೆಗಳು ಝಣತ್ಕಾರಮಾಡುತ್ತಿದ್ದವು. ಕಾರ್ಮೋಡದಂತೆ ಸಾಂದ್ರವಾಗಿದ್ದ ರಾಕ್ಷಸಪಡೆಯಲ್ಲಿ ಯೋಧರು ಆಯುಧಗಳನ್ನು ಝಳಪಿಸುತ್ತಿದ್ದರು (೪೨). ರಾಕ್ಷಸಭಟರು ಉರಿಯುವ ಬೆಂಕಿಯಂತೆಯೂ ಸುಡುವ ಸೂರ್ಯನಂತೆಯೂ ಉಗ್ರತೇಜೋಯುಕ್ತರಾಗಿದ್ದರು. ಅಂತಹ ರಾಕ್ಷಸಪಡೆಯು ಬರುತ್ತಿರುವುದನ್ನು ಕಂಡೊಡನೆ, ಯುದ್ಧಾವಸರವು ಒದಗಿತೆಂದು ಕಪಿಯೋಧರು ಶೈಲಗಳನ್ನು ಹೊತ್ತು ಸಜ್ಜಾಗಿ ಗರ್ಜಿಸಲಾರಂಭಿಸಿದರು. ರಾಕ್ಷಸರ ಗರ್ಜನೆಯನ್ನು ಸಹಿಸಲಾರದೆ ಆ ಕಪಿಯೋಧರು ಪ್ರತಿಯಾಗಿ

ತತಃ ಸಮುದ್ಘುಷ್ಟರವಂ ನಿಶಮ್ಯ
　　ರಕ್ಷೋಗಣಾ ವಾನರಯೂಥಪಾನಾಮ್ ।
ಅಮೃಷ್ಯಮಾಣಾಃ ಪರಹರ್ಷಮುಗ್ರಂ
　　ಮಹಾಬಲಾ ಭೀಮತರಂ ವಿನೇದುಃ ॥ ೪೫

ತೇ ರಾಕ್ಷಸಬಲಂ ಘೋರಂ ಪ್ರವಿಶ್ಯ ಹರಿಯೂಥಪಾಃ ।
ವಿಚೇರುರುದ್ಯತೈಃ ಶೈಲೈರ್ನಗಾಃ ಶಿಖರಿಣೋ ಯಥಾ ॥ ೪೬

ಕೇಚಿದಾಕಾಶಮಾವಿಶ್ಯ ಕೇಚಿದುರ್ವ್ಯಾಂ ಪ್ಲವಂಗಮಾಃ ।
ರಕ್ಷಃಸೈನ್ಯೇಷು ಸಂಕ್ರುದ್ಧಾಶ್ಚೇರುರ್ದ್ರುಮಶಿಲಾಯುಧಾಃ ॥ ೪೭

ದ್ರುಮಾಂಶ್ಚ ವಿಪುಲಸ್ಕಂಧಾನ್ ಗೃಹ್ಯ ವಾನರಪುಂಗವಾಃ ।
ತದ್ಯುದ್ಧಮಭವದ್ಘೋರಂ ರಕ್ಷೋವಾನರಸಂಕುಲಮ್ ॥ ೪೮

ತೇ ಪಾದಪಶಿಲಾಶೈಲೈಶ್ಚಕ್ರುರ್ವೃಷ್ಟಿಮನೂಪಮಾಮ್ ।
ಬಾಣೌಘೈರ್ವಾರ್ಯಮಾಣಾಶ್ಚ ಹರಯೋ ಭೀಮವಿಕ್ರಮಾಃ ॥ ೪೯

---

ಸಿಂಹನಾದವಮಾಡಿದರು (೪೩–೪೪). ಕಪಿಯೂಥಪರ ಭೀಷಣಸಿಂಹನಾದವನ್ನು ಕೇಳಿ ಬಲಶಾಲಿಗಳಾದ ರಾಕ್ಷಸಯೋಧರು ವೈರಿಗಳ ಹರ್ಷೋದ್ರೇಕವನ್ನು ಸಹಿಸಲಾರದೆ, ಅವರಿಗಿಂತಲೂ ಭೀಕರವಾಗಿ ಗರ್ಜಿಸಿದರು ! (೪೫). ಅನಂತರ ಕಪಿಯೋಧರು ಬೆಟ್ಟಗಳನ್ನು ಹೊತ್ತು ಘೋರವಾದ ವೈರಿಸೇನೆಯಲ್ಲಿ ನುಗ್ಗಿ, ಶೃಂಗೋನ್ನತಗಳಾದ ಬೆಟ್ಟಗಳಂತೆ ಕಾಣಿಸಿಕೊಳ್ಳುತ್ತ ಹೋರಾಡಲಾರಂಭಿಸಿದರು (೪೬). ಕ್ರುದ್ಧರಾದ ಆ ಸಾಹಸಿಗಳು ತರುಗಳನ್ನೂ ಬಂಡೆಗಳನ್ನೂ ಆಯುಧಗಳಾಗಿ ಉಪಯೋಗಿಸುತ್ತ ಕಾಳಗದಲ್ಲಿ ತೊಡಗಿದರು. ಕೆಲವರು ಅಂಬರವನ್ನಡರಿದರು. ಕೆಲವರು ನೆಲದಲ್ಲಿಯೇ ನಿಂತು ಕೈಮಾಡಿದರು. ದಪ್ಪನಾದ ದಿಂಡುಗಳಿರುವ ಮರಗಳನ್ನು ಹಿಡಿದು ಆ ವಾನರಪುಂಗವರು ಹೋರಾಡಿದರು. ಕಪಿರಾಕ್ಷಸರ ಆ ಕಾಳಗವು ಅತ್ಯುಗ್ರವಾಯಿತು (೪೭–೪೮). ರಾಕ್ಷಸರ ಬಾಣರಾಶಿಗಳು ತಡೆದರೂ ಲೆಕ್ಕಿಸದೆ, ಭೀಮವಿಕ್ರಮರಾದ ವಾನರರು ಅದ್ಭುತವಾಗಿ

ಸಿಂಹನಾದಾನ್ ವಿನೇದುಶ್ಚ ರಣೇ ವಾನರರಾಕ್ಷಸಾಃ ।
ಶಿಲಾಭಿಶ್ಚೂರ್ಣಯಾಮಾಸುರ್ಯಾತುಧಾನಾನ್ ಪ್ಲವಂಗಮಾಃ ॥

ನಿಜಘ್ನುಃ ಸಂಯುಗೇ ಕ್ರುದ್ಧಾಃ ಕವಚಾಭರಣಾವೃತಾನ್ ।
ಕೇಚಿದ್ರಥಗತಾನ್ ವೀರಾನ್ ಗಜವಾಜಿಗತಾನಪಿ ॥ ೩೧

ನಿಜಘ್ನುಃ ಸಹಸಾಪ್ಲುತ್ಯ ಯಾತುಧಾನಾನ್ ಪ್ಲವಂಗಮಾಃ ।
ಶೈಲಶೃಂಗಾಚಿತಾಂಗಾಶ್ಚ ಮುಷ್ಟಿಭಿರ್ವಾಂತಲೋಚನಾಃ ॥ ೩೨

ಚೇಲುಃ ಪೇತುಶ್ಚ ನೇದುಶ್ಚ ತತ್ರ ರಾಕ್ಷಸಪುಂಗವಾಃ ।
ರಾಕ್ಷಸಾಶ್ಚ ಶರೈಸ್ತೀಕ್ಷ್ಣೈರ್ಬಿಭಿದುಃ ಕಪಿಕುಂಜರಾನ್ ॥ ೩೩

ಶೂಲಮುದ್ಗರಖಡ್ಗೈಶ್ಚ ಜಘ್ನುಃ ಪ್ರಾಸೈಶ್ಚ ಶಕ್ತಿಭಿಃ ।
ಅನ್ಯೋನ್ಯಂ ಪಾತಯಾಮಾಸುಃ ಪರಸ್ಪರಜಯೈಷಿಣಃ ॥ ೩೪

ರಿಪುಶೋಣಿತದಿಗ್ಧಾಂಗಾಸ್ತತ್ರ ವಾನರರಾಕ್ಷಸಾಃ ।
ತತಃ ಶೈಲೈಶ್ಚ ಖಡ್ಗೈಶ್ಚ ವಿಸೃಷ್ಟೈರ್ಹರಿರಾಕ್ಷಸೈಃ ॥ ೩೫

---

ವೃಕ್ಷಶಿಲಾಶೈಲಗಳ ಮಳೆಗರೆಯುತ್ತ ಹೋರಾಡಿದರು. ಉಭಯಸೈನ್ಯಗಳೂ ಸಿಂಹನಾದಮಾಡಿದವು. ಕಪಿಯೋಧರು ಕಲ್ಲುದುಂಡಿಗಳನ್ನೆಸೆದು ರಾಕ್ಷಸರನ್ನು ಚಚ್ಚಿದರು (೨೯-೩೦). ಕ್ರೋಧೋದ್ದೀಪಿತರಾದ ಕಪಿಗಳು ರಥಗಳಲ್ಲಿಯೂ ಗಜವಾಜಿಗಳಲ್ಲಿಯೂ ಕವಚಾಭರಣಧಾರಿಗಳಾಗಿ ಕುಳಿತಿದ್ದ ರಾಕ್ಷಸಭಟರನ್ನು ಹಾರಿಹಾರಿ ಆಕ್ರಮಿಸಿ ಹೊಡೆದುರುಳಿಸಿದರು. ಶೈಲಶೃಂಗಗಳಂತಿದ್ದ ಕಪಿಗಳು ಮುಷ್ಟಿಗಳಿಂದ ಗುದ್ದಲು, ರಾಕ್ಷಸಪುಂಗವರ ಕಣ್ಣುಗುಡ್ಡೆಗಳು ಹೊರಬಂದವು (೩೧-೩೨). ಕೆಲವು ರಾಕ್ಷಸರು ತತ್ತರಿಸಿ ತೂಗಾಡಿದರು. ಕೆಲವರು ಕೆಳಗೆ ಬಿದ್ದರು. ಕೆಲವರು ಕಿರಿಚಿಕೊಂಡರು. ಇತ್ತ ರಾಕ್ಷಸವೀರರೂ ಸಹ ತೀಕ್ಷ್ಣಶರಗಳಿಂದಲೂ ಶೂಲ, ಮುದ್ಗರ, ಖಡ್ಗ, ಪ್ರಾಸ, ಶಕ್ತಿಗಳಿಂದಲೂ ಕಪಿಕುಂಜರರನ್ನು ಭೇದಿಸಿ, ಕತ್ತರಿಸಿ, ಕೆತ್ತಿ, ಬಡಿದು, ಜಡಿದರು. ಒಬ್ಬರನ್ನೊಬ್ಬರು ಜಯಿಸಬೇಕೆಂಬ ಅಪೇಕ್ಷೆಯಿಂದ ಕಾದಾಡಿದರು (೩೩-೩೪). ಕಪಿಯೂಥಪರೂ ರಾಕ್ಷಸಭಟರೂ ಶತ್ರುಶೋಣಿತದಿಂದ ದಿಗ್ಧಗಾತ್ರರಾಗಿ ಶೈಲಗಳಿಂದಲೂ ಖಡ್ಗಗಳಿಂದಲೂ

ಮುಹೂರ್ತೇನಾವೃತಾ ಭೂಮಿರಭವಚ್ಛೋಣಿತಾಪ್ಲುತಾ ।
ವಿಕೀರ್ಣಪರ್ವತಾಕಾರೈ ರಕ್ಷೋಭಿರರಿಮರ್ದನೈಃ ॥ ೫೬

ಆಸೀದ್ವಸುಮತೀ ಪೂರ್ಣಾ ತದಾ ಯುದ್ಧಮದಾನ್ವಿತೈಃ ।
ಆಕ್ಷಿಪ್ತಾಃ ಕ್ಷಿಪ್ಯಮಾಣಾಶ್ಚ ಭಗ್ನಶೂಲಾಶ್ಚ ವಾನರೈಃ ॥ ೫೭

ಪುನರಂಗೈಸ್ತಥಾ ಚಕ್ರುರಾಸನ್ನಾ ಯುದ್ಧಮದ್ಭುತಮ್ ।
ವಾನರಾನ್ ವಾನರೈರೇವ ಜಘ್ನುಸ್ತೇ ರಜನೀಚರಾಃ ॥ ೫೮

ರಾಕ್ಷಸಾನ್ ರಾಕ್ಷಸೈರೇವ ಜಘ್ನುಸ್ತೇ ವಾನರಾ ಅಪಿ ।
ಆಕ್ಷಿಪ್ಯ ಚ ಶಿಲಾಸ್ತೇಷಾಂ ನಿಜಘ್ನೂ ರಾಕ್ಷಸಾ ಹರೀನ್ ॥ ೫೯

ತೇಷಾಂ ಚಾಚ್ಛಿದ್ಯ ಶಸ್ತ್ರಾಣಿ ಜಘ್ನೂ ರಕ್ಷಾಂಸಿ ವಾನರಾಃ ।
ನಿಜಘ್ನುಃ ಶೈಲಶೂಲಾಸ್ತ್ರೈರ್ಬಿಭಿದುಶ್ಚ ಪರಸ್ಪರಮ್ ॥ ೬೦

ಸಿಂಹನಾದಾನ್ ವಿನೇದುಶ್ಚ ರಣೇ ವಾನರರಾಕ್ಷಸಾಃ ।
ಛಿನ್ನವರ್ಮತನುತ್ರಾಣಾ ರಾಕ್ಷಸಾ ವಾನರೈರ್ಹತಾಃ ॥ ೬೧

---

ಕಾದಾಡಲಾಗಿ, ಕ್ಷಣಕಾಲದಲ್ಲಿ ರಣಭೂಮಿಯು ರಕ್ತಮಯವಾಯಿತು. ಯುದ್ಧದುರ್ಮದರಾದ ರಾಕ್ಷಸರು ಪರ್ವತಗಳಂತೆ ರಣರಂಗವನ್ನು ವ್ಯಾಪಿಸಿದರು. ವಾನರರು ರಾಕ್ಷಸರನ್ನು ದರದರನೆ ಹಿಡಿದೆಳೆದರು; ತಳ್ಳಿದರು; ಅವರ ಶೂಲಗಳನ್ನು ಮುರಿದೆಸೆದರು (೫೫-೫೭). ರಾಕ್ಷಸ ಭಟರಾದರೋ ಕಪಿಗಳ ಸಮೀಪಕ್ಕೆ ನುಗ್ಗಿ, ಕೈಕಾಲುಗಳಿಂದಲೇ ಗುದ್ದುತ್ತ ಒದೆಯುತ್ತ ಯುದ್ಧವನ್ನು ನಡೆಸಿದರು. ಆ ನಿಶಾಚರರು ಕಪಿಗಳನ್ನು ಹಿಡಿದೆತ್ತಿ ಅವರ ದೇಹಗಳಿಂದಲೇ ಇತರ ಕಪಿಗಳನ್ನು ಬಡಿದರು! ಆಗ ಕಪಿಗಳೂ ಸಹ ರಾಕ್ಷಸರನ್ನು ಹಿಡಿದೆತ್ತಿ ಅವರಿಂದಲೇ ಇತರ ರಾಕ್ಷಸರನ್ನು ಬಡಿಯತೊಡಗಿದರು. ಕಪಿಗಳು ತಂದ ಬಂಡೆಗಳನ್ನು ರಾಕ್ಷಸರು ಕಿತ್ತುಕೊಂಡು ಕಪಿಗಳಮೇಲೆ ಜಡಿದರು (೫೮-೫೯). ವಾನರರು ರಾಕ್ಷಸರ ಆಯುಧಗಳನ್ನು ಕಿತ್ತುಕೊಂಡು ಅವುಗಳಿಂದಲೇ ತಿರುಗಿ ಪ್ರಹರಿಸಿದರು. ಶೈಲಶೂಲಾಸ್ತ್ರಗಳಿಂದ ಒಬ್ಬರನ್ನೊಬ್ಬರು ಅಪ್ಪಳಿಸಿ, ತಿವಿದು, ಕತ್ತರಿಸಿ ಕೆಡಹಿದರು (೬೦). ವೀರಘೋಷಣೆಗಳನ್ನು ಘೋಷಿಸಿ ದರು. ದೇಹವನ್ನು ರಕ್ಷಿಸುವ ಕವಚಗಳು ಹರಿದು ಮುರಿದುಹೋಗುವಂತೆ

ರುಧಿರಂ ಪ್ರಸ್ರುತಾಸ್ತತ್ರ ರಸಸಾರಮಿವ ದ್ರುಮಾಃ ।
ರಥೇನ ಚ ರಥಂ ಚಾಪಿ ವಾರಣೇನೈವ ವಾರಣಮ್ ॥ ೬೨

ಹಯೇನ ಚ ಹಯಂ ಕೇಚಿನ್ನಿಜಘ್ನುರ್ವಾನರಾ ರಣೇ ।
ಪ್ರಹೃಷ್ಟಮನಸಃ ಸರ್ವೇ ಪ್ರಗೃಹೀತಮಹಾಶಿಲಾಃ ॥ ೬೩

ಹರಯೋ ರಾಕ್ಷಸಾನ್ ಜಘ್ನುರ್ದ್ರುಮೈಶ್ಚ ಬಹುಶಾಖಿಭಿಃ ।
ತದ್ಯುದ್ಧಮಭವದ್ಘೋರಂ ರಕ್ಷೋವಾನರಸಂಕುಲಮ್ ॥ ೬೪

ಕ್ಷುರಪ್ರೈರರ್ಧಚಂದ್ರೈಶ್ಚ ಭಲ್ಲೈಶ್ಚ ನಿಶಿತೈಃ ಶರೈಃ ।
ರಾಕ್ಷಸಾ ವಾನರೇಂದ್ರಾಣಾಂ ಚಿಚ್ಛಿದುಃ ಪಾದಪಾನ್ ಶಿಲಾಃ ॥ ೬೫

ವಿಕೀರ್ಣೈಃ ಪರ್ವತಾಗ್ರೈಶ್ಚ ದ್ರುಮೈಶ್ಛಿನ್ನೈಶ್ಚ ಸಂಯುಗೇ ।
ಹತೈಶ್ಚ ಕಪಿರಕ್ಷೋಭಿರ್ದುರ್ಗಮಾ ವಸುಧಾಭವತ್ ॥ ೬೬

ತೇ ವಾನರಾ ಗರ್ವಿತಹೃಷ್ಟಚೇಷ್ಟಾಃ
ಸಂಗ್ರಾಮಮಾಸಾದ್ಯ ಭಯಂ ವಿಮುಚ್ಯ ।
ಯುದ್ಧಂ ತು ಸರ್ವೇ ಸಹ ರಾಕ್ಷಸೈಸ್ತೈ-
ರ್ನಾನಾಯುಧಾಶ್ಚಕ್ರುರದೀನಸತ್ತ್ವಾಃ ॥ ೬೭

---

ರಾಕ್ಷಸರನ್ನು ವಾನರರು ಅಪ್ಪಳಿಸಲು, ಹಸಿಯ ಮರಗಳಿಂದ ರಸವು ಸೋರುವಂತೆ ರಾಕ್ಷಸರ ದೇಹಗಳಿಂದ ನೆತ್ತರು ಬಸಿಯಿತು (೬೧). ಕೆಲವು ಕಪಿವೀರರು ರಥದಿಂದ ರಥವನ್ನೂ ಆನೆಯಿಂದ ಆನೆಯನ್ನೂ ಕುದುರೆಯಿಂದ ಕುದುರೆಯನ್ನೂ ಬಡಿದು ನಾಶಪಡಿಸಿದರು. ಉತ್ಸಾಹಭರಿತರಾಗಿ ದೊಡ್ಡ ದೊಡ್ಡ ಬಂಡೆಗಳನ್ನೂ ಮಹಾವೃಕ್ಷಗಳನ್ನೂ ಬೀಸಿ ಹೊಡೆದು ರಾಕ್ಷಸರನ್ನು ಕೊಂದರು. ಯುದ್ಧವು ಅತ್ಯಂತ ಭೀಕರವಾಯಿತು (೬೨-೬೪). ನಿಶಾಚರರು ಕ್ಷುರಪ್ರ, ಅರ್ಧಚಂದ್ರ, ಭಲ್ಲೆ, ಬಾಣಗಳನ್ನು ಪ್ರಯೋಗಿಸಿ ವಾನರೇಂದ್ರರು ಬೀಸುವ ಮರಗಳನ್ನೂ ಶಿಲೆಗಳನ್ನೂ ತುಂಡರಿಸುತ್ತಿದ್ದರು. ಆ ರಣಭೂಮಿಯಲ್ಲಿ ಎಲ್ಲಿ ನೋಡಿದರೂ ಮುರಿದುಬಿದ್ದ ಪರ್ವತಶಿಖರಗಳು! ಕತ್ತರಿಸಲ್ಪಟ್ಟ ಮರಗಳು! ಸತ್ತುಬಿದ್ದ ಕಪಿರಾಕ್ಷಸರು! ಎಲ್ಲಿಯೂ ಕಾಲಿಡಲು ತೆರವಿಲ್ಲದಂತೆ ಆಯಿತು (೬೫-೬೬). ಸಮಸ್ತ ಕಪಿಯೋಧರೂ ಸಂಗ್ರಾಮಭೂಮಿಯಲ್ಲಿ ನಿರ್ಭೀತಿಯಿಂದ ದರ್ಪೋದ್ಧತರಾಗಿ ಸಂಚರಿಸುತ್ತ

ತಸ್ಮಿನ್ ಪ್ರವೃತ್ತೇ ತುಮುಲೇ ವಿಮರ್ದೇ
ಪ್ರಹೃಷ್ಯಮಾಣೇಷು ವಲೀಮುಖೇಷು ।
ನಿಪಾತ್ಯಮಾನೇಷು ಚ ರಾಕ್ಷಸೇಷು
ಮಹರ್ಷಯೋ ದೇವಗಣಾಶ್ಚ ನೇದುಃ ॥ ೬೮

ತತೋ ಹಯಂ ಮಾರುತತುಲ್ಯವೇಗ-
ಮಾರುಹ್ಯ ಶಕ್ತಿಂ ನಿಶಿತಾಂ ಪ್ರಗೃಹ್ಯ ।
ನರಾಂತಕೋ ವಾನರರಾಜಸೈನ್ಯಂ
ಮಹಾರ್ಣವಂ ಮೀನ ಇವಾವಿವೇಶ ॥ ೬೯

ಸ ವಾನರಾನ್ ಸಪ್ತಶತಾನಿ ವೀರಃ
ಪ್ರಾಸೇನ ದೀಪ್ತೇನ ವಿನಿರ್ಬಿಭೇದ ।
ಏಕಕ್ಷಣೇನೇಂದ್ರರಿಪುರ್ಮಹಾತ್ಮಾ
ಜಘಾನ ಸೈನ್ಯಂ ಹರಿಪುಂಗವಾನಾಮ್ ॥ ೭೦

ದದೃಶುಶ್ಚ ಮಹಾತ್ಮಾನಂ ಹಯಪೃಷ್ಠೇ ಪ್ರತಿಷ್ಠಿತಮ್ ।
ಚರಂತಂ ಹರಿಸೈನ್ಯೇಷು ವಿದ್ಯಾಧರಮಹರ್ಷಯಃ ॥ ೭೧

---

ರಾಕ್ಷಸರೊಡನೆ ಕಾಳಗದಲ್ಲಿ ತೊಡಗಿದರು. ಆ ತುಮುಲಯುದ್ಧದಲ್ಲಿ ವಾನರರ ಕೈಮೇಲಾಗಿ ರಾಕ್ಷಸರು ಹತರಾಗಿ ಬೀಳತೊಡಗಲು, ಮಹರ್ಷಿಗಳೂ ದೇವತೆಗಳೂ ಹರ್ಷಧ್ವನಿಗೈದರು (೬೭-೬೮). ಅಷ್ಟರಲ್ಲಿ ನರಾಂತಕನು ವಾಯುವೇಗದ ಅಶ್ವವನ್ನೇರಿ ಪ್ರಾಸವೆಂಬ ನಿಶಿತವಾದ ಶಕ್ತ್ಯಾಯುಧವನ್ನು ಹಿಡಿದು, ಮಹಾತಿಮಿಂಗಿಲವು ಸಮುದ್ರದಲ್ಲಿ ನುಗ್ಗಿ ಹೋಗುವಂತೆ, ಸುಗ್ರೀವನ ಸೇನೆಯಲ್ಲಿ ನುಗ್ಗಿದನು (೬೯). ಅತ್ಯಂತ ಶೂರನಾದ ಆ ನರಾಂತಕನು ದೀಪ್ತವಾದ ತನ್ನ ಪ್ರಾಸಾಯುಧದಿಂದ ಒಂದು ಕ್ಷಣದಲ್ಲಿ ಏಳುನೂರು ಕಪಿಯೋಧರನ್ನು ಕೊಂದುಹಾಕಿದನು. ಹೀಗೆ ಕಪಿಸೇನೆಯನ್ನು ನರಾಂತಕನು ನಾಶಮಾಡಲಾರಂಭಿಸಿದನು (೭೦). ಧೀರನಾದ ಆ ನರಾಂತಕನು ಕುದುರೆಯ ಬೆನ್ನಿನಮೇಲೆ ಕುಳಿತು ಕಪಿಸೇನಾ ಮಧ್ಯದಲ್ಲಿ ಸಂಚರಿಸುವುದನ್ನು ವಿದ್ಯಾಧರರೂ ಮಹರ್ಷಿಗಳೂ ಬೆರಗಾಗಿ

ಸ ತಸ್ಯ ದದೃಶೇ ಮಾರ್ಗೋ ಮಾಂಸಶೋಣಿತಕರ್ದಮಃ ।
ಪತಿತೈಃ ಪರ್ವತಾಕಾರೈರ್ವಾನರೈರಭಿಸಂವೃತಃ ॥ ೬೨

ಯಾವದ್ವಿಕ್ರಮಿತುಂ ಬುದ್ಧಿಂ ಚಕ್ರುಃ ಪ್ಲವಗಪುಂಗವಾಃ ।
ತಾವದೇತಾನತಿಕ್ರಮ್ಯ ನಿರ್ಬಿಭೇದ ನರಾಂತಕಃ ॥ ೬೩

ಜ್ವಲಂತಂ ಪ್ರಾಸಮುದ್ಯಮ್ಯ ಸಂಗ್ರಾಮಾಗ್ರೇ ನರಾಂತಕಃ ।
ದದಾಹ ಹರಿಸೈನ್ಯಾನಿ ವನಾನೀವ ವಿಭಾವಸುಃ ॥ ೬೪

ಯಾವದುತ್ಪಾಟಯಾಮಾಸುರ್ವೃಕ್ಷಾನ್ ಶೈಲಾನ್ ವನೌಕಸಃ ।
ತಾವತ್ ಪ್ರಾಸಹತಾಃ ಪೇತುರ್ವಜ್ರಕೃತ್ತಾ ಇವಾಚಲಾಃ ॥ ೬೫

ದಿಕ್ಷು ಸರ್ವಾಸು ಬಲವಾನ್ ವಿಚಚಾರ ನರಾಂತಕಃ ।
ಪ್ರಮೃದ್ನನ್ ಸರ್ವತೋ ಯುದ್ಧೇ ಪ್ರಾವೃಟ್ಕಾಲೇ ಯಥಾನಿಲಃ ॥

ನ ಶೇಕುರ್ಧಾವಿತುಂ ವೀರಾ ನ ಸ್ಥಾತುಂ ಸ್ಪಂದಿತುಂ ಭಯಾತ್ ।
ಉತ್ಪತಂತಂ ಸ್ಥಿತಂ ಯಾಂತಂ ಸರ್ವಾನ್ ವಿವ್ಯಾಧ ವೀರ್ಯವಾನ್॥

ನೋಡುತ್ತಿದ್ದರು. ಅವನು ನುಗ್ಗಿಹೋಗುತ್ತಿದ್ದ ದಾರಿಯು ರಕ್ತಮಾಂಸ ಗಳಿಂದ ಕೊಚ್ಚೆಯಾಗಿ, ಹತರಾದ ವಾನರರಿಂದ ನಿಬಿಡವಾಗುತ್ತಿದ್ದಿತು (೬೧-೬೨). ಕಪಿಯೂಥಪರು ತಮ್ಮ ಪರಾಕ್ರಮವನ್ನು ಮೆರೆಸಬೇಕೆಂದು ಸಂಕಲ್ಪಿಸುವಷ್ಟರಲ್ಲಿಯೇ ನರಾಂತಕನು ಅವರನ್ನು ಆಕ್ರಮಿಸಿ ಕೊಂದು ಬಿಡುತ್ತಿದ್ದನು. ಆ ರಣರಂಗದಲ್ಲಿ ನರಾಂತಕನು ಥಳಥಳಿಸುತ್ತಿದ್ದ ಪ್ರಾಸ ವನ್ನು ಬೀಸಿ, ಕಾಳ್ಗಿಚ್ಚು ಅಡವಿಯನ್ನು ಸುಡುವಂತೆ ಕಪಿಸೇನೆಯನ್ನು ಉರುಬಿದನು (೬೩-೬೪). ಕಪಿಯೋಧರು ವೃಕ್ಷಗಳನ್ನೂ ಶೈಲಗಳನ್ನೂ ಕೀಳುತ್ತಿರುವಾಗಲೇ ಆ ರಾಕ್ಷಸನ ಪ್ರಾಸದಿಂದ ಹತರಾಗಿ, ವಜ್ರಾಯುಧ ದಿಂದ ಕತ್ತರಿಸಲ್ಪಟ್ಟ ಬೆಟ್ಟಗಳಂತೆ ದೊಪ್ಪನೆ ಉರುಳಿಬೀಳುತ್ತಿದ್ದರು. ಬಲಶಾಲಿಯಾದ ಆ ನರಾಂತಕನು ಮಳೆಗಾಲದ ಬಿರುಗಾಳಿಯಂತೆ, ರಣರಂಗದ ನಿಖಿಲಪ್ರದೇಶಗಳಲ್ಲಿಯೂ ಮಹಾವೇಗದಿಂದ ಸುತ್ತುತ್ತ ತನ್ನ ಶೌರ್ಯವನ್ನು ಮೆರೆಸಿದನು (೬೫-೬೬). ಭೀತರಾದ ವಾನರವೀರರಿಗೆ ತಾವೀಗ ಓಡಿಹೋಗಬೇಕೆ, ಸುಮ್ಮನೆ ನಿಂತಿರಬೇಕೆ, ದಾರಿ ಬಿಟ್ಟು ಪಕ್ಕಕ್ಕೆ ಸರಿಯಬೇಕೆ?–ಎಂಬುದೊಂದೂ ತಿಳಿಯದಾಯಿತು! ಓಡಿದರೂ ನಿಂತರೂ

ಏಕೇನಾಂತಕಕಲ್ಪೇನ ಪ್ರಾಸೇನಾದಿತ್ಯತೇಜಸಾ ।
ಭಿನ್ನಾನಿ ಹರಿಸೈನ್ಯಾನಿ ನಿಪೇತುರ್ಧರಣೀತಲೇ ॥ ೭೮

ವಜ್ರನಿಷ್ಪೇಷಸದೃಶಂ ಪ್ರಾಸಸ್ಯಾಭಿನಿಪಾತನಮ್ ।
ನ ಶೇಕುರ್ವಾನರಾಃ ಸೋಢುಂ ತೇ ವಿನೇದುರ್ಮಹಾಸ್ವನಮ್ ॥ ೭೯

ಪತತಾಂ ಹರಿವೀರಾಣಾಂ ರೂಪಾಣಿ ಪ್ರಚಕಾಶಿರೇ ।
ವಜ್ರಭಿನ್ನಾಗ್ರಕೂಟಾನಾಂ ಶೈಲಾನಾಂ ಪತತಾಮಿವ ॥ ೮೦

ಯೇ ತು ಪೂರ್ವಂ ಮಹಾತ್ಮಾನಃ ಕುಂಭಕರ್ಣೇನ ಪಾತಿತಾಃ ।
ತೇ ಸ್ವಸ್ಥಾ ವಾನರಶ್ರೇಷ್ಠಾಃ ಸುಗ್ರೀವಮುಪತಸ್ಥಿರೇ ॥ ೮೧

ವಿಪ್ರೇಕ್ಷಮಾಣಃ ಸುಗ್ರೀವೋ ದದರ್ಶ ಹರಿವಾಹಿನೀಮ್ ।
ನರಾಂತಕಭಯತ್ರಸ್ತಾಂ ವಿದ್ರವಂತೀಮಿತಸ್ತತಃ ॥ ೮೨

ವಿದ್ರುತಾಂ ವಾಹಿನೀಂ ದೃಷ್ಟ್ವಾ ಸ ದದರ್ಶ ನರಾಂತಕಮ್ ।
ಗೃಹೀತಪ್ರಾಸಮಾಯಾಂತಂ ಹಯಪೃಷ್ಠೇ ಪ್ರತಿಷ್ಠಿತಮ್ ॥ ೮೩

---

ಸರಿದರೂ, ಸಕಲರನ್ನೂ ನರಾಂತಕನು ಹೊಡೆದುರುಳಿಸುತ್ತಿದ್ದನು ! (೭೭). ಕಾಲಾಂತಕನಂತಿದ್ದ ನರಾಂತಕನು ಸೂರ್ಯನಂತೆ ಮಿರುಮಿರುಗುವ ಪ್ರಾಸಾಯುಧದಿಂದ ಪ್ರಹರಿಸುತ್ತಿರಲು, ಕಪಿಸೈನಿಕರು ಛಿನ್ನವಿಚ್ಛಿನ್ನರಾಗಿ ಉರುಳಿದರು. ಸಿಡಿಲಿನ ಬಡಿತದಂತಿದ್ದ ಪ್ರಾಸದ ಹೊಡೆತವನ್ನು ತಡೆದು ಕೊಳ್ಳಲಾರದೆ, ಕಪಿಗಳು ಗಟ್ಟಿಯಾಗಿ ಅರಚಿಕೊಳ್ಳುತ್ತಿದ್ದರು (೭೮-೭೯). ಇಂದ್ರನು ವಜ್ರಾಯುಧದಿಂದ ಗಿರಿಗಳನ್ನಪ್ಪಳಿಸಲು ಶಿಖರಗಳು ಮುರಿದು ಗಿರಿಗಳುರುಳುವಂತೆ, ನರಾಂತಕನು ಪ್ರಾಸದಿಂದ ಬಡಿಯಲು ತಲೆಯೊಡೆದು ಕಪಿಯೋಧರು ಬೀಳುತ್ತಿದ್ದರು (೮೦). ಆ ಸಮಯದಲ್ಲಿ, ಹಿಂದೆ ಕುಂಭಕರ್ಣನಿಂದ ಅಭಿಹತರಾಗಿ ಪೆಟ್ಟುತಿಂದಿದ್ದ ವಾನರಯೂಥಪರು ಚೇತರಿಸಿಕೊಂಡು ಸ್ವಸ್ಥರಾಗಿ, ಸುಗ್ರೀವನ ಬಳಿಯಲ್ಲಿ ಉಪಸ್ಥಿತರಾದರು. ನರಾಂತಕನ ಭಯದಿಂದ ಚದರಿ ಓಡುತ್ತಿದ್ದ ಕಪಿವಾಹಿನಿಯನ್ನು ಸುಗ್ರೀವನು ಪರಿಶೀಲಿಸಿದನು (೮೧-೮೨). ಅಷ್ಟರಲ್ಲಿ ನರಾಂತಕನು ಅಶ್ವಾರೂಢನಾಗಿ ಪ್ರಾಸಾಯುಧವನ್ನು ಧರಿಸಿ ಕಪಿಸೇನೆಯನ್ನು ಅಟ್ಟಿಸಿಕೊಂಡು ಬರುವುದು

ಅಥೋವಾಚ ಮಹಾತೇಜಾಃ ಸುಗ್ರೀವೋ ವಾನರಾಧಿಪಃ ।
ಕುಮಾರಮಂಗದಂ ವೀರಂ ಶಕ್ರತುಲ್ಯಪರಾಕ್ರಮಮ್ ॥ ೮೪

ಗಚ್ಛ ತ್ವಂ ರಾಕ್ಷಸಂ ವೀರಂ ಯೋಽಸೌ ತುರಗಮಾಸ್ಥಿತಃ ।
ಕ್ಷೋಭಯಂತಂ ಹರಿಬಲಂ ಕ್ಷಿಪ್ರಂ ಪ್ರಾಣೈರ್ವಿಯೋಜಯ ॥ ೮೫

ಸ ಭರ್ತುರ್ವಚನಂ ಶ್ರುತ್ವಾ ನಿಷ್ಪಪಾತಾಂಗದಸ್ತತಃ ।
ಅನೀಕಾನ್ಮೇಘಸಂಕಾಶಾನ್ಮೇಘಾನೀಕಾದಿವಾಂಶುಮಾನ್ ॥ ೮೬

ಶೈಲಸಂಘಾತಸಂಕಾಶೋ ಹರೀಣಾಮುತ್ತಮೋಽಂಗದಃ ।
ರರಾಜಾಂಗದಸಂನದ್ಧಃ ಸಧಾತುರಿವ ಪರ್ವತಃ ॥ ೮೭

ನಿರಾಯುಧೋ ಮಹಾತೇಜಾಃ ಕೇವಲಂ ನಖದಂಷ್ಟ್ರವಾನ್ ।
ನರಾಂತಕಮಭಿಕ್ರಮ್ಯ ವಾಲಿಪುತ್ರೋಽಬ್ರವೀದ್ವಚಃ ॥ ೮೮

ತಿಷ್ಠ ಕಿಂ ಪ್ರಾಕೃತೈರೇಭಿರ್ಹರಿಭಿಸ್ತ್ವಂ ಕರಿಷ್ಯಸಿ ।
ಅಸ್ಮಿನ್ ವಜ್ರಸಮಸ್ಪರ್ಶಂ ಪ್ರಾಸಂ ಕ್ಷಿಪ ಮಮೋರಸಿ ॥ ೮೯

---

ಸುಗ್ರೀವನಿಗೆ ಗೋಚರಿಸಿತು. ಆಗ ವಾನರೇಂದ್ರನು ಇಂದ್ರತುಲ್ಯ ಪರಾಕ್ರಮಿಯಾದ ಅಂಗದಕುಮಾರನನ್ನು ನೋಡಿ “ವತ್ಸ–ಅಂಗದ, ಅಲ್ಲಿ ನೋಡು. ಒಬ್ಬ ರಾಕ್ಷಸವೀರನು ಅಶ್ವಾರೂಢನಾಗಿ ನಮ್ಮ ಸೇನೆಯನ್ನು ಕ್ಷೋಭೆಗೊಳಿಸುತ್ತಿದ್ದಾನೆ. ಬೇಗನೆ ಅವನನ್ನು ಸಂಹರಿಸು!” ಎಂದನು (೮೪–೮೫). ರಾಜಾಜ್ಞೆಯನ್ನು ಕೇಳಿದೊಡನೆ ಅಂಗದನು, ಮೇಘಪಂಕ್ತಿಯನ್ನು ಭೇದಿಸಿ ಆದಿತ್ಯನು ಹೊರಬರುವಂತೆ ಮೇಘಪಂಕ್ತಿಯಂತಿದ್ದ ಸೇನೆಯನ್ನು ತೂರಿ, ಥಂಗನೆ ಹೊರಬಂದನು! ಸಾಂದ್ರವಾದ ಪರ್ವತದಂತೆ ಬಿಗಿಯಾದ ಮೈಕಟ್ಟಿನಿಂದ ವಿರಾಜಿಸುತ್ತ ಚಿನ್ನದ ತೋಳ್ಬಳೆಗಳನ್ನು ತೊಟ್ಟಿದ್ದ ಆ ವಾನರೋತ್ತಮನು, ಧಾತುಮಂಡಿತವಾದ ಶೈಲದಂತೆಯೇ ಕಾಣಿಸಿದನು! (೮೬–೮೭). ಮಹಾತೇಜಸ್ವಿಯಾದ ಅಂಗದನ ಕೈಯಲ್ಲಿ ಯಾವ ಆಯುಧವೂ ಇರಲಿಲ್ಲ. ನಖದಂಷ್ಟ್ರಗಳೇ ತನ್ನ ಆಯುಧಗಳೆಂದು ಅವನು ಗಣಿಸಿದ್ದನು. ಆ ವಾಲಿತನಯನು ನೇರವಾಗಿ ನರಾಂತಕನ ಎದುರಿಗೆ ಹೋಗಿ ನಿಂತು “ಎಲೈ ರಾಕ್ಷಸ, ನಿಲ್ಲು ನಿಲ್ಲು! ಸಾಮಾನ್ಯರಾದ ಈ ಕಪಿಗಳೊಡನೆ ಏನು ಮಾಡುವೆ? ಸಿಡಿಲಿಗೆ ಸಮವೆಂದು ತಿಳಿದಿರುವ

ಅಂಗದಸ್ಯ ವಚಃ ಶ್ರುತ್ವಾ ಪ್ರಚುಕ್ರೋಧ ನರಾಂತಕಃ ।
ಸಂದಶ್ಯ ದಶನೈರೋಷ್ಠಂ ವಿನಿಃಶ್ವಸ್ಯ ಭುಜಂಗವತ್ ॥ ೯೦

ಅಭಿಗಮ್ಯಾಂಗದಂ ಕ್ರುದ್ಧೋ ವಾಲಿಪುತ್ರಂ ನರಾಂತಕಃ ॥

ಪ್ರಾಸಂ ಸಮಾವಿಧ್ಯ ತದಾಂಗದಾಯ
ಸಮುಜ್ಜ್ವಲಂತಂ ಸಹಸೋತ್ಸಸರ್ಜ ।
ಸ ವಾಲಿಪುತ್ರೋರಸಿ ವಜ್ರಕಲ್ಪೇ
ಬಭೂವ ಭಗ್ನೋ ನ್ಯಪತಚ್ಚ ಭೂಮೌ ॥ ೯೧

ತಂ ಪ್ರಾಸಮಾಲೋಕ್ಯ ತದಾ ವಿಭಗ್ನಂ
ಸುಪರ್ಣಕೃತ್ತೋರಗಭೋಗಕಲ್ಪಮ್ ।
ತಲಂ ಸಮುದ್ಯಮ್ಯ ಸ ವಾಲಿಪುತ್ರ-
ಸ್ತುರಂಗಮಂ ತಸ್ಯ ಜಘಾನ ಮೂರ್ಧ್ನಿ ॥ ೯೨

ನಿಭಗ್ನತಾಲುಃ ಸ್ಫುಟಿತಾಕ್ಷಿತಾರೋ
ನಿಷ್ಕ್ರಾಂತಜಿಹ್ವೋಽಚಲಸಂನಿಕಾಶಃ ।
ಸ ತಸ್ಯ ವಾಜೀ ನಿಪಪಾತ ಭೂಮೌ
ತಲಪ್ರಹಾರೇಣ ವಿಶೀರ್ಣಮೂರ್ಧಾ ॥ ೯೩

---

ನಿನ್ನ ಪ್ರಾಸಾಯುಧದಿಂದ ನನ್ನ ವಕ್ಷಸ್ಥಳವನ್ನು ಅಪ್ಪಳಿಸು, ನೋಡೋಣ !" ಎಂದು ನುಡಿದನು (೮೮-೮೯). ಅಂಗದನ ಮಾತನ್ನು ಕೇಳಿ ನರಾಂತಕನು ಕಿಡಿಕಿಡಿಯಾದನು. ಅವನು ಸಿಟ್ಟಿನಿಂದ ಸರ್ಪದಂತೆ ನಿಡುಸುಯ್ದು, ಅವಡುಗಚ್ಚಿ ಮುಂದೆ ಬಂದು, ಪ್ರಾಸವನ್ನು ಗಿರ್ರನೆ ತಿರುಗಿಸಿ, ವಾಲಿಪುತ್ರನ ವಜ್ರಸದೃಶವಾದ ವಕ್ಷಸ್ಥಳದಮೇಲೆ ಬಡಿದನು. ಪ್ರಾಸವು ಮುರಿದು ಕೆಳಗೆ ಬಿದ್ದಿತು ! (೯೦-೯೧). ಗರುಡನಿಂದ ತುಂಡು ತುಂಡಾಗಿ ಕತ್ತರಿಸಲ್ಪಟ್ಟ ಮಹಾಸರ್ಪದ ದೇಹದಂತೆ ತುಂಡರಿಸಲ್ಪಟ್ಟ ಪ್ರಾಸಾಯುಧವನ್ನು ನೋಡಿ, ಅಂಗದನು ಅಂಗೈಯನ್ನೆತ್ತಿ ನರಾಂತಕನ ಕುದುರೆಯ ತಲೆಯನ್ನಪ್ಪಳಿಸಿ ಹೊಡೆದನು (೯೨). ಅಂಗದನ ಪ್ರಹಾರ ದಿಂದ ಪರ್ವತಾಕಾರವಾಗಿದ್ದ ಆ ಕುದುರೆಯ ತಲೆಯೊಡೆಯಿತು. ಅದರ

ನರಾಂತಕಃ ಕ್ರೋಧವಶಂ ಜಗಾಮ
ಹತಂ ತುರಂಗಂ ಪತಿತಂ ನಿರೀಕ್ಷ್ಯ ।
ಸ ಮುಷ್ಟಿಮುದ್ಯಮ್ಯ ಮಹಾಪ್ರಭಾವೋ
ಜಘಾನ ಶೀರ್ಷೇ ಯುಧಿ ವಾಲಿಪುತ್ರಮ್ ॥ ೯೪

ಅಥಾಂಗದೋ ಮುಷ್ಟಿವಿಭಿನ್ನಮೂರ್ಧಾ
ಸುಸ್ರಾವ ತೀವ್ರಂ ರುಧಿರಂ ಭೃಶೋಷ್ಣಮ್ ।
ಮುಹುರ್ವಿಜಜ್ವಾಲ ಮುಮೋಹ ಚಾಪಿ
ಸಂಜ್ಞಾಂ ಸಮಾಸಾದ್ಯ ವಿಸಿಷ್ಮಿಯೇ ಚ ॥ ೯೫

ಅಥಾಂಗದೋ ವಜ್ರಸಮಾನವೇಗಂ
ಸಂವರ್ತ್ಯ ಮುಷ್ಟಿಂ ಗಿರಿಶೃಂಗಕಲ್ಪಮ್ ।
ನಿಪಾತಯಾಮಾಸ ತದಾ ಮಹಾತ್ಮಾ
ನರಾಂತಕಸ್ಯೋರಸಿ ವಾಲಿಪುತ್ರಃ ॥ ೯೬

ಸ ಮುಷ್ಟಿನಿಷ್ಪಿಷ್ಟವಿಭಿನ್ನವಕ್ಷಾ
ಜ್ವಾಲಾವಮಚ್ಛೋಣಿತದಿಗ್ಧಗಾತ್ರಃ ।

---

ತಾಳಿಗೆಯು* ಜಜ್ಜಲ್ಪಟ್ಟಿತು. ಕಣ್ಣುಗುಡ್ಡೆಗಳು ಹೊರಬಂದವು. ನಾಲಗೆಯು ಸುಲಿಯಿತು. ಕುದುರೆಯು ಸತ್ತುಬಿದ್ದಿತು (೯೩). ತನ್ನ ಅಶ್ವವು ಹತವಾಗಿ ಬಿದ್ದುದನ್ನು ನೋಡಿ ನರಾಂತಕನು ಸಿಟ್ಟಿನಿಂದ ಕೆಂಡವಾದನು. ಆ ಸಾಹಸಿಯು ಮುಷ್ಟಿಯನ್ನೆತ್ತಿ ಅಂಗದನ ತಲೆಯನ್ನು ಗುದ್ದಿದನು. ಅಭಿಹತವಾದ ಅಂಗದನ ಶಿರಸ್ಸಿನಿಂದ ಬಿಸಿನೆತ್ತರು ಚಿಮ್ಮಿತು. ಅಂಗದನು ಕೆರಳಿದನು. ಹಾಗೆಯೇ ಬಸವಳಿದನು. ತುಸುಹೊತ್ತಿನಲ್ಲಿ ಮತ್ತೆ ಚೇತರಿಸಿಕೊಂಡು, ನರಾಂತಕನ ಸಾಮರ್ಥ್ಯವನ್ನು ಕಂಡು ಬೆರಗಾದನು (೯೪-೯೫). ಅನಂತರ ಆ ವಾಲಿತನಯನು ಗಿರಿಶೃಂಗದೋಪಾದಿಯಲ್ಲಿ ಮುಷ್ಟಿಯನ್ನು ಬಿಗಿದು, ನರಾಂತಕನ ಎದೆಯಮೇಲೆ ಸಿಡಿಲೆರಗುವಂತೆ ರಭಸದಿಂದ ಬಲವಾಗಿ ಗುದ್ದಿದನು. ನರಾಂತಕನ ಎದೆಯು ಜರ್ಝರಿತವಾಯಿತು. ಅಗ್ನಿಜ್ವಾಲೆಯಂತೆ ಜಿಲ್ಲೆಂದು ಸಿಡಿದ ರಕ್ತದಿಂದ

---

* ತಾಳಿಗೆ = ತಾಲು, ಅಂಗಳು (Palate).

ನರಾಂತಕೋ ಭೂಮಿತಲೇ ಪಪಾತ
ಯಥಾಚಲೋ ವಜ್ರನಿಪಾತಭಗ್ನಃ ॥ ೯೭

ಅಥಾಂತರಿಕ್ಷೇ ತ್ರಿದಶೋತ್ತಮಾನಾಂ
ವನೌಕಸಾಂ ಚೈವ ಮಹಾಪ್ರಣಾದಃ ।
ಬಭೂವ ತಸ್ಮಿನ್ನಿಹತೇಽಗ್ರ್ಯವೀರೇ
ನರಾಂತಕೇ ವಾಲಿಸುತೇನ ಸಂಖ್ಯೇ ॥ ೯೮

ಅಥಾಂಗದೋ ರಾಮಮನಃಪ್ರಹರ್ಷಣಂ
ಸುದುಷ್ಕರಂ ತತ್ ಕೃತವಾನ್ ಹಿ ವಿಕ್ರಮಮ್ ।
ವಿಸಿಸ್ಮಿಯೇ ಸೋಽಪ್ಯತಿವೀರ್ಯವಿಕ್ರಮಃ
ಪುನಶ್ಚ ಯುದ್ಧೇ ಸ ಬಭೂವ ಹರ್ಷಿತಃ ॥ ೯೯

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಸಪ್ತತಿತಮಃ ಸರ್ಗಃ



ಆತನು ತೊಯ್ದು ಹೋದನು. ವಜ್ರಾಯುಧದ ಹೊಡೆತದಿಂದ ಉರುಳುವ ಪರ್ವತದಂತೆ, ನರಾಂತಕನು ಹತನಾಗಿ ಭೂತಳದಲ್ಲಿ ಬಿದ್ದನು (೯೬–೯೭). ಈ ರೀತಿಯಲ್ಲಿ ಮಹಾಶೂರನಾದ ನರಾಂತಕನು ಸಂಗ್ರಾಮದಲ್ಲಿ ವಾಲಿಸುತನಿಂದ ಹತನಾಗಲು, ಆಕಾಶದಲ್ಲಿ ಅಮರರು ಆನಂದದಿಂದ ಕೋಲಾಹಲ ಮಾಡಿದರು. ವಾನರರೂ ಹರ್ಷದಿಂದ ಕೂಗಾಡಿದರು (೯೮). ಈ ಪ್ರಕಾರವಾಗಿ ಅಂಗದನು ಶ್ರೀರಾಮನಿಗೆ ಸಂಪ್ರೀತಿಕರವಾಗಿಯೂ ಅನ್ಯದುಷ್ಕರವಾಗಿಯೂ ಇದ್ದ ವಿಕ್ರಮಕಾರ್ಯವನ್ನೆಸಗಿದನು. ಅಸದೃಶ ಪರಾಕ್ರಮಿಯಾದ ಶ್ರೀರಾಮನೂ ಸಹ ಅಂಗದನ ಪರಾಕ್ರಮವನ್ನು ಕಂಡು ಆಶ್ಚರ್ಯಚಕಿತನಾದನು. ಅಂಗದನು ಉತ್ಸಾಹದಿಂದ ಮತ್ತೆ ಯುದ್ಧಸನ್ನದ್ಧನಾದನು! (೯೯).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಅರುವತ್ತೊಂಬತ್ತನೆಯ ಸರ್ಗ



## ಸಪ್ತತಿತಮಃ ಸರ್ಗಃ

### ದೇವಾಂತಕಾದಿವಧಃ

ನರಾಂತಕಂ ಹತಂ ದೃಷ್ಟ್ವಾ ಚುಕ್ರುಶುರ್ನೈಋರ್ತರ್ಷಭಾಃ ।
ದೇವಾಂತಕಸ್ತ್ರಿಮೂರ್ಧಾ ಚ ಪೌಲಸ್ತ್ಯಶ್ಚ ಮಹೋದರಃ ॥ ೧

ಆರೂಢೋ ಮೇಘಸಂಕಾಶಂ ವಾರಣೇಂದ್ರಂ ಮಹೋದರಃ ।
ವಾಲಿಪುತ್ರಂ ಮಹಾವೀರ್ಯಮಭಿದುದ್ರಾವ ವೀರ್ಯವಾನ್ ॥ ೨

ಭ್ರಾತೃವ್ಯಸನಸಂತಪ್ತಸ್ತಥಾ ದೇವಾಂತಕೋ ಬಲೀ ।
ಆದಾಯ ಪರಿಘಂ ದೀಪ್ತಮಂಗದಂ ಸಮಭಿದ್ರವತ್ ॥ ೩

ರಥಮಾದಿತ್ಯಸಂಕಾಶಂ ಯುಕ್ತಂ ಪರಮವಾಜಿಭಿಃ ।
ಆಸ್ಥಾಯ ತ್ರಿಶಿರಾ ವೀರೋ ವಾಲಿಪುತ್ರಮಥಾಭ್ಯಯಾತ್ ॥ ೪

ಸ ತ್ರಿಭಿರ್ದೇವದರ್ಪಘ್ನೈರ್ನೈಋರ್ತೇಂದ್ರೈರಭಿದ್ರುತಃ ।
ವೃಕ್ಷಮುತ್ಪಾಟಯಾಮಾಸ ಮಹಾವಿಟಪಮಂಗದಃ ॥ ೫

## ಸರ್ಗ ೭೦

### ಹನುಮಂತನು ದೇವಾಂತಕ ಮತ್ತು ತ್ರಿಶಿರರನ್ನೂ, ನೀಲನು ಮಹೋದರನನ್ನೂ, ಋಷಭನು ಮಹಾಪಾರ್ಶ್ವನನ್ನೂ ಸಂಹರಿಸುವುದು.

ನರಾಂತಕನು ಹತನಾದುದನ್ನು ತಿಳಿದು ರಾವಣಪುತ್ರರಾದ ದೇವಾಂತಕ ತ್ರಿಮೂರ್ಧರೂ ಮಹೋದರನೂ ಹಾಹಾಕಾರಮಾಡಿದರು. ಮೇಘದಂತೆ ನೀಲ ವಿಶಾಲ ಶರೀರವುಳ್ಳ ಮಾತಂಗದಮೇಲೆ ಕುಳಿತಿದ್ದ ಮಹೋದರನು ಅಂಗದನನ್ನು ಅಡ್ಡಗಟ್ಟಿ ಆಕ್ರಮಿಸಿದನು (೧-೨). ತನ್ನ ಸಹೋದರನ ವಧೆಯಿಂದ ಖತಿಗೊಂಡ ದೇವಾಂತಕನು ಪರಿಘವನ್ನು ಝಳಪಿಸುತ್ತ ಅಂಗದನಮೇಲೆ ಏರಿಹೋದನು. ವೀರನಾದ ತ್ರಿಶಿರನೂ ಸಹ ಉತ್ತಮಾಶ್ವಗಳನ್ನು ಹೂಡಿದ ಸೂರ್ಯಸಂಕಾಶವಾದ ರಥವನ್ನೇರಿ ಆ ವಾಲಿಪುತ್ರನನ್ನು ಮುತ್ತಿದನು (೩-೪). ದೇವತೆಗಳ ದರ್ಪವನ್ನು ಮುರಿದ ಬಲಾಢ್ಯರಾದ ಆ ರಾಕ್ಷಸರು ಈ ರೀತಿಯಲ್ಲಿ ತನ್ನನ್ನು

ದೇವಾಂತಕಾಯ ತಂ ವೀರಶ್ಚಿಕ್ಷೇಪ ಸಹಸಾಂಗದಃ ।
ಮಹಾವೃಕ್ಷಂ ಮಹಾಶಾಖಂ ಶಕ್ರೋ ದೀಪ್ತಮಿವಾಶನಿಮ್ ॥ ೬

ತ್ರಿಶಿರಾಸ್ತಂ ಪ್ರಚಿಚ್ಛೇದ ಶರೈರಾಶೀವಿಷೋಪಮೈಃ ।
ಸ ವೃಕ್ಷಂ ಕೃತ್ತಮಾಲೋಕ್ಯ ಉತ್ಪಪಾತ ತದಾಂಗದಃ ॥ ೭

ಸ ವವರ್ಷ ತತೋ ವೃಕ್ಷಾನ್ ಶೈಲಾಂಶ್ಚ ಕಪಿಕುಂಜರಃ ।
ತಾನ್ ಪ್ರಚಿಚ್ಛೇದ ಸಂಕ್ರುದ್ಧಸ್ತ್ರಿಶಿರಾ ನಿಶಿತೈಃ ಶರೈಃ ॥ ೮

ಪರಿಘಾಗ್ರೇಣ ತಾನ್ ವೃಕ್ಷಾನ್ ಬಭಂಜ ಚ ಸುರಾಂತಕಃ ।
ತ್ರಿಶಿರಾಶ್ಚಾಂಗದಂ ವೀರಮಭಿದುದ್ರಾವ ಸಾಯಕೈಃ ॥ ೯

ಗಜೇನ ಸಮಭಿದ್ರುತ್ಯ ವಾಲಿಪುತ್ರಂ ಮಹೋದರಃ ।
ಜಘಾನೋರಸಿ ಸಂಕ್ರುದ್ಧಸ್ತೋಮರೈರ್ವಜ್ರಸಂನಿಭೈಃ ॥ ೧೦

ದೇವಾಂತಕಶ್ಚ ಸಂಕ್ರುದ್ಧಃ ಪರಿಘೇಣ ತದಾಂಗದಮ್ ।
ಉಪಗಮ್ಯಾಭಿಹತ್ಯಾಶು ವ್ಯಪಚಕ್ರಾಮ ವೇಗವಾನ್ ॥ ೧೧

---

ಮುತ್ತಿದುದನ್ನು ಕಂಡು, ಅಂಗದನು ದೊಡ್ಡ ದೊಡ್ಡ ಕೊಂಬೆಗಳಿದ್ದ ಒಂದು ಮಹಾವೃಕ್ಷವನ್ನು ಕಿತ್ತನು ! (೫). ವೀರಾಗ್ರೇಸರನಾದ ವಾಲಿಪುತ್ರನು ತಾನು ಕಿತ್ತ ಮಹಾವೃಕ್ಷವನ್ನೆತ್ತಿ, ರಭಸದಿಂದ ಸಿಡಿಲಿನಂತೆ ದೇವಾಂತಕನ ಮೇಲೆ ಬೀಸಿದನು. ಅಷ್ಟರಲ್ಲಿ ತ್ರಿಶಿರನು ಸರ್ಪಸಮಾನಗಳಾದ ತೀಕ್ಷ್ಣ ಶರಗಳಿಂದ ಆ ವೃಕ್ಷವನ್ನು ಕತ್ತರಿಸಿದನು. ಅಂಗದನು ಥಂಗನೆ ನೆಗೆದು ವಿವಿಧ ವೃಕ್ಷಗಳನ್ನೂ ಶೈಲಗಳನ್ನೂ ತಂದು ಆ ರಾಕ್ಷಸರಮೇಲೆ ಸುರಿದನು. ತ್ರಿಶಿರನು ನಿಶಿತಶರಗಳಿಂದ ಅವನ್ನು ತುಂಡರಿಸಿದನು (೬-೮). ದೇವಾಂತಕನೂ ಸಹ ತನ್ನ ಪರಿಘದಿಂದ ಬಡಿದು ಆ ಮರಗಳನ್ನು ಮುರಿದು ಚೆಲ್ಲುತ್ತಿದ್ದನು. ತ್ರಿಶಿರನು ಬಾಣಗಳಿಂದ ಪ್ರಹರಿಸುತ್ತ ಅಂಗದನನ್ನು ಆಕ್ರಮಿಸಿದನು. ಮಹೋದರನೂ ಸಹ ಆನೆಯಮೇಲೆ ಕುಳಿತು ನುಗ್ಗಿಬಂದು ವಜ್ರಾಯುಧಸದೃಶವಾದ ತೋಮರದಿಂದ ಅಂಗದನ ಎದೆಯನ್ನು ಬಡಿದನು (೯-೧೦). ದೇವಾಂತಕನು ವೇಗದಿಂದ ಬಂದು ಪರಿಘದಿಂದ ಆ ವಾಲಿಪುತ್ರನನ್ನು ಜಡಿದು, ಬಹುಬೇಗನೆ ದೂರಕ್ಕೆ ಹೋಗಿಬಿಡು

ಸ ತ್ರಿಭಿರ್ನೈರ್‍ಋತಶ್ರೇಷ್ಠೈರ್ಯುಗಪತ್ ಸಮಭಿದ್ರುತಃ ।
ನ ವಿವ್ಯಥೇ ಮಹಾತೇಜಾ ವಾಲಿಪುತ್ರಃ ಪ್ರತಾಪವಾನ್ ॥ ೧೨

ಸ ವೇಗವಾನ್ ಮಹಾವೇಗಂ ಕೃತ್ವಾ ಪರಮದುರ್ಜಯಃ ।
ತಲೇನ ಭೃಶಮುತ್ಪತ್ಯ ಜಘಾನಾಸ್ಯ ಮಹಾಗಜಮ್ ॥ ೧೩

ತಸ್ಯ ತೇನ ಪ್ರಹಾರೇಣ ನಾಗರಾಜಸ್ಯ ಸಂಯುಗೇ ।
ಪೇತತುರ್ಲೋಚನೇ ತಸ್ಯ ವಿನನಾಶ ಸ ವಾರಣಃ ॥ ೧೪

ವಿಷಾಣಂ ಚಾಸ್ಯ ನಿಷ್ಕೃಷ್ಯ ವಾಲಿಪುತ್ರೋ ಮಹಾಬಲಃ ।
ದೇವಾಂತಕಮಭಿಪ್ಲುತ್ಯ ತಾಡಯಾಮಾಸ ಸಂಯುಗೇ ॥ ೧೫

ಸ ವಿಹ್ವಲಿತಸರ್ವಾಂಗೋ ವಾತೋದ್ಧೂತ ಇವ ದ್ರುಮಃ ।
ಲಾಕ್ಷಾರಸಸವರ್ಣಂ ಚ ಸುಸ್ರಾವ ರುಧಿರಂ ಮುಖಾತ್ ॥ ೧೬

ಅಥಾಶ್ವಸ್ಯ ಮಹಾತೇಜಾಃ ಕೃಚ್ಛ್ರಾದ್ದೇವಾಂತಕೋ ಬಲೀ ।
ಆವಿಧ್ಯ ಪರಿಘಂ ಘೋರಮಾಜಘಾನ ತದಾಂಗದಮ್ ॥ ೧೭

ಪರಿಘಾಭಿಹತಶ್ಚಾಪಿ ವಾನರೇಂದ್ರಾತ್ಮಜಸ್ತದಾ ।
ಜಾನುಭ್ಯಾಂ ಪತಿತೋ ಭೂಮೌ ಪುನರೇವೋತ್ಪಪಾತ ಹ ॥ ೧೮

---

ತ್ರಿದ್ದನು. ಹೀಗೆ ಮೂವರು ರಾಕ್ಷಸವೀರರು ಏಕಕಾಲದಲ್ಲಿ ತನ್ನನ್ನು ಮುತ್ತಿದರೂ, ತೇಜಸ್ವಿಯೂ ಪ್ರತಾಪಿಯೂ ಆದ ವಾಲಿತನಯನಿಗೆ ಸ್ವಲ್ಪವೂ ವ್ಯಥೆಯಾಗಲಿಲ್ಲ (೧೧-೧೨). ದುರ್ಜಯನಾದ ಆ ಪ್ರತಾಪಶಾಲಿಯು ಮಹಾವೇಗದಿಂದ ನುಗ್ಗಿಹೋಗಿ ಮಹೋದರನ ಆನೆಯನ್ನು ಅಂಗೈಯಿಂದ ಅಪ್ಪಳಿಸಿದನು. ಆನೆಯ ಕಣ್ಣುಗುಡ್ಡೆಗಳು ಕಳಚಿಬಿದ್ದವು. ಆನೆಯು ಸತ್ತುಬಿದ್ದಿತು (೧೩-೧೪). ಬಲಾಢ್ಯನಾದ ವಾಲಿಪುತ್ರನು ಅದರ ದಂತವನ್ನು ಮುರಿದು ಮುಂದೆ ನೆಗೆದು, ಆ ದಂತದಿಂದಲೇ ದೇವಾಂತಕನನ್ನು ಬಡಿದನು. ದೇವಾಂತಕನ ಸರ್ವಾಂಗಗಳೂ ಸಡಲಿದಂತಾದವು. ಲಾಕ್ಷಾರಸದಂತೆ ಕೆಂಪಾದ ರಕ್ತವನ್ನು ಆತನು ಬಾಯಿಂದ ಕಕ್ಕಿದನು (೧೫-೧೬). ಆದರೂ ಮಹಾತೇಜಸ್ವಿಯಾದ ದೇವಾಂತಕನು ಹೇಗೋ ಸುಧಾರಿಸಿಕೊಂಡು ಘೋರವಾದ ಪರಿಘವನ್ನೆತ್ತಿ ಅಂಗದನನ್ನು ಅಪ್ಪಳಿಸಿ ಹೊಡೆದನು. ಪರಿಘದ ಹೊಡೆತಕ್ಕೆ ಅಂಗದನು ತತ್ತರಿಸಿ ಕುಸಿದು

ತಮುತ್ಪತಂತಂ ತ್ರಿಶಿರಾಸ್ತ್ರಿಭಿರ್ಬಾಣೈರಜಿಹ್ಮಗೈಃ ।
ಘೋರೈರ್ಹರಿಪತೇಃ ಪುತ್ರಂ ಲಲಾಟೇಽಭಿಜಘಾನ ಹ ॥ ೧೯

ತತೋಽಂಗದಂ ಪರಿಕ್ಷಿಪ್ತಂ ತ್ರಿಭಿರ್ನೈಋರ್ತಪುಂಗವೈಃ ।
ಹನುಮಾನಪಿ ವಿಜ್ಞಾಯ ನೀಲಶ್ಚಾಪಿ ಪ್ರತಸ್ಥತುಃ ॥ ೨೦

ತತಶ್ಚಿಕ್ಷೇಪ ಶೈಲಾಗ್ರಂ ನೀಲಸ್ತ್ರಿಶಿರಸೇ ತದಾ ।
ತದ್ರಾವಣಸುತೋ ಧೀಮಾನ್ ಬಿಭೇದ ನಿಶಿತೈಃ ಶರೈಃ ॥ ೨೧

ತದ್ಬಾಣಶತನಿರ್ಭಿನ್ನಂ ವಿದಾರಿತಶಿಲಾತಲಮ್ ।
ಸವಿಸ್ಫುಲಿಂಗಂ ಸಜ್ವಾಲಂ ನಿಪಪಾತ ಗಿರೇಃ ಶಿರಃ ॥ ೨೨

ತತೋ ಜೃಂಭಿತಮಾಲೋಕ್ಯ ಹರ್ಷಾದ್ದೇವಾಂತಕಸ್ತದಾ ।
ಪರಿಘೇಣಾಭಿದುದ್ರಾವ ಮಾರುತಾತ್ಮಜಮಾಹವೇ ॥ ೨೩

ತಮಾಪತಂತಮುತ್ಪ್ಲುತ್ಯ ಹನುಮಾನ್ ಮಾರುತಾತ್ಮಜಃ ।
ಆಜಘಾನ ತದಾ ಮೂರ್ಧ್ನಿ ವಜ್ರಕಲ್ಪೇನ ಮುಷ್ಟಿನಾ ॥ ೨೪

---

ಡೊಗ್ಗಾಲೂರಿದನು. ಮರುಕ್ಷಣದಲ್ಲಿ ಜಿಗಿದು ಎದ್ದು ನಿಂತನು (೧೭-೧೮). ಅಷ್ಟರಲ್ಲಿ ತ್ರಿಶಿರನು ಮೂರು ಘೋರ ಬಾಣಗಳಿಂದ ಅಂಗದನ ಹಣೆಗೆ ಗುರಿಯಿಟ್ಟು ಹೊಡೆದನು. ಹೀಗೆ ದೇವಾಂತಕ, ತ್ರಿಶಿರ, ಮಹೋದರರೆಂಬ ಮೂವರು ರಾಕ್ಷಸಭಟರು ಅಂಗದನನ್ನು ಮುತ್ತಿರುವುದನ್ನು ಕಂಡು, ಹನುಮಂತನೂ ನೀಲನೂ ಅಂಗದನ ನೆರವಿಗಾಗಿ ಬಂದರು (೧೯-೨೦). ನೀಲನು ಒಂದು ಶೈಲಶೃಂಗವನ್ನು ತ್ರಿಶಿರನಮೇಲೆ ಬೀಸಿದನು. ಆ ರಾವಣ ಪುತ್ರನು ನೂರಾರು ನಿಶಿತಶರಗಳಿಂದ ಹೊಡೆಯಲು, ಶೈಲಶೃಂಗದ ಶಿಲಾ ತಲಗಳು ಶೀರ್ಣವಾಗಿ, ಆ ಶೃಂಗವು ಜ್ವಾಲೆಯೊಡನೆ ಕಿಡಿಯುಗುಳುತ್ತ ಕೆಳಗೆ ಬಿದ್ದಿತು (೨೧-೨೨). ಆಗ ರಣೋತ್ಸಾಹದಿಂದ ವಿಜೃಂಭಿಸುತ್ತ ಬಂದ ಹನುಮಂತನನ್ನು ನೋಡಿ, ದೇವಾಂತಕನು ರಣಕುತೂಹಲದಿಂದ ಪರಿಘವನ್ನು ಹಿಡಿದು ಆ ಮಾರುತಾತ್ಮಜನನ್ನು ಎದುರಿಸಿದನು (೨೩). ನುಗ್ಗಿಬರುವ ದೇವಾಂತಕನನ್ನಾಲೋಕಿಸಿ ಮಾರುತಿಯು ವೇಗದಿಂದ ಮುಂದಕ್ಕೆ ನೆಗೆದು, ತನ್ನ ವಜ್ರಮುಷ್ಟಿಯಿಂದ ದೇವಾಂತಕನ ತಲೆಯ

ಶಿರಸಿ ಪ್ರಹರನ್ ವೀರಸ್ತದಾ ವಾಯುಸುತೋ ಬಲೀ ।
ನಾದೇನಾಕಂಪಯಚ್ಚೈವ ರಾಕ್ಷಸಾನ್ ಸ ಮಹಾಕಪಿಃ ॥ ೨೫

ಸ ಮುಷ್ಟಿನಿಷ್ಪಿಷ್ಟವಿಕೀರ್ಣಮೂರ್ಧಾ
ನಿರ್ವಾಂತದಂತಾಕ್ಷಿವಿಲಂಬಿಜಿಹ್ವಃ ।
ದೇವಾಂತಕೋ ರಾಕ್ಷಸರಾಜಸೂನು-
ರ್ಗತಾಸುರುರ್ವ್ಯಾಂ ಸಹಸಾ ಪಪಾತ ॥ ೨೬

ತಸ್ಮಿನ್ ಹತೇ ರಾಕ್ಷಸಯೋಧಮುಖ್ಯೇ
ಮಹಾಬಲೇ ಸಂಯತಿ ದೇವಶತ್ರೌ ।
ಕ್ರುದ್ಧಸ್ತ್ರಿಮೂರ್ಧಾ ನಿಶಿತಾಗ್ರಮುಗ್ರಂ
ವವರ್ಷ ನೀಲೋರಸಿ ಬಾಣವರ್ಷಮ್ ॥ ೨೭

ಮಹೋದರಸ್ತು ಸಂಕ್ರುದ್ಧಃ ಕುಂಜರಂ ಪರ್ವತೋಪಮಮ್ ।
ಭೂಯಃ ಸಮಧಿರುಹ್ಯಾಶು ಮಂದರಂ ರಶ್ಮಿಮಾನಿವ ॥ ೨೮

ತತೋ ಬಾಣಮಯಂ ವರ್ಷಂ ನೀಲಸ್ಯೋರಸ್ಯಪಾತಯತ್ ।
ಗಿರೌ ವರ್ಷಂ ತಡಿಚ್ಚಕ್ರಚಾಪವಾನಿವ ತೋಯದಃ ॥ ೨೯

---

ಮೇಲೆ ಗುದ್ದಿದನು. ಗುದ್ದುವಾಗಲೇ ಆ ಮಹಾವಾನರನು ಸಿಂಹಗರ್ಜನೆಯನ್ನು ಮಾಡಲು, ರಾಕ್ಷಸರೆಲ್ಲರೂ ಹೆದರಿ ನಡುಗಿಹೋದರು! (೨೪–೨೫). ರಾವಣತನಯನಾದ ದೇವಾಂತಕನ ಶಿರಸ್ಸು ಹನುಮಂತನ ವಜ್ರಮುಷ್ಟಿಯ ಹೊಡೆತಕ್ಕೆ ಜರ್ಝರಿತವಾಯಿತು. ಹಲ್ಲುಗಳು ಹೊರಬಂದವು. ಕಣ್ಣುಗುಡ್ಡೆಗಳು ಕಳಚಿದವು. ನಾಲಗೆಯು ಜೋತಾಡಿತು. ದೇವಾಂತಕನು ಸತ್ತುಬಿದ್ದನು (೨೬). ರಾಕ್ಷಸಯೋಧರಲ್ಲಿ ಮುಖ್ಯನಾದ ದೇವಾಂತಕನು ಹೀಗೆ ಹತನಾಗಲು, ತ್ರಿಶಿರನು ಕ್ರುದ್ಧನಾಗಿ ನೀಲನ ಎದೆಗೆ ಗುರಿಯಿಟ್ಟು ನಿಶಿತಶರಗಳ ಮಳೆಗರೆಯತೊಡಗಿದನು. ಅಷ್ಟರಲ್ಲಿ ಮಹೋದರನೂ ಸಹ ರೋಷಾವಿಷ್ಟನಾಗಿ ಪರ್ವತಾಕಾರವಾದ ಮತ್ತೊಂದು ಮಾತಂಗವನ್ನೇರಿ, ಮಂದರಗಿರಿಶಿಖರದಲ್ಲಿರುವ ಆದಿತ್ಯನಂತೆ ಕಂಗೊಳಿಸುತ್ತ ಬಂದನು (೨೭–೨೮). ಮಿಂಚೆಂಬ ಚಾಪವನ್ನು ಹಿಡಿದ ಮೇಘವು ಬೆಟ್ಟದಮೇಲೆ ಧಾರಾಕಾರವಾಗಿ ಮಳೆಗರೆಯುವಂತೆ,

ತತಃ ಶರೌಘೈರಭಿವರ್ಷ್ಯಮಾಣೋ
ವಿಭಿನ್ನಗಾತ್ರಃ ಕಪಿಸೈನ್ಯಪಾಲಃ ।
ನೀಲೋ ಬಭೂವಾಥ ನಿಸೃಷ್ಟಗಾತ್ರೋ
ವಿಷ್ಟಂಭಿತಸ್ತೇನ ಮಹಾಬಲೇನ ॥ ೩೦

ತತಸ್ತು ನೀಲಃ ಪ್ರತಿಲಭ್ಯ ಸಂಜ್ಞಾಂ
ಶೈಲಂ ಸಮುತ್ಪಾಟ್ಯ ಸವೃಕ್ಷಷಂಡಮ್ ।
ತತಃ ಸಮುತ್ಪತ್ಯ ಭೃಶೋಗ್ರವೇಗೋ
ಮಹೋದರಂ ತೇನ ಜಘಾನ ಮೂರ್ಧ್ನಿ ॥ ೩೧

ತತಃ ಸ ಶೈಲೇಂದ್ರನಿಪಾತಭಗ್ನೋ
ಮಹೋದರಸ್ತೇನ ಮಹಾದ್ವಿಪೇನ ।
ವಿಪೋಥಿತೋ ಭೂಮಿತಲೇ ಗತಾಸುಃ
ಪಪಾತ ವಜ್ರಾಭಿಹತೋ ಯಥಾದ್ರಿಃ ॥ ೩೨

ಪಿತೃವ್ಯಂ ನಿಹತಂ ದೃಷ್ಟ್ವಾ ತ್ರಿಶಿರಾಶ್ಚಾಪಮಾದದೇ ।
ಹನುಮಂತಂ ಚ ಸಂಕ್ರುದ್ಧೋ ವಿವ್ಯಾಧ ನಿಶಿತೈಃ ಶರೈಃ ॥ ೩೩

---

ಮಹೋದರನು ಧನುರ್ಧಾರಿಯಾಗಿ ನೀಲನ ವಕ್ಷಸ್ಥಳದಮೇಲೆ ಸರಳುಗಳನ್ನು ಸುರಿಯಲಾರಂಭಿಸಿದನು (೨೯). ಕಪಿಸೇನಾಪತಿಯಾದ ನೀಲನು ಮಹೋದರನ ಬಾಣರಾಶಿಗಳ ಹೊಡೆತದಿಂದ ವಿಭಿನ್ನಗಾತ್ರನಾದನು. ಅವಯವಗಳು ಜರ್ಝರಿತವಾದವು. ನೀಲನ ಪರಾಕ್ರಮವು ಕುಂಠಿತವಾಗಿ ಅವನು ದಿಕ್ಕುಗಾಣದೆ ನಿಂತನು. ನೀಲನು ಮತ್ತೆ ಚೇತರಿಸಿಕೊಂಡು ವೃಕ್ಷರಾಶಿಗಳಿಂದ ರಾಜಿಸುತ್ತಿದ್ದ ಒಂದು ಶೈಲವನ್ನು ಕಿತ್ತು, ಉಗ್ರವೇಗದಿಂದ ಮಹೋದರನ ತಲೆಯಮೇಲೆ ಆ ಶೈಲವನ್ನು ಕುಕ್ಕಿದನು (೩೦-೩೧). ಆ ರಭಸಕ್ಕೆ ಸಿಕ್ಕಿದ ಮಹೋದರನೂ ಅವನ ಮಹಾಗಜವೂ ಜಜ್ಜಲ್ಪಡಲಾಗಿ, ವಜ್ರಾಹತವಾದ ಅದ್ರಿಯಂತೆ ಮಹೋದರನು ಮೃತನಾಗಿ ಬಿದ್ದನು. ಚಿಕ್ಕಪ್ಪನು ಮೃತನಾದುದನ್ನು ತ್ರಿಶಿರನು ವೀಕ್ಷಿಸಿದನು. ಅವನು ರೋಷಾವಿಷ್ಟನಾಗಿ ಚಾಪವನ್ನೆಳೆದೆಳೆದು ಕೂರ್ಗಣೆಗಳಿಂದ ಹನುಮಂತ

ಸ ವಾಯುಸೂನುಃ ಕುಪಿತಶ್ಚಿಕ್ಷೇಪ ಶಿಖರಂ ಗಿರೇಃ ।
ತ್ರಿಶಿರಾಸ್ತಚ್ಛರೈಸ್ತೀಕ್ಷ್ಣೈರ್ಬಿಭೇದ ಬಹುಧಾ ಬಲೀ ॥ ೩೪

ತದ್ವ್ಯರ್ಥಂ ಶಿಖರಂ ದೃಷ್ಟ್ವಾ ದ್ರುಮವರ್ಷಂ ಮಹಾಕಪಿಃ ।
ವಿಸಸರ್ಜ ರಣೇ ತಸ್ಮಿನ್ ರಾವಣಸ್ಯ ಸುತಂ ಪ್ರತಿ ॥ ೩೫

ತಮಾಪತಂತಮಾಕಾಶೇ ದ್ರುಮವರ್ಷಂ ಪ್ರತಾಪವಾನ್ ।
ತ್ರಿಶಿರಾ ನಿಶಿತೈರ್ಬಾಣೈಶ್ಚಿಚ್ಛೇದ ಚ ನನಾದ ಚ ॥ ೩೬

ತತೋ ಹನೂಮಾನುತ್ಪ್ಲುತ್ಯ ಹಯಾಂಸ್ತ್ರಿಶಿರಸಸ್ತದಾ ।
ವಿದದಾರ ನಖೈಃ ಕ್ರುದ್ಧೋ ಗಜೇಂದ್ರಂ ಮೃಗರಾಡಿವ ॥ ೩೭

ಅಥ ಶಕ್ತಿಂ ಸಮಾದಾಯ ಕಾಲರಾತ್ರಿಮಿವಾಂತಕಃ ।
ಚಿಕ್ಷೇಪಾನಿಲಪುತ್ರಾಯ ತ್ರಿಶಿರಾ ರಾವಣಾತ್ಮಜಃ ॥ ೩೮

ದಿವಃ ಕ್ಷಿಪ್ತಾಮಿವೋಲ್ಕಾಂ ತಾಂ ಶಕ್ತಿಂ ಕ್ಷಿಪ್ತಾಮಸಂಗತಾಮ್ ।
ಗೃಹೀತ್ವಾ ಹರಿಶಾರ್ದೂಲೋ ಬಭಂಜ ಚ ನನಾದ ಚ ॥ ೩೯

---

ನನ್ನು ಹೊಡೆಯತೊಡಗಿದನು (೩೨-೩೩). ಹನುಮಂತನು ಗಿರಿಶೃಂಗವೊಂದನ್ನು ಬೀಸಿಹೊಡೆಯಲು, ತ್ರಿಶಿರನು ತೀಕ್ಷ್ಣಾಸ್ತ್ರಗಳಿಂದ ಅದನ್ನು ಕತ್ತರಿಸಿ ಕೆಡಹಿದನು. ಗಿರಿಶೃಂಗವು ವ್ಯರ್ಥವಾದುದನ್ನು ವೀಕ್ಷಿಸಿ, ಆ ಮಹಾವಾನರನು ಮರಗಳನ್ನು ಕಿತ್ತು ಕಿತ್ತು ತ್ರಿಶಿರನ ಕಡೆಗೆ ಬೀಸಲಾರಂಭಿಸಿದನು (೩೪-೩೫). ಪ್ರತಾಪಶಾಲಿಯಾದ ಆ ತ್ರಿಶಿರನು ಮರಗಳನ್ನು ನಿಶಿತಶರಗಳಿಂದ ಆಕಾಶಮಾರ್ಗದಲ್ಲಿಯೇ ಕೊಚ್ಚಿ ಕೊಚ್ಚಿ ಬೊಬ್ಬಿರಿದನು. ರುಷ್ಟನಾದ ಹನುಮಂತನು ಮುಂದಕ್ಕೆ ನೆಗೆದು, ಕ್ರುದ್ಧಕಂಠೀರವನು ಸಲಗವನ್ನು ಸೀಳುವಂತೆ ತ್ರಿಶಿರನ ಕುದುರೆಗಳನ್ನು ಉಗುರುಗಳಿಂದ ಸೀಳಿ ಕೊಂದನು (೩೬-೩೭). ಅನಂತರ ರಾವಣಾತ್ಮಜನು ಕಾಳರಾತ್ರಿಯಂತಿದ್ದ ಶಕ್ತ್ಯಾಯುಧವನ್ನು ಝಳಪಿಸಿ, ವಾಯುಪುತ್ರನ ಮೇಲೆ ಕಾಲಾಂತಕನಂತೆ ಪ್ರಯೋಗಿಸಿದನು. ಅಂಬರದಿಂದ ಸಿಡಿದುಬರುವ ಉಲ್ಕೆಯಂತೆ ಎಡೆತಡೆಯಿಲ್ಲದೆ ಮಹಾರಭಸದಿಂದ ಬಂದ ಶಕ್ತ್ಯಾಯುಧವನ್ನು, ಆ ಕಪಿಶಾರ್ದೂಲನು ಕೈಯಿಂದ ಹಿಡಿದು ಮುರಿದು ಬೊಬ್ಬಿರಿದನು (೩೮-೩೯). ಘೋರವಾದ ಆ ಶಕ್ತಿಯು ಹನುಮಂತನಿಂದ ಭಗ್ನ

ತಾಂ ದೃಷ್ಟ್ವಾ ಘೋರಸಂಕಾಶಾಂ ಶಕ್ತಿಂ ಭಗ್ನಾಂ ಹನೂಮತಾ ।
ಪ್ರಹೃಷ್ಟಾ ವಾನರಗಣಾ ವಿನೇದುರ್ಜಲದಾ ಇವ ॥ ೪೦

ತತಃ ಖಡ್ಗಂ ಸಮುದ್ಯಮ್ಯ ತ್ರಿಶಿರಾ ರಾಕ್ಷಸೋತ್ತಮಃ ।
ನಿಜಘಾನ ತದಾ ವ್ಯೂಢೇ ವಾಯುಪುತ್ರಸ್ಯ ವಕ್ಷಸಿ ॥ ೪೧

ಖಡ್ಗಪ್ರಹಾರಾಭಿಹತೋ ಹನೂಮಾನ್ ಮಾರುತಾತ್ಮಜಃ ।
ಆಜಘಾನ ತ್ರಿಶಿರಸಂ ತಲೇನೋರಸಿ ವೀರ್ಯವಾನ್ ॥ ೪೨

ಸ ತಲಾಭಿಹತಸ್ತೇನ ಸ್ರಸ್ತಹಸ್ತಾಯುಧೋ ಭುವಿ ।
ನಿಪಪಾತ ಮಹಾತೇಜಾಸ್ತ್ರಿಶಿರಾಸ್ತ್ಯಕ್ತಚೇತನಃ ॥ ೪೩

ಸ ತಸ್ಯ ಪತತಃ ಖಡ್ಗಂ ಸಮಾಚ್ಛಿದ್ಯ ಮಹಾಕಪಿಃ ।
ನನಾದ ಗಿರಿಸಂಕಾಶಸ್ತ್ರಾಸಯನ್ ಸರ್ವನೈರ್ಋತಾನ್ ॥ ೪೪

ಅಮೃಷ್ಯಮಾಣಸ್ತಂ ಘೋಷಮುತ್ಪಪಾತ ನಿಶಾಚರಃ ।
ಉತ್ಪತ್ಯ ಚ ಹನೂಮಂತಂ ತಾಡಯಾಮಾಸ ಮುಷ್ಟಿನಾ ॥ ೪೫

ತೇನ ಮುಷ್ಟಿಪ್ರಹಾರೇಣ ಸಂಚುಕೋಪ ಮಹಾಕಪಿಃ ।
ಕುಪಿತಶ್ಚ ನಿಜಗ್ರಾಹ ಕಿರೀಟೇ ರಾಕ್ಷಸರ್ಷಭಮ್ ॥ ೪೬

---

ವಾದುದನ್ನು ಕಂಡು, ವಾನರಯೋಧರು ಗುಡುಗುಗಳಂತೆ ಹರ್ಷಾತಿರೇಕದಿಂದ ಕೂಗಿದರು. ಆಮೇಲೆ ಪಟುಭಟನಾದ ತ್ರಿಶಿರನು ಖಡ್ಗದಿಂದ ಹನುಮಂತನ ವಿಶಾಲವಕ್ಷಸ್ಥಳವನ್ನು ಪ್ರಹರಿಸಿದನು (೪೦-೪೧). ಆಗ ಹನುಮಂತನು ತ್ರಿಶಿರನ ವಕ್ಷಸ್ಥಳವನ್ನು ಅಂಗೈಯಿಂದ ರಪ್ಪನೆ ಅಪ್ಪಳಿಸಿದನು. ಅತ್ಯಂತ ತೇಜಸ್ವಿಯಾದ ತ್ರಿಶಿರನಿಗೂ ಆ ಪೆಟ್ಟಿನಿಂದ ಮೂರ್ಛೆಯುಂಟಾಯಿತು. ಅವನ ಕೈಯಿಂದ ಕತ್ತಿಯು ಸಡಲಿತು. ಅವನು ನೆಲದಮೇಲೆ ಕುಸಿದನು (೪೨-೪೩). ಪರ್ವತಾಕಾರನಾದ ಹನುಮಂತನು ತ್ರಿಶಿರನ ಕತ್ತಿಯನ್ನು ಸೆಳೆದುಕೊಂಡು, ಸಮಸ್ತ ರಾಕ್ಷಸರೂ ನಿಬ್ಬೆರಗಾಗುವಂತೆ ಸಿಂಹನಾದಮಾಡಿದನು. ಆ ಮಹಾಕಪಿಯ ಸಿಂಹಗರ್ಜನೆಯನ್ನು ಸಹಿಸಲಾರದೆ ತ್ರಿಶಿರನು ಮೇಲೆದ್ದನು ಎದ್ದವನೇ ಮುಷ್ಟಿಯಿಂದ ಹನುಮಂತನನ್ನು ಗುದ್ದಿದನು (೪೪-೪೫). ಆ ಮುಷ್ಟಿಪ್ರಹಾರದಿಂದ ರೊಚ್ಚಿಗೆದ್ದ ಹನುಮಂತನು ರೋಷತಾಮ್ರಾಕ್ಷನಾಗಿ, ತ್ರಿಶಿರನ ಕಿರೀಟ

ಹನೂಮಾನ್ ರೋಷತಾಮ್ರಾಕ್ಷೋ ರಾಕ್ಷಸಂ ಪರವೀರಹಾ ||

ಸ ತಸ್ಯ ಶೀರ್ಷಾಣ್ಯಸಿನಾ ಶಿತೇನ
ಕಿರೀಟಜುಷ್ಟಾನಿ ಸಕುಂಡಲಾನಿ |
ಕ್ರುದ್ಧಃ ಪ್ರಚಿಚ್ಛೇದ ಸುತೋಽನಿಲಸ್ಯ
ತ್ವಷ್ಟುಃ ಸುತಸ್ಯೇವ ಶಿರಾಂಸಿ ಶಕ್ರಃ || ೪೭

ತಾನ್ಯಾಯತಾಕ್ಷಾಣ್ಯಗಸಂನಿಭಾನಿ
ಪ್ರದೀಪ್ತವೈಶ್ವಾನರಲೋಚನಾನಿ |
ಪೇತುಃ ಶಿರಾಂಸೀಂದ್ರರಿಪೋರ್ಧರಣ್ಯಾಂ
ಜ್ಯೋತೀಂಷಿ ಮುಕ್ತಾನಿ ಯಥಾರ್ಕಮಾರ್ಗಾತ್ || ೪೮

ತಸ್ಮಿನ್ ಹತೇ ದೇವರಿಪೌ ತ್ರಿಶೀರ್ಷೇ
ಹನೂಮತಾ ಶಕ್ರಪರಾಕ್ರಮೇಣ |
ನೇದುಃ ಪ್ಲವಂಗಾಃ ಪ್ರಚಚಾಲ ಭೂಮೀ
ರಕ್ಷಾಂಸ್ಯಥೋ ದುದ್ರುವಿರೇ ಸಮಂತಾತ್ || ೪೯

ಹತಂ ತ್ರಿಶಿರಸಂ ದೃಷ್ಟ್ವಾ ತಥೈವ ಚ ಮಹೋದರಮ್ |
ಹತೌ ಪ್ರೇಕ್ಷ್ಯ ದುರಾಧರ್ಷೌ ದೇವಾಂತಕನರಾಂತಕೌ || ೫೦

---

ಪ್ರದೇಶವನ್ನು ಕೈಯಿಂದ ಹಿಡಿದು ಹರಿತವಾದ ಖಡ್ಗದಿಂದ ಆತನ ತಲೆಗಳನ್ನು ಕತ್ತರಿಸಿದನು. ತ್ವಷ್ಟೃಪುತ್ರನಾದ ವಿಶ್ವರೂಪನ* ಶಿರಸ್ಸುಗಳನ್ನು ಇಂದ್ರನು ಕತ್ತರಿಸಿದಂತೆ, ಆ ಮಾರುತಾತ್ಮಜನು ಕಿರೀಟಕುಂಡಲಮಂಡಿತವಾದ ತ್ರಿಶಿರನ ಶಿರಸ್ಸುಗಳನ್ನು ತುಂಡರಿಸಿದನು (೪೬-೪೭). ಪ್ರಜ್ವಲಿಸುವ ಅಗ್ನಿಯಂತೆ ಉಜ್ವಲವಿಶಾಲನೇತ್ರಗಳಿಂದ ಯುಕ್ತವಾಗಿ, ಬೆಟ್ಟಗಳಂತಿದ್ದ ತ್ರಿಶಿರನ ಶಿರಸ್ಸುಗಳು ಸೂರ್ಯಮಂಡಲದಿಂದ ಸಿಡಿಯುವ ಜ್ಯೋತಿಗಳಂತೆ ನೆಲದಮೇಲುರುಳಿದವು (೪೮). ದೇವಶತ್ರುವಾದ ತ್ರಿಶಿರನು ಶಕ್ರಪರಾಕ್ರಮಿಯಾದ ಹನುಮಂತನಿಂದ ಹತನಾಗಲು, ವಾನರರು ಹರ್ಷನಾದ ಮಾಡಿದರು. ಭೂಮಿಯು ಅಲ್ಲಾಡಿತು. ರಾಕ್ಷಸರು ಹೆದರಿ ಓಡಿಹೋದರು (೪೯). ಈ ರೀತಿಯಲ್ಲಿ ತ್ರಿಶಿರನು ಹತನಾದನು. ಮಹೋದರನು ಮೃತನಾದನು.

* ವಿಶ್ವರೂಪನಿಗೆ ಮೂರು ಶಿರಸ್ಸುಗಳಿದ್ದವು.

ಚುಕೋಪ ಪರಮಾಮರ್ಷೀ ಮತ್ತೋ ರಾಕ್ಷಸಪುಂಗವಃ ।
ಜಗ್ರಾಹಾರ್ಚಿಷ್ಮತೀಂ ಘೋರಾಂ ಗದಾಂ ಸರ್ವಾಯಸೀಂ ಶುಭಾಮ್

ಹೇಮಪಟ್ಟಪರಿಕ್ಷಿಪ್ತಾಂ ಮಾಂಸಶೋಣಿತಫೇನಿಲಾಮ್ ।
ವಿರಾಜಮಾನಾಂ ವಪುಷಾ ಶತ್ರುಶೋಣಿತರಂಜಿತಾಮ್ ॥ ೫೨

ತೇಜಸಾ ಸಂಪ್ರದೀಪ್ತಾಗ್ರಾಂ ರಕ್ತಮಾಲ್ಯವಿಭೂಷಿತಾಮ್ ।
ಐರಾವತಮಹಾಪದ್ಮಸಾರ್ವಭೌಮಭಯಾವಹಾಮ್ ॥ ೫೩

ಗದಾಮಾದಾಯ ಸಂಕ್ರುದ್ಧೋ ಮತ್ತೋ ರಾಕ್ಷಸಪುಂಗವಃ ।
ಹರೀನ್ ಸಮಭಿದುದ್ರಾವ ಯುಗಾಂತಾಗ್ನಿರಿವ ಜ್ವಲನ್ ॥ ೫೪

ಅಥರ್ಷಭಃ ಸಮುತ್ಪತ್ಯ ವಾನರೋ ರಾವಣಾನುಜಮ್ ।
ಮತ್ತಾನೀಕಮುಪಾಗಮ್ಯ ತಸ್ಥೌ ತಸ್ಯಾಗ್ರತೋ ಬಲೀ ॥ ೫೫

---

ದುರ್ಧರ್ಷರಾದ ದೇವಾಂತಕ ನರಾಂತಕರು ಅಂತಕನ ವಶರಾದರು. ಇದೆಲ್ಲ ವನ್ನೂ ವೀಕ್ಷಿಸಿ ರಾಕ್ಷಸಪುಂಗವನಾದ ಮಹಾಪಾರ್ಶ್ವನು* ಸಿಟ್ಟಿನಿಂದ ಸಿಡಿದೆದ್ದನು. ಉಕ್ಕಿನಿಂದ ನಿರ್ಮಿತವಾಗಿ ಕಿಡಿಯುಗುಳುತ್ತಿದ್ದ ಘೋರ ಗದೆ ಯನ್ನು ಎತ್ತಿಕೊಂಡನು (೫೦-೫೧). ಆ ಗದೆಯು ಸುವರ್ಣದ ಹಿಡಿ ಯಿಂದ ವಿರಾಜಿಸುತ್ತಿದ್ದಿತು. ರಕ್ತಮಾಂಸಗಳು ಹೆಪ್ಪುಗಟ್ಟಿ ಮೆತ್ತಿ ಕೊಂಡಿದ್ದವು. ಶತ್ರುಶೋಣಿತದಿಗ್ಧವಾದ ಆ ಗದೆಯು ಭೀಕರಾಕೃತಿಯಿಂದ ಶೋಭಿಸುತ್ತ ಅಗ್ರಭಾಗದಲ್ಲಿ ಬೆಂಕಿಯನ್ನುಗುಳುತ್ತಿದ್ದಿತು. ರಕ್ತಮಾಲ್ಯ ಗಳಿಂದ ಅಲಂಕೃತವಾಗಿದ್ದಿತು. ಐರಾವತ, ಮಹಾಪದ್ಮ†, ಸಾರ್ವಭೌಮ ಮೊದಲಾದ ದಿಗ್ಗಜಗಳನ್ನು ದಿಗಿಲುಗೊಳಿಸಿದ ಮಹಾಗದೆಯೆನಿಸಿದ್ದಿತು (೫೨-೫೩). ಅಂತಹ ಘೋರಗದೆಯನ್ನು ಹಿಡಿದು ರಾಕ್ಷಸಶಾರ್ದೂಲನಾದ ಮಹಾಪಾರ್ಶ್ವನು ಪ್ರಳಯಕಾಲಾಗ್ನಿಯಂತೆ ಬೆಳಗುತ್ತ ವಾನರರನ್ನು ಅಟ್ಟಿಸಿಕೊಂಡು ಹೊರಟನು. ಆಗ ಬಲಶಾಲಿಯಾದ ಋಷಭನೆಂಬ ವಾನರಯೂಥಪನು ಆ ರಾವಣಾನುಜನ ಎದುರಿಗೆ ಬಂದು ನಿಂತನು!

---

* ಇವನಿಗೆ ಮತ್ತನೆಂದೂ ಮತ್ತಾನೀಕನೆಂದೂ ನಾಮಾಂತರಗಳಿದ್ದವು.

† ಮಹಾಪದ್ಮ=ಪುಂಡರೀಕವೆಂಬ ದಿಗ್ಗಜ.

ತಂ ಪುರಸ್ತಾತ್ ಸ್ಥಿತಂ ದೃಷ್ಟ್ವಾ ವಾನರಂ ಪರ್ವತೋಪಮಮ್ ।
ಆಜಘಾನೋರಸಿ ಕ್ರುದ್ಧೋ ಗದಯಾ ವಜ್ರಕಲ್ಪಯಾ ॥ ೫೬

ಸ ತಯಾಭಿಹತಸ್ತೇನ ಗದಯಾ ವಾನರರ್ಷಭಃ ।
ಭಿನ್ನವಕ್ಷಾಃ ಸಮಾಧೂತಃ ಸುಸ್ರಾವ ರುಧಿರಂ ಬಹು ॥ ೫೭

ಸ ಸಂಪ್ರಾಪ್ಯ ಚಿರಾತ್ ಸಂಜ್ಞಾಮೃಷಭೋ ವಾನರರ್ಷಭಃ ।
ಕ್ರುದ್ಧೋ ವಿಸ್ಫುರಮಾಣೋಷ್ಠೋ ಮಹಾಪಾರ್ಶ್ವಮುದೈಕ್ಷತ ॥ ೫೮

ಸ ವೇಗವಾನ್ ವೇಗವದಭ್ಯುಪೇತ್ಯ
ತಂ ರಾಕ್ಷಸಂ ವಾನರಯೂಥಮುಖ್ಯಃ ।
ಸಂವರ್ತ್ಯ ಮುಷ್ಟಿಂ ಸಹಸಾ ಜಘಾನ
ಬಾಹ್ವಂತರೇ ಶೈಲನಿಕಾಶರೂಪಃ ॥ ೫೯

ಸ ಕೃತ್ತಮೂಲಃ ಸಹಸೇವ ವೃಕ್ಷಃ
ಪಪಾತ ಭೂಮೌ ಕ್ಷತಜೋಕ್ಷಿತಾಂಗಃ ।
ತಾಂ ಚಾಸ್ಯ ಘೋರಾಂ ಯಮದಂಡಕಲ್ಪಾಂ
ಗದಾಂ ಪ್ರಗೃಹ್ಯಾಶು ತದಾ ಸಹರ್ಷಃ ॥ ೬೦

---

(೫೪-೫೫). ಪರ್ವತಾಕಾರನಾದ ಋಷಭನು ಎದುರಿಗೆ ಬಂದುದನ್ನು ಕಂಡು, ಮಹಾಪಾರ್ಶ್ವನು ಸಿಡಿಲಿನಂತಿದ್ದ ತನ್ನ ಗದೆಯಿಂದ ಅವನ ಎದೆಯನ್ನಪ್ಪಳಿಸಿದನು. ಋಷಭನ ಎದೆಯು ಭಿನ್ನವಾಯಿತು. ತತ್ತರಿಸಿದ ಆ ವಾನರೋತ್ತಮನು ರಕ್ತವನ್ನು ಕಾರಿಕೊಂಡನು (೫೬-೫೭). ಸ್ವಲ್ಪಹೊತ್ತಿನಲ್ಲಿಯೇ ಚೇತರಿಸಿಕೊಂಡ ಋಷಭನು ಕೋಪಾವಿಷ್ಟನಾದನು. ಕೋಪದಿಂದ ಅವನ ತುಟಿಗಳು ಅದುರಿದವು. ಶೈಲದಂತೆ ಮಹಾಕಾಯನಾದ ಆ ಕಪಿಯೂಥಪನು ಮಹಾಪಾರ್ಶ್ವನನ್ನು ಕೆಕ್ಕರಿಸಿ ನೋಡಿ ಮುಷ್ಟಿಯನ್ನು ಬಿಗಿದು, ರಭಸದಿಂದ ಮುನ್ನುಗ್ಗಿ ರಾಕ್ಷಸನ ಎದೆಯಮೇಲೆ ಬಲವಾಗಿ ಗುದ್ದಿದನು (೫೮-೫೯). ಮಹಾಪಾರ್ಶ್ವನು ರಕ್ತಸಿಕ್ತಾಂಗನಾಗಿ, ಬುಡಕಡಿದ ಮರದಂತೆ ದೊಪ್ಪನೆ ಬಿದ್ದನು. ಕ್ಷಣಕಾಲದವರೆಗೆ ಮೂರ್ಛಿತ

ಮುಹೂರ್ತಮಾಸೀತ್ ಸ ಗತಾಸುಕಲ್ಪಃ
ಪ್ರತ್ಯಾಗತಾತ್ಮಾ ಸಹಸಾ ಸುರಾರಿಃ ।
ಉಪೇತ್ಯ ಸಂಧ್ಯಾಭ್ರಸಮಾನವರ್ಣ-
ಸ್ತಂ ವಾರಿರಾಜಾತ್ಮಜಮಾಜಘಾನ ॥ ೬೧

ಅಭಿಜಗ್ರಾಹ ವೇಗೇನ ಗದಾಂ ತಸ್ಯ ಮಹಾತ್ಮನಃ ।
ಗೃಹೀತ್ವಾ ತಾಂ ಗದಾಂ ಭೀಮಾಮಾವಿಧ್ಯ ಚ ಪುನಃ ಪುನಃ ॥ ೬೨

ಮತ್ತಾನೀಕಂ ಮಹಾತ್ಮಾನಂ ಜಘಾನ ರಣಮೂರ್ಧನಿ ।
ಸ ಸ್ವಯಾ ಗದಯಾ ಭಗ್ನೋ ವಿಶೀರ್ಣದಶನೇಕ್ಷಣಃ ॥ ೬೩

ನಿಪಪಾತ ತತೋ ಮತ್ತೋ ವಜ್ರಾಹತ ಇವಾಚಲಃ ।
ವಿಶೀರ್ಣನಯನೇ ಭೂಮೌ ಗತಸತ್ತ್ವೇ ಗತಾಯುಷಿ ॥ ೬೪

ಪತಿತೇ ರಾಕ್ಷಸೇ ತಸ್ಮಿನ್ ವಿದ್ರುತಂ ರಾಕ್ಷಸಂ ಬಲಮ್ ॥

ತಸ್ಮಿನ್ ಹತೇ ಭ್ರಾತರಿ ರಾವಣಸ್ಯ
ತನ್ನೈರ್ಋತಾನಾಂ ಬಲಮರ್ಣವಾಭಮ್ ।

---

ನಾಗಿದ್ದ ಆ ರಾಕ್ಷಸನು ಹಾಗೆಯೇ ಚೇತರಿಸಿಕೊಂಡು, ಯಮದಂಡದಂತಿದ್ದ ಗದೆಯನ್ನು ಹಿಡಿದು ಮೇಲೆದ್ದನು. ಸಾಯಂಕಾಲದ ಕೆಮ್ಮೋಡದಂತೆ ಕಾಣುತ್ತಿದ್ದ ಆ ರಾಕ್ಷಸನು ಮುಂದೆ ಬಂದು, ವರುಣಾತ್ಮಜನಾದ ಋಷಭನ ಮೇಲೆ ಗದೆಯನ್ನು ಬೀಸಿದನು (೬೦-೬೧). ಋಷಭನು ವೇಗದಿಂದ ಆ ಗದೆಯನ್ನು ಹಿಡಿದು ಕಿತ್ತುಕೊಂಡು ಗಿರ್ರನೆ ತಿರುಗಿಸಿ, ಅದರಿಂದಲೇ ಮಹಾಪಾರ್ಶ್ವನನ್ನು ಬಡಿದನು. ತನ್ನ ಗದೆಯಿಂದಲೇ ಮಹಾಪಾರ್ಶ್ವನು ಜಜ್ಜಿಹೋದನು. ಅವನ ಹಲ್ಲುಗಳು ಉದುರಿದವು. ಕಣ್ಣುಗುಡ್ಡೆಗಳು ಹೊರಬಂದವು (೬೨-೬೩). ಅವನ ಸತ್ತ್ವ ಉಡುಗಿತು. ಆಯುಸ್ಸು ಮುಗಿಯಿತು. ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದಂತೆ ಮಹಾಪಾರ್ಶ್ವನು ಸತ್ತುಬಿದ್ದನು. ರಾಕ್ಷಸರು ಪಲಾಯನಮಾಡಿದರು(೬೪). ಹೀಗೆ ರಾವಣನ ಸೋದರನಾದ ಮಹಾಪಾರ್ಶ್ವನು ಹತನಾಗಲು, ಸಮುದ್ರದಂತೆ ಮೊರೆಯುತ್ತಿದ್ದ ರಾಕ್ಷಸಸೇನೆಯು ಆಯುಧಗಳನ್ನು

ತ್ಯಕ್ತ್ವಾಯುಧಂ ಕೇವಲಜೀವಿತಾರ್ಥಂ
ದುದ್ರಾವ ಭಿನ್ನಾರ್ಣವಸಂನಿಕಾಶಮ್ ॥ ೬೫

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತತಿತಮಃ ಸರ್ಗಃ

---

## ಏಕಸಪ್ತತಿತಮಃ ಸರ್ಗಃ

ಅತಿಕಾಯವಧಃ

ಸ್ವಬಲಂ ವ್ಯಥಿತಂ ದೃಷ್ಟ್ವಾ ತುಮುಲಂ ರೋಮಹರ್ಷಣಮ್ ।
ಭ್ರಾತೄಂಶ್ಚ ನಿಹತಾನ್ ದೃಷ್ಟ್ವಾ ಶಕ್ರತುಲ್ಯಪರಾಕ್ರಮಾನ್ ॥ ೧

ಪಿತೃವ್ಯೌ ಚಾಪಿ ಸಂದೃಶ್ಯ ಸಮರೇ ಸಂನಿಷೂದಿತೌ ।
ಯುದ್ಧೋನ್ಮತ್ತಂ ಚ ಮತ್ತಂ ಚ ಭ್ರಾತರೌ ರಾಕ್ಷಸರ್ಷಭೌ ॥ ೨

---

ಬಿಸುಟು, ಮೇರೆದಪ್ಪಿದ ಸಮುದ್ರಜಲದಂತೆ, ಬದುಕಿದರೆ ನಾಕೆಂದು ಓಡಿಹೋಯಿತು (೬೫).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತನೆಯ ಸರ್ಗ

---

## ಸರ್ಗ ೭೧

ವಿಭೀಷಣನು ಅತಿಕಾಯನ ವೃತ್ತಾಂತವನ್ನು ಶ್ರೀರಾಮನಿಗೆ ತಿಳಿಸುವುದು.
ಅತಿಕಾಯನ ಯುದ್ಧ. ಲಕ್ಷ್ಮಣನಿಂದ ಆತನ ಸಂಹಾರ.

ಮೈನವಿರೇಳಿಸುವ ತುಮುಲಯುದ್ಧದಲ್ಲಿ ತನ್ನ ಸೇನೆಯು ವಿಧ್ವಸ್ತವಾದುದನ್ನು ಅತಿಕಾಯನು ನೋಡಿದನು. ಇಂದ್ರಸಮಾನ ಪರಾಕ್ರಮಿಗಳಾದ ನರಾಂತಕ, ದೇವಾಂತಕ, ತ್ರಿಶಿರರೆಂಬ ತನ್ನ ಸೋದರರೂ ಚಿಕ್ಕಪ್ಪಂದಿರಾದ ಮಹೋದರ ಮಹಾಪಾರ್ಶ್ವರೂ ಸಮರದಲ್ಲಿ ಹತರಾದು

ಚುಕೋಪ ಚ ಮಹಾತೇಜಾ ಬ್ರಹ್ಮದತ್ತವರೋ ಯುಧಿ ।
ಅತಿಕಾಯೋಽದ್ರಿಸಂಕಾಶೋ ದೇವದಾನವದರ್ಪಹಾ ॥ ೩

ಸ ಭಾಸ್ಕರಸಹಸ್ರಸ್ಯ ಸಂಘಾತಮಿವ ಭಾಸ್ವರಮ್ ।
ರಥಮಾಸ್ಥಾಯ ಶಕ್ರಾರಿರಭಿದುದ್ರಾವ ವಾನರಾನ್ ॥ ೪

ಸ ವಿಸ್ಫಾರ್ಯ ಮಹಚ್ಚಾಪಂ ಕಿರೀಟೀ ಮೃಷ್ಟಕುಂಡಲಃ ।
ನಾಮ ವಿಶ್ರಾವಯಾಮಾಸ ನನಾದ ಚ ಮಹಾಸ್ವನಮ್ ॥ ೫

ತೇನ ಸಿಂಹಪ್ರಣಾದೇನ ನಾಮವಿಶ್ರಾವಣೇನ ಚ ।
ಜ್ಯಾಶಬ್ದೇನ ಚ ಭೀಮೇನ ತ್ರಾಸಯಾಮಾಸ ವಾನರಾನ್ ॥ ೬

ತೇ ದೃಷ್ಟ್ವಾ ದೇಹಮಾಹಾತ್ಮ್ಯಂ ಕುಂಭಕರ್ಣೋಽಯಮುತ್ಥಿತಃ ।
ಭಯಾರ್ತಾ ವಾನರಾಃ ಸರ್ವೇ ಸಂಶ್ರಯಂತೇ ಪರಸ್ಪರಮ್ ॥ ೭

ತೇ ತಸ್ಯ ರೂಪಮಾಲೋಕ್ಯ ಯಥಾ ವಿಷ್ಣೋಸ್ತ್ರಿವಿಕ್ರಮೇ ।
ಭಯಾದ್ವಾನರಯೂಥಾಸ್ತೇ ವಿದ್ರವಂತಿ ತತಸ್ತತಃ ॥ ೮

---

ದನ್ನು ಕಂಡನು (೧-೨). ಪರ್ವತಾಕಾರನೂ ಮಹಾತೇಜಸ್ವಿಯೂ ಆದ ಅತಿಕಾಯನು ಬ್ರಹ್ಮನಿಂದ ವರವನ್ನು ಪಡೆದವನು. ಯುದ್ಧದಲ್ಲಿ ದೇವ ದಾನವರ ದರ್ಪವನ್ನಡಗಿಸಿದವನು. ರಾಕ್ಷಸಭಟರ ವಿನಾಶವನ್ನೀಕ್ಷಿಸಿ, ಆತನು ಕೋಪೋದ್ದೀಪಿತನಾದನು (೩). ಇಂದ್ರಶತ್ರುವಾದ ಅತಿಕಾಯನು ಸಹಸ್ರಸೂರ್ಯಸಂಘಾತವೋ ಎಂಬಂತೆ ದೀಪ್ಯಮಾನವಾದ ತೇರನ್ನೇರಿ ವಾನರರನ್ನು ಅಟ್ಟಿಸಿಕೊಂಡು ಹೊರಟನು. ಥಳಥಳಿಸುವ ಕರ್ಣಕುಂಡಲ ಗಳನ್ನು ಧರಿಸಿ ಕಿರೀಟಧಾರಿಯಾಗಿ ಶೋಭಿಸುತ್ತಿದ್ದ ಆ ರಾಕ್ಷಸನು ಮಹತ್ತರ ವಾದ ಬಿಲ್ಲನ್ನು ಹಿಡಿದು "ಎಲೈ ವಾನರರೆ, ಕೇಳಿರಿ! ಈಗ **ನಾನು** ಯುದ್ಧಕ್ಕೆ ಬಂದವನು! ನನ್ನ ಹೆಸರು **ಅತಿಕಾಯ**!" ಎಂದು ಕೂಗಿ ಹೇಳಿ ಬೊಬ್ಬಿರಿದನು (೪-೫). ಈ ರೀತಿಯಾದ ನಾಮಘೋಷ, ಸಿಂಹನಾದ, ಧನುಷ್ಟಂಕಾರಗಳ ಭೀಷಣಧ್ವಾನಗಳನ್ನು ಕೇಳಿ ವಾನರರು ಅಂಜಿದರು. ಅತಿಕಾಯನ ಮಹಾಶರೀರವನ್ನು ನೋಡಿ ಕಪಿಯೋಧರು "ಅಬ್ಬ! ಕುಂಭಕರ್ಣನೇ ಮತ್ತೆ ಎದ್ದುಬಂದನು!" ಎಂದು ಹೆದರಿ ನಡುಗುತ್ತ ಒಬ್ಬರ ಹಿಂದೊಬ್ಬರು ಅವಿತುಕೊಂಡರು! (೬-೭). ತ್ರಿವಿಕ್ರಮಾವತಾರವನ್ನು ತಳೆದ ಮಹಾವಿಷ್ಣುವಿನ ಬೃಹದ್ರೂಪದಂತೆ

ತೇಽತಿಕಾಯಂ ಸಮಾಸಾದ್ಯ ವಾನರಾ ಮೂಢಚೇತಸಃ ।
ಶರಣ್ಯಂ ಶರಣಂ ಜಗ್ಮುರ್ಲಕ್ಷ್ಮಣಾಗ್ರಜಮಾಹವೇ ॥ ೯

ತತೋಽತಿಕಾಯಂ ಕಾಕುತ್ಸ್ಥೋ ರಥಸ್ಥಂ ಪರ್ವತೋಪಮಮ್ ।
ದದರ್ಶ ಧನ್ವಿನಂ ದೂರಾದ್ಗರ್ಜಂತಂ ಕಾಲಮೇಘವತ್ ॥ ೧೦

ಸ ತಂ ದೃಷ್ಟ್ವಾ ಮಹಾಕಾಯಂ ರಾಘವಸ್ತು ವಿಸಿಸ್ಮಿಯೇ ।
ವಾನರಾನ್ ಸಾಂತ್ವಯಿತ್ವಾಥ ವಿಭೀಷಣಮುವಾಚ ಹ ॥ ೧೧

ಕೋಽಸೌ ಪರ್ವತಸಂಕಾಶೋ ಧನುಷ್ಮಾನ್ ಹರಿಲೋಚನಃ ।
ಯುಕ್ತೇ ಹಯಸಹಸ್ರೇಣ ವಿಶಾಲೇ ಸ್ಯಂದನೇ ಸ್ಥಿತಃ ॥ ೧೨

ಯ ಏಷ ನಿಶಿತೈಃ ಶೂಲೈಃ ಸುತೀಕ್ಷ್ಣೈಃ ಪ್ರಾಸತೋಮರೈಃ ।
ಅರ್ಚಿಷ್ಮದ್ಭಿರ್ವೃತೋ ಭಾತಿ ಭೂತೈರಿವ ಮಹೇಶ್ವರಃ ॥ ೧೩

ಕಾಲಜಿಹ್ವಾಪ್ರಕಾಶಾಭಿರ್ಯ ಏಷೋಽತಿವಿರಾಜತೇ ।
ಆವೃತೋ ರಥಶಕ್ತೀಭಿರ್ವಿದ್ಯುದ್ಭಿರಿವ ತೋಯದಃ ॥ ೧೪

---

ಅದ್ಭುತರೂಪನಾದ ಆತನ ಆಕಾರವನ್ನು ಕಂಡು ಅಂಜಿ, ವಾನರರು ಗುಂಪು ಗುಂಪಾಗಿ ಓಡಲಾರಂಭಿಸಿದರು. ಅತಿಕಾಯನನ್ನು ಕಂಡಮೇಲೆ ಮುಂದೇನುಮಾಡಬೇಕೆಂದು ವಾನರರಿಗೆ ತೋರದಾಯಿತು. ಅವರು ದಾರಿಗಾಣದೆ ಓಡುತ್ತ, ಶರಣಾಗತರಕ್ಷಕನಾದ ಲಕ್ಷ್ಮಣಾಗ್ರಜನಿಗೆ ಶರಣಾದರು (೮-೯). ಆಗ ಶ್ರೀರಾಮನು ದೂರದಲ್ಲಿ ಗರ್ಜಿಸುತ್ತಿದ್ದ ಅತಿಕಾಯನ ಕಡೆಗೆ ತಿರುಗಿ ನೋಡಿದನು. ಗುಡುಗುವ ಕಾಲಮೇಘದಂತಿದ್ದ ಪರ್ವತಾಕಾರನಾದ ಅತಿಕಾಯನು ರಥದಲ್ಲಿ ಕುಳಿತು ಧನುರ್ಧಾರಿಯಾಗಿ ಗರ್ಜಿಸುವುದು ಗೋಚರಿಸಿತು (೧೦). ಆತನ ಮಹಾಶರೀರವನ್ನು ಕಂಡು ಶ್ರೀರಾಮನು ಅಚ್ಚರಿಗೊಂಡನು. ಅವನು ವಾನರರನ್ನು ಸಂತೈಸಿ ವಿಭೀಷಣನನ್ನು ಕರೆದು ಹೀಗೆಂದನು: "ವಿಭೀಷಣ, ಪರ್ವತಾಕಾರನಾದ ಅವನು ಯಾರು? ಧನುಸ್ಸನ್ನು ಹಿಡಿದಿದ್ದಾನೆ, ಸಿಂಹನೇತ್ರನಾಗಿದ್ದಾನೆ. ಸಾವಿರ ಕುದುರೆಗಳನ್ನು ಹೂಡಿರುವ ಮಹಾರಥದಲ್ಲಿ ಕುಳಿತಿದ್ದಾನೆ (೧೧-೧೨). ಕಿಡಿಗೆದರುತ್ತಿರುವ ನಿಶಿತವಾದ ಶೂಲಗಳನ್ನೂ ಪ್ರಾಸತೋಮರಗಳನ್ನೂ ಹಿಡಿದಿರುವ ಆತನು ಭೂತಗಳಿಂದ ಪರಿವೃತನಾದ ಮಹೇಶ್ವರನಂತೆ ಕಾಣುತ್ತಾನೆ. ಯಮನ ನಾಲಗೆಗಳಂತಿರುವ ಶಕ್ತಿಗಳನ್ನು ರಥದಲ್ಲಿರಿಸಿಕೊಂಡು,

ಧನೂಂಷಿ ಚಾಸ್ಯ ಸಜ್ಯಾನಿ ಹೇಮಪೃಷ್ಠಾನಿ ಸರ್ವಶಃ ।
ಶೋಭಯಂತಿ ರಥಶ್ರೇಷ್ಠಂ ಶಕ್ರಚಾಪ ಇವಾಂಬರಮ್ ॥ ೧೫

ಕ ಏಷ ರಕ್ಷಃಶಾರ್ದೂಲೋ ರಣಭೂಮಿಂ ವಿರಾಜಯನ್ ।
ಅಭ್ಯೇತಿ ರಥಿನಾಂ ಶ್ರೇಷ್ಠೋ ರಥೇನಾದಿತ್ಯತೇಜಸಾ ॥ ೧೬

ಧ್ವಜಶೃಂಗಪ್ರತಿಷ್ಠೇನ ರಾಹುಣಾಭಿವಿರಾಜತೇ ।
ಸೂರ್ಯರಶ್ಮಿನಿಭೈರ್ಬಾಣೈರ್ದಿಶೋ ದಶ ವಿರಾಜಯನ್ ॥ ೧೭

ತ್ರಿಣತಂ ಮೇಘನಿರ್ಹ್ರಾದಂ ಹೇಮಪೃಷ್ಠಮಲಂಕೃತಮ್ ।
ಶತಕ್ರತುಧನುಃಪ್ರಖ್ಯಂ ಧನುಶ್ಚಾಸ್ಯ ವಿರಾಜತೇ ॥ ೧೮

ಸಧ್ವಜಃ ಸಪತಾಕಶ್ಚ ಸಾನುಕರ್ಷೋ ಮಹಾರಥಃ ।
ಚತುಃಸಾದಿಸಮಾಯುಕ್ತೋ ಮೇಘಸ್ತನಿತನಿಃಸ್ವನಃ ॥ ೧೯

ವಿಂಶತಿರ್ದಶ ಚಾಷ್ಟೌ ಚ ತೂಣ್ಯೋಽಸ್ಯ ರಥಮಾಸ್ಥಿತಾಃ ।
ಕಾರ್ಮುಕಾಣಿ ಚ ಭೀಮಾನಿ ಜ್ಯಾಶ್ಚ ಕಾಂಚನಪಿಂಗಲಾಃ ॥ ೨೦

---

ಮಿಂಚುಗಳಿಂದ ಹೊಳೆಯುವ ಕಾಲಮೇಘದಂತೆ ಗೋಚರಿಸುತ್ತಾನೆ (೧೩-೧೪). ಕಾಮನಬಿಲ್ಲುಗಳು ಅಂಬರವನ್ನು ಸಿಂಗರಿಸುವಂತೆ, ಬಂಗಾರ ದಿಂದ ಶೃಂಗಾರಿತವಾದ ಅವನ ಬಿಲ್ಲುಗಳು ಸುಂದರವಾದ ರಥವನ್ನು ಶೋಭೆಗೊಳಿಸುತ್ತಿವೆ. ವಿಭೀಷಣ, ಆ ರಾಕ್ಷಸಶಾರ್ದೂಲನು ಯಾರು? ರಥಿಕರಲ್ಲಿ ಶ್ರೇಷ್ಠನಾದ ಆತನು ರವಿಯಂತೆ ರಾಜಿಸುವ ರಥವನ್ನಡರಿ, ರಣಭೂಮಿಗೆ ಒಂದು ಕಳೆಯನ್ನು ತರುತ್ತ ಬರುತ್ತಿದ್ದಾನೆ (೧೫-೧೬). ಅವನ ಧ್ವಜಾಗ್ರದಲ್ಲಿ ರಾಹುಚಿಹ್ನೆಯು ವಿರಾಜಿಸುತ್ತಿದೆ. ತರಣಿಕಿರಣ ಗಳಂತಿರುವ ಶರಗಳಿಂದ ದಶದಿಕ್ಕುಗಳನ್ನು ಬೆಳಗಿಸುತ್ತಿದ್ದಾನೆ. ಇಂದ್ರ ಚಾಪದಂತೆ ಮಿರುಮಿರುಗುವ ಸುವರ್ಣಾಲಂಕೃತವಾದ ಧನುಸ್ಸು ಅವನ ಕೈಯಲ್ಲಿ ಶೋಭಿಸುತ್ತಿದೆ. ಮೂರೆಡೆ ಬಾಗಿರುವ ಆ ಧನುಸ್ಸನ್ನು ಗುಡುಗಿ ನಂತೆ ಝೇಂಕರಿಸುತ್ತಿದ್ದಾನೆ (೧೭-೧೮). ಧ್ವಜಪತಾಕೆಗಳಿಂದ ಭೂಷಿತ ವಾಗಿ ಹಿಮ್ಮೇಳದೊಡನೆ ಬರುತ್ತಿರುವ ಅವನ ಮಹಾರಥದಲ್ಲಿ ನಾಲ್ವರು ಸಾರಥಿಗಳಿದ್ದಾರೆ. ಮೇಘಗರ್ಜನೆಯಂತೆ ಗಂಭೀರವಾಗಿ ಧ್ವನಿಗೈಯುತ್ತ ರಥವು ಸಾಗಿಬರುತ್ತಿದೆ. ಇಪ್ಪತ್ತು, ಹತ್ತು, ಎಂಟು—ಬಟ್ಟಿಗೆ

ದ್ವೌ ಚ ಖಡ್ಗೌ ರಥಗತೌ ಪಾರ್ಶ್ವಸ್ಥೌ ಪಾರ್ಶ್ವಶೋಭಿತೌ ।
ಚತುರ್ಹಸ್ತತ್ಸರುಯುತೌ ವ್ಯಕ್ತಹಸ್ತದಶಾಯತೌ ॥ ೨೧

ರಕ್ತಕಂಠಗುಣೋ ಧೀರೋ ಮಹಾಪರ್ವತಸಂನಿಭಃ ।
ಕಾಲಃ ಕಾಲಮಹಾವಕ್ತ್ರೋ ಮೇಘಸ್ಥ ಇವ ಭಾಸ್ಕರಃ ॥ ೨೨

ಕಾಂಚನಾಂಗದನದ್ಧಾಭ್ಯಾಂ ಭುಜಾಭ್ಯಾಮೇಷ ಶೋಭತೇ ।
ಶೃಂಗಾಭ್ಯಾಮಿವ ತುಂಗಾಭ್ಯಾಂ ಹಿಮವಾನ್ ಪರ್ವತೋತ್ತಮಃ ॥

ಕುಂಡಲಾಭ್ಯಾಂ ತು ಯಸ್ಯೈತದ್ಭಾತಿ ವಕ್ತ್ರಂ ಶುಭೇಕ್ಷಣಮ್ ।
ಪುನರ್ವಸ್ವಂತರಗತಂ ಪೂರ್ಣಬಿಂಬಮಿವೈಂದವಮ್ ॥ ೨೪

ಆಚಕ್ಷ್ವ ಮೇ ಮಹಾಬಾಹೋ ತ್ವಮೇನಂ ರಾಕ್ಷಸೋತ್ತಮಮ್ ।
ಯಂ ದೃಷ್ಟ್ವಾ ವಾನರಾಃ ಸರ್ವೇ ಭಯಾರ್ತಾ ವಿದ್ರುತಾ ದಿಶಃ ॥

---

ಮೂವತ್ತೆಂಟು ಬತ್ತಳಿಕೆಗಳು ಆ ರಥದಲ್ಲಿ ಕಾಣುತ್ತಿವೆ! ಭೀಕರವಾದ ಧನುಸ್ಸುಗಳು! ಹೊಂಬಣ್ಣದ ಹೆದೆಗಳು! (೧೯-೨೦). ರಥದಲ್ಲಿ ಉಭಯ ಪಾರ್ಶ್ವಗಳಲ್ಲಿಯೂ ಎರಡು ಕತ್ತಿಗಳು ತೂಗಾಡುತ್ತಿವೆ. ಒಂದೊಂದು ಕತ್ತಿಯೂ ಹತ್ತುಮೊಳ ಉದ್ದವಾಗಿರಬಹುದು! ಅವುಗಳ ಹಿಡಿಗಳೇ ನಾಲ್ಕುನಾಲ್ಕು ಮೊಳ ಉದ್ದವಾಗಿವೆ! ಮಹಾಶೈಲದಂತಿರುವ ಆ ಧೀರನು ಕೊರಳಲ್ಲಿ ಕೆಂಪುಹೂಗಳ ಮಾಲೆಯನ್ನು ಧರಿಸಿದ್ದಾನೆ. ಅವನು ಯಾರು? ಮೃತ್ಯುವಿನಂತೆ ಘೋರಮುಖನಾದ ಕಪ್ಪುಬಣ್ಣದ ಆ ರಾಕ್ಷಸನು ಯಾರು? ಮೇಘಮಂಡಲದಲ್ಲಿ ಮರೆಯಾದ ಸೂರ್ಯಬಿಂಬದಂತೆ ಕಪ್ಪಾಗಿ ಕಾಣಿಸಿದರೂ ಪ್ರಖರತೇಜಸ್ಸಿನಿಂದ ರಾಜಿಸುತ್ತಿದ್ದಾನೆ (೨೧-೨೨). ಎರಡು ತೋಳುಗಳಿಗೂ ಚಿನ್ನದ ತೋಳ್ಬಳೆಗಳನ್ನು ಧರಿಸಿರುವ ಆ ರಾಕ್ಷಸನು, ಉನ್ನತ ಶಿಖರಗಳಿಂದ ಶೋಭಿಸುವ ಹಿಮಾಲಯದಂತೆ ಮಹೋನ್ನತನಾಗಿದ್ದಾನೆ. ಎರಡು ಕಿವಿಗಳಲ್ಲಿಯೂ ರತ್ನಖಚಿತವಾದ ಕುಂಡಲಗಳನ್ನು ಧರಿಸಿ ನಯನಕಾಂತಿಯಿಂದ ರಂಜಿಸುವ ಆತನ ಮುಖವು ಪುನರ್ವಸುನಕ್ಷತ್ರಗಳ ಮಧ್ಯದಲ್ಲಿ ರಾಜಿಸುವ ಚಂದ್ರನ ಪೂರ್ಣಮಂಡಲದಂತೆ ವಿರಾಜಿಸುತ್ತಿದೆ * (೨೩-೨೪). ಮಹಾಬಾಹು ವಿಭೀಷಣ, ಈ ರಾಕ್ಷಸೋತ್ತಮನು

---

* ಹಿಂದೆ ಕುಂಭಕರ್ಣನ ಮುಖವನ್ನೂ ಇದೇ ರೀತಿಯಲ್ಲಿ ವರ್ಣಿಸಿದೆ.
(ಯುದ್ಧ. ೬೭-೧೮೨)

ಸ ಪೃಷ್ಟೋ ರಾಜಪುತ್ರೇಣ ರಾಮೇಣಾಮಿತತೇಜಸಾ ।
ಆಚಚಕ್ಷೇ ಮಹಾತೇಜಾ ರಾಘವಾಯ ವಿಭೀಷಣಃ ॥ ೨೬

ದಶಗ್ರೀವೋ ಮಹಾತೇಜಾ ರಾಜಾ ವೈಶ್ರವಣಾನುಜಃ ।
ಭೀಮಕರ್ಮಾ ಮಹೋತ್ಸಾಹೋ ರಾವಣೋ ರಾಕ್ಷಸಾಧಿಪಃ ॥ ೨೭

ತಸ್ಯಾಸೀದ್ವೀರ್ಯವಾನ್ ಪುತ್ರೋ ರಾವಣಪ್ರತಿಮೋ ರಣೇ ।
ವೃದ್ಧಸೇವೀ ಶ್ರುತಿಧರಃ ಸರ್ವಾಸ್ತ್ರವಿದುಷಾಂ ವರಃ ॥ ೨೮

ಅಶ್ವಪೃಷ್ಠೇ ರಥೇ ನಾಗೇ ಖಡ್ಗೇ ಧನುಷಿ ಕರ್ಷಣೇ ।
ಭೇದೇ ಸಾಂತ್ವೇ ಚ ದಾನೇ ಚ ನಯೇ ಮಂತ್ರೇ ಚ ಸಂಮತಃ ॥ ೨೯

ಯಸ್ಯ ಬಾಹೂ ಸಮಾಶ್ರಿತ್ಯ ಲಂಕಾ ವಸತಿ ನಿರ್ಭಯಾ ।
ತನಯಂ ಧಾನ್ಯಮಾಲಿನ್ಯಾ ಅತಿಕಾಯಮಿಮಂ ವಿದುಃ ॥ ೩೦

---

ಯಾರೆಂದು ಹೇಳು? ಈತನನ್ನು ನೋಡಿ ವಾನರಯೋಧರೆಲ್ಲರು ಹೆದರಿ ದಿಕ್ಕುದಿಕ್ಕಿಗೆ ಪಲಾಯನಮಾಡುತ್ತಿದ್ದಾರಲ್ಲ!" ಎಂದು ಕೇಳಿದನು (೨೫). ಹೀಗೆ ರಾಜಪುತ್ರನೂ ತೇಜೋರಾಶಿಯೂ ಆದ ರಾಘವನೂ ಸಹ ಆಶ್ಚರ್ಯದಿಂದ ಕೇಳಲಾಗಿ, ಮಹಾತೇಜಸ್ವಿಯಾದ ವಿಭೀಷಣನು ಇಂತೆಂದನು: "ಶ್ರೀರಾಮ, ಕುಬೇರಾನುಜನಾದ ದಶಗ್ರೀವನು ಲಂಕಾಧಿಪತಿಯಾಗಿರುವನಷ್ಟೆ. ರಾಕ್ಷಸೇಶ್ವರನೂ ಕ್ರೂರಕರ್ಮಿಯೂ ಆದ ಆ ರಾವಣನ ಪುತ್ರನಿವನು (೨೬-೨೭). ರಣಭೂಮಿಯಲ್ಲಿವನು ರಾವಣನಿಗೆ ಸಮಾನನಾದ ಪರಾಕ್ರಮಿ. ಗುರುಹಿರಿಯರನ್ನು ಸೇವಿಸತಕ್ಕವನು. ವಿದ್ಯಾವಂತ. ಸಕಲ ಅಸ್ತ್ರವಿದ್ಯೆಗಳಲ್ಲಿಯೂ ಪಾರಂಗತ (೨೮). ಅಶ್ವಾರೋಹ ಗಜಾರೋಹಗಳನ್ನು ಬಲ್ಲವನು. ರಥವಿದ್ಯೆಯಲ್ಲಿ ಪಳಗಿದ್ದಾನೆ. ಖಡ್ಗಯುದ್ಧ, ಧನುರ್ಯುದ್ಧಗಳಲ್ಲಿ ನಿಪುಣನಾಗಿದ್ದಾನೆ. ಪಾಶವನ್ನೆಸೆದು ವೈರಿಗಳನ್ನು ಸೆರೆಹಿಡಿಯುವುದರಲ್ಲಿ ಗಟ್ಟಿಗ. ಸಾಮದಾನಭೇದೋಪಾಯಗಳಲ್ಲಿ ನಿಸ್ಸೀಮ. ಕಪಟಯುಕ್ತಿಯಲ್ಲಿಯೂ ಮಂತ್ರಾಲೋಚನೆಯಲ್ಲಿಯೂ ಪ್ರವೀಣ (೨೯). ಇವನ ಭುಜಬಲದ ಅವಲಂಬನೆಯಿಂದ ಲಂಕೆಯು ನಿರ್ಭಯವಾಗಿದೆ. ರಾವಣನ ಮಡದಿ

ಏತೇನಾರಾಧಿತೋ ಬ್ರಹ್ಮಾ ತಪಸಾ ಭಾವಿತಾತ್ಮನಾ ।
ಅಸ್ತ್ರಾಣಿ ಚಾಪ್ಯವಾಪ್ತಾನಿ ರಿಪವಶ್ಚ ಪರಾಜಿತಾಃ ॥ ೩೧

ಸುರಾಸುರೈರವಧ್ಯತ್ವಂ ದತ್ತಮಸ್ಮೈ ಸ್ವಯಂಭುವಾ ।
ಏತಚ್ಚ ಕವಚಂ ದಿವ್ಯಂ ರಥಶ್ಚೈಷೋಽರ್ಕಭಾಸ್ವರಃ ॥ ೩೨

ಏತೇನ ಶತಶೋ ದೇವಾ ದಾನವಾಶ್ಚ ಪರಾಜಿತಾಃ ।
ರಕ್ಷಿತಾನಿ ಚ ರಕ್ಷಾಂಸಿ ಯಕ್ಷಾಶ್ಚಾಪಿ ನಿಷೂದಿತಾಃ ॥ ೩೩

ವಜ್ರಂ ವಿಷ್ಟಂಭಿತಂ ಯೇನ ಬಾಣೈರಿಂದ್ರಸ್ಯ ಧೀಮತಃ ।
ಪಾಶಃ ಸಲಿಲರಾಜಸ್ಯ ರಣೇ ಪ್ರತಿಹತಸ್ತಥಾ ॥ ೩೪

ಏಷೋಽತಿಕಾಯೋ ಬಲವಾನ್ ರಾಕ್ಷಸಾನಾಮೃಷಭಃ ।
ರಾವಣಸ್ಯ ಸುತೋ ಧೀಮಾನ್ ದೇವದಾನವದರ್ಪಹಾ ॥ ೩೫

ತದಸ್ಮಿನ್ ಕ್ರಿಯತಾಂ ಯತ್ನಃ ಕ್ಷಿಪ್ರಂ ಪುರುಷಪುಂಗವ ।
ಪುರಾ ವಾನರಸೈನ್ಯಾನಿ ಕ್ಷಯಂ ನಯತಿ ಸಾಯಕೈಃ ॥ ೩೬

---

ಯಾದ ಧಾನ್ಯಮಾಲಿನಿಯ ಗರ್ಭದಲ್ಲಿ ಇವನು ಜನಿಸಿದ್ದಾನೆ. ಇವನ ಹೆಸರು ಅತಿಕಾಯ. ಈತನು ದೃಢಸಂಕಲ್ಪದಿಂದ ತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಮೆಚ್ಚಿಸಿದ್ದಾನೆ. ದಿವ್ಯಾಸ್ತ್ರಗಳನ್ನು ಪಡೆದು ಶತ್ರುಗಳನ್ನು ಜಯಿಸಿದ್ದಾನೆ (೩೦-೩೧). ದೇವಾಸುರರಿಂದ ಮರಣವಾಗದಂತೆ ಬ್ರಹ್ಮನು ಅತಿಕಾಯನಿಗೆ ವರವನ್ನು ಕೊಟ್ಟಿದ್ದಾನೆ. ಈತನು ತೊಟ್ಟಿರುವ ದಿವ್ಯ ಕವಚವೂ ಸೂರ್ಯಸಂಕಾಶವಾದ ಈ ರಥವೂ ಬ್ರಹ್ಮನ ಅನುಗ್ರಹದಿಂದ ಲಭಿಸಿದವು (೩೨). ಈ ಅತಿಕಾಯನು ಅನೇಕ ಸಲ ದೇವದಾನವರನ್ನು ಗೆದ್ದು ಯಕ್ಷರನ್ನು ವಿಧ್ವಂಸಗೊಳಿಸಿ ರಾಕ್ಷಸರನ್ನು ರಕ್ಷಿಸಿದ್ದಾನೆ. ಧೀರನಾದ ದೇವೇಂದ್ರನ ವಜ್ರಾಯುಧವನ್ನು ತನ್ನ ಶರಗಳಿಂದ ಸ್ತಂಭಿಸಿದ್ದಾನೆ. ವರುಣನ ಪಾಶಾಯುಧವನ್ನು ವಿಫಲಗೊಳಿಸಿದ್ದಾನೆ (೩೩-೩೪). ಶ್ರೀರಾಮ, ಈ ಅತಿಕಾಯನು ಅತ್ಯಂತ ಬಲಶಾಲಿ. ರಾಕ್ಷಸರಲ್ಲಿ ಗಟ್ಟಿಗನಿವನು. ಧೀಮಂತನಾದ ಈ ರಾವಣತನಯನು ದೇವದಾನವರ ದರ್ಪವನ್ನಿಳಿಸಿದ ಶೂರಾಗ್ರೇಸರ. ಆದ್ದರಿಂದ, ರಾಘವ, ಈತನ ವಿಷಯದಲ್ಲಿ ತೀವ್ರವಾದ ಯತ್ನವನ್ನು ಬೇಗನೆ ಕೈಗೊಳ್ಳಬೇಕು. ವಾನರಸೈನ್ಯಗಳನ್ನು

ತತೋಽತಿಕಾಯೋ ಬಲವಾನ್ ಪ್ರವಿಶ್ಯ ಹರಿವಾಹಿನೀಮ್ ।
ವಿಸ್ಫಾರಯಾಮಾಸ ಧನುರ್ನನಾದ ಚ ಪುನಃ ಪುನಃ ॥ ೩೭

ತಂ ಭೀಮವಪುಷಂ ದೃಷ್ಟ್ವಾ ರಥಸ್ಥಂ ರಥಿನಾಂ ವರಮ್ ।
ಅಭಿಪೇತುರ್ಮಹಾತ್ಮಾನೋ ಯೇ ಪ್ರಧಾನಾ ವನೌಕಸಃ ॥ ೩೮

ಕುಮುದೋ ದ್ವಿವಿದೋ ಮೈಂದೋ ನೀಲಃ ಶರಭ ಏವ ಚ ।
ಪಾದಪೈರ್ಗಿರಿಶೃಂಗೈಶ್ಚ ಯುಗಪತ್ ಸಮಭಿದ್ರವನ್ ॥ ೩೯

ತೇಷಾಂ ವೃಕ್ಷಾಂಶ್ಚ ಶೈಲಾಂಶ್ಚ ಶರೈಃ ಕಾಂಚನಭೂಷಣೈಃ ।
ಅತಿಕಾಯೋ ಮಹಾತೇಜಾಶ್ಚಿಚ್ಛೇದಾಸ್ತ್ರವಿದಾಂ ವರಃ ॥ ೪೦

ತಾಂಶ್ಚೈವ ಸರ್ವಾನ್ ಸ ಹರೀನ್ ಶರೈಃ ಸರ್ವಾಯಸೈರ್ಬಲೀ ।
ವಿವ್ಯಾಧಾಭಿಮುಖಾನ್ ಸಂಖ್ಯೇ ಭೀಮಕಾಯೋ ನಿಶಾಚರಃ ॥ ೪೧

ತೇಽರ್ದಿತಾ ಬಾಣವರ್ಷೇಣ ಭಗ್ನಗಾತ್ರಾಃ ಪ್ಲವಂಗಮಾಃ ।
ನ ಶೇಕುರತಿಕಾಯಸ್ಯ ಪ್ರತಿಕರ್ತುಂ ಮಹಾರಣೇ ॥ ೪೨

---

ಇವನು ಧೂಳಿಬ್ಬಿಸುವುದರೊಳಗೆ ಈತನನ್ನು ನಿಗ್ರಹಿಸಬೇಕು" ಎಂದನು (೩೫-೩೬). ಅಷ್ಟರಲ್ಲಿ ಬಲಾಢ್ಯನಾದ ಅತಿಕಾಯನು ವಾನರವಾಹಿನಿಯಲ್ಲಿ ನುಗ್ಗಿ ಧನುಸ್ಸನ್ನು ಜೇಗೈಯುತ್ತ ಗರ್ಜಿಸತೊಡಗಿದನು. ಭೀಮಕಾಯನಾದ ಆ ಮಹಾರಥನನ್ನು ಕಂಡೊಡನೆ, ಧೀರರಾದ ಕೆಲವು ವಾನರನಾಯಕರು ಮುಂದೆ ಬಂದು ಅತಿಕಾಯನನ್ನು ಎದುರಿಸಿದರು (೩೭-೩೮). ಕುಮುದ, ದ್ವಿವಿದ, ಮೈಂದ, ನೀಲ, ಶರಭ ಮುಂತಾದ ಕಪಿಯೂಥಪರು ವೃಕ್ಷಗಳನ್ನೂ ಗಿರಿಶೃಂಗಗಳನ್ನೂ ಧರಿಸಿ ಒಟ್ಟಿಗೆ ಅವನ ಮೇಲೆರಗಿದರು. ಅಸ್ತ್ರವಿದ್ಯಾನಿಪುಣನಾದ ಅತಿಕಾಯನು ಸುವರ್ಣಪುಂಖಾಂಕಿತಶರಗಳಿಂದ ಆ ವೃಕ್ಷಗಳನ್ನೂ ಗಿರಿಶೃಂಗಗಳನ್ನೂ ಸವರಿದನು (೩೯-೪೦). ಭೀಮದೇಹನಾದ ಆ ನಿಶಾಚರನು ಯುದ್ಧದಲ್ಲಿ ತನ್ನನ್ನು ಎದುರಿಸಿದ ಕುಮುದಾದಿ ವಾನರನಾಯಕರನ್ನು ಉಕ್ಕಿನ ಸರಳುಗಳಿಂದ ಕೆತ್ತಿದನು. ಸರಳುಗಳ ಸುರಿಮಳೆಯಿಂದ ತರಿದುಹೋದ ಶರೀರವುಳ್ಳವರಾದ ಆ ಕಪಿನಾಯಕರು ಘೋರಸಂಗ್ರಾಮದಲ್ಲಿ ಅತಿಕಾಯನನ್ನು

ತತ್ ಸೈನ್ಯಂ ಹರಿವೀರಾಣಾಂ ತ್ರಾಸಯಾಮಾಸ ರಾಕ್ಷಸಃ ।
ಮೃಗಯೂಥಮಿವ ಕ್ರುದ್ಧೋ ಹರಿರ್ಯೌವನದರ್ಪಿತಃ ॥ ೪೩

ಸ ರಾಕ್ಷಸೇಂದ್ರೋ ಹರಿಸೈನ್ಯಮಧ್ಯೇ
ನಾಯುಧ್ಯಮಾನಂ ನಿಜಘಾನ ಕಂಚಿತ್ ।
ಉಪೇತ್ಯ ರಾಮಂ ಸಧನುಃ ಕಲಾಪೀ
ಸಗರ್ವಿತಂ ವಾಕ್ಯಮಿದಂ ಬಭಾಷೇ ॥ ೪೪

ರಥೇ ಸ್ಥಿತೋಽಹಂ ಶರಚಾಪಪಾಣಿ-
ರ್ನ ಪ್ರಾಕೃತಂ ಕಂಚನ ಯೋಧಯಾಮಿ ।
ಯಶ್ಚಾಸ್ತಿ ಕಶ್ಚಿದ್ವ್ಯವಸಾಯಯುಕ್ತೋ
ದದಾತು ಮೇ ಕ್ಷಿಪ್ರಮಿಹಾದ್ಯ ಯುದ್ಧಮ್ ॥ ೪೫

ತತ್ತಸ್ಯ ವಾಕ್ಯಂ ಬ್ರುವತೋ ನಿಶಮ್ಯ
ಚುಕೋಪ ಸೌಮಿತ್ರಿರಮಿತ್ರಹಂತಾ ।
ಅಮೃಷ್ಯಮಾಣಶ್ಚ ಸಮುತ್ಪಪಾತ
ಜಗ್ರಾಹ ಚಾಪಂ ಚ ತತಃ ಸ್ಮಯಿತ್ವಾ ॥ ೪೬

---

ಎದುರಿಸಿ ಕೈಮಾಡಲಾರದೆಹೋದರು (೪೧–೪೨). ಯೌವನಮದದಿಂದ ಕೊಬ್ಬಿದ ಚಂಡಕೇಸರಿಯು ಮೃಗಗಳ ಹಿಂಡನ್ನು ಕಂಗೆಡಿಸುವಂತೆ ಆ ರಾಕ್ಷಸನು ಕಪಿವೀರರ ದಂಡನ್ನು ಅಂಜಿಸಿ ಅಂಡಲೆಸಿದನು. ಆ ರಾಕ್ಷಸೋತ್ತಮನು ತನ್ನನ್ನೆದುರಿಸಿ ಯುದ್ಧಮಾಡದಿರುವ ಯಾವ ಕಪಿಯೋಧನನ್ನೂ ಕೊಲ್ಲಲಿಲ್ಲ. ಅವನು ಧನುಸ್ಸನ್ನು ಹಿಡಿದು ಬತ್ತಳಿಕೆಯನ್ನು ಹೆಗಲಿಗೆ ಬಿಗಿದು ನೆಟ್ಟಗೆ ಶ್ರೀರಾಮನಿದ್ದಲ್ಲಿಗೆ ಹೋಗಿ ಠೇಂಕಾರದಿಂದ ಹೀಗೆಂದನು: (೪೩–೪೪) "ಎಲೈ ರಾಘವ, ನಾನು ಶರಚಾಪಗಳನ್ನು ಹಿಡಿದು ರಥದಲ್ಲಿ ಮಂಡಿಸಿದ್ದೇನೆ. ಸಾಮಾನ್ಯನಾದ ಯೋಧನೊಡನೆ ನಾನು ಯುದ್ಧಮಾಡತಕ್ಕವನೇ ಅಲ್ಲ! ನಿಮ್ಮಲ್ಲಿ ಯಾವನಾದರೂ ಉತ್ಸಾಹಿಯಾದ ಶೂರನಿದ್ದರೆ, ಅವನು ಕೂಡಲೆ ಕಾಳಗಕ್ಕೆ ಸಿದ್ಧನಾಗಿ ನನ್ನನ್ನೆದುರಿಸಲಿ!" ಎಂದನು (೪೫). ಅತಿಕಾಯನ ಆ ನುಡಿಯನ್ನು ಕೇಳಿ ಲಕ್ಷ್ಮಣನು ಕಿಡಿಕಿಡಿಯಾದನು. ಗರ್ವದ ಆ ಸೊಲ್ಲನ್ನು ಅವನಿಂದ ತಡೆದು

ಕ್ರುದ್ಧಃ ಸೌಮಿತ್ರಿರುತ್ಪತ್ಯ ತೂಣಾದಾಕ್ಷಿಪ್ಯ ಸಾಯಕಮ್ ।
ಪುರಸ್ತಾದತಿಕಾಯಸ್ಯ ವಿಚಕರ್ಷ ಮಹದ್ಧನುಃ ॥ ೪೭

ಪೂರಯನ್ ಸ ಮಹೀಂ ಶೈಲಾನಾಕಾಶಂ ಸಾಗರಂ ದಿಶಃ ।
ಜ್ಯಾಶಬ್ದೋ ಲಕ್ಷ್ಮಣಸ್ಯೋಗ್ರಸ್ತ್ರಾಸಯನ್ ರಜನೀಚರಾನ್ ॥ ೪೮

ಸೌಮಿತ್ರೇಶ್ಚಾಪನಿರ್ಘೋಷಂ ಶ್ರುತ್ವಾ ಪ್ರತಿಭಯಂ ತದಾ ।
ವಿಸಿಸ್ಮಿಯೇ ಮಹಾತೇಜಾ ರಾಕ್ಷಸೇಂದ್ರಾತ್ಮಜೋ ಬಲೀ ॥ ೪೯

ಅಥಾತಿಕಾಯಃ ಕುಪಿತೋ ದೃಷ್ಟ್ವಾ ಲಕ್ಷ್ಮಣಮುತ್ಥಿತಮ್ ।
ಆದಾಯ ನಿಶಿತಂ ಬಾಣಮಿದಂ ವಚನಮಬ್ರವೀತ್ ॥ ೫೦

ಬಾಲಸ್ತ್ವಮಸಿ ಸೌಮಿತ್ರೇ ವಿಕ್ರಮೇಷ್ವವಿಚಕ್ಷಣಃ ।
ಗಚ್ಛ ಕಿಂ ಕಾಲಸದೃಶಂ ಮಾಂ ಯೋಧಯಿತುಮಿಚ್ಛಸಿ ॥ ೫೧

ನ ಹಿ ಮದ್ಬಾಹುಸೃಷ್ಟಾನಾಮಸ್ತ್ರಾಣಾಂ ಹಿಮವಾನಪಿ ।
ಸೋಢುಮುತ್ಸಹತೇ ವೇಗಮಂತರಿಕ್ಷಮಥೋ ಮಹೀ ॥ ೫೨

---

ಕೊಳ್ಳಲಾಗಲಿಲ್ಲ. ಶತ್ರುವಿಧ್ವಂಸಕನಾದ ಆ ವೀರನು ಅತಿಕಾಯನನ್ನು ಲೆಕ್ಕಿಸದೆ, ಥಿಗ್ಗನೆ ಧನುಸ್ಸನ್ನು ಹಿಡಿದು ಮುಂದೆ ಬಂದು, ಬತ್ತಳಿಕೆಯಿಂದ ಸರಳನ್ನು ಸೆಳೆದು, ತನ್ನ ಮಹಾಧನುಸ್ಸನ್ನು ಜೇಗೈದನು (೪೬-೪೭). ಘೋರವಾದ ಆ ಧನುಷ್ಟಂಕಾರವು ಭೂಮಿಯನ್ನು ವ್ಯಾಪಿಸಿ, ಶೈಲಗಳನ್ನಡರಿ, ಆಕಾಶದಲ್ಲಿ ಪ್ರತಿಧ್ವನಿಸಿ, ಸಾಗರದಲ್ಲಿ ನುಗ್ಗಿ, ದಿಕ್ಕುಗಳಲ್ಲಿ ಮಾರ್ದನಿಗೊಂಡಿತು. ಸಮಸ್ತ ರಾಕ್ಷಸಭಟರೂ ತತ್ತರಿಸಿದರು (೪೮). ಲಕ್ಷ್ಮಣನ ಭೀಷಣವಾದ ಆ ಚಾಪನಿರ್ಘೋಷವನ್ನು ಕೇಳಿ ರಾಕ್ಷಸೇಂದ್ರತನಯನೂ ಬಲಾಢ್ಯನೂ ಆದ ಅತಿಕಾಯನು ಬೆರಗಾದನು. ಮುಂದೆ ಬಂದ ಲಕ್ಷ್ಮಣನನ್ನು ನೋಡಿ ಕುಪಿತನಾದ ಅತಿಕಾಯನು ನಿಶಿತವಾದ ಬಾಣವೊಂದನ್ನು ಕೈಗೆ ಸೆಳೆದುಕೊಂಡು ಹೀಗೆಂದನು (೪೯-೫೦): "ಎಲೈ ಸೌಮಿತ್ರಿ, ನೀನಿನ್ನೂ ಹುಡುಗನಾಗಿದ್ದೀಯೆ. ಸಂಗ್ರಾಮಮಾರ್ಗದ ನೈಪುಣ್ಯವನ್ನು ನೀನರಿಯೆ, ಅತ್ತ ಹೋಗಿಬಿಡು! ಅಂತಕಸದೃಶನಾದ ನನ್ನೊಡನೆ ಹೋರಾಡಲು ಬಯಸುವೆಯಾ? (೫೧). ನನ್ನ ಬಾಹುವಿನಿಂದ ಚಿಮ್ಮಿ ಬರುವ ಬಾಣಗಳ ರಭಸವನ್ನು ಹಿಮವಂತನೇ ತಡೆದುಕೊಳ್ಳಲಾರ.

ಸುಖಪ್ರಸುಪ್ತಂ ಕಾಲಾಗ್ನಿಂ ವಿಬೋಧಯಿತುಮಿಚ್ಛಸಿ ।
ನ್ಯಸ್ಯ ಚಾಪಂ ನಿವರ್ತಸ್ವ ಮಾ ಪ್ರಾಣಾನ್ ಜಹಿ ಮದ್ಗತಃ ॥ ೫೩

ಅಥವಾ ತ್ವಂ ಪ್ರತಿಷ್ಟಬ್ಧೋ ನ ನಿವರ್ತಿತುಮಿಚ್ಛಸಿ ।
ತಿಷ್ಠ ಪ್ರಾಣಾನ್ ಪರಿತ್ಯಜ್ಯ ಗಮಿಷ್ಯಸಿ ಯಮಕ್ಷಯಮ್ ॥ ೫೪

ಪಶ್ಯ ಮೇ ನಿಶಿತಾನ್ ಬಾಣಾನರಿದರ್ಪನಿಷೂದನಾನ್ ।
ಈಶ್ವರಾಯುಧಸಂಕಾಶಾಂಸ್ತಪ್ತಕಾಂಚನಭೂಷಣಾನ್ ॥ ೫೫

ಏಷ ತೇ ಸರ್ಪಸಂಕಾಶೋ ಬಾಣಃ ಪಾಸ್ಯತಿ ಶೋಣಿತಮ್ ।
ಮೃಗರಾಜ ಇವ ಕ್ರುದ್ಧೋ ನಾಗರಾಜಸ್ಯ ಶೋಣಿತಮ್ ॥ ೫೬

ಇತ್ಯೇವಮುಕ್ತ್ವಾ ಸಂಕ್ರುದ್ಧಃ ಶರಂ ಧನುಷಿ ಸಂದಧೇ ॥

ಶ್ರುತ್ವಾತಿಕಾಯಸ್ಯ ವಚಃ ಸರೋಷಂ
ಸಗರ್ವಿತಂ ಸಂಯತಿ ರಾಜಪುತ್ರಃ ।
ಸ ಸಂಚುಕೋಪಾತಿಬಲೋ ಮನಸ್ವೀ
ಉವಾಚ ವಾಕ್ಯಂ ಚ ತತೋ ಮಹಾರ್ಥಮ್ ॥ ೫೭

ಭೂಲೋಕ ದೇವಲೋಕಗಳಲ್ಲಿರುವ ಯಾರೂ ಸಹಿಸಿಕೊಳ್ಳಲಾರರು (೫೨). ತನ್ನ ಪಾಡಿಗೆ ನೆಮ್ಮದಿಯಾಗಿರುವ ಕಾಲಾಗ್ನಿಯನ್ನು ಕೆರಳಿಸಲಿಚ್ಛಿಸುವೆಯಾ ? ಬಿಲ್ಲನ್ನು ಅಲ್ಲಿಟ್ಟು ನಿಲ್ಲದೆ ಹೊರಟುಹೋಗು ! ನನ್ನ ಕೈಗೆ ಸಿಕ್ಕಿ ಪ್ರಾಣವನ್ನು ಬಿಡಬೇಡ. ಹಾಗಿಲ್ಲದೆ ಸೊಕ್ಕಿನಿಂದ ಹೋಗದೆ ನಿಲ್ಲುವೆಯಾದರೆ, ನಿಲ್ಲು ! ಪ್ರಾಣವನ್ನು ಬಿಟ್ಟು ಯಮನ ಮನೆಗೆ ಹೋಗಬಹುದು ! (೫೩-೫೪). ಇಲ್ಲಿ ನೋಡು ! ಶತ್ರುದರ್ಪವನ್ನು ನುಂಗಿ ನೊಣೆಯುವ ನನ್ನ ನಿಶಿತಾಸ್ತ್ರಗಳನ್ನು ನೋಡು ! ಕಾಂಚನಭೂಷಿತಗಳಾದ ಈ ಅಸ್ತ್ರಗಳು ಈಶ್ವರನ ತ್ರಿಶೂಲಕ್ಕೆ ಸಾಟಿಯಾದವು ! ಸರ್ಪಸಂಕಾಶವಾದ ಈ ಒಂದು ಬಾಣವೇ ನಿನ್ನ ನೆತ್ತರನ್ನು ಹೀರುವುದು. ಕ್ರೋಧೋನ್ಮತ್ತ ಕಂಠೀರವನು ಗಜರಾಜನ ರಕ್ತವನ್ನು ಕುಡಿಯುವಂತೆ ಕುಡಿಯುವುದು" ಎಂದು ಆರ್ಭಟಿಸಿ ರೋಷಾವಿಷ್ಟನಾದ ಅತಿಕಾಯನು ಶರವನ್ನು ಧನುಸ್ಸಿಗೆ ಅಳವಡಿಸಿದನು (೫೫-೫೬). ಸಿಟ್ಟಿನಿಂದಲೂ ಔದ್ಧತ್ಯದಿಂದಲೂ ನುಡಿದ ಅತಿಕಾಯನ ವಚನವನ್ನು ಕೇಳಿ, ಮಹಾವೀರನೂ ಧೀರನೂ ಆದ

ನ ವಾಕ್ಯಮಾತ್ರೇಣ ಭವಾನ್ ಪ್ರಧಾನೋ
ನ ಕತ್ಥನಾತ್ ಸತ್ಪುರುಷಾ ಭವಂತಿ ।
ಮಯಿ ಸ್ಥಿತೇ ಧನ್ವಿನಿ ಬಾಣಪಾಣೌ
ವಿದರ್ಶಯಸ್ವಾತ್ಮಬಲಂ ದುರಾತ್ಮನ್ ॥ ೫೮

ಕರ್ಮಣಾ ಸೂಚಯಾತ್ಮಾನಂ ನ ವಿಕತ್ಥಿತುಮರ್ಹಸಿ ।
ಪೌರುಷೇಣ ತು ಯೋ ಯುಕ್ತಃ ಸ ತು ಶೂರ ಇತಿ ಸ್ಮೃತಃ ॥ ೫೯

ಸರ್ವಾಯುಧಸಮಾಯುಕ್ತೋ ಧನ್ವೀ ತ್ವಂ ರಥಮಾಸ್ಥಿತಃ ।
ಶರೈರ್ವಾ ಯದಿ ವಾಪ್ಯಸ್ತ್ರೈರ್ದರ್ಶಯಸ್ವ ಪರಾಕ್ರಮಮ್ ॥ ೬೦

ತತಃ ಶಿರಸ್ತೇ ನಿಶಿತೈಃ ಪಾತಯಿಷ್ಯಾಮ್ಯಹಂ ಶರೈಃ ।
ಮಾರುತಃ ಕಾಲಸಂಪಕ್ವಂ ವೃಂತಾತ್ತಾಲಫಲಂ ಯಥಾ ॥ ೬೧

ಅದ್ಯ ತೇ ಮಾಮಕಾ ಬಾಣಾಸ್ತಪ್ತಕಾಂಚನಭೂಷಣಾಃ ।
ಪಾಸ್ಯಂತಿ ರುಧಿರಂ ಗಾತ್ರಾದ್ಬಾಣಶಲ್ಯಾಂತರೋತ್ಥಿತಮ್ ॥ ೬೨

---

ಸೌಮಿತ್ರಿಯು ಕುಪಿತನಾಗಿ ಅರ್ಥವತ್ತಾದ ಮಾತಿನಿಂದ ಹೀಗೆಂದನು: "ಎಲೈ ದುರಾತ್ಮ, ಬರಿಯ ಮಾತಿನಿಂದಲೇ ನೀನು ದೊಡ್ಡವನೆನಿಸಲಾರೆ. ಹೆಮ್ಮೆಯ ನುಡಿಯಿಂದ ಯಾರೂ ಶೂರರಾಗುವುದಿಲ್ಲ. ಧನುಸ್ಸನ್ನು ಹಿಡಿದು ಬಾಣಪಾಣಿಯಾಗಿ ನಿಂತಿರುವ ನನ್ನಲ್ಲಿ ನಿನ್ನ ಬಲವೇನೆಂಬುದನ್ನು ಪ್ರದರ್ಶಿಸು (೫೭-೫೮). ಕಾರ್ಯವನ್ನು ಮಾಡಿ ತೋರಿಸಿ ನೀನು ಎಂಥವ ನೆಂಬುದನ್ನು ವ್ಯಕ್ತಪಡಿಸು. ಒಣಹೆಮ್ಮೆಯ ಮಾತನ್ನಾಡಬೇಡ. ಪೌರುಷ ವನ್ನು ಮೆರೆಸುವಾತನು ಶೂರನೆನಿಸುವನು. ಎಲೈ ರಾಕ್ಷಸ-ಅತಿಕಾಯ, ನೀನು ಸರ್ವಾಯುಧಸನ್ನದ್ಧನೂ ಧನುರ್ಧಾರಿಯೂ ಆಗಿ ರಥವನ್ನೇರಿ ಬಂದಿದ್ದೀಯೆ. ಶರಗಳಿಂದಲೋ ಮಂತ್ರಾಸ್ತ್ರಗಳಿಂದಲೋ ನಿನ್ನ ಪರಾಕ್ರಮ ವನ್ನು ತೋರಿಸು (೫೯-೬೦) ಅನಂತರ ನಿಶಿತ ಶರಗಳಿಂದ ನಿನ್ನ ತಲೆ ಯನ್ನು ಕೆಳಗುರುಳಿಸುತ್ತೇನೆ! ಪಕ್ವವಾದ ತಾಳೆಯಹಣ್ಣನ್ನು ತೊಟ್ಟಿನಿಂದ ಗಾಳಿಯು ಬೀಳಿಸುವಂತೆ ಬೀಳಿಸುತ್ತೇನೆ. ಸುವರ್ಣಪುಂಖಾಂಕಿತಗಳಾದ ನನ್ನ ಶರಗಳು ಅಲಗಿನಿಂದ ನಿನ್ನ ದೇಹವನ್ನು ಕೊರೆದು ಕೊರೆದು ರುಧಿರ

ಬಾಲೋಽಯಮಿತಿ ವಿಜ್ಞಾಯ ನ ಮಾವಜ್ಞಾತುಮರ್ಹಸಿ ।
ಬಾಲೋ ವಾ ಯದಿ ವಾ ವೃದ್ಧೋ ಮೃತ್ಯುಂ ಜಾನೀಹಿ ಸಂಯುಗೇ ॥

ಬಾಲೇನ ವಿಷ್ಣುನಾ ಲೋಕಾಸ್ತ್ರಯಃ ಕ್ರಾಂತಾಸ್ತ್ರಿಭಿಃ ಕ್ರಮೈಃ ।
ಇತ್ಯೇವಮುಕ್ತ್ವಾ ಸಂಕ್ರುದ್ಧಃ ಶರಾನ್ ಧನುಷಿ ಸಂದಧೇ ॥ ೭೪

ಲಕ್ಷ್ಮಣಸ್ಯ ವಚಃ ಶ್ರುತ್ವಾ ಹೇತುಮತ್ ಪರಮಾರ್ಥವತ್ ।
ಅತಿಕಾಯಃ ಪ್ರಚುಕ್ರೋಧ ಬಾಣಂ ಚೋತ್ತಮಮಾದದೇ ॥ ೭೫

ತತೋ ವಿದ್ಯಾಧರಾ ಭೂತಾ ದೇವಾ ದೈತ್ಯಾ ಮಹರ್ಷಯಃ ।
ಗುಹ್ಯಕಾಶ್ಚ ಮಹಾತ್ಮಾನಸ್ತದ್ಯುದ್ಧಂ ದ್ರಷ್ಟುಮಾಗಮನ್ ॥ ೭೬

ತತೋಽತಿಕಾಯಃ ಕುಪಿತಶ್ಚಾಪಮಾರೋಪ್ಯ ಸಾಯಕಮ್ ।
ಲಕ್ಷ್ಮಣಾಯ ಪ್ರಚಿಕ್ಷೇಪ ಸಂಕ್ಷಿಪನ್ನಿವ ಚಾಂಬರಮ್ ॥ ೭೭

ತಮಾಪತಂತಂ ನಿಶಿತಂ ಶರಮಾಶೀವಿಷೋಪಮಮ್ ।
ಅರ್ಧಚಂದ್ರೇಣ ಚಿಚ್ಛೇದ ಲಕ್ಷ್ಮಣಃ ಪರವೀರಹಾ ॥ ೭೮

---

ವನ್ನು ಹೀರುತ್ತವೆ! (೭೧-೭೨). ಎಲಾ ರಾಕ್ಷಸ, ನಾನು ಬಾಲಕನೆಂದು ತಿಳಿದು ಅವಹೇಳನಮಾಡುವೆಯಾ? ನಾನು ಬಾಲಕನೋ ವೃದ್ಧನೋ, ಹೇಗಿದ್ದರೂ ಈ ರಣದಲ್ಲಿ ನಿನಗೆ ಮೃತ್ಯುವಾಗಿದ್ದೇನೆಂದು ತಿಳಿ! ವಿಷ್ಣುವು ಬಾಲಕನಾಗಿಯೇ ಬಂದು ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಅಳಿದು ತುಳಿಯಲಿಲ್ಲವೆ?" ಎಂದು ಹೇಳಿ ಲಕ್ಷ್ಮಣನು ಕ್ರೋಧದಿಂದ ಶರಗಳನ್ನು ಧನುಸ್ಸಿಗೆ ಹೂಡಿದನು (೭೩-೭೪). ಲಕ್ಷ್ಮಣನ ಪ್ರತ್ಯುತ್ತರವು ಸಯುಕ್ತಿಕವಾಗಿಯೂ ಅರ್ಥವತ್ತಾಗಿಯೂ ಇತ್ತು. ಅದನ್ನಾಲಿಸಿ ಅತಿಕಾಯನು ಸಿಡಿದೆದ್ದು ಸರ್ವೋತ್ತಮವಾದ ಒಂದು ಬಾಣವನ್ನು ಹಿರಿದನು. ಆ ಯುದ್ಧವನ್ನು ನೋಡುವುದಕ್ಕಾಗಿ ವಿದ್ಯಾಧರರೂ, ಭೂತಗಳೂ, ದೇವದಾನವರೂ, ಮಹರ್ಷಿಗಳೂ, ಯಕ್ಷರೂ ಆಕಾಶದಲ್ಲಿ ಬಂದು ನೆರೆದರು (೭೫-೭೬). ಅತಿಕಾಯನು ಕೋಪದಿಂದ ಸರಳನ್ನು ಬಿಲ್ಲಿಗೇರಿಸಿ, ಅಂಬರವನ್ನೇ ನುಂಗುವಂತೆ ಮಹಾರಭಸದಿಂದ ಲಕ್ಷ್ಮಣನಿಗೆ ಗುರಿಯಿಟ್ಟು ಹೊಡೆದನು. ವಿಷಸರ್ಪದಂತೆ ಭುಸ್ಸೆಂದು ಬರುತ್ತಿದ್ದ ಆ ಸರಳನ್ನು ಪರಂತಪನಾದ ಲಕ್ಷ್ಮಣನು ಅರ್ಧಚಂದ್ರಾಸ್ತ್ರದಿಂದ ಕತ್ತರಿಸಿದನು (೭೭-೭೮).

ತಂ ನಿಕೃತ್ತಂ ಶರಂ ದೃಷ್ಟ್ವಾ ಕೃತ್ತಭೋಗಮಿವೋರಗಮ್ ।
ಅತಿಕಾಯೋ ಭೃಶಂ ಕ್ರುದ್ಧಃ ಪಂಚ ಬಾಣಾನ್ ಸಮಾದದೇ ॥ ೬೯

ತಾನ್ ಶರಾನ್ ಸಂಪ್ರಚಿಕ್ಷೇಪ ಲಕ್ಷ್ಮಣಾಯ ನಿಶಾಚರಃ ।
ತಾನಪ್ರಾಪ್ತಾನ್ ಶರೈಸ್ತೀಕ್ಷ್ಣೈಶ್ಚಿಚ್ಛೇದ ಭರತಾನುಜಃ ॥ ೭೦

ಸ ತಾನ್ ಛಿತ್ತ್ವಾ ಶರೈಸ್ತೀಕ್ಷ್ಣೈರ್ಲಕ್ಷ್ಮಣಃ ಪರವೀರಹಾ ।
ಆದದೇ ನಿಶಿತಂ ಬಾಣಂ ಜ್ವಲಂತಮಿವ ತೇಜಸಾ ॥ ೭೧

ತಮಾದಾಯ ಧನುಃಶ್ರೇಷ್ಠೇ ಯೋಜಯಾಮಾಸ ಲಕ್ಷ್ಮಣಃ ।
ವಿಚಕರ್ಷ ಚ ವೇಗೇನ ವಿಸಸರ್ಜ ಚ ವೀರ್ಯವಾನ್ ॥ ೭೨

ಪೂರ್ಣಾಯತವಿಸೃಷ್ಟೇನ ಶರೇಣ ನತಪರ್ವಣಾ ।
ಲಲಾಟೇ ರಾಕ್ಷಸಶ್ರೇಷ್ಠಮಾಜಘಾನ ಸ ವೀರ್ಯವಾನ್ ॥ ೭೩

ಸ ಲಲಾಟೇ ಶರೋ ಭಗ್ನಸ್ತಸ್ಯ ಭೀಮಸ್ಯ ರಕ್ಷಸಃ ।
ದದೃಶೇ ಶೋಣಿತೇನಾಕ್ತಃ ಪನ್ನಗೇಂದ್ರ ಇವಾಚಲೇ ॥ ೭೪

---

ಕಡಿದುರುಳಿಸಿದ ಸರ್ಪದಂತೆ ಎರಡು ತುಂಡಾದ ತನ್ನ ಸರಳನ್ನು ಕಂಡು ಕೆರಳಿದ ಅತಿಕಾಯನು ಐದು ಬಾಣಗಳನ್ನು ಹಿರಿದನು. ಆ ನಿಶಾಚರನು ಅವನ್ನು ಲಕ್ಷ್ಮಣನಮೇಲೆ ಪ್ರಯೋಗಿಸಲು, ಅವು ಹತ್ತಿರಕ್ಕೆ ಬರುವಷ್ಟರಲ್ಲಿ ಭರತಾನುಜನು ಭರದಿಂದ ಹರಿತವಾದ ಶರಗಳನ್ನು ಹೊಡೆದು ತುಂಡರಿಸಿದನು (೬೯-೭೦). ಆಮೇಲೆ ವೀರಾಗ್ರಣಿಯಾದ ಲಕ್ಷ್ಮಣನು ಪ್ರಜ್ವಲಿಸುತ್ತಿದ್ದ ತೀಕ್ಷ್ಣಾಸ್ತ್ರವನ್ನು ಮಹಾಧನುಸ್ಸಿಗೆ ಹೂಡಿ ಆಕರ್ಣಪರ್ಯಂತವಾಗಿ ಎಳೆದು ಅತಿಕಾಯನಿಗೆ ಗುರಿಯಿಟ್ಟು ಹೊಡೆದನು. ನೆಟ್ಟಗಿದ್ದ ಆ ಬಾಣವು ನೆಟ್ಟಗೆ ನುಗ್ಗಿ ಅತಿಕಾಯನ ಹಣೆಗೆ ರಪ್ಪೆಂದು ಬಡಿಯಿತು (೭೧-೭೩). ಭೀಮಕಾಯನಾದ ಆ ರಾಕ್ಷಸನ ಹಣೆಯಲ್ಲಿ ನೆಟ್ಟು ರಕ್ತಸಿಕ್ತವಾದ ಆ ಬಾಣವು ಪರ್ವತಾಗ್ರದಲ್ಲಿ ಕಾಣಿಸಿಕೊಳ್ಳುವ ಸರ್ಪದಂತೆ ತೋರಿತು. ಲಕ್ಷ್ಮಣನ ಬಾಣದ ಹೊಡೆತಕ್ಕೆ ತತ್ತರಿಸಿದ ಆ ನಿಶಾಚರನು ಪರಮೇಶ್ವರನ ಬಾಣದಿಂದ ಜಡಿಯಲ್ಪಟ್ಟ ತ್ರಿಪುರಾಸುರರ ಗೋಪುರದ್ವಾರದಂತೆ ಅಲ್ಲಾಡಿದನು! (೭೪-೭೫). ಬಲಾಢ್ಯನಾದ ಅತಿಕಾಯನು ಹಾಗೆಯೇ ಚೇತರಿಸಿಕೊಂಡು, ಮುಂದೇನು ಮಾಡಬೇಕೆಂದು ತನ್ನಲ್ಲಿಯೇ ಆಲೋಚಿಸಿ,

ರಾಕ್ಷಸಃ ಪ್ರಚಕಂಪೇ ಚ ಲಕ್ಷ್ಮಣೇಷುಪ್ರಪೀಡಿತಃ ।
ರುದ್ರಬಾಣಹತಂ ಘೋರಂ ಯಥಾ ತ್ರಿಪುರಗೋಪುರಮ್ ॥ ೭೫

ಚಿಂತಯಾಮಾಸ ಚಾಶ್ವಸ್ಯ ವಿಮೃಶ್ಯ ಚ ಮಹಾಬಲಃ ।
ಸಾಧು ಬಾಣನಿಪಾತೇನ ಶ್ಲಾಘನೀಯೋಽಸಿ ಮೇ ರಿಪುಃ ॥ ೭೬

ವಿಧಾಯೈವಂ ವಿನಮ್ಯಾಸ್ಯಂ ನಿಯಮ್ಯ ಚ ಭುಜಾವುಭೌ ।
ಸ ರಥೋಪಸ್ಥಮಾಸ್ಥಾಯ ರಥೇನ ಪ್ರಚಚಾರ ಹ ॥ ೭೭

ಏಕಂ ತ್ರೀನ್ ಪಂಚ ಸಪ್ತೇತಿ ಸಾಯಕಾನ್ ರಾಕ್ಷಸರ್ಷಭಃ ।
ಆದದೇ ಸಂದಧೇ ಚಾಪಿ ವಿಚಕರ್ಷೋತ್ಸಸರ್ಜ ಚ ॥ ೭೮

ತೇ ಬಾಣಾಃ ಕಾಲಸಂಕಾಶಾ ರಾಕ್ಷಸೇಂದ್ರಧನುಶ್ಚ್ಯುತಾಃ ।
ಹೇಮಪುಂಖಾ ರವಿಪ್ರಖ್ಯಾಶ್ಚಕ್ರುರ್ದೀಪ್ತಮಿವಾಂಬರಮ್ ॥ ೭೯

ತತಸ್ತಾನ್ ರಾಕ್ಷಸೋತ್ಸೃಷ್ಟಾನ್ ಶರೌಘಾನ್ ರಾಘವಾನುಜಃ ।
ಅಸಂಭ್ರಾಂತಃ ಪ್ರಚಿಚ್ಛೇದ ನಿಶಿತೈರ್ಬಹುಭಿಃ ಶರೈಃ ॥ ೮೦

ತಾನ್ ಶರಾನ್ ಯುಧಿ ಸಂಪ್ರೇಕ್ಷ್ಯ ನಿಕೃತ್ತಾನ್ ರಾವಣಾತ್ಮಜಃ ।
ಚುಕೋಪ ತ್ರಿದಶೇಂದ್ರಾರಿರ್ಜಗ್ರಾಹ ನಿಶಿತಂ ಶರಮ್ ॥ ೮೧

---

“ಭಲಾ! ಲಕ್ಷ್ಮಣ, ನಿನ್ನ ಬಾಣಪ್ರಯೋಗವನ್ನು ನೋಡಿ ಶತ್ರುವಾದರೂ ನಿನ್ನನ್ನು ಶ್ಲಾಘಿಸಬೇಕಾಗಿದೆ!” ಎಂದು ಹೇಳಿ, ತಲೆಬಾಗಿಸಿ ಭುಜಗಳೆರಡನ್ನೂ ಒದರಿ ಕೈಗಳಿಗೆ ಲಘುತ್ವವನ್ನು ತಂದುಕೊಂಡು, ರಥದಲ್ಲಿ ತನ್ನ ಸ್ಥಾನವನ್ನಡರಿದನು (೭೬-೭೭). ಅನಂತರ ಆ ರಾಕ್ಷಸಶಾರ್ದೂಲನು ಒಂದೊಂದು ಬಾರಿಗೆ ಒಂದು, ಮೂರು, ಐದು, ಏಳರಂತೆ ಕೂರ್ಗಣೆಗಳನ್ನು ಹೆದೆಗೆ ಜೋಡಿಸಿ ಎಳೆದೆಳೆದು ಲಕ್ಷ್ಮಣನಮೇಲೆ ಬಿಡತೊಡಗಿದನು (೭೮). ಚಿನ್ನದ ಹಿಡಿಗಳಿಂದ ಕೂಡಿದ ಅತಿಕಾಯನ ಕೂರ್ಗಣೆಗಳು ರವಿಯಂತೆ ಅಂಬರವನ್ನು ಬೆಳಗುತ್ತ, ಮೃತ್ಯುವಿನಂತೆ ಭರ್ರನೆ ಬರತೊಡಗಿದವು. ಲಕ್ಷ್ಮಣನು ಸ್ವಲ್ಪವೂ ಎದೆಗುಂದದೆ ನಿಶಿತಶರಗಳಿಂದ ಅವುಗಳನ್ನು ಕಡಿಕಡಿದು ಒಟ್ಟಿದನು (೭೯-೮೦). ಲಕ್ಷ್ಮಣನು ಹೀಗೆ ಸಕಲ ಶರಗಳನ್ನೂ ಕಡಿದೊಟ್ಟುವುದನ್ನು ಕಂಡು ರಾವಣಾತ್ಮಜನು ಕ್ರುದ್ಧನಾಗಿ, ಮತ್ತೊಂದು

ಸ ಸಂಧಾಯ ಮಹಾತೇಜಾಸ್ತಂ ಬಾಣಂ ಸಹಸೋತ್ಸೃಜತ್ ।
ತತಃ ಸೌಮಿತ್ರಿಮಾಯಾಂತಮಾಜಘಾನ ಸ್ತನಾಂತರೇ ॥ ೮೨

ಅತಿಕಾಯೇನ ಸೌಮಿತ್ರಿಸ್ತಾಡಿತೋ ಯುಧಿ ವಕ್ಷಸಿ ।
ಸುಸ್ರಾವ ರುಧಿರಂ ತೀವ್ರಂ ಮದಂ ಮತ್ತ ಇವ ದ್ವಿಪಃ ॥ ೮೩

ಸ ಚಕಾರ ತದಾತ್ಮಾನಂ ವಿಶಲ್ಯಂ ಸಹಸಾ ವಿಭುಃ ।
ಜಗ್ರಾಹ ಚ ಶರಂ ತೀಕ್ಷ್ಣಮಸ್ತ್ರೇಣಾಪಿ ಚ ಸಂದಧೇ ॥ ೮೪

ಆಗ್ನೇಯೇನ ತದಾಸ್ತ್ರೇಣ ಯೋಜಯಾಮಾಸ ಸಾಯಕಮ್ ।
ಸ ಜಜ್ವಾಲ ತದಾ ಬಾಣೋ ಧನುಷ್ಯಸ್ಯ ಮಹಾತ್ಮನಃ ॥ ೮೫

ಅತಿಕಾಯೋಽಪಿ ತೇಜಸ್ವೀ ಸೌರಮಸ್ತ್ರಂ ಸಮಾದದೇ ।
ತೇನ ಬಾಣಂ ಭುಜಂಗಾಭಂ ಹೇಮಪುಂಖಮಯೋಜಯತ್ ॥ ೮೬

ತದಸ್ತ್ರಂ ಜ್ವಲಿತಂ ಘೋರಂ ಲಕ್ಷ್ಮಣಃ ಶರಮಾಹಿತಮ್ ।
ಅತಿಕಾಯಾಯ ಚಿಕ್ಷೇಪ ಕಾಲದಂಡಮಿವಾಂತಕಃ ॥ ೮೭

ಆಗ್ನೇಯೇನಾಭಿಸಂಯುಕ್ತಂ ದೃಷ್ಟ್ವಾ ಬಾಣಂ ನಿಶಾಚರಃ ।
ಉತ್ಸಸರ್ಜ ತದಾ ಬಾಣಂ ದೀಪ್ತಂ ಸೂರ್ಯಾಸ್ತ್ರಯೋಜಿತಮ್ ॥

---

ಉಗ್ರಸಾಯಕವನ್ನು ಚಾಪಕ್ಕೆ ಹೂಡಿ ಎಚ್ಚಲು, ಅದು ಸೌಮಿತ್ರಿಯ ಎದೆಗೆ ರಭಸದಿಂದ ಬಡಿಯಿತು (೮೧-೮೨). ಆಗ ಲಕ್ಷ್ಮಣನ ವಕ್ಷಸ್ಥಳದಿಂದ, ಮತ್ತಮಾತಂಗದ ಗಂಡಸ್ಥಲದಿಂದ ಮದೋದಕವು ಸುರಿಯುವಂತೆ ರಕ್ತವು ಸುರಿಯಿತು. ಧೀರನಾದ ಲಕ್ಷ್ಮಣನು ಎದೆಯಲ್ಲಿ ನಾಟಿದ ಆ ಸಾಯಕವನ್ನು ತನ್ನ ಕೈಯಿಂದಲೇ ಕಿತ್ತೆಸೆದು, ಮತ್ತೊಂದು ಶರವನ್ನು ಬಿಲ್ಲಿಗೆ ಹೂಡಿ ಆಗ್ನೇಯಮಂತ್ರದಿಂದ ಅಭಿಮಂತ್ರಿಸಿದನು. ಧನುಸ್ಸಿಗೆ ಸಂಧಾನಮಾಡಿದ ಆ ಅಸ್ತ್ರವು ಪ್ರಜ್ವಲಿಸತೊಡಗಿತು (೮೩-೮೫). ತೇಜಸ್ವಿಯಾದ ಅತಿಕಾಯನು ಸರ್ಪಸದೃಶವೂ ಹೇಮಪುಂಖಿತವೂ ಆದ ಅಸ್ತ್ರವನ್ನು ಹೂಡಿ ಸೌರಮಂತ್ರದಿಂದ ಅಭಿಮಂತ್ರಿಸಿದನು. ಅಷ್ಟರಲ್ಲಿ ಲಕ್ಷ್ಮಣನು ಘೋರವಾಗಿ ಪ್ರಜ್ವಲಿಸುತ್ತಿದ್ದ ಆಗ್ನೇಯಾಸ್ತ್ರವನ್ನು, ಯಮನು ಕಾಲದಂಡವನ್ನು ಪ್ರಯೋಗಿಸುವಂತೆ ಅತಿಕಾಯನಮೇಲೆ ಪ್ರಯೋಗಿಸಿದನು (೮೬-೮೭). ಆಗ್ನೇಯಾಸ್ತ್ರವು ತನ್ನೆಡೆಗೆ ಬರುವುದನ್ನು ಕಂಡು

ತಾವುಭಾವಂಬರೇ ಬಾಣಾವನ್ಯೋಽನ್ಯಮಭಿಜಘ್ನತುಃ ।
ತೇಜಸಾ ಸಂಪ್ರದೀಪ್ತಾಗ್ರೌ ಕ್ರುದ್ಧಾವಿವ ಭುಜಂಗಮೌ ॥ ೮೯

ತಾವನ್ಯೋಽನ್ಯಂ ವಿನಿರ್ದಹ್ಯ ಪೇತತುಃ ಪೃಥಿವೀತಲೇ ।
ನಿರರ್ಚಿಷೌ ಭಸ್ಮಕೃತೌ ನ ಭ್ರಾಜೇತೇ ಶರೋತ್ತಮೌ ॥ ೯೦

ತತೋಽತಿಕಾಯಃ ಸಂಕ್ರುದ್ಧಸ್ತ್ವಸ್ತ್ರಮೈಷೀಕಮುತ್ಸೃಜತ್ ।
ತತ್ ಪ್ರಚಿಚ್ಛೇದ ಸೌಮಿತ್ರಿರಸ್ತ್ರೇಣೈಂದ್ರೇಣ ವೀರ್ಯವಾನ್ ॥ ೯೧

ಐಷೀಕಂ ನಿಹತಂ ದೃಷ್ಟ್ವಾ ರುಷಿತೋ ರಾವಣಾತ್ಮಜಃ ।
ಯಾಮ್ಯೇನಾಸ್ತ್ರೇಣ ಸಂಕ್ರುದ್ಧೋ ಯೋಜಯಾಮಾಸ ಸಾಯಕಮ್

ತತಸ್ತದಸ್ತ್ರಂ ಚಿಕ್ಷೇಪ ಲಕ್ಷ್ಮಣಾಯ ನಿಶಾಚರಃ ।
ವಾಯವ್ಯೇನ ತದಸ್ತ್ರೇಣ ನಿಜಘಾನ ಸ ಲಕ್ಷ್ಮಣಃ ॥ ೯೩

ಅಥೈನಂ ಶರಧಾರಾಭಿರ್ಧಾರಾಭಿರಿವ ತೋಯದಃ ।
ಅಭ್ಯವರ್ಷತ್ ಸುಸಂಕ್ರುದ್ಧೋ ಲಕ್ಷ್ಮಣೋ ರಾವಣಾತ್ಮಜಮ್ ॥

---

ಆ ರಾಕ್ಷಸನು ಪ್ರತಿಯಾಗಿ ಸೌರಾಸ್ತ್ರವನ್ನು ಬಿಟ್ಟನು. ಆ ಎರಡು ಅಸ್ತ್ರಗಳೂ ಆಕಾಶವನ್ನಡರಿ, ಕೆರಳಿದ ಸರ್ಪಗಳಂತೆ ಉರಿಯನ್ನು ಕಕ್ಕುತ್ತ ಕಾದಾಡಿದವು. ಅವೆರಡೂ ಕಾದಾಡಿ ಒಂದರಿಂದೊಂದು ಪರಾಹತವಾಗಿ ಉರಿಯಡಗಿ ಭಸ್ಮೀಭೂತವಾಗಿ ಬಿದ್ದವು (೮೮-೯೦) ಆಗ ಅತಿಕಾಯನು ಖತಿಗೊಂಡು ಐಷೀಕಾಸ್ತ್ರವನ್ನು ಪ್ರಯೋಗಿಸಿದನು. ಸೌಮಿತ್ರಿಯು ಐಂದ್ರಾಸ್ತ್ರದಿಂದ ಅದನ್ನು ಖಂಡಿಸಿದನು. ಐಷೀಕಾಸ್ತ್ರವು ನಿಷ್ಫಲವಾದುದನ್ನು ಕಂಡು ರಾವಣಾತ್ಮಜನು ಯಮದೇವತಾಕವಾದ ಮಂತ್ರಾಸ್ತ್ರವನ್ನು ಪ್ರಯೋಗಿಸಿದನು. ಲಕ್ಷ್ಮಣನು ವಾಯುವ್ಯಾಸ್ತ್ರದಿಂದ ಅದನ್ನು ನಾಶ ಮಾಡಿದನು (೯೧-೯೩). ಅನಂತರ ಲಕ್ಷ್ಮಣನು ಸಿಟ್ಟಿನಿಂದ, ಮೋಡವು ಮಳೆಗರೆಯುವಂತೆ ಅತಿಕಾಯನಮೇಲೆ ಎಡೆಬಿಡದೆ ಶರವರ್ಷಗಳನ್ನು ಸುರಿದನು. ಆ ಶರಗಳು ವಜ್ರಖಚಿತವಾದ ಅತಿಕಾಯನ ಕವಚಕ್ಕೆ ತಾಗಿ ಮೊನೆಮುರಿದು ಕೆಳಗೆ ಬೀಳುತ್ತಿದ್ದವು (೯೪-೯೫). ಅವೆಲ್ಲವೂ ವ್ಯರ್ಥ

ತೇಽತಿಕಾಯಂ ಸಮಾಸಾದ್ಯ ಕವಚೇ ವಜ್ರಭೂಷಿತೇ ।
ಭಗ್ನಾಗ್ರಶಲ್ಯಾಃ ಸಹಸಾ ಪೇತುರ್ಬಾಣಾ ಮಹೀತಲೇ ॥ ೯೫

ತಾನ್ ಮೋಘಾನಭಿಸಂಪ್ರೇಕ್ಷ್ಯ ಲಕ್ಷ್ಮಣಃ ಪರವೀರಹಾ ।
ಅಭ್ಯವರ್ಷನ್ಮಹೇಷೂಣಾಂ ಸಹಸ್ರೇಣ ಮಹಾಯಶಾಃ ॥ ೯೬

ಸ ವೃಷ್ಯಮಾಣೋ ಬಾಣೌಘೈರತಿಕಾಯೋ ಮಹಾಬಲಃ ।
ಅವಧ್ಯಕವಚಃ ಸಂಖ್ಯೇ ರಾಕ್ಷಸೋ ನೈವ ವಿವ್ಯಥೇ ॥ ೯೭

ಶರಂ ಚಾಶೀವಿಷಾಕಾರಂ ಲಕ್ಷ್ಮಣಾಯ ವ್ಯಪಾಸೃಜತ್ ।
ಸ ತೇನ ವಿದ್ಧಃ ಸೌಮಿತ್ರಿರ್ಮರ್ಮದೇಶೇ ಶರೇಣ ಹ ॥ ೯೮

ಮುಹೂರ್ತಮಾತ್ರಂ ನಿಃಸಂಜ್ಞೋಹ್ಯಭವಚ್ಛತ್ರುತಾಪನಃ ।
ತತಃ ಸಂಜ್ಞಾಮುಪಾಲಭ್ಯ ಚತುರ್ಭಿಃ ಸಾಯಕೋತ್ತಮೈಃ ॥ ೯೯

ನಿಜಘಾನ ಹಯಾನ್ ಸಂಖ್ಯೇ ಸಾರಥಿಂ ಚ ಮಹಾಬಲಃ ।
ಧ್ವಜಸ್ಯೋನ್ಮಥನಂ ಕೃತ್ವಾ ಶರವರ್ಷೈರರಿಂದಮಃ ॥ ೧೦೦

ಅಸಂಭ್ರಾಂತಃ ಸ ಸೌಮಿತ್ರಿಃ ತಾನ್ ಶರಾನಭಿಲಕ್ಷಿತಾನ್ ।
ಮುಮೋಚ ಲಕ್ಷ್ಮಣೋ ಬಾಣಾನ್ ವಧಾರ್ಥಂ ತಸ್ಯ ರಕ್ಷಸಃ ॥

---

ವಾದುದನ್ನು ಗಮನಿಸಿ ಶೂರಾಗ್ರಗಣ್ಯನಾದ ಲಕ್ಷ್ಮಣನು ಇನ್ನೂ ಪ್ರಬಲವಾದ ನಾವಿರಾರು ಶರಗಳನ್ನು ನಿರಂತರವಾಗಿ ತೂರಿದನು. ಆದರೇನು ? ಅಭೇದ್ಯಕವಚವನ್ನು ಧರಿಸಿದ್ದ ಅತಿಕಾಯನಿಗೆ ಅವುಗಳಿಂದ ಯಾವ ಪೀಡೆಯೂ ಆಗಲಿಲ್ಲ (೯೬-೯೭). ಆಮೇಲೆ ಅತಿಕಾಯನು ಘೋರಸರ್ಪದಂತಿದ್ದ ಒಂದು ಸರಳನ್ನು ಲಕ್ಷ್ಮಣನಮೇಲೆ ತೆಗೆದೆಚ್ಚನು. ಆ ಸರಳು ವೇಗದಿಂದ ಬಂದು ಮರ್ಮಸ್ಥಳಕ್ಕೆ ತಾಕಲು ಲಕ್ಷ್ಮಣನು ಒಂದು ಕ್ಷಣ ಕಾಲ ಎಚ್ಚರದಪ್ಪಿದಂತಾದನು. ಮರುಕ್ಷಣದಲ್ಲಿ ಎಚ್ಚೆತ್ತು, ಆ ವೀರನು ನಾಲ್ಕು ಬಾಣಗಳನ್ನು ಹೊಡೆದು ಅತಿಕಾಯನ ಕುದುರೆಗಳನ್ನೂ ಸಾರಥಿಯನ್ನೂ ಸಂಹರಿಸಿ ರಥದಲ್ಲಿದ್ದ ಧ್ವಜಸ್ತಂಭವನ್ನುರುಳಿಸಿದನು (೯೮-೧೦೦). ಮತ್ತೆ ಲಕ್ಷ್ಮಣನು ಸ್ವಲ್ಪವೂ ಸಂಭ್ರಾಂತನಾಗದೆ ಅತಿಕಾಯನನ್ನು ಕೊಲ್ಲಬೇಕೆಂದೆಣಿಸಿ ಒಂದೇಸಮನಾಗಿ ಗುರಿಯಿಟ್ಟು ಬಾಣವರ್ಷಗಳನ್ನು ಸುರಿಸಿದನು. ಆದರೆ ಯಾವ ಉತ್ತಮ ಬಾಣವೂ ಆ ರಾಕ್ಷಸನನ್ನು ನೋಯಿಸ

ತಾವುಭಾವಂಬರೇ ಬಾಣಾವನ್ಯೋನ್ಯಮಭಿಜಘ್ನತುಃ ।
ತೇಜಸಾ ಸಂಪ್ರದೀಪ್ತಾಗ್ರೌ ಕ್ರುದ್ಧಾವಿವ ಭುಜಂಗಮೌ ॥ ೮೯

ತಾವನ್ಯೋನ್ಯಂ ವಿನಿರ್ದಹ್ಯ ಪೇತತುಃ ಪೃಥಿವೀತಲೇ ।
ನಿರರ್ಚಿಷೌ ಭಸ್ಮಕೃತೌ ನ ಭ್ರಾಜೇತೇ ಶರೋತ್ತಮೌ ॥ ೯೦

ತತೋಽತಿಕಾಯಃ ಸಂಕ್ರುದ್ಧಸ್ತ್ವಸ್ತ್ರಮೈಷೀಕಮುತ್ಸೃಜತ್ ।
ತತ್ ಪ್ರಚಿಚ್ಛೇದ ಸೌಮಿತ್ರಿರಸ್ತ್ರೇಣೈಂದ್ರೇಣ ವೀರ್ಯವಾನ್ ॥ ೯೧

ಐಷೀಕಂ ನಿಹತಂ ದೃಷ್ಟ್ವಾ ರುಷಿತೋ ರಾವಣಾತ್ಮಜಃ ।
ಯಾಮ್ಯೇನಾಸ್ತ್ರೇಣ ಸಂಕ್ರುದ್ಧೋ ಯೋಜಯಾಮಾಸ ಸಾಯಕಮ್

ತತಸ್ತದಸ್ತ್ರಂ ಚಿಕ್ಷೇಪ ಲಕ್ಷ್ಮಣಾಯ ನಿಶಾಚರಃ ।
ವಾಯವ್ಯೇನ ತದಸ್ತ್ರೇಣ ನಿಜಘಾನ ಸ ಲಕ್ಷ್ಮಣಃ ॥ ೯೩

ಅಥೈನಂ ಶರಧಾರಾಭಿರ್ಧಾರಾಭಿರಿವ ತೋಯದಃ ।
ಅಭ್ಯವರ್ಷತ್ ಸುಸಂಕ್ರುದ್ಧೋ ಲಕ್ಷ್ಮಣೋ ರಾವಣಾತ್ಮಜಮ್ ॥

---

ಆ ರಾಕ್ಷಸನು ಪ್ರತಿಯಾಗಿ ಸೌರಾಸ್ತ್ರವನ್ನು ಬಿಟ್ಟನು. ಆ ಎರಡು ಅಸ್ತ್ರಗಳೂ ಆಕಾಶವನ್ನಡರಿ, ಕೆರಳಿದ ಸರ್ಪಗಳಂತೆ ಉರಿಯನ್ನು ಕಕ್ಕುತ್ತ ಕಾದಾಡಿದವು. ಅವೆರಡೂ ಕಾದಾಡಿ ಒಂದರಿಂದೊಂದು ಪರಾಹತವಾಗಿ ಉರಿಯಡಗಿ ಭಸ್ಮೀಭೂತವಾಗಿ ಬಿದ್ದವು (೮೮-೯೦) ಆಗ ಅತಿಕಾಯನು ಖತಿಗೊಂಡು ಐಷೀಕಾಸ್ತ್ರವನ್ನು ಪ್ರಯೋಗಿಸಿದನು. ಸೌಮಿತ್ರಿಯು ಐಂದ್ರಾಸ್ತ್ರದಿಂದ ಅದನ್ನು ಖಂಡಿಸಿದನು. ಐಷೀಕಾಸ್ತ್ರವು ನಿಷ್ಫಲವಾದುದನ್ನು ಕಂಡು ರಾವಣಾತ್ಮಜನು ಯಮದೇವತಾಕವಾದ ಮಂತ್ರಾಸ್ತ್ರವನ್ನು ಪ್ರಯೋಗಿಸಿದನು. ಲಕ್ಷ್ಮಣನು ವಾಯವ್ಯಾಸ್ತ್ರದಿಂದ ಅದನ್ನು ನಾಶಮಾಡಿದನು (೯೧-೯೩). ಅನಂತರ ಲಕ್ಷ್ಮಣನು ಸಿಟ್ಟಿನಿಂದ, ಮೋಡವು ಮಳೆಗರೆಯುವಂತೆ ಅತಿಕಾಯನಮೇಲೆ ಎಡೆಬಿಡದೆ ಶರವರ್ಷಗಳನ್ನು ಸುರಿದನು. ಆ ಶರಗಳು ವಜ್ರಖಚಿತವಾದ ಅತಿಕಾಯನ ಕವಚಕ್ಕೆ ತಾಗಿ ಮೊನೆಮುರಿದು ಕೆಳಗೆ ಬೀಳುತ್ತಿದ್ದವು (೯೪-೯೫). ಅವೆಲ್ಲವೂ ವ್ಯರ್ಥ

ತಂ ಬ್ರಹ್ಮಣೋಽಸ್ತ್ರೇಣ ನಿಯೋಜ್ಯ ಚಾಪೇ
ಶರಂ ಸುಪುಂಖಂ ಯಮದೂತಕಲ್ಪಮ್ ।
ಸೌಮಿತ್ರಿರಿಂದ್ರಾರಿಸುತಸ್ಯ ತಸ್ಯ
ಸಸರ್ಜ ಬಾಣಂ ಯುಧಿ ವಜ್ರಕಲ್ಪಮ್ ॥ ೧೦೬

ತಂ ಲಕ್ಷ್ಮಣೋತ್ಸೃಷ್ಟಮಮೋಘವೇಗಂ
ಸಮಾಪತಂತಂ ಜ್ವಲನಪ್ರಕಾಶಮ್ ।
ಸುವರ್ಣವಜ್ರೋತ್ತಮಚಿತ್ರಪುಂಖಂ
ತದಾತಿಕಾಯಃ ಸಮರೇ ದದರ್ಶ ॥ ೧೦೭

ತಂ ಪ್ರೇಕ್ಷಮಾಣಃ ಸಹಸಾತಿಕಾಯೋ
ಜಘಾನ ಬಾಣೈರ್ನಿಶಿತೈರನೇಕೈಃ ।
ಸ ಸಾಯಕಸ್ತಸ್ಯ ಸುಪರ್ಣವೇಗ-
ಸ್ತದಾತಿಕಾಯಸ್ಯ ಜಗಾಮ ಪಾರ್ಶ್ವಮ್ ॥ ೧೦೮

ತಮಾಗತಂ ಪ್ರೇಕ್ಷ್ಯ ತದಾತಿಕಾಯೋ
ಬಾಣಂ ಪ್ರದೀಪ್ತಾಂತಕಕಾಲಕಲ್ಪಮ್ ।
ಜಘಾನ ಶಕ್ತ್ಯೃಷ್ಟಿಗದಾಕುಠಾರೈಃ
ಶೂಲೈರ್ಹಲೈಶ್ಚಾಪ್ಯವಿಪನ್ನಚೇತಾಃ ॥ ೧೦೯

---

ನಂತೆ ಭೀಕರವಾಗಿ ವಜ್ರಾಯುಧದಂತೆ ಹೊಳೆಯುತ್ತಿದ್ದ ಆ ಶರವನ್ನು ಬ್ರಾಹ್ಮಮಂತ್ರದಿಂದ ಅಭಿಮಂತ್ರಿಸಿ, ರಾವಣಪುತ್ರನಾದ ಅತಿಕಾಯನ ಮೇಲೆ ಲಕ್ಷ್ಮಣನು ಪ್ರಯೋಗಿಸಿದನು(೧೦೬). ಲಕ್ಷ್ಮಣನು ಪ್ರಯೋಗಿಸಿದ ಆ ಬ್ರಹ್ಮಾಸ್ತ್ರವು ವಜ್ರಖಚಿತವಾದ ಚಿನ್ನದ ಹಿಡಿಗಳಿಂದ ವಿರಾಜಿಸುತ್ತಿತ್ತು. ಅಗ್ನಿಯಂತೆ ತೊಳತೊಳಗುತ್ತ ಮಹಾವೇಗದಿಂದ ಸಿಡಿದು ಬರುತ್ತಿದ್ದ ಆ ದಿವ್ಯಾಸ್ತ್ರವನ್ನು ಅತಿಕಾಯನು ನೋಡಿದನು (೧೦೭). ಅದನ್ನು ನಿಗ್ರಹಿಸುವುದಕ್ಕಾಗಿ ತೀಕ್ಷ್ಣವಾದ ಬಹುಬಗೆಯ ಶರಗಳನ್ನು ಎಡೆಬಿಡದೆ ಹೊಡೆದನು. ಆದರೂ ವೈನತೇಯನಂತೆ ಅಪ್ರತಿಹತವೇಗವುಳ್ಳ ಆ ಬ್ರಹ್ಮಾಸ್ತ್ರವು ಅತಿಕಾಯನ ಬಳಿಗೆ ತಡೆಯಿಲ್ಲದೆ ನುಗ್ಗಿಬರುತ್ತಿತ್ತು (೧೦೮). ಪ್ರಳಯಕಾಲದ ಯಮನಂತೆ ಬರುತ್ತಿದ್ದ ಆ ಬಾಣವನ್ನು ನೋಡಿ

ತಾನ್ಯಾಯುಧಾನ್ಯದ್ಭುತವಿಗ್ರಹಾಣಿ
ಮೋಘಾನಿ ಕೃತ್ವಾ ಸ ಶರೋಽಗ್ನಿದೀಪ್ತಃ ।
ಪ್ರಗೃಹ್ಯ ತಸ್ಯೈವ ಕಿರೀಟಜುಷ್ಟಂ
ತತೋಽತಿಕಾಯಸ್ಯ ಶಿರೋ ಜಹಾರ ॥ ೧೧೦

ತಚ್ಛಿರಃ ಸಶಿರಸ್ತ್ರಾಣಂ ಲಕ್ಷ್ಮಣೇಷುಪ್ರಪೀಡಿತಮ್ ।
ಪಪಾತ ಸಹಸಾ ಭೂಮೌ ಶೃಂಗಂ ಹಿಮವತೋ ಯಥಾ ॥ ೧೧೧

ತಂ ತು ಭೂಮೌ ನಿಪತಿತಂ ದೃಷ್ಟ್ವಾ ವಿಕ್ಷಿಪ್ತಭೂಷಣಮ್ ।
ಬಭೂವುರ್ವ್ಯಥಿತಾಃ ಸರ್ವೇ ಹತಶೇಷಾ ನಿಶಾಚರಾಃ ॥ ೧೧೨

ತೇ ವಿಷಣ್ಣಮುಖಾ ದೀನಾಃ ಪ್ರಹಾರಜನಿತಶ್ರಮಾಃ ।
ವಿನೇದುರುಚ್ಚೈರ್ಬಹವಃ ಸಹಸಾ ವಿಸ್ವರೈಃ ಸ್ವರೈಃ ॥ ೧೧೩

ತತಸ್ತೇ ತ್ವರಿತಂ ಯಾತಾ ನಿರಪೇಕ್ಷಾ ನಿಶಾಚರಾಃ ।
ಪುರೀಮಭಿಮುಖಾ ಭೀತಾ ದ್ರವಂತೋ ನಾಯಕೇ ಹತೇ ॥ ೧೧೪

---

ಎದೆಗುಂದದೆ ಅತಿಕಾಯನು ಶಕ್ತಿ, ಖುಷ್ಟಿ, ಗದೆ, ಕುಠಾರ, ಶೂಲ, ಹಲಾದ್ಯಾಯುಧಗಳಿಂದ ಅದನ್ನು ಹೊಡೆದು, ಬಡಿದು, ತಿವಿದು ನಾನಾ ಪ್ರಕಾರಗಳಿಂದ ಎದುರಿಸಿದನು (೧೦೯). ಕಾಲಾಗ್ನಿಯಂತೆ ಬೆಳಗುತ್ತಿದ್ದ ಆ ಬ್ರಹ್ಮಾಸ್ತ್ರವು ಅತಿಕಾಯನ ಭೀಕರಾಯುಧಗಳನ್ನು ಎಣಿಕೆಗೇ ತಾರದೆ ಮುನ್ನುಗ್ಗಿ, ಕಿರೀಟಾಲಂಕೃತವಾದ ಅತಿಕಾಯನ ತಲೆಯನ್ನು ಕತ್ತರಿಸಿ ಹಾರಿಸಿತು (೧೧೦). ಲಕ್ಷ್ಮಣನ ಬಾಣದಿಂದ ಕತ್ತರಿಸಲ್ಪಟ್ಟ ಕಿರೀಟ ಯುಕ್ತವಾದ ಆ ಶಿರಸ್ಸು, ಹಿಮಾಲಯದ ಶೃಂಗವು ಮುರಿದುಬೀಳುವಂತೆ ವೇಗದಿಂದ ನೆಲದಮೇಲೆ ಬಿದ್ದಿತು. ಅತಿಕಾಯನ ದೇಹವು ಭೂಮಿಯಲ್ಲಿ ಉರುಳಿತು. ಧರಿಸಿದ್ದ ಒಡವೆಗಳು ಕಿತ್ತು ಹರಡಿದವು. ಅದನ್ನು ನೋಡಿ ಹತಶೇಷರಾದ ನಿಶಾಚರರು ಚಿಂತಾಕ್ರಾಂತರಾದರು (೧೧೧-೧೧೨). ಅವರ ಮುಖಗಳಲ್ಲಿ ವಿಷಾದವಾವರಿಸಿತು. ಯುದ್ಧಪ್ರಹಾರಗಳಿಂದ ಬಳಲಿದ್ದ ಆ ರಾಕ್ಷಸರು ಅತಿಕಾಯನ ಮರಣದಿಂದ ದೀನರಾಗಿ ವಿಕೃತಸ್ವರ ಗಳಿಂದ ಗಟ್ಟಿಯಾಗಿ ಹಾಹಾಕಾರಮಾಡಿದರು. ತಮ್ಮ ನಾಯಕನು ಹತ ನಾದ್ದರಿಂದ ಕಳವಳಗೊಂಡ ಆ ರಾಕ್ಷಸರು ಯುದ್ಧದ ಆಸೆಯನ್ನು ತೊರೆದು

ಪ್ರಹರ್ಷಯುಕ್ತಾ ಬಹವಸ್ತು ವಾನರಾಃ
ಪ್ರಬುದ್ಧಪದ್ಮಪ್ರತಿಮಾನನಾಸ್ತದಾ ।
ಅಪೂಜಯನ್ ಲಕ್ಷ್ಮಣಮಿಷ್ಟಭಾಗಿನಂ
ಹತೇ ರಿಪೌ ಭೀಮಬಲೇ ದುರಾಸದೇ ॥ ೧೧೫

ಅತಿಬಲಮತಿಕಾಯಮಭ್ರಕಲ್ಪಂ
ಯುಧಿ ವಿನಿಪಾತ್ಯ ಸ ಲಕ್ಷ್ಮಣಃ ಪ್ರಹೃಷ್ಟಃ ।
ತ್ವರಿತಮಥ ತದಾ ಸ ರಾಮಪಾರ್ಶ್ವಂ
ಕಪಿನಿವಹೈಶ್ಚ ಸುಪೂಜಿತೋ ಜಗಾಮ ॥ ೧೧೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಸಪ್ತತಿತಮಃ ಸರ್ಗಃ



ಲಂಕಾನಗರಕ್ಕೆ ಓಡಿಹೋದರು (೧೧೩-೧೧೪). ಭೀಮಪರಾಕ್ರಮಿಯೂ ದುರಾಸದನೂ ಆದ ಅತಿಕಾಯನು ಹತನಾಗಲು, ಇತ್ತಲಾಗಿ ವಾನರರು ಹರ್ಷದಿಂದ ಉಬ್ಬಿದರು. ಅರಳಿದ ತಾವರೆಯಂತೆ ಅವರ ಮುಖವು ಉಲ್ಲಾಸಗೊಂಡಿತು! ತಮಗೆ ಇಷ್ಟವಾದ ಜಯವನ್ನು ಗಳಿಸಿದ ಲಕ್ಷ್ಮಣನನ್ನು ಕೊಂಡಾಡಿ ಗೌರವಿಸಿದರು (೧೧೫). ಲಕ್ಷ್ಮಣನೂ ಕೂಡ ಕಾರ್ಮೋಡದಂತೆ ಬಂದೆರಗಿದ ಅತಿಬಲನಾದ ಅತಿಕಾಯನನ್ನು ಯುದ್ಧದಲ್ಲಿ ಕೊಂದೆನೆಂದು ಸಂತುಷ್ಟನಾಗಿ, ಕಪಿವಾಹಿನಿಯಿಂದ ಆದರಿಸಲ್ಪಡುತ್ತ ಶ್ರೀರಾಮನ ಬಳಿಗೆ ಬಂದನು (೧೧೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತೊಂದನೆಯ ಸರ್ಗ



## ದ್ವಿಸಪ್ತತಿತಮಃ ಸರ್ಗಃ

### ರಾವಣಮನ್ಯುಶಲ್ಯಾವಿಷ್ಕಾರಃ

ಅತಿಕಾಯಂ ಹತಂ ಶ್ರುತ್ವಾ ಲಕ್ಷ್ಮಣೇನ ಮಹೌಜಸಾ ।
ಉದ್ವೇಗಮಗಮದ್ರಾಜಾ ವಚನಂ ಚೇದಮಬ್ರವೀತ್ ॥ ೧

ಧೂಮ್ರಾಕ್ಷಃ ಪರಮಾಮರ್ಷೀ ಧನ್ವೀ ಶಸ್ತ್ರಭೃತಾಂ ವರಃ ।
ಅಕಂಪನಃ ಪ್ರಹಸ್ತಶ್ಚ ಕುಂಭಕರ್ಣಸ್ತಥೈವ ಚ ॥ ೨

ಏತೇ ಮಹಾಬಲಾ ವೀರಾ ರಾಕ್ಷಸಾ ಯುದ್ಧಕಾಂಕ್ಷಿಣಃ ।
ಜೇತಾರಃ ಪರಸೈನ್ಯಾನಾಂ ಪರೈರ್ನಿತ್ಯಾಪರಾಜಿತಾಃ ॥ ೩

ನಿಹತಾಸ್ತೇ ಮಹಾವೀರ್ಯಾ ರಾಮೇಣಾಕ್ಲಿಷ್ಟಕರ್ಮಣಾ ।
ರಾಕ್ಷಸಾಃ ಸುಮಹಾಕಾಯಾ ನಾನಾಶಸ್ತ್ರವಿಶಾರದಾಃ ॥ ೪

## ಸರ್ಗ ೭೨

ಅತಿಕಾಯನ ವಧೆಯನ್ನು ಕೇಳಿ ರಾವಣನು ಪುತ್ರಶೋಕದಿಂದ
ವಿಷಣ್ಣನಾಗುವುದು   ನಗರವನ್ನು ರಕ್ಷಿಸುವಂತೆ ಭೃತ್ಯರಿಗೆ
ಆಜ್ಞಾಪಿಸಿ ಅಂತಃಪುರವನ್ನು ಪ್ರವೇಶಿಸುವುದು.

ತೇಜೋನಿಧಿಯಾದ ಲಕ್ಷ್ಮಣನಿಂದ ಅತಿಕಾಯನು ಹತನಾದನೆಂಬ ವಾರ್ತೆಯು ರಾವಣನಿಗೆ ಮುಟ್ಟಿತು. ಆ ರಾಕ್ಷಸರಾಜನು ಕಳವಳಗೊಂಡು ಉದ್ವಿಗ್ನನಾದನು. ಅವನು ವಿಷಣ್ಣನಾಗಿ "ಆಹಾ! ಏನಾಶ್ಚರ್ಯವಿದು! ಧೂಮ್ರಾಕ್ಷನು ಸಾಮಾನ್ಯನೆ? ಅತ್ಯಂತ ಛಲಸ್ವಭಾವದ ಧನುರ್ಧಾರಿ. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನೆನಿಸಿದವನು. ಅಕಂಪನ, ಪ್ರಹಸ್ತ, ಕುಂಭಕರ್ಣ ಇವರೆಲ್ಲರೂ ಅಸಾಧಾರಣ ಪರಾಕ್ರಮಿಗಳು (೧-೨). ಮಹಾವೀರರಾದ ಈ ರಾಕ್ಷಸರೆಲ್ಲರೂ ಯುದ್ಧಕ್ಕಾಗಿ ಕಾದಿರುವ ಉತ್ಸಾಹಶಾಲಿಗಳು! ಶತ್ರುಸೈನ್ಯಗಳನ್ನು ಎಷ್ಟೋ ಸಲ ಜಯಿಸಿಬಂದವರು. ಒಮ್ಮೆಯೂ ಸೋಲನ್ನೇ ಕಂಡವರಲ್ಲ! (೩). ಇಂಥ ವೀರರನ್ನು ರಾಮನು ಸುಲಭವಾಗಿ ಕೊಂದುಬಿಟ್ಟನಲ್ಲ! ಮಹಾಕಾಯರೂ ಶಸ್ತ್ರವಿದ್ಯಾವಿಶಾರದರೂ ರಣಮಲ್ಲರೂ

ಅನ್ಯೇ ಚ ಬಹವಃ ಶೂರಾ ಮಹಾತ್ಮಾನೋ ನಿಪಾತಿತಾಃ ।
ಪ್ರಖ್ಯಾತಬಲವೀರ್ಯೇಣ ಪುತ್ರೇಣೇಂದ್ರಜಿತಾ ಮಮ ॥ ೫
ಯೌ ಹಿ ತೌ ಭ್ರಾತರೌ ವೀರೌ ಬದ್ಧೌ ದತ್ತವರೈಃ ಶರೈಃ ।
ಯನ್ನ ಶಕ್ಯಂ ಸುರೈಃ ಸರ್ವೈರಸುರೈರ್ವಾ ಮಹಾಬಲೈಃ ॥ ೬
ಮೋಕ್ತುಂ ತದ್ಬಂಧನಂ ಘೋರಂ ಯಕ್ಷಗಂಧರ್ವಕಿನ್ನರೈಃ ।
ತನ್ನ ಜಾನೇ ಪ್ರಭಾವೈರ್ವಾ ಮಾಯಯಾ ಮೋಹನೇನ ವಾ ॥ ೭
ಶರಬಂಧಾದ್ವಿಮುಕ್ತೌ ತೌ ಭ್ರಾತರೌ ರಾಮಲಕ್ಷ್ಮಣೌ ।
ಯೇ ಯೋಧಾ ನಿರ್ಗತಾಃ ಶೂರಾ ರಾಕ್ಷಸಾ ಮಮ ಶಾಸನಾತ್ ॥ ೮
ತೇ ಸರ್ವೇ ನಿಹತಾ ಯುದ್ಧೇ ವಾನರೈಃ ಸುಮಹಾಬಲೈಃ ।
ತಂ ನ ಪಶ್ಯಾಮ್ಯಹಂ ಯುದ್ಧೇ ಯೋಽದ್ಯ ರಾಮಂ ಸಲಕ್ಷ್ಮಣಮ್ ॥ ೯
ಶಾಸಯೇತ್ ಸಬಲಂ ವೀರಂ ಸಸುಗ್ರೀವವಿಭೀಷಣಮ್ ।
ಅಹೋ ನು ಬಲವಾನ್ ರಾಮೋ ಮಹದಸ್ತ್ರಬಲಂ ಚ ವೈ ॥ ೧೦

---

ಆದ ಬಹುಮಂದಿ ರಾಕ್ಷಸಯೋಧರನ್ನು ನಂಹರಿಸಿಬಿಟ್ಟನಲ್ಲ! ನನ್ನ ಮಗನಾದ ಇಂದ್ರಜಿತು ಲೋಕವಿಖ್ಯಾತನಾದ ಶೂರಾಗ್ರೇಸರ. ಆತನು ವರಬಲದಿಂದ ಲಬ್ಧವಾದ ಸರ್ಪಾಸ್ತ್ರಗಳಿಂದ ಆ ಇಬ್ಬರು ಅಣ್ಣತಮ್ಮಂದಿರನ್ನು ಬಿಗಿದು ಕೆಡಹಿದ್ದನು. ಆ ನಾಗಪಾಶಬಂಧನವನ್ನು ಬಿಡಿಸಲು ಬಲಾಢ್ಯರಾದ ಸುರಾಸುರರಿಗೂ ಸಾಧ್ಯವಾಗುತ್ತಿರಲಿಲ್ಲ (೪-೬). ಘೋರವಾದ ಆ ಬಂಧನವನ್ನು ಯಕ್ಷ, ಗಂಧರ್ವ, ಕಿನ್ನರರು ಸೇರಿ ಹೆಣಗಿದರೂ ಬಿಡಿಸಲು ಶಕ್ಯವಾದ್ದಲ್ಲ. ಅಂಥ ನಾಗಪಾಶದಿಂದ ರಾಮಲಕ್ಷ್ಮಣರು ತಮ್ಮನ್ನು ಹೇಗೆ ಬಿಡಿಸಿಕೊಂಡಿರಬಹುದು? ಯಾವ ಮಾಹಾತ್ಮ್ಯದಿಂದ, ಯಾವ ವಿಚಿತ್ರಶಕ್ತಿಯಿಂದ, ಯಾವ ಔಷಧಮಂತ್ರಾದಿಗಳ ಬಲದಿಂದ ಬಿಡುಗಡೆಯಾಗಿರಬಹುದು! ನನಗೊಂದೂ ಅರ್ಥವಾಗದು! (೭-೮). ನನ್ನ ಆಜ್ಞೆಯಂತೆ ವೀರರಾದ ಯಾವ ಯಾವ ರಾಕ್ಷಸಯೋಧರು ಯುದ್ಧಕ್ಕೆ ಹೋದರೋ ಅವರೆಲ್ಲರನ್ನೂ ಬಲಾಢ್ಯರಾದ ವಾನರರು ಕೊಂದುಹಾಕಿದ್ದಾರೆ! ಈಗ ಯುದ್ಧಮಾಡಿ ರಾಮಲಕ್ಷ್ಮಣರನ್ನು ದಂಡಿಸಬಲ್ಲವರು ಯಾರೆಂಬುದೇ ತೋರದಲ್ಲ! (೯). ಸುಗ್ರೀವವಿಭೀಷಣರನ್ನಾಗಲಿ ಕಪಿಸೇನೆ

ಯಸ್ಯ ವಿಕ್ರಮಮಾಸಾದ್ಯ ರಾಕ್ಷಸಾ ನಿಧನಂ ಗತಾಃ ।
ತಂ ಮನ್ಯೇ ರಾಘವಂ ವೀರಂ ನಾರಾಯಣಮನಾಮಯಮ್ ॥ ೧೧
ತದ್ಭಯಾದ್ಧಿ ಪುರೀ ಲಂಕಾ ಪಿಹಿತದ್ವಾರತೋರಣಾ ।
ಅಪ್ರಮತ್ತೈಶ್ಚ ಸರ್ವತ್ರ ಗುಪ್ತೈ ರಕ್ಷ್ಯಾ ಪುರೀ ತ್ವಿಯಮ್ ॥ ೧೨
ಅಶೋಕವನಿಕಾಯಾಂ ಚ ಯತ್ರ ಸೀತಾಭಿರಕ್ಷ್ಯತೇ ।
ನಿಷ್ಕ್ರಾಮೋ ವಾ ಪ್ರವೇಶೋ ವಾ ಜ್ಞಾತವ್ಯಃ ಸರ್ವಥೈವ ನಃ ॥
ಯತ್ರ ಯತ್ರ ಭವೇದ್ಗುಲ್ಮಸ್ತತ್ರ ತತ್ರ ಪುನಃ ಪುನಃ ।
ಸರ್ವತಶ್ಚಾಪಿ ತಿಷ್ಠಧ್ವಂ ಸ್ವೈಃ ಸ್ವೈಃ ಪರಿವೃತಾ ಬಲೈಃ ॥ ೧೪
ದ್ರಷ್ಟವ್ಯಂ ಚ ಪದಂ ತೇಷಾಂ ವಾನರಾಣಾಂ ನಿಶಾಚರಾಃ ।
ಪ್ರದೋಷೇ ವಾರ್ಧರಾತ್ರೇ ವಾ ಪ್ರತ್ಯೂಷೇ ವಾಪಿ ಸರ್ವತಃ॥ ೧೫

---

ಯನ್ನಾಗಲಿ ಮರ್ದಿಸಬಲ್ಲ ಯಾವ ವೀರನನ್ನೂ ಕಾಣೆನಲ್ಲ! ಅಬ್ಬ! ರಾಮನು ಬಲಶಾಲಿಯೇ ಹೌದು! ಅವನ ಅಸ್ತ್ರಬಲವು ಅದ್ಭುತವಾದುದೇ ಹೌದು! (೧೦). ಅವನ ವಿಕ್ರಮದೆದುರಿಗೆ ಸಕಲ ರಾಕ್ಷಸರೂ ಹತ ರಾದರು. (ರಘುಕುಲದಲ್ಲಿ ಜನಿಸಿದ ಈ ವೀರನೇ ಸಕಲ ದೋಷರಹಿತನಾದ ಶ್ರೀಮನ್ನಾರಾಯಣನಾಗಿರಬಹುದೆಂದು ನನಗೆ ತೋರುತ್ತದೆ. ಈತನ ಭಯದಿಂದ ಲಂಕಾಪುರಿಯು ಒಳಬಾಗಿಲು ಹೊರಬಾಗಿಲುಗಳನ್ನು ಮುಚ್ಚಬೇಕಾಗಿ ಬಂದಿತು.*) ಎಲೈ ಭಟರೆ, ಎಚ್ಚರಿಕೆಯಿಂದ ನಿಮ್ಮನ್ನೂ ರಕ್ಷಿಸಿಕೊಂಡು ಈ ರಾಜಧಾನಿಯನ್ನು ರಕ್ಷಿಸುತ್ತಿರಿ (೧೧-೧೨). ಸೀತೆ ಯನ್ನು ಬಂಧನದಲ್ಲಿಟ್ಟಿರುವ ಅಶೋಕವನವನ್ನು ಕಣ್ಣಿಟ್ಟು ನೋಡಿಕೊಳ ತಕ್ಕದ್ದು. ನನಗೆ ತಿಳಿಯದೆ-ನನ್ನ ಅನುಮತಿಯಿಲ್ಲದೆ-ಯಾರೂ ಅಶೋಕವನ ದಿಂದ ಹೊರಗೆ ಬರಕೂಡದು; ಯಾರೂ ಒಳಗೆ ಹೋಗಕೂಡದು! (೧೩). ಎಲ್ಲೆಲ್ಲಿ ನಮ್ಮ ಸೇನಾಶಿಬಿರಗಳುಂಟೋ ಅವೆಲ್ಲವನ್ನೂ ನಿಮ್ಮ ನಿಮ್ಮ ಸೇನೆ ಗಳೊಡನೆ ಎಚ್ಚರಿಕೆಯಿಂದ ಕಾಯುತ್ತಿರಿ. ಎಲೈ ರಾಕ್ಷಸಭಟರೆ, ಸಂಜೆ ಯಾಗಲಿ ಮಧ್ಯರಾತ್ರವಾಗಲಿ ಬೆಳಗಿನಜಾವವಾಗಲಿ-ಸರ್ವಕಾಲದಲ್ಲಿಯೂ

---

* 'ತಂ ಮನ್ಯೇ....ತೋರಣಾ' ಎಂಬ ಶ್ಲೋಕವು ಅನೇಕ ಪ್ರತಿಗಳಲ್ಲಿ ದೊರಕು ವುದಿಲ್ಲ. ಇದು ಪ್ರಕ್ಷಿಪ್ತವಾಗಿರಬೇಕು.

ನಾವಜ್ಞಾ ತತ್ರ ಕರ್ತವ್ಯಾ ವಾನರೇಷು ಕದಾಚನ ।
ದ್ವಿಷತಾಂ ಬಲಮುದ್ಯುಕ್ತಮಾಪತತ್ ಕಿಂ ಸ್ಥಿತಂ ಸದಾ ॥ ೧೬

ತತಸ್ತೇ ರಾಕ್ಷಸಾಃ ಸರ್ವೇ ಶ್ರುತ್ವಾ ಲಂಕಾಧಿಪಸ್ಯ ತತ್ ।
ವಚನಂ ಸರ್ವಮಾತಿಷ್ಠನ್ ಯಥಾವತ್ತು ಮಹಾಬಲಾಃ ॥ ೧೭

ಸ ತಾನ್ ಸರ್ವಾನ್ ಸಮಾದಿಶ್ಯ ರಾವಣೋ ರಾಕ್ಷಸಾಧಿಪಃ ।
ಮನ್ಯುಶಲ್ಯಂ ವಹನ್ ದೀನಃ ಪ್ರವಿವೇಶ ಸ್ವಮಾಲಯಮ್ ॥ ೧೮

ತತಃ ಸ ಸಂದೀಪಿತಕೋಪವಹ್ನಿ-
　ರ್ನಿಶಾಚರಾಣಾಮಧಿಪೋ ಮಹಾಬಲಃ ।
ತದೇವ ಪುತ್ರವ್ಯಸನಂ ವಿಚಿಂತಯನ್
　ಮುಹುರ್ಮುಹುಶ್ಚೈವ ತದಾ ವ್ಯನಿಃಶ್ವಸತ್ ॥ ೧೯

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಿಸಪ್ತತಿತಮಃ ಸರ್ಗಃ



ವ್ಯೆಯೆಲ್ಲ ಕಣ್ಣಾಗಿಸಿಕೊಂಡು, ವಾನರರ ಪ್ರಯತ್ನವೇನೆಂಬುದನ್ನು ತಪ್ಪದೆ ಗಮನಿಸತಕ್ಕದ್ದು (೧೪-೧೫). ವಾನರರ ವಿಷಯದಲ್ಲಿ ಸ್ವಲ್ಪವೂ ಅನಡ್ಡೆಯು ಸಲ್ಲದು. ಶತ್ರುಸೈನ್ಯವು ಸನ್ನದ್ಧವಾಗಿದೆಯೆ, ನುಗ್ಗಿಬರುತ್ತಿದೆಯೆ ಅಥವಾ ಸುಮ್ಮನೆ ನಿಂತಿದೆಯೆ–ಎಂಬುದನ್ನು ಜಾಗರೂಕತೆಯಿಂದ ಸದಾ ನೋಡುತ್ತಿರಬೇಕು" ಎಂದು ತಿಳಿಸಿದನು (೧೬). ಲಂಕಾಧಿಪತಿಯ ಆಜ್ಞೆಯಂತೆ ಬಲಶಾಲಿಗಳಾದ ಆ ರಾಕ್ಷಸರೆಲ್ಲರೂ ತಪ್ಪದೆ ತಮ್ಮ ಕಾರ್ಯಗಳಲ್ಲಿ ನಿರತರಾದರು. ರಾವಣನು ಈ ರೀತಿಯಲ್ಲಿ ಆಜ್ಞೆಯನ್ನಿತ್ತು ತನ್ನ ಅಂತಃಪುರವನ್ನು ಪ್ರವೇಶಿಸಿದನು. ವ್ಯಥೆಯೆಂಬ ಈಟಿಯು ಅವನ ಎದೆಯಲ್ಲಿ ನಾಟಿತ್ತು. ದೈನ್ಯದಿಂದ ಅವನು ಕೊರಗುತ್ತಿದ್ದನು (೧೭-೧೮). ತನ್ನ ಮಕ್ಕಳು ಸತ್ತುಹೋದರೆಂಬ ವ್ಯಸನವು ಬಾಧಿಸುತ್ತಿತ್ತು. ಪುತ್ರರ ದುರ್ಗತಿಯನ್ನೇ ಚಿಂತಿಸುತ್ತ ಚಿಂತಿಸುತ್ತ ರಾವಣನು ಕೋಪಾವಿಷ್ಟನಾದನು. ಕೋಪಾಗ್ನಿಯು ಮತ್ತೆ ಭುಗಿಲೆಂದಿತು. ಮುಂದೇನು ಮಾಡಬೇಕೆಂದು ನಿಟ್ಟುಸಿರುಬಿಡತೊಡಗಿದನು (೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತೆರಡನೆಯ ಸರ್ಗ

# ತ್ರಿಸಪ್ತತಿತಮಃ ಸರ್ಗಃ

## ಇಂದ್ರಜಿನ್ಮಾಯಾಯುದ್ಧಮ್

ತತೋ ಹತಾನ್ ರಾಕ್ಷಸಪುಂಗವಾಂಸ್ತಾನ್
ದೇವಾಂತಕಾದಿತ್ರಿಶಿರೋಽತಿಕಾಯಾನ್ ।
ರಕ್ಷೋಗಣಾಸ್ತತ್ರ ಹತಾವಶಿಷ್ಟಾ-
ಸ್ತೇ ರಾವಣಾಯ ತ್ವರಿತಂ ಶಶಂಸುಃ ॥ ೧

ತತೋ ಹತಾಂಸ್ತಾನ್ ಸಹಸಾ ನಿಶಮ್ಯ
ರಾಜಾ ಮುಮೋಹಾಶ್ರುಪರಿಪ್ಲುತಾಕ್ಷಃ ।
ಪುತ್ರಕ್ಷಯಂ ಭ್ರಾತೃವಧಂ ಚ ಘೋರಂ
ವಿಚಿಂತ್ಯ ರಾಜಾ ವಿಪುಲಂ ಪ್ರದಧ್ಯೌ ॥ ೨

ತತಸ್ತು ರಾಜಾನಮುದೀಕ್ಷ್ಯ ದೀನಂ
ಶೋಕಾರ್ಣವೇ ಸಂಪರಿಪುಪ್ಲುವಾನಮ್ ।
ರಥರ್ಷಭೋ ರಾಕ್ಷಸರಾಜಸೂನು-
ಸ್ತಮಿಂದ್ರಜಿದ್ವಾಕ್ಯಮಿದಂ ಬಭಾಷೇ ॥ ೩

## ಸರ್ಗ ೭೩

ಇಂದ್ರಜಿತು ರಾವಣನನ್ನು ಸಂತೈಸಿ, ಅಭಿಚಾರಿಕಹೋಮವನ್ನು ಮಾಡಿ
ಯುದ್ಧಕ್ಕೆ ತೆರಳುವುದು. ಬ್ರಹ್ಮಾಸ್ತ್ರಬಲದಿಂದ ರಾಮಲಕ್ಷ್ಮಣರನ್ನೂ
ಕಪಿಯೋಧರನ್ನೂ ಮೂರ್ಛೆಗೊಳಿಸಿ ಲಂಕೆಗೆ ಹಿಂದಿರುಗುವುದು.

ಯುದ್ಧದಲ್ಲಿ ಸತ್ತುಳಿದ ಕೆಲವು ರಾಕ್ಷಸರು ಶೀಘ್ರವಾಗಿ ಲಂಕೆಗೆ ಬಂದು ರಾವಣನನ್ನು ಸಂದರ್ಶಿಸಿ, ದೇವಾಂತಕ, ತ್ರಿಶಿರ, ಅತಿಕಾಯ ಮುಂತಾದ ರಾಕ್ಷಸನಾಯಕರು ಹತರಾದರೆಂದು ನಿವೇದಿಸಿದರು. ಅದನ್ನು ಕೇಳಿ ರಾಕ್ಷಸರಾಜನ ಕಣ್ಣೀರು ಉಕ್ಕಿತು. ಶೋಕಾತಿರೇಕದಿಂದ ಅವನು ಮೂರ್ಛೆಹೋದನು. ಒಬ್ಬೊಬ್ಬರಾಗಿ ತನ್ನ ಪುತ್ರರು ಸಾಯುತ್ತಿರುವುದನ್ನೂ ಮಹೋದರಾದಿ ಭ್ರಾತೃಗಳ ವಧೆಯನ್ನೂ ಚಿಂತಿಸಿ ಚಿಂತಿಸಿ, ರಾವಣನು ಶೋಕವಿಹ್ವಲನಾದನು (೧-೨). ದುಃಖಸಮುದ್ರದಲ್ಲಿ ತೇಲಿ

ನ ತಾತ ಮೋಹಂ ಪ್ರತಿಗಂತುಮರ್ಹಸಿ
ಯತ್ರೇಂದ್ರಜಿಜ್ಜೀವತಿ ರಾಕ್ಷಸೇಂದ್ರ ।
ಮದ್ಬಾಣನಿರ್ಭಿನ್ನವಿಕೀರ್ಣದೇಹಾಃ
ಪ್ರಾಣೈರ್ವಿಯುಕ್ತಾಃ ಸಮರೇ ಪತಂತಿ ॥ ೪

ನೇಂದ್ರಾರಿಬಾಣಾಭಿಹತೋ ಹಿ ಕಶ್ಚಿತ್
ಪ್ರಾಣಾನ್ ಸಮರ್ಥಃ ಸಮರೇಽಭಿಪಾತುಮ್ ।
ಪಶ್ಯಾದ್ಯ ರಾಮಂ ಸಹ ಲಕ್ಷ್ಮಣೇನ
ಮದ್ಬಾಣನಿರ್ಭಿನ್ನವಿಕೀರ್ಣದೇಹಮ್ ॥ ೫

ಗತಾಯುಷಂ ಭೂಮಿತಲೇ ಶಯಾನಂ
ಶಿತೈಃ ಶರೈರಾಚಿತಸರ್ವಗಾತ್ರಮ್ ।
ಇಮಾಂ ಪ್ರತಿಜ್ಞಾಂ ಶೃಣು ಶಕ್ರಶತ್ರೋಃ
ಸುನಿಶ್ಚಿತಾಂ ಪೌರುಷದೈವಯುಕ್ತಾಮ್ ॥ ೬

---

ಹೋಗುತ್ತಿದ್ದ ದೀನನಾದ ರಾವಣನನ್ನು ವೀಕ್ಷಿಸಿ, ಆತನ ತನಯನೂ ಮಹಾರಥಿಕನೂ ಆದ ಮೇಘನಾದನು ಬಂದು ಹೀಗೆಂದನು: "ಓ ತಂದೆಯೆ, ಇದೇಕೆ ಹೀಗೆ ಶೋಕಾಕುಲನಾಗಿದ್ದೀಯೆ? ಈ ಇಂದ್ರಜಿತು ಬದುಕಿರುವಾಗ ನೀನು ಶೋಕಿಸುವುದು ತರವಲ್ಲ. ಸಮಸ್ತ ಶತ್ರುಗಳೂ ನನ್ನ ಬಾಣಗಳಿಂದ ನಿರ್ಭಿನ್ನಗಾತ್ರರಾಗಿ ರಣರಂಗದಲ್ಲಿ ಉರುಳುವರು (೩-೪). ಇಂದ್ರಜಿತುವಿನ ಬಾಣದ ಹೊಡೆತಕ್ಕೆ ಸಿಕ್ಕಿದ ಯಾವ ಯೋಧನೂ ತನ್ನ ಪ್ರಾಣವನ್ನುಳಿಸಿಕೊಳ್ಳಲಾರ. ಈ ದಿನವೇ ರಾಮಲಕ್ಷ್ಮಣರನ್ನು ನನ್ನ ಶರಗಳಿಂದ ಕತ್ತರಿಸಿ ಚೆಲ್ಲುವೆನು, ನೋಡುತ್ತಿರು! (೫). ರಾಮನ ಆಯುಸ್ಸು ಗತಿಸುತ್ತ ಬಂದಿದೆ. ನನ್ನ ಕೂರ್ಗಣೆಗಳಿಂದ ವ್ಯಾಪ್ತಗಾತ್ರನಾಗಿ ಅವನು ಬಿದ್ದಿರುವುದನ್ನು ಇಂದು ನೋಡಬಹುದು! ಅಪ್ಪ-ರಾಕ್ಷಸೇಂದ್ರ, ಇಂದ್ರನನ್ನು ಕಂಗೆಡಿಸಿದ ಈ ಮೇಘನಾದನ ದೃಢಪ್ರತಿಜ್ಞೆಯನ್ನು ಕೇಳು. ದೈವಬಲವನ್ನೂ ಪೌರುಷವನ್ನೂ ಒಟ್ಟುಗೂಡಿಸಿ ಮಾಡುವ ಈ ಕಠೋರಪ್ರತಿಜ್ಞೆಯನ್ನಾಲಿಸು! (೬). ಈ ದಿನವೇ ನನ್ನ

ಅದ್ಯೈವ ರಾಮಂ ಸಹ ಲಕ್ಷ್ಮಣೇನ
ಸಂತರ್ಪಯಿಷ್ಯಾಮಿ ಶರೈರಮೋಘೈಃ ।
ಅದ್ಯೇಂದ್ರವೈವಸ್ವತವಿಷ್ಣುಮಿತ್ರ-
ಸಾಧ್ಯಾಶ್ವಿವೈಶ್ವಾನರಚಂದ್ರಸೂರ್ಯಾಃ ॥ ೭

ದ್ರಕ್ಷ್ಯಂತು ಮೇ ವಿಕ್ರಮಮಪ್ರಮೇಯಂ
ವಿಷ್ಣೋರಿವೋಗ್ರಂ ಬಲಿಯಜ್ಞವಾಟೇ ।
ಸ ಏವಮುಕ್ತ್ವಾ ತ್ರಿದಶೇಂದ್ರಶತ್ರು-
ರಾಪೃಚ್ಛ್ಯ ರಾಜಾನಮದೀನಸತ್ತ್ವಃ ॥ ೮

ಸಮಾರುರೋಹಾನಿಲತುಲ್ಯವೇಗಂ
ರಥಂ ಖರಶ್ರೇಷ್ಠಸಮಾಧಿಯುಕ್ತಮ್ ॥
ತಮಾಸ್ಥಾಯ ಮಹಾತೇಜಾ ರಥಂ ಹರಿರಥೋಪಮಮ್ ।
ಜಗಾಮ ಸಹಸಾ ತತ್ರ ಯತ್ರ ಯುದ್ಧಮರಿಂದಮಃ ॥ ೯

ತಂ ಪ್ರಸ್ಥಿತಂ ಮಹಾತ್ಮಾನಮನುಜಗ್ಮುರ್ಮಹಾಬಲಾಃ ।
ಸಂಹರ್ಷಮಾಣಾ ಬಹವೋ ಧನುಃಪ್ರವರಪಾಣಯಃ ॥ ೧೦

ಗಜಸ್ಕಂಧಗತಾಃ ಕೇಚಿತ್ ಕೇಚಿತ್ ಪ್ರವರವಾಜಿಭಿಃ ।
ವ್ಯಾಘ್ರವೃಶ್ಚಿಕಮಾರ್ಜಾರೈಃ ಖರೋಷ್ಟ್ರೈಶ್ಚ ಭುಜಂಗಮೈಃ ॥ ೧೧

---

ಅಮೋಘವಾದ ಶರಪರಂಪರೆಗಳಿಂದ ರಾಮಲಕ್ಷ್ಮಣರನ್ನು ನಿರ್ಭಿನ್ನಗೊಳಿಸುವೆನು*. ಇಂದ್ರ, ಯಮ, ವಿಷ್ಣು, ಮಿತ್ರ, ಸಾಧ್ಯರು, ಅಶ್ವಿನೀ ದೇವತೆಗಳು, ಅಗ್ನಿ, ಚಂದ್ರ, ಸೂರ್ಯರು ನನ್ನ ಪರಾಕ್ರಮವೇನೆಂಬುದನ್ನು ಕಣ್ಣಿಟ್ಟು ನೋಡಲಿ! ಬಲಿಯಜ್ಞದಲ್ಲಿ ತ್ರಿವಿಕ್ರಮನು ಮೆರೆಸಿದ ವಿಕ್ರಮದಂತೆ ಅಸದೃಶವಾದ ನನ್ನ ಉಗ್ರವೀರ್ಯವನ್ನು ಅವರೆಲ್ಲರೂ ಪರಿಶೀಲಿಸಲಿ!" ಎಂದನು (೭-೮). ಧೀರನಾದ ಆ ರಾಕ್ಷಸರಾಜತನಯನು ಹೀಗೆ ಹೇಳಿ ಉತ್ತಮ ಖರಗಳನ್ನು ಹೂಡಿದ ವಾಯುವೇಗದಿಂದ ಧಾವಿಸುವ ಒಂದು ಮಹಾರಥವನ್ನೇರಿದನು (೯). ಯುದ್ಧೋನ್ಮುಖನಾದ ಆ ವೀರಾ

---

* ಮೂಲದಲ್ಲಿ 'ಸಂತರ್ಪಯಿಷ್ಯಾಮಿ' ಎಂದಿದೆ. 'ಬಾಣಗಳಿಂದ ಅವರ ದೇಹಗಳನ್ನು ತುಂಬುವೆನು,' 'ಅವರಿಗೆ ತೃಪ್ತಿಯಾಗುವಂತೆ ಯುದ್ಧಮಾಡುವೆನು' ಎಂದು ಅರ್ಥವನ್ನು ಹೇಳಬಹುದು.

ವರಾಹೈಃ ಶ್ವಾಪದೈಃ ಸಿಂಹೈರ್ಜಂಬುಕೈಃ ಪರ್ವತೋಪಮೈಃ ।
ಶಶಹಂಸಮಯೂರೈಶ್ಚ ರಾಕ್ಷಸಾ ಭೀಮವಿಕ್ರಮಾಃ ॥ ೧೨

ಪ್ರಾಸಮುದ್ಗರನಿಸ್ತ್ರಿಂಶಪರಶ್ವಧಗದಾಧರಾಃ ।
ಸಶಂಖನಿನದೈಃ ಪೂರ್ಣೈರ್ಭೇರೀಣಾಂ ಚಾಪಿ ನಿಃಸ್ವನೈಃ ॥ ೧೩

ಜಗಾಮ ತ್ರಿದಶೇಂದ್ರಾರಿಃ ಸ್ತೂಯಮಾನೋ ನಿಶಾಚರೈಃ ।
ಸಶಂಖಶಶಿವರ್ಣೇನ ಛತ್ರೇಣ ರಿಪುಸೂದನಃ ॥ ೧೪

ರರಾಜ ಪ್ರತಿಪೂರ್ಣೇನ ನಭಶ್ಚಂದ್ರಮಸಾ ಯಥಾ ।
ಅವೀಜ್ಯತ ತತೋ ವೀರೋ ಹೈಮೈರ್ಹೇಮವಿಭೂಷಿತೈಃ ॥ ೧೫

ಚಾರುಚಾಮರಮುಖ್ಯೈಶ್ಚ ಮುಖ್ಯಃ ಸರ್ವಧನುಷ್ಮತಾಮ್ ।
ಸ ತು ದೃಷ್ಟ್ವಾ ವಿನಿರ್ಯಾಂತಂ ಬಲೇನ ಮಹತಾ ವೃತಮ್ ॥ ೧೬

ರಾಕ್ಷಸಾಧಿಪತಿಃ ಶ್ರೀಮಾನ್ ರಾವಣಃ ಪುತ್ರಮಬ್ರವೀತ್ ।
ತ್ವಮಪ್ರತಿರಥಃ ಪುತ್ರ ತ್ವಯಾ ವೈ ವಾಸವೋ ಜಿತಃ ॥ ೧೭

---

ಗ್ರೇಸರನ ಹಿಂದೆ ಬಲಶಾಲಿಗಳಾದ ಬಹುಮಂದಿ ರಾಕ್ಷಸರು ಬಿಲ್ಲುಗಳನ್ನು ಹಿಡಿದು ಆನೆಗಳನ್ನೂ ಕುದುರೆಗಳನ್ನೂ ಏರಿ ಉತ್ಸಾಹದಿಂದ ಹೊರಟರು. ಕೆಲವರು ವ್ಯಾಘ್ರಾದಿ ವಾಹನಗಳನ್ನೇರಿದರು* (೧೦–೧೨). ಪ್ರಾಸ, ಮುದ್ಗರ, ಖಡ್ಗ, ಪರಶು, ಗದೆ ಮುಂತಾದ ಆಯುಧಗಳನ್ನು ಧರಿಸಿದರು. ಶಂಖಗಳು ಭೋಂಕಾರಮಾಡಿದವು. ರಣಭೇರಿಗಳು ಮೊಳಗಿದವು. ಹೊಗಳುಭಟರು ಇಂದ್ರಜಿತುವನ್ನು ಸ್ತೋತ್ರಮಾಡುತ್ತಿದ್ದರು. ಶಂಖದಂತೆಯೂ ಚಂದ್ರನಂತೆಯೂ ಶುಭ್ರವಾದ ಶ್ವೇತಚ್ಛತ್ರವು ಇಂದ್ರಜಿತುವಿನ ಶಿರಸ್ಸಿನಮೇಲೆ ಶೋಭಿಸಿತು (೧೩–೧೪). ಪೂರ್ಣಚಂದ್ರನಿಂದ ಗಗನವು ಶೋಭಿಸುವಂತೆ ಇಂದ್ರಜಿತು ಶ್ವೇತಚ್ಛತ್ರದಿಂದ ವಿರಾಜಿಸಿದನು. ಧನುರ್ಧಾರಿಗಳಲ್ಲಿ ಅಗ್ರಗಣ್ಯನಾದ ಆ ಪರಾಕ್ರಮಿಯ ಎಡಬಲಗಳಲ್ಲಿ ಚಿನ್ನದ ಚಾಮರಗಳನ್ನು ಬೀಸುತ್ತಿದ್ದರು (೧೫–೧೬). ಹೀಗೆ ಸಮರಸನ್ನದ್ಧನಾಗಿ ಹೊರಟ ಪುತ್ರನನ್ನು ನೋಡಿ ರಾಕ್ಷಸೇಂದ್ರನಾದ ರಾವಣನು “ ವತ್ಸ, ನೀನು ದೇವೇಂದ್ರನನ್ನೂ

---

*ವ್ಯಾಘ್ರ, ವೃಶ್ಚಿಕ, ಮಾರ್ಜಾಲ, ಮೊದಲಾದವು ಆಯಾ ಧ್ವಜಗಳಿರುವ ರಥಗಳಾಗಿರಬಹುದು. ಅಲ್ಲದೆ ಈ ಶ್ಲೋಕಗಳು ಅನೇಕ ಪ್ರತಿಗಳಲ್ಲಿ ದೊರೆಯುವುದಿಲ್ಲ.

ಕಿಂ ಪುನರ್ಮಾನುಷಂ ಧೃಷ್ಯಂ ನಿಹನಿಷ್ಯಸಿ ರಾಘವಮ್ ।
ತಥೋಕ್ತೋ ರಾಕ್ಷಸೇಂದ್ರೇಣ ಪ್ರತ್ಯಗೃಹ್ಣಾನ್ಮಹಾಶಿಷಃ ॥ ೧೮

ತತಸ್ತ್ವಿಂದ್ರಜಿತಾ ಲಂಕಾ ಸೂರ್ಯಪ್ರತಿಮತೇಜಸಾ ।
ರರಾಜಾಪ್ರತಿವೀರೇಣ ದ್ಯೌರಿವಾರ್ಕೇಣ ಭಾಸ್ವತಾ ॥ ೧೯

ಸ ಸಂಪ್ರಾಪ್ಯ ಮಹಾತೇಜಾ ಯುದ್ಧಭೂಮಿಮರಿಂದಮಃ ।
ಸ್ಥಾಪಯಾಮಾಸ ರಕ್ಷಾಂಸಿ ರಥಂ ಪ್ರತಿ ಸಮಂತತಃ ॥ ೨೦

ತತಸ್ತು ಹುತಭೋಕ್ತಾರಂ ಹುತಭುಕ್ಸದೃಶಪ್ರಭಃ ।
ಜುಹಾವ ರಾಕ್ಷಸಶ್ರೇಷ್ಠೋ ಮಂತ್ರವದ್ವಿಧಿವತ್ತದಾ ॥ ೨೧

ಸ ಹವಿರ್ಲಾಜಸಂಸ್ಕಾರೈರ್ಮಾಲ್ಯಗಂಧಪುರಸ್ಕೃತೈಃ ।
ಜುಹುವೇ ಪಾವಕಂ ದೀಪ್ತಂ ರಾಕ್ಷಸೇಂದ್ರಃ ಪ್ರತಾಪವಾನ್ ॥ ೨೨

---

ಗೆದ್ದಿರುವ ಅಪ್ರತಿಮನಾದ ವೀರನಾಗಿದ್ದೀಯೆ. ರಾಮನಾದರೋ ಒಬ್ಬ ಸಾಮಾನ್ಯನಾದ ಮನುಷ್ಯಮಾತ್ರನು. ಅವನನ್ನು ನೀನು ಸಂಹರಿಸುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿ ಆಶೀರ್ವದಿಸಿದನು. ತಂದೆಯ ಆಶೀರ್ವಚನಗಳನ್ನು ಸ್ವೀಕರಿಸಿ ಇಂದ್ರಜಿತು ಹೊರಟನು (೧೭-೧೮). ಅಪ್ರತಿಮವೀರನೂ ಸೂರ್ಯಸಂಕಾಶನೂ ಆದ ಮೇಘನಾದನು ಯುದ್ಧೋನ್ಮುಖನಾಗಲು, (ವ್ಯಸನದಿಂದ ಮಂಕಾಗಿದ್ದ ಲಂಕೆಗೆ ಜೀವಕಳೆ ಬಂದಂತಾಗಿ) ಸೂರ್ಯೋದಯವಾಗಲು ಅಂತರಿಕ್ಷವು ಕಳೆಗೊಂಡು ಪ್ರಕಾಶಿಸುವಂತೆ, ಲಂಕೆಯು ಪ್ರಕಾಶಿಸಿತು (೧೯). ಶತ್ರುತಾಪಕನಾದ ಆ ತೇಜಸ್ವಿಯು ರಣರಂಗದ ಸಮೀಪಕ್ಕೆ ಹೋಗಿ ತನ್ನ ರಥವನ್ನು ನಿಲ್ಲಿಸಿ, ಸುತ್ತಲೂ ರಾಕ್ಷಸಭಟರು ಕಾವಲಿರುವಂತೆ ನೇಮಿಸಿದನು. ಅನಂತರ ಅಗ್ನಿಯಂತಿದ್ದ ಆ ರಾಕ್ಷಸೋತ್ತಮನು ಹೋಮಕುಂಡದಲ್ಲಿ ವಿಧಿಪೂರ್ವಕವಾಗಿ ಅಗ್ನಿಯನ್ನು ಸ್ಥಾಪಿಸಿದನು (೨೦-೨೧). ಅಗ್ನಿಯು ಪ್ರದೀಪ್ತವಾಗಲು ಹೂಮಾಲೆ, ಗಂಧ ಮೊದಲಾದವುಗಳಿಂದ ಅಗ್ನಿದೇವನನ್ನರ್ಚಿಸಿ, ಸಂಸ್ಕರಿಸಲ್ಪಟ್ಟ ಅರಳು ಮುಂತಾದ ಹವಿಸ್ಸುಗಳಿಂದ ಆತನು ಮಂತ್ರಪೂರ್ವಕವಾಗಿ ಹೋಮಮಾಡಿದನು (೨೨). ಆಭಿಚಾರಿಕವಾದ ಆ

ಶಸ್ತ್ರಾಣಿ ಶರಪತ್ರಾಣಿ ಸಮಿಧೋಽಥ ವಿಭೀತಕಾಃ ।
ಲೋಹಿತಾನಿ ಚ ವಾಸಾಂಸಿ ಸ್ರುವಂ ಕಾರ್ಷ್ಣಾಯಸಂ ತಥಾ ॥ ೨೩

ಸ ತತ್ರಾಗ್ನಿಂ ಸಮಾಸ್ತೀರ್ಯ ಶರಪತ್ರೈಃ ಸತೋಮರೈಃ ।
ಛಾಗಸ್ಯ ಕೃಷ್ಣವರ್ಣಸ್ಯ ಗಲಂ ಜಗ್ರಾಹ ಜೀವತಃ ॥ ೨೪

ಸಕೃದೇವ ಸಮಿದ್ಧಸ್ಯ ವಿಧೂಮಸ್ಯ ಮಹಾರ್ಚಿಷಃ ।
ಬಭೂವುಸ್ತಾನಿ ಲಿಂಗಾನಿ ವಿಜಯಂ ಯಾನ್ಯದರ್ಶಯನ್ ॥ ೨೫

ಪ್ರದಕ್ಷಿಣಾವರ್ತಶಿಖಸ್ತಪ್ತಕಾಂಚನಭೂಷಣಃ ।
ಹವಿಸ್ತತ್ ಪ್ರತಿಜಗ್ರಾಹ ಪಾವಕಃ ಸ್ವಯಮುತ್ಥಿತಃ ॥ ೨೬

ಸೋಽಸ್ತ್ರಮಾಹಾರಯಾಮಾಸ ಬ್ರಾಹ್ಮಮಿಂದ್ರರಿಪುಸ್ತದಾ ।
ಧನುಶ್ಚಾತ್ಮರಥಂ ಚೈವ ಸರ್ವಂ ತತ್ರಾಭ್ಯಮಂತ್ರಯತ್ ॥ ೨೭

---

ಹೋಮದಲ್ಲಿ ಆಯುಧಗಳೂ ನೊದೆಹುಲ್ಲುಗಳೂ ಅಗ್ನಿಯ ಸಮಾಸ್ತರಣ ದ್ರವ್ಯಗಳಾಗಿದ್ದವು. ತಾರೆಯ ಮರದ ಸಮಿತ್ತುಗಳು ಉಪಯೋಗಿಸಲ್ಪಟ್ಟವು. ಕೆಂಪುಬಣ್ಣದ ವಸ್ತ್ರಗಳೂ ಕಬ್ಬಿಣದ ಸ್ರುವವೂ ಬಳಸಲ್ಪಟ್ಟವು. ಹೀಗೆ ತೋಮರಾದ್ಯಾಯುಧಗಳಿಂದಲೂ ನೊದೆಹುಲ್ಲುಗಳಿಂದಲೂ ಆಸ್ತರಣ ಮಾಡಿ, ಜೀವಂತವಾದ ಕಪ್ಪುಬಣ್ಣದ ಮೇಕೆಯ ಕತ್ತನ್ನು ಹಿಸುಕಿ ಇಂದ್ರಜಿತು ಹೋಮಮಾಡಿದನು (೨೩–೨೪). ಅಗ್ನಿಯು ಧೂಮ ರಹಿತವಾಗಿ ಜ್ವಾಲೆಯನ್ನುಗುಳುತ್ತ ಭುಗಿಲ್ ಎಂದು ಥಟ್ಟನೆ ಉರಿಯಿತು. ಇಂದ್ರಜಿತುವಿಗೆ ಜಯಸೂಚಕವಾದ ಚಿಹ್ನೆಗಳೆಲ್ಲವೂ ಕಂಡುಬಂದವು (೨೫). ಅಗ್ನಿಜ್ವಾಲೆಯು ಪ್ರದಕ್ಷಿಣಾಕಾರವಾಗಿ ಸುತ್ತುತ್ತಿರಲು, ಕಾಂಚನಾಭರಣ ಭೂಷಿತನಾದ ಅಗ್ನಿದೇವನೇ ಪ್ರತ್ಯಕ್ಷನಾಗಿ ಮೇಲೆದ್ದು ಹವಿಸ್ಸನ್ನು ಸ್ವೀಕರಿಸಿದನು. ಇಂದ್ರಜಿತು ಬ್ರಹ್ಮದೇವತಾಕವಾದ ಮಂತ್ರದಿಂದ ಅಸ್ತ್ರದಲ್ಲಿ ಬ್ರಹ್ಮದೇವನನ್ನು ಆವಾಹಿಸಿದನು. ತನ್ನ ಧನುಸ್ಸು, ರಥ ಮುಂತಾದ ಯುದ್ಧಸನ್ನಾಹಗಳನ್ನು ವಿಧಿವತ್ತಾಗಿ ಅಭಿಮಂತ್ರಿಸಿದನು (೨೬–೨೭).

ತಸ್ಮಿನ್ನಾಹೂಯಮಾನೇಽಸ್ತ್ರೇ ಹೂಯಮಾನೇ ಚ ಪಾವಕೇ ।
ಸಾರ್ಕಗ್ರಹೇಂದುನಕ್ಷತ್ರಂ ವಿತತ್ರಾಸ ನಭಃಸ್ಥಲಮ್ ॥ ೨೮

ಸ ಪಾವಕಂ ಪಾವಕದೀಪ್ತತೇಜಾ
ಹುತ್ವಾ ಮಹೇಂದ್ರಪ್ರತಿಮಪ್ರಭಾವಃ ।
ಸಚಾಪಬಾಣಾಸಿರಥಾಶ್ವಸೂತಃ
ಖೇಽಂತರ್ದಧೇಽತ್ಮಾನಮಚಿಂತ್ಯರೂಪಃ ॥ ೨೯

ತತೋ ಹಯರಥಾಕೀರ್ಣಂ ಪತಾಕಾಧ್ವಜಶೋಭಿತಮ್ ।
ನಿರ್ಯಯೌ ರಾಕ್ಷಸಬಲಂ ನರ್ದಮಾನಂ ಯುಯುತ್ಸಯಾ ॥ ೩೦

ತೇ ಶರೈರ್ಬಹುಭಿಃ ಶಸ್ತ್ರೈಸ್ತೀಕ್ಷ್ಣವೇಗೈರಲಂಕೃತೈಃ ।
ತೋಮರೈರಂಕುಶೈಶ್ಚಾಪಿ ವಾನರಾನ್ ಜಘ್ನುರಾಹವೇ ॥ ೩೧

ರಾವಣಿಸ್ತು ತತಃ ಕ್ರುದ್ಧಸ್ತಾನ್ನಿರೀಕ್ಷ್ಯ ನಿಶಾಚರಾನ್ ।
ಹೃಷ್ಟಾ ಭವಂತೋ ಯುಧ್ಯಂತು ವಾನರಾಣಾಂ ಜಿಘಾಂಸಯಾ ॥

---

ಹೀಗೆ ಮೇಘನಾದನು ಬ್ರಹ್ಮಾಸ್ತ್ರವನ್ನು ಆವಾಹಿಸಿ ಅಗ್ನಿಯಲ್ಲಿ ಹೋಮ ಮಾಡುತ್ತಿರಲು, ಸೂರ್ಯಚಂದ್ರಾದಿ ಗ್ರಹಗಳಿಂದಲೂ ನಕ್ಷತ್ರಗಳಿಂದಲೂ ಯುಕ್ತವಾದ ನಭಃಸ್ಥಳವು ನಡುಗಿತು (೨೮). ಈ ರೀತಿಯಲ್ಲಿ ಅಗ್ನಿಯಂತೆ ದೀಪ್ತತೇಜಸ್ಕನೂ ಶಕ್ರತುಲ್ಯಮಹಿಮಾನ್ವಿತನೂ ಆದ ಮೇಘನಾದನು ಆಭಿಚಾರಿಕ ಹೋಮವನ್ನಾಚರಿಸಿ, ಧನುರ್ಬಾಣಖಡ್ಗಗಳನ್ನು ಧರಿಸಿ ರಥವನ್ನೇರಿದನು. ಅನಂತರ ಅಚಿಂತ್ಯ ಮಂತ್ರ ಪ್ರಭಾವವನ್ನು ಪಡೆದ ಆ ರಾಕ್ಷಸನು ಮರುಕ್ಷಣದಲ್ಲಿ ರಥಾಶ್ವಸಾರಥಿಗಳೊಡನೆ ಅಂತರಿಕ್ಷದಲ್ಲಿ ಕಣ್ಮರೆಯಾದನು! (೨೯). ಆಮೇಲೆ ರಥಾಶ್ವಗಳಿಂದಲೂ ಧ್ವಜಪಟಗಳಿಂದಲೂ ಕಿಕ್ಕಿರಿದ ರಾಕ್ಷಸಪಡೆಯು ಯುದ್ಧೋತ್ಸಾಹದಿಂದ ಗರ್ಜಿಸುತ್ತ ಮುಂದಕ್ಕೆ ಪ್ರಯಾಣಮಾಡಿತು. ವಾನರರೊಡನೆ ಯುದ್ಧವು ಸಮನಿಸಿತು. ರಾಕ್ಷಸರು ತೀಕ್ಷ್ಣವಾದ ಶರಗಳಿಂದಲೂ, ತೋಮರ ಅಂಕುಶ ಮುಂತಾದ ಶಸ್ತ್ರಗಳಿಂದಲೂ ವಾನರರನ್ನು ಮರ್ದಿಸತೊಡಗಿದರು (೩೦-೩೧). ರಾವಣಿಯು ಆ ನಿಶಾಚರರನ್ನು ನೋಡಿ " ಎಲೈ ಯೋಧರೆ, ವಾನರರನ್ನು ಸಂಹರಿಸಬೇಕೆಂಬ ಒಂದೇ ದೃಢಮನಸ್ಸಿನಿಂದ ಉತ್ಸಾಹ

**ತತಸ್ತೇ ರಾಕ್ಷಸಾಃ ಸರ್ವೇ ನರ್ದಂತೋ ಜಯಕಾಂಕ್ಷಿಣಃ |**
**ಅಭ್ಯವರ್ಷಂಸ್ತತೋ ಘೋರಾನ್ ವಾನರಾನ್ ಶರವೃಷ್ಟಿಭಿಃ || ೩೩**
**ಸ ತು ನಾಲೀಕನಾರಾಚೈರ್ಗದಾಭಿರ್ಮುಸಲೈರಪಿ |**
**ರಕ್ಷೋಭಿಃ ಸಂವೃತಃ ಸಂಖ್ಯೇ ವಾನರಾನ್ ವಿಚಕರ್ತ ಹ || ೩೪**
**ತೇ ವಧ್ಯಮಾನಾಃ ಸಮರೇ ವಾನರಾಃ ಪಾದಪಾಯುಧಾಃ |**
**ಅಭ್ಯದ್ರವಂತ ಸಹಿತಾ ರಾವಣಿಂ ರಣಕರ್ಕಶಮ್ || ೩೫**
**ಇಂದ್ರಜಿತ್ತು ತತಃ ಕ್ರುದ್ಧೋ ಮಹಾತೇಜಾ ಮಹಾಬಲಃ |**
**ವಾನರಾಣಾಂ ಶರೀರಾಣಿ ವ್ಯಧಮದ್ರಾವಣಾತ್ಮಜಃ || ೩೬**
**ಶರೇಣೈಕೇನ ಚ ಹರೀನ್ನವ ಪಂಚ ಚ ಸಪ್ತ ಚ |**
**ಚಿಚ್ಛೇದ ಸಮರೇ ಕ್ರುದ್ಧೋ ರಾಕ್ಷಸಾನ್ ಸಂಪ್ರಹರ್ಷಯನ್ || ೩೭**
**ಸ ಶರೈಃ ಸೂರ್ಯಸಂಕಾಶೈಃ ಶಾತಕುಂಭವಿಭೂಷಿತೈಃ |**
**ವಾನರಾನ್ ಸಮರೇ ವೀರಃ ಪ್ರಮಮಾಥ ಸುದುರ್ಜಯಃ || ೩೮**

---

ಪೂರ್ಣರಾಗಿ ಹೋರಾಡಿರಿ" ಎಂದು ಆದೇಶವನ್ನಿತ್ತನು. ಸಮಸ್ತ ರಾಕ್ಷಸರೂ ಜಯಕಾಂಕ್ಷೆಯಿಂದ ಗರ್ಜಿಸುತ್ತ ವಾನರರಮೇಲೆ ಘೋರವಾದ ಶರವೃಷ್ಟಿಯನ್ನು ಸುರಿಸತೊಡಗಿದರು (೩೨-೩೩). ಇತ್ತ ಮೇಘನಾದನೂ ರಾಕ್ಷಸಭಟರೊಡನೆ ಯುದ್ಧರಂಗಕ್ಕಿಳಿದು ನಾಲೀಕ*, ನಾರಾಚ, ಗದೆ, ಮುಸಲ ಮುಂತಾದ ಆಯುಧಗಳಿಂದ ವಾನರರನ್ನು ಕೆತ್ತಿ ಕತ್ತರಿಸಿ ಬಡಿದುರುಳಿಸಲಾರಂಭಿಸಿದನು. ಹೀಗೆ ಒಂದುಕಡೆ ಅವರು ಹತರಾಗಿ ಬೀಳುತ್ತಿದ್ದರೂ ಇತರ ಕಪಿಯೋಧರು ಮರಗಳನ್ನು ಕಿತ್ತೆತ್ತಿ, ರಣಕರ್ಕಶನಾದ ರಾವಣಿಯನ್ನು ಮುತ್ತಿದರು (೩೪-೩೫). ಆಗ ತೇಜಸ್ವಿಯೂ ಬಲಾಢ್ಯನೂ ಆದ ಇಂದ್ರಜಿತು ಕಪಿಗಳ ದೇಹಗಳನ್ನು ಕೊಚ್ಚಿ ಕೆಡಹಿದನು. ರೋಷಾವಿಷ್ಟನಾದ ಆ ರಾವಣಾತ್ಮಜನು ಒಂದೊಂದು ಬಾಣದಿಂದ ಒಂದೊಂದು ಬಾರಿಗೆ ಐದು, ಏಳು, ಒಂಬತ್ತು ಮಂದಿಗಳಂತೆ ಕಪಿಗಳನ್ನು ಕೊಲ್ಲುತ್ತಹೋದನು. ಅದನ್ನು ಕಂಡು ರಾಕ್ಷಸರು ಹರ್ಷದಿಂದ ಉಬ್ಬುತ್ತಿದ್ದರು (೩೬-೩೭). ದುರ್ಜಯನಾದ ಆ ವೀರನು ಸೂರ್ಯನಂತೆ ಬೆಳಗುವ ಕನಕಪುಂಖಾಂಕಿತವಾದ ಕೂರ್ಗಣೆಗಳಿಂದ ಕಪಿಗಳನ್ನು ಕಡೆದು

---

***ನಾಲೀಕ=ಅಗಲವಾದ ಅಲಗುಳ್ಳ ಬಾಣ.**

ತೇ ಭಿನ್ನಗಾತ್ರಾಃ ಸಮರೇ ವಾನರಾಃ ಶರಪೀಡಿತಾಃ ।
ಪೇತುರ್ಮಥಿತಸಂಕಲ್ಪಾಃ ಸುರೈರಿವ ಮಹಾಸುರಾಃ ॥ ೩೯

ತಂ ತಪಂತಮಿವಾದಿತ್ಯಂ ಘೋರೈರ್ಬಾಣಗಭಸ್ತಿಭಿಃ ।
ಅಭ್ಯಧಾವಂತ ಸಂಕ್ರುದ್ಧಾಃ ಸಂಯುಗೇ ವಾನರರ್ಷಭಾಃ ॥ ೪೦

ತತಸ್ತು ವಾನರಾಃ ಸರ್ವೇ ಭಿನ್ನದೇಹಾ ವಿಚೇತಸಃ ।
ವ್ಯಥಿತಾ ವಿದ್ರವಂತಿ ಸ್ಮ ರುಧಿರೇಣ ಸಮುಕ್ಷಿತಾಃ ॥ ೪೧

ರಾಮಸ್ಯಾರ್ಥೇ ಪರಾಕ್ರಮ್ಯ ವಾನರಾಸ್ತ್ಯಕ್ತಜೀವಿತಾಃ ।
ನರ್ದಂತಸ್ತೇಽಭಿವೃತ್ತಾಸ್ತು ಸಮರೇ ಸಶಿಲಾಯುಧಾಃ ॥ ೪೨

ತೇ ದ್ರುಮೈಃ ಪರ್ವತಾಗ್ರೈಶ್ಚ ಶಿಲಾಭಿಶ್ಚ ಪ್ಲವಂಗಮಾಃ ।
ಅಭ್ಯವರ್ಷಂತ ಸಮರೇ ರಾವಣಿಂ ಪರ್ಯವಸ್ಥಿತಾಃ ॥ ೪೩

ತದ್ದ್ರುಮಾಣಾಂ ಶಿಲಾನಾಂ ಚ ವರ್ಷಂ ಪ್ರಾಣಹರಂ ಮಹತ್ ।
ವ್ಯಪೋಹತ ಮಹಾತೇಜಾ ರಾವಣಿಃ ಸಮಿತಿಂಜಯಃ ॥ ೪೪

---

ಬಿಟ್ಟನು. ವಾನರರ ಉದ್ದೇಶವು ಭಗ್ನವಾಯಿತು. ಅವರು ಶರನಿರ್ಭಿನ್ನಗಾತ್ರರಾಗಿ, ದೇವತೆಗಳಿಂದ ಹೊಡೆದುರುಳಿಸಲ್ಪಟ್ಟ ಅಸುರರಂತೆ ಉರುಳಿ ಬೀಳುತ್ತಿದ್ದರು (೩೮-೩೯). ಉಗ್ರವಾದ ಕಿರಣಗಳಿಂದ ಸುಡುವ ಸೂರ್ಯನಂತೆ ಘೋರವಾದ ಸರಳುಗಳಿಂದ ಹೊಡೆಯುವ ಇಂದ್ರಜಿತುವನ್ನು ವಾನರಯೂಥಪರು ಕೋಪದಿಂದ ಬಂದು ಬಂದು ತರುಬಿದರು (೪೦). ಆದರೆ ಆತನ ಸರಳುಗಳ ಹೊಡೆತದಿಂದ ಕೆತ್ತಿದ ದೇಹವುಳ್ಳವರಾಗಿ ನೆತ್ತರಲ್ಲಿ ನೆನೆದು ಕಂಗೆಟ್ಟು ಯಾತನೆಯನ್ನು ತಡೆಯಲಾರದೆ ಓಡಿಹೋಗುತ್ತಿದ್ದರು. ಮತ್ತೆ ಆ ವಾನರರು ಶ್ರೀರಾಮನಿಗೋಸ್ಕರ ಪ್ರಾಣದ ಹಂಗನ್ನು ತೊರೆದು ಶಿಲೆಗಳನ್ನು ಹೊತ್ತು ಗರ್ಜಿಸುತ್ತ ಬಂದು ಇಂದ್ರಜಿತುವಿನಮೇಲೆ ತಮ್ಮ ಪರಾಕ್ರಮವನ್ನು ಮೆರೆಸುತ್ತಿದ್ದರು (೪೧-೪೨). ಮರಗಳನ್ನೂ ಗಿರಿಗಳನ್ನೂ ದೊಡ್ಡ ದೊಡ್ಡ ದುಂಡಿಗಳನ್ನೂ ತಂದು, ಆ ವಾನರಯೋಧರು ಮೇಘನಾದನಮೇಲೆ ಬೀಸಿ ಬೀಸಿ ಹೊಡೆಯುತ್ತಿದ್ದರು. ಆದರೇನು ? ರಣಧೀರನಾದ ರಾವಣಿಯು ಪ್ರಾಣಘಾತುಕವಾದ ಶಿಲಾವೃಕ್ಷಗಳ ಸುರಿಮಳೆಯನ್ನು

ತತಃ ಪಾವಕಸಂಕಾಶೈಃ ಶರೈರಾಶೀವಿಷೋಪಮೈಃ ।
ವಾನರಾಣಾಮನೀಕಾನಿ ಬಿಭೇದ ಸಮರೇ ಪ್ರಭುಃ ॥ ೪೫

ಅಷ್ಟಾದಶಶರೈಸ್ತೀಕ್ಷ್ಣೈಃ ಸ ವಿದ್ಧ್ವಾ ಗಂಧಮಾದನಮ್ ।
ವಿವ್ಯಾಧ ನವಭಿಶ್ಚೈವ ನಲಂ ದೂರಾದವಸ್ಥಿತಮ್ ॥ ೪೬

ಸಪ್ತಭಿಸ್ತು ಮಹಾವೀರ್ಯೋ ಮೈಂದಂ ಮರ್ಮವಿದಾರಣೈಃ ।
ಪಂಚಭಿರ್ವಿಶಿಖೈಶ್ಚೈವ ಗಜಂ ವಿವ್ಯಾಧ ಸಂಯುಗೇ ॥ ೪೭

ಜಾಂಬವಂತಂ ತು ದಶಭಿರ್ನೀಲಂ ತ್ರಿಂಶದ್ಭಿರೇವ ಚ ।
ಸುಗ್ರೀವಮೃಷಭಂ ಚೈವ ಸೋಽಂಗದಂ ದ್ವಿವಿದಂ ತಥಾ ॥ ೪೮

ಘೋರೈರ್ದತ್ತವರೈಸ್ತೀಕ್ಷ್ಣೈಃ ನಿಷ್ಪ್ರಾಣಾನಕರೋತ್ತದಾ ।
ಅನ್ಯಾನಪಿ ತಥಾ ಮುಖ್ಯಾನ್ ವಾನರಾನ್ ಬಹುಭಿಃ ಶರೈಃ ॥ ೪೯

ಅರ್ದಯಾಮಾಸ ಸಂಕ್ರುದ್ಧಃ ಕಾಲಾಗ್ನಿರಿವ ಮೂರ್ಛಿತಃ ।
ಸ ಶರೈಃ ಸೂರ್ಯಸಂಕಾಶೈಃ ಸುಮುಕ್ತೈಃ ಶೀಘ್ರಗಾಮಿಭಿಃ ॥ ೫೦

---

ವಿಧ್ವಂಸಗೊಳಿಸಿದನು (೪೩-೪೪). ಅತ್ಯಂತ ದಕ್ಷನಾದ ಆ ವೀರನು ಬೆಂಕಿಯಂತೆ ಬೆಳಗುವ, ಸರ್ಪದಂತೆ ಎರಗುವ, ಘೋರಶರಗಳಿಂದ ಕಪಿ ಸೇನೆಯನ್ನು ಕೊಚ್ಚುತ್ತಹೋದನು. ಹದಿನೆಂಟು ಬಾಣಗಳಿಂದ ಗಂಧ ಮಾದನನನ್ನು ಹೊಡೆದು, ದೂರದಲ್ಲಿದ್ದ ನಳನನ್ನು ಒಂಬತ್ತು ಬಾಣಗಳಿಂದ ನೋಯಿಸಿದನು (೪೫-೪೬). ಆ ವೀರಾಗ್ರಗಣ್ಯನು ಮರ್ಮಭೇದಿಗಳಾದ ಏಳು ಅಂಬುಗಳಿಂದ ಮೈಂದನನ್ನು ಗಾಯಗೊಳಿಸಿ, ಐದು ಕೂರಂಬುಗಳಿಂದ ಗಜನ ದೇಹವನ್ನು ಭೇದಿಸಿದನು. ಮತ್ತೆ ಆ ಇಂದ್ರಜಿತು ಹತ್ತರಿಂದ ಜಾಂಬವಂತನನ್ನು ಹೊಡೆದು ಮೂವತ್ತರಿಂದ ನೀಲನನ್ನು ಸದೆದನು. ವರಲಬ್ಧವಾದ ಭೀಕರತೀಕ್ಷ್ಣಾಸ್ತ್ರಗಳಿಂದ ಸುಗ್ರೀವ, ಋಷಭ, ಅಂಗದ, ದ್ವಿವಿದರನ್ನೂ ಮುಖ್ಯರಾದ ಇತರ ವಾನರನಾಯಕರನ್ನೂ ಹೊಡೆದು ಮೂರ್ಛೆಗೊಳಿಸಿದನು (೪೭-೪೯). ಕಾಲಾಗ್ನಿಯಂತೆ ಸಂಕ್ರುದ್ಧನಾದ ಮೇಘನಾದನು ಮೈಮೇಲೆ ಪ್ರಜ್ಞೆಯಿಲ್ಲದವನಂತೆ ಹೋರಾಡುತ್ತ, ಸೂರ್ಯಸಂಕಾಶಗಳೂ ಶೀಘ್ರಗಾಮಿಗಳೂ ಆದ ಶರಗಳನ್ನು ಗುರಿಯಿಟ್ಟು ರಭಸದಿಂದ ಪ್ರಯೋಗಿಸಿ ಸಂಗ್ರಾಮಭೂಮಿಯಲ್ಲಿದ್ದ ವಾನರಸೇನೆಯನ್ನು

ವಾನರಾಣಾಮನೀಕಾನಿ ನಿರ್ಮಮಂಥ ಮಹಾರಣೇ ।
ಆಕುಲಾಂ ವಾನರೀಂ ಸೇನಾಂ ಶರಜಾಲೇನ ಮೋಹಿತಾಮ್ ॥ ೫೧

ಹೃಷ್ಟಃ ಸ ಪರಯಾ ಪ್ರೀತ್ಯಾ ದದರ್ಶ ಕ್ಷತಜೋಕ್ಷಿತಾಮ್ ।
ಪುನರೇವ ಮಹಾತೇಜಾ ರಾಕ್ಷಸೇಂದ್ರಾತ್ಮಜೋ ಬಲೀ ॥ ೫೨

ಸಂಸೃಜ್ಯ ಬಾಣವರ್ಷಂ ಚ ಶಸ್ತ್ರವರ್ಷಂ ಚ ದಾರುಣಮ್ ।
ಮಮರ್ದ ವಾನರಾನೀಕಂ ಇಂದ್ರಜಿತ್ತ್ವರಿತೋ ಬಲೀ ॥ ೫೩

ಸ್ವಸೈನ್ಯಮುತ್ಸೃಜ್ಯ ಸಮೇತ್ಯ ತೂರ್ಣಂ
ಮಹಾರಣೇ ವಾನರವಾಹಿನೀಷು ।
ಅದೃಶ್ಯಮಾನಃ ಶರಜಾಲಮುಗ್ರಂ
ವವರ್ಷ ನೀಲಾಂಬುಧರೋ ಯಥಾಂಬು ॥ ೫೪

ತೇ ಶಕ್ರಜಿದ್ಬಾಣವಿಶೀರ್ಣದೇಹಾ
ಮಾಯಾಹತಾ ವಿಸ್ವರಮುನ್ನದಂತಃ ।
ರಣೇ ನಿಪೇತುರ್ಹರಯೋಽದ್ರಿಕಲ್ಪಾ
ಯಥೇಂದ್ರವಜ್ರಾಭಿಹತಾ ನಗೇಂದ್ರಾಃ ॥ ೫೫

---

ಕಡಿದುಬಿಟ್ಟನು (೫೦). ಶರಜಾಲಗಳ ಹೊಡೆತದಿಂದ ಸಕಲ ವಾನರ ಸೇನೆಯೂ ರಕ್ತಸಿಕ್ತವಾಗಿ ಎಚ್ಚರದಪ್ಪಿ ಉರುಳಿಬಿದ್ದಿರಲಾಗಿ, ಇಂದ್ರಜಿತು ಪರಮಾನಂದದಿಂದ ಆ ದೃಶ್ಯವನ್ನೊಮ್ಮೆ ಕಣ್ತುಂಬ ನೋಡಿದನು! ಮತ್ತೆ ಆ ಬಲಾಢ್ಯನಾದ ರಾವಣಾತ್ಮಜನು ದಾರುಣಶರಜಾಲಗಳನ್ನೂ ವಿವಿಧಾಯುಧಗಳನ್ನೂ ತ್ವರೆಯಿಂದ ಪ್ರಯೋಗಿಸಿ ಅಳಿದುಳಿದ ವಾನರಸೇನೆಯನ್ನು ಮರ್ದಿಸಿದನು (೫೧-೫೩). ಇಂದ್ರಜಿತು ಆ ರಣಭೂಮಿಯಲ್ಲಿ ತನ್ನ ರಾಕ್ಷಸಸೇನೆಯನ್ನು ಬಿಟ್ಟು ತಾನೊಬ್ಬನೇ ಶತ್ರುಸೇನೆಯೊಳಗೆ ಅದೃಶ್ಯನಾಗಿ ನುಗ್ಗಿ, ಕಾಲಮೇಘವು ಮಳೆಸುರಿಸುವಂತೆ, ತೆರಪಿಲ್ಲದೆ ಉಗ್ರ ಶರರಾಶಿಯನ್ನು ಸುರಿಸುತ್ತಿದ್ದನು (೫೪). ಆತನು ಮಾಯಾಬಲದಿಂದ ಪ್ರಯೋಗಿಸುತ್ತಿದ್ದ ಅಸ್ತ್ರಗಳಿಂದ ಪರ್ವತಾಕಾರರಾದ ವಾನರರು ಛಿನ್ನ ಭಿನ್ನರಾಗಿ ಅಪಸ್ವರದಲ್ಲಿ ಕೂಗುತ್ತ, ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತಗಳಂತೆ ಉರುಳುರುಳಿ ಬೀಳುತ್ತಿದ್ದರು (೫೫). ವಾನರಸೇನೆಯಮೇಲೆ

ತೇ ಕೇವಲಂ ಸಂದದೃಶುಃ ಶಿತಾಗ್ರಾನ್
ಬಾಣಾನ್ ರಣೇ ವಾನರವಾಹಿನೀಷು ।
ಮಾಯಾನಿಗೂಢಂ ತು ಸುರೇಂದ್ರಶತ್ರುಂ
ನ ಚಾವೃತಂ ರಾಕ್ಷಸಮಭ್ಯಪಶ್ಯನ್ ॥ ೫೬

ತತಃ ಸ ರಕ್ಷೋಽಧಿಪತಿರ್ಮಹಾತ್ಮಾ
ಸರ್ವಾ ದಿಶೋ ಬಾಣಗಣೈಃ ಶಿತಾಗ್ರೈಃ ।
ಪ್ರಚ್ಛಾದಯಾಮಾಸ ರವಿಪ್ರಕಾಶೈ-
ರ್ವಿಷಾದಯಾಮಾಸ ಚ ವಾನರೇಂದ್ರಾನ್ ॥ ೫೭

ಸ ಶೂಲನಿಸ್ತ್ರಿಂಶಪರಶ್ವಧಾನಿ
ವ್ಯಾವಿಧ್ಯ ದೀಪ್ತಾನಲಸಂನಿಭಾನಿ ।
ಸವಿಸ್ಫುಲಿಂಗೋಜ್ಜ್ವಲಪಾವಕಾನಿ
ವವರ್ಷ ತೀವ್ರಂ ಪ್ಲವಗೇಂದ್ರಸೈನ್ಯೇ ॥ ೫೮

ತತೋ ಜ್ವಲನಸಂಕಾಶೈಃ ಶಿತೈರ್ವಾನರಯೂಥಪಾಃ ।
ತಾಡಿತಾಃ ಶಕ್ರಜಿದ್ಬಾಣೈಃ ಪ್ರಫುಲ್ಲಾ ಇವ ಕಿಂಶುಕಾಃ ॥ ೫೯

ತೇಽನ್ಯೋನ್ಯಮಭಿಸರ್ಪಂತೋ ನಿನದಂತಶ್ಚ ವಿಸ್ವರಮ್ ।
ರಾಕ್ಷಸೇಂದ್ರಾಸ್ತ್ರನಿರ್ಭಿನ್ನಾ ನಿಪೇತುರ್ವಾನರರ್ಷಭಾಃ ॥ ೬೦

---

ಬಂದೆರಗುತ್ತಿದ್ದ ಹರಿತವಾದ ಅಸ್ತ್ರಗಳು ಮಾತ್ರವೇ ವಾನರರಿಗೆ ಕಾಣಿಸುತ್ತಿದ್ದವು. ಮಾಯಾಬಲದಿಂದ ಕಣ್ಮರೆಯಾಗಿದ್ದ ಆ ರಾಕ್ಷಸನು ಮಾತ್ರ ಅವರಿಗೆ ಕಾಣಿಸಲೇ ಇಲ್ಲ (೫೬). ಆ ರಾಕ್ಷಸಶಾರ್ದೂಲನಾದರೋ ಆದಿತ್ಯನಂತೆ ಥಳಥಳಿಸುವ ಕೂರ್ಗಣೆಗಳನ್ನು ಹೊಡೆದು ಸಕಲದಿಕ್ಕುಗಳನ್ನೂ ಆಚ್ಛಾದಿಸಿ, ವಾನರಯೂಥಪರನ್ನು ಕಂಗೆಡಿಸಿದನು. ಕಿಡಿಗೆದರುವ, ಜ್ವಾಲೆಯನ್ನುಗುಳುವ, ತೊಳತೊಳಗುವ ಅಗ್ನಿಯಂತಿದ್ದ ಶೂಲ, ಖಡ್ಗ, ಪರಶು ಮುಂತಾದ ವಿವಿಧಾಯುಧಗಳನ್ನು ತಡವಿಲ್ಲದೆ ತೆರಪಿಲ್ಲದೆ ತೀವ್ರ ವೇಗದಿಂದ ಸುಗ್ರೀವನ ಸೇನೆಯಮೇಲೆ ಸುರಿಸಿದನು (೫೭-೫೮). ಇಂದ್ರಜಿತು ಎಚ್ಚ ಕಿಚ್ಚಿನಂತಹ ಕೂರ್ಗಣೆಗಳಿಂದ ಕೆತ್ತಲ್ಪಟ್ಟ ದೇಹವುಳ್ಳ ಕಪಿಯೋಧರು ಅರಳಿದ ಮುತ್ತುಗದ ಮರಗಳಂತೆ ಕಾಣಿಸುತ್ತಿದ್ದರು. ಅವರು ಒಬ್ಬರ ಬಳಿಗೊಬ್ಬರು ಓಡುತ್ತ ಆರ್ತನಾದದಿಂದ ಕೂಗುತ್ತ

ಉದೀಕ್ಷಮಾಣಾ ಗಗನಂ ಕೇಚಿನ್ನೇತ್ರೇಷು ತಾಡಿತಾಃ ।
ಶರೈರ್ವಿವಿಶುರನ್ಯೋನ್ಯಂ ಪೇತುಶ್ಚ ಜಗತೀತಲೇ ॥ ೬೧

ಹನೂಮಂತಂ ಚ ಸುಗ್ರೀವಮಂಗದಂ ಗಂಧಮಾದನಮ್ ।
ಜಾಂಬವಂತಂ ಸುಷೇಣಂ ಚ ವೇಗದರ್ಶಿನಮೇವ ಚ ॥ ೬೨

ಮೈಂದಂ ಚ ದ್ವಿವಿದಂ ನೀಲಂ ಗವಾಕ್ಷಂ ಗಜಗೋಮುಖೌ ।
ಕೇಸರಿಂ ಹರಿಲೋಮಾನಂ ವಿದ್ಯುದ್ದಂಷ್ಟ್ರಂ ಚ ವಾನರಮ್ ॥ ೬೩

ಸೂರ್ಯಾನನಂ ಜ್ಯೋತಿಮುಖಂ ತಥಾ ದಧಿಮುಖಂ ಹರಿಮ್ ।
ಪಾವಕಾಕ್ಷಂ ನಲಂ ಚೈವ ಕುಮುದಂ ಚೈವ ವಾನರಮ್ ॥ ೬೪

ಪ್ರಾಸೈಃ ಶೂಲೈಃ ಶಿತೈರ್ಬಾಣೈರಿಂದ್ರಜಿನ್ಮಂತ್ರಸಂಹಿತೈಃ ।
ವಿವ್ಯಾಧ ಹರಿಶಾರ್ದೂಲಾನ್ ಸರ್ವಾಂಸ್ತಾನ್ ರಾಕ್ಷಸೋತ್ತಮಃ ॥

ಸ ವೈ ಗದಾಭಿರ್ಹರಿಯೂಥಮುಖ್ಯಾ-
ನ್ನಿರ್ಭಿದ್ಯ ಬಾಣೈಸ್ತಪನೀಯಪುಂಖೈಃ ।
ವವರ್ಷ ರಾಮಂ ಶರವೃಷ್ಟಿಜಾಲೈಃ
ಸ ಲಕ್ಷ್ಮಣಂ ಭಾಸ್ಕರರಶ್ಮಿಕಲ್ಪೈಃ ॥ ೬೬

---

ಉರುಳುರುಳಿ ಬಿದ್ದರು (೫೯-೬೦). ಆ ಕಪಿವೀರರು ಕತ್ತೆತ್ತಿ ಮೇಲೆ ನೋಡಿದಾಗ ಕಣ್ಣುಗಳಿಗೇ ಬಾಣಗಳು ಬಂದೆರಗಿದವು. ಆಲಂಬನೆಗಾಗಿ ಅವರು ಒಬ್ಬರನ್ನೊಬ್ಬರು ಹಿಡಿದುಕೊಳ್ಳುತ್ತಿದ್ದರು. ಮರುಕ್ಷಣದಲ್ಲಿಯೇ ಉಭಯರೂ ತತ್ತರಿಸಿ ನೆಲದಲ್ಲಿ ಬೀಳುತ್ತಿದ್ದರು (೬೧). ರಾಕ್ಷಸಶ್ರೇಷ್ಠನಾದ ಇಂದ್ರಜಿತುವು ಹನುಮಂತ, ಸುಗ್ರೀವ, ಅಂಗದ, ಗಂಧಮಾದನ, ಜಾಂಬವಂತ, ಸುಷೇಣ, ವೇಗದರ್ಶಿ, ಮೈಂದ, ದ್ವಿವಿದ, ನೀಲ, ಗವಾಕ್ಷ, ಗಜ, ಗೋಮುಖ, ಕೇಸರಿ, ಹರಿಲೋಮ, ವಿದ್ಯುದ್ದಂಷ್ಟ್ರ, ಸೂರ್ಯಾನನ, ಜ್ಯೋತಿರ್ಮುಖ, ದಧಿಮುಖ, ಪಾವಕಾಕ್ಷ, ನಲ, ಕುಮುದ ಮುಂತಾದ ಸಮಸ್ತ ವಾನರಯೂಥಪರನ್ನೂ ಪ್ರಾಸಗಳಿಂದ ಬಡಿದು, ಶೂಲಗಳಿಂದ ತಿವಿದು, ನಿಶಿತಾಸ್ತ್ರಗಳಿಂದ ಹೊಡೆದು, ಮಂತ್ರಾಸ್ತ್ರಗಳಿಂದ ಭಗ್ನಗೊಳಿಸಿದನು (೬೨-೬೫). ಅಲ್ಲದೆ ಆ ರಾಕ್ಷಸನು ಗದೆಗಳಿಂದ ವಾನರರನ್ನಪ್ಪಳಿಸಿ ಸುವರ್ಣಪುಂಖಾಂಕಿತ ಶರಗಳಿಂದ ಅವರನ್ನು ಕೆತ್ತಿದನು. ಅನಂತರ ಸೂರ್ಯರಶ್ಮಿಗಳಂತಿದ್ದ ಉಗ್ರವಾದ ಶರವೃಷ್ಟಿಗಳನ್ನು ಶ್ರೀರಾಮಲಕ್ಷ್ಮಣರ

ಸ ಬಾಣವರ್ಷೈರಭಿವರ್ಷ್ಯಮಾಣೋ
ಧಾರಾನಿಪಾತಾನಿವ ತಾನಚಿಂತ್ಯ ।
ಸಮೀಕ್ಷಮಾಣಃ ಪರಮಾದ್ಭುತಶ್ರೀ
ರಾಮಸ್ತದಾ ಲಕ್ಷ್ಮಣಮಿತ್ಯುವಾಚ ॥ ೬೭

ಅಸೌ ಪುನರ್ಲಕ್ಷ್ಮಣ ರಾಕ್ಷಸೇಂದ್ರೋ
ಬ್ರಹ್ಮಾಸ್ತ್ರಮಾಶ್ರಿತ್ಯ ಸುರೇಂದ್ರಶತ್ರುಃ ।
ನಿಪಾತಯಿತ್ವಾ ಹರಿಸೈನ್ಯಮುಗ್ರ-
ಮಸ್ಮಾನ್ ಶರೈರರ್ದಯತಿ ಪ್ರಸಕ್ತಃ ॥ ೬೮

ಸ್ವಯಂಭುವಾ ದತ್ತವರೋ ಮಹಾತ್ಮಾ
ಸಮಾಹಿತೋಽಂತರ್ಹಿತಭೀಮಕಾಯಃ ।
ಕಥಂ ನು ಶಕ್ಯೋ ಯುಧಿ ನಷ್ಟದೇಹೋ
ನಿಹಂತುಮದ್ಯೇಂದ್ರಜಿದುದ್ಯತಾಸ್ತ್ರಃ ॥ ೬೯

ಮನ್ಯೇ ಸ್ವಯಂಭೂರ್ಭಗವಾನಚಿಂತ್ಯೋ
ಯಸ್ಯೈತದಸ್ತ್ರಂ ಪ್ರಭವಶ್ಚ ಯೋಽಸ್ಯ ।

---

ಮೇಲೆ ಸುರಿಸಲಾರಂಭಿಸಿದನು (೬೬). ಹೀಗೆ ಶರವೃಷ್ಟಿಗಳು ನಿರಂತರವಾಗಿ ಸುರಿಯುತ್ತಿರುವಾಗ, ಪರಮತೇಜಸ್ವಿಯಾದ ಶ್ರೀರಾಮನು ಅವುಗಳನ್ನು ಧಾರಾಕಾರವಾದ ಮಳೆಯೆಂದು ತಿಳಿದು ಲೆಕ್ಕಿಸದೆ, ಬಳಿಯಲ್ಲಿದ್ದ ಲಕ್ಷ್ಮಣನನ್ನು ನೋಡುತ್ತ ಹೀಗೆಂದನು (೬೭): "ವತ್ಸ-ಲಕ್ಷ್ಮಣ, ಈ ರಾಕ್ಷಸೇಂದ್ರನು ಬ್ರಹ್ಮಾಸ್ತ್ರಬಲವನ್ನಾಶ್ರಯಿಸಿದ್ದಾನೆ. ಕಪಿಸೇನೆಯನ್ನು ಉಗ್ರವಾಗಿ ಹೊಡೆದುರುಳಿಸಿ ಛಲದಿಂದ ಶರಗಳನ್ನು ಹೊಡೆದು ನಮ್ಮನ್ನು ಪೀಡಿಸುತ್ತಿದ್ದಾನೆ. ಬ್ರಹ್ಮನಿಂದ ವರವನ್ನು ಪಡೆದು ಮಹಾಶೂರನೆನಿಸಿದ್ದಾನೆ. ತನ್ನ ದೇಹವು ಕಾಣದಂತೆ ಎಚ್ಚರಿಕೆಯಿಂದ ಕಣ್ಮರೆಯಾಗಿದ್ದಾನೆ. ಒಂದೇ ಸಮನಾಗಿ ಅಸ್ತ್ರಗಳನ್ನು ಪ್ರಯೋಗಿಸುತ್ತಿರುವ ಇಂದ್ರಜಿತು ಅದೃಶ್ಯನಾಗಿರುವಾಗ, ಈತನನ್ನು ಯುದ್ಧದಲ್ಲಿ ಸಂಹರಿಸುವುದು ಹೇಗೆ? (೬೮-೬೯). ಭಗವಾನ್ ಬ್ರಹ್ಮದೇವನ ಮಹಿಮೆ ಅಚಿಂತ್ಯವಾದುದು. ಆತನ ಅಸ್ತ್ರವಿದು. ಆತನೇ ಇಂದ್ರಜಿತುವಿಗೆ ಅನುಗ್ರಹಿಸಿದ್ದಾನೆ. ಆದ್ದರಿಂದ

ಬಾಣಾವಪಾತಾಂಸ್ತ್ವಮಿಹಾದ್ಯ ಧೀಮನ್
ಮಯಾ ಸಹಾವ್ಯಗ್ರಮನಾಃ ಸಹಸ್ವ ॥ ೭೦

ಪ್ರಚ್ಛಾದಯತ್ಯೇಷ ಹಿ ರಾಕ್ಷಸೇಂದ್ರಃ
ಸರ್ವಾ ದಿಶಃ ಸಾಯಕವೃಷ್ಟಿಜಾಲೈಃ ।
ಏತಚ್ಚ ಸರ್ವಂ ಪತಿತಾಗ್ರ್ಯಶೂರಂ
ನ ಭ್ರಾಜತೇ ವಾನರರಾಜಸೈನ್ಯಮ್ ॥ ೭೧

ಆವಾಂ ತು ದೃಷ್ಟ್ವಾ ಪತಿತೌ ವಿಸಂಜ್ಞೌ
ನಿವೃತ್ತಯುದ್ಧೌ ಗತರೋಷಹರ್ಷೌ ।
ಧ್ರುವಂ ಪ್ರವೇಕ್ಷ್ಯತ್ಯಮರಾರಿವಾಸ-
ಮಸೌ ಸಮಾದಾಯ ರಣಾಗ್ರಲಕ್ಷ್ಮೀಮ್ ॥ ೭೨

ತತಸ್ತು ತಾವಿಂದ್ರಜಿದಸ್ತ್ರಜಾಲೈ-
ರ್ಬಭೂವತುಸ್ತತ್ರ ತಥಾ ವಿಶಸ್ತೌ ।
ಸ ಚಾಪಿ ತೌ ತತ್ರ ವಿಷಾದಯಿತ್ವಾ
ನನಾದ ಹರ್ಷಾದ್ಯುಧಿ ರಾಕ್ಷಸೇಂದ್ರಃ ॥ ೭೩

---

ಈ ಶರವೃಷ್ಟಿಯನ್ನು ನಾವು ಸಹಿಸಿಕೊಳ್ಳಬೇಕಾಗಿದೆ. ಲಕ್ಷ್ಮಣ, ನೀನು ಪ್ರಾಜ್ಞನಾಗಿದ್ದೀಯೆ (ಹೆಚ್ಚು ಹೇಳಬೇಕಾದ್ದಿಲ್ಲ). ಈಗ ಬೇಸರಗೊಳ್ಳದೆ ಇದನ್ನು ನನ್ನೊಡನೆ ಸಹಿಸಿಕೊ (೭೦). ಈ ರಾಕ್ಷಸನು ಶರಜಾಲಗಳನ್ನು ಮಳೆಗರೆದು ಸಕಲ ದಿಕ್ಕುಗಳನ್ನೂ ಮುಚ್ಚುತ್ತಿದ್ದಾನೆ. ವಾನರವೀರರು ಭಗ್ನರಾಗಿ ಬೀಳುತ್ತಿದ್ದಾರೆ. ವಾನರಸೇನೆಯೆಲ್ಲವೂ ಕಂಗೆಟ್ಟಿದೆ. ನಾವೀರ್ವರೂ ಈಗ ರೋಷವನ್ನಾಗಲಿ ರಣೋತ್ಸಾಹವನ್ನಾಗಲಿ ತೋರಿಸದೆ ಯುದ್ಧದಿಂದ ವಿರತರಾಗೋಣ. ನಾವು ಮೂರ್ಛಿತರಾಗಿ ಬಿದ್ದಿರುವುದನ್ನು ಇಂದ್ರಜಿತು ನೋಡಿ, ಇಂದಿನ ವಿಜಯಲಕ್ಷ್ಮಿಯನ್ನು ಪಡೆದೆನೆಂಬ ವಿಶ್ವಾಸದಿಂದ ನಿಶ್ಚಯವಾಗಿಯೂ ಲಂಕೆಗೆ ಹಿಂದಿರುಗುವನು" ಎಂದನು(೭೧-೭೨). ಅನಂತರ ಶ್ರೀರಾಮನೂ ಲಕ್ಷ್ಮಣನೂ ಇಂದ್ರಜಿತುವಿನ ಅಸ್ತ್ರಜಾಲಗಳಿಂದ ನೊಂದು ಮೂರ್ಛಿತರಾಗಿ ಮಲಗಿದರು. ರಾವಣಿಯು ಅವರಿಬ್ಬರನ್ನೂ ಮೂರ್ಛೆಗೊಳಿಸಿ ಹರ್ಷದಿಂದ ಸಿಂಹನಾದಮಾಡಿದನು (೭೩).

**ಸ ತತ್ತದಾ ವಾನರಸೈನ್ಯಮೇವಂ**
**ರಾಮಂ ಚ ಸಂಖ್ಯೇ ಸಹ ಲಕ್ಷ್ಮಣೇನ ।**
**ವಿಷಾದಯಿತ್ವಾ ಸಹಸಾ ವಿವೇಶ**
**ಪುರೀಂ ದಶಗ್ರೀವಭುಜಾಭಿಗುಪ್ತಾಮ್ ॥** ೭೪

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಿಸಪ್ತತಿತಮಃ ಸರ್ಗಃ

---

## ಚತುಃಸಪ್ತತಿತಮಃ ಸರ್ಗಃ

### ಓಷಧಿಪರ್ವತಾನಯನಮ್

**ತಯೋಸ್ತದಾ ಸಾದಿತಯೋ ರಣಾಗ್ರೇ**
**ಮುಮೋಹ ಸೈನ್ಯಂ ಹರಿಪುಂಗವಾನಾಮ್ ।**
**ಸುಗ್ರೀವನೀಲಾಂಗದಜಾಂಬವಂತೋ**
**ನ ಚಾಪಿ ಕಿಂಚಿತ್ ಪ್ರತಿಪೇದಿರೇ ತೇ ॥** ೧

---

ಈ ಪ್ರಕಾರವಾಗಿ ಮೇಘನಾದನು ಸಂಗ್ರಾಮದಲ್ಲಿ ವಾನರಸೇನೆಯನ್ನು ಭಗ್ನಗೊಳಿಸಿ, ಶ್ರೀರಾಮಲಕ್ಷ್ಮಣರನ್ನು ಮೂರ್ಛೆಗೊಳಿಸಿ, ದಶಕಂಠನಿಂದ ರಕ್ಷಿತವಾದ ಲಂಕಾನಗರಿಗೆ ನೇರವಾಗಿ ಹೊರಟುಹೋದನು (೭೪).

**ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತುಮೂರನೆಯ ಸರ್ಗ**

---

## ಸರ್ಗ ೭೪

**ಇಂದ್ರಜಿತುವಿನ ಬ್ರಹ್ಮಾಸ್ತ್ರಬಲದಿಂದ ಮೂರ್ಛಿತವಾದ ಕಪಿಸೇನೆಯನ್ನು ವಿಭೀಷಣ, ಹನುಮಂತ-ಇವರಿಬ್ಬರು ಸಮೀಕ್ಷಿಸುವುದು. ಹನುಮಂತನು ಹಿಮಾಲಯದಿಂದ ಓಷಧಿಪರ್ವತವನ್ನು ತರುವುದು. ಸಕಲ ಕಪಿಸೇನೆಯೂ ಮೂರ್ಛೆಯಿಂದೆದ್ದು ಹರ್ಷಿಸುವುದು**

ಶ್ರೀರಾಮಲಕ್ಷ್ಮಣರು ರಣರಂಗದಲ್ಲಿ ಮೂರ್ಛಿತರಾಗಿ ಬೀಳಲು ವಾನರಸೇನೆಗೆ ದಿಕ್ಕುತೋರದಾಯಿತು. ಸುಗ್ರೀವ, ನೀಲ, ಅಂಗದ, ಜಾಂಬವಂತ ಮೊದಲಾದ ವಾನರನಾಯಕರೂ ಸಹ ಕಂಗೆಟ್ಟು ಏನನ್ನು ಮಾಡಲೂ ಅಸಮರ್ಥರಾದರು (೧). ಖಿನ್ನವಾದ ಕಪಿಸೇನೆಯನ್ನು

ತತೋ ವಿಷಣ್ಣಂ ಸಮವೇಕ್ಷ್ಯ ಸೈನ್ಯಂ
ವಿಭೀಷಣೋ ಬುದ್ಧಿಮತಾಂ ವರಿಷ್ಠಃ ।
ಉವಾಚ ಶಾಖಾಮೃಗರಾಜವೀರಾ-
ನಾಶ್ವಾಸಯನ್ನಪ್ರತಿಮೈರ್ವಚೋಭಿಃ ॥ ೨

ಮಾ ಭೈಷ್ಟ ನಾಸ್ತ್ಯತ್ರ ವಿಷಾದಕಾಲೋ
ಯದಾರ್ಯಪುತ್ರೌ ಹ್ಯವಶೌ ವಿಷಣ್ಣೌ ।
ಸ್ವಯಂಭುವೋ ವಾಕ್ಯಮಥೋದ್ವಹಂತೌ
ಯತ್ ಸಾದಿತಾವಿಂದ್ರಜಿದಸ್ತ್ರಜಾಲೈಃ ॥ ೩

ತಸ್ಮೈ ತು ದತ್ತಂ ಪರಮಾಸ್ತ್ರಮೇತತ್
ಸ್ವಯಂಭುವಾ ಬ್ರಾಹ್ಮಮಮೋಘವೇಗಮ್ ।
ತನ್ಮಾನಯಂತೌ ಯುಧಿ ರಾಜಪುತ್ರೌ
ನಿಪಾತಿತೌ ಕೋಽತ್ರ ವಿಷಾದಕಾಲಃ ॥ ೪

ಬ್ರಾಹ್ಮಮಸ್ತ್ರಂ ತತೋ ಧೀಮಾನ್ ಮಾನಯಿತ್ವಾ ತು ಮಾರುತಿಃ ।
ವಿಭೀಷಣವಚಃ ಶ್ರುತ್ವಾ ಹನುಮಾಂಸ್ತಮಥಾಬ್ರವೀತ್ ॥ ೫

---

ನೋಡಿ ಮಹಾಪ್ರಾಜ್ಞನಾದ ವಿಭೀಷಣನು ಕಪಿವೀರರನ್ನು ಸಂತೈಸುತ್ತ ಕಾಲೋಚಿತವಾದ ಧೀರವಾಣಿಯಿಂದ "ವಾನರವೀರರೆ, ಹೆದರಬೇಡಿರಿ. ಈ ರಾಜಪುತ್ರರಿಬ್ಬರೂ ಪರವಶರಾಗಿ ಮೂರ್ಛಿತರಾದರೆಂದು ವಿಷಾದಿಸಬೇಕಾಗಿಲ್ಲ. ಬ್ರಹ್ಮದೇವನ ವಚನಕ್ಕೆ ಮಾನ್ಯತೆಯನ್ನಿತ್ತು ಶ್ರೀರಾಮಲಕ್ಷ್ಮಣರು ಇಂದ್ರಜಿತುವಿನ ಅಸ್ತ್ರಜಾಲಗಳಿಂದ ಮೂರ್ಛಿತರಾಗಿದ್ದಾರೆ (೨-೩). ಸಾಕ್ಷಾತ್ ಸ್ವಯಂಭುವೇ ಇಂದ್ರಜಿತುವಿಗೆ ಅಮೋಘವೂ ದಿವ್ಯವೂ ಆದ ಬ್ರಹ್ಮಾಸ್ತ್ರವನ್ನು ಅನುಗ್ರಹಿಸಿದ್ದಾನೆ. ಅಂಥ ಬ್ರಹ್ಮಾಸ್ತ್ರಕ್ಕೆ ಒಂದು ಗೌರವವನ್ನು ಸಲ್ಲಿಸಬೇಕೆಂದು ಈ ರಾಜಪುತ್ರರು ಅದನ್ನು ಪ್ರತಿಭಟಿಸದೆ ಪರವಶರಾಗಿ ಮಲಗಿದ್ದಾರೆ. ಆದ್ದರಿಂದ ಇದು ವಿಷಾದಿಸಬೇಕಾದ ಕಾಲವಲ್ಲ" ಎಂದು ಧೈರ್ಯವನ್ನು ಹೇಳಿದನು (೪). ವಿಭೀಷಣನ ಮಾತನ್ನು ಕೇಳಿ ಧೀಮಂತನಾದ ಆಂಜನೇಯನು ಬ್ರಹ್ಮಾಸ್ತ್ರಕ್ಕೆ ಮನ್ನಣೆಯನ್ನಿತ್ತು ಸ್ವಲ್ಪಕಾಲದವರೆಗೆ ಅದಕ್ಕೆ ವಶನಾಗಿದ್ದು, ಅನಂತರ

ಏತಸ್ಮಿನ್ನಿಹತೇ ಸೈನ್ಯೇ ವಾನರಾಣಾಂ ತರಸ್ವಿನಾಮ್ ।
ಯೋ ಯೋ ಧಾರಯತೇ ಪ್ರಾಣಾಂಸ್ತಂ ತಮಾಶ್ವಾಸಯಾವಹೈ ॥

ತಾವುಭೌ ಯುಗಪದ್ವೀರೌ ಹನುಮದ್ರಾಕ್ಷಸೋತ್ತಮೌ ।
ಉಲ್ಕಾಹಸ್ತೌ ತದಾ ರಾತ್ರೌ ರಣಶೀರ್ಷೇ ವಿಚೇರತುಃ ॥ ೭

ಭಿನ್ನಲಾಂಗೂಲಹಸ್ತೋರುಪಾದಾಂಗುಲಿಶಿರೋಧರೈಃ ।
ಸ್ರವದ್ಭಿಃ ಕ್ಷತಜಂ ಗಾತ್ರೈಃ ಪ್ರಸ್ರವದ್ಭಿಸ್ತತಸ್ತತಃ ॥ ೮

ಪತಿತೈಃ ಪರ್ವತಾಕಾರೈರ್ವಾನರೈರಭಿಸಂಕುಲಾಮ್ ।
ಶಸ್ತ್ರೈಶ್ಚ ಪತಿತೈರ್ದೀಪ್ತೈರ್ದದೃಶಾತೇ ವಸುಂಧರಾಮ್ ॥ ೯

ಸುಗ್ರೀವಮಂಗದಂ ನೀಲಂ ಶರಭಂ ಗಂಧಮಾದನಮ್ ।
ಗವಾಕ್ಷಂ ಚ ಸುಷೇಣಂ ಚ ವೇಗದರ್ಶಿನಮಾಹುಕಮ್ ॥ ೧೦

ಮೈಂದಂ ನಲಂ ಜ್ಯೋತಿಮುಖಂ ದ್ವಿವಿದಂ ಪನಸಂ ತಥಾ ।
ಏತಾಂಶ್ಚಾನ್ಯಾಂಸ್ತತೋ ವೀರೌ ದದೃಶಾತೇ ಹತಾನ್ ರಣೇ ॥ ೧೧

---

ವಿಭೀಷಣನನ್ನು ಕುರಿತು "ವಿಭೀಷಣ, ಬಲಶಾಲಿಗಳಾದ ವಾನರರ ಈ ಸೈನ್ಯವು ಭಗ್ನವಾಗಿ ಬಿದ್ದಿದೆ. ಇದರಲ್ಲಿ ಯಾರು ಯಾರು ಬದುಕಿರುವರೋ ಅವರನ್ನು ಹುಡುಕಿ ಸಂತೈಸೋಣ" ಎಂದನು (೫-೬). ಅನಂತರ ಹನುಮಂತನೂ ವಿಭೀಷಣನೂ ಆ ರಾತ್ರಿಯ ಸಮಯದಲ್ಲಿ ಪಂಜುಗಳನ್ನು ಹಿಡಿದು ರಣರಂಗದಲ್ಲಿ ಒಟ್ಟಿಗೆ ಸುತ್ತಾಡಲಾರಂಭಿಸಿದರು. ಎಲ್ಲೆಲ್ಲಿಯೂ ವಾನರ ಸೈನಿಕರ ವಿಚ್ಛಿನ್ನವಾದ ಬಾಲಗಳು, ಮುರಿದ ಕೈಗಳು, ತುಂಡರಿಸಿದ ತೊಡೆಗಳು, ಕತ್ತರಿಸಿದ ಕಾಲುಗಳು, ಭಿನ್ನವಾದ ಬೆರಳುಗಳು, ತರಿಯಲ್ಪಟ್ಟ ತಲೆಗಳು ಬಿದ್ದಿದ್ದವು! ಅವುಗಳಿಂದ ರಕ್ತವು ಹರಿಯುತ್ತಿತ್ತು. ಪರ್ವತಾಕಾರದ ಕಪಿಯೋಧರು ನಿಶಿತಶಸ್ತ್ರಗಳಿಂದ ನಿರ್ಭಿನ್ನಗಾತ್ರರಾಗಿ, ನೆತ್ತರನ್ನು ಕೋಡಿಯಾಗಿ ಹರಿಸುತ್ತ ಬಿದ್ದಿದ್ದರು. ಇಂತಹ ರಣಭೂಮಿಯನ್ನು ಅವರಿಬ್ಬರೂ ನೋಡುತ್ತ ಹೋದರು (೭-೯). ಸುಗ್ರೀವ, ಅಂಗದ, ನೀಲ, ಶರಭ, ಗಂಧಮಾದನ, ಗವಾಕ್ಷ, ಸುಷೇಣ, ವೇಗದರ್ಶಿ, ಆಹುಕ, ಮೈಂದ, ನಳ, ಜ್ಯೋತಿರ್ಮುಖ, ದ್ವಿವಿದ, ಪನಸ—ಮುಂತಾದ ಕಪಿವೀರರು ಅಭಿಹತರಾಗಿ ಬಿದ್ದುದನ್ನು ಅವರು ಕಂಡರು (೧೦-೧೧).

ಸಪ್ತಷಷ್ಟಿರ್ಹತಾಃ ಕೋಟ್ಯೋ ವಾನರಾಣಾಂ ತರಸ್ವಿನಾಮ್ ।
ಅಹ್ನಃ ಪಂಚಮಶೇಷೇಣ ವಲ್ಲಭೇನ ಸ್ವಯಂಭುವಃ ॥ ೧೨

ಸಾಗರೌಘನಿಭಂ ಭೀಮಂ ದೃಷ್ಟ್ವಾ ಬಾಣಾರ್ದಿತಂ ಬಲಮ್ ।
ಮಾರ್ಗತೇ ಜಾಂಬವಂತಂ ಸ್ಮ ಹನುಮಾನ್ ಸವಿಭೀಷಣಃ ॥ ೧೩

ಸ್ವಭಾವಜರಯಾ ಯುಕ್ತಂ ವೃದ್ಧಂ ಶರಶತೈಶ್ಚಿತಮ್ ।
ಪ್ರಜಾಪತಿಸುತಂ ವೀರಂ ಶಾಮ್ಯಂತಮಿವ ಪಾವಕಮ್ ॥ ೧೪

ದೃಷ್ಟ್ವಾ ತಮುಪಸಂಗಮ್ಯ ಪೌಲಸ್ತ್ಯೋ ವಾಕ್ಯಮಬ್ರವೀತ್ ।
ಕಚ್ಚಿದಾರ್ಯ ಶರೈಸ್ತೀಕ್ಷ್ಣೈಃ ಪ್ರಾಣಾ ನ ಧ್ವಂಸಿತಾಸ್ತವ ॥ ೧೫

ವಿಭೀಷಣವಚಃ ಶ್ರುತ್ವಾ ಜಾಂಬವಾನೃಕ್ಷಪುಂಗವಃ ।
ಕೃಚ್ಛ್ರಾದಭ್ಯುದ್ಗಿರನ್ ವಾಕ್ಯಮಿದಂ ವಚನಮಬ್ರವೀತ್ ॥ ೧೬

---

ಇಂದ್ರಜಿತು ಪ್ರಯೋಗಿಸಿದ ಬ್ರಹ್ಮಪ್ರಿಯವಾದ ಬ್ರಹ್ಮಾಸ್ತ್ರವು ಹಗಲಿನ ಐದನೆಯ ಭಾಗವಾದ ಸಾಯಂಕಾಲದ ಆರು ಗಳಿಗೆಗಳಲ್ಲಿ* ಅರುವತ್ತೇಳು ಕೋಟಿ ಕಪಿಯೋಧರನ್ನು ಸಂಹರಿಸಿತ್ತು! (೧೨). ಬ್ರಹ್ಮಾಸ್ತ್ರದಿಂದ ಘಾತಿಸಲ್ಪಟ್ಟು ಸಮುದ್ರದಂತೆ ಭೈರವಾಕಾರವಾಗಿದ್ದ ವಿಶಾಲಸೇನಾಸಮುದಾಯದಲ್ಲಿ, ವಿಭೀಷಣಸಹಿತನಾದ ಹನುಮಂತನು ಮುಖ್ಯವಾಗಿ ಜಾಂಬವಂತನನ್ನು ಹುಡುಕುತ್ತಿದ್ದನು (೧೩). ಅವರಿಬ್ಬರೂ ಪ್ರಯಾಸದಿಂದ ಹುಡುಕಿ ಕಡೆಯಲ್ಲಿ ಜಾಂಬವಂತನನ್ನು ಕಂಡರು. ಸಹಜವಾದ ಮುಪ್ಪಿನಿಂದ ಬಳಲುತ್ತಿದ್ದ ಆ ವೃದ್ಧನ ಮೈಯಲ್ಲಿ ನೂರಾರು ಬಾಣಗಳು ನಾಟಿಕೊಂಡಿದ್ದವು. ಬ್ರಹ್ಮಪುತ್ರನಾದ ಆ ವೀರನು ಆರಿಹೋಗುತ್ತಿದ್ದ ಅಗ್ನಿಯಂತೆ ಗೋಚರಿಸಿದನು! (೧೪). ಜಾಂಬವಂತನನ್ನು ಕಂಡೊಡನೆ ಅವರಿಬ್ಬರೂ ಅವನ ಬಳಿಗೆ ಹೋದರು. ವಿಭೀಷಣನು ಜಾಂಬವಂತನನ್ನು ಕುರಿತು "ಆರ್ಯ, ಜೀವಂತನಾಗಿರುವೆಯಾ? ತೀಕ್ಷ್ಣಾಸ್ತ್ರಗಳ ಹೊಡೆತವನ್ನು ತಾಳಿಕೊಂಡೆಯಾ?" ಎಂದು ಕೇಳಿದನು (೧೫). ಆಗ ಭಲ್ಲೂಕಶ್ರೇಷ್ಠನಾದ ಜಾಂಬವಂತನು (ಮಾತನಾಡಿದವನು

---

* ಒಂದು ಹಗಲಿಗೆ ಪ್ರಾತಃಕಾಲ, ಸಂಗವ, ಮಧ್ಯಾಹ್ನ, ಅಪರಾಹ್ಣ ಮತ್ತು ಸಾಯಂಕಾಲವೆಂದು ಐದು ಭಾಗಗಳು. ಒಂದೊಂದು ಭಾಗಕ್ಕೆ ಆರು ಗಳಿಗೆಗಳು. ಒಂದು ಗಳಿಗೆ =೨೪ ನಿಮಿಷ. ಆರು ಗಳಿಗೆ=೨ ಘಂಟೆ, ೨೪ ನಿಮಿಷ.

ನೈರ್ಋತೇಂದ್ರ ಮಹಾವೀರ್ಯ ಸ್ವರೇಣ ತ್ವಾಭಿಲಕ್ಷಯೇ ।
ಪೀಡ್ಯಮಾನಃ ಶಿತೈರ್ಬಾಣೈರ್ನ ತ್ವಾಂ ಪಶ್ಯಾಮಿ ಚಕ್ಷುಷಾ ॥ ೧೭

ಅಂಜನಾ ಸುಪ್ರಜಾ ಯೇನ ಮಾತರಿಶ್ವಾ ಚ ನೈರ್ಋತ ।
ಹನುಮಾನ್ ವಾನರಶ್ರೇಷ್ಠಃ ಪ್ರಾಣಾನ್ ಧಾರಯತೇ ಕ್ವಚಿತ್ ॥

ಶ್ರುತ್ವಾ ಜಾಂಬವತೋ ವಾಕ್ಯಮುವಾಚೇದಂ ವಿಭೀಷಣಃ ।
ಆರ್ಯಪುತ್ರಾವತಿಕ್ರಮ್ಯ ಕಸ್ಮಾತ್ ಪೃಚ್ಛಸಿ ಮಾರುತಿಮ್ ॥ ೧೯

ನೈವ ರಾಜನಿ ಸುಗ್ರೀವೇ ನಾಂಗದೇ ನಾಪಿ ರಾಘವೇ ।
ಆರ್ಯ ಸಂದರ್ಶಿತಃ ಸ್ನೇಹೋ ಯಥಾ ವಾಯುಸುತೇ ಪರಃ ॥ ೨೦

ವಿಭೀಷಣವಚಃ ಶ್ರುತ್ವಾ ಜಾಂಬವಾನ್ ವಾಕ್ಯಮಬ್ರವೀತ್ ।
ಶೃಣು ನೈರ್ಋತಶಾರ್ದೂಲ ಯಸ್ಮಾತ್ ಪೃಚ್ಛಾಮಿ ಮಾರುತಿಮ್ ॥

ತಸ್ಮಿನ್ ಜೀವತಿ ವೀರೇ ತು ಹತಮಪ್ಯಹತಂ ಬಲಮ್ ।
ಹನುಮತ್ಯುಜ್ಝಿತಪ್ರಾಣೇ ಜೀವಂತೋಽಪಿ ವಯಂ ಹತಾಃ ॥ ೨೨

---

ವಿಭೀಷಣನೆಂದು ಧ್ವನಿಯಿಂದಲೇ ಗುರುತಿಸಿ) ಆಯಾಸಪಡುತ್ತ ಬಹುಶ್ರಮದಿಂದ "ರಾಕ್ಷಸೋತ್ತಮ-ವಿಭೀಷಣ, ಧ್ವನಿಯಿಂದ ನಿನ್ನನ್ನು ಗುರುತಿಸುತ್ತಿದ್ದೇನೆ. ತೀಕ್ಷ್ಣಾಸ್ತ್ರಗಳ ಹೊಡೆತದಿಂದ ಕಣ್ಣುಬಿಡಲಾರೆನು-ನೋಡಲಾರೆನು! (೧೬-೧೭). ವಿಭೀಷಣ, ಅಂಜನಾದೇವಿಯು ಯಾವ ಸುಪುತ್ರನನ್ನು ಹಡೆದಳೋ, ವಾಯುದೇವನು ಯಾವ ಪುಣ್ಯಾತ್ಮನಿಗೆ ಜನ್ಮವಿತ್ತನೋ ಆ ವಾನರೋತ್ತಮನು ಬದುಕಿರುವನೆ? ಹನುಮಂತನು ಜೀವಿಸಿರುವನೆ?" ಎಂದು ಕೇಳಿದನು! (೧೮). ಅದನ್ನು ಕೇಳಿ ವಿಭೀಷಣನು "ಆರ್ಯ, ಆರ್ಯಪುತ್ರರಾದ ಶ್ರೀರಾಮಲಕ್ಷ್ಮಣರನ್ನು ಬಿಟ್ಟು ಹನುಮಂತನ ಯೋಗಕ್ಷೇಮಗಳನ್ನು ವಿಚಾರಿಸುವೆಯೇಕೆ? ಮಹಾರಾಜನಾದ ಸುಗ್ರೀವನಲ್ಲಾಗಲಿ ಯುವರಾಜನಾದ ಅಂಗದನಲ್ಲಾಗಲಿ ಶ್ರೀರಾಮನಲ್ಲಾಗಲಿ ಕಾಣದ ಅತಿಶಯವಾದ ಸ್ನೇಹವನ್ನು ವಾಯುತನಯನಲ್ಲಿ ತೋರಿಸಿಬಿಟ್ಟಿಯಲ್ಲ!" ಎಂದನು (೧೯-೨೦). ಆಗ ಜಾಂಬವಂತನು "ರಾಕ್ಷಸೋತ್ತಮ, ನಾನು ಆಂಜನೇಯನನ್ನೇಕೆ ವಿಚಾರಿಸಿದೆನೆಂಬುದನ್ನು ಹೇಳುವೆನು, ಕೇಳು: ಆ ವೀರಾಗ್ರಣಿಯು ಬದುಕಿದ್ದರೆ ಈ ಸೇನೆಯು ಹತವಾದರೂ ಹತವಾಗಿಲ್ಲವೆಂದೇ ತಿಳಿಯಬೇಕು! ಹನುಮಂತನೇನಾದರೂ ಪ್ರಾಣ

ಧರತೇ ಮಾರುತಿಸ್ತಾತ ಮಾರುತಪ್ರತಿಮೋ ಯದಿ ।
ವೈಶ್ವಾನರಸಮೋ ವೀರ್ಯೇ ಜೀವಿತಾಶಾ ತತೋ ಭವೇತ್ ॥ ೨೩

ತತೋ ವೃದ್ಧಮುಪಾಗಮ್ಯ ನಿಯಮೇನಾಭ್ಯವಾದಯತ್ ।
ಗೃಹ್ಯ ಜಾಂಬವತಃ ಪಾದೌ ಹನುಮಾನ್ ಮಾರುತಾತ್ಮಜಃ ॥ ೨೪

ಶ್ರುತ್ವಾ ಹನುಮತೋ ವಾಕ್ಯಂ ತಥಾಪಿ ವ್ಯಥಿತೇಂದ್ರಿಯಃ ।
ಪುನರ್ಜಾತಮಿವಾತ್ಮಾನಂ ಮನ್ಯತೇ ಸ್ಮ ಋಕ್ಷಪುಂಗವಃ ॥ ೨೫

ತತೋಽಬ್ರವೀನ್ಮಹಾತೇಜಾ ಹನುಮಂತಂ ಸ ಜಾಂಬವಾನ್ ।
ಆಗಚ್ಛ ಹರಿಶಾರ್ದೂಲ ವಾನರಾಂಸ್ತ್ರಾತುಮರ್ಹಸಿ ॥ ೨೬

ನಾನ್ಯೋ ವಿಕ್ರಮಪರ್ಯಾಪ್ತಸ್ತ್ವಮೇಷಾಂ ಪರಮಃ ಸಖಾ ।
ತ್ವತ್ಪರಾಕ್ರಮಕಾಲೋಽಯಂ ನಾನ್ಯಂ ಪಶ್ಯಾಮಿ ಕಂಚನ ॥ ೨೭

---

ವನ್ನು ಬಿಟ್ಟಿದ್ದರೆ, ನಾವೆಲ್ಲರೂ ಬದುಕಿದ್ದರೂ ಸತ್ತಹಾಗೆಯೇ! (೨೧-೨೨). ಅಪ್ಪಾ-ವಿಭೀಷಣ, ಆ ವಾಯುಪುತ್ರನು ನಮ್ಮೆಲ್ಲರಿಗೂ ಪ್ರಾಣವಾಯುವಿನಂತೆ ಇದ್ದಾನೆ. ಪರಾಕ್ರಮದಲ್ಲಿ ವೈಶ್ವಾನರನಂತೆ ಇದ್ದಾನೆ. ಅವನು ಜೀವಿಸಿದ್ದರೆ ನಮಗೆ ಪ್ರಾಣದಲ್ಲಿ ಆಸೆ ಹುಟ್ಟೀತು!" ಎಂದನು (೨೩). ಆಮೇಲೆ ಹನುಮಂತನು ಮುಂದೆ ಬಂದು ವೃದ್ಧನಾದ ಜಾಂಬವಂತನ ಪಾದಗಳನ್ನು ಮುಟ್ಟಿ "ಆರ್ಯ, ನಾನು ಹನುಮಂತ. ವಾಯುಪುತ್ರನಾದ ನಾನು ನಿನಗೆ ವಂದಿಸಿ ಆಶೀರ್ವಾದಗಳನ್ನು ಬೇಡುತ್ತಿದ್ದೇನೆ" ಎಂದು ಹೇಳಿ ಅಭಿವಾದನೆಮಾಡಿದನು (೨೪). ಹನುಮಂತನ ನುಡಿಯನ್ನು ಕೇಳಿ ಜಾಂಬವಂತನಿಗೆ, ಮತ್ತೆ ತಾನು ಹುಟ್ಟಿಬಂದೆನೆನಿಸಿತು! ಜರ್ಜರಿತಗಾತ್ರನಾಗಿ ನೋವಿನಿಂದ ನರಳುತ್ತಿದ್ದರೂ ಜಾಂಬವಂತನು ಆನಂದಭರಿತನಾದನು (೨೫). ತೇಜೋನಿಧಿಯಾದ ಆ ಜಾಂಬವಂತನು ಹೀಗೆಂದನು: "ಹನುಮಂತ, ಬಂದೆಯಾ! ಈ ವಾನರಸೇನೆಯನ್ನು ನೀನೇ ಕಾಪಾಡಬೇಕು. ವಿಕ್ರಮದಲ್ಲಿ ಇನ್ನು ಯಾರೂ ನಿನಗೆ ಸಾಟಿಯಿಲ್ಲ. ಈ ವಾನರರಿಗೆ ನೀನೇ ಆಪ್ತಬಾಂಧವ. ನಿನ್ನ ಪರಾಕ್ರಮವನ್ನು ಪ್ರದರ್ಶಿಸಲು ಇದೇ ಸರಿಯಾದ ಕಾಲ! ಇದಕ್ಕೆ ಯೋಗ್ಯರಾದ ಬೇರೆ ಯಾರನ್ನೂ ನಾನು

ಋಕ್ಷವಾನರವೀರಾಣಾಮನೀಕಾನಿ ಪ್ರಹರ್ಷಯ ।
ವಿಶಲ್ಯೌ ಕುರು ಚಾಪ್ಯೇತೌ ಸಾದಿತೌ ರಾಮಲಕ್ಷ್ಮಣೌ ॥ ೨೮

ಗತ್ವಾ ಪರಮಮಧ್ವಾನಮುಪರ್ಯುಪರಿ ಸಾಗರಮ್ ।
ಹಿಮವಂತಂ ನಗಶ್ರೇಷ್ಠಂ ಹನುಮನ್ ಗಂತುಮರ್ಹಸಿ ॥ ೨೯

ತತಃ ಕಾಂಚನಮತ್ಯುಚ್ಚಮೃಷಭಂ ಪರ್ವತೋತ್ತಮಮ್ ।
ಕೈಲಾಸಶಿಖರಂ ಚಾಪಿ ದ್ರಕ್ಷ್ಯಸ್ಯರಿನಿಷೂದನ ॥ ೩೦

ತಯೋಃ ಶಿಖರಯೋರ್ಮಧ್ಯೇ ಪ್ರದೀಪ್ತಮತುಲಪ್ರಭಮ್ ।
ಸರ್ವೌಷಧಿಯುತಂ ವೀರ ದ್ರಕ್ಷ್ಯಸ್ಯೋಷಧಿಪರ್ವತಮ್ ॥ ೩೧

ತಸ್ಯ ವಾನರಶಾರ್ದೂಲ ಚತಸ್ರೋ ಮೂರ್ಧ್ನಿ ಸಂಭವಾಃ ।
ದ್ರಕ್ಷ್ಯಸ್ಯೋಷಧಯೋ ದೀಪ್ತಾ ದೀಪಯಂತ್ಯೋ ದಿಶೋ ದಶ ॥

ಮೃತಸಂಜೀವನೀಂ ಚೈವ ವಿಶಲ್ಯಕರಣೀಮಪಿ ।
ಸಾವರ್ಣ್ಯಕರಣೀಂ ಚೈವ ಸಂಧಾನಕರಣೀಂ ತಥಾ ॥ ೩೩

---

ಕಾಣೆ (೨೬-೨೭). ಹನುಮಂತ, ಭಲ್ಲೂಕವಾನರವೀರರಿಗೆ ನಿನ್ನ ಸಾಹಸ ಕಾರ್ಯದಿಂದ ಆನಂದವನ್ನುಂಟುಮಾಡು. ಅಸ್ತ್ರಪೀಡಿತರಾದ ಶ್ರೀರಾಮ ಲಕ್ಷ್ಮಣರಿಗೊದಗಿರುವ ಬಾಧೆಯನ್ನು ನಿವಾರಿಸು. ಈಗ ನೀನು ಸಮುದ್ರ ವನ್ನು ಲಂಘಿಸಿ ಬಹುದೂರದವರೆಗೆ ಹಾರಿಹೋಗಿ ಹಿಮಾಲಯಪರ್ವತ ವನ್ನು ಸೇರಬೇಕು (೨೮-೨೯). ಅಲ್ಲಿ ನಿನಗೆ ಕಾಂಚನಮಯವೂ ಅತ್ಯುನ್ನತವೂ ಆದ ಋಷಭವೆಂಬ ಗಿರಿಶಿಖರವೂ ಕೈಲಾಸಶಿಖರವೂ ಗೋಚರಿಸುತ್ತವೆ. ಅವೆರಡು ಶಿಖರಗಳ ಮಧ್ಯದಲ್ಲಿ, ವೀರಾಗ್ರಣಿ, ಓಷಧಿ ಪರ್ವತವು ಕಾಣಿಸುತ್ತದೆ. ಅದು ಸರ್ವಮೂಲಿಕೆಗಳಿಂದಲೂ ಯುಕ್ತವಾಗಿ ದಿವ್ಯಪ್ರಭೆಯಿಂದ ವಿರಾಜಿಸುತ್ತಿದೆ (೩೦-೩೧). ಆ ಗಿರಿಯ ಶೃಂಗದಲ್ಲಿ ನಾಲ್ಕು ಬಗೆಯ ದಿವ್ಯಮೂಲಿಕೆಗಳು ದಶದಿಕ್ಕುಗಳನ್ನೂ ಬೆಳಗುತ್ತ ಪ್ರಕಾಶಿಸುತ್ತಿವೆ. ಮೃತಸಂಜೀವನಿ, ವಿಶಲ್ಯಕರಣಿ, ಸಾವರ್ಣ್ಯಕರಣಿ,

ತಾಃ ಸರ್ವಾ ಹನುಮನ್ ಗೃಹ್ಯ ಕ್ಷಿಪ್ರಮಾಗಂತುಮರ್ಹಸಿ ।
ಆಶ್ವಾಸಯ ಹರೀನ್ ಪ್ರಾಣೈರ್ಯೋಜ್ಯ ಗಂಧವಹಾತ್ಮಜ ॥ ೩೪

ಶ್ರುತ್ವಾ ಜಾಂಬವತೋ ವಾಕ್ಯಂ ಹನುಮಾನ್ ಹರಿಪುಂಗವಃ ।
ಆಪೂರ್ಯತ ಬಲೋದ್ಧರ್ಷೈಸ್ತೋಯವೇಗೈರಿವಾರ್ಣವಃ ॥ ೩೫

ಸ ಪರ್ವತತಟಾಗ್ರಸ್ಥಃ ಪೀಡಯನ್ ಪರ್ವತೋತ್ತಮಮ್ ।
ಹನುಮಾನ್ ದೃಶ್ಯತೇ ವೀರೋ ದ್ವಿತೀಯ ಇವ ಪರ್ವತಃ ॥ ೩೬

ಹರಿಪಾದವಿನಿರ್ಭಗ್ನೋ ನಿಷಸಾದ ಸ ಪರ್ವತಃ ।
ನ ಶಶಾಕ ತದಾತ್ಮಾನಂ ಸೋಢುಂ ಭೃಶನಿಪೀಡಿತಃ ॥ ೩೭

ತಸ್ಯ ಪೇತುರ್ನಗಾ ಭೂಮೌ ಹರಿವೇಗಾಚ್ಚ ಜಜ್ವಲುಃ ।
ಶೃಂಗಾಣಿ ಚ ವ್ಯಶೀರ್ಯಂತ ಪೀಡಿತಸ್ಯ ಹನೂಮತಾ ॥ ೩೮

---

ಸಂಧಾನಕರಣಿ—ಎಂಬಿವೇ ಆ ನಾಲ್ಕು ದಿವ್ಯೌಷಧಿಗಳು * (೩೨-೩೩). ವಾಯುತನಯ, ಆ ಎಲ್ಲ ಓಷಧಿಗಳನ್ನೂ ತೆಗೆದುಕೊಂಡು ಬೇಗನೆ ಬಂದುಬಿಡು. ವಾನರೋತ್ತಮ, ವಾನರರನ್ನು ಬದುಕಿಸಿ ಸಂತೈಸು" ಎಂದು ಹೇಳಿದನು. ಜಾಂಬವಂತನ ನುಡಿಯನ್ನಾಲಿಸಿ ವಾನರಶಾರ್ದೂಲನಾದ ಹನುಮಂತನಲ್ಲಿ ಬಲೋತ್ಸಾಹಗಳು ತುಂಬಿತುಳುಕಿದವು! ಜಲಪ್ರವಾಹಗಳಿಂದ ಸಂಪುಷ್ಟವಾದ ಮಹಾಸಾಗರದಂತೆ ಅವನು ಉಬ್ಬಿದನು (೩೪-೩೫). ಮಾರನೆಯ ಕ್ಷಣದಲ್ಲಿ ಆ ವೀರಾಗ್ರಣಿಯು ತ್ರಿಕೂಟಪರ್ವತವನ್ನೇರಿ ನಿಂತಿದ್ದನು! ಮತ್ತೊಂದು ಪರ್ವತವೋ ಎಂಬಂತೆ ಮಹಾಕಾಯನಾದ ಹನುಮಂತನು ತ್ರಿಕೂಟಪರ್ವತವನ್ನೇರಲು, ಅವನ ಪಾದಘಾತದಿಂದ ಆ ಬೆಟ್ಟವು ಕುಸಿಯಿತು. ಅವನ ಭಾರವನ್ನು ತಡೆಯಲಾರದೆ ತತ್ತರಿಸಿತು (೩೬-೩೭). ಆತನು ಗಿರಿಶಿಖರವನ್ನಡರುವ ರಭಸದಲ್ಲಿ ಎಡಬಲಗಳಲ್ಲಿದ್ದ ಮರಗಳು ಆತನ ವೇಗಕ್ಕೆ ಸಿಲುಕಿ ಉರುಳಿ

---

* ಮೃತಸಂಜೀವನಿ = ಸತ್ತವರನ್ನು ಬದುಕಿಸುವ ಮೂಲಿಕೆ. ವಿಶಲ್ಯಕರಣಿ = ಮೈಯಲ್ಲಿ ನೆಟ್ಟ ಆಯುಧವನ್ನು ಕಿತ್ತು ಗುಣಪಡಿಸುವ ಮೂಲಿಕೆ. ಸಾವರ್ಣ್ಯಕರಣಿ = ಗಾಯದ ಗುರುತಿಲ್ಲದಂತೆ ಚರ್ಮಕ್ಕೆ ಮೊದಲಿನ ಬಣ್ಣವನ್ನು ತಂದುಕೊಡತಕ್ಕದ್ದು. ಸಂಧಾನಕರಣಿ = ಕತ್ತರಿಸಲ್ಪಟ್ಟ ಅಂಗಗಳನ್ನೂ ಚರ್ಮವನ್ನೂ ಮೊದಲಿನಂತೆ ಕೂಡಿಸುವ ಮೂಲಿಕೆ.

ತಸ್ಮಿನ್ ಸಂಪೀಡ್ಯಮಾನೇ ತು ಭಗ್ನದ್ರುಮಶಿಲಾತಲೇ ।
ನ ಶೇಕುರ್ವಾನರಾಃ ಸ್ಥಾತುಂ ಘೂರ್ಣಮಾನೇ ನಗೋತ್ತಮೇ ॥

ಸಾ ಘೂರ್ಣಿತಮಹಾದ್ವಾರಾ ಪ್ರಭಗ್ನಗೃಹಗೋಪುರಾ ।
ಲಂಕಾ ತ್ರಾಸಾಕುಲಾ ರಾತ್ರೌ ಪ್ರನೃತ್ತೇವಾಭವತ್ತದಾ ॥ ೪೦

ಪೃಥಿವೀಧರಸಂಕಾಶೋ ನಿಪೀಡ್ಯ ಧರಣೀಧರಮ್ ।
ಪೃಥಿವೀಂ ಕ್ಷೋಭಯಾಮಾಸ ಸಾರ್ಣವಾಂ ಮಾರುತಾತ್ಮಜಃ ॥ ೪೧

ಆರುರೋಹ ತದಾ ತಸ್ಮಾದ್ಧರಿರ್ಮಲಯಪರ್ವತಮ್ ।
ಮೇರುಮಂದರಸಂಕಾಶಂ ನಾನಾಪ್ರಸ್ರವಣಾಕುಲಮ್ ॥ ೪೨

ನಾನಾದ್ರುಮಲತಾಕೀರ್ಣಂ ವಿಕಾಸಿಕಮಲೋತ್ಪಲಮ್ ।
ಸೇವಿತಂ ದೇವಗಂಧರ್ವೈಃ ಷಷ್ಟಿಯೋಜನಮುಚ್ಛ್ರಿತಮ್ ॥ ೪೩

---

ಬಿದ್ದವು. ಒಂದಕ್ಕೊಂದು ತೀಡಿ ಬೆಂಕಿಯನ್ನು ಕಾರಿದವು. ಆತನ ತುಳಿತದ ಬಿರುಸಿಗೆ ಗಿರಿಶೃಂಗಗಳು ಹಿಸಿದುಬಿದ್ದವು (೩೮). ಮರಗಳೂ ಬಂಡೆಗಳೂ ಗರಗರನೆ ಉರುಳುತ್ತಿರಲು, ತ್ರಿಕೂಟಪರ್ವತವು ಅಲ್ಲಾಡಿ ಹೋಯಿತು. ಅಲ್ಲಿದ್ದ ಪ್ರಾಕೃತ ಕಪಿಗಳಿಗೆ * ಎಲ್ಲಿ ನಿಲ್ಲಲೂ ಸಾಧ್ಯವಾಗಲಿಲ್ಲ. ಲಂಕಾನಗರದ ಮಹಾದ್ವಾರಗಳು ಕಂಪಿಸಿದವು. ಗೃಹಗೋಪುರಗಳು ಭಗ್ನವಾದವು. ಲಂಕಾನಿವಾಸಿಗಳು ಭೀತರಾದರು. ಆ ರಾತ್ರಿಯಲ್ಲಿ ಲಂಕೆಯು ಕುಣಿಯುತ್ತಿದೆಯೋ ಎಂಬಂತೆ ಕಾಣಿಸಿತು! (೩೯–೪೦). ಪರ್ವತಾಕಾರನಾದ ಮಾರುತಾತ್ಮಜನು ತ್ರಿಕೂಟಪರ್ವತವನ್ನು ರಭಸದಿಂದ ತುಳಿದು, ಸಮುದ್ರಸಹಿತವಾದ ಭೂಭಾಗವನ್ನು ನಡುಗಿಸಿಬಿಟ್ಟನು. ವಿವಿಧ ಗಿರಿನದಿಗಳಿಂದ ವಿರಾಜಿಸುತ್ತ ಮೇರುಮಂದರಗಳಂತೆ ವಿಶಾಲವಾಗಿದ್ದ ತ್ರಿಕೂಟಪರ್ವತವನ್ನು † ಹನುಮಂತನು ಹತ್ತಿ ನಿಂತನು (೪೧–೪೨). ಬಗೆಬಗೆಯ ಮರಗಳಿಂದಲೂ ಲತಾಪುಂಜಗಳಿಂದಲೂ ತಾವರೆನೈದಿಲೆ

---

* ಮೂಲದಲ್ಲಿ 'ವಾನರಾಃ' ಎಂದಿದೆ. ಗಿರಿಶಿಖರದ ಬಳಿಯಲ್ಲಿಯೇ ಯುದ್ಧಭೂಮಿ ಇದ್ದುದರಿಂದ ಸುಗ್ರೀವನ ಸೈನಿಕರಾದ ಕಪಿಗಳು ಎಂದೂ ಹೇಳಬಹುದು.

† ಮೂಲದಲ್ಲಿ ಈ ಪರ್ವತವನ್ನು ಮಲಯಪರ್ವತವೆಂದು ಕರೆಯಲಾಗಿದೆ. ಈ ವಿಷಯವು ವಾಚಕರ ಅವಗಾಹನೆಯಲ್ಲಿರಲಿ. ೪೩ರಿಂದ ೪೫ರವರೆಗೆ ೪ ಶ್ಲೋಕಗಳು ಅನೇಕ ಪ್ರತಿಗಳಲ್ಲಿ ದೊರೆಯುವುದಿಲ್ಲ.

ವಿದ್ಯಾಧರೈರ್ಮುನಿಗಣೈರಪ್ಸರೋಭಿರ್ನಿಷೇವಿತಮ್ ।
ನಾನಾಮೃಗಗಣಾಕೀರ್ಣಂ ಬಹುಕಂದರಶೋಭಿತಮ್ ॥ ೪೪

ಸರ್ವಾನಾಕುಲಯಂಸ್ತತ್ರ ಯಕ್ಷಗಂಧರ್ವಕಿನ್ನರಾನ್ ।
ಹನುಮಾನ್ ಮೇಘಸಂಕಾಶೋ ವವೃಧೇ ಮಾರುತಾತ್ಮಜಃ ॥ ೪೫

ಪದ್ಭ್ಯಾಂ ತು ಶೈಲಮಾಪೀಡ್ಯ ಬಡಬಾಮುಖವನ್ಮುಖಮ್ ।
ವಿವೃತ್ಯೋಗ್ರಂ ನನಾದೋಚ್ಚೈಸ್ತ್ರಾಸಯನ್ನಿವ ರಾಕ್ಷಸಾನ್ ॥ ೪೬

ತಸ್ಯ ನಾನದ್ಯಮಾನಸ್ಯ ಶ್ರುತ್ವಾ ನಿನದಮದ್ಭುತಮ್ ।
ಲಂಕಾಸ್ಥಾ ರಾಕ್ಷಸಾಃ ಸರ್ವೇ ನ ಶೇಕುಃ ಸ್ಪಂದಿತುಂ ಭಯಾತ್ ॥

ನಮಸ್ಕೃತ್ವಾಥ ರಾಮಾಯ ಮಾರುತಿರ್ಭೀಮವಿಕ್ರಮಃ ।
ರಾಘವಾರ್ಥೇ ಪರಂ ಕರ್ಮ ಸಮೀಹತ ಪರಂತಪಃ ॥ ೪೮

ಸ ಪುಚ್ಛಮುದ್ಯಮ್ಯ ಭುಜಂಗಕಲ್ಪಂ
ವಿನಮ್ಯ ಪೃಷ್ಠಂ ಶ್ರವಣೇ ನಿಕುಂಚ್ಯ ।

---

ಗಳಿಂದಲೂ ಮನೋರಮವಾದ ಆ ಪರ್ವತವು ಅರುವತ್ತು ಯೋಜನಗಳಷ್ಟು ಉನ್ನತವಾಗಿದ್ದಿತು. ದೇವಗಂಧರ್ವರು ಅಲ್ಲಿ ಸಂಚರಿಸುತ್ತಿದ್ದರು (೪೩). ವಿದ್ಯಾಧರರೂ ಮಹರ್ಷಿಗಳೂ ಅಪ್ಸರೆಯರೂ ಅಲ್ಲಿದ್ದರು. ನಾನಾಮೃಗಗಳು ನೆಲೆಸಿದ್ದವು. ಅನೇಕ ಗುಹೆಗಳಿಂದ ಅದು ಶೋಭಿತವಾಗಿತ್ತು. ಹನುಮಂತನು ಮೇಘಮಂಡಲದಂತೆ ವಿಶಾಲಕಾಯನಾಗಿ ಪರ್ವತಾಗ್ರವನ್ನಡರಲು, ಅಲ್ಲಿದ್ದ ಯಕ್ಷಗಂಧರ್ವಕಿನ್ನರರು ಹೆದರಿದರು (೪೪-೪೫). ಅನಂತರ ಆಂಜನೇಯನು ಎರಡು ಕಾಲುಗಳನ್ನು ಊರಿ ಶೈಲಾಗ್ರದಲ್ಲಿ ದೃಢವಾಗಿ ನಿಂತು, ಬಡಬಾಗ್ನಿಯ ಬಾಯಂತೆ ಕಂಗೊಳಿಸುವ ತನ್ನ ಬಾಯನ್ನು ತೆರೆದು, ಘೋರವಾಗಿ ಗರ್ಜಿಸಿದನು! ಲಂಕಾನಗರದಲ್ಲಿದ್ದ ರಾಕ್ಷಸರು ಹೆದರಿ ಕಂಗಾಲಾದರು (೪೬). ಅದ್ಭುತವಾದ ಉಗ್ರ ಗರ್ಜನೆಯನ್ನು ಕೇಳಿ ರಾಕ್ಷಸರು ಭಯದಿಂದ ಮುದುರಿಕೊಂಡರು! ಅಲ್ಲಾಡಲು ಸಹ ಅವರಿಗೆ ಧೈರ್ಯಬರಲಿಲ್ಲ. ಆಮೇಲೆ ಭೀಮಪರಾಕ್ರಮಿಯಾದ ಆಂಜನೇಯನು ಶ್ರೀರಾಮನನ್ನು ಧ್ಯಾನಿಸಿ ನಮಸ್ಕರಿಸಿ, ಶ್ರೀರಾಮನಿಗೋಸ್ಕರ ಅದ್ಭುತವಾದ ಒಂದು ಕಾರ್ಯವನ್ನು ಸಾಧಿಸಲು ಸನ್ನದ್ಧನಾದನು (೪೭-೪೮). ಪ್ರಚಂಡಪರಾಕ್ರಮನಾದ ಆ ವಾನರೋ-

ವಿವೃತ್ಯ ವಕ್ತ್ರಂ ಬಡಬಾಮುಖಾಭ-
ಮಾಪುಪ್ಲುವೇ ವ್ಯೋಮನಿ ಚಂಡವೇಗಃ || ೪೯

ಸ ವೃಕ್ಷಷಂಡಾಂಸ್ತರಸಾ ಜಹಾರ
ಶೈಲಾನ್ ಶಿಲಾಃ ಪ್ರಾಕೃತವಾನರಾಂಶ್ಚ |
ಬಾಹೂರುವೇಗೋದ್ಧತಸಂಪ್ರಣುನ್ನಾ-
ಸ್ತೇ ಕ್ಷೀಣವೇಗಾಃ ಸಲಿಲೇ ನಿಪೇತುಃ || ೫೦

ಸ ತೌ ಪ್ರಸಾರ್ಯೋರಗಭೋಗಕಲ್ಪೌ
ಭುಜೌ ಭುಜಂಗಾರಿನಿಕಾಶವೀರ್ಯಃ |
ಜಗಾಮ ಮೇರುಂ ನಗರಾಜಮಗ್ರ್ಯಂ
ದಿಶಃ ಪ್ರಕರ್ಷನ್ನಿವ ವಾಯುಸೂನುಃ || ೫೧

ಸ ಸಾಗರಂ ಘೂರ್ಣಿತವೀಚಿಮಾಲಂ
ತದಾ ಭೃಶಂ ಭ್ರಾಮಿತಸರ್ವಸತ್ತ್ವಮ್ |
ಸಮೀಕ್ಷಮಾಣಃ ಸಹಸಾ ಜಗಾಮ
ಚಕ್ರಂ ಯಥಾ ವಿಷ್ಣುಕರಾಗ್ರಮುಕ್ತಮ್ || ೫೨

---

ತ್ತಮನು ಮಹಾಸರ್ಪದಂತಿದ್ದ ಬಾಲವನ್ನು ನಿಮಿರಿಸಿ, ನಡುವನ್ನು ಬಗ್ಗಿಸಿ, ಕಿವಿಗಳನ್ನು ಕುಗ್ಗಿಸಿ, ಬಡಬಾಮುಖದಂತಿದ್ದ ಬಾಯನ್ನು ತೆರೆದು ಅಂತರಿಕ್ಷಕ್ಕೆ ನೆಗೆದನು (೪೯). ಅವನ ತೋಳುತೊಡೆಗಳ ವೇಗದ ಬಿರುಸಿಗೆ ಸಿಲುಕಿ, ಆ ಪರ್ವತದಲ್ಲಿದ್ದ ಮರಗಳೂ ಶೈಲಶಿಲೆಗಳೂ ಕಾಡುಕಪಿಗಳೂ ಆಕಾಶದಲ್ಲಿ ತೂರಾಡಿದವು. ಅವೆಲ್ಲವೂ ಹನುಮಂತನೊಡನೆ ಸ್ವಲ್ಪದೂರ ಸೆಳೆಯಲ್ಪಟ್ಟು ವೇಗವಡಗಲು ಸಮುದ್ರಜಲದಲ್ಲಿ ಬಿದ್ದವು (೫೦). ವೀರ್ಯದಲ್ಲಿ ವೈನತೇಯನಿಗೆ ಸಮಾನನಾದ ವಾಯುತನಯನು ಭುಜಗಭೋಗಗಳಂತಿದ್ದ ಭುಜಗಳನ್ನು ಆಕಾಶದಲ್ಲಿ ನೀಡಿ, ಸಮಸ್ತದಿಕ್ಕುಗಳನ್ನೂ ಸೆಳೆದೊಯ್ಯುವನೋ ಎಂಬಂತೆ ಅದ್ಭುತವೇಗದಿಂದ ಮೇರುಗಿರಿಸದೃಶನೂ ನಗರಾಜನೂ ಆದ ಹಿಮಾಲಯನ ಕಡೆಗೆ ಧಾವಿಸಿದನು (೫೧). ಕೆಳಗೆ ಮಹಾಸಾಗರದ ತರಂಗಮಾಲೆಗಳು ಎದ್ದೆದ್ದು ಉರುಳಿಬೀಳುವುದನ್ನೂ ಜಲಚರಗಳು ಭಯದಿಂದ ತತ್ತರಿಸುವುದನ್ನೂ ನೋಡುತ್ತ, ಆ ವಾಯು

ಸ ಪರ್ವತಾನ್ ವೃಕ್ಷಗಣಾನ್ ಸರಾಂಸಿ
ನದೀಸ್ತಟಾಕಾನಿ ಪುರೋತ್ತಮಾನಿ ।
ಸ್ಫೀತಾನ್ ಜನಾಂತಾನಪಿ ಸಂಪ್ರವೀಕ್ಷ್ಯ
ಜಗಾಮ ವೇಗಾತ್ ಪಿತೃತುಲ್ಯವೇಗಃ ॥ ೫೩

ಆದಿತ್ಯಪಥಮಾಶ್ರಿತ್ಯ ಜಗಾಮ ಸ ಗತಕ್ಲಮಃ ।
ಹನುಮಾಂಸ್ತ್ವರಿತೋ ವೀರಃ ಪಿತೃತುಲ್ಯಪರಾಕ್ರಮಃ ॥ ೫೪

ಜವೇನ ಮಹತಾ ಯುಕ್ತೋ ಮಾರುತಿರ್ಮಾರುತೋ ಯಥಾ ।
ಜಗಾಮ ಹರಿಶಾರ್ದೂಲೋ ದಿಶಃ ಶಬ್ದೇನ ಪೂರಯನ್ ॥ ೫೫

ಸ್ಮರನ್ ಜಾಂಬವತೋ ವಾಕ್ಯಂ ಮಾರುತಿರ್ವಾತರಂಹಸಾ ।
ದದರ್ಶ ಸಹಸಾ ಚಾಪಿ ಹಿಮವಂತಂ ಮಹಾಕಪಿಃ ॥ ೫೬

ನಾನಾಪ್ರಸ್ರವಣೋಪೇತಂ ಬಹುಕಂದರನಿರ್ಝರಮ್ ।
ಶ್ವೇತಾಭ್ರಚಯಸಂಕಾಶೈಃ ಶಿಖರೈಶ್ಚಾರುದರ್ಶನೈಃ ॥ ೫೭
ಶೋಭಿತಂ ವಿವಿಧೈರ್ವೃಕ್ಷೈರಗಮತ್ ಪರ್ವತೋತ್ತಮಮ್ ॥

---

ಪುತ್ರನು ವಿಷ್ಣುಕರಚ್ಯುತವಾದ ಸುದರ್ಶನಚಕ್ರದಂತೆ ದ್ರುತಗತಿಯಿಂದ ಗಗನತಳದಲ್ಲಿ ಸಾಗಿದನು (೫೨). ತನ್ನ ತಂದೆಯಾದ ವಾಯುದೇವನಂತೆ ವೇಗೋದ್ಧತನಾದ ಹನುಮಂತನು ವಿವಿಧ ಪರ್ವತಗಳನ್ನೂ ವೃಕ್ಷಪಂಕ್ತಿಗಳನ್ನೂ ಸರೋವರನದೀತಟಾಕಗಳನ್ನೂ ನಗರಗಳನ್ನೂ ಸಮೃದ್ಧವಾದ ನಾನಾ ರಾಜ್ಯಗಳನ್ನೂ ವೀಕ್ಷಿಸುತ್ತ ಉತ್ತರದಿಕ್ಕಿಗೆ ಹೋದನು (೫೩). ಆ ವೀರಾಗ್ರೇಸರನು ಸೂರ್ಯನು ಸಂಚರಿಸುವ ಆಕಾಶಮಾರ್ಗವನ್ನಡರಿ ನಿರಾಯಾಸವಾಗಿ ತ್ವರೆಯಿಂದ ಹಾರಿಹೋದನು. ಆ ವಾನರಶಾರ್ದೂಲನು ದಿಗ್ದಿಗಂತಗಳು ಮೊಳಗುವಂತೆ ಸಿಂಹನಾದಗೈಯುತ್ತ ಬಿರುಗಾಳಿಯಂತೆ ಬಹುವೇಗದಿಂದ ಮಾರ್ಗವನ್ನತಿಕ್ರಮಿಸಿದನು (೫೪-೫೫). ಹೀಗೆ ಆ ವಾನರಪುಂಗವನು ಜಾಂಬವಂತನ ನುಡಿಯನ್ನು ಸ್ಮರಣೆಯಲ್ಲಿಟ್ಟುಕೊಂಡು ವಾಯುವೇಗದಿಂದ ಹಾರುತ್ತ ಹೋಗಿ ಹಿಮಾಲಯಪರ್ವತವನ್ನು ಕಂಡನು. ಅಲ್ಲಿ ಅನೇಕ ಗಿರಿನದಿಗಳು ಹರಿಯುತ್ತಿದ್ದವು. ಗುಹೆಗಳೂ ಚಿಲುಮೆಗಳೂ ಬಹುಸಂಖ್ಯೆಯಲ್ಲಿದ್ದವು. ಬಿಳಿಯ ಮೋಡಗಳನ್ನು ಪೇರಿಸಿದಂತೆ ಹಿಮಾಲಯಶಿಖರಗಳು ಮನೋಜ್ಞವಾಗಿ ಕಂಗೊಳಿಸುತ್ತಿದ್ದವು.

ಸ ತಂ ಸಮಾಸಾದ್ಯ ಮಹಾನಗೇಂದ್ರ-
ಮತಿಪ್ರವೃದ್ಧೋತ್ತಮಹೇಮಶೃಂಗಮ್ ।
ದದರ್ಶ ಪುಣ್ಯಾನಿ ಮಹಾಶ್ರಮಾಣಿ
ಸುರರ್ಷಿಸಂಘೋತ್ತಮಸೇವಿತಾನಿ ॥ ೫೮

ಸ ಬ್ರಹ್ಮಕೋಶಂ ರಜತಾಲಯಂ ಚ
ಶಕ್ರಾಲಯಂ ರುದ್ರಶರಪ್ರಮೋಕ್ಷಮ್ ।
ಹಯಾನನಂ ಬ್ರಹ್ಮಶಿರಶ್ಚ ದೀಪ್ತಂ
ದದರ್ಶ ವೈವಸ್ವತಕಿಂಕರಾಂಶ್ಚ ॥ ೫೯

ವಜ್ರಾಲಯಂ ವೈಶ್ರವಣಾಲಯಂ ಚ
ಸೂರ್ಯಪ್ರಭಂ ಸೂರ್ಯನಿಬಂಧನಂ ಚ ।
ಬ್ರಹ್ಮಾಸನಂ ಶಂಕರಕಾರ್ಮುಕಂ ಚ
ದದರ್ಶ ನಾಭಿಂ ಚ ವಸುಂಧರಾಯಾಃ ॥ ೬೦

ಕೈಲಾಸಮಗ್ರ್ಯಂ ಹಿಮವಚ್ಛಿಲಾಂ ಚ
ತಥರ್ಷಭಂ ಕಾಂಚನಶೈಲಮಗ್ರ್ಯಮ್ ।

---

ನಾನಾಜಾತಿಯ ವೃಕ್ಷಗಳು ಶೋಭಿಸುತ್ತಿದ್ದವು (೫೬-೫೭). ಅತ್ಯುನ್ನತವಾದ ಸುವರ್ಣಶೃಂಗದಿಂದ ವಿರಾಜಿಸುತ್ತಿದ್ದ ಆ ಮಹಾಶೈಲವನ್ನು ಸೇರಿ, ದೇವರ್ಷಿಗಳಿಂದ ಸೇವಿತವಾದ ಪುಣ್ಯಾಶ್ರಮಗಳನ್ನು ಹನುಮಂತನು ಕಂಡನು (೫೮). ಬ್ರಹ್ಮಕೋಶವೆಂಬ ಹಿರಣ್ಯಗರ್ಭಸ್ಥಾನ, ರಜತಾಲಯವೆಂಬ ರಜತನಾಭಿಸ್ಥಾನ, ಇಂದ್ರನ ಆಶ್ರಮಸ್ಥಾನ, (ತ್ರಿಪುರಸಂಹಾರಾರ್ಥವಾಗಿ ರುದ್ರನು ಶರಗಳನ್ನು ಯಾವ ಸ್ಥಳದಲ್ಲಿ ನಿಂತು ಪ್ರಯೋಗಿಸಿದನೋ) ಆ ರುದ್ರಶರಪ್ರಮೋಕ್ಷಸ್ಥಾನ, ಹಯಗ್ರೀವಸ್ಥಾನ, ಬ್ರಹ್ಮಕಪಾಲಸ್ಥಾನಗಳನ್ನೂ ಸೇವಾರ್ಥವಾಗಿ ಬಂದಿದ್ದ ಯಮಕಿಂಕರರನ್ನೂ ಹನುಮಂತನು ವೀಕ್ಷಿಸಿದನು (೫೯). ಬ್ರಹ್ಮನು ಇಂದ್ರನಿಗೆ ವಜ್ರಾಯುಧವನ್ನು ಕೊಟ್ಟ ಸ್ಥಾನ, ಕುಬೇರಸ್ಥಾನ, ಸೂರ್ಯನಂತೆ ಬೆಳಗುತ್ತಿದ್ದ ಸೂರ್ಯಸ್ಥಾನ, ಚತುರ್ಮುಖ ಬ್ರಹ್ಮನ ಸ್ಥಾನ, ಪಿನಾಕವೆಂಬ ಶಿವಧನುಸ್ಸಿನ ಸ್ಥಾನ ಮತ್ತು ಭೂನಾಭಿಯೆಂಬ ಪ್ರಾಜಾಪತ್ಯಸ್ಥಾನಗಳನ್ನು ಹನುಮಂತನು ಆಲೋಕಿಸಿದನು (೬೦). ಅಲ್ಲದೆ ದುರ್ಧರ್ಷವಾದ ಕೈಲಾಸ, ಈಶ್ವರನ ತಪಃಪೀಠ

ಸಂದೀಪ್ತಸರ್ವೌಷಧಿಸಂಪ್ರದೀಪ್ತಂ
ದದರ್ಶ ಸರ್ವೌಷಧಿಪರ್ವತೇಂದ್ರಮ್ ॥ ೬೧

ಸ ತಂ ಸಮೀಕ್ಷ್ಯಾನಲರಶ್ಮಿದೀಪ್ತಂ
ವಿಸಿಷ್ಮಿಯೇ ವಾಸವದೂತಸೂನುಃ ।
ಆವೃತ್ಯ ತಂ ಚೌಷಧಿಪರ್ವತೇಂದ್ರಂ
ತತ್ರೌಷಧೀನಾಂ ವಿಚಯಂ ಚಕಾರ ॥ ೬೨

ಸ ಯೋಜನಸಹಸ್ರಾಣಿ ಸಮತೀತ್ಯ ಮಹಾಕಪಿಃ ।
ದಿವ್ಯೌಷಧಿಧರಂ ಶೈಲಂ ವ್ಯಚರನ್ಮಾರುತಾತ್ಮಜಃ ॥ ೬೩

ಮಹೌಷಧ್ಯಸ್ತತಃ ಸರ್ವಾಸ್ತಸ್ಮಿನ್ ಪರ್ವತಸತ್ತಮೇ ।
ವಿಜ್ಞಾಯಾರ್ಥಿನಮಾಯಾಂತಂ ತತೋ ಜಗ್ಮುರದರ್ಶನಮ್ ॥ ೬೪

ಸ ತಾ ಮಹಾತ್ಮಾ ಹನುಮಾನಪಶ್ಯಂ-
ಶ್ಚುಕೋಪ ಕೋಪಾಚ್ಚ ಭೃಶಂ ನನಾದ ।

---

ವಾದ ಶಿಲಾತಲ—ಇವುಗಳನ್ನು ನೋಡುತ್ತ ಕಾಂಚನಶೈಲವೆನಿಸಿದ ಋಷಭಾಚಲವನ್ನು ನೋಡಿದನು. ಮಧ್ಯದಲ್ಲಿ ಸಮಸ್ತದಿವ್ಯೌಷಧಿಗಳಿಗೆ ಆಕರವಾಗಿ ಓಷಧಿಗಳ ಪ್ರಭೆಯಿಂದ ಪ್ರಕಾಶಿಸುತ್ತಿದ್ದ ಓಷಧಿಪರ್ವತವನ್ನು ನೋಡಿದನು (೬೧). ಅಗ್ನಿಜ್ವಾಲೆಯಿಂದ ಜಗಜಗಿಸುವುದೋ ಎಂಬಂತೆ ಬೆಳಗುತ್ತಿದ್ದ ಆ ಪರ್ವತಶಿಖರವನ್ನು ಕಂಡು ವಾಯುಪುತ್ರನು * ವಿಸ್ಮಿತನಾಗಿ ಅದರಮೇಲಿಳಿದು, ಜಾಂಬವಂತನು ಹೇಳಿದ್ದ ಮೂಲಿಕೆಗಳನ್ನು ಹುಡುಕಲಾರಂಭಿಸಿದನು (೬೨) ಹೀಗೆ ಒಂದು ಸಾವಿರ ಯೋಜನಗಳ ದೂರವನ್ನು ಲಂಘಿಸಿಬಂದ ಆ ಮಹಾವಾನರನು ಋಷಭಪರ್ವತದಲ್ಲಿ ದಿವ್ಯೌಷಧಿಗಳನ್ನು ಅರಸತೊಡಗಿದನು. ಅಷ್ಟರಲ್ಲಿ ಆ ದಿವ್ಯಮೂಲಿಕೆಗಳು, ತಮ್ಮನ್ನರಸುತ್ತ ಹನುಮಂತನು ಅರ್ಥಿಯಾಗಿ ಬಂದಿರುವನೆಂಬುದನ್ನು ತಿಳಿದು ತಟ್ಟನೆ ಅದೃಶ್ಯವಾದವು! (೬೩-೬೪). ಎಷ್ಟು ಹುಡುಕಿದರೂ

---

* ಮೂಲದಲ್ಲಿ 'ವಾಸವದೂತಸೂನು' ಎಂದಿದೆ. ವಾಸವದೂತ = ಇಂದ್ರನ ದೂತನಾದ ವಾಯು. ಇಂದ್ರನ ಆದೇಶದಂತೆ ಮೇಘಗಳನ್ನು ತಳ್ಳುವುದರಿಂದ ವಾಯು ಇಂದ್ರದೂತ. ಶ್ರೀರಾಮನ ಪಟ್ಟಾಭಿಷೇಕ ಸಮಯದಲ್ಲಿ ಇಂದ್ರನು ಕಳಿಸಿದ ಹಾರವನ್ನು ವಾಯು ತಂದುಕೊಟ್ಟನೆಂದು ಮುಂದೆ ವರ್ಣನೆ ಇದೆ.

ಅನ್ವೃಷ್ಯಮಾಣೋಽಗ್ನಿನಿಕಾಶಚಕ್ಷು-
ರ್ಮಹೀಧರೇಂದ್ರಂ ತಮುವಾಚ ವಾಕ್ಯಮ್ ॥ ೭೫

ಕಿಮೇತದೇವಂ ಸುವಿನಿಶ್ಚಿತಂ ತೇ
ಯದ್ರಾಘವೇ ನಾಸಿ ಕೃತಾನುಕಂಪಃ ।
ಪಶ್ಯಾದ್ಯ ಮದ್ಬಾಹುಬಲಾಭಿಭೂತೋ
ವಿಕೀರ್ಣಮಾತ್ಮಾನಮಥೋ ನಗೇಂದ್ರ ॥ ೭೬

ಸ ತಸ್ಯ ಶೃಂಗಂ ಸನಗಂ ಸನಾಗಂ
ಸಕಾಂಚನಂ ಧಾತುಸಹಸ್ರಜುಷ್ಟಮ್ ।
ವಿಕೀರ್ಣಕೂಟಜ್ವಲಿತಾಗ್ರಸಾನುಂ
ಪ್ರಗೃಹ್ಯ ವೇಗಾತ್ ಸಹಸೋನ್ಮಮಾಥ ॥ ೭೭

ಸ ತಂ ಸಮುತ್ಪಾಟ್ಯ ಖಮುತ್ಪಪಾತ
ವಿತ್ರಾಸ್ಯ ಲೋಕಾನ್ ಸಸುರಾಸುರೇಂದ್ರಾನ್ ।
ಸಂಸ್ತೂಯಮಾನಃ ಖಚರೈರನೇಕೈ-
ರ್ಜಗಾಮ ವೇಗಾದ್ಗರುಡೋಗ್ರವೇಗಃ ॥ ೭೮

---

ಮೂಲಿಕೆಗಳು ಸಿಗದಿರಲು, ಹನುಮಂತನು ಕುಪಿತನಾದನು! ಕೋಪದಿಂದ ಆ ಧೀರನು ಗಟ್ಟಿಯಾಗಿ ಗರ್ಜಿಸಿದನು! ಅವನ ಕಣ್ಣುಗಳು ಬೆಂಕಿಯ ಕೆಂಡವಾದವು. ಆ ಪರ್ವತದ ಕುಚೇಷ್ಟೆಯನ್ನು ಸಹಿಸಲಾರದೆ ಆಂಜನೇಯನು "ಎಲೈ ನಗೇಂದ್ರ, ಹೀಗೇಕೆ ನಡೆದುಕೊಳ್ಳುವೆ? ಶ್ರೀರಾಮನಲ್ಲಿ ನಿನಗೆ ಮರುಕವಿಲ್ಲವೋ ಹೇಗೆ? ಇದೇ ನಿನ್ನ ನಿಶ್ಚಯವಾದರೆ, ಇತ್ತ ನೋಡು, ನನ್ನ ಭುಜಬಲದಿಂದ ನಿನ್ನನ್ನು ಕುಟ್ಟಿ ಪುಡಿಪುಡಿ ಮಾಡುವೆನು!" ಎಂದು ಆರ್ಭಟಿಸಿದನು (೭೫-೭೬). ಅನಂತರ ವೃಕ್ಷಗಳಿಂದಲೂ ಗಜಗಳಿಂದಲೂ ಚಿನ್ನದ ಗಣಿಗಳಿಂದಲೂ ಸಾವಿರಾರು ಗೈರಿಕಧಾತುಗಳಿಂದಲೂ ಮಂಡಿತವಾದ ಓಷಧಿಪರ್ವತದ ಶಿಖರವನ್ನು ಬಲವಾಗಿ ಅಲ್ಲಾಡಿಸಿದನು. ಅಲ್ಲಾಡಿಸಿದ ರಭಸಕ್ಕೆ ಶಿಖರದಲ್ಲಿದ್ದ ಬಂಡೆಗಳು ಒಂದಕ್ಕೊಂದು ಸಂಘರ್ಷಿಸಿ ಕಿಡಿಗೆದರಿದವು (೭೭). ಮರುಕ್ಷಣದಲ್ಲಿ ಹನುಮಂತನು ಓಷಧಿಪರ್ವತದ ಶಿಖರವನ್ನು ಕಿತ್ತೆತ್ತಿ ಹೊತ್ತು, ಗರುಡ

ಸ ಭಾಸ್ಕರಾಧ್ವಾನಮನುಪ್ರಪನ್ನ
ಸ್ತಂ ಭಾಸ್ಕರಾಭಂ ಶಿಖರಂ ಪ್ರಗೃಹ್ಯ ।
ಬಭೌ ತದಾ ಭಾಸ್ಕರಸಂನಿಕಾಶೋ
ರವೇಃ ಸಮೀಪೇ ಪ್ರತಿಭಾಸ್ಕರಾಭಃ ॥ ೬೯

ಸ ತೇನ ಶೈಲೇನ ಭೃಶಂ ರರಾಜ
ಶೈಲೋಪಮೋ ಗಂಧವಹಾತ್ಮಜಸ್ತು ।
ಸಹಸ್ರಧಾರೇಣ ಸಪಾವಕೇನ
ಚಕ್ರೇಣ ಖೇ ವಿಷ್ಣುರಿವಾರ್ಪಿತೇನ ॥ ೭೦

ತಂ ವಾನರಾಃ ಪ್ರೇಕ್ಷ್ಯ ವಿನೇದುರುಚ್ಚೈಃ
ಸ ತಾನಪಿ ಪ್ರೇಕ್ಷ್ಯ ಮುದಾ ನನಾದ ।
ತೇಷಾಂ ಸಮುದ್ಘುಷ್ಟರವಂ ನಿಶಮ್ಯ
ಲಂಕಾಲಯಾ ಭೀಮತರಂ ವಿನೇದುಃ ॥ ೭೧

---

ನಂತೆ ಉಗ್ರವೇಗದಿಂದ ಆಕಾಶಕ್ಕೆ ಹಾರಿದನು! ದೇವದಾನವರು ತಲ್ಲಣಿಸಿದರು. ಸಿದ್ಧಕಿನ್ನರಾದಿಗಳು ಸ್ತುತಿಸಿದರು (೬೮). ರವಿಯಂತೆ ರಾಜಿಸುತ್ತಿದ್ದ ಹನುಮಂತನು ರವಿಯಂತೆ ಜ್ವಲಿಸುತ್ತಿದ್ದ ಗಿರಿಶೃಂಗವನ್ನು ಹೊತ್ತು ರವಿಮಾರ್ಗವೆನಿಸಿದ ಅಂತರಿಕ್ಷದಲ್ಲಿ ಸಾಗುತ್ತ (ರಾತ್ರಿಯಲ್ಲುದಿಸಿದ) ಮತ್ತೊಬ್ಬ ರವಿಯೋ ಎಂಬಂತೆ ರಾರಾಜಿಸಿದನು! (೬೯). ಪರ್ವತಾಕಾರನಾದ ವಾಯುಪುತ್ರನು ಜಗಜಗಿಸುತ್ತಿದ್ದ ಪರ್ವತಶೃಂಗವನ್ನು ಕೈಯಲ್ಲಿ ಹಿಡಿದು ಸಾಗುತ್ತಿರುವಾಗ, ಜ್ವಾಲೆಯನ್ನುಗುಳುವ ಸಹಸ್ರಧಾರೆಯುಳ್ಳ ಸುದರ್ಶನಚಕ್ರವನ್ನು ಹಿಡಿದ ಮಹಾವಿಷ್ಣುವಿನಂತೆ ಕಂಗೊಳಿಸಿದನು (೭೦). (ಅವನು ಲಂಕಾಸಮೀಪದ ರಣರಂಗಕ್ಕೆ ಧಾವಿಸಿ ಬರುತ್ತಿರಲು, ಅಲ್ಲಿ ಹತರಾಗಿದ್ದ ವಾನರರಮೇಲೆ ಮೃತಸಂಜೀವನಿಯ ಗಾಳಿ ಬೀಸಲು) ಆ ವಾನರರು ಜೀವಂತರಾಗಿ ಮೇಲೆದ್ದು ಹನುಮಂತನನ್ನು ನೋಡಿ ಹರ್ಷದಿಂದ ಗರ್ಜಿಸತೊಡಗಿದರು! ಹನುಮಂತನು ಅವರು ಜೀವಂತರಾದುದನ್ನು ಕಂಡು ಆನಂದದಿಂದ ಗರ್ಜಿಸಿದನು! ಇತ್ತ ಲಂಕೆಯಲ್ಲಿದ್ದ ರಾಕ್ಷಸರು ಈ ಗರ್ಜನೆಗಳನ್ನು ಕೇಳಿ ದಿಗ್ಭ್ರಾಂತರಾಗಿ ಅರಚಿಕೊಂಡರು! (೭೧).

ತತೋ ಮಹಾತ್ಮಾ ನಿಪಪಾತ ತಸ್ಮಿನ್
ಶೈಲೋತ್ತಮೇ ವಾನರಸೈನ್ಯಮಧ್ಯೇ ।
ಹರ್ಯುತ್ತಮೇಭ್ಯಃ ಶಿರಸಾಭಿವಾದ್ಯ
ವಿಭೀಷಣಂ ತತ್ರ ಸ ಸಸ್ವಜೇ ಚ ॥ ೭೨

ತಾವಪ್ಯುಭೌ ಮಾನುಷರಾಜಪುತ್ರೌ
ತಂ ಗಂಧಮಾಘ್ರಾಯ ಮಹೌಷಧೀನಾಮ್ ।
ಬಭೂವತುಸ್ತತ್ರ ತದಾ ವಿಶಲ್ಯಾ-
ವುತ್ತಸ್ಥುರನ್ಯೇ ಚ ಹರಿಪ್ರವೀರಾಃ ॥ ೭೩

ಸರ್ವೇ ವಿಶಲ್ಯಾ ವಿರುಜಃ ಕ್ಷಣೇನ
ಹರಿಪ್ರವೀರಾ ನಿಹತಾಶ್ಚ ಯೇ ಸ್ಯುಃ ।
ಗಂಧೇನ ತಾಸಾಂ ಪ್ರವರೌಷಧೀನಾಂ
ಸುಪ್ತಾ ನಿಶಾಂತೇಷ್ವಿವ ಸಂಪ್ರಬುದ್ಧಾಃ ॥ ೭೪

ಯದಾಪ್ರಭೃತಿ ಲಂಕಾಯಾಂ ಯುಧ್ಯಂತೇ ಕಪಿರಾಕ್ಷಸಾಃ ।
ತದಾಪ್ರಭೃತಿ ಮಾನಾರ್ಥಮಾಜ್ಞಯಾ ರಾವಣಸ್ಯ ಚ ॥ ೭೫

---

ಅದ್ಭುತಸಾಹಸಿಯಾದ ಹನುಮಂತನು ತ್ರಿಕೂಟಪರ್ವತದಲ್ಲಿದ್ದ ವಾನರ ಸೈನ್ಯದ ಮಧ್ಯದಲ್ಲಿಳಿದು ಹಿರಿಯರಾದ ವಾನರರಿಗೆ ವಂದಿಸಿ, ವಿಭೀಷಣ ನನ್ನು ಆಲಿಂಗಿಸಿಕೊಂಡನು. ರಾಜಪುತ್ರರಾದ ಶ್ರೀರಾಮಲಕ್ಷ್ಮಣರು ಮಹೌಷಧಿಗಳ ಗಂಧವನ್ನಾಘ್ರಾಣಿಸಿದೊಡನೆ, ಅವರಿಗೊದಗಿದ ಬಾಧೆ ಗಳೆಲ್ಲವೂ ನಿವಾರಿಸಲ್ಪಟ್ಟವು. ಅವರು ಮೊದಲಿನಂತೆ ಸುಖದಿಂದ ಎದ್ದರು. ಹಾಗೆಯೇ ಬಾಧೆಗೊಳಗಾಗಿದ್ದ ಇತರ ವಾನರಯೂಥಪರೂ ಎದ್ದರು (೭೨-೭೩). ದೇಹದಲ್ಲಿ ನಾಟಿದ್ದ ಆಯುಧಗಳು ಹೊರಬಂದವು. ಗಾಯಗಳು ಮಾದವು. ಸಮಸ್ತರ ಯಾತನೆಯೂ ಪರಿಹೃತವಾಯಿತು. ಮೃತರಾಗಿದ್ದ ಸಕಲ ಸೈನಿಕರೂ ದಿವ್ಯೌಷಧಿಗಳ ಗಂಧದ ಮಹಿಮೆ ಯಿಂದಲೇ ಜೀವಂತರಾಗಿ, ರಾತ್ರಿಯಲ್ಲಿ ಮಲಗಿದವರು ಬೆಳಗಾದಮೇಲೆ ಹಾಸಿಗೆಯಿಂದೇಳುವಂತೆ ಮೇಲೆದ್ದು ಸೌಖ್ಯದಲ್ಲಿದ್ದರು (೭೪). (ಹತರಾದ ರಾಕ್ಷಸರು ಮಾತ್ರ ಬದುಕಲಿಲ್ಲ. ಏಕೆಂದರೆ,) ಕಪಿರಾಕ್ಷಸರ ಯುದ್ಧವು

ಯೇ ಹನ್ಯಂತೇ ರಣೇ ತತ್ರ ರಾಕ್ಷಸಾಃ ಕಪಿಕುಂಜರೈಃ ।
ಹತಾ ಹತಾಸ್ತು ಕ್ಷಿಪ್ಯಂತೇ ಸರ್ವ ಏವ ತು ಸಾಗರೇ ॥ ೭೬

ತತೋ ಹರಿರ್ಗಂಧವಹಾತ್ಮಜಸ್ತು
ತಮೋಷಧೀಶೈಲಮುದಗ್ರವೀರ್ಯಃ ।
ನಿನಾಯ ವೇಗಾದ್ಧಿಮವಂತಮೇವ
ಪುನಶ್ಚ ರಾಮೇಣ ಸಮಾಜಗಾಮ ॥ ೭೭

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುಃಸಪ್ತತಿತಮಃ ಸರ್ಗಃ



ಆರಂಭವಾದ ಕಾಲದಿಂದಲೂ ರಣರಂಗದಲ್ಲಿ ಹತರಾದ ರಾಕ್ಷಸರೆಲ್ಲರನ್ನೂ ರಾಕ್ಷಸಭಟರು ಸಮುದ್ರದಲ್ಲಿ ಎಸೆದುಬಿಡುತ್ತಿದ್ದರು. ಹತರಾದವರ ಸಂಖ್ಯೆಯು ಶತ್ರುಗಳಿಗೆ ತಿಳಿಯಬಾರದೆಂಬ ಉದ್ದೇಶದಿಂದ ರಾವಣನೇ ಆ ರೀತಿಯಲ್ಲಿ ಆಜ್ಞೆಮಾಡಿದ್ದನು (೭೫-೭೬). ಹೀಗೆ ಕಪಿಯೋಧರೆಲ್ಲರೂ ಬದುಕಿದಮೇಲೆ ಅಸದೃಶಪರಾಕ್ರಮಿಯಾದ ವಾಯುತನಯನು ಓಷಧಿ ಪರ್ವತವನ್ನು ಮತ್ತೆ ಹಿಮವತ್ಪರ್ವತಕ್ಕೆ ಸಾಗಿಸಿ ಹಿಂದಿರುಗಿ ಬಂದು ಶ್ರೀರಾಮನೊಡನೆ ಸೇರಿಕೊಂಡನು (೭೭).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತುನಾಲ್ಕನೆಯ ಸರ್ಗ



## ಪಂಚಸಪ್ತತಿತಮಃ ಸರ್ಗಃ

### ಲಂಕಾದಾಹಃ

ತತೋಽಬ್ರವೀನ್ಮಹಾತೇಜಾಃ ಸುಗ್ರೀವೋ ವಾನರಾಧಿಪಃ ।
ಅರ್ಥ್ಯಂ ವಿಜ್ಞಾಪಯಂಶ್ಚಾಪಿ ಹನುಮಂತಮಿದಂ ವಚಃ ॥ ೧

ಯತೋ ಹತಃ ಕುಂಭಕರ್ಣಃ ಕುಮಾರಾಶ್ಚ ನಿಷೂದಿತಾಃ ।
ನೇದಾನೀಮುಪನಿರ್ಹಾರಂ ರಾವಣೋ ದಾತುಮರ್ಹತಿ ॥ ೨

ಯೇ ಯೇ ಮಹಾಬಲಾಃ ಸಂತಿ ಲಘುವಶ್ಚ ಪ್ಲವಂಗಮಾಃ ।
ಲಂಕಾಮಭ್ಯುತ್ಪತಂತ್ವಾಶು ಗೃಹ್ಯೋಲ್ಕಾಃ ಪ್ಲವಗರ್ಷಭಾಃ ॥ ೩

ತತೋಽಸ್ತಂ ಗತ ಆದಿತ್ಯೇ ರೌದ್ರೇ ತಸ್ಮಿನ್ನಿಶಾಮುಖೇ ।
ಲಂಕಾಮಭಿಮುಖಾಃ ಸೋಲ್ಕಾ ಜಗ್ಮುಸ್ತೇ ಪ್ಲವಗರ್ಷಭಾಃ ॥ ೪

### ಸರ್ಗ ೭೫

ಕಪಿಯೋಧರು ಲಂಕೆಗೆ ಬೆಂಕಿ ಹಚ್ಚುವುದು. ರಾವಣನು ಕುಂಭನಿಕುಂಭಾದಿ ಯೋಧರನ್ನು ಯುದ್ಧಕ್ಕೆ ಕಳಿಸುವುದು. ಘೋರ ಸಂಗ್ರಾಮ.

ಅನಂತರ ವಾನರೇಂದ್ರನಾದ ಸುಗ್ರೀವನು ಮುಂದಿನ ಕರ್ತವ್ಯವನ್ನು ತಿಳಿಸುತ್ತ ಹನುಮಂತನನ್ನು ಕುರಿತು "ವಾನರೋತ್ತಮ, ಈಗ ಕುಂಭಕರ್ಣನೂ ರಾವಣಪುತ್ರರೂ ಹತರಾಗಿರುವುದರಿಂದ, ರಾವಣನು ತಾನಾಗಿ ನಮ್ಮಮೇಲೆ ಆಕ್ರಮಣವನ್ನೆಸಗಲು ಬರಲಾರ (೧-೨). ಆದ್ದರಿಂದ ನಮ್ಮಲ್ಲಿ ಮಹಾಬಲರೂ ವೇಗಶಾಲಿಗಳೂ ಆದ ಕಪಿಯೋಧರು ಪಂಜುಗಳನ್ನು ಹಿಡಿದು ಲಂಕೆಯ ಪ್ರಾಕಾರವನ್ನು ಹಾರಿ ಒಳಗೆ ನುಗ್ಗಲಿ!" ಎಂದು ತಿಳಿಸಿದನು (೩). ಸೂರ್ಯನು ಮುಳುಗಲು ಭೀಷಣವಾದ ರಾತ್ರಿಯು ಪ್ರಾಪ್ತವಾಯಿತು*. ಆ ಗಾಢಾಂಧಕಾರದಲ್ಲಿ ವಾನರಯೋಧರು ಪಂಜುಗಳನ್ನು ಹಿಡಿದು ಲಂಕೆಯ ಕಡೆಗೆ ನುಗ್ಗಿದರು. ವಾನರರು

---

* ಅನುಬಂಧವನ್ನು ನೋಡಿ.

ಉಲ್ಕಾಹಸ್ತೈರ್ಹರಿಗಣೈಃ ಸರ್ವತಃ ಸಮಭಿದ್ರುತಾಃ ।
ಆರಕ್ಷಸ್ಥಾ ವಿರೂಪಾಕ್ಷಾಃ ಸಹಸಾ ವಿಪ್ರದುದ್ರುವುಃ ॥ ೫

ಗೋಪುರಾಟ್ಟಪ್ರತೋಲೀಷು ಚರ್ಯಾಸು ವಿವಿಧಾಸು ಚ ।
ಪ್ರಾಸಾದೇಷು ಚ ಸಂಹೃಷ್ಟಾಃ ಸಸೃಜುಸ್ತೇ ಹುತಾಶನಮ್ ॥ ೬

ತೇಷಾಂ ಗೃಹಸಹಸ್ರಾಣಿ ದದಾಹ ಹುತಭುಕ್ತದಾ ।
ಪ್ರಾಸಾದಾಃ ಪರ್ವತಾಕಾರಾಃ ಪತಂತಿ ಧರಣೀತಲೇ ॥ ೭

ಅಗುರುರ್ದಹ್ಯತೇ ತತ್ರ ವರಂ ಚ ಹರಿಚಂದನಮ್ ।
ಮೌಕ್ತಿಕಾ ಮಣಯಃ ಸ್ನಿಗ್ಧಾ ವಜ್ರಂ ಚಾಪಿ ಪ್ರವಾಲಕಮ್ ॥ ೮

ಕ್ಷೌಮಂ ಚ ದಹ್ಯತೇ ತತ್ರ ಕೌಶೇಯಂ ಚಾಪಿ ಶೋಭನಮ್ ।
ಆವಿಕಂ ವಿವಿಧಂ ಚೌರ್ಣಂ ಕಾಂಚನಂ ಭಾಂಡಮಾಯುಧಮ್ ॥ ೯

ನಾನಾವಿಕೃತಸಂಸ್ಥಾನಂ ವಾಜಿಭಾಂಡಪರಿಚ್ಛದೌ ।
ಗಜಗ್ರೈವೇಯಕಕ್ಷ್ಯಾಶ್ಚ ರಥಭಾಂಡಾಶ್ಚ ಸಂಸ್ಕೃತಾಃ ॥ ೧೦

---

ಬಂದುದನ್ನು ಕಂಡು ಕೋಟೆಯ ಗುಲ್ಮಸ್ಥಾನಗಳಲ್ಲಿ ಕಾವಲಾಗಿದ್ದ ರಾಕ್ಷಸರು ಹೆದರಿ ಓಡಿಹೋದರು (೪–೫). ವಾನರರು ಉತ್ಸಾಹದಿಂದ ನುಗ್ಗಿ ಲಂಕೆಯ ಪುರದ್ವಾರ, ಮಹಡಿ, ರಸ್ತೆ, ಗಲ್ಲಿ, ಪ್ರಾಸಾದಗಳಿಗೆ ಹೋಗಿ ಬೆಂಕಿಯನ್ನು ಹತ್ತಿಸಿದರು. ಸಾವಿರಾರು ಮನೆಗಳು ಸುಟ್ಟು ಬೂದಿಯಾದವು. ಪರ್ವತಾಕಾರದ ಪ್ರಾಸಾದಗಳು ಸುಟ್ಟು ಕುಸಿದು ಬಿದ್ದವು (೬–೭). ಅಗುರು, ಚಂದನ, ನುಣುಪಾದ ಮುತ್ತಿನ ಮಣಿಗಳು, ವಜ್ರ, ಹವಳಗಳು ಸುಟ್ಟುಹೋದವು. ನಾರುಮಡಿಗಳು, ಉತ್ತಮವಾದ ರೇಶ್ಮೆಯ ಬಟ್ಟೆಗಳು, ಕಂಬಳಿಗಳು ಮತ್ತು ಇತರ ಉಣ್ಣೆಯ ಬಟ್ಟೆಗಳು ಭಸ್ಮವಾದವು. ಚಿನ್ನದ ಪಾತ್ರೆಗಳೂ, ಆಯುಧಗಳೂ ಸುಟ್ಟು ಕರಗಿದವು (೮–೯). ನಾನಾಬಗೆಯ ಕುಶಲ ಕಲಾ ನಿರ್ಮಿತವಸ್ತುಗಳೂ ಅಶ್ವಾಲಂಕಾರಗಳೂ ಹಲ್ಲಣಗಳೂ ಆನೆಗಳ ಕಂಠಾಭರಣಗಳೂ ಸರಪಳಿಗಳೂ ಮಿರುಮಿರುಗುವ ರಥಸಾಮಗ್ರಿಗಳೂ ಸುಟ್ಟು ಬೂದಿಯಾದವು (೧೦).

ತನುತ್ರಾಣಿ ಚ ಯೋಧಾನಾಂ ಹಸ್ತ್ಯಶ್ವಾನಾಂ ಚ ವರ್ಮ ಚ ।
ಖಡ್ಗಾ ಧನೂಂಷಿ ಜ್ಯಾಬಾಣಾಸ್ತೋಮರಾಂಕುಶಶಕ್ತಯಃ ॥ ೧೧
ರೋಮಜಂ ವಾಲಜಂ ಚರ್ಮ ವ್ಯಾಘ್ರಜಂ ಚಾಂಡಜಂ ಬಹು ।
ಮುಕ್ತಾಮಣಿವಿಚಿತ್ರಾಂಶ್ಚ ಪ್ರಾಸಾದಾಂಶ್ಚ ಸಮಂತತಃ ॥ ೧೨
ವಿವಿಧಾನಸ್ತ್ರಸಂಯೋಗಾನಗ್ನಿರ್ದಹತಿ ತತ್ರ ವೈ ।
ನಾನಾವಿಧಾನ್ ಗೃಹಚ್ಛಂದಾನ್ ದದಾಹ ಹುತಭುಕ್ತದಾ ॥ ೧೩
ಆವಾಸಾನ್ ರಾಕ್ಷಸಾನಾಂ ಚ ಸರ್ವೇಷಾಂ ಗೃಹಗರ್ಧಿನಾಮ್ ।
ಹೇಮಚಿತ್ರತನುತ್ರಾಣಾಂ ಸ್ರಗ್ದಾಮಾಂಬರಧಾರಿಣಾಮ್ ॥ ೧೪
ಶೀಧುಪಾನಚಲಾಕ್ಷಾಣಾಂ ಮದವಿಹ್ವಲಗಾಮಿನಾಮ್ ।
ಕಾಂತಾಲಂಬಿತವಸ್ತ್ರಾಣಾಂ ಶತ್ರುಸಂಜಾತಮನ್ಯುನಾಮ್ ॥ ೧೫
ಗದಾಶೂಲಾಸಿಹಸ್ತಾನಾಂ ಖಾದತಾಂ ಪಿಬತಾಮಪಿ ।
ಶಯನೇಷು ಮಹಾರ್ಹೇಷು ಪ್ರಸುಪ್ತಾನಾಂ ಪ್ರಿಯೈಃ ಸಹ ॥ ೧೬

---

ಯೋಧರ ಕವಚಗಳೂ ಆನೆ ಕುದುರೆಗಳಿಗೆ ತೊಡಿಸುವ ರಕ್ಷಾಕವಚಗಳೂ ಖಡ್ಗ, ಧನುಸ್ಸು, ಹೆದೆ, ಬಾಣ, ತೋಮರ, ಅಂಕುಶ, ಶಕ್ತಿ ಮುಂತಾದ ವಿವಿಧಾಯುಧಗಳೂ ದಗ್ಧವಾದವು (೧೧). ರೋಮನಿರ್ಮಿತವಸ್ತ್ರಗಳೂ ಚಾಮರಾದಿಗಳೂ ಹುಲಿಯ ಚರ್ಮವೂ ಕಸ್ತೂರಿ, ಪುನಗು ಮುಂತಾದ ಗಂಧದ್ರವ್ಯಗಳೂ ಸುಟ್ಟು ನಾಶವಾದವು. ಮುಕ್ತಾದಿಮಣಿಗಳಿಂದ ಭೂಷಿತವಾದ ಪ್ರಾಸಾದಗಳನ್ನೂ ಆಯುಧಾಗಾರಗಳನ್ನೂ ನಾನಾಬಗೆಯ ಗೃಹಗಳನ್ನೂ ಅಗ್ನಿಯು ದಹಿಸಿತು (೧೨-೧೩). ಆ ಸಮಯದಲ್ಲಿ ಗೃಹಲೋಲುಪರಾದ ಕೆಲವು ರಾಕ್ಷಸರು ಹೇಮಭೂಷಿತಕವಚಗಳನ್ನು ತೊಟ್ಟು ಪುಷ್ಪಮಾಲೆಗಳನ್ನೂ ಉತ್ತಮವಸ್ತ್ರಗಳನ್ನೂ ಧರಿಸಿದ್ದರು (೧೪). ಮದ್ಯಪಾನದಿಂದ ತೊಳಲುವ ಕಣ್ಣುಳ್ಳವರು ಕೆಲವರು! ಮದ್ಯದ ಅಮಲಿನಿಂದ ತತ್ತರಿಸುತ್ತ ಹೆಜ್ಜೆಯಿಡುವವರು ಕೆಲವರು! ಮದ್ಯಮದದಿಂದ ಒಲೆಯುತ್ತಿದ್ದ ರಾಕ್ಷಸರು ಬೀಳದಂತೆ, ಅವರ ಮಡದಿಯರು ವಸ್ತ್ರಗಳನ್ನು ಹಿಡಿದು ತಡೆಯುತ್ತಿದ್ದರು! ಕೆಲವರು ಶತ್ರುಗಳಾದ ವಾನರರ ಕಾರ್ಯದಿಂದ ಕ್ರುದ್ಧರಾಗಿದ್ದರು (೧೫). ಕೆಲವರು ಗದಾ, ಶೂಲ, ಖಡ್ಗ

ತ್ರಸ್ತಾನಾಂ ಗಚ್ಛತಾಂ ತೂರ್ಣಂ ಪುತ್ರಾನಾದಾಯ ಸರ್ವತಃ ।
ತೇಷಾಂ ಶತಸಹಸ್ರಾಣಿ ತದಾ ಲಂಕಾನಿವಾಸಿನಾಮ್ ॥ ೧೭

ಅದಹತ್ ಪಾವಕಸ್ತತ್ರ ಜಜ್ವಾಲ ಚ ಪುನಃ ಪುನಃ ।
ಸಾರವಂತಿ ಮಹಾರ್ಹಾಣಿ ಗಂಭೀರಗುಣವಂತಿ ಚ ॥ ೧೮

ಹೇಮಚಂದ್ರಾರ್ಧಚಂದ್ರಾಣಿ ಚಂದ್ರಶಾಲೋತ್ತಮಾನಿ ಚ ।
ರತ್ನಚಿತ್ರಗವಾಕ್ಷಾಣಿ ಸಾಧಿಷ್ಠಾನಾನಿ ಸರ್ವಶಃ ॥ ೧೯

ಮಣಿವಿದ್ರುಮಚಿತ್ರಾಣಿ ಸ್ಪೃಶಂತೀವ ದಿವಾಕರಮ್ ।
ಕ್ರೌಂಚಬರ್ಹಿಣವೀಣಾನಾಂ ಭೂಷಣಾನಾಂ ಚ ನಿಃಸ್ವನೈಃ ॥ ೨೦

ನಾದಿತಾನ್ಯಚಲಾಭಾನಿ ವೇಶ್ಮಾನ್ಯಗ್ನಿರ್ದದಾಹ ಸಃ ।
ಜ್ವಲನೇನ ಪರೀತಾನಿ ತೋರಣಾನಿ ಚಕಾಶಿರೇ ॥ ೨೧

ವಿದ್ಯುದ್ಭಿರಿವ ನದ್ಧಾನಿ ಮೇಘಜಾಲಾನಿ ಘರ್ಮಗೇ ।
ಜ್ವಲನೇನ ಪರೀತಾನಿ ನಿಪೇತುರ್ಭವನಾನ್ಯಥ ॥ ೨೨

---

ಮುಂತಾದ ಆಯುಧಗಳನ್ನು ಹಿಡಿದಿದ್ದರು. ಕೆಲವರು ಉಣ್ಣುತ್ತಿದ್ದರು, ಕೆಲವರು ಕುಡಿಯುತ್ತಿದ್ದರು. ಕೆಲವರು ಉತ್ತಮ ಶಯ್ಯೆಗಳಲ್ಲಿ ಪ್ರಿಯಜನರೊಡನೆ ಮಲಗಿದ್ದರು! ಕಪಿಯೋಧರು ನಗರಕ್ಕೆ ಬೆಂಕಿಯನ್ನು ಹಚ್ಚಿದೊಡನೆ ಆ ರಾಕ್ಷಸರು ಭೀತಿಯಿಂದ ತಮ್ಮ ಮಕ್ಕಳನ್ನೆತ್ತಿಕೊಂಡು ಅತ್ತಿತ್ತ ಓಡಲಾರಂಭಿಸಿದರು. ಅಂಥ ರಾಕ್ಷಸರ ಲಕ್ಷೋಪಲಕ್ಷ ಮನೆಗಳು ಅಗ್ನಿಗೆ ಆಹುತಿಯಾದವು (೧೬-೧೭). ಅಗ್ನಿಯು ಭುಗಿಲೆಂದು ಪ್ರಜ್ವಲಿಸತೊಡಗಿತು. ಪೂರ್ಣಚಂದ್ರನಂತೆಯೂ ಅರ್ಧಚಂದ್ರನಂತೆಯೂ ಆಕೃತಿಯುಳ್ಳ ಹೇಮನಿರ್ಮಿತ ಭವನಗಳೂ ಉತ್ತಮ ಚಂದ್ರಶಾಲಾ ಸಹಿತ ಗೃಹಗಳೂ ರತ್ನಖಚಿತ ಗವಾಕ್ಷಗಳೂ ಶ್ರೇಷ್ಠವಾದ ಗೃಹೋಪಕರಣಗಳೊಡನೆ ದಗ್ಧವಾಗಿ ಬಿದ್ದವು (೧೮-೧೯). ವಿವಿಧ ರತ್ನಗಳಿಂದಲೂ ಹವಳಗಳಿಂದಲೂ ಅಲಂಕೃತವಾಗಿ, ಸೂರ್ಯನನ್ನು ಸ್ಪರ್ಶಿಸುತ್ತವೆಯೋ ಎಂಬಂತೆ ಉನ್ನತವಾಗಿ, ಕ್ರೌಂಚ ನವಿಲುಗಳ ಕೂಗುಗಳಿಂದ ಮನೋಹರವಾಗಿ, ವೀಣಾಕ್ವಣಿತದಿಂದ ಮನೋಜ್ಞವಾಗಿ, ಆಭರಣಗಳ ಕುಲುಕುಲು ಶಬ್ದಗಳಿಂದ ಮನೋರಮವಾಗಿ, ಶೈಲಗಳಂತೆ ಉನ್ನತವಾಗಿದ್ದ ಮಂದಿರಗಳನ್ನು ವಹ್ನಿಯು ಸುಟ್ಟು ಬೂದಿಮಾಡಿತು (೨೦-೨೧). ಅಗ್ನಿಜ್ವಾಲೆಯೊಡನೆ

ವಜ್ರಿವಜ್ರಹತಾನೀವ ಶಿಖರಾಣಿ ಮಹಾಗಿರೇಃ ।
ವಿಮಾನೇಷು ಪ್ರಸುಪ್ತಾಶ್ಚ ದಹ್ಯಮಾನಾ ವರಾಂಗನಾಃ ॥ ೨೩

ತ್ಯಕ್ತಾಭರಣಸರ್ವಾಂಗಾ ಹಾ ಹೇತ್ಯುಚ್ಚೈರ್ವಿಚುಕ್ರುಶುಃ ।
ತಾನಿ ನಿರ್ದಹ್ಯಮಾನಾನಿ ದೂರತಃ ಪ್ರಚಕಾಶಿರೇ ॥ ೨೪

ಹಿಮವಚ್ಛಿಖರಾಣೀವ ದೀಪ್ತೌಷಧಿವನಾನಿ ಚ ।
ಹರ್ಮ್ಯಾಗ್ರೈರ್ದಹ್ಯಮಾನೈಶ್ಚ ಜ್ವಾಲಾಪ್ರಜ್ವಲಿತೈರಪಿ ॥ ೨೫

ರಾತ್ರೌ ಸಾ ದೃಶ್ಯತೇ ಲಂಕಾ ಪುಷ್ಪಿತೈರಿವ ಕಿಂಶುಕೈಃ ।
ಹಸ್ತ್ಯಧ್ಯಕ್ಷೈರ್ಗಜೈರ್ಮುಕ್ತೈರ್ಮುಕ್ತೈಶ್ಚ ತುರಗೈರಪಿ ॥ ೨೬

---

ಉರಿಯುತ್ತಿದ್ದ ಉನ್ನತವಾದ ಬಹಿರ್ದ್ವಾರಗಳು ಬೇಸಿಗೆಯಲ್ಲಿ* ಮಿಂಚುಗಳೊಡನೆ ಮಿಂಚುವ ಮೇಘಜಾಲಗಳಂತೆ ಹೊಳೆಯುತ್ತಿದ್ದವು. ಇಂದ್ರನ ವಜ್ರಾಯುಧದಿಂದ ಆಹತವಾದ ಗಿರಿಶಿಖರಗಳಂತೆ, ಉನ್ನತ ಭವನಗಳು ಸುಟ್ಟು ಉರುಳಿಬೀಳುತ್ತಿದ್ದವು (೨೨). ಉಪ್ಪರಿಗೆಗಳಲ್ಲಿ ಮಲಗಿದ್ದ ಉತ್ತಮಸ್ತ್ರೀಯರು ಆಭರಣಗಳನ್ನು ತೆಗೆದೊಗೆದು 'ಹಾ! ಹಾ!' ಎಂದು ಒರಲುತ್ತಿದ್ದರು. ಉರಿಯುತ್ತಿದ್ದ ಉಪ್ಪರಿಗೆಗಳು ದಿವ್ಯಮೂಲಿಕೆಗಳಿಂದ ಪ್ರಜ್ವಲಿಸುವ ಹಿಮಾಲಯದ ಶಿಖರಗಳಂತೆ ದೂರದಲ್ಲಿರುವವರಿಗೆ ಕಾಣುತ್ತಿದ್ದವು (೨೩–೨೪). ಜ್ವಾಲೆಯೊಡನೆ ಉರಿಯುತ್ತಿದ್ದ ಉನ್ನತ ಭವನಗಳು ಆ ರಾತ್ರಿಯಲ್ಲಿ, ಅರಳಿದ ಮುತ್ತಗದ ಮರಗಳಂತೆ ಗೋಚರಿಸಿದವು. ಅಗ್ನಿಭಯದಿಂದ ಮಾವುತರು ಆನೆಗಳನ್ನೂ ರಾವುತರು ಕುದುರೆಗಳನ್ನೂ ಕಟ್ಟುಗಳಿಂದ ಬಿಚ್ಚಿದರು. ಅವುಗಳು ಬೀದಿಗಳಲ್ಲಿ ದಿಕ್ಕುಗೆಟ್ಟು ಅಲೆಯು

---

* ಮೂಲದಲ್ಲಿ 'ಘರ್ಮಗೇ' ಎಂದಿದೆ. ಘರ್ಮವೆಂದರೆ ಬೇಸಿಗೆ. ಬೇಸಿಗೆ ಕಳೆದುಹೋಗಲು–ಮಳೆಗಾಲದಲ್ಲಿ ಎಂದು ಕೆಲವರು ಅರ್ಥ ಹೇಳುತ್ತಾರೆ. ಈ ಅರ್ಥವು ಕ್ಲೇಶದಿಂದ ಲಭ್ಯವಾಗುತ್ತದೆ. ಬೇಸಿಗೆಯಲ್ಲಿಯೂ ಮುಂಗಾರು ಮೋಡವು ಕಾಣಿಸುವುದರಿಂದ ಬೇಸಿಗೆಯೆಂದೇ ಅರ್ಥವನ್ನು ಹೇಳಬಹುದು. ಆಗ ಮೋಡಕವಿದರೆ ಸೆಕೆಯು ಹೇಗೆ ಅತಿಯಾಗುವುದೋ ಹಾಗೆ ಬೆಂಕಿಯಿಂದ ಸೆಕೆಯು ಅತಿಯಾಯಿತೆಂದು ಆಶಯವಿರಬಹುದು.

ಬಭೂವ ಲಂಕಾ ಲೋಕಾಂತೇ ಭ್ರಾಂತಗ್ರಾಹ ಇವಾರ್ಣವಃ ।
ಅಶ್ವಂ ಮುಕ್ತಂ ಗಜೋ ದೃಷ್ಟ್ವಾ ಕ್ವಚಿದ್ಭೀತೋಽಪಸರ್ಪತಿ ॥ ೨೭

ಭೀತೋ ಭೀತಂ ಗಜಂ ದೃಷ್ಟ್ವಾ ಕ್ವಚಿದಶ್ವೋ ನಿವರ್ತತೇ ।
ಲಂಕಾಯಾಂ ದಹ್ಯಮಾನಾಯಾಂ ಶುಶುಭೇ ಸ ಮಹಾರ್ಣವಃ ॥ ೨೮

ಛಾಯಾಸಂಸಕ್ತಸಲಿಲೋ ಲೋಹಿತೋದ ಇವಾರ್ಣವಃ ।
ಸಾ ಬಭೂವ ಮುಹೂರ್ತೇನ ಹರಿಭಿರ್ದೀಪಿತಾ ಪುರೀ ॥ ೨೯

ಲೋಕಸ್ಯಾಸ್ಯ ಕ್ಷಯೇ ಘೋರೇ ಪ್ರದೀಪ್ತೇವ ವಸುಂಧರಾ ।
ನಾರೀಜನಸ್ಯ ಧೂಮೇನ ವ್ಯಾಪ್ತಸ್ಯೋಚ್ಚೈರ್ವಿನೇದುಷಃ ॥ ೩೦

ಸ್ವನೋ ಜ್ವಲನತಪ್ತಸ್ಯ ಶುಶ್ರುವೇ ದಶಯೋಜನಮ್ ।
ಪ್ರದಗ್ಧಕಾಯಾನಪರಾನ್ ರಾಕ್ಷಸಾನ್ನಿರ್ಗತಾನ್ ಬಹಿಃ ॥ ೩೧

ಸಹಸಾಭ್ಯುತ್ಪತಂತಿ ಸ್ಮ ಹರಯೋಽಥ ಯುಯುತ್ಸವಃ ।
ಉದ್ಘುಷ್ಟಂ ವಾನರಾಣಾಂ ಚ ರಾಕ್ಷಸಾನಾಂ ಚ ನಿಸ್ವನಃ ॥ ೩೨

---

ತ್ತಿರುವಾಗ, ಪ್ರಳಯಕಾಲದಲ್ಲಿ ಮಹಾಗ್ರಾಹಗಳು ತತ್ತರಿಸುತ್ತಿರಲು, ಉಲ್ಲೋಲಕಲ್ಲೋಲವಾದ ಮಹಾಸಾಗರದಂತೆ ಲಂಕಾನಗರವು ಕಾಣಿಸಿತು. ಓಡುವ ಕುದುರೆಯನ್ನು ಕಂಡು ಆನೆಯು ಹೆದರಿ ಹಿಂದಕ್ಕೆ ಓಡುತ್ತಿತ್ತು! (೨೫-೨೭). ಓಡುವ ಆನೆಯನ್ನು ಕಂಡು ಕುದುರೆಯು ಹೆದರಿ ಹಿಂಜರಿದು ಪಲಾಯನಮಾಡುತ್ತಿತ್ತು! ಲಂಕೆಯು ಸುಟ್ಟುಹೋಗುತ್ತಿರುವಾಗ ಅಗ್ನಿಜ್ವಾಲೆಯು ಸಮುದ್ರದಲ್ಲಿ ಪ್ರತಿಬಿಂಬಿಸಿರಲು, ಆ ಸಮುದ್ರವು ಕೆಂಪು ನೀರಿನಿಂದ ತುಂಬಿದಂತೆ ಕಾಣಿಸಿತು (೨೮). ವಾನರಯೋಧರಿಂದ ಪ್ರದೀಪಿತವಾದ ಆ ಲಂಕಾನಗರಿಯು, ಘೋರವಾದ ಪ್ರಳಯಕಾಲದಲ್ಲಿ ಈ ಭೂಮಿಯು ದಗ್ಧವಾಗುವಂತೆ, ಒಂದು ಮುಹೂರ್ತದಲ್ಲಿ ಉರಿದು ಹೋಯಿತು. ಹೊಗೆಯಲ್ಲಿಯೂ ವಹ್ನಿಜ್ವಾಲೆಯಲ್ಲಿಯೂ ಸಿಕ್ಕಿ ನೊಂದು ಕೂಗುತ್ತಿದ್ದ ನಾರೀಜನರ ಚೀತ್ಕಾರವು ಹತ್ತುಯೋಜನಗಳ ದೂರದವರೆಗೆ ಕೇಳಿಸಿತು! (೨೯-೩೦). ಮೈಯನ್ನು ಸುಟ್ಟುಕೊಂಡು ಕೆಲವು ರಾಕ್ಷಸರು ಹೊರಗೆ ಓಡಿಬರಲು, ಥಟ್ಟನೆ ಈ ಕಪಿಯೋಧರು ಯುದ್ಧಾಪೇಕ್ಷೆಯಿಂದ ಅವರನ್ನು ಎದುರಿಸುತ್ತಿದ್ದರು. ಎಲ್ಲೆಲ್ಲಿಯೂ ವಾನರರ ಮತ್ತು ರಾಕ್ಷಸರ

ದಿಶೋ ದಶ ಸಮುದ್ರಂ ಚ ಪೃಥಿವೀಂ ಚಾನ್ವನಾದಯತ್ ।
ವಿಶಲ್ಯೌ ತು ಮಹಾತ್ಮಾನೌ ತಾವುಭೌ ರಾಮಲಕ್ಷ್ಮಣೌ ॥ ೩೩

ಅಸಂಭ್ರಾಂತೌ ಜಗೃಹತುಸ್ತದೋಭೇ ಧನುಷೀ ವರೇ ।
ತತೋ ವಿಸ್ಫಾರಯಾಣಸ್ಯ ರಾಮಸ್ಯ ಧನುರುತ್ತಮಮ್ ॥ ೩೪

ಬಭೂವ ತುಮುಲಃ ಶಬ್ದೋ ರಾಕ್ಷಸಾನಾಂ ಭಯಾವಹಃ ।
ಅಶೋಭತ ತದಾ ರಾಮೋ ಧನುರ್ವಿಸ್ಫಾರಯನ್ ಮಹತ್ ॥ ೩೫

ಭಗವಾನಿವ ಸಂಕ್ರುದ್ಧೋ ಭವೋ ವೇದಮಯಂ ಧನುಃ ।
ಉದ್ಘುಷ್ಟಂ ವಾನರಾಣಾಂ ಚ ರಾಕ್ಷಸಾನಾಂ ಚ ನಿಸ್ವನಮ್ ॥ ೩೬

ಜ್ಯಾಶಬ್ದಸ್ತಾವುಭೌ ಶಬ್ದಾವತಿ ರಾಮಸ್ಯ ಶುಶ್ರುವೇ ।
ವಾನರೋದ್ಘುಷ್ಟಘೋಷಶ್ಚ ರಾಕ್ಷಸಾನಾಂ ಚ ನಿಸ್ವನಃ ॥ ೩೭

ಜ್ಯಾಶಬ್ದಶ್ಚಾಪಿ ರಾಮಸ್ಯ ತ್ರಯಂ ವ್ಯಾಪ್ತಂ ದಿಶೋ ದಶ ।
ತಸ್ಯ ಕಾರ್ಮುಕನಿರ್ಮುಕ್ತೈಶ್ಚ ಶರೈಸ್ತತ್ ಪುರಗೋಪುರಮ್ ॥ ೩೮

---

ಕೋಲಾಹಲವು ಮೊಳಗಿಹೋಯಿತು (೩೧-೩೨). ಆ ಕೋಲಾಹಲವು ದಶದಿಕ್ಕುಗಳನ್ನು ವ್ಯಾಪಿಸಿ ಕಡಲನ್ನು ಮೊಳಗಿಸಿ ಭೂಮಿಯಲ್ಲಿ ಪ್ರತಿಧ್ವನಿಸಿತು. ಅತ್ತಲಾಗಿ ರಣರಂಗದಲ್ಲಿ ಬ್ರಹ್ಮಾಸ್ತ್ರದಿಂದ ವಿಮುಕ್ತರಾಗಿ ಚೇತರಿಸಿಕೊಂಡ ವೀರಾಗ್ರಣಿಗಳಾದ ಶ್ರೀರಾಮನೂ ಲಕ್ಷ್ಮಣನೂ ತಮಗಾದ ಬಾಧೆಯನ್ನು ಗಣಿಸದೆ, ಪ್ರಬಲವಾದ ತಮ್ಮ ಧನುಸ್ಸುಗಳನ್ನು ಕೈಗೆ ತೆಗೆದುಕೊಂಡರು (೩೩). ಶ್ರೀರಾಮನು ತನ್ನ ಕೋದಂಡವನ್ನೆತ್ತಿ ನಾಣನ್ನು ಮಿಡಿಯಲಾರಂಭಿಸಲು, ಜನಿಸಿದ ಝೇಂಕಾರವು ಲಂಕೆಯಲ್ಲಿದ್ದ ರಾಕ್ಷಸರ ಎದೆಯನ್ನು ನಡುಗಿಸಿತು. ತನ್ನ ಮಹಾಧನುಸ್ಸನ್ನು ಜೇಗೈಯುತ್ತ ಕ್ರುದ್ಧನಾಗಿ ನಿಂತಿದ್ದ ಶ್ರೀರಾಮನು, ಸಂಹಾರಕಾಲದಲ್ಲಿ ವೇದಪ್ರತಿಪಾದ್ಯವಾದ ಪಿನಾಕಧನುಸ್ಸನ್ನು ಹಿಡಿದು ಸಂಕ್ರುದ್ಧನಾದ ಭಗವಾನ್ ಪರಮೇಶ್ವರನಂತೆ ಕಂಗೊಳಿಸಿದನು (೩೪-೩೫). ಶ್ರೀರಾಮನ ಧನುಷ್ಟಂಕಾರವು ವಾನರರಾಕ್ಷಸರ ಭೀಕರಕೋಲಾಹಲವನ್ನೂ ಅತಿಕ್ರಮಿಸಿ ಸ್ಫುಟವಾಗಿ ಕೇಳಿಸುತ್ತಿತ್ತು! ಕಪಿಯೋಧರ ಗರ್ಜನೆ, ರಾಕ್ಷಸರ ಚೀತ್ಕಾರ, ಶ್ರೀರಾಮನ ಕೋದಂಡ ಝೇಂಕಾರ—ಇವು ಮೂರೂ ದಶದಿಕ್ಕುಗಳನ್ನೂ ವ್ಯಾಪಿಸಿದವು (೩೬-೩೭). ಶ್ರೀರಾಮನ ಕಾರ್ಮುಕದಿಂದ ಜಿಗಿದ ಶರಗಳು

ಕೈಲಾಸಶೃಂಗಪ್ರತಿಮಂ ವಿಕೀರ್ಣಮಪತದ್ಭುವಿ ।
ತತೋ ರಾಮಶರಾನ್ ದೃಷ್ಟ್ವಾ ವಿಮಾನೇಷು ಗೃಹೇಷು ಚ ॥ ೩೯
ಸಂನಾಹೋ ರಾಕ್ಷಸೇಂದ್ರಾಣಾಂ ತುಮುಲಃ ಸಮಪದ್ಯತ ।
ತೇಷಾಂ ಸಂನಹ್ಯಮಾನಾನಾಂ ಸಿಂಹನಾದಂ ಚ ಕುರ್ವತಾಮ್ ॥ ೪೦
ಶರ್ವರೀ ರಾಕ್ಷಸೇಂದ್ರಾಣಾಂ ರೌದ್ರೀವ ಸಮಪದ್ಯತ ।
ಆದಿಷ್ಟಾ ವಾನರೇಂದ್ರಾಸ್ತು ಸುಗ್ರೀವೇಣ ಮಹಾತ್ಮನಾ ॥ ೪೧
ಆಸನ್ನದ್ವಾರಮಾಸಾದ್ಯ ಯುಧ್ಯಧ್ವಂ ಪ್ಲವಗರ್ಷಭಾಃ ।
ಯಶ್ಚ ವೋ ವಿತಥಂ ಕುರ್ಯಾತ್ತತ್ರ ತತ್ರ ಹ್ಯುಪಸ್ಥಿತಃ ॥ ೪೨
ಸ ಹಂತವ್ಯೋ ಹಿ ಸಂಪ್ಲುತ್ಯ ರಾಜಶಾಸನದೂಷಕಃ ।
ತೇಷು ವಾನರಮುಖ್ಯೇಷು ದೀಪ್ತೋಲ್ಕೋಜ್ಜ್ವಲಪಾಣಿಷು ॥ ೪೩
ಸ್ಥಿತೇಷು ದ್ವಾರಮಾಸಾದ್ಯ ರಾವಣಂ ಮನ್ಯುರಾವಿಶತ್ ।
ತಸ್ಯ ಜೃಂಭಿತವಿಕ್ಷೋಭಾದ್ವ್ಯಾಮಿಶ್ರಾ ವೈ ದಿಶೋ ದಶ ॥ ೪೪

---

ಕೈಲಾಸಶಿಖರದಂತಿದ್ದ ಲಂಕಾಪುರದ ಗೋಪುರವನ್ನು ಕೆಳಗುರುಳಿಸಿದವು. ಆ ಶರಗಳು ಲಂಕಾನಗರದ ಉಪ್ಪರಿಗೆಗಳಿಗೂ ಇತರ ಗೃಹಗಳಿಗೂ ಬಂದು ತಾಗುವುದನ್ನು ಕಂಡು ರಾಕ್ಷಸಭಟರು ಬೇಗಬೇಗನೆ ಯುದ್ಧಸನ್ನಾಹದಲ್ಲಿ ತೊಡಗಿದರು (೩೮-೩೯). ರಾಕ್ಷಸವೀರರು ಯುದ್ಧಕ್ಕೆ ಸಿದ್ಧರಾಗುತ್ತ ಸಿಂಹನಾದವನ್ನು ಮಾಡುತ್ತಿರಲು, ಆ ರಾತ್ರಿಯು ಕಾಲರಾತ್ರಿಯಂತೆ ಭೀಕರವಾಗಿ ತೋರಿತು. ಆಗ ಮಹಾಧೀರನಾದ ಸುಗ್ರೀವನು "ಎಲೈ ವಾನರಯೋಧರೆ, ಈಗ ನೀವೆಲ್ಲರೂ ಲಂಕಾದ್ವಾರಗಳಿಗೆ ಲಗ್ಗೆ ಹತ್ತತಕ್ಕದ್ದು. ಯಾರು ಯಾರಿಗೆ ಯಾವುದು ಸಮೀಪ ದ್ವಾರವೋ ಅವರು ಅದನ್ನು ಮುತ್ತಲೇಬೇಕು (೪೦-೪೧). ನಿಮ್ಮಲ್ಲಿ ಯಾವನಾದರೂ ಈ ಆಜ್ಞೆಯನ್ನು ಪಾಲಿಸದೆ ಅಲ್ಲಲ್ಲಿ ನಿಂತುಕೊಳ್ಳುವನೋ, ಅವನು ರಾಜಶಾಸನವನ್ನು ಉಲ್ಲಂಘಿಸಿದನೆಂದು ಮರಣದಂಡನೆಗೆ ಗುರಿಯಾಗುವನು!" ಎಂದು ಆಜ್ಞಾಪಿಸಿದನು (೪೨). ಆಮೇಲೆ ವಾನರಯೂಥಪರು ಉರಿಯುವ ಪಂಜುಗಳನ್ನು ಕೈಯಲ್ಲಿ ಹಿಡಿದು ಲಂಕಾದ್ವಾರಗಳೆಲ್ಲವನ್ನೂ ಮುತ್ತಿದರು. ಅದನ್ನು ಕಂಡು ರಾವಣನ ರೋಷವು ನೆತ್ತಿಗೇರಿತು. ಅವನ ಕೋಪಾಟೋಪದ

ರೂಪವಾನಿವ ರುದ್ರಸ್ಯ ಮನ್ಯುರ್ಗಾತ್ರೇಷ್ವದೃಶ್ಯತ ।
ಸ ನಿಕುಂಭಂ ಚ ಕುಂಭಂ ಚ ಕುಂಭಕರ್ಣಾತ್ಮಜಾವುಭೌ ॥ ೪೫

ಪ್ರೇಷಯಾಮಾಸ ಸಂಕ್ರುದ್ಧೋ ರಾಕ್ಷಸೈರ್ಬಹುಭಿಃ ಸಹ ।
ಯೂಪಾಕ್ಷಃ ಶೋಣಿತಾಕ್ಷಶ್ಚ ಪ್ರಜಂಘಃ ಕಂಪನಸ್ತಥಾ ॥ ೪೬

ನಿರ್ಯಯುಃ ಕೌಂಭಕರ್ಣಿಭ್ಯಾಂ ಸಹ ರಾವಣಶಾಸನಾತ್ ।
ಶಶಾಸ ಚೈವ ತಾನ್ ಸರ್ವಾನ್ ರಾಕ್ಷಸಾನ್ ಸುಮಹಾಬಲಾನ್ ॥

ನಾದಯನ್ ಗಚ್ಛತಾದ್ಯೈವ ಜಯಧ್ವಂ ಶೀಘ್ರಮೇವ ಚ ।
ತತಸ್ತು ಚೋದಿತಾಸ್ತೇನ ರಾಕ್ಷಸಾ ಜ್ವಲಿತಾಯುಧಾಃ ॥ ೪೮

ಲಂಕಾಯಾ ನಿರ್ಯಯುರ್ವೀರಾಃ ಪ್ರಣದಂತಃ ಪುನಃ ಪುನಃ ।
ರಕ್ಷಸಾಂ ಭೂಷಣಸ್ಥಾಭಿರ್ಭಾಭಿಃ ಸ್ವಾಭಿಶ್ಚ ಸರ್ವಶಃ ॥ ೪೯

ಚಕ್ರುಸ್ತೇ ಸಪ್ರಭಂ ವ್ಯೋಮ ಹರಯಶ್ಚಾಗ್ನಿಭಿಃ ಸಹ ।
ತತ್ರ ತಾರಾಧಿಪಸ್ಯಾಭಾ ತಾರಾಣಾಂ ಚ ತಥೈವ ಚ ॥ ೫೦

---

ಉಜ್ಜೃಂಭಣೆಯನ್ನು ನೋಡಿ ಸುತ್ತಲೂ ಇದ್ದ ಪರಿವಾರದವರು ವ್ಯಾಕುಲರಾದರು (೪೩-೪೪). ಪ್ರಳಯಕಾಲರುದ್ರನ ದೇಹದಲ್ಲಿ ವಿಸ್ಫುರಿಸುವ ರೋಷವೇಶವು ಮೂರ್ತೀಭವಿಸಿದಂತೆ ರಾವಣನು ಕಂಗೊಳಿಸಿದನು. ಅವನು ಕುಂಭಕರ್ಣನ ಪುತ್ರರಾದ ಕುಂಭ, ನಿಕುಂಭ-ಎಂಬ ಇಬ್ಬರನ್ನು ಕರೆದು, ಬಹುಮಂದಿ ರಾಕ್ಷಸಯೋಧರೊಡನೆ ಸನ್ನದ್ಧರಾಗಿ ಯುದ್ಧಭೂಮಿಗೆ ತೆರಳುವಂತೆ ತಿಳಿಸಿದನು. ಯೂಪಾಕ್ಷ, ಶೋಣಿತಾಕ್ಷ, ಪ್ರಜಂಘ ಮತ್ತು ಕಂಪನ ಎಂಬ ರಾಕ್ಷಸನಾಯಕರೂ ರಾವಣನ ಆಜ್ಞೆಯಂತೆ ಕುಂಭನಿಕುಂಭರೊಡನೆ ಹೊರಡಲು ಸಜ್ಜಾದರು (೪೫-೪೬). ಸುತ್ತಲೂ ಪ್ರತಿಧ್ವನಿಸುವಂತೆ ಗರ್ಜಿಸುತ್ತ ರಾವಣನು "ಎಲೈ ವೀರರೆ, ಕಪಿಸೇನೆಯನ್ನು ಸೋಲಿಸಿ ಓಡಿಸಿರಿ. ಬೇಗನೆ ಹೊರಡಿರಿ" ಎಂದು ವಿಧಿಸಿದನು. ರಾವಣಾಜ್ಞೆಯಂತೆ ಆ ರಾಕ್ಷಸವೀರರು ಹೊಳೆಹೊಳೆಯುವ ಆಯುಧಗಳನ್ನು ಧರಿಸಿ ಸಿಂಹನಾದಗೈಯುತ್ತ ಲಂಕೆಯಿಂದ ಹೊರಟರು (೪೭-೪೮). ರಾಕ್ಷಸರ ಭೂಷಣಪ್ರಭೆ, ವಾನರರ ಕೈಗಳಲ್ಲಿರುವ ಪಂಜುಗಳ ಬೆಳಕು, ಉಭಯರ ಅಸಾಧಾರಣವಾದ ತೇಜಸ್ಸು-ಇವೆಲ್ಲವೂ ಸೇರಿ ಆಕಾಶದಲ್ಲಿ ಬೆಳ್ಳಂಬೆಳಕಾಯಿತು (೪೯). ಚಂದ್ರನ ಕಾಂತಿ, ತಾರೆಗಳ ಪ್ರಕಾಶ, ಉಭಯ

ತಯೋರಾಭರಣಸ್ಥಾ ಚ ಬಲಯೋರ್ದ್ಯಾಮಭಾಸಯನ್ ।
ಚಂದ್ರಾಭಾ ಭೂಷಣಾಭಾ ಚ ಗೃಹಾಣಾಂ ಜ್ವಲತಾಂ ಚ ಭಾ ॥ ೫೧

ಹರಿರಾಕ್ಷಸಸೈನ್ಯಾನಿ ಭ್ರಾಜಯಾಮಾಸ ಸರ್ವತಃ ।
ತತ್ರ ಚೋರ್ಧ್ವಂ ಪ್ರದೀಪ್ತಾನಾಂ ಗೃಹಾಣಾಂ ಸಾಗರಃ ಪುನಃ ॥

ಭಾಭಿಃ ಸಂಸಕ್ತಪಾತಾಲಶ್ಚಲೋರ್ಮಿಃ ಶುಶುಭೇಽಧಿಕಮ್ ।
ಪತಾಕಾಧ್ವಜಸಂಸಕ್ತಮುತ್ತಮಾಸಿಪರಶ್ವಧಮ್ ॥ ೫೩

ಭೀಮಾಶ್ವರಥಮಾತಂಗಂ ನಾನಾಪತ್ತಿಸಮಾಕುಲಮ್ ।
ದೀಪ್ತಶೂಲಗದಾಖಡ್ಗಪ್ರಾಸತೋಮರಕಾರ್ಮುಕಮ್ ॥ ೫೪

ತದ್ರಾಕ್ಷಸಬಲಂ ಘೋರಂ ಭೀಮವಿಕ್ರಮಪೌರುಷಮ್ ।
ದದೃಶೇ ಜ್ವಲಿತಪ್ರಾಸಂ ಕಿಂಕಿಣೀಶತನಾದಿತಮ್ ॥ ೫೫

ಹೇಮಜಾಲಾಚಿತಭುಜಂ ವ್ಯಾವೇಷ್ಟಿತಪರಶ್ವಧಮ್ ।
ವ್ಯಾಘೂರ್ಣಿತಮಹಾಶಸ್ತ್ರಂ ಬಾಣಸಂಸಕ್ತಕಾರ್ಮುಕಮ್ ॥ ೫೬

---

ಸೈನಿಕರು ಧರಿಸಿದ್ದ ಒಡವೆಗಳ ಪ್ರಭೆ—ಇವು ಆಕಾಶವನ್ನು ಬೆಳಗಿಸಿದವು. ಚಂದ್ರನ ಕಾಂತಿ, ಸೈನಿಕರ ಒಡವೆಗಳ ಕಾಂತಿ, ಪ್ರಜ್ವಲಿಸುವ ಗೃಹಗಳ ಕಾಂತಿ–ಇವು ಕಪಿ ರಾಕ್ಷಸ ಸೇನೆಗಳಿಗೆ ಬೆಳಕನ್ನಿತ್ತವು (೫೦-೫೧). ಲಂಕೆಯ ಗೃಹಗಳಿಗೆ ಹತ್ತಿ ಉರಿಯುವ ಅಗ್ನಿಜ್ವಾಲೆಯ ಪ್ರಕಾಶವು ಸಮುದ್ರದಲ್ಲಿ ಪಾತಾಳಪರ್ಯಂತವಾಗಿ ವ್ಯಾಪಿಸಿತ್ತು. ಅಲೆಗಳು ಚಲಿಸುತ್ತಿರಲು, ಆ ಪ್ರಕಾಶದಿಂದ ಕಡಲು ಬಲುರಮ್ಯವಾಗಿ ಶೋಭಿಸುತ್ತಿತ್ತು (೫೨). ಆ ಸಮಯದಲ್ಲಿ ರಾಕ್ಷಸ ಸೈನಿಕರು ಧ್ವಜಪತಾಕೆಗಳನ್ನು ಹಾರಿಸುತ್ತ ಖಡ್ಗಗಳನ್ನೂ ಕೊಡಲಿಗಳನ್ನೂ ಹಿಡಿದು ಹೊರಟರು. ರಥಾಶ್ವಗಜಪದಾತಿಗಳೆಂಬ ಚತುರಂಗಗಳಿಂದ ಸಮೇತವಾದ ಭೀಕರ ರಾಕ್ಷಸ ಸೇನೆಯು ಯುದ್ಧಕ್ಕೆ ಪ್ರಯಾಣಮಾಡಿತು. ಭೀಷಣಪೌರುಷಯುಕ್ತರಾದ ರಾಕ್ಷಸಭಟರು ಶೂಲ, ಗದೆ, ಖಡ್ಗ, ಪ್ರಾಸ, ತೋಮರ, ಕಾರ್ಮುಕ ಮುಂತಾದ ವಿವಿಧಾಯುಧಗಳನ್ನು ಧರಿಸಿದ್ದರು (೫೩-೫೪). ಪ್ರಜ್ವಲಿಸುವ ಪ್ರಾಸಗಳನ್ನು ಬೀಸುತ್ತಿದ್ದರು. ಅಶ್ವಗಜಾದಿಗಳ ಕಿರುಗಂಟೆಗಳು ರಘುಣರಘುಣಿಸುತ್ತಿದ್ದವು. ಭಟರ ಭುಜಗಳು ಕನಕಾಭರಣಗಳಿಂದ ಭೂಷಿತವಾಗಿದ್ದವು. ಸೈನಿಕರು ಕೊಡಲಿಗಳನ್ನು ತಿರುಗಿಸುತ್ತ, ಭೀಕರಾಯುಧ

ಗಂಧಮಾಲ್ಯಮಧೂತ್ಸೇಕಸಂಮೋದಿತಮಹಾನಿಲಮ್ ।
ಘೋರಂ ಶೂರಜನಾಕೀರ್ಣಂ ಮಹಾಂಬುಧರನಿಸ್ವನಮ್ ॥ ೫೭

ತದ್ದೃಷ್ಟ್ವಾ ಬಲಮಾಯಾಂತಂ ರಾಕ್ಷಸಾನಾಂ ಸುದಾರುಣಮ್ ।
ಸಂಚಚಾಲ ಪ್ಲವಂಗಾನಾಂ ಬಲಮುಚ್ಚೈರ್ನನಾದ ಚ ॥ ೫೮

ಜವೇನಾಪ್ಲುತ್ಯ ಚ ಪುನಸ್ತದ್ಬಲಂ ರಕ್ಷಸಾಂ ಮಹತ್ ।
ಅಭ್ಯಯಾತ್ ಪ್ರತ್ಯರಿಬಲಂ ಪತಂಗಾ ಇವ ಪಾವಕಮ್ ॥ ೫೯

ತೇಷಾಂ ಭುಜಪರಾಮರ್ಶವ್ಯಾಮೃಷ್ಟಪರಿಘಾಶನಿ ।
ರಾಕ್ಷಸಾನಾಂ ಬಲಂ ಶ್ರೇಷ್ಠಂ ಭೂಯಸ್ತರಮಶೋಭತ ॥ ೬೦

ತತ್ರೋನ್ಮತ್ತಾ ಇವೋತ್ಪೇತುರ್ಹರಯೋಽಥ ಯುಯುತ್ಸವಃ ।
ತರುಶೈಲೈರಭಿಘ್ನಂತೋ ಮುಷ್ಟಿಭಿಶ್ಚ ನಿಶಾಚರಾನ್ ॥ ೬೧

ತಥೈವಾಪತತಾಂ ತೇಷಾಂ ಕಪೀನಾಮಸಿಭಿಃ ಶಿತೈಃ ।
ಶಿರಾಂಸಿ ಸಹಸಾ ಜಹ್ರೂ ರಾಕ್ಷಸಾ ಭೀಮದರ್ಶನಾಃ ॥ ೬೨

---

ಗಳನ್ನು ಝಳಪಿಸುತ್ತ, ಧನುಸ್ಸಿಗೆ ಬಾಣಗಳನ್ನು ಹೂಡುತ್ತ ಸಾಗಿದರು (೫೫-೫೬). ಶೂರಭಟರಿಂದ ಪೂರ್ಣವಾದ ಆ ಘೋರಸೇನೆಯಲ್ಲಿ ಸೈನಿಕರ ಗಂಧಮಾಲ್ಯ ಮತ್ತು ವೀರಪಾಣವಾಗಿ ಕುಡಿದ ಮದ್ಯದ ವಾಸನೆಯಿಂದ ಕೂಡಿದ ಗಾಳಿ ಸುಳಿಯುತ್ತಿದ್ದಿತು. ಮಹಾಮೇಘದಂತೆ ಸೇನೆಯು ಗರ್ಜಿಸುತ್ತಿದ್ದಿತು (೫೭). ಈ ಪ್ರಕಾರವಾಗಿ ದಾರುಣವಾದ ರಾಕ್ಷಸ ಸೈನ್ಯವು ಬರುವುದನ್ನು ವೀಕ್ಷಿಸಿ, ಕಪಿಸೈನ್ಯವು ಅದನ್ನೆದುರಿಸಿ ಹೋಗುತ್ತ ಸಿಂಹನಾದವಮಾಡಿತು. ಆಗ ರಾಕ್ಷಸಸೇನೆಯು, ಬೆಂಕಿಯನ್ನೆದುರಿಸುವ ದೀಪದ ಹುಳುವಿನಂತೆ, ಕಪಿಸೇನೆಯನ್ನೆದುರಿಸಿ ಮತ್ತಷ್ಟು ವೇಗದಿಂದ ನುಗ್ಗಿತು (೫೮-೫೯). ರಾಕ್ಷಸಭಟರು ಕೈಗಳನ್ನು ಬೀಸುತ್ತ ನೂಕುತ್ತ ನುಗ್ಗುವಾಗ, ಪರಿಘವಜ್ರಾದ್ಯಾಯುಧಗಳು ಠಣಠಣಿಲ್ ಎಂದು ಒಂದಕ್ಕೊಂದು ತಾಕಲು, ಸೇನೆಗೆ ಒಂದು ಹೊಸ ಶೋಭೆಯುಂಟಾಯಿತು (೬೦). ವಾನರಸೈನಿಕರು ಉನ್ಮತ್ತರಂತೆ ವೀರಾವೇಶದಿಂದ ರಾಕ್ಷಸರನ್ನೆದುರಿಸಿ, ಮರಗಳಿಂದಲೂ ಬಂಡೆಗಳಿಂದಲೂ ಮುಷ್ಟಿಗಳಿಂದಲೂ ನಿಶಾಚರರನ್ನು ಬಡಿಯತೊಡಗಿದರು. ಘೋರರೂಪಿಗಳಾದ ನಿಶಾಚರರು ಹರಿತ

ದಶನೈರ್ಹೃತಕರ್ಣಾಶ್ಚ ಮುಷ್ಟಿನಿಷ್ಕೀರ್ಣಮಸ್ತಕಾಃ ।
ಶಿಲಾಪ್ರಹಾರಭಗ್ನಾಂಗಾ ವಿಚೇರುಸ್ತತ್ರ ರಾಕ್ಷಸಾಃ ॥ ೬೩

ತಥೈವಾಪ್ಯಪರೇ ತೇಷಾಂ ಕಪೀನಾಮಭಿಲಕ್ಷಿತಾಃ ।
ಪ್ರವೀರಾನಭಿತೋ ಜಘ್ನೂ ರಾಕ್ಷಸಾನಾಂ ತರಸ್ವಿನಾಮ್ ॥ ೬೪

ತಥೈವಾಪ್ಯಪರೇ ತೇಷಾಂ ಕಪೀನಾಮಸಿಭಿಃ ಶಿತೈಃ ।
ಹರಿವೀರಾನ್ನಿಜಘ್ನುಶ್ಚ ಘೋರರೂಪಾ ನಿಶಾಚರಾಃ ॥ ೬೫

ಘ್ನಂತಮನ್ಯಂ ಜಘಾನಾನ್ಯಃ ಪಾತಯಂತಮಪಾತಯತ್ ।
ಗರ್ಹಮಾಣಂ ಜಗರ್ಹೇಽನ್ಯೋ ದಶಂತಮಪರೋಽದಶತ್ ॥ ೬೬

ದೇಹೀತ್ಯನ್ಯೋ ದದಾತ್ಯನ್ಯೋ ದದಾಮೀತ್ಯಪರಃ ಪುನಃ ।
ಕಿಂ ಕ್ಲೇಶಯಸಿ ತಿಷ್ಠೇತಿ ತತ್ರಾನ್ಯೋನ್ಯಂ ಬಭಾಷಿರೇ ॥ ೬೭

---

ವಾದ ಖಡ್ಗಗಳಿಂದ, ನುಗ್ಗಿಬಂದ ಕಪಿಗಳ ತಲೆಗಳನ್ನು ತರಿತರಿದು ಚೆಲ್ಲಿದರು (೬೧-೬೨). ಕಪಿಗಳು ರಾಕ್ಷಸರ ಕಿವಿಗಳನ್ನು ಹಲ್ಲುಗಳಿಂದ ಕಚ್ಚಿ ತುಂಡರಿಸಿದರು. ಮುಷ್ಟಿಗಳಿಂದ ಗುದ್ದಿ ತಲೆಗಳನ್ನೊಡೆದರು. ಬಂಡೆಗಳಿಂದ ಕೈಕಾಲುಗಳನ್ನು ಜಜ್ಜಿದರು. ಹೀಗೆ ಕಪಿಗಳಿಂದ ಊನಾಂಗರಾದ ರಾಕ್ಷಸರು ಸೈನ್ಯದಲ್ಲಿ ಸಂಚರಿಸುತ್ತಿದ್ದರು (೬೩). ಕಪಿಯೋಧರಲ್ಲಿ ಪ್ರಸಿದ್ಧರಾದ ಕೆಲವು ವೀರರು ರಾಕ್ಷಸರಲ್ಲಿ ಪ್ರಧಾನರಾದವರನ್ನೇ ಎದುರಿಸಿ ಕೊಲ್ಲುತ್ತಿದ್ದರು. ಹಾಗೆಯೇ ಭೀಕರಾಕೃತಿಯ ನಿಶಾಚರರು ಕಪಿಯೋಧರಲ್ಲಿ ಮುಖ್ಯರಾದವರನ್ನು ಹುಡುಕಿ ನಿಶಿತಾಸಿಗಳಿಂದ ಕತ್ತರಿಸುತ್ತಿದ್ದರು (೬೪-೬೫). ಉಭಯ ಪಡೆಗಳಲ್ಲಿಯೂ ಕೊಂದವನನ್ನು ಮತ್ತೊಬ್ಬನು ಕೊಲ್ಲುತ್ತ, ಉರುಳಿಸಿದವನನ್ನು ಮತ್ತೊಬ್ಬನು ಉರುಳಿಸುತ್ತ, ಹಂಗಿಸಿದವನನ್ನು ಮತ್ತೊಬ್ಬನು ಹಂಗಿಸುತ್ತ, ಕಚ್ಚಿದವನನ್ನು ಮತ್ತೊಬ್ಬನು ಕಚ್ಚುತ್ತ ಈರ್ವರೂ ಸ್ಪರ್ಧೆಯಿಂದ ಹೋರಾಡಿದರು (೬೬). 'ಹೊಡೆತವನ್ನು ಕೊಡು!' ಎಂದೊಬ್ಬನೂ 'ಅದೋ, ಅವನು ಕೊಡುತ್ತಾನೆ!' ಎಂದು ಇನ್ನೊಬ್ಬನೂ 'ನಿಲ್ಲು, ಕೊಡುತ್ತೇನೆ!' ಎಂದು ಮತ್ತೊಬ್ಬನೂ 'ತಡೆ ತಡೆ, ಅಷ್ಟೇಕೆ ಕಷ್ಟ!' ಎಂದು ಮಗದೊಬ್ಬನೂ ಆ ಪಡೆಗಳಲ್ಲಿ ವೀರಾಲಾಪ

ವಿಪ್ರಲಂಬಿತವಸ್ತ್ರಂ ಚ ವಿಮುಕ್ತಕವಚಾಯುಧಮ್ ।
ಸಮುದ್ಯತಮಹಾಪ್ರಾಸಂ ಯಷ್ಟಿಶೂಲಾಸಿಸಂಕುಲಮ್ ॥ ೬೮

ಪ್ರಾವರ್ತತ ಮಹಾರೌದ್ರಂ ಯುದ್ಧಂ ವಾನರರಕ್ಷಸಾಮ್ ।
ವಾನರಾನ್ ದಶ ಸಪ್ತೇತಿ ರಾಕ್ಷಸಾ ಜಘ್ನುರಾಹವೇ ॥ ೬೯

ರಾಕ್ಷಸಾನ್ ದಶ ಸಪ್ತೇತಿ ವಾನರಾಶ್ಚಾಭ್ಯಪಾತಯನ್ ।
ವಿಸ್ರಸ್ತಕೇಶವಸನಂ ವಿಧ್ವಸ್ತಕವಚಧ್ವಜಮ್ ॥ ೭೦

ಬಲಂ ರಾಕ್ಷಸಮಾಲಂಬ್ಯ ವಾನರಾಃ ಪರ್ಯವಾರಯನ್ ।
ವವೃಧೇ ತುಮುಲಂ ಯುದ್ಧಂ ರಕ್ಷಸಾಂ ವಾನರೈಃ ಸಹ ॥ ೭೧

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಸಪ್ತತಿತಮಃ ಸರ್ಗಃ



ಗಳನ್ನು ಆಡುತ್ತಿದ್ದರು (೬೭). ವಾನರರಾಕ್ಷಸರ ಆ ಘೋರಕದನದಲ್ಲಿ ಯೋಧರ ಶಸ್ತ್ರಗಳು ಸಡಲಿದವು, ಕವಚಗಳು ಹರಿದವು, ಆಯುಧಗಳು ಬಿದ್ದವು, ಘೋರವಾದ ಪ್ರಾಸಾಯುಧಗಳು ಮೇಲೆದ್ದವು, ಯಷ್ಟಿ ಶೂಲ ಖಡ್ಗಗಳು ಥಳಥಳಿಸಿದವು ! (೬೮). ಆ ಕಾಳಗದಲ್ಲಿ ರಾಕ್ಷಸರು 'ಹತ್ತು! ಏಳು!' ಎನ್ನುತ್ತ ವಾನರರನ್ನು ಕೊಂದುಹಾಕಿದರು. ಹಾಗೆಯೇ ವಾನರರೂ 'ಹತ್ತು! ಏಳು!' ಎನ್ನುತ್ತ ರಾಕ್ಷಸರನ್ನು ಸಂಹರಿಸಿದರು (೬೯). ಸೈನಿಕರ ಕೇಶಗಳು ಹರಡಿದವು. ಬಟ್ಟೆಗಳು ಹರಿದವು. ಕವಚಗಳು ಕತ್ತರಿಸಲ್ಪಟ್ಟವು. ಧ್ವಜಗಳು ಮುರಿದವು. ಕಪಿಸೈನಿಕರು ರಾಕ್ಷಸರ ಪಡೆಯನ್ನು ಸುತ್ತುಗಟ್ಟಿದರು. ಹೀಗೆ ವಾನರರಿಗೂ ರಾಕ್ಷಸರಿಗೂ ಘೋರ ಸಂಗ್ರಾಮವು ತೊಡಗಿತು (೭೦-೭೧).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತೈದನೆಯ ಸರ್ಗ



## ಷಟ್ಸಪ್ತತಿತಮಃ ಸರ್ಗಃ

### ಕಂಪನಾದಿವಧಃ

ಪ್ರವೃತ್ತೇ ಸಂಕುಲೇ ತಸ್ಮಿನ್ ಘೋರೇ ವೀರಜನಕ್ಷಯೇ ।
ಅಂಗದಃ ಕಂಪನಂ ವೀರಮಾಸಸಾದ ರಣೋತ್ಸುಕಃ ॥ ೧

ಆಹೂಯ ಸೋಽಂಗದಂ ಕೋಪಾತ್ತಾಡಯಾಮಾಸ ವೇಗಿತಃ ।
ಗದಯಾ ಕಂಪನಃ ಪೂರ್ವಂ ಸ ಚಚಾಲ ಭೃಶಾಹತಃ ॥ ೨

ಸ ಸಂಜ್ಞಾಂ ಪ್ರಾಪ್ಯ ತೇಜಸ್ವೀ ಚಿಕ್ಷೇಪ ಶಿಖರಂ ಗಿರೇಃ ।
ಅರ್ದಿತಶ್ಚ ಪ್ರಹಾರೇಣ ಕಂಪನಃ ಪತಿತೋ ಭುವಿ ॥ ೩

ತತಸ್ತು ಕಂಪನಂ ದೃಷ್ಟ್ವಾ ಶೋಣಿತಾಕ್ಷೋ ಹತಂ ರಣೇ ।
ರಥೇನಾಭ್ಯಪತತ್ ಕ್ಷಿಪ್ರಂ ತತ್ರಾಂಗದಮಭೀತವತ್ ॥ ೪

ಸೋಽಂಗದಂ ನಿಶಿತೈರ್ಬಾಣೈಸ್ತದಾ ವಿವ್ಯಾಧ ವೇಗಿತಃ ।
ಶರೀರದಾರಣೈಸ್ತೀಕ್ಷ್ಣೈಃ ಕಾಲಾಗ್ನಿಸಮವಿಗ್ರಹೈಃ ॥ ೫

### ಸರ್ಗ ೭೬

#### ಕಂಪನ, ಪ್ರಜಂಘ, ಯೂಪಾಕ್ಷ ಮತ್ತು ಕುಂಭ ಎಂಬ ರಾಕ್ಷಸರ ವಧೆ.

ಈ ಪ್ರಕಾರದಲ್ಲಿ ವೀರಜನವಿಧ್ವಂಸಕವಾದ ತುಮುಲಯುದ್ಧವು ಘೋರವಾಗಿ ನಡೆಯುತ್ತಿರಲು, ರಣೋತ್ಸುಕನಾದ ಅಂಗದನು ಕಂಪನನೆಂಬ ರಾಕ್ಷಸಯೋಧನನ್ನು ತರುಬಿದನು. ಕಂಪನನು ಅಂಗದನನ್ನೆದುರಿಸಿ ಕೋಪದಿಂದ ಗದೆಯನ್ನೆತ್ತಿ ಬಡಿಯಲು, ಆ ಹೊಡೆತಕ್ಕೆ ಅಂಗದನು ತತ್ತರಿಸಿದನು (೧-೨). ಒಂದು ಕ್ಷಣದಲ್ಲಿ ಮತ್ತೆ ಚೇತರಿಸಿಕೊಂಡು ಆ ತೇಜಸ್ವಿಯು ಗಿರಿಶಿಖರವನ್ನೆತ್ತಿ ಕಂಪನನಮೇಲೆ ಕುಕ್ಕಿದನು. ಆ ಪ್ರಹಾರಕ್ಕೆ ಸಿಲುಕಿದ ಕಂಪನನು ಹತನಾಗಿ ನೆಲದಲ್ಲಿ ಬಿದ್ದನು. ಅವನು ಹತನಾದುದನ್ನು ಕಂಡು, ಶೋಣಿತಾಕ್ಷನು ನಿರ್ಭಯವಾಗಿ ರಥವನ್ನೋಡಿಸುತ್ತ ಬಂದು ಅಂಗದನನ್ನೆದುರಿಸಿದನು (೩-೪). ಅವನು ಕಾಲಾಗ್ನಿಯಂತೆ ಕಾಣುವ ಗಾತ್ರವಿಚ್ಛೇದಿಗಳಾದ ಕೂರ್ಗಣೆಗಳನ್ನು ವೇಗದಿಂದ ಪ್ರಯೋಗಿ

ಕ್ಷುರಕ್ಷುರಪ್ರೈರ್ನಾರಾಚೈರ್ವತ್ಸದಂತೈಃ ಶಿಲೀಮುಖೈಃ ।
ಕರ್ಣಿಶಲ್ಯವಿಪಾಠೈಶ್ಚ ಬಹುಭಿರ್ನಿಶಿತೈಃ ಶರೈಃ ॥ ೬

ಅಂಗದಃ ಪ್ರತಿವಿದ್ಧಾಂಗೋ ವಾಲಿಪುತ್ರಃ ಪ್ರತಾಪವಾನ್ ।
ಧನುರಗ್ರ್ಯಂ ರಥಂ ಬಾಣಾನ್ ಮಮರ್ದ ತರಸಾ ಬಲೀ ॥ ೭

ಶೋಣಿತಾಕ್ಷಸ್ತತಃ ಕ್ಷಿಪ್ರಮಸಿಚರ್ಮ ಸಮಾದದೇ ।
ಉತ್ಪಪಾತ ದಿವಂ ಕ್ರುದ್ಧೋ ವೇಗವಾನವಿಚಾರಯನ್ ॥ ೮

ತಂ ಕ್ಷಿಪ್ರತರಮಾಪ್ಲುತ್ಯ ಪರಾಮೃಶ್ಯಾಂಗದೋ ಬಲೀ ।
ಕರೇಣ ತಸ್ಯ ತಂ ಖಡ್ಗಂ ಸಮಾಚ್ಛಿದ್ಯ ನನಾದ ಚ ॥ ೯

ತಸ್ಯಾಂ ಸಫಲಕೇ ಖಡ್ಗಂ ನಿಜಘಾನ ತತೋಽಂಗದಃ ।
ಯಜ್ಞೋಪವೀತವಚ್ಛೈನಂ ಚಿಚ್ಛೇದ ಕಪಿಕುಂಜರಃ ॥ ೧೦

---

ಸುತ್ತ, ಕ್ಷುರ, ಕ್ಷುರಪ್ರ, ನಾರಾಚ, ವತ್ಸದಂತ, ಕರ್ಣಿ, ಶಲ್ಯ, ವಿಪಾಠ *– ಮುಂತಾದ ವಿವಿಧ ಶರಗಳನ್ನು ಬಳಸಿದನು. ಪ್ರತಾಪಶಾಲಿಯಾದ ವಾಲಿ ಪುತ್ರನು ಆ ಬಾಣಗಳ ಹೊಡೆತದಿಂದ ರೊಚ್ಚಿಗೆದ್ದು, ಶೋಣಿತಾಕ್ಷನ ಧನುಸ್ಸನ್ನು ಮುರಿದು, ರಥವನ್ನು ಪುಡಿಮಾಡಿ, ಅವನ ಬಾಣಗಳನ್ನು ಚೂರು ಚೂರು ಮಾಡಿದನು (೫–೭). ಆಗ ಶೋಣಿತಾಕ್ಷನು ರೋಷಾವಿಷ್ಟನಾಗಿ, ಕತ್ತಿಯನ್ನೂ ಗುರಾಣಿಯನ್ನೂ ಹಿಡಿದು ಹಿಂದೆ ಮುಂದೆ ನೋಡದೆ ರಥದಿಂದ ಆಕಾಶಕ್ಕೆ ನೆಗೆದನು. ಬಲಾಢ್ಯನಾದ ಅಂಗದನು ಅತಿವೇಗದಿಂದ ತಾನೂ ಮೇಲಕ್ಕೆ ನೆಗೆದು, ಶೋಣಿತಾಕ್ಷನ ಕತ್ತಿಯನ್ನು ಬಲಾತ್ಕಾರದಿಂದ ಕಿತ್ತುಕೊಂಡು ಸಿಂಹನಾದಮಾಡಿದನು (೮–೯). ಮರುಕ್ಷಣದಲ್ಲಿಯೇ ಆ ಕಪಿಕುಂಜರನು ಶೋಣಿತಾಕ್ಷನ (ಎಡ ಹೆಗಲಿನ

---

* ಇವು ವಿವಿಧ ಶರಭೇದಗಳು : ಕ್ಷುರ = ಕ್ಷೌರಿಕನ ಕತ್ತಿಯಂತಿರುವ ಅಲಗುಳ್ಳ ಬಾಣ, ಕ್ಷುರಪ್ರ = ಅರ್ಧಚಂದ್ರಾಕೃತಿಯಾದದ್ದು, ನಾರಾಚ = ಉಕ್ಕಿನ ಚುಚ್ಚು ಬಾಣ, ವತ್ಸದಂತ = ಕರುವಿನ ಹಲ್ಲಿನಂತಿರುವ ಬಾಣ, ಶಿಲೀಮುಖ = ಹಕ್ಕಿಯ ರೆಕ್ಕೆಯಂತೆ ಅಗ್ರಭಾಗವುಳ್ಳದ್ದು, ಕರ್ಣಿ = ಎರಡು ಪಾರ್ಶ್ವಗಳಲ್ಲಿ ಕಿವಿಯಂತಹ ಆಕೃತಿಯುಳ್ಳದ್ದು, ಶಲ್ಯ = ಉಕ್ಕಿನ ಅರ್ಧಭಾಗವುಳ್ಳದ್ದು, ವಿಪಾಠ = ಕರವೀರದ ಎಲೆಯಂತೆ ಅಗ್ರಭಾಗವುಳ್ಳ ಬಾಣ.

ತಂ ಪ್ರಗೃಹ್ಯ ಮಹಾಖಡ್ಗಂ ವಿನದ್ಯ ಚ ಪುನಃ ಪುನಃ ।
ವಾಲಿಪುತ್ರೋಽಭಿದುದ್ರಾವ ರಣಶೀರ್ಷೇ ಪರಾನರೀನ್ ॥ ೧೧

ಆಯಸೀಂ ತು ಗದಾಂ ವೀರಃ ಪ್ರಗೃಹ್ಯ ಕನಕಾಂಗದಃ ।
ಶೋಣಿತಾಕ್ಷಃ ಸಮಾವಿಧ್ಯ ತಮೇವಾನುಪಪಾತ ಹ ॥ ೧೨

ಪ್ರಜಂಘಸಹಿತೋ ವೀರೋ ಯೂಪಾಕ್ಷಸ್ತು ತತೋ ಬಲೀ ।
ರಥೇನಾಭಿಯಯೌ ಕ್ರುದ್ಧೋ ವಾಲಿಪುತ್ರಂ ಮಹಾಬಲಮ್ ॥ ೧೩

ತಯೋರ್ಮಧ್ಯೇ ಕಪಿಶ್ರೇಷ್ಠಃ ಶೋಣಿತಾಕ್ಷಪ್ರಜಂಘಯೋಃ ।
ವಿಶಾಖಯೋರ್ಮಧ್ಯಗತಃ ಪೂರ್ಣಚಂದ್ರ ಇವಾಭವತ್ ॥ ೧೪

ಅಂಗದಂ ಪರಿರಕ್ಷಂತೌ ಮೈಂದೋ ದ್ವಿವಿದ ಏವ ಚ ।
ತಸ್ಯ ತಸ್ಥತುರಭ್ಯಾಶೇ ಪರಸ್ಪರದಿದೃಕ್ಷಯಾ ॥ ೧೫

ಅಭಿಪೇತುರ್ಮಹಾಕಾಯಾಃ ಪ್ರತಿಯತ್ತಾ ಮಹಾಬಲಾಃ ।
ರಾಕ್ಷಸಾ ವಾನರಾನ್ ರೋಷಾದಸಿಚರ್ಮಗದಾಧರಾಃ ॥ ೧೬

---

ಮೇಲೆ) ಖಡ್ಗವನ್ನು ಹೊಯ್ದು, ಆ ರಾಕ್ಷಸನನ್ನು ಜನಿವಾರದ ಆಕೃತಿಯಲ್ಲಿ ಸೀಳಿದನು (ಆದರೆ ಶೋಣಿತಾಕ್ಷನು ಸಾಯಲಿಲ್ಲ) (೧೦). ಆಮೇಲೆ ಆ ವಾಲಿಪುತ್ರನು ಅದೇ ಖಡ್ಗವನ್ನು ಝಳಪಿಸುತ್ತ ಮತ್ತೆ ಮತ್ತೆ ಗರ್ಜಿಸುತ್ತ ರಣರಂಗದಲ್ಲಿದ್ದ ಇತರ ಶತ್ರುಗಳನ್ನು ಎದುರಿಸಲು ಹೊರಟನು. ಅಷ್ಟರಲ್ಲಿ ಶೋಣಿತಾಕ್ಷನು ಕಬ್ಬಿಣದ ಗದೆಯನ್ನು ಹಿಡಿದು ಅಂಗದನನ್ನು ಅಟ್ಟಿಸಿಕೊಂಡು ಹೋದನು (೧೧-೧೨). ಆಗ ಯೂಪಾಕ್ಷನೆಂಬ ರಾಕ್ಷಸನು ರಥದಲ್ಲಿ ಕುಳಿತು ಅಂಗದನ ಕಡೆಗೆ ಧಾವಿಸುತ್ತ ಬಂದನು. ಇನ್ನೊಂದು ಕಡೆಯಿಂದ ಪ್ರಜಂಘನೂ ನುಗ್ಗಿದನು. ಹಿಂದೆ ಶೋಣಿತಾಕ್ಷ, ಮುಂದೆ ಪ್ರಜಂಘ-ಇವರೀರ್ವರ ಮಧ್ಯದಲ್ಲಿದ್ದ ಆ ಕಪಿಶ್ರೇಷ್ಠನು ವಿಶಾಖಾ ನಕ್ಷತ್ರಗಳ* ಮಧ್ಯದಲ್ಲಿರುವ ಚಂದ್ರಮನಂತೆ ಕಂಗೊಳಿಸಿದನು (೧೩-೧೪). ಅಷ್ಟರಲ್ಲಿ ಮೈಂದದ್ವಿವಿದರೆಂಬ ಕಪಿಯೂಥಪರು ಅಂಗದನ ನೆರವಿಗಾಗಿ ನುಗ್ಗಿಬಂದು, ತಾವು ಯಾವ ರಾಕ್ಷಸನನ್ನೆದುರಿಸಬೇಕೆಂದು ನೋಡುತ್ತ ನಿಂತರು! ಆಗ ಮಹಾಕಾಯರೂ ಮಹಾಬಲರೂ ಆದ ಯೂಪಾಕ್ಷಾದಿ

---

* ವಿಶಾಖಾನಕ್ಷತ್ರದಲ್ಲಿ ಎರಡು ತಾರೆಗಳಿರುತ್ತವೆ.

ತ್ರಯಾಣಾಂ ವಾನರೇಂದ್ರಾಣಾಂ ತ್ರಿಭೀ ರಾಕ್ಷಸಪುಂಗವೈಃ ।
ಸಂಸಕ್ತಾನಾಂ ಮಹದ್ಯುದ್ಧಮಭವದ್ರೋಮಹರ್ಷಣಮ್ ॥ ೧೭

ತೇ ತು ವೃಕ್ಷಾನ್ ಸಮಾದಾಯ ಸಂಪ್ರಚಿಕ್ಷಿಪುರಾಹವೇ ।
ಖಡ್ಗೇನ ಪ್ರತಿಚಿಚ್ಛೇದ ತಾನ್ ಪ್ರಜಂಘೋ ಮಹಾಬಲಃ ॥ ೧೮

ರಥಾನಶ್ವಾನ್ ದ್ರುಮೈಃ ಶೈಲೈಸ್ತೇ ಪ್ರಚಿಕ್ಷಿಪುರಾಹವೇ ।
ಶರೌಘೈಃ ಪ್ರತಿಚಿಚ್ಛೇದ ತಾನ್ ಯೂಪಾಕ್ಷೋ ನಿಶಾಚರಃ ॥ ೧೯

ಸೃಷ್ಟಾನ್ ದ್ವಿವಿದಮೈಂದಾಭ್ಯಾಂ ದ್ರುಮಾನುತ್ಪಾಟ್ಯ ವೀರ್ಯವಾನ್
ಬಭಂಜ ಗದಯಾ ಮಧ್ಯೇ ಶೋಣಿತಾಕ್ಷಃ ಪ್ರತಾಪವಾನ್ ॥ ೨೦

ಉದ್ಯಮ್ಯ ವಿಪುಲಂ ಖಡ್ಗಂ ಪರಮರ್ಮನಿಕೃಂತನಮ್ ।
ಪ್ರಜಂಘೋ ವಾಲಿಪುತ್ರಾಯ ಅಭಿದುದ್ರಾವ ವೇಗಿತಃ ॥ ೨೧

ತಮಭ್ಯಾಶಗತಂ ದೃಷ್ಟ್ವಾ ವಾನರೇಂದ್ರೋ ಮಹಾಬಲಃ ।
ಆಜಘಾನಾಶ್ವಕರ್ಣೇನ ದ್ರುಮೇಣಾತಿಬಲಸ್ತದಾ ॥ ೨೨

---

ರಾಕ್ಷಸರು ಕತ್ತಿ, ಗುರಾಣಿ, ಗದೆಗಳನ್ನು ಹಿಡಿದು ಹೋರಾಡಲು ಬಂದರು (೧೫-೧೬). ಇತ್ತ ಅಂಗದಾದಿ ವಾನರೇಂದ್ರರು ಹೋರಾಟಕ್ಕೆ ಸಜ್ಜಾಗಿ ನಿಂತಿದ್ದರು. ಈ ಮೂವರು ಕಪಿಯೂಥಪರಿಗೂ ಆ ಮೂವರು ರಾಕ್ಷಸ ಯೋಧರಿಗೂ ರೋಮಾಂಚಕರವಾದ ಘೋರಯುದ್ಧವು ಸಮನಿಸಿತು(೧೭). ವಾನರರು ವೃಕ್ಷಗಳನ್ನು ಕಿತ್ತು ಬೀಸಿಹೊಡೆಯಲು, ಪ್ರಜಂಘನು ಅವುಗಳನ್ನು ಖಡ್ಗದಿಂದ ಕತ್ತರಿಸಿದನು. ಮರಗಳನ್ನೂ ಶೈಲಗಳನ್ನೂ ವಾನರರು ತನ್ನ ರಥಾಶ್ವಗಳಮೇಲೆ ಬೀಸಲು, ಯೂಪಾಕ್ಷನು ಶರಜಾಲಗಳಿಂದ ಅವನ್ನು ತುಂಡರಿಸಿದನು (೧೮-೧೯). ಆಗ ಮೈಂದದ್ವಿವಿದರು ತರುಗಳನ್ನು ಕಿತ್ತು ಶೋಣಿತಾಕ್ಷನಮೇಲೆಸೆಯಲು, ಆತನು ಗದೆಯಿಂದ ಅವುಗಳನ್ನು ಭಗ್ನಗೊಳಿಸಿದನು. ಆಮೇಲೆ ಪ್ರಜಂಘನು ಶತ್ರುಗಳನ್ನು ಸೀಳಿಬಿಸುಡುವ ದೊಡ್ಡ ಖಡ್ಗವನ್ನು ಹಿಡಿದು, ರಭಸದಿಂದ ಅಂಗದನಮೇಲೆ ನುಗ್ಗಿದನು (೨೦-೨೧) ಅವನು ತನ್ನ ಸಮೀಪಕ್ಕೆ ಬಂದೊಡನೆಯೇ ವಿಪುಲಪರಾಕ್ರಮಿಯಾದ ಆ ವಾನರೋತ್ತಮನು ಅಶ್ವಕರ್ಣವೃಕ್ಷದಿಂದ ಪ್ರಜಂಘನನ್ನು

ಬಾಹುಂ ಚಾಸ್ಯ ಸನಿಸ್ತ್ರಿಂಶಮಾಜಘಾನ ಸ ಮುಷ್ಟಿನಾ ।
ವಾಲಿಪುತ್ರಸ್ಯ ಘಾತೇನ ಸ ಪಪಾತ ಕ್ಷಿತಾವಸಿಃ ॥ ೨೩

ತಂ ದೃಷ್ಟ್ವಾ ಪತಿತಂ ಭೂಮೌ ಖಡ್ಗಮುತ್ಪಲಸಂನಿಭಮ್ ।
ಮುಷ್ಟಿಂ ಸಂವರ್ತಯಾಮಾಸ ವಜ್ರಕಲ್ಪಂ ಮಹಾಬಲಃ ॥ ೨೪

ಲಲಾಟೇ ಸ ಮಹಾವೀರ್ಯಮಂಗದಂ ವಾನರರ್ಷಭಮ್ ।
ಆಜಘಾನ ಮಹಾತೇಜಾಃ ಸ ಮುಹೂರ್ತಂ ಚಚಾಲ ಹ ॥ ೨೫

ಸ ಸಂಜ್ಞಾಂ ಪ್ರಾಪ್ಯ ತೇಜಸ್ವೀ ವಾಲಿಪುತ್ರಃ ಪ್ರತಾಪವಾನ್ ।
ಪ್ರಜಂಘಸ್ಯ ಶಿರಃ ಕಾಯಾತ್ ಖಡ್ಗೇನಾಪಾತಯತ್ ಕ್ಷಿತೌ ॥ ೨೬

ಸ ಯೂಪಾಕ್ಷೋಽಶ್ರುಪೂರ್ಣಾಕ್ಷಃ ಪಿತೃವ್ಯೇ ನಿಹತೇ ರಣೇ ।
ಅವರುಹ್ಯ ರಥಾತ್ ಕ್ಷಿಪ್ರಂ ಕ್ಷೀಣೇಷುಃ ಖಡ್ಗಮಾದದೇ ॥ ೨೭

ತಮಾಪತಂತಂ ಸಂಪ್ರೇಕ್ಷ್ಯ ಯೂಪಾಕ್ಷಂ ದ್ವಿವಿದಸ್ತ್ವರನ್ ।
ಆಜಘಾನೋರಸಿ ಕ್ರುದ್ಧೋ ಜಗ್ರಾಹ ಚ ಬಲಾದ್ಬಲೀ ॥ ೨೮

---

ಬಡಿದು, ಮುಷ್ಟಿಯಿಂದ ಅವನ ಬಲದೋಳನ್ನು ಗುದ್ದಿದನು. ಆ ಗುದ್ದಿನ ಬಿರುಸಿಗೆ ಪ್ರಜಂಘನ ಕೈಯಿಂದ ಕತ್ತಿಯು ಕೆಳಗೆ ಬಿದ್ದಿತು (೨೨-೨೩). ನೀಲೋತ್ಪಲದಳದಂತೆ ಥಳಥಳಿಸುವ ತನ್ನ ಖಡ್ಗವು ಕೆಳಗೆ ಬಿದ್ದುದನ್ನು ಕಂಡು, ಶೂರಾಗ್ರಗಣ್ಯನಾದ ಪ್ರಜಂಘನು ವಜ್ರಕಲ್ಪವಾದ ಮುಷ್ಟಿಯನ್ನು ಬಿಗಿದು ಅಂಗದನ ಹಣೆಯಮೇಲೆ ಗುದ್ದಲು, ಅಂಗದನು ಒಂದು ಕ್ಷಣಕಾಲದವರೆಗೆ ತತ್ತರಿಸಿ ತೂಗಾಡಿದನು (೨೪-೨೫). ಅನಂತರ ತೇಜಸ್ವಿಯಾದ ವಾಲಿಪುತ್ರನು ಚೇತರಿಸಿಕೊಂಡು, ನೆಲದಮೇಲಿದ್ದ ಖಡ್ಗವನ್ನೆತ್ತಿ ಹೊಯ್ದು, ಪ್ರಜಂಘನ ತಲೆಯನ್ನು ಕಡಿದುರುಳಿಸಿದನು. ಹೀಗೆ ಯೂಪಾಕ್ಷನ ಚಿಕ್ಕಪ್ಪನಾದ ಪ್ರಜಂಘನು ರಣದಲ್ಲಿ ಹತನಾಗಲು, ಅದನ್ನು ವೀಕ್ಷಿಸಿ ಯೂಪಾಕ್ಷನ ಕಣ್ಣುಗಳಲ್ಲಿ ನೀರು ತುಳುಕಿತು. ಅವನಲ್ಲಿದ್ದ ಶರಗಳು ಮುಗಿದುಹೋಗಿದ್ದವು. ಆದ್ದರಿಂದ ಯೂಪಾಕ್ಷನು ಖಡ್ಗವನ್ನು ಹಿಡಿದು ರಥದಿಂದ ಧುಮುಕಿ ಮುನ್ನುಗ್ಗಿದನು (೨೬-೨೭). ಅವನು ಮುನ್ನುಗ್ಗುವುದನ್ನು ಕಂಡು ದ್ವಿವಿದನು ರೋಷಾವಿಷ್ಟನಾಗಿ ಧಾವಿಸಿ,

ಗೃಹೀತಂ ಭ್ರಾತರಂ ದೃಷ್ಟ್ವಾ ಶೋಣಿತಾಕ್ಷೋ ಮಹಾಬಲಃ ।
ಆಜಘಾನ ಗದಾಗ್ರೇಣ ವಕ್ಷಸಿ ದ್ವಿವಿದಂ ತತಃ ॥ ೨೯

ಸ ಗದಾಭಿಹತಸ್ತೇನ ಚಚಾಲ ಚ ಮಹಾಬಲಃ ।
ಉದ್ಯತಾಂ ಚ ಪುನಸ್ತಸ್ಯ ಜಹಾರ ದ್ವಿವಿದೋ ಗದಾಮ್ ॥ ೩೦

ಏತಸ್ಮಿನ್ನಂತರೇ ವೀರೋ ಮೈಂದೋ ವಾನರಯೂಥಪಃ ।
ಯೂಪಾಕ್ಷಂ ತಾಡಯಾಮಾಸ ತಲೇನೋರಸಿ ವೀರ್ಯವಾನ್ ॥ ೩೧

ತೌ ಶೋಣಿತಾಕ್ಷಯೂಪಾಕ್ಷೌ ಪ್ಲವಂಗಾಭ್ಯಾಂ ತರಸ್ವಿನೌ ।
ಚಕ್ರತುಃ ಸಮರೇ ತೀವ್ರಮಾಕರ್ಷೋತ್ಪಾಟನಂ ಭೃಶಮ್ ॥ ೩೨

ದ್ವಿವಿದಃ ಶೋಣಿತಾಕ್ಷಂ ತು ವಿದದಾರ ನಖೈರ್ಮುಖೇ ।
ನಿಷ್ಪಿಪೇಷ ಚ ವೇಗೇನ ಕ್ಷಿತಾವಾವಿಧ್ಯ ವೀರ್ಯವಾನ್ ॥ ೩೩

ಯೂಪಾಕ್ಷಮಪಿ ಸಂಕ್ರುದ್ಧೋ ಮೈಂದೋ ವಾನರಯೂಥಪಃ ।
ಪೀಡಯಾಮಾಸ ಬಾಹುಭ್ಯಾಂ ಸ ಪಪಾತ ಹತಃ ಕ್ಷಿತೌ ॥ ೩೪

---

ಯೂಪಾಕ್ಷನ ಎದೆಯಮೇಲೆ ಗುದ್ದಿ ಅವನನ್ನು ಅಮುಕಿ ಹಿಡಿದನು. ಆಗ ಶೋಣಿತಾಕ್ಷನು ತನ್ನ ಸೋದರನ ಅವಸ್ಥೆಯನ್ನು ವೀಕ್ಷಿಸಿ ಮುನ್ನುಗ್ಗಿ, ದ್ವಿವಿದನ ಎದೆಯನ್ನು ಗದೆಯಿಂದ ಅಪ್ಪಳಿಸಿದನು (೨೮–೨೯). ಆ ಹೊಡೆತಕ್ಕೆ ದ್ವಿವಿದನು ತತ್ತರಿಸಿ ಹಿಂದೆ ಸರಿದನು. ಮತ್ತೆ ಶೋಣಿತಾಕ್ಷನು ಆತನನ್ನು ಅಪ್ಪಳಿಸಬೇಕೆಂದು ಗದೆಯನ್ನೆತ್ತಲು, ದ್ವಿವಿದನು ಆ ಗದೆಯನ್ನು ಬಲಾತ್ಕಾರದಿಂದ ಕಿತ್ತುಕೊಂಡನು. ಈ ಸಮಯದಲ್ಲಿ ಕಪಿಯೂಥಪನಾದ ಮೈಂದನು ಯೂಪಾಕ್ಷನ ಎದೆಯಮೇಲೆ ಅಂಗೈಯಿಂದ ಅಪ್ಪಳಿಸಿದನು (೩೦–೩೧). ಈ ರೀತಿಯಲ್ಲಿ ಶೋಣಿತಾಕ್ಷನಿಗೂ ದ್ವಿವಿದನಿಗೂ, ಯೂಪಾಕ್ಷನಿಗೂ ಮೈಂದನಿಗೂ ಭೀಷಣವಾದ ಕಾಳಗವು ನಡೆಯಿತು. ಕಡೆಯಲ್ಲಿ ದ್ವಿವಿದನು ಶೋಣಿತಾಕ್ಷನ ಮುಖವನ್ನು ಉಗುರುಗಳಿಂದ ಪರಚಿ, ಅವನನ್ನು ಮೇಲೆತ್ತಿ ಗಿರ್ರನೆ ತಿರುಗಿಸಿ ನೆಲಕ್ಕೆ ಬಡಿದು ಕೊಂದುಹಾಕಿದನು (೩೨–೩೩). ಇತ್ತ ರೋಷೋದ್ರಿಕ್ತನಾದ ಮೈಂದನು ಯೂಪಾಕ್ಷನನ್ನು ಎರಡು ತೋಳುಗಳಿಂದಲೂ ಬಿಗಿಹಿಡಿದು ಹಿಸುಕಿಬಿಟ್ಟನು.

ಹತಪ್ರವೀರಾ ವ್ಯಥಿತಾ ರಾಕ್ಷಸೇಂದ್ರಚಮೂಸ್ತದಾ ।
ಜಗಮಾಭಿಮುಖೀ ಸಾ ತು ಕುಂಭಕರ್ಣಸುತೋ ಯತಃ ॥ ೩೫

ಆಪತಂತೀಂ ಚ ವೇಗೇನ ಕುಂಭಸ್ತಾಂ ಸಾಂತ್ವಯಚ್ಚಮೂಮ್ ।
ಅಥೋತ್ಸೃಷ್ಟಂ ಮಹಾವೀರ್ಯೈರ್ಲಬ್ಧಲಕ್ಷ್ಯೈಃ ಪ್ಲವಂಗಮೈಃ ॥ ೩೬

ನಿಪಾತಿತಮಹಾವೀರಾಂ ದೃಷ್ಟ್ವಾ ರಕ್ಷಶ್ಚಮೂಂ ತತಃ ।
ಕುಂಭಃ ಪ್ರಚಕ್ರೇ ತೇಜಸ್ವೀ ರಣೇ ಕರ್ಮ ಸುದುಷ್ಕರಮ್ ॥ ೩೭

ಸ ಧನುರ್ಧನ್ವಿನಾಂ ಶ್ರೇಷ್ಠಃ ಪ್ರಗೃಹ್ಯ ಸುಸಮಾಹಿತಃ ।
ಮುಮೋಚಾಶೀವಿಷಪ್ರಖ್ಯಾನ್ ಶರಾನ್ ದೇಹವಿದಾರಣಾನ್ ॥ ೩೮

ತಸ್ಯ ತಚ್ಛುಶುಭೇ ಭೂಯಃ ಸಶರಂ ಧನುರುತ್ತಮಮ್ ।
ವಿದ್ಯುದೈರಾವತಾರ್ಚಿಷ್ಮದ್ದ್ವಿತೀಯೇಂದ್ರಧನುರ್ಯಥಾ ॥ ೩೯

---

ಆ ರಾಕ್ಷಸನು ಸತ್ತುಬಿದ್ದನು. ಹೀಗೆ ರಾಕ್ಷಸನಾಯಕರು ಹತರಾಗಲು, ಖಿನ್ನರಾದ ರಾಕ್ಷಸಭಟರು ಕುಂಭಕರ್ಣಸುತನಾದ ಕುಂಭನಿರುವ ಕಡೆಗೆ ಓಡಿಹೋದರು (೩೪-೩೫). ಹೆದರಿ ಓಡಿಬಂದ ಸೇನೆಯನ್ನು ಕುಂಭನು ಸಂತೈಸಿ, ಶೂರರಾದ ವಾನರವೀರರಿಂದ ಪರಾಕ್ರಮಿಗಳಾದ ರಾಕ್ಷಸರು ಹತರಾದುದನ್ನು ಕಂಡನು. ಅನಂತರ ತೇಜಸ್ವಿಯಾದ ಕುಂಭನು ರಣರಂಗದಲ್ಲಿ ಅದ್ಭುತವಾದ ಸಾಹಸವನ್ನು ಮೆರೆಸಲಾರಂಭಿಸಿದನು (೩೬-೩೭). ಬಿಲ್ಲಾಳುಗಳಲ್ಲಿ ಅಗ್ರಗಣ್ಯನಾದ ಕುಂಭನು ತನ್ನ ಬಿಲ್ಲನ್ನೆತ್ತಿ ಹಿಡಿದು ವೈರಿಶರೀರಗಳನ್ನು ಕೊರೆಯುವ ಸರ್ಪಸದೃಶಗಳಾದ ಕ್ರೂರಾಸ್ತ್ರಗಳನ್ನು ಜಾಗರೂಕತೆಯಿಂದ ಪ್ರಯೋಗಿಸತೊಡಗಿದನು (೩೮). ಸರಳನ್ನಳವಡಿಸಿ ಹಿಡಿದಿದ್ದ ಕುಂಭನ ಧನುಸ್ಸು ವಿದ್ಯುತ್ ಮತ್ತು ಐರಾವತಗಳ* ಶೋಭೆಯಿಂದ ಕೂಡಿದ ಇಂದ್ರನ ಮತ್ತೊಂದು ಧನುಸ್ಸೋ ಎಂಬಂತೆ ಗೋಚರಿಸು

---

* ಐರಾವತ = ನೆಟ್ಟಗೆ ಕೆಂಪಾಗಿರುವ ಕಾಮನಬಿಲ್ಲು; ಕೆಂಪುಕಾಂತಿಯು ಮಿಂಚು; ಇಂದ್ರನ ಆನೆ. ಇಲ್ಲಿ ಧನುಸ್ಸಿನ ಹೆದೆಗೂ ವಿದ್ಯುತ್ತಿಗೂ ಹೋಲಿಕೆ; ಸರಳಿಗೂ ಐರಾವತಕ್ಕೂ ಹೋಲಿಕೆ. ಐರಾವತವೆಂದರೆ ಇಂದ್ರನ ಆನೆ ಎಂಬ ಅರ್ಥವಾದರೆ, ಕುಂಭನಿಗೂ ಐರಾವತಕ್ಕೂ ಹೋಲಿಕೆ. ಆ ಪಕ್ಷದಲ್ಲಿ ಸರಳಿಗೂ ವಿದ್ಯುತ್ತಿಗೂ ಹೋಲಿಕೆ.

ಆಕರ್ಣಾಕೃಷ್ಟಮುಕ್ತೇನ ಜಘಾನ ದ್ವಿವಿದಂ ತದಾ ।
ತೇನ ಹಾಟಕಪುಂಖೇನ ಪತ್ರಿಣಾ ಪತ್ರವಾಸಸಾ ॥ ೪೦

ಸಹಸಾಭಿಹತಸ್ತೇನ ವಿಪ್ರಮುಕ್ತಪದಃ ಸ್ಫುರನ್ ।
ನಿಪಪಾತಾದ್ರಿಕೂಟಾಭೋ ವಿಹ್ವಲಃ ಪ್ಲವಗೋತ್ತಮಃ ॥ ೪೧

ಮೈಂದಸ್ತು ಭ್ರಾತರಂ ದೃಷ್ಟ್ವಾ ಭಗ್ನಂ ತತ್ರ ಮಹಾಹವೇ ।
ಅಭಿದುದ್ರಾವ ವೇಗೇನ ಪ್ರಗೃಹ್ಯ ಮಹತೀಂ ಶಿಲಾಮ್ ॥ ೪೨

ತಾಂ ಶಿಲಾಂ ತು ಪ್ರಚಿಕ್ಷೇಪ ರಾಕ್ಷಸಾಯ ಮಹಾಬಲಃ ।
ಬಿಭೇದ ತಾಂ ಶಿಲಾಂ ಕುಂಭಃ ಪ್ರಸನ್ನೈಃ ಪಂಚಭಿಃ ಶರೈಃ ॥ ೪೩

ಸಂಧಾಯ ಚಾನ್ಯಂ ಸುಮುಖಂ ಶರಮಾಶೀವಿಷೋಪಮಮ್ ।
ಆಜಘಾನ ಮಹಾತೇಜಾ ವಕ್ಷಸಿ ದ್ವಿವಿದಾಗ್ರಜಮ್ ॥ ೪೪

ಸ ತು ತೇನ ಪ್ರಹಾರೇಣ ಮೈಂದೋ ವಾನರಯೂಥಪಃ ।
ಮರ್ಮಣ್ಯಭಿಹತಸ್ತೇನ ಪಪಾತ ಭುವಿ ಮೂರ್ಛಿತಃ ॥ ೪೫

ಅಂಗದೋ ಮಾತುಲೌ ದೃಷ್ಟ್ವಾ ಪತಿತೌ ತು ಮಹಾಬಲೌ ।
ಅಭಿದುದ್ರಾವ ವೇಗೇನ ಕುಂಭಮುದ್ಯತಕಾರ್ಮುಕಮ್ ॥ ೪೬

---

ತ್ತಿತ್ತು (೩೯). ಆ ಕುಂಭನು ಸುವರ್ಣಪುಂಖಾಂಕಿತವಾಗಿ ಗರಿಗಟ್ಟಿದ ಸರಳನ್ನು ಹಿರಿದು, ಕಿವಿಯವರೆಗೆ ಸೆಳೆದು, ಗುರಿಯಿಟ್ಟು ದ್ವಿವಿದನಿಗೆ ಬಿಗಿದನು. ಸರ್ರನೆ ಬಂದು ತಾಗಿದ ಸರಳಿನ ಬಿರುಸಿಗೆ ಗಿರಿಶಿಖರಾಕಾರನಾದ ದ್ವಿವಿದನು ತತ್ತರಿಸಿ ತೇಲುಹೆಜ್ಜೆಯಿಡುತ್ತ ಮೈಮರೆತು ಬಿದ್ದನು (೪೦-೪೧). ತನ್ನ ತಮ್ಮನು ಭಗ್ನನಾಗಿ ಬಿದ್ದುದನ್ನು ಕಂಡು ಮೈಂದನು ದೊಡ್ಡ ಬಂಡೆಯನ್ನೆತ್ತಿಕೊಂಡು ವೇಗದಿಂದ ಕುಂಭನ ಕಡೆಗೆ ಧಾವಿಸಿ, ಅದನ್ನು ಆ ರಾಕ್ಷಸನಮೇಲೆ ಬೀಸಿದನು. ಕುಂಭನು ಮಿರುಮಿರುಗುವ ಐದು ಬಾಣಗಳಿಂದ ಆ ಬಂಡೆಯನ್ನು ಪುಡಿಪುಡಿಮಾಡಿದನು (೪೨-೪೩). ಶೂರಾಗ್ರೇಸರನಾದ ಕುಂಭನು ಸರ್ಪಸದೃಶವಾದ ಇನ್ನೊಂದು ನಿಶಿತಾಸ್ತ್ರವನ್ನು ಹೂಡಿ, ದ್ವಿವಿದನ ಅಣ್ಣನಾದ ಆ ಮೈಂದನ ಎದೆಗೆ ಹೊಡೆದನು. ಕಪಿಯೂಥಪನಾದ ಮೈಂದನು ಮರ್ಮಸ್ಥಳದಲ್ಲಿ ಅಭಿಹತನಾಗಿ ಎಚ್ಚರದಪ್ಪಿ ನೆಲದಲ್ಲಿ ಬಿದ್ದನು (೪೪-೪೫). ಬಲಾಢ್ಯರಾದ ಸೋದರಮಾವಂದಿರಿಬ್ಬರೂ ಬಿದ್ದುದು

ತಮಾಪತಂತಂ ವಿವ್ಯಾಧ ಕುಂಭಃ ಪಂಚಭಿರಾಯಸೈಃ ।
ತ್ರಿಭಿಶ್ಚಾನ್ಯೈಃ ಶಿತೈರ್ಬಾಣೈರ್ಮಾತಂಗಮಿವ ತೋಮರೈಃ ॥ ೪೭

ಸೋಽಂಗದಂ ವಿವಿಧೈರ್ಬಾಣೈಃ ಕುಂಭೋ ವಿವ್ಯಾಧ ವೀರ್ಯವಾನ್ ।
ಅಕುಂಠಧಾರೈರ್ನಿಶಿತೈಸ್ತೀಕ್ಷ್ಣೈಃ ಕನಕಭೂಷಣೈಃ ॥ ೪೮

ಅಂಗದಃ ಪ್ರತಿವಿದ್ಧಾಂಗೋ ವಾಲಿಪುತ್ರೋ ನ ಕಂಪತೇ ।
ಶಿಲಾಪಾದಪವರ್ಷಾಣಿ ತಸ್ಯ ಮೂರ್ಧ್ನಿ ವವರ್ಷ ಹ ॥ ೪೯

ಸ ಪ್ರಚಿಚ್ಛೇದ ತಾನ್ ಸರ್ವಾನ್ ಬಿಭೇದ ಚ ಪುನಃ ಶಿಲಾಃ ।
ಕುಂಭಕರ್ಣಾತ್ಮಜಃ ಶ್ರೀಮಾನ್ ವಾಲಿಪುತ್ರಸಮೀರಿತಾನ್ ॥ ೫೦

ಆಪತಂತಂ ಚ ಸಂಪ್ರೇಕ್ಷ್ಯ ಕುಂಭೋ ವಾನರಯೂಥಪಮ್ ।
ಭ್ರುವೋರ್ವಿವ್ಯಾಧ ಬಾಣಾಭ್ಯಾಮುಲ್ಕಾಭ್ಯಾಮಿವ ಕುಂಜರಮ್ ॥

ತಸ್ಯ ಸುಸ್ರಾವ ರುಧಿರಂ ಪಿಹಿತೇ ಚಾಸ್ಯ ಲೋಚನೇ ।
ಅಂಗದಃ ಪಾಣಿನಾ ನೇತ್ರೇ ಪಿಧಾಯ ರುಧಿರೋಕ್ಷಿತೇ ॥ ೫೨

---

ಅಂಗದನಿಗೆ ಗೋಚರಿಸಿತು. ಕೂಡಲೆ ಆತನು ಧನುರ್ಧಾರಿಯಾದ ಕುಂಭನನ್ನು ಆಕ್ರಮಿಸಲು ತ್ವರೆಯಿಂದ ಬಂದನು (೪೬). ಅವನು ಬರುತ್ತಿರುವಾಗಲೇ ಕುಂಭನು ಐದು ಉಕ್ಕಿನ ಬಾಣಗಳನ್ನು ಪ್ರಯೋಗಿಸಿ, ಮತ್ತೆ ಹರಿತವಾದ ಮೂರು ಬಾಣಗಳಿಂದ, ಆನೆಯನ್ನು ಅಂಕುಶಗಳಿಂದ ಪ್ರಹರಿಸುವಂತೆ, ಅಂಗದನನ್ನು ಪ್ರಹರಿಸಿದನು (೪೭). ಅಲ್ಲದೆ ವೀರನಾದ ಆ ಕುಂಭನು ಕ್ರೂರವೂ ಅಕುಂಠಿತವೂ ಕನಕಭೂಷಿತವೂ ಆದ ವಿವಿಧಾಸ್ತ್ರಗಳನ್ನು ಅಂಗದನಿಗೆ ಗುರಿಯಿಟ್ಟು ಹೊಡೆದನು. ಹೀಗೆ ಶರಪರಂಪರೆಗಳು ಬಂದು ತಾಗಿದರೂ ವಾಲಿಪುತ್ರನು ಜಗ್ಗಲಿಲ್ಲ. ಕುಂಭನಮೇಲೆ ವೃಕ್ಷ ಮತ್ತು ಶಿಲೆಗಳ ವೃಷ್ಟಿಯನ್ನೇ ಸುರಿಸಿದನು (೪೮-೪೯). ಕುಂಭಕರ್ಣನ ಪುತ್ರನಾದ ಕುಂಭನು, ವಾಲಿತನಯನು ಸುರಿಸಿದ ಸಕಲ ವೃಕ್ಷ ಶಿಲಾ ವೃಷ್ಟಿಗಳನ್ನು ವಿಧ್ವಂಸಗೊಳಿಸಿದನು. ಆಗ ಅಂಗದನು ಕುಂಭನ ಬಳಿಗೆ ನೇರವಾಗಿ ನುಗ್ಗಿದನು. ಅಷ್ಟರಲ್ಲಿ ಕುಂಭನು ಎರಡು ಬಾಣಗಳಿಂದ ಅಂಗದನ ಹುಬ್ಬುಗಳಿಗೆ ಗುರಿಯಿಟ್ಟು ಹೊಡೆದನು. ಕೊಳ್ಳಿಗಳಿಂದ ಕುಂಜರವನ್ನು ತಿವಿದಂತಾಯಿತು (೫೦-೫೧). ಅಂಗದನ ಹುಬ್ಬುಗಳಿಂದ ರಕ್ತವು ಧಾರೆ

ಸಾಲಮಾಸನ್ನಮೇಕೇನ ಪರಿಜಗ್ರಾಹ ಪಾಣಿನಾ ।
ಸಂಪೀಡ್ಯ ಚೋರಸಿ ಸ್ಕಂಧಂ ಕರೇಣಾಭಿನಿವೇಶ್ಯ ಚ ॥ ೫೩

ಕಿಂಚಿದಭ್ಯವನಮ್ಯೈನಮುನ್ಮಮಾಥ ಯಥಾ ಗಜಃ ।
ತಮಿಂದ್ರಕೇತುಪ್ರತಿಮಂ ವೃಕ್ಷಂ ಮಂದರಸಂನಿಭಮ್ ॥ ೫೪

ಸಮುತ್ಸೃಜಂತಂ ವೇಗೇನ ಪಶ್ಯತಾಂ ಸರ್ವರಕ್ಷಸಾಮ್ ।
ಸ ಬಿಭೇದ ಶಿತೈರ್ಬಾಣೈಃ ಸಪ್ತಭಿಃ ಕಾಯಭೇದನೈಃ ॥ ೫೫

ಅಂಗದೋ ವಿವ್ಯಥೇಽಭೀಕ್ಷ್ಣಂ ನನಾದ ಚ ಮುಮೋಹ ಚ ।
ಅಂಗದಂ ವ್ಯಥಿತಂ ದೃಷ್ಟ್ವಾ ಸೀದಂತಮಿವ ಸಾಗರೇ ॥ ೫೬

ದುರಾಸದಂ ಹರಿಶ್ರೇಷ್ಠಂ ರಾಮಾಯಾನ್ಯೇ ನ್ಯವೇದಯನ್ ।
ರಾಮಸ್ತು ವ್ಯಥಿತಂ ಶ್ರುತ್ವಾ ವಾಲಿಪುತ್ರಂ ರಣಾಜಿರೇ ॥ ೫೭

---

ಯಾಗಿ ಹರಿಯಿತು. ಕಣ್ಣುಗಳು ಮುಚ್ಚಿಕೊಂಡವು. ರಕ್ತಸಿಕ್ತವಾದ ಕಣ್ಣುಗಳನ್ನು ಅಂಗದನು ಒಂದು ಕೈಯಿಂದ ಮುಚ್ಚಿಕೊಂಡು, ಇನ್ನೊಂದು ಕೈಯನ್ನು ಸಮೀಪದಲ್ಲಿದ್ದ ಸಾಲವೃಕ್ಷದ ಕಡೆಗೆ ನೀಡಿ ಅದನ್ನು ಸುತ್ತಿ ಹಿಡಿದನು. ಅನಂತರ ಸ್ವಲ್ಪ ಬಗ್ಗಿ ವೃಕ್ಷದ ಸ್ಕಂಧಕ್ಕೆ ಎದೆಯನ್ನು ಆನಿಸಿ, ಆನೆಯು ಕೀಳುವಂತೆ ಆ ವೃಕ್ಷವನ್ನು ಕಿತ್ತುಬಿಟ್ಟನು! (೫೨-೫೩). ಇಂದ್ರಕೇತುವಿನಂತೆ ನೀಳವಾಗಿಯೂ ಮಂದರದಂತೆ ದಪ್ಪವಾಗಿಯೂ ಇದ್ದ ಆ ವೃಕ್ಷವನ್ನು ಸಮಸ್ತ ರಾಕ್ಷಸರೂ ಮಿಕಮಿಕನೆ ನೋಡುತ್ತಿರುವಾಗ, ಅಂಗದನು ಕಿತ್ತೆತ್ತಿ ವೇಗದಿಂದ ಬೀಸಿ ಹೊಡೆದನು! (೫೪). ಅಷ್ಟರಲ್ಲಿ ಕುಂಭನು ಏಳು ಕೂರ್ಗಣೆಗಳನ್ನು ಹೊಡೆದು ಅಂಗದನ ದೇಹವನ್ನು ಕೆತ್ತಿದನು. ಅಂಗದನು ಬಹಳವಾಗಿ ನೊಂದು ಕೂಗುತ್ತ ಪ್ರಜ್ಞೆ ತಪ್ಪಿದನು. ವೀರಾಗ್ರೇಸರನಾದ ವಾಲಿತನಯನು ಗಾಯಗೊಂಡು, ಸಮುದ್ರದಲ್ಲಿ (ಬಿರುಗಾಳಿಗೆ ಸಿಕ್ಕಿ) ಮುಳುಗಿಹೋಗುವ ಹಡಗಿನಂತಾಗಲು, ಇತರ ಕಪಿ ಯೋಧರು ಓಡಿಹೋಗಿ ಶ್ರೀರಾಮನಿಗೆ ಈ ವೃತ್ತಾಂತವನ್ನು ತಿಳಿಸಿದರು (೫೫-೫೭). ಕೂಡಲೆ ಶ್ರೀರಾಮನು ಜಾಂಬವಂತನೇ ಮೊದಲಾದ ವೀರರನ್ನು ಅಲ್ಲಿಗೆ ಕಳಿಸಿದನು. ಮರುಕ್ಷಣದಲ್ಲಿಯೇ ಆ ವಾನರಶಾರ್ದೂಲರು

ವ್ಯಾದಿದೇಶ ಹರಿಶ್ರೇಷ್ಠಾನ್ ಜಾಂಬವತ್ಪ್ರಮುಖಾಂಸ್ತತಃ ।
ತೇ ತು ವಾನರಶಾರ್ದೂಲಾಃ ಶ್ರುತ್ವಾ ರಾಮಸ್ಯ ಶಾಸನಮ್ ॥ ೫೮
ಅಭಿಪೇತುಃ ಸುಸಂಕ್ರುದ್ಧಾಃ ಕುಂಭಮುದ್ಯತಕಾರ್ಮುಕಮ್ ।
ತತೋ ದ್ರುಮಶಿಲಾಹಸ್ತಾಃ ಕೋಪಸಂರಕ್ತಲೋಚನಾಃ ॥ ೫೯
ರಿರಕ್ಷಿಷಂತೋಽಭ್ಯಪತನ್ನಂಗದಂ ವಾನರರ್ಷಭಾಃ ।
ಜಾಂಬವಾಂಶ್ಚ ಸುಷೇಣಶ್ಚ ವೇಗದರ್ಶೀ ಚ ವಾನರಃ ॥ ೬೦
ಕುಂಭಕರ್ಣಾತ್ಮಜಂ ವೀರಂ ಕ್ರುದ್ಧಾಃ ಸಮಭಿದುದ್ರುವುಃ ।
ಸಮೀಕ್ಷ್ಯಾಪತತಸ್ತಾಂಸ್ತು ವಾನರೇಂದ್ರಾನ್ ಮಹಾಬಲಾನ್ ॥ ೬೧
ಆವವಾರ ಶರೌಘೇಣ ನಗೇನೇವ ಜಲಾಶಯಮ್ ।
ತಸ್ಯ ಬಾಣಪಥಂ ಪ್ರಾಪ್ಯ ನ ಶೇಕುರತಿವರ್ತಿತುಮ್ ॥ ೬೨
ವಾನರೇಂದ್ರಾ ಮಹಾತ್ಮಾನೋ ವೇಲಾಮಿವ ಮಹೋದಧಿಃ ।
ತಾಂಸ್ತು ದೃಷ್ಟ್ವಾ ಹರಿಗಣಾನ್ ಶರವೃಷ್ಟಿಭಿರರ್ದಿತಾನ್ ॥ ೬೩
ಅಂಗದಂ ಪೃಷ್ಠತಃ ಕೃತ್ವಾ ಭ್ರಾತೃಜಂ ಪ್ಲವಗೇಶ್ವರಃ ।
ಅಭಿದುದ್ರಾವ ವೇಗೇನ ಸುಗ್ರೀವಃ ಕುಂಭಮಾಹವೇ ॥ ೬೪

---

ಶ್ರೀರಾಮನ ಶಾಸನದಂತೆ ಹೊರಟು, ಉದ್ಯತಕಾರ್ಮುಕನಾದ ಕುಂಭನಿದ್ದಲ್ಲಿಗೆ ಧಾವಿಸಿದರು. ಅವರು ಮರಗಳನ್ನೂ ಕಲ್ಲುದುಂಡಿಗಳನ್ನೂ ಹಿಡಿದು ಕೋಪಸಂರಕ್ತನೇತ್ರರಾಗಿ, ಅಂಗದನನ್ನು ರಕ್ಷಿಸುವುದಕ್ಕಾಗಿ ಬಂದರು (೫೭–೫೯). ಜಾಂಬವಂತ, ಸುಷೇಣ, ವೇಗದರ್ಶಿ ಮುಂತಾದವರು ಕುಂಭನನ್ನು ಮುತ್ತಿದರು. ಬಲಾಢ್ಯರಾದ ವಾನರಯೂಥಪರು ತನ್ನ ಮೇಲೆ ನುಗ್ಗುವುದನ್ನು ಕಂಡು, ವೃಕ್ಷರಾಶಿಗಳಿಂದ ಜಲಪ್ರವಾಹವನ್ನು ಅಡ್ಡಗಟ್ಟುವಂತೆ, ಕುಂಭನು ಶರರಾಶಿಗಳಿಂದ ಅವರನ್ನು ಅಡ್ಡಗಟ್ಟಿದನು (೬೦–೬೧). ಮಹಾಸಾಗರಕ್ಕೆ ಎಲ್ಲೆಯನ್ನು ಮೀರಿ ಮುಂದೆ ನುಗ್ಗಲು ಹೇಗೆ ಶಕ್ಯವಾಗದೋ ಹಾಗೆ, ಧೀರರಾದ ಆ ವಾನರವೀರರಿಗೆ ಕುಂಭನ ಶರಜಾಲವನ್ನು ಭೇದಿಸಿ ಮುಂದೆ ನುಗ್ಗಲು ಶಕ್ಯವಾಗಲಿಲ್ಲ. ಅವರೆಲ್ಲರೂ ಕುಂಭನ ಶರವೃಷ್ಟಿಗಳಿಗೆ ಸಿಕ್ಕಿ ಯಾತನೆಪಡುವುದು ಸುಗ್ರೀವನಿಗೆ ಗೋಚರಿಸಿತು (೬೨–೬೩). ಆ ವಾನರೇಶ್ವರನು ಭ್ರಾತೃಪುತ್ರನಾದ ಅಂಗದನಿಗೆ

ಶೈಲಸಾನುಚರಂ ನಾಗಂ ವೇಗವಾನಿವ ಕೇಸರೀ ।
ಉತ್ಪಾಟ್ಯ ಚ ಮಹಾಶೈಲಾನಶ್ವಕರ್ಣಾನ್ ಧವಾನ್ ಬಹೂನ್ ॥
ಅನ್ಯಾಂಶ್ಚ ವಿವಿಧಾನ್ ವೃಕ್ಷಾಂಶ್ಚಿಕ್ಷೇಪ ಚ ಮಹಾಬಲಃ ।
ತಾಂ ಛಾದಯಂತೀಮಾಕಾಶಂ ವೃಕ್ಷವೃಷ್ಟಿಂ ದುರಾಸದಮ್ ॥ ೬೬
ಕುಂಭಕರ್ಣಾತ್ಮಜಃ ಶೀಘ್ರಂ ಚಿಚ್ಛೇದ ನಿಶಿತೈಃ ಶರೈಃ ।
ಅಭಿಲಕ್ಷೇಣ ತೀವ್ರೇಣ ಕುಂಭೇನ ನಿಶಿತೈಃ ಶರೈಃ ॥ ೬೭
ಆಚಿತಾಸ್ತೇ ದ್ರುಮಾ ರೇಜುರ್ಯಥಾ ಘೋರಾಃ ಶತಘ್ನಯಃ ।
ದ್ರುಮವರ್ಷಂ ತು ತಚ್ಛಿನ್ನಂ ದೃಷ್ಟ್ವಾ ಕುಂಭೇನ ವೀರ್ಯವಾನ್ ॥
ವಾನರಾಧಿಪತಿಃ ಶ್ರೀಮಾನ್ ಮಹಾಸತ್ತ್ವೋ ನ ವಿವ್ಯಥೇ ।
ನಿರ್ಭಿದ್ಯಮಾನಃ ಸಹಸಾ ಸಹಮಾನಶ್ಚ ತಾನ್ ಶರಾನ್ ॥ ೬೯
ಕುಂಭಸ್ಯ ಧನುರಾಕ್ಷಿಪ್ಯ ಬಭಂಜೇಂದ್ರಧನುಷ್ಪ್ರಭಮ್ ।
ಅವಪ್ಲುತ್ಯ ತತಃ ಶೀಘ್ರಂ ಕೃತ್ವಾ ಕರ್ಮ ಸುದುಷ್ಕರಮ್ ॥ ೭೦

---

ಅಪಾಯವಾಗದಂತೆ ಅವನನ್ನು ಹಿಂದೆ ನಿಲ್ಲಿಸಿ, ತಾನೊಬ್ಬನೇ ಕುಂಭನ ಮೇಲೆ ಏರಿಹೋದನು. ಪರ್ವತದ ತಪ್ಪಲಲ್ಲಿ ಸಂಚರಿಸುವ ಆನೆಯನ್ನು ಪ್ರಚಂಡವಾದ ಸಿಂಹವು ಎದುರಿಸುವಂತೆ, ಕುಂಭನನ್ನೆದುರಿಸಿದನು. ಮಹಾಪರಾಕ್ರಮಿಯಾದ ಸುಗ್ರೀವನು ದೊಡ್ಡದೊಡ್ಡ ಶೈಲಗಳನ್ನೂ ಅಶ್ವಕರ್ಣ, ಧವ ಮೊದಲಾದ ವೃಕ್ಷಗಳನ್ನೂ ಕಿತ್ತು ಕುಂಭನಮೇಲೆ ಬೀಸಿಬೀಸಿ ಹೊಡೆದನು (೬೪–೬೬). ಆಕಾಶವನ್ನೇ ಮುಚ್ಚುವಂತೆ ಅದ್ಭುತವಾಗಿ ಬಂದೆರಗುತ್ತಿದ್ದ ವೃಕ್ಷವೃಷ್ಟಿಯನ್ನು ಕುಂಭನು ಕೂರ್ಗಣೆಗಳಿಂದ ಛಿನ್ನಭಿನ್ನವಾಗಿ ಕತ್ತರಿಸಿ ನಾಶಪಡಿಸಿದನು. ಗುರಿಯಿಟ್ಟು ಹೊಡೆಯುವ ಕುಂಭನ ಕೂರ್ಗಣೆಗಳು ಆ ವೃಕ್ಷಗಳಲ್ಲಿ ನಾಟಿಕೊಳ್ಳಲು, ಆ ವೃಕ್ಷಗಳು ಭೀಕರವಾದ ಶತಘ್ನಿಗಳೆಂಬ ಆಯುಧಗಳಂತೆ ಕಾಣುತ್ತಿದ್ದವು (೬೭–೬೮). ತಾನು ಬೀಸಿದ ಸಮಸ್ತ ವೃಕ್ಷಗಳನ್ನು ಕುಂಭನು ಛೇದಿಸಿದರೂ ಮಹಾಧೀರನಾದ ಸುಗ್ರೀವನು ವ್ಯಥೆಪಡಲಿಲ್ಲ. ಕೂರ್ಗಣೆಗಳು ಬಂದು ತನ್ನ ದೇಹವನ್ನು ಭೇದಿಸುತ್ತಿದ್ದರೂ ಕಾತರನಾಗದೆ ಆ ವಾನರೇಂದ್ರನು ನುಗ್ಗಿಹೋಗಿ, ಇಂದ್ರಧನುವಿನಂತೆ ಬೆಳಗುತ್ತಿದ್ದ ಕುಂಭನ ಧನುಸ್ಸನ್ನು

ಅಬ್ರವೀತ್ ಕುಪಿತಃ ಕುಂಭಂ ಭಗ್ನಶೃಂಗಮಿವ ದ್ವಿಪಮ್ ।
ನಿಕುಂಭಾಗ್ರಜ ವೀರ್ಯಂ ತೇ ಬಾಣವೇಗವದದ್ಭುತಮ್ ॥ ೭೧

ಸಂನತಿಶ್ಚ ಪ್ರಭಾವಶ್ಚ ತವ ವಾ ರಾವಣಸ್ಯ ವಾ ।
ಪ್ರಹ್ಲಾದಬಲಿವೃತ್ರಘ್ನಕುಬೇರವರುಣೋಪಮ ॥ ೭೨

ಏಕಸ್ತ್ವಮನುಜಾತೋಽಸಿ ಪಿತರಂ ಬಲವತ್ತರಃ ।
ತ್ವಾಮೇವೈಕಂ ಮಹಾಬಾಹುಂ ಚಾಪಹಸ್ತಮರಿಂದಮಮ್ ॥ ೭೩

ತ್ರಿದಶಾ ನಾತಿವರ್ತಂತೇ ಜಿತೇಂದ್ರಿಯಮಿವಾಧಯಃ ।
ವಿಕ್ರಮಸ್ವ ಮಹಾಬುದ್ಧೇ ಕರ್ಮಾಣಿ ಮಮ ಪಶ್ಯತಃ ॥ ೭೪

ವರದಾನಾತ್ ಪಿತೃವ್ಯಸ್ತೇ ಸಹತೇ ದೇವದಾನವಾನ್ ।
ಕುಂಭಕರ್ಣಸ್ತು ವೀರ್ಯೇಣ ಸಹತೇ ಚ ಸುರಾಸುರಾನ್ ॥ ೭೫

---

ಕಿತ್ತುಕೊಂಡು ಮುರಿದೆಸೆದನು! (೬೯-೭೦). ಕುಂಭನು ಕೋರೆಹಲ್ಲು ಮುರಿದ ಆನೆಯಂತಾದನು! ಸುಗ್ರೀವನು ದುಷ್ಕರವಾದ ಆ ಸಾಹಸ ಕೃತ್ಯವನ್ನೆಸಗಿ ಬಹುಬೇಗನೆ ಹಿಂದಕ್ಕೆ ಹಾರಿ ನಿಂತು ಕೋಪದಿಂದ ಹೀಗೆಂದನು: "ಎಲೈ ರಾಕ್ಷಸ-ನಿಕುಂಭಾಗ್ರಜ, ಅತಿವೇಗದಿಂದ ಬಾಣವನ್ನು ಪ್ರಯೋಗಿಸುವ ನಿನ್ನ ವೀರ್ಯವು ಅದ್ಭುತವೇ ಸರಿ (೭೧). ಈ ಕೈಚಳಕ, ಈ ಪ್ರತಾಪ—ಇವು ನಿನಗುಂಟು, ರಾವಣನೊಬ್ಬನಿಗುಂಟು! ಪ್ರಹ್ಲಾದ, ಬಲಿ, ದೇವೇಂದ್ರ, ಕುಬೇರ, ವರುಣರಿಗೆ ಸರಿಜೋಡಿ ನೀನು. ಬಲದಲ್ಲಿಯೂ ಕೃತಿಸಾಮರ್ಥ್ಯದಲ್ಲಿಯೂ ನಿನ್ನ ತಂದೆಗೆ ತಕ್ಕ ಮಗನಾಗಿದ್ದೀಯೆ! (೭೨). ಮಹಾಬಾಹುವೂ ವೈರಿವಿಧ್ವಂಸಕನೂ ಆದ ನೀನೊಬ್ಬನೇ ಚಾಪಹಸ್ತನಾಗಿ ನಿಂತರೆ ಸಾಕು, ದೇವತೆಗಳೂ ನಿನ್ನನ್ನು ಜಯಿಸಲಾರರು. ಜಿತೇಂದ್ರಿಯನನ್ನು ಮಾನಸಚಿಂತೆಗಳು ವಶಪಡಿಸಿಕೊಳ್ಳಲು ಶಕ್ಯವೆ? ಹಾಗೆ ನಿನ್ನನ್ನು ಗೆಲ್ಲಲು ಯಾರೂ ಶಕ್ತರಲ್ಲ. ಎಲೈ ಧೀಮಂತನೆ, ನಿನ್ನ ವಿಕ್ರಮವನ್ನು ನನ್ನೆದುರಿಗೆ ಮೆರೆಸು, ನೋಡುವೆನು! (೭೩-೭೪). ನಿನ್ನ ದೊಡ್ಡಪ್ಪನು ವರಬಲದಿಂದ ದೇವದಾನವರನ್ನೆದುರಿಸಲು ಸಮರ್ಥನಾಗಿದ್ದಾನೆ. ನಿನ್ನ ತಂದೆಯಾದ ಕುಂಭಕರ್ಣನಾದರೋ ತನ್ನ ಭುಜಪರಾಕ್ರಮದಿಂದಲೇ ಸುರಾಸುರರನ್ನು ಎದುರಿಸಬಲ್ಲವ

ಧನುಷೀಂದ್ರಜಿತಸ್ತುಲ್ಯಃ ಪ್ರತಾಪೇ ರಾವಣಸ್ಯ ಚ ।
ತ್ವಮದ್ಯ ರಕ್ಷಸಾಂ ಲೋಕೇ ಶ್ರೇಷ್ಠೋಽಸಿ ಬಲವೀರ್ಯತಃ ॥ ೭೬
ಮಹಾವಿಮರ್ದಂ ಸಮರೇ ಮಯಾ ಸಹ ತವಾದ್ಭುತಮ್ ।
ಅದ್ಯ ಭೂತಾನಿ ಪಶ್ಯಂತು ಶಕ್ರಶಂಬರಯೋರಿವ ॥ ೭೭
ಕೃತಮಪ್ರತಿಮಂ ಕರ್ಮ ದರ್ಶಿತಂ ಚಾಸ್ತ್ರಕೌಶಲಮ್ ।
ಪಾತಿತಾ ಹರಿವೀರಾಶ್ಚ ತ್ವಯಾ ವೈ ಭೀಮವಿಕ್ರಮಾಃ ॥ ೭೮
ಉಪಾಲಂಭಭಯಾಚ್ಚಾಪಿ ನಾಸಿ ವೀರ ಮಯಾ ಹತಃ ।
ಕೃತಕರ್ಮಪರಿಶ್ರಾಂತೋ ವಿಶ್ರಾಂತಃ ಪಶ್ಯ ಮೇ ಬಲಮ್ ॥ ೭೯
ತೇನ ಸುಗ್ರೀವವಾಕ್ಯೇನ ಸಾವಮಾನೇನ ಮಾನಿತಃ ।
ಅಗ್ನೇರಾಜ್ಯಾಹುತಸ್ಯೇವ ತೇಜಸ್ತಸ್ಯಾಭ್ಯವರ್ಧತ ॥ ೮೦
ತತಃ ಕುಂಭಸ್ತು ಸುಗ್ರೀವಂ ಬಾಹುಭ್ಯಾಂ ಜಗೃಹೇ ತದಾ ।
ಗಜಾವಿವಾಹಿತಮದೌ ನಿಃಶ್ವಸಂತೌ ಮುಹುರ್ಮುಹುಃ ॥ ೮೧

---

ನಾಗಿದ್ದನು! (೭೫). ಭಲೆ-ಕುಂಭ, ಚಾಪವಿದ್ಯೆಯಲ್ಲಿ ಇಂದ್ರಜಿತುವಿಗೂ ಪ್ರತಾಪದಲ್ಲಿ ರಾವಣನಿಗೂ ಸಾಟಿಯಾಗಿದ್ದೀಯೆ! ಆದ್ದರಿಂದ ಬಲವೀರ್ಯಗಳಲ್ಲಿ ಸಮಸ್ತ ರಾಕ್ಷಸರಿಗಿಂತಲೂ ನೀನು ಮಿಗಿಲು! (೭೬). ಈ ದಿನ ಶಕ್ರಶಂಬರರಂತೆ ಹೋರಾಡುವ ನಮ್ಮಿರ್ವರ ಘನಘೋರವಾದ ಸಂಗ್ರಾಮವನ್ನು ಸಮಸ್ತಭೂತಗಳೂ ಸಮೀಕ್ಷಿಸಲಿ! ಎಲೈ ಕುಂಭ, ಅಸದೃಶವಾದ ಸಾಹಸಕಾರ್ಯವನ್ನು ಮಾಡಿದ್ದೀಯೆ. ಅಸ್ತ್ರಕೌಶಲವನ್ನು ಮೆರೆಸಿದ್ದೀಯೆ. ಭೀಮವಿಕ್ರಮರಾದ ಕಪಿವೀರರನ್ನು ಹೊಡೆದುರುಳಿಸಿದ್ದೀಯೆ (೭೭-೭೮). ವೀರಾಗ್ರೇಸರ, ಯುದ್ಧಮಾಡಿ ದಣಿದಿರುವ ನಿನ್ನನ್ನು ಕೊಂದರೆ ಜನರು ನನ್ನನ್ನು ನಿಂದಿಸಿಯಾರೆಂಬ ಭಯದಿಂದ ಕೊಲ್ಲದೆ ಇದ್ದೇನೆ! ಒಳ್ಳೆಯದು, ವಿಶ್ರಮಿಸಿಕೊ. ಆಮೇಲೆ ಬಂದು ನನ್ನ ಪರಾಕ್ರಮವೇನೆಂಬುದನ್ನು ನೋಡು!" ಎಂದನು (೭೯). ಸುಗ್ರೀವನ ಮೂದಲಿಕೆಯ ಮಾತಿನಿಂದ ಕುಂಭನಿಗೆ ಅವಮಾನವೆನಿಸಿತು. ಬೆಂಕಿಗೆ ತುಪ್ಪವನ್ನು ಹೊಯ್ದಂತಾಗಿ ಅವನ ತೇಜಸ್ಸು ಭುಗಿಲೆಂದಿತು. ಕುಂಭನು ಸುಗ್ರೀವನನ್ನು ಎರಡು ಕೈಗಳಿಂದಲೂ ತಬ್ಬಿಹಿಡಿದು ಕುಸ್ತಿಗೆ ನಿಂತನು! ಮತ್ತಮಾತಂಗಗಳಂತೆ

ಅನ್ಯೋಽನ್ಯಗಾತ್ರಗ್ರಥಿತೌ ಕರ್ಷಂತಾವಿತರೇತರಮ್ ।
ಧೂಮಂ ಮುಖತೋ ಜ್ವಾಲಾಂ ವಿಸೃಜಂತೌ ಪರಿಶ್ರಮಾತ್ ॥

ತಯೋಃ ಪಾದಾಭಿಘಾತಾಚ್ಚ ನಿಮಗ್ನಾ ಚಾಭವನ್ಮಹೀ ।
ವ್ಯಾಘೂರ್ಣಿತತರಂಗಶ್ಚ ಚುಕ್ಷುಭೇ ವರುಣಾಲಯಃ ॥ ೮೩

ತತಃ ಕುಂಭಂ ಸಮುತ್ಕ್ಷಿಪ್ಯ ಸುಗ್ರೀವೋ ಲವಣಾಂಭಸಿ ।
ಪಾತಯಾಮಾಸ ವೇಗೇನ ದರ್ಶಯನ್ನುದಧೇಸ್ತಲಮ್ ॥ ೮೪

ತತಃ ಕುಂಭನಿಪಾತೇನ ಜಲರಾಶಿಃ ಸಮುತ್ಥಿತಃ ।
ವಿಂಧ್ಯಮಂದರಸಂಕಾಶೋ ವಿಸಸರ್ಪ ಸಮಂತತಃ ॥ ೮೫

ತತಃ ಕುಂಭಃ ಸಮುತ್ಪತ್ಯ ಸುಗ್ರೀವಮಭಿಪತ್ಯ ಚ ।
ಆಜಘಾನೋರಸಿ ಕ್ರುದ್ಧೋ ವಜ್ರವೇಗೇನ ಮುಷ್ಟಿನಾ ॥ ೮೬

ತಸ್ಯ ವರ್ಮ ಚ ಪುಸ್ಫೋಟ ಬಹು ಸುಸ್ರಾವ ಶೋಣಿತಮ್ ।
ಸ ಚ ಮುಷ್ಟಿರ್ಮಹಾವೇಗಃ ಪ್ರತಿಜಘ್ನೇಽಸ್ಥಿಮಂಡಲೇ ॥ ೮೭

---

ಸುಗ್ರೀವಕುಂಭರಿಬ್ಬರೂ ನಿಟ್ಟುಸಿರುಬಿಡುತ್ತ ಮಲ್ಲಯುದ್ಧವನ್ನಾರಂಭಿಸಿದರು(೮೦-೮೧). ಒಬ್ಬರನ್ನೊಬ್ಬರು ತೆಕ್ಕೆಹಿಡಿದು ಎಳೆದಾಡುತ್ತ ಸೆಣಸಿದರು. ಆಯಾಸಗೊಂಡ ಅವರೀರ್ವರೂ ಮುಖದಿಂದ ಬಿಡುವ ಬಿಸಿಯುಸಿರು ಹೊಗೆಯಿಲ್ಲದ ಬೆಂಕಿಯಂತಿತ್ತು. ಅವರ ಪಾದಾಘಾತದಿಂದ ಭೂಮಿಯು ಕುಸಿಯಿತು. ಅಲೆಗಳ ಅಬ್ಬರವು ಅತಿಯಾಗಿ ಸಮುದ್ರವು ಕ್ಷೋಭೆಗೊಂಡಿತು (೮೨-೮೩). ಅಷ್ಟರಲ್ಲಿ ಸುಗ್ರೀವನು ಹಠಾತ್ತನೆ ಕುಂಭನನ್ನು ಹಿಡಿದೆತ್ತಿ ಸಮುದ್ರಕ್ಕೆ ಎಸೆದುಬಿಟ್ಟನು. ಎಷ್ಟು ರಭಸದಿಂದ ಎಸೆದನೆಂದರೆ, ಕುಂಭನು ಸಮುದ್ರತಳವನ್ನು ನೋಡುವಂತೆ ನೀರೊಳಗೆ ಮುಳುಗಿಹೋದನು! (೮೪). ಕುಂಭನು ಧುಡುಮ್ಮನೆ ಕಡಲಲ್ಲಿ ಬಿದ್ದೊಡನೆ, ವಿಂಧ್ಯಮಂದರ ಪರ್ವತಗಳಂತೆ ಜಲರಾಶಿಯು ಸುತ್ತಲೂ ಉಕ್ಕಿಹರಿಯಿತು. ಅನಂತರ ಕುಂಭನು ಕಡಲಿನಿಂದೆದ್ದು ಓಡುತ್ತ ಬಂದು ಕ್ರೋಧದಿಂದ ಮುಷ್ಟಿಯನ್ನು ಬಿಗಿದು, ಸುಗ್ರೀವನ ಎದೆಯಮೇಲೆ ಸಿಡಿಲಿನಂತೆ ರಪ್ಪನೆ ಜಡಿದನು (೮೫-೮೬). ಸುಗ್ರೀವನ ಎದೆಯ ಕವಚವು ಸೀಳಿತು. ರಕ್ತವು ಝಲ್ಲೆಂದು ಸುರಿಯಿತು. ಮಹಾರಭಸದಿಂದ ಹೊಡೆದ ಕುಂಭನ ಮುಷ್ಟಿಯು

ತದಾ ವೇಗೇನ ತತ್ರಾಸೀತ್ತೇಜಃ ಪ್ರಜ್ವಲಿತಂ ಮುಹುಃ ।
ವಜ್ರನಿಷ್ಪೇಷಸಂಜಾತಾ ಜ್ವಾಲಾ ಮೇರೌ ಯಥಾ ಗಿರೌ ॥ ೮೮

ಸ ತತ್ರಾಭಿಹತಸ್ತೇನ ಸುಗ್ರೀವೋ ವಾನರರ್ಷಭಃ ।
ಮುಷ್ಟಿಂ ಸಂವರ್ತಯಾಮಾಸ ವಜ್ರಕಲ್ಪಂ ಮಹಾಬಲಃ ॥ ೮೯

ಅರ್ಚಿಃಸಹಸ್ರವಿಕಚಂ ರವಿಮಂಡಲಸಪ್ರಭಮ್ ।
ಸ ಮುಷ್ಟಿಂ ಪಾತಯಾಮಾಸ ಕುಂಭಸ್ಯೋರಸಿ ವೀರ್ಯವಾನ್ ॥

ಸ ತು ತೇನ ಪ್ರಹಾರೇಣ ವಿಹ್ವಲೋ ಭೃಶತಾಡಿತಃ ।
ನಿಪಪಾತ ತದಾ ಕುಂಭೋ ಗತಾರ್ಚಿರಿವ ಪಾವಕಃ ॥ ೯೧

ಮುಷ್ಟಿನಾಭಿಹತಸ್ತೇನ ನಿಪಪಾತಾಶು ರಾಕ್ಷಸಃ ।
ಲೋಹಿತಾಂಗ ಇವಾಕಾಶಾದ್ದೀಪ್ತರಶ್ಮಿರ್ಯದೃಚ್ಛಯಾ ॥ ೯೨

ಕುಂಭಸ್ಯ ಪತತೋ ರೂಪಂ ಭಗ್ನಸ್ಯೋರಸಿ ಮುಷ್ಟಿನಾ ।
ಬಭೌ ರುದ್ರಾಭಿಪನ್ನಸ್ಯ ಯಥಾ ರೂಪಂ ಗವಾಂ ಪತೇಃ ॥ ೯೩

ತಸ್ಮಿನ್ ಹತೇ ಭೀಮಪರಾಕ್ರಮೇಣ
ಪ್ಲವಂಗಮಾನಾಮೃಷಭೇಣ ಯುದ್ಧೇ ।

---

ಸುಗ್ರೀವನ ಎದೆಯ ಮೂಳೆಗೆ ಠಣಲ್ ಎಂದು ತಾಕಿ ಅಗ್ನಿಜ್ವಾಲೆಯು ಚಿಮ್ಮಿತು! ವಜ್ರಾಯುಧದಿಂದಪ್ಪಳಿಸಿದಾಗ ಮೇರುಗಿರಿಯಲ್ಲಿ ಜ್ವಾಲೆಯು ಹೊಮ್ಮಿದಂತಾಯಿತು! (೮೭-೮೮). ಹೀಗೆ ಬಲಾಢ್ಯನಾದ ಸುಗ್ರೀವನು ಕುಂಭನಿಂದ ಆಹತನಾಗಲು, ಆ ವಾನರಶಾರ್ದೂಲನು ವಜ್ರಸದೃಶವಾದ ತನ್ನ ಮುಷ್ಟಿಯನ್ನು ಕಟ್ಟಿದನು! ಸಹಸ್ರಕಿರಣಗಳನ್ನು ಸೂಸುವ ಸೂರ್ಯಮಂಡಲದಂತೆ ಅತ್ಯುಗ್ರವಾದ ಆ ಮುಷ್ಟಿಯಿಂದ ಕುಂಭನ ಎದೆಯಮೇಲೆ ಗುದ್ದಿದನು (೮೯-೯೦). ಭೀಕರವಾದ ಆ ಮುಷ್ಟಿಯಿಂದ ತಾಡಿತನಾದ ಕುಂಭನು ವಿಹ್ವಲನಾಗಿ ಜ್ವಾಲೆಯುಡುಗಿದ ಅಗ್ನಿಯಂತೆ ಕಳೆಗುಂದಿ ಕೆಳಗೆ ಬಿದ್ದನು. ತೇಜೋವಿಶಿಷ್ಟವಾದ ಅಂಗಾರಕಗ್ರಹವು ಆಕಸ್ಮಿಕವಾಗಿ ಧರೆಗುರುಳುವಂತೆ ಆ ರಾಕ್ಷಸನು ಬಿದ್ದನು (೯೧-೯೨). ಸುಗ್ರೀವನ ಮುಷ್ಟಿಯಿಂದ ಆಹತನಾಗಿ ಬಿದ್ದ ಕುಂಭನು, ರುದ್ರನಿಂದ ಅಭಿಹತನಾದ ಸೂರ್ಯನಂತೆ ಕಾಣಿಸಿದನು. ಭೀಮಪರಾಕ್ರಮಿಯೂ ವಾನರಶ್ರೇಷ್ಠನೂ

ಮಹೀ ಸಶೈಲಾ ಸವನಾ ಚಚಾಲ
ಭಯಂ ಚ ರಕ್ಷಾಂಸ್ಯಧಿಕಂ ವಿವೇಶ ॥ ೯೪

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಟ್‌ಸಪ್ತತಿತಮಃ ಸರ್ಗಃ

---

## ಸಪ್ತಸಪ್ತತಿತಮಃ ಸರ್ಗಃ

### ನಿಕುಂಭವಧಃ

ನಿಕುಂಭೋ ಭ್ರಾತರಂ ದೃಷ್ಟ್ವಾ ಸುಗ್ರೀವೇಣ ನಿಪಾತಿತಮ್ ।
ಪ್ರದಹನ್ನಿವ ಕೋಪೇನ ವಾನರೇಂದ್ರಮವೈಕ್ಷತ ॥ ೧

ತತಃ ಸ್ರಗ್ದಾಮಸಂನದ್ಧಂ ದತ್ತಪಂಚಾಂಗುಲಂ ಶುಭಮ್ ।
ಆದದೇ ಪರಿಘಂ ವೀರೋ ನಗೇಂದ್ರಶಿಖರೋಪಮಮ್ ॥ ೨

---

ಆದ ಸುಗ್ರೀವನಿಂದ ಕುಂಭನು ಯುದ್ಧದಲ್ಲಿ ಹತನಾಗಲು, ಪರ್ವತಾರಣ್ಯ ಸಹಿತವಾದ ಭೂಮಿಯು ಕಂಪಿಸಿತು. ರಾಕ್ಷಸರಿಗೆ ಭಯವು ಹೆಚ್ಚಿತು (೯೩-೯೪).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತಾರನೆಯ ಸರ್ಗ

---

## ಸರ್ಗ ೭೭

### ಹನುಮಂತನಿಂದ ನಿಕುಂಭನ ವಧೆ.

ತನ್ನ ಅಣ್ಣನಾದ ಕುಂಭನು ಸುಗ್ರೀವನಿಂದ ಹತನಾದುದನ್ನು ನಿಕುಂಭನು ವೀಕ್ಷಿಸಿದನು. ಅವನು ಕೋಪದಿಂದ ಸುಗ್ರೀವನನ್ನು ದಹಿಸಿಬಿಡುವಂತೆ ದುರದುರನೆ ನೋಡಿ, ಪರ್ವತಶಿಖರದಂತಿದ್ದ ತನ್ನ ಪರಿಘವನ್ನು ಕೈಗೆ ತೆಗೆದುಕೊಂಡನು. ಆ ಪರಿಘವು ಹೂಮಾಲೆಯಿಂದ ಅಲಂಕೃತವಾಗಿ ಐದು ಬೆರಳುಗಳಿಂದೊತ್ತಿದ ಚಂದನಕುಂಕುಮಾದಿಗಳ ಚಿಹ್ನೆಯುಳ್ಳದ್ದಾಗಿತ್ತು

ಹೇಮಪಟ್ಟಪರಿಕ್ಷಿಪ್ತಂ ವಜ್ರವಿದ್ರುಮಭೂಷಿತಮ್ ।
ಯಮದಂಡೋಪಮಂ ಭೀಮಂ ರಕ್ಷಸಾಂ ಭಯನಾಶನಮ್ ॥ ೩
ತಮಾವಿಧ್ಯ ಮಹಾತೇಜಾಃ ಶಕ್ರಧ್ವಜಸಮಂ ತದಾ ।
ವಿನನಾದ ವಿವೃತ್ತಾಸ್ಯೋ ನಿಕುಂಭೋ ಭೀಮವಿಕ್ರಮಃ ॥ ೪
ಉರೋಗತೇನ ನಿಷ್ಕೇಣ ಭುಜಸ್ಥೈರಂಗದೈರಪಿ ।
ಕುಂಡಲಾಭ್ಯಾಂ ಚ ಚಿತ್ರಾಭ್ಯಾಂ ಮಾಲಯಾ ಚ ವಿಚಿತ್ರಯಾ ॥ ೫
ನಿಕುಂಭೋ ಭೂಷಣೈರ್ಭಾತಿ ತೇನ ಸ್ಮ ಪರಿಘೇಣ ಚ ।
ಯಥೇಂದ್ರಧನುಷಾ ಮೇಘಃ ಸವಿದ್ಯುತ್‌ಸ್ತನಯಿತ್ನುಮಾನ್ ॥ ೬
ಪರಿಘಾಗ್ರೇಣ ಪುಸ್ಫೋಟ ವಾತಗ್ರಂಥಿರ್ಮಹಾತ್ಮನಃ ।
ಪ್ರಜಜ್ವಾಲ ಸಘೋಷಶ್ಚ ವಿಧೂಮ ಇವ ಪಾವಕಃ ॥ ೭
ನಗರ್ಯಾ ವಿಟಪಾವತ್ಯಾ ಗಂಧರ್ವಭವನೋತ್ತಮೈಃ ।
ಸಹ ಚೈವಾಮರಾವತ್ಯಾ ಸರ್ವೈಶ್ಚ ಭವನೈಃ ಸಹ ॥ ೮

---

(೧-೨). ಚಿನ್ನದ ಕಟ್ಟುಗಳಿಂದ ಬಿಗಿಯಲ್ಪಟ್ಟು ವಜ್ರವಿದ್ರುಮಗಳಿಂದ ಭೂಷಿತವಾಗಿತ್ತು. ಯಮದಂಡದಂತೆ ಭೀಕರವಾಗಿತ್ತು. ರಾಕ್ಷಸರಿಗೆ ಬಂದ ಭಯವನ್ನು ನೀಗಿಸುವ ಶಕ್ತಿಯುಳ್ಳದ್ದಾಗಿತ್ತು (೩). ಭೀಮ ಪರಾಕ್ರಮಿಯೂ ಮಹಾತೇಜಸ್ವಿಯೂ ಆದ ನಿಕುಂಭನು ಇಂದ್ರಧ್ವಜ ದಂತೆ ಉನ್ನತವಾಗಿದ್ದ ಆ ಪರಿಘವನ್ನು ಕೈಯಲ್ಲಿ ಹಿಡಿದು ತಿರುಗಿಸುತ್ತ, ದೊಡ್ಡದಾಗಿ ಬಾಯಿತೆರೆದು ಬೊಬ್ಬಿರಿದನು! (೪). ನಿಕುಂಭನ ಎದೆಯಲ್ಲಿ ಚಿನ್ನದ ಪದಕವೂ, ತೋಳುಗಳಲ್ಲಿ ಭುಜಕೀರ್ತಿಗಳೂ, ಕಿವಿಗಳಲ್ಲಿ ಚಿತ್ರಾಕಾರದ ಕುಂಡಲಗಳೂ, ಕೊರಳಲ್ಲಿ ಬಣ್ಣಬಣ್ಣದ ಹೂಮಾಲೆಯೂ ವಿರಾಜಿಸುತ್ತಿದ್ದವು. ವಿವಿಧಭೂಷಣಗಳನ್ನು ಧರಿಸಿ ಪರಿಘವನ್ನು ಹಿಡಿದು ಗರ್ಜಿಸುತ್ತಿದ್ದ ನಿಕುಂಭನು, ಕಾಮನಬಿಲ್ಲು ಮಿಂಚುಗಳಿಂದ ಕೂಡಿ ಗುಡುಗುವ ಕಾಳಮೇಘದಂತೆ ಕಾಣಿಸಿದನು! (೫-೬). ಬೃಹತ್ಕಾಯ ನಾದ ಆ ರಾಕ್ಷಸನು ಪರಿಘವನ್ನೆತ್ತಿ ತಿರುಗಿಸಲು, ಅದರ ತುದಿಯಿಂದ ಆವಹಾದಿ ವಾಯುಸ್ಕಂಧವು ಭೇದಿಸಲ್ಪಟ್ಟಿತು. ತಿರುಗಿಸುವಾಗ ಭರ್ರನೆ ಶಬ್ದಮಾಡುತ್ತಿದ್ದ ಪರಿಘವು ಹೊಗೆಯಿಲ್ಲದ ಅಗ್ನಿಜ್ವಾಲೆಯಂತೆ ಹೊಳೆ ಯಿತು (೭). ನಿಕುಂಭನ ಪರಿಘವಾತದಿಂದ ಆಘೂರ್ಣಿತವಾದ ಅಂತರಿಕ್ಷವು

**ಸತಾರಗ್ರಹನಕ್ಷತ್ರಂ ಸಚಂದ್ರಂ ಸಮಹಾಗ್ರಹಮ್ ।**
**ನಿಕುಂಭಪರಿಘಾಘೂರ್ಣಂ ಭ್ರಮತೀವ ನಭಃಸ್ಥಲಮ್ ॥ ೯**

**ದುರಾಸದಶ್ಚ ಸಂಜಜ್ಞೇ ಪರಿಘಾಭರಣಪ್ರಭಃ ।**
**ಕಪೀನಾಂ ಸ ನಿಕುಂಭಾಗ್ನಿರ್ಯುಗಾಂತಾಗ್ನಿರಿವೋತ್ಥಿತಃ ॥ ೧೦**

**ರಾಕ್ಷಸಾ ವಾನರಾಶ್ಚಾಪಿ ನ ಶೇಕುಃ ಸ್ಪಂದಿತುಂ ಭಯಾತ್ ।**
**ಹನುಮಾಂಸ್ತು ವಿವೃತ್ಯೋರಸ್ತಸ್ಥೌ ತಸ್ಯಾಗ್ರತೋ ಬಲೀ ॥ ೧೧**

**ಪರಿಘೋಪಮಬಾಹುಸ್ತು ಪರಿಘಂ ಭಾಸ್ಕರಪ್ರಭಮ್ ।**
**ಬಲೀ ಬಲವತಸ್ತಸ್ಯ ಪಾತಯಾಮಾಸ ವಕ್ಷಸಿ ॥ ೧೨**

**ಸ್ಥಿರೇ ತಸ್ಯೋರಸಿ ವ್ಯೂಢೇ ಪರಿಘಃ ಶತಧಾ ಕೃತಃ ।**
**ವಿಶೀರ್ಯಮಾಣಃ ಸಹಸಾ ಉಲ್ಕಾಶತಮಿವಾಂಬರೇ ॥ ೧೩**

**ಸ ತು ತೇನ ಪ್ರಹಾರೇಣ ವಿಚಚಾಲ ಮಹಾಕಪಿಃ ।**
**ಪರಿಘೇಣ ಸಮಾಧೂತೋ ಯಥಾ ಭೂಮಿಚಲೇಽಚಲಃ ॥ ೧೪**

---

ಗಿರ್ರನೆ ತಿರುಗಿದಂತೆ ಭಾಸವಾಯಿತು. ಅಲಕಾಪುರಿ, ಗಂಧರ್ವಭವನಗಳು, ಅಮರಾವತಿ, ದೇವಭವನಗಳು, ಅಶ್ವಿನ್ಯಾದಿ ತಾರೆಗಳು, ಬುಧಾದಿ ಸಾಮಾನ್ಯ ಗ್ರಹಗಳು, ಇತರ ನಕ್ಷತ್ರಗಳು, ಚಂದ್ರ ಮತ್ತು ಶುಕ್ರಾದಿ ಮಹಾಗ್ರಹಗಳು ಗರಗರನೆ ತಿರುಗಿದಂತೆ ತೋರಿದವು! (೮-೯). ಪರಿಘ ಮತ್ತು ಆಭರಣಗಳ ಪ್ರಭೆಯಿಂದ ಬೆಳಗುವ ನಿಕುಂಭನೆಂಬ ಅಗ್ನಿಯು, ಪ್ರಳಯಕಾಲಾಗ್ನಿಯೋ ಒಡಮೂಡಿತೋ ಎಂಬಂತೆ ದುರ್ಧರ್ಷವಾಗಿ ಪ್ರಜ್ವಲಿಸಿತು! ನಿಕುಂಭನ ಆರ್ಭಟವನ್ನು ನೋಡಿ ರಾಕ್ಷಸರೂ ಸಹ ಹೆದರಿ ಸ್ತಬ್ಧರಾಗಿ ನಿಂತರು! ವಾನರರಿಗೆ ಮುಂದೆ ಅಡಿ ಇಡಲು ಧೈರ್ಯ ಬರಲಿಲ್ಲ. ಹನುಮಂತನೊಬ್ಬನು ಎದೆಯನ್ನು ಚಾಚಿ ಮುಂದೆ ಬಂದನು! (೧೦-೧೧). ಪರಿಘದಂತೆ ಪುಷ್ಟವಾದ ತೋಳುಗಳುಳ್ಳ ಬಲಶಾಲಿಯಾದ ನಿಕುಂಭನು, ಭಾಸ್ಕರನಂತೆ ಬೆಳಗುತ್ತಿದ್ದ ಪರಿಘದಿಂದ ಬಲಾಢ್ಯನಾದ ಹನುಮಂತನ ಎದೆಯಮೇಲೆ ಅಪ್ಪಳಿಸಿದನು. ಆದರೆ ವಿಶಾಲವೂ ಅತ್ಯಂತ ದೃಢವೂ ಆದ ಹನುಮಂತನ ಎದೆಗೆ ಬಡಿದೊಡನೆ, ಪರಿಘವು ಮುರಿದು ನುಚ್ಚುನೂರಾಯಿತು! ನೂರಾರು ಉಲ್ಕೆಗಳಂತೆ ಚೂರುಗಳು ಅಂಬರದಲ್ಲಿ ಸಿಡಿದವು (೧೨-೧೩). ಪರಿಘದ ಪ್ರಹಾರಕ್ಕೆ ಆ ಮಹಾಕಪಿಯು ತತ್ತರಿಸಿ,

ಸ ತದಾಭಿಹತಸ್ತೇನ ಹನುಮಾನ್ ಪ್ಲವಗೋತ್ತಮಃ ।
ಮುಷ್ಟಿಂ ಸಂವರ್ತಯಾಮಾಸ ಬಲೇನಾತಿಮಹಾಬಲಃ ॥ ೧೫

ತಮುದ್ಯಮ್ಯ ಮಹಾತೇಜಾ ನಿಕುಂಭೋರಸಿ ವೀರ್ಯವಾನ್ ।
ಅಭಿಚಿಕ್ಷೇಪ ವೇಗೇನ ವೇಗವಾನ್ ವಾಯುವಿಕ್ರಮಃ ॥ ೧೬

ತತಃ ಪುಸ್ಫೋಟ ವರ್ಮಾಸ್ಯ ಪ್ರಸುಸ್ರಾವ ಚ ಶೋಣಿತಮ್ ।
ಮುಷ್ಟಿನಾ ತೇನ ಸಂಜಜ್ಞೇ ಜ್ವಾಲಾ ವಿದ್ಯುದಿವೋತ್ಥಿತಾ ॥ ೧೭

ಸ ತು ತೇನ ಪ್ರಹಾರೇಣ ನಿಕುಂಭೋ ವಿಚಚಾಲ ಹ ।
ಸ್ವಸ್ಥಶ್ಚಾಪಿ ನಿಜಗ್ರಾಹ ಹನುಮಂತಂ ಮಹಾಬಲಮ್ ॥ ೧೮

ವಿಚುಕ್ರುಶುಸ್ತದಾ ಸಂಖ್ಯೇ ಭೀಮಂ ಲಂಕಾನಿವಾಸಿನಃ ।
ನಿಕುಂಭೇನೋದ್ಧೃತಂ ದೃಷ್ಟ್ವಾ ಹನುಮಂತಂ ಮಹಾಬಲಮ್ ॥

ಸ ತದಾ ಹ್ರಿಯಮಾಣೋಽಪಿ ಕುಂಭಕರ್ಣಾತ್ಮಜೇನ ಹ ।
ಆಜಘಾನಾನಿಲಸುತೋ ವಜ್ರಕಲ್ಪೇನ ಮುಷ್ಟಿನಾ ॥ ೨೦

---

ಭೂಕಂಪವಾದಾಗ ಪರ್ವತವು ಚಲಿಸುವಂತೆ, ತೂಗಾಡಿದನು. ಅನಂತರ ಅದ್ಭುತವೀರ್ಯಶಾಲಿಯಾದ ಆ ವಾನರೋತ್ತಮನು ತನ್ನ ಮುಷ್ಟಿಯನ್ನು ಬಲವಾಗಿ ಬಿಗಿದನು (೧೪-೧೫). ವಾಯುವಿಕ್ರಮನಾದ ಆ ತೇಜಸ್ವಿಯು ತನ್ನ ಬಿಗಿಮುಷ್ಟಿಯನ್ನು ವೇಗದಿಂದೆತ್ತಿ ನಿಕುಂಭನ ಎದೆಯಮೇಲೆ ಬಲವಾಗಿ ಗುದ್ದಿದನು. ನಿಕುಂಭನ ಎದೆಯ ಕವಚವು ಮುರಿದು ರಕ್ತವು ಝುಲ್ಲೆಂದು ಹಾರಿತು. ಠಣಿಲ್ ಎಂದ ಮುಷ್ಟಿಯ ಜಡಿತದಿಂದ ಮಿಂಚಿನಂತೆ ಜ್ವಾಲೆಯು ಹೊಮ್ಮಿತು (೧೬-೧೭). ಆ ಪ್ರಹಾರಕ್ಕೆ ನಿಕುಂಭನು ತತ್ತರಿಸಿ ಒಲೆದಾಡಿದನು. ಮತ್ತೆ ಚೇತರಿಸಿಕೊಂಡು ಮುಂದೆ ನುಗ್ಗಿ, ಎರಡು ಕೈಗಳಿಂದ ಹನುಮಂತನನ್ನು ಹೊತ್ತುಬಿಟ್ಟನು! ಅತ್ಯಂತ ಬಲಾಢ್ಯನೆಂದು ಕೀರ್ತಿಶಾಲಿಯಾದ ಹನುಮಂತನನ್ನು ನಿಕುಂಭನು ಹೊತ್ತು ಒಯ್ಯುವುದನ್ನು ನೋಡಿ, ರಾಕ್ಷಸರು ಹರ್ಷದಿಂದ ವಾನರಸೇನೆಗೆ ಭಯವಾಗುವಂತೆ ಕೋಲಾಹಲ ಮಾಡಿದರು (೧೮-೧೯). ನಿಕುಂಭನು ತನ್ನನ್ನು ಹೊತ್ತು ಒಯ್ಯುತ್ತಿರುವಾಗಲೇ ಹನುಮಂತನು ವಜ್ರಮುಷ್ಟಿ

ಆತ್ಮಾನಂ ಮೋಚಯಿತ್ವಾಥ ಕ್ಷಿತಾವಭ್ಯವಪದ್ಯತ ।
ಹನುಮಾನುನ್ಮಮಾಥಾಶು ನಿಕುಂಭಂ ಮಾರುತಾತ್ಮಜಃ ॥ ೨೧

ನಿಕ್ಷಿಪ್ಯ ಪರಮಾಯತ್ತೋ ನಿಕುಂಭಂ ನಿಷ್ಪಿಪೇಷ ಹ ।
ಉತ್ಪತ್ಯ ಚಾಸ್ಯ ವೇಗೇನ ಪಪಾತೋರಸಿ ವೀರ್ಯವಾನ್ ॥ ೨೨

ಪರಿಗೃಹ್ಯ ಚ ಬಾಹುಭ್ಯಾಂ ಪರಿವೃತ್ಯ ಶಿರೋಧರಾಮ್ ।
ಉತ್ಪಾಟಯಾಮಾಸ ಶಿರೋ ಭೈರವಂ ನದತೋ ಮಹತ್ ॥ ೨೩

ಅಥ ವಿನದತಿ ಸಾದಿತೇ ನಿಕುಂಭೇ
ಪವನಸುತೇನ ರಣೇ ಬಭೂವ ಯುದ್ಧಮ್ ।
ದಶರಥಸುತರಾಕ್ಷಸೇಂದ್ರಸೂನ್ವೋ-
ರ್ಭೃಶತರಮಾಗತರೋಷಯೋಃ ಸುಭೀಮಮ್ ॥ ೨೪

ವ್ಯಪೇತೇ ತು ಜೀವೇ ನಿಕುಂಭಸ್ಯ ಹೃಷ್ಟಾ
ನಿನೇದುಃ ಪ್ಲವಂಗಾ ದಿಶಃ ಸಸ್ವನುಶ್ಚ ।

---

ಯಿಂದ ನಿಕುಂಭನನ್ನು ಗುದ್ದಿ, ತಾನು ತಪ್ಪಿಸಿಕೊಂಡು ನೆಲಕ್ಕೆ ಧುಮುಕಿ ಮತ್ತೆ ಯುದ್ಧಸನ್ನದ್ಧನಾಗಿ ನಿಂತನು! (೨೦). ಆ ಮಾರುತಾತ್ಮಜನು ಅತ್ಯಾಕ್ರೋಶದೊಡನೆ ಬಹುವೇಗದಿಂದ ನಿಕುಂಭನಮೇಲೆ ಎರಗಿ, ಆ ರಾಕ್ಷಸನನ್ನು ಎತ್ತಿ ನೆಲದಮೇಲೆ ಕುಕ್ಕಿ ಉರುಳಿಸಿದನು. ಮರುಕ್ಷಣದಲ್ಲಿ ನಿಕುಂಭನ ಎದೆಯಮೇಲೆ ಹಾರಿ ಕುಳಿತು, ಎರಡು ಕೈಗಳಿಂದಲೂ ಹಿಡಿದು ಅವನ ಕೊರಳನ್ನು ತಿರುಚಿ, ಭೈರವಸ್ವರದಿಂದ ನಿಕುಂಭನು ಅರಚಿಕೊಳ್ಳುತ್ತಿರುವಾಗಲೇ, ಅವನ ಕತ್ತನ್ನು ಕಿತ್ತೆಸೆದನು (೨೧-೨೩). ರಣರಂಗದಲ್ಲಿ ಅರಚಿಕೊಳ್ಳುತ್ತಿದ್ದ ನಿಕುಂಭನನ್ನು ಹೀಗೆ ಹನುಮಂತನು ಸಂಹರಿಸಲಾಗಿ, ರೋಷಾವಿಷ್ಟರಾದ ಶ್ರೀರಾಮನಿಗೂ, (ಖರನೆಂಬ) ರಾಕ್ಷಸೇಂದ್ರನ ಪುತ್ರನಾದ ಮಕರಾಕ್ಷನಿಗೂ ದಾರುಣವಾದ ಯುದ್ಧವು ನಡೆಯಿತು (೨೪). ನಿಕುಂಭನ ಪ್ರಾಣವು ಹೋಗಲು, ವಾನರರು ಹರ್ಷಘೋಷಮಾಡುತ್ತಿರಲಾಗಿ

ಚಚಾಲೇವ ಚೋರ್ವೀ ಪಫಾಲೇವ ಚ ದ್ಯೌ-
ರ್ಭಯಂ ರಾಕ್ಷಸಾನಾಂ ಬಲಂ ಚಾವಿವೇಶ ॥ ೨೫

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತಸಪ್ತತಿತಮಃ ಸರ್ಗಃ

---

## ಅಷ್ಟಸಪ್ತತಿತಮಃ ಸರ್ಗಃ

### ಮಕರಾಕ್ಷಾಭಿಷೇಣನಮ್

ನಿಕುಂಭಂ ಚ ಹತಂ ಶ್ರುತ್ವಾ ಕುಂಭಂ ಚ ವಿನಿಪಾತಿತಮ್ ।
ರಾವಣಃ ಪರಮಾಮರ್ಷೀ ಪ್ರಜಜ್ವಾಲಾನಲೋ ಯಥಾ ॥ ೧

ನೈರ್ಋತಃ ಕ್ರೋಧಶೋಕಾಭ್ಯಾಂ ದ್ವಾಭ್ಯಾಂ ತು ಪರಿಮೂರ್ಛಿತಃ ।
ಖರಪುತ್ರಂ ವಿಶಾಲಾಕ್ಷಂ ಮಕರಾಕ್ಷಮಚೋದಯತ್ ॥ ೨

ಗಚ್ಛ ಪುತ್ರ ಮಯಾಜ್ಞಪ್ತೋ ಬಲೇನಾಭಿಸಮನ್ವಿತಃ ।
ರಾಘವಂ ಲಕ್ಷ್ಮಣಂ ಚೈವ ಜಹಿ ತಾಂಶ್ಚ ವನೌಕಸಃ ॥ ೩

---

ದಿಕ್ಕುಗಳು ಮೊಳಗಿದವು. ಭೂಮಿಯು ಕಂಪಿಸಿದಂತಾಯಿತು. ಆಕಾಶವು ಒಡೆದಂತಾಯಿತು. ರಾಕ್ಷಸಪಡೆಯನ್ನು ಭಯವು ಆವರಿಸಿತು (೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತೇಳನೆಯ ಸರ್ಗ

---

## ಸರ್ಗ ೭೮

### ಮಕರಾಕ್ಷನು ಯುದ್ಧಕ್ಕೆ ಹೊರಡುವುದು.

ಕುಂಭನಿಕುಂಭರಿಬ್ಬರೂ ಯುದ್ಧದಲ್ಲಿ ಹತರಾದರೆಂಬ ಸುದ್ದಿ ರಾವಣನಿಗೆ ಮುಟ್ಟಿತು. ಅವನು ಸಿಟ್ಟಿನಿಂದ ಬೆಂಕಿಯಂತಾದನು. ಒಂದುಕಡೆ ಸಿಟ್ಟು, ಒಂದು ಕಡೆ ದುಃಖ—ಇವೆರಡರಿಂದ ಆ ರಾಕ್ಷಸೇಶ್ವರನಿಗೆ ಪ್ರಜ್ಞೆಯಿಲ್ಲದಂತಾಯಿತು (೧-೨). ಅವನು ಖರನ ಪುತ್ರನಾದ ಮಕರಾಕ್ಷನನ್ನು

ರಾವಣಸ್ಯ ವಚಃ ಶ್ರುತ್ವಾ ಶೂರಮಾನೀ ಖರಾತ್ಮಜಃ ।
ಬಾಢಮಿತ್ಯಬ್ರವೀದ್ಧೃಷ್ಟೋ ಮಕರಾಕ್ಷೋ ನಿಶಾಚರಃ ॥ ೪

ಸೋಽಭಿವಾದ್ಯ ದಶಗ್ರೀವಂ ಕೃತ್ವಾ ಚಾಪಿ ಪ್ರದಕ್ಷಿಣಮ್ ।
ನಿರ್ಜಗಾಮ ಗೃಹಾಚ್ಛುಭ್ರಾದ್ರಾವಣಸ್ಯಾಜ್ಞಯಾ ಬಲೀ ॥ ೫

ಸಮೀಪಸ್ಥಂ ಬಲಾಧ್ಯಕ್ಷಂ ಖರಪುತ್ರೋಽಬ್ರವೀದಿದಮ್ ।
ರಥಶ್ಚಾನೀಯತಾಂ ಶೀಘ್ರಂ ಸೈನ್ಯಂ ಚಾಹೂಯತಾಂ ತ್ವರಾತ್ ॥ ೬

ತಸ್ಯ ತದ್ವಚನಂ ಶ್ರುತ್ವಾ ಬಲಾಧ್ಯಕ್ಷೋ ನಿಶಾಚರಃ ।
ಸ್ಯಂದನಂ ಚ ಬಲಂ ಚೈವ ಸಮೀಪಂ ಪ್ರತ್ಯಪಾದಯತ್ ॥ ೭

ಪ್ರದಕ್ಷಿಣಂ ರಥಂ ಕೃತ್ವಾ ಆರುರೋಹ ನಿಶಾಚರಃ ।
ಸೂತಂ ಸಂಚೋದಯಾಮಾಸ ಶೀಘ್ರಂ ಮೇ ರಥಮಾವಹ ॥ ೮

ಅಥ ತಾನ್ ರಾಕ್ಷಸಾನ್ ಸರ್ವಾನ್ ಮಕರಾಕ್ಷೋಽಬ್ರವೀದಿದಮ್ ।
ಯೂಯಂ ಸರ್ವೇ ಪ್ರಯುಧ್ಯಧ್ವಂ ಪುರಸ್ತಾನ್ಮಮ ರಾಕ್ಷಸಾಃ ॥ ೯

---

ಕರೆದು "ವತ್ಸ, ಈಗಲೇ ನೀನು ನನ್ನ ಆಜ್ಞೆಯಂತೆ ಸೇನಾಸಮೇತನಾಗಿ ಹೋಗಿ ರಾಮಲಕ್ಷ್ಮಣರನ್ನೂ ಆ ಕಪಿಗಳನ್ನೂ ಸಂಹರಿಸು" ಎಂದು ಹೇಳಿದನು (೩). ತಾನು ಶೂರನೆಂದು ಹೆಮ್ಮೆಪಡುತ್ತಿದ್ದ ಮಕರಾಕ್ಷನು ಆನಂದದಿಂದ "ಓಹೊ! ಆಗಲಿ" ಎಂದು ನುಡಿದು, ರಾವಣನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಅವನ ಅನುಮತಿಯಂತೆ ಅರಮನೆಯಿಂದ ಹೊರಟನು (೪–೫). ಖರಪುತ್ರನಾದ ಮಕರಾಕ್ಷನು ಸಮೀಪದಲ್ಲಿದ್ದ ತನ್ನ ಸೇನಾಪತಿಯನ್ನು ನೋಡಿ "ಸೇನಾಪತಿ, ನನ್ನ ರಥವನ್ನು ಬೇಗನೆ ತರಿಸು. ನಮ್ಮ ಸೇನೆಯನ್ನು ತ್ವರಿತವಾಗಿ ಕರೆಸು" ಎಂದು ತಿಳಿಸಿದನು (೬). ಅವನ ಆದೇಶದಂತೆ ಸೇನಾಪತಿಯು ರಥವನ್ನೂ ಸೇನೆಯನ್ನೂ ಬಳಿಗೆ ಬರಮಾಡಿದನು. ಆಗ ಮಕರಾಕ್ಷನು ರಥಕ್ಕೆ ಬಲವಂದು, ಅದನ್ನೇರಿ "ಸಾರಥಿ, ರಥವನ್ನು ಶೀಘ್ರವಾಗಿ ರಣರಂಗಕ್ಕೆ ನಡೆಸು" ಎಂದು ಸೂಚಿಸಿದನು (೭–೮). ಮತ್ತು ರಾಕ್ಷಸಭಟರನ್ನು ನೋಡಿ "ಎಲೈ ರಾಕ್ಷಸಯೋಧರೆ, ನೀವು ನನ್ನೆದುರಿಗೆ ವಾನರಸೇನೆಯೊಡನೆ ಕಾಳಗವನ್ನು ನಡೆಸಿರಿ.

ಅಹಂ ರಾಕ್ಷಸರಾಜೇನ ರಾವಣೇನ ಮಹಾತ್ಮನಾ ।
ಆಜ್ಞಪ್ತಃ ಸಮರೇ ಹಂತುಂ ತಾವುಭೌ ರಾಮಲಕ್ಷ್ಮಣೌ ॥ ೧೦

ಅದ್ಯ ರಾಮಂ ವಧಿಷ್ಯಾಮಿ ಲಕ್ಷ್ಮಣಂ ಚ ನಿಶಾಚರಾಃ ।
ಶಾಖಾಮೃಗಂ ಚ ಸುಗ್ರೀವಂ ವಾನರಾಂಶ್ಚ ಶರೋತ್ತಮೈಃ ॥ ೧೧

ಅದ್ಯ ಶೂಲನಿಪಾತೈಶ್ಚ ವಾನರಾಣಾಂ ಮಹಾಚಮೂಮ್ ।
ಪ್ರದಹಿಷ್ಯಾಮಿ ಸಂಪ್ರಾಪ್ತಃ ಶುಷ್ಕೇಂಧನಮಿವಾನಲಃ ॥ ೧೨

ಮಕರಾಕ್ಷಸ್ಯ ತಚ್ಛ್ರುತ್ವಾ ವಚನಂ ತೇ ನಿಶಾಚರಾಃ ।
ಸರ್ವೇ ನಾನಾಯುಧೋಪೇತಾ ಬಲವಂತಃ ಸಮಾಗತಾಃ ॥ ೧೩

ತೇ ಕಾಮರೂಪಿಣಃ ಸರ್ವೇ ದಂಷ್ಟ್ರಿಣಃ ಪಿಂಗಲೇಕ್ಷಣಾಃ ।
ಮಾತಂಗಾ ಇವ ನರ್ದಂತೋ ಧ್ವಸ್ತಕೇಶಾ ಭಯಾನಕಾಃ ॥ ೧೪

ಪರಿವಾರ್ಯ ಮಹಾಕಾಯಾ ಮಹಾಕಾಯಂ ಖರಾತ್ಮಜಮ್ ।
ಅಭಿಜಗ್ಮುಸ್ತತೋ ಹೃಷ್ಟಾಶ್ಚಾಲಯಂತೋ ವಸುಂಧರಾಮ್ ॥ ೧೫

---

ರಾಕ್ಷಸೇಂದ್ರನಾದ ರಾವಣನು ರಾಮಲಕ್ಷ್ಮಣರನ್ನು ಸಮರದಲ್ಲಿ ಸಂಹರಿಸಬೇಕೆಂದು ನನಗೆ ಆಜ್ಞೆಯನ್ನಿತ್ತಿದ್ದಾನೆ (೯–೧೦). ಆದ್ದರಿಂದ ನಾನೇ ಮೊದಲು ರಾಮಲಕ್ಷ್ಮಣರನ್ನು ಸಂಹರಿಸುತ್ತೇನೆ. ಅನಂತರ ಸುಗ್ರೀವನೆಂಬ ಕಪಿಯನ್ನೂ ಇತರ ಕಪಿಗಳನ್ನೂ ತೀಕ್ಷ್ಣಾಸ್ತ್ರಗಳಿಂದ ಕೊಲ್ಲುವೆನು! ನಾನು ನಿಮಗೆ ಬೆಂಬಲವಾಗಿ ಬಂದು ಶೂಲದ ತಿವಿತಗಳಿಂದಲೇ, ಬೆಂಕಿಯು ಒಣಕಟ್ಟಿಗೆಯನ್ನು ಸುಡುವಂತೆ, ಕಪಿಗಳ ಮಹಾಸೇನೆಯನ್ನು ಕೊಂದು ಧೂಳೆಬ್ಬಿಸುವೆನು" ಎಂದು ಹೇಳಿದನು (೧೧–೧೨). ಮಕರಾಕ್ಷನ ಪೌರುಷವಚನವನ್ನು ಕೇಳಿ ಬಲಶಾಲಿಗಳಾದ ಸಮಸ್ತನಿಶಾಚರರೂ ನಾನಾಯುಧಗಳನ್ನು ಝಳಪಿಸುತ್ತ ಹೊರಟರು. ಆ ಭಟರೆಲ್ಲರೂ ಕಾಮರೂಪಿಗಳು; ಕೋರೆಹಲ್ಲುಗಳುಳ್ಳ ಕೆಂಗಣ್ಣಿನವರು. ಘೋರರೂಪದ ಮಹಾಕಾಯರಾದ ಆ ನಿಶಾಚರರು ತಲೆಕೂದಲನ್ನು ಕೆದರಿಕೊಂಡು, ಕಾಡಾನೆಗಳಂತೆ ಕೂಗುತ್ತ ಹೊರಟರು (೧೩–೧೪). ಖರಾತ್ಮಜನಾದ ಮಕರಾಕ್ಷನನ್ನು ಸುತ್ತುಗಟ್ಟಿ, ಭೂಮಿಯನ್ನು ನಡುಗಿಸು

ಶಂಖಭೇರೀಸಹಸ್ರಾಣಾಮಾಹತಾನಾಂ ಸಮಂತತಃ ।
ಕ್ಷ್ವೇಲಿತಾಸ್ಫೋಟಿತಾನಾಂ ಚ ತತಃ ಶಬ್ದೋ ಮಹಾನಭೂತ್ ॥ ೧೬

ಪ್ರಭ್ರಷ್ಟೋಽಥ ಕರಾತ್ತಸ್ಯ ಪ್ರತೋದಃ ಸಾರಥೇಸ್ತದಾ ।
ಪಪಾತ ಸಹಸಾ ಚೈವ ಧ್ವಜಸ್ತಸ್ಯ ಚ ರಕ್ಷಸಃ ॥ ೧೭

ತಸ್ಯ ತೇ ರಥಯುಕ್ತಾಶ್ಚ ಹಯಾ ವಿಕ್ರಮವರ್ಜಿತಾಃ ।
ಚರಣೈರಾಕುಲೈರ್ಗತ್ವಾ ದೀನಾಃ ಸಾಸ್ರಮುಖಾ ಯಯುಃ ॥ ೧೮

ಪ್ರವಾತಿ ಪವನಸ್ತಸ್ಮಿನ್ ಸಪಾಂಸುಃ ಖರದಾರುಣಃ ।
ನಿರ್ಯಾಣೇ ತಸ್ಯ ರೌದ್ರಸ್ಯ ಮಕರಾಕ್ಷಸ್ಯ ದುರ್ಮತೇಃ ॥ ೧೯

ತಾನಿ ದೃಷ್ಟ್ವಾ ನಿಮಿತ್ತಾನಿ ರಾಕ್ಷಸಾ ವೀರ್ಯವತ್ತಮಾಃ ।
ಅಚಿಂತ್ಯ ನಿರ್ಗತಾಃ ಸರ್ವೇ ಯತ್ರ ತೌ ರಾಮಲಕ್ಷ್ಮಣೌ ॥ ೨೦

ಘನಗಜಮಹಿಷಾಂಗತುಲ್ಯವರ್ಣಾಃ
ಸಮರಮುಖೇಷ್ವಸಕೃದ್ಗದಾಸಿಭಿನ್ನಾಃ ।

---

ವರೋ ಎಂಬಂತೆ ರಣಭೂಮಿಗೆ ನಡೆದರು. ಶಂಖಗಳನ್ನೂದಿದರು, ಸಾವಿರಾರು ರಣಭೇರಿಗನ್ನು ಹೊಯ್ದರು; ಗರ್ಜಿಸಿದರು; ಸೆಡ್ಡುಹೊಡೆದರು. ಭೀಕರವಾದ ಗದ್ದಲ ಉಂಟಾಯಿತು (೧೫-೧೬). ರಣಭೂಮಿಗೆ ತೆರಳುವಾಗ ಮಕರಾಕ್ಷನ ಸಾರಥಿಯ ಕೈಯಿಂದ ಚಾಟಿಯು ಅಕಸ್ಮಾತ್ ಜಾರಿಬಿದ್ದಿತು! ಧ್ವಜವು ಇದ್ದಕ್ಕಿದ್ದಂತೆ ಉರುಳಿತು. ರಥಕ್ಕೆ ಹೂಡಿದ ಅಶ್ವಗಳು ಉತ್ಸಾಹವಿಲ್ಲದೆ ದೈನ್ಯದಿಂದ ಕಣ್ಣೀರುಸುರಿಸುತ್ತ, ತೊಡರುಗಾಲಿಡುತ್ತ ಸಾಗುತ್ತಿದ್ದವು (೧೭-೧೮). ಕ್ರೂರನೂ ಬುದ್ಧಿಗೇಡಿಯೂ ಆದ ಮಕರಾಕ್ಷನು ಇದನ್ನು ಲಕ್ಷಿಸದೆ ಹೋಗುತ್ತಿರಲು, ಪರುಷವೂ ಭೀಷಣವೂ ಆದ ಬಿರುಗಾಳಿಯು ಎದುರಾಗಿ ಬೀಸಿತು. ಶೂರರಾದ ರಾಕ್ಷಸಭಟರು ಈ ಅಪಶಕುನಗಳನ್ನು ಕಂಡರೂ ಗಣಿಸದೆ, ಶ್ರೀರಾಮನೂ ಲಕ್ಷ್ಮಣನೂ ಇದ್ದ ರಣರಂಗದ ಕಡೆಗೆ ಪ್ರಯಾಣಮಾಡಿದರು (೧೯-೨೦). ಆ ನಿಶಾಚರರು ಕಾರ್ಮೋಡದಂತೆಯೂ ಆನೆಯಂತೆಯೂ ಕೋಣದಂತೆಯೂ ಕಪ್ಪು ಬಣ್ಣದ ದೃಢಕಾಯರು. ಎಷ್ಟೋಸಲ ರಣರಂಗದಲ್ಲಿ ಗದೆಗಳಿಂದಲೂ ಖಡ್ಗಗಳಿಂದಲೂ ಪೆಟ್ಟುತಿಂದು ಪಳಗಿದವರು. ಸಮರಕೋವಿದರಾದ

ಅಹಮಹಮಿತಿ ಯುದ್ಧಕೌಶಲಾಸ್ತೇ
ರಜನಿಚರಾಃ ಪರಿಬಭ್ರಮುರ್ನದಂತಃ ॥ ೨೧

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಸಪ್ತತಿತಮಃ ಸರ್ಗಃ

---

## ಏಕೋನಾಶೀತಿತಮಃ ಸರ್ಗಃ

### ಮಕರಾಕ್ಷವಧಃ

ನಿರ್ಗತಂ ಮಕರಾಕ್ಷಂ ತೇ ದೃಷ್ಟ್ವಾ ವಾನರಯೂಥಪಾಃ ।
ಆಪ್ಲುತ್ಯ ಸಹಸಾ ಸರ್ವೇ ಯೋದ್ಧುಕಾಮಾ ವ್ಯವಸ್ಥಿತಾಃ ॥ ೧
ತತಃ ಪ್ರವೃತ್ತಂ ಸುಮಹತ್ತದ್ಯುದ್ಧಂ ರೋಮಹರ್ಷಣಮ್ ।
ನಿಶಾಚರೈಃ ಪ್ಲವಂಗಾನಾಂ ದೇವಾನಾಂ ದಾನವೈರಿವ ॥ ೨
ವೃಕ್ಷಶೂಲನಿಪಾತೈಶ್ಚ ಶಿಲಾಪರಿಘಪಾತನೈಃ ।
ಅನ್ಯೋನ್ಯಂ ಮರ್ದಯಂತಿ ಸ್ಮ ತದಾ ಕಪಿನಿಶಾಚರಾಃ ॥ ೩

---

ಆ ರಾಕ್ಷಸಭಟರು 'ನಾನು ಮುಂದೆ ತಾನು ಮುಂದೆ' ಎನ್ನುತ್ತ ಸಮರಾಂಗಣದಲ್ಲಿ ನುಗ್ಗಿದರು (೨೧).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತೆಂಟನೆಯ ಸರ್ಗ

---

## ಸರ್ಗ ೭೯

### ಶ್ರೀರಾಮನಿಂದ ಮಕರಾಕ್ಷನ ಸಂಹಾರ.

ಮಕರಾಕ್ಷನು ಯುದ್ಧಕ್ಕಾಗಿ ಲಂಕೆಯಿಂದ ಹೊರಟುಬಂದುದನ್ನು ಕಂಡೊಡನೆ, ವಾನರಯೂಥಪರು ತಮ್ಮ ತಮ್ಮ ನೆಲೆಗಳಿಗೆ ಹಾರಿ ಯುದ್ಧಾಪೇಕ್ಷೆಯಿಂದ ವ್ಯವಸ್ಥಿತರಾಗಿ ನಿಂತರು. ಅನಂತರ ನಿಶಾಚರರಿಗೂ ವಾನರರಿಗೂ, ದೇವದಾನವರಿಗೆ ನಡೆದಂತೆ ವೈನವಿರೇಳಿಸುವ ಘೋರ ಸಂಗ್ರಾಮವು ತೊಡಗಿತು (೧–೨). ವೃಕ್ಷಶೂಲಗಳಿಂದಲೂ ಶಿಲಾಪರಿಘ

ಶಕ್ತಿಖಡ್ಗಗದಾಕುಂತೈಸ್ತೋಮರೈಶ್ಚ ನಿಶಾಚರಾಃ ।
ಪಟ್ಟಿಸೈರ್ಭಿಂಡಿಪಾಲೈಶ್ಚ ಬಾಣಪಾತೈಃ ಸಮಂತತಃ ॥ ೪

ಪಾಶಮುದ್ಗರದಂಡೈಶ್ಚ ನಿರ್ಘಾತೈಶ್ಚಾಪರೇ ತದಾ ।
ಕದನಂ ಕಪಿವೀರಾಣಾಂ ಚಕ್ರುಸ್ತೇ ರಜನೀಚರಾಃ ॥ ೫

ಬಾಣೌಘೈರರ್ದಿತಾಶ್ಚಾಪಿ ಖರಪುತ್ರೇಣ ವಾನರಾಃ ।
ಸಂಭ್ರಾಂತಮನಸಃ ಸರ್ವೇ ದುದ್ರುವುರ್ಭಯಪೀಡಿತಾಃ ॥ ೬

ತಾನ್ ದೃಷ್ಟ್ವಾ ರಾಕ್ಷಸಾಃ ಸರ್ವೇ ದ್ರವಮಾಣಾನ್ ವಲೀಮುಖಾನ್
ನೇದುಸ್ತೇ ಸಿಂಹವದ್ಧೃಷ್ಟಾ ರಾಕ್ಷಸಾ ಜಿತಕಾಶಿನಃ ॥ ೭

ವಿದ್ರವತ್ಸು ತದಾ ತೇಷು ವಾನರೇಷು ಸಮಂತತಃ ।
ರಾಮಸ್ತಾನ್ ವಾರಯಾಮಾಸ ಶರವರ್ಷೇಣ ರಾಕ್ಷಸಾನ್ ॥ ೮

ವಾರಿತಾನ್ ರಾಕ್ಷಸಾನ್ ದೃಷ್ಟ್ವಾ ಮಕರಾಕ್ಷೋ ನಿಶಾಚರಃ ।
ಕ್ರೋಧಾನಲಸಮಾವಿಷ್ಟೋ ವಚನಂ ಚೇದಮಬ್ರವೀತ್ ॥ ೯

ಕ್ವಾಸೌ ರಾಮಃ ಸುದುರ್ಬುದ್ಧಿರ್ಯೇನ ಮೇ ನಿಹತಃ ಪಿತಾ ।
ಜನಸ್ಥಾನಗತಃ ಪೂರ್ವಂ ಸಾನುಗಃ ಸಪರಿಚ್ಛದಃ ॥ ೧೦

---

ಗಳಿಂದಲೂ ಅವರು ಒಬ್ಬರನ್ನೊಬ್ಬರು ಮರ್ದಿಸಿದರು. ಶಕ್ತಿ, ಖಡ್ಗ, ಗದೆ, ಕುಂತ, ತೋಮರ, ಪಟ್ಟಿಸ, ಭಿಂಡಿಪಾಲ, ಬಾಣ, ಪಾಶ, ಮುದ್ಗರ, ದಂಡ, ಸಿಡಿಲಿನಂತೆ ಧ್ವನಿಗೈಯುವ ಯಂತ್ರ–ಮುಂತಾದ ಆಯುಧಗಳಿಂದ ರಾಕ್ಷಸರು ಕಪಿಯೋಧರೊಡನೆ ಕದನವನ್ನು ನಡೆಸಿದರು (೩–೫). ಮಕರಾಕ್ಷನ ಶರಪ್ರಹಾರಗಳಿಂದ ನೊಂದ ವಾನರರು ಕಳವಳಗೊಂಡು ಅಂಜಿ ಹಿಂಜರಿದು ಓಡತೊಡಗಿದರು. ಓಡಿಹೋಗುವ ವಾನರರನ್ನು ಕಂಡು ಜಯಶಾಲಿಗಳಾದ ರಾಕ್ಷಸರು ಹರ್ಷದಿಂದ ಸಿಂಹದಂತೆ ಗರ್ಜಿಸುತ್ತ ಅವರನ್ನು ಅಟ್ಟಿಸಿಕೊಂಡುಹೋದರು (೬–೭). ಆ ಸಮಯದಲ್ಲಿ ಶ್ರೀರಾಮನು ಬಂದು ಶರವೃಷ್ಟಿಯನ್ನು ಸುರಿಸಿ ರಾಕ್ಷಸರನ್ನು ಅಡ್ಡಗಟ್ಟಿದನು. ರಾಕ್ಷಸರು ಮುಂದುವರಿಯಲಾರದೆ ನಿಂತುದನ್ನು ನೋಡಿ, ಮಕರಾಕ್ಷನು ಕ್ರೋಧಾಗ್ನಿಯಿಂದ ಜ್ವಲಿಸುತ್ತ “ರಾಮನೆಂಬ ಆ ದುರುಳನು ಎಲ್ಲಿದ್ದಾನೆ? ಅವನಲ್ಲವೆ ನನ್ನ ತಂದೆಯನ್ನು ಕೊಂದವನು? ನನ್ನ ತಂದೆ

ಅದ್ಯ ಗಂತಾಸ್ಮಿ ವೈರಸ್ಯ ಪಾರಂ ವೈ ರಜನೀಚರಾಃ ।
ಸುಹೃದಾಂ ಚೈವ ಸರ್ವೇಷಾಂ ನಿಹತಾನಾಂ ರಣಾಜಿರೇ ॥ ೧೧

ಹತ್ವಾ ರಾಮಂ ಸುದುರ್ಬುದ್ಧಿಂ ಲಕ್ಷ್ಮಣಂ ಚ ಸವಾನರಮ್ ।
ತೇಷಾಂ ಶೋಣಿತನಿಷ್ಯಂದೈಃ ಕರಿಷ್ಯೇ ಸಲಿಲಕ್ರಿಯಾಮ್ ॥ ೧೨

ಏವಮುಕ್ತ್ವಾ ಮಹಾಬಾಹುರ್ಯುದ್ಧೇ ಸ ರಜನೀಚರಃ ।
ವ್ಯಲೋಕಯತ ತತ್ ಸರ್ವಂ ಬಲಂ ರಾಮದಿದೃಕ್ಷಯಾ ॥ ೧೩

ಆಹೂಯಮಾನಃ ಕಪಿಭಿರ್ಬಹುಭಿರ್ಬಲಶಾಲಿಭಿಃ ।
ಯುದ್ಧಾಯ ಸ ಮಹಾತೇಜಾ ರಾಮಾದನ್ಯಂ ನ ಚೇಚ್ಛತಿ ॥ ೧೪

ಮಾರ್ಗಮಾಣಸ್ತದಾ ರಾಮಂ ಬಲವಾನ್ ರಜನೀಚರಃ ।
ರಥೇನಾಂಬುದಘೋಷೇಣ ವ್ಯಚರತ್ತಾಮನೀಕಿನೀಮ್ ॥ ೧೫

ದೃಷ್ಟ್ವಾ ರಾಮಮದೂರಸ್ಥಂ ಲಕ್ಷ್ಮಣಂ ಚ ಮಹಾರಥಮ್ ।
ಸಘೋಷಂ ಪಾಣಿನಾಹೂಯ ತತೋ ವಚನಮಬ್ರವೀತ್ ॥ ೧೬

---

ಜನಸ್ಥಾನದಲ್ಲಿರುವಾಗ ಅವನನ್ನು ಬಂಧುಬಳಗಗಳೊಡನೆ ಈತನು ಸಂಹರಿಸಿದ್ದಾನೆ (೮-೧೦). ಎಲೈ ರಾಕ್ಷಸಭಟರೆ, ಈ ದಿನ ನನ್ನ ಸೇಡನ್ನು ತೀರಿಸಿಕೊಳ್ಳುವೆನು! ರಣಾಂಗಣದಲ್ಲಿ ಹತರಾದ ನನ್ನ ಮಿತ್ರರೆಲ್ಲರ ಮುಯ್ಯನ್ನು ತೀರಿಸುವೆನು. ದುರುಳನಾದ ರಾಮನನ್ನೂ ಲಕ್ಷ್ಮಣನನ್ನೂ ಕೊಂದು ವಾನರನಾದ ಸುಗ್ರೀವನನ್ನು ಸಂಹರಿಸಿ, ಅವರ ನೆತ್ತರಿಂದ ಪಿತೃಗಳಿಗೆ ತರ್ಪಣವನ್ನೀಯುವೆನು!" ಎಂದು ಆರ್ಭಟಿಸಿದನು (೧೧-೧೨). ಅನಂತರ ಶೂರನಾದ ಆ ರಾಕ್ಷಸನು ಶ್ರೀರಾಮನೆಲ್ಲಿರುವನೆಂಬುದನ್ನು ತಿಳಿಯಲು ಸೇನೆಯ ಎಲ್ಲ ಭಾಗಗಳಲ್ಲಿಯೂ ದೃಷ್ಟಿಯನ್ನು ಹರಿಸಿದನು. ಬಲಶಾಲಿಗಳಾದ ಬಹುಮಂದಿ ಕಪಿಯೂಥಪರು ಮಕರಾಕ್ಷನನ್ನು ಯುದ್ಧಕ್ಕೆ ಆಹ್ವಾನಿಸಿದರೂ ಅವನು ಒಪ್ಪಲಿಲ್ಲ. ಶ್ರೀರಾಮನಲ್ಲದೆ ಇನ್ನೊಬ್ಬನೊಡನೆ ಕಾದಾಡಲು ಅವನು ಅಪೇಕ್ಷಿಸಲಿಲ್ಲ! (೧೩-೧೪). ಆ ರಾಕ್ಷಸನು ಶ್ರೀರಾಮನನ್ನು ಅರಸುತ್ತ, ಗುಡುಗಿನಂತೆ ಗುಡುಗುಟ್ಟುವ ರಥದಲ್ಲಿ ಕುಳಿತು ಸೇನೆಯಲ್ಲಿ ಸುತ್ತಾಡಿದನು. ಸ್ವಲ್ಪಕಾಲದಲ್ಲಿಯೇ ಶ್ರೀರಾಮನೂ ಲಕ್ಷ್ಮಣನೂ ಕಾಣಿಸಿದರು. ಮಕರಾಕ್ಷನು ಶ್ರೀರಾಮನನ್ನು

ಶಕ್ತಿಖಡ್ಗಗದಾಕುಂತೈಸ್ತೋಮರೈಶ್ಚ ನಿಶಾಚರಾಃ ।
ಪಟ್ಟಿಸೈರ್ಭಿಂಡಿಪಾಲೈಶ್ಚ ಬಾಣಪಾತೈಃ ಸಮಂತತಃ ॥ ೪

ಪಾಶಮುದ್ಗರದಂಡೈಶ್ಚ ನಿರ್ಘಾತೈಶ್ಚಾಪರೇ ತದಾ ।
ಕದನಂ ಕಪಿವೀರಾಣಾಂ ಚಕ್ರುಸ್ತೇ ರಜನೀಚರಾಃ ॥ ೫

ಬಾಣೌಘೈರರ್ದಿತಾಶ್ಚಾಪಿ ಖರಪುತ್ರೇಣ ವಾನರಾಃ ।
ಸಂಭ್ರಾಂತಮನಸಃ ಸರ್ವೇ ದುದ್ರುವುರ್ಭಯಪೀಡಿತಾಃ ॥ ೬

ತಾನ್ ದೃಷ್ಟ್ವಾ ರಾಕ್ಷಸಾಃ ಸರ್ವೇ ದ್ರವಮಾಣಾನ್ ವಲೀಮುಖಾನ್
ನೇದುಸ್ತೇ ಸಿಂಹವದ್ಧೃಷ್ಟಾ ರಾಕ್ಷಸಾ ಜಿತಕಾಶಿನಃ ॥ ೭

ವಿದ್ರವತ್ಸು ತದಾ ತೇಷು ವಾನರೇಷು ಸಮಂತತಃ ।
ರಾಮಸ್ತಾನ್ ವಾರಯಾಮಾಸ ಶರವರ್ಷೇಣ ರಾಕ್ಷಸಾನ್ ॥ ೮

ವಾರಿತಾನ್ ರಾಕ್ಷಸಾನ್ ದೃಷ್ಟ್ವಾ ಮಕರಾಕ್ಷೋ ನಿಶಾಚರಃ ।
ಕ್ರೋಧಾನಲಸಮಾವಿಷ್ಟೋ ವಚನಂ ಚೇದಮಬ್ರವೀತ್ ॥ ೯

ಕ್ವಾಸೌ ರಾಮಃ ಸುದುರ್ಬುದ್ಧಿರ್ಯೇನ ಮೇ ನಿಹತಃ ಪಿತಾ ।
ಜನಸ್ಥಾನಗತಃ ಪೂರ್ವಂ ಸಾನುಗಃ ಸಪರಿಚ್ಛದಃ ॥ ೧೦

---

ಗಳಿಂದಲೂ ಅವರು ಒಬ್ಬರನ್ನೊಬ್ಬರು ಮರ್ದಿಸಿದರು. ಶಕ್ತಿ, ಖಡ್ಗ, ಗದೆ, ಕುಂತ, ತೋಮರ, ಪಟ್ಟಿಸ, ಭಿಂಡಿಪಾಲ, ಬಾಣ, ಪಾಶ, ಮುದ್ಗರ, ದಂಡ, ಸಿಡಿಲಿನಂತೆ ಧ್ವನಿಗೈಯುವ ಯಂತ್ರ–ಮುಂತಾದ ಆಯುಧಗಳಿಂದ ರಾಕ್ಷಸರು ಕಪಿಯೋಧರೊಡನೆ ಕದನವನ್ನು ನಡೆಸಿದರು (೩–೫). ಮಕರಾಕ್ಷನ ಶರಪ್ರಹಾರಗಳಿಂದ ನೊಂದ ವಾನರರು ಕಳವಳಗೊಂಡು ಅಂಜಿ ಹಿಂಜರಿದು ಓಡತೊಡಗಿದರು. ಓಡಿಹೋಗುವ ವಾನರರನ್ನು ಕಂಡು ಜಯಶಾಲಿಗಳಾದ ರಾಕ್ಷಸರು ಹರ್ಷದಿಂದ ಸಿಂಹದಂತೆ ಗರ್ಜಿಸುತ್ತ ಅವರನ್ನು ಅಟ್ಟಿಸಿಕೊಂಡುಹೋದರು (೬–೭). ಆ ಸಮಯದಲ್ಲಿ ಶ್ರೀರಾಮನು ಬಂದು ಶರವೃಷ್ಟಿಯನ್ನು ಸುರಿಸಿ ರಾಕ್ಷಸರನ್ನು ಅಡ್ಡಗಟ್ಟಿದನು. ರಾಕ್ಷಸರು ಮುಂದುವರಿಯಲಾರದೆ ನಿಂತುದನ್ನು ನೋಡಿ, ಮಕರಾಕ್ಷನು ಕ್ರೋಧಾಗ್ನಿಯಿಂದ ಜ್ವಲಿಸುತ್ತ "ರಾಮನೆಂಬ ಆ ದುರುಳನು ಎಲ್ಲಿದ್ದಾನೆ? ಅವನಲ್ಲವೆ ನನ್ನ ತಂದೆಯನ್ನು ಕೊಂದವನು? ನನ್ನ ತಂದೆ

ಅಸ್ತ್ರೈರ್ವಾ ಗದಯಾ ವಾಪಿ ಬಾಹುಭ್ಯಾಂ ವಾ ಮಹಾಹವೇ ।
ಅಭ್ಯಸ್ತಂ ಯೇನ ವಾ ರಾಮ ತೇನೈವ ಯುಧಿ ವರ್ತತಾಮ್ ॥ ೨೩

ಮಕರಾಕ್ಷವಚಃ ಶ್ರುತ್ವಾ ರಾಮೋ ದಶರಥಾತ್ಮಜಃ ।
ಅಬ್ರವೀತ್ ಪ್ರಹಸನ್ ವಾಕ್ಯಮುತ್ತರೋತ್ತರವಾದಿನಮ್ ॥ ೨೪

ಕತ್ಥಸೇ ಕಿಂ ವೃಥಾ ರಕ್ಷೋ ಬಹೂನ್ಯಸದೃಶಾನಿ ತು ।
ನ ರಣೇ ಶಕ್ಯತೇ ಜೇತುಂ ವಿನಾ ಯುದ್ಧೇನ ವಾಗ್ಬಲಾತ್ ॥ ೨೫

ಚತುರ್ದಶ ಸಹಸ್ರಾಣಿ ರಕ್ಷಸಾಂ ತ್ವತ್ಪಿತಾ ಚ ಯಃ ।
ತ್ರಿಶಿರಾ ದೂಷಣಶ್ಚೈವ ದಂಡಕೇ ನಿಹತಾ ಮಯಾ ॥ ೨೬

ಸ್ವಾಶಿತಾಸ್ತವ ಮಾಂಸೇನ ಗೃಧ್ರಗೋಮಾಯುವಾಯಸಾಃ ।
ಭವಿಷ್ಯಂತ್ಯದ್ಯ ವೈ ಪಾಪ ತೀಕ್ಷ್ಣತುಂಡನಖಾಂಕುರಾಃ ॥ ೨೭

ರುಧಿರಾರ್ದ್ರಮುಖಾ ಹೃಷ್ಟಾ ರಕ್ತಪಕ್ಷಾಃ ಖಗಾಶ್ಚ ಯೇ ।
ಖೇ ತಥಾ ವಸುಧಾಯಾಂ ಚ ಭ್ರಮಿಷ್ಯಂತಿ ಸಮಂತತಃ ॥ ೨೮

---

ಸಮರಾಂಗಣದಲ್ಲಿ ಹೋರಾಡುವುದನ್ನು ಸಮಸ್ತ ಜಗತ್ತೂ ನೋಡಲಿ! ನಿನಗೆ ಯಾವ ಬಗೆಯ ಯುದ್ಧದಲ್ಲಿ ಅಭ್ಯಾಸ ಉಂಟು? ಅಸ್ತ್ರಗಳಿಂದ ಹೋರಾಡಬಲ್ಲೆಯೊ? ಗದೆಯಿಂದಲೊ? ಭುಜಬಲದಿಂದಲೊ? ಯಾವುದರಲ್ಲಿ ನಿನಗೆ ಹೆಚ್ಚು ಪರಿಚಯವೋ ಆ ಯುದ್ಧವೇ ನಡೆಯಲಿ!" ಎಂದನು (೨೨-೨೩). ಹೀಗೆ ಮೇಲಿಂದಮೇಲೆ ಮಾತನ್ನು ಬೆಳೆಸುತ್ತಿದ್ದ ಮಕರಾಕ್ಷನ ನುಡಿಯನ್ನು ಕೇಳಿ, ದಶರಥಾತ್ಮಜನಾದ ಶ್ರೀರಾಮನು ನಗುತ್ತ "ಎಲೈ ರಾಕ್ಷಸ, ಅನಾವಶ್ಯಕವಾದ ಮಾತುಗಳನ್ನಾಡಿ ವ್ಯರ್ಥವಾಗಿ ಹೆಮ್ಮೆಪಡುವೆ ಏಕೆ? ರಣರಂಗದಲ್ಲಿ ಯುದ್ಧದಿಂದ ಜಯಿಸಲು ಶಕ್ಯವೇ ಹೊರತು ವಾಗ್ಜಾಲದ ವೈಭವದಿಂದಲ್ಲ! (೨೪-೨೫). ದಂಡಕಾರಣ್ಯದಲ್ಲಿ ಹದಿನಾಲ್ಕು ಸಾವಿರ ರಾಕ್ಷಸಭಟರು, ನಿನ್ನ ತಂದೆ, ತ್ರಿಶಿರ, ದೂಷಣ–ಇಷ್ಟು ಜನರನ್ನೂ ಸಂಹರಿಸಿದವನು ನಾನು. ಎಲಾ ದುಷ್ಟ, ತೀಕ್ಷ್ಣವಾದ ನಖತುಂಡ*ಗಳುಳ್ಳ ಹದ್ದು ನರಿ ಕಾಗೆಗಳಿಗೆ ನಿನ್ನ ಮಾಂಸದಿಂದ ಇಂದು ಸಂತರ್ಪಣೆ ಮಾಡಿಸುವೆನು! (೨೬-೨೭). ಮಾಂಸಾಹಾರಿಗಳಾದ ಪಕ್ಷಿಗಳು ನಿನ್ನ

---

* ತುಂಡ=ಕೊಕ್ಕು; ಬಾಯಿ.

ರಾಘವೇಣೈವಮುಕ್ತಸ್ತು ಖರಪುತ್ರೋ ನಿಶಾಚರಃ ।
ಬಾಣೌಘಾನವಮುಚತ್ತಸ್ಮೈ ರಾಘವಾಯ ರಣಾಜಿರೇ ॥ ೨೯

ತಾನ್ ಶರಾನ್ ಶರವರ್ಷೇಣ ರಾಮಶ್ಚಿಚ್ಛೇದ ನೈಕಧಾ ।
ನಿಪೇತುರ್ಭುವಿ ತೇ ಛಿನ್ನಾ ರುಕ್ಮಪುಂಖಾಃ ಸಹಸ್ರಶಃ ॥ ೩೦

ತದ್ಯುದ್ಧಮಭವತ್ತತ್ರ ಸಮೇತ್ಯಾನ್ಯೋನ್ಯಮೋಜಸಾ ।
ರಕ್ಷಸಃ ಖರಪುತ್ರಸ್ಯ ಸೂನೋರ್ದಶರಥಸ್ಯ ಚ ॥ ೩೧

ಜೀಮೂತಯೋರಿವಾಕಾಶೇ ಶಬ್ದೋ ಜ್ಯಾತಲಯೋಸ್ತದಾ ।
ಧನುರ್ಮುಕ್ತಃ ಸ್ವನೋತ್ಕೃಷ್ಟಃ ಶ್ರೂಯತೇ ಚ ರಣಾಜಿರೇ ॥ ೩೨

ದೇವದಾನವಗಂಧರ್ವಾಃ ಕಿನ್ನರಾಶ್ಚ ಮಹೋರಗಾಃ ।
ಅಂತರಿಕ್ಷಗತಾಃ ಸರ್ವೇ ದ್ರಷ್ಟುಕಾಮಾಸ್ತದದ್ಭುತಮ್ ॥ ೩೩

ವಿದ್ಧಮನ್ಯೋನ್ಯಗಾತ್ರೇಷು ದ್ವಿಗುಣಂ ವರ್ಧತೇ ಬಲಮ್ ।
ಕೃತಪ್ರತಿಕೃತಾನ್ಯೋನ್ಯಂ ಕುರುತಾಂ ತೌ ರಣಾಜಿರೇ ॥ ೩೪

---

ನೆತ್ತರಲ್ಲಿ ಕೊಕ್ಕನ್ನೂ ರೆಕ್ಕೆಯನ್ನೂ ನೆನೆಸಿಕೊಂಡು ನೆಲದಲ್ಲಿಯೂ ಆಕಾಶದಲ್ಲಿಯೂ ಸಂತೃಪ್ತಿಯಿಂದ ನಲಿದಾಡುವಂತೆ ಮಾಡುವೆನು!" ಎಂದು ಉತ್ತರಕೊಟ್ಟನು (೨೮). ರಾಘವನು ಹೀಗೆ ಹೇಳಿದೊಡನೆ ಮಕರಾಕ್ಷನು ಬಾಣರಾಶಿಗಳನ್ನು ಸುರಿಸತೊಡಗಿದನು. ಶ್ರೀರಾಮನೂ ಶರವರ್ಷಗಳನ್ನು ಸುರಿಸಿ ಮಕರಾಕ್ಷನ ಬಾಣಗಳನ್ನು ತುಂಡುತುಂಡಾಗಿ ಕತ್ತರಿಸಲು, ಸುವರ್ಣಪುಂಖಾಂಕಿತಗಳಾದ ಆ ಬಾಣಗಳು ಸಾವಿರಗಟ್ಟಲೆ ಚೂರು ಚೂರಾಗಿ ನೆಲದಲ್ಲಿ ಹರಡಿದವು (೨೯-೩೦). ಖರಪುತ್ರನಿಗೂ ದಶರಥ ತನಯನಿಗೂ ಅನ್ಯೋನ್ಯವಾಗಿ ದಾರುಣಯುದ್ಧವು ನಡೆಯಿತು. ಅವರೀರ್ವರ ಬಿಲ್ಲುಗಳ ನಾಣುಗಳಿಂದ ಉದ್ಭವಿಸುವ ಘೋಷವು, ಆಕಾಶದಲ್ಲಿ ಮೇಘಸಂಘಟ್ಟನದಿಂದ ಜನಿಸುವ ಶಬ್ದದಂತೆ ಭಯಂಕರವಾಗಿ ಕೇಳಿಸುತ್ತಿತ್ತು (೩೧-೩೨). ದೇವ ದಾನವ ಗಂಧರ್ವರೂ, ಕಿನ್ನರ ಮಹೋರಗರೂ ಅದ್ಭುತವಾದ ಆ ಸಂಗ್ರಾಮವನ್ನು ವೀಕ್ಷಿಸುವುದಕ್ಕಾಗಿ ಆಕಾಶದಲ್ಲಿ ನೆರೆದರು. ಇಬ್ಬರ ದೇಹದಲ್ಲಿಯೂ ಗಾಯಗಳಾದವು. ಗಾಯವಾದಷ್ಟೂ ಅವರ ಬಲವು ಎರಡರಷ್ಟು ಹೆಚ್ಚುತ್ತಿತ್ತು. ಅವನಿಗೆ ಇವನು,

ರಾಮಮುಕ್ತಾಂಸ್ತು ಬಾಣೌಘಾನ್ ರಾಕ್ಷಸಸ್ತ್ವಚ್ಛಿನದ್ರಣೇ ।
ರಕ್ಷೋಮುಕ್ತಾಂಸ್ತು ರಾಮೋ ವೈ ನೈಕಧಾ ಪ್ರಾಚ್ಛಿನಚ್ಛರೈಃ ॥ ३४

ಬಾಣೌಘೈರ್ವಿತತಾಃ ಸರ್ವಾ ದಿಶಶ್ಚ ಪ್ರದಿಶಸ್ತಥಾ ।
ಸಂಛನ್ನಾ ವಸುಧಾ ದ್ಯೌಶ್ಚ ಸಮಂತಾನ್ನ ಪ್ರಕಾಶತೇ ॥ ३೫

ತತಃ ಕ್ರುದ್ಧೋ ಮಹಾಬಾಹುರ್ಧನುಶ್ಚಿಚ್ಛೇದ ರಕ್ಷಸಃ ।
ಅಷ್ಟಾಭಿರಥ ನಾರಾಚೈಃ ಸೂತಂ ವಿವ್ಯಾಧ ರಾಘವಃ ॥ ३೬

ಭಿತ್ತ್ವಾ ಶರೈ ರಥಂ ರಾಮೋ ರಥಾಶ್ವಾನ್ ಸಮಪಾತಯತ್ ।
ವಿರಥೋ ವಸುಧಾಂ ತಿಷ್ಠನ್ಮಕರಾಕ್ಷೋ ನಿಶಾಚರಃ ॥ ३೭

ತತ್ತಿಷ್ಠದ್ವಸುಧಾಂ ರಕ್ಷಃ ಶೂಲಂ ಜಗ್ರಾಹ ಪಾಣಿನಾ ।
ತ್ರಾಸನಂ ಸರ್ವಭೂತಾನಾಂ ಯುಗಾಂತಾಗ್ನಿಸಮಪ್ರಭಮ್ ॥ ३೮

ವಿಭ್ರಾಮ್ಯ ತು ಮಹಚ್ಛೂಲಂ ಪ್ರಜ್ವಲಂತಂ ನಿಶಾಚರಃ ।
ಸ ಕ್ರೋಧಾತ್ ಪ್ರಾಹಿಣೋತ್ತಸ್ಮೈ ರಾಘವಾಯ ಮಹಾಹವೇ ॥

---

ಇವನಿಗೆ ಅವನು—ತಕ್ಕ ಪ್ರತೀಕಾರಗಳನ್ನು ಮಾಡುತ್ತ ಈರ್ವರೂ ಶೌರ್ಯ ದಿಂದ ಹೋರಾಡಿದರು (೩೩-೩೪). ಶ್ರೀರಾಮನು ಹೊಡೆದ ಶರಗಳನ್ನು ಮಕರಾಕ್ಷನು ತುಂಡರಿಸುತ್ತಿದ್ದನು. ಮಕರಾಕ್ಷನು ಹೊಡೆದ ಶರಗಳನ್ನು ಶ್ರೀರಾಮನು ಹಲವಾರು ತುಂಡುಗಳಾಗುವಂತೆ ಕತ್ತರಿಸುತ್ತಿದ್ದನು (೩೪). ಅವರೀರ್ವರ ಬಾಣರಾಶಿಗಳಿಂದ ದಿಗ್ದಿಗಂತರಗಳೂ ಭೂವ್ಯಾಕಾಶಗಳೂ ಆಚ್ಛಾದಿತವಾಗಿ ಮಾಸಿಹೋದವು. ಆಗ ಸಂಕ್ರುದ್ಧನಾದ ಶ್ರೀರಾಮನು ಮಕರಾಕ್ಷನ ಧನುಸ್ಸನ್ನು ಕತ್ತರಿಸಿ, ಎಂಟು ನಾರಾಚಗಳಿಂದ ಸಾರಥಿ ಯನ್ನು ಹೊಡೆದು, ಕೆಲವು ಸರಳುಗಳಿಂದ ರಥವನ್ನು ಸೀಳಿ ರಥಾಶ್ವಗಳನ್ನು ಉರುಳಿಸಿದನು. ವಿರಥನಾದ ಮಕರಾಕ್ಷನು ಧುಮುಕಿ ನೆಲದಲ್ಲಿ ನಿಂತನು (೩೬-೩೭). ನೆಲದಲ್ಲಿ ನಿಂತು ಆ ರಾಕ್ಷಸನು ಕಾಲಾಗ್ನಿಯಂತೆ ಪ್ರಜ್ವಲಿಸುತ್ತ ಸಮಸ್ತ ಭೂತಗಳನ್ನೂ ನಡುಗಿಸತಕ್ಕ ಭೀಕರವಾದ ತನ್ನ ಮಹಾಶೂಲವನ್ನು ಕೈಯಿಂದ ತಿರುಗಿಸಿ ಕ್ರೋಧದಿಂದ ಶ್ರೀರಾಮನಮೇಲೆ

ತಮಾಪತಂತಂ ಜ್ವಲಿತಂ ಖರಪುತ್ರಕರಾಚ್ಚ್ಯುತಮ್ ।
ಬಾಣೈಸ್ತು ತ್ರಿಭಿರಾಕಾಶೇ ಶೂಲಂ ಚಿಚ್ಛೇದ ರಾಘವಃ ॥ ೪೧

ಸ ಚ್ಛಿನ್ನೋ ನೈಕಧಾ ಶೂಲೋ ದಿವ್ಯಹಾಟಕಮಂಡಿತಃ ।
ವ್ಯಶೀರ್ಯತ ಮಹೋಲ್ಕೇವ ರಾಮಬಾಣಾರ್ದಿತಾ ಭುವಿ ॥ ೪೨

ತಚ್ಛೂಲಂ ನಿಹತಂ ದೃಷ್ಟ್ವಾ ರಾಮೇಣಾಕ್ಲಿಷ್ಟಕರ್ಮಣಾ ।
ಸಾಧು ಸಾಧ್ವಿತಿ ಭೂತಾನಿ ವ್ಯಾಹರಂತಿ ನಭೋಗತಾಃ ॥ ೪೩

ತಂ ದೃಷ್ಟ್ವಾ ನಿಹತಂ ಶೂಲಂ ಮಕರಾಕ್ಷೋ ನಿಶಾಚರಃ ।
ಮುಷ್ಟಿಮುದ್ಯಮ್ಯ ಕಾಕುತ್ಸ್ಥಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೪೪

ಸ ತಂ ದೃಷ್ಟ್ವಾ ಪತಂತಂ ವೈ ಪ್ರಹಸ್ಯ ರಘುನಂದನಃ ।
ಪಾವಕಾಸ್ತ್ರಂ ತತೋ ರಾಮಃ ಸಂದಧೇ ತು ಶರಾಸನೇ ॥ ೪೫

ತೇನಾಸ್ತ್ರೇಣ ಹತಂ ರಕ್ಷಃ ಕಾಕುತ್ಸ್ಥೇನ ತದಾ ರಣೇ ।
ಸಂಭಿನ್ನಹೃದಯಂ ತತ್ರ ಪಪಾತ ಚ ಮಮಾರ ಚ ॥ ೪೬

---

ಪ್ರಯೋಗಿಸಿದನು (೩೯-೪೦). ಮಕರಾಕ್ಷನ ಕೈಯಿಂದ ಜಿಗಿದು ಪ್ರಜ್ವಲಿಸುತ್ತ ಬರುತ್ತಿದ್ದ ಆ ಶೂಲವನ್ನು ಶ್ರೀರಾಮನು ಮೂರು ಬಾಣಗಳಿಂದ ಆಕಾಶಮಾರ್ಗದಲ್ಲಿ ಕತ್ತರಿಸಿದನು. ಸುವರ್ಣಭೂಷಿತವಾದ ಆ ಶೂಲವು ಶ್ರೀರಾಮನ ಬಾಣಗಳಿಂದ ತುಂಡು ತುಂಡಾಗಿ ದೊಡ್ಡ ಉಲ್ಕೆಯಂತೆ ನೆಲದಮೇಲೆ ಬಿದ್ದಿತು (೪೧-೪೨). ಶ್ರೀರಾಮನು ಕ್ಲೇಶವಿಲ್ಲದೆಯೇ ಆ ಶೂಲವನ್ನು ಛೇದಿಸಿದುದನ್ನು ನೋಡಿ, ಆಕಾಶದಲ್ಲಿ ನೆರೆದಿದ್ದ ಸಕಲರೂ 'ಭಲಾ! ಭೇಷ್ !' ಎಂದು ಶ್ರೀರಾಮನ ಶೌರ್ಯವನ್ನು ಕೊಂಡಾಡಿದರು. ಶೂಲವು ನಾಶವಾದ್ದನ್ನು ಕಂಡು ಮಕರಾಕ್ಷನು ಮುಷ್ಟಿಯನ್ನು ಕಟ್ಟಿ, 'ನಿಲ್ಲು! ನಿಲ್ಲು!' ಎನ್ನುತ್ತ ಕಾಕುತ್ಸ್ಥನ ಕಡೆಗೆ ನುಗ್ಗಿದನು (೪೩-೪೪). ಶ್ರೀರಾಮನು ಆ ರಾಕ್ಷಸನ ಬವಣೆಗೆ ನಸುನಕ್ಕು, ಆಗ್ನೇಯಾಸ್ತ್ರವನ್ನು ತನ್ನ ಕೋದಂಡಕ್ಕೆ ಅಳವಡಿಸಿ ಪ್ರಯೋಗಿಸಿದನು. ಮಕರಾಕ್ಷನು ಆಗ್ನೇಯಾಸ್ತ್ರದಿಂದ ಎದೆಯೊಡೆದು ಬಿದ್ದು ಮೃತನಾದನು (೪೫). ಅವನು ಹತನಾದುದನ್ನು ಕಂಡು ರಾಕ್ಷಸಭಟರು ಶ್ರೀರಾಮನ

ದೃಷ್ಟ್ವಾ ತೇ ರಾಕ್ಷಸಾಃ ಸರ್ವೇ ಮಕರಾಕ್ಷಸ್ಯ ಪಾತನಮ್ ।
ಲಂಕಾಮೇವಾಭ್ಯಧಾವಂತ ರಾಮಬಾಣಾರ್ದಿತಾಸ್ತದಾ ॥ ೪೭

ದಶರಥನೃಪಪುತ್ರಬಾಣವೇಗೈ
ರಜನಿಚರಂ ನಿಹತಂ ಖರಾತ್ಮಜಂ ತಮ್ ।
ದದೃಶುರಥ ಸುರಾ ಭೃಶಂ ಪ್ರಹೃಷ್ಟಾ
ಗಿರಿಮಿವ ವಜ್ರಹತಂ ಯಥಾ ವಿಕೀರ್ಣಮ್ ॥ ೪೮

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಾಶೀತಿತಮಃ ಸರ್ಗಃ



ಬಾಣಗಳ ಹೊಡೆತವನ್ನು ತಡೆಯಲಾರದೆ ಲಂಕೆಗೆ ಓಡಿಹೋದರು. ವಜ್ರಾಯುಧದಿಂದ ಬೆಟ್ಟವು ಛಿನ್ನವಿಚ್ಛಿನ್ನವಾಗಿ ಉರುಳುವಂತೆ, ಶ್ರೀರಾಮನ ಅಸ್ತ್ರದಿಂದ ಮಕರಾಕ್ಷನು ಹತನಾಗಿ ಬಿದ್ದುದನ್ನು ವೀಕ್ಷಿಸಿ, ದೇವತೆಗಳು ಸಂತುಷ್ಟರಾದರು (೪೭-೪೮).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತೊಂಬತ್ತನೆಯ ಸರ್ಗ



## ಅಶೀತಿತಮಃ ಸರ್ಗಃ

### ತಿರೋಹಿತರಾವಣಿಯುದ್ಧಮ್

ಮಕರಾಕ್ಷಂ ಹತಂ ಶ್ರುತ್ವಾ ರಾವಣಃ ಸಮಿತಿಂಜಯಃ ।
ಕ್ರೋಧೇನ ಮಹತಾವಿಷ್ಟೋ ದಂತಾನ್ ಕಟಕಟಾಪಯನ್ ॥ ೧

ಕುಪಿತಶ್ಚ ತದಾ ತತ್ರ ಕಿಂ ಕಾರ್ಯಮಿತಿ ಚಿಂತಯನ್ ।
ಆದಿದೇಶಾಥ ಸಂಕ್ರುದ್ಧೋ ರಣಾಯೇಂದ್ರಜಿತಂ ಸುತಮ್ ॥ ೨

ಜಹಿ ವೀರ ಮಹಾವೀರ್ಯೌ ಭ್ರಾತರೌ ರಾಮಲಕ್ಷ್ಮಣೌ ।
ಅದೃಶ್ಯೋ ದೃಶ್ಯಮಾನೋ ವಾ ಸರ್ವಥಾ ತ್ವಂ ಬಲಾಧಿಕಃ ॥ ೩

ತ್ವಮಪ್ರತಿಮಕರ್ಮಾಣಮಿಂದ್ರಂ ಜಯಸಿ ಸಂಯುಗೇ ।
ಕಿಂ ಪುನರ್ಮಾನುಷೌ ದೃಷ್ಟ್ವಾ ನ ವಧಿಷ್ಯಸಿ ಸಂಯುಗೇ ॥ ೪

## ಸರ್ಗ ೮೦

ಪುನಃ ಇಂದ್ರಜಿತುವಿನ ಮಾಯಾಯುದ್ಧ. ಬ್ರಹ್ಮಾಸ್ತ್ರವನ್ನು
ಪ್ರಯೋಗಿಸಬೇಕೆಂದು ಲಕ್ಷ್ಮಣನು ಸಂಕಲ್ಪಿಸುವುದು.
ಶ್ರೀರಾಮನು ಲಕ್ಷ್ಮಣನನ್ನು ತಡೆಯುವುದು.

ಹಿಂದೆ ಅನೇಕ ಯುದ್ಧಗಳಲ್ಲಿ ಜಯವನ್ನು ಗಳಿಸಿದ್ದ ರಾವಣನಿಗೆ, ಈ ಸಲ ಮಕರಾಕ್ಷನೂ ಹತನಾದನೆಂಬ ವಾರ್ತೆಯು ಮುಟ್ಟಿದೊಡನೆ ಮಹತ್ತರವಾದ ಕೋಪವು ಆವರಿಸಿತು. ಹಲ್ಲುಗಳನ್ನು ಕಟಕಟನೆ ಕಡಿಯುತ್ತ ಮುಂದೇನು ಮಾಡಬೇಕೆಂದು ಚಿಂತಾಕ್ರಾಂತನಾಗಿ, ತನ್ನ ಮಗನಾದ ಮೇಘನಾದನನ್ನು ಕರೆದು ಯುದ್ಧಕ್ಕೆ ಹೋಗುವಂತೆ ಆಜ್ಞಾಪಿಸಿದನು (೧-೨). ರಾವಣನು ಆತನನ್ನು ಕುರಿತು "ವತ್ಸ-ವೀರಾಗ್ರೇಸರ, ವೀರರೆಂದು ವಿಖ್ಯಾತರಾದ ರಾಮಲಕ್ಷ್ಮಣರನ್ನು ನೀನೇ ಸಂಹರಿಸಬೇಕು. ಕಣ್ಣಿಗೆ ಕಾಣಿಸುತ್ತಲೋ ಕಣ್ಮರೆಯಾಗಿಯೋ—ಉಭಯ ವಿಧದಲ್ಲಿ ಯುದ್ಧಕ್ಕೆ ನಿಂತರೂ ನೀನು ಅವರೀರ್ವರಿಗಿಂತ ಅಧಿಕ ಬಲಶಾಲಿ (೩). ಅಪ್ರತಿಮವೀರನಾದ ಇಂದ್ರನನ್ನೂ ನೀನು ಯುದ್ಧದಲ್ಲಿ

ದೃಷ್ಟ್ವಾ ತೇ ರಾಕ್ಷಸಾಃ ಸರ್ವೇ ಮಕರಾಕ್ಷಸ್ಯ ಪಾತನಮ್ ।
ಲಂಕಾಮೇವಾಭ್ಯಧಾವಂತ ರಾಮಬಾಣಾರ್ದಿತಾಸ್ತದಾ ॥ ೪೭

ದಶರಥನೃಪಪುತ್ರಬಾಣವೇಗೈ
ರಜನಿಚರಂ ನಿಹತಂ ಖರಾತ್ಮಜಂ ತಮ್ ।
ದದೃಶುರಥ ಸುರಾ ಭೃಶಂ ಪ್ರಹೃಷ್ಟಾ
ಗಿರಿಮಿವ ವಜ್ರಹತಂ ಯಥಾ ವಿಕೀರ್ಣಮ್ ॥ ೪೮

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಾಶೀತಿತಮಃ ಸರ್ಗಃ



ಬಾಣಗಳ ಹೊಡೆತವನ್ನು ತಡೆಯಲಾರದೆ ಲಂಕೆಗೆ ಓಡಿಹೋದರು. ವಜ್ರಾಯುಧದಿಂದ ಬೆಟ್ಟವು ಛಿನ್ನವಿಚ್ಛಿನ್ನವಾಗಿ ಉರುಳುವಂತೆ, ಶ್ರೀರಾಮನ ಅಸ್ತ್ರದಿಂದ ಮಕರಾಕ್ಷನು ಹತನಾಗಿ ಬಿದ್ದುದನ್ನು ವೀಕ್ಷಿಸಿ, ದೇವತೆಗಳು ಸಂತುಷ್ಟರಾದರು (೪೭-೪೮).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಪ್ಪತ್ತೊಂಬತ್ತನೆಯ ಸರ್ಗ



ಸಕೃದೇವ ಸಮಿದ್ಧಸ್ಯ ವಿಧೂಮಸ್ಯ ಮಹಾರ್ಚಿಷಃ ।
ಬಭೂವುಸ್ತಾನಿ ಲಿಂಗಾನಿ ವಿಜಯಂ ದರ್ಶಯಂತಿ ಚ ॥ ೯

ಪ್ರದಕ್ಷಿಣಾವರ್ತಶಿಖಸ್ತಪ್ತಹಾಟಕಸಂನಿಭಃ ।
ಹವಿಸ್ತತ್ ಪ್ರತಿಜಗ್ರಾಹ ಪಾವಕಃ ಸ್ವಯಮುತ್ಥಿತಃ ॥ ೧೦

ಹುತ್ವಾಗ್ನಿಂ ತರ್ಪಯಿತ್ವಾ ಚ ದೇವದಾನವರಾಕ್ಷಸಾನ್ ।
ಆರುರೋಹ ರಥಶ್ರೇಷ್ಠಮಂತರ್ಧಾನಗತಂ ಶುಭಮ್ ॥ ೧೧

ಸ ವಾಜಿಭಿಶ್ಚತುರ್ಭಿಶ್ಚ ಬಾಣೈಶ್ಚ ನಿಶಿತೈರ್ಯುತಃ ।
ಆರೋಪಿತಮಹಾಚಾಪಃ ಶುಶುಭೇ ಸ್ಯಂದನೋತ್ತಮಃ ॥ ೧೨

ಜಾಜ್ವಲ್ಯಮಾನೋ ವಪುಷಾ ತಪನೀಯಪರಿಚ್ಛದಃ ।
ಮೃಗೈಶ್ಚಂದ್ರಾರ್ಧಚಂದ್ರೈಶ್ಚ ಸ ರಥಃ ಸಮಲಂಕೃತಃ ॥ ೧೩

ಜಾಂಬೂನದಮಹಾಕಂಬುರ್ದೀಪ್ತಪಾವಕಸಂನಿಭಃ ।
ಬಭೂವೇಂದ್ರಜಿತಃ ಕೇತುರ್ವೈದೂರ್ಯಸಮಲಂಕೃತಃ ॥ ೧೪

---

ಮಾಡಿದನು (೮). ಒಂದುಸಲ ಗಾಳಿಹಾಕಿದೊಡನೆ ಹೊಗೆಯಿಲ್ಲದೆ ಮಹಾಜ್ವಾಲೆಯೊಡನೆ ಅಗ್ನಿಯು ಉರಿಯತೊಡಗಲು, ಶುಭಚಿಹ್ನೆಗಳು ಕಾರ್ಯಸಿದ್ಧಿಯನ್ನು ಸೂಚಿಸಿದವು. ಕಾಯಿಸಿದ ಬಂಗಾರದ ಬಣ್ಣದ ಜ್ವಾಲೆಯು ಪ್ರದಕ್ಷಿಣಾಕಾರವಾಗಿ ಮೇಲೆದ್ದಿತು. ಅಗ್ನಿದೇವನು ಪ್ರತ್ಯಕ್ಷವಾಗಿ ಮೇಲೆದ್ದು ಹವಿಸ್ಸನ್ನು ಸ್ವೀಕರಿಸಿದನು (೯-೧೦). ಹೀಗೆ ಇಂದ್ರಜಿತುವು ಹೋಮಮಾಡಿ ಯಜ್ಞದೇವತೆಗಳಾದ ದೇವದಾನವರಾಕ್ಷಸರನ್ನು ತೃಪ್ತಿಪಡಿಸಿ, ಜನರಿಗೆ ಅದೃಶ್ಯವಾಗಿದ್ದ ತನ್ನ ಶ್ರೇಷ್ಠವಾದ ರಥವನ್ನೇರಿದನು. ಆ ರಥಕ್ಕೆ ನಾಲ್ಕು ಅಶ್ವಗಳನ್ನು ಹೂಡಲಾಗಿತ್ತು. ನಿಶಿತಾಸ್ತ್ರಗಳನ್ನು ಅದರಲ್ಲಿ ಹೇರಲಾಗಿತ್ತು. ದೊಡ್ಡ ಧನುಸ್ಸು ರಥದಲ್ಲಿ ತೂಗಾಡುತ್ತಿತ್ತು (೧೧-೧೨). ರಥದ ಶರೀರವು ಚಿನ್ನದ ಹೊದಿಕೆಯಿಂದ ರಾರಾಜಿಸುತ್ತಿತ್ತು. ನಾನಾಬಗೆಯ ಮೃಗ, ಚಂದ್ರ, ಅರ್ಧಚಂದ್ರಾಕಾರದ ಶಿಲ್ಪಗಳಿಂದ ರಥವು ಅಲಂಕೃತವಾಗಿತ್ತು. ಇಂದ್ರಜಿತುವಿನ ರಥದಲ್ಲಿ ವಿರಾಜಿಸುತ್ತಿದ್ದ ಧ್ವಜಸ್ತಂಭವು ಚಿನ್ನದ ದೊಡ್ಡಕಟ್ಟುಗಳಿಂದ ಭೂಷಿತವಾಗಿ ಅಗ್ನಿಯಂತೆ ಬೆಳಗುತ್ತಿತ್ತು. ವೈಡೂರ್ಯಮಣಿಗಳಿಂದ ಉಜ್ವಲವಾಗಿತ್ತು

ತೇನ ಚಾದಿತ್ಯಕಲ್ಪೇನ ಬ್ರಹ್ಮಾಸ್ತ್ರೇಣ ಚ ಪಾಲಿತಃ ।
ಸ ಬಭೂವ ದುರಾಧರ್ಷೋ ರಾವಣಿಃ ಸುಮಹಾಬಲಃ ॥ ೧೫

ಸೋಽಭಿನಿರ್ಯಾಯ ನಗರಾದಿಂದ್ರಜಿತ್ ಸಮಿತಿಂಜಯಃ ।
ಹುತ್ವಾಗ್ನಿಂ ರಾಕ್ಷಸೈರ್ಮಂತ್ರೈರಂತರ್ಧಾನಗತೋಽಬ್ರವೀತ್ ॥ ೧೬

ಅದ್ಯ ಹತ್ವಾ ರಣೇ ಯೌ ತೌ ಮಿಥ್ಯಾಪ್ರವ್ರಜಿತೌ ವನೇ ।
ಜಯಂ ಪಿತ್ರೇ ಪ್ರದಾಸ್ಯಾಮಿ ರಾವಣಾಯ ರಣಾರ್ಜಿತಮ್ ॥ ೧೭

ಅದ್ಯ ನಿರ್ವಾನರಾಮುರ್ವೀಂ ಹತ್ವಾ ರಾಮಂ ಸಲಕ್ಷ್ಮಣಮ್ ।
ಕರಿಷ್ಯೇ ಪರಮಪ್ರೀತಿಮಿತ್ಯುಕ್ತ್ವಾಂತರಧೀಯತ ॥ ೧೮

ಆಪಪಾತಾಥ ಸಂಕ್ರುದ್ಧೋ ದಶಗ್ರೀವೇಣ ಚೋದಿತಃ ।
ತೀಕ್ಷ್ಣಕಾರ್ಮುಕನಾರಾಚೈಸ್ತೀಕ್ಷ್ಣಸ್ತ್ವಿಂದ್ರರಿಪೂ ರಣೇ ॥ ೧೯

ಸ ದದರ್ಶ ಮಹಾವೀರ್ಯೌ ನಾಗೌ ತ್ರಿಶಿರಸಾವಿವ ।
ಸೃಜಂತಾವಿಷುಜಾಲಾನಿ ವೀರೌ ವಾನರಮಧ್ಯಗೌ ॥ ೨೦

---

(೧೩-೧೪). ಅತ್ಯಂತ ಬಲಾಢ್ಯನಾದ ಆ ಮೇಘನಾದನು ಭಾಸ್ಕರನಂತೆ ಬೆಳಗುವ ದಿವ್ಯರಥದಿಂದಲೂ ಬ್ರಹ್ಮಾಸ್ತ್ರದಿಂದಲೂ ಸುರಕ್ಷಿತನಾಗಿ ಸರ್ವರಿಗೂ ಅಜೇಯನಾಗಿ ಕಂಗೊಳಿಸಿದನು. ರಣರಂಗದಲ್ಲಿ ಸದಾ ಜಯಶೀಲನಾಗಿ ಮೆರೆದ ಆ ಇಂದ್ರಜಿತು ರಾಕ್ಷಸದೇವತಾಕವಾದ ಮಂತ್ರಗಳಿಂದ ಅಗ್ನಿಯಲ್ಲಿ ಹವನಮಾಡಿ ಅಂತರ್ಧಾನಶಕ್ತಿಯನ್ನು ಪಡೆದು ಲಂಕಾನಗರದಿಂದ ಹೊರಟನು (೧೫-೧೬). "ಇಂದು ರಣರಂಗದಲ್ಲಿ ಕಪಟತಾಪಸಿಗಳಾಗಿ ಬಂದಿರುವ ಆ ಇಬ್ಬರನ್ನು ಸಂಹರಿಸಿ, ನನ್ನ ತಂದೆಗೆ ಜಯವನ್ನು ಗಳಿಸಿಕೊಡುವೆನು! ಇಂದು ರಾಮಲಕ್ಷ್ಮಣರನ್ನು ವಧಿಸಿ, ಜಗತ್ತಿನಲ್ಲಿ ವಾನರಕುಲವೇ ಇಲ್ಲದಂತೆ ತೊಡೆದುಹಾಕಿ, ನನ್ನ ತಂದೆಗೆ ಪರಮಾನಂದವನ್ನುಂಟುಮಾಡುವೆನು!" ಎಂದು ಘೋಷಿಸಿ ಇಂದ್ರಜಿತು ಕಣ್ಮರೆಯಾದನು (೧೭-೧೮). ರಾವಣನಿಂದ ಪ್ರೇರಿತನಾದ ಇಂದ್ರಜಿತು ಭೀಕರವಾದ ಚಾಪನಾರಾಚಗಳನ್ನು ಹಿಡಿದು ಅತ್ಯುಗ್ರನಾಗಿ ರಣರಂಗದಲ್ಲಿ ಧುಮುಕಿದನು. ಮಹಾವೀರರಾದ ಶ್ರೀರಾಮಲಕ್ಷ್ಮಣರು ವೈರಿಗಳಮೇಲೆ

ಇಮೌ ತಾವಿತಿ ಸಂಚಿಂತ್ಯ ಸಜ್ಯಂ ಕೃತ್ವಾ ಚ ಕಾರ್ಮುಕಮ್ ।
ಸಂತತಾನೇಷುಧಾರಾಭಿಃ ಪರ್ಜನ್ಯ ಇವ ವೃಷ್ಟಿಮಾನ್ ॥ ೨೧

ಸ ತು ವೈಹಾಯಸಂ ಪ್ರಾಪ್ಯ ಸರಥೋ ರಾಮಲಕ್ಷ್ಮಣೌ ।
ಅಚಕ್ಷುರ್ವಿಷಯೇ ತಿಷ್ಠನ್ ವಿವ್ಯಾಧ ನಿಶಿತೈಃ ಶರೈಃ ॥ ೨೨

ತೌ ತಸ್ಯ ಶರವೇಗೇನ ಪರೀತೌ ರಾಮಲಕ್ಷ್ಮಣೌ ।
ಧನುಷೀ ಸಶರೇ ಕೃತ್ವಾ ದಿವ್ಯಮಸ್ತ್ರಂ ಪ್ರಚಕ್ರತುಃ ॥ ೨೩

ಪ್ರಚ್ಛಾದಯಂತೌ ಗಗನಂ ಶರಜಾಲೈರ್ಮಹಾಬಲೌ ।
ತಮಸ್ತ್ರೈಃ ಸೂರ್ಯಸಂಕಾಶೈರ್ನೈವ ಪಸ್ಪೃಶತುಃ ಶರೈಃ ॥ ೨೪

ಸ ಹಿ ಧೂಮಾಂಧಕಾರಂ ಚ ಚಕ್ರೇ ಪ್ರಚ್ಛಾದಯನ್ನಭಃ ।
ದಿಶಶ್ಚಾಂತರ್ದಧೇ ಶ್ರೀಮಾನ್ನೀಹಾರತಮಸಾವೃತಾಃ ॥ ೨೫

---

ಸರಳುಗಳ ಮಳೆಯನ್ನು ತೂರುವ ಉದ್ದೇಶದಿಂದ, ಮೂರು ಹೆಡೆಗಳ* ಘೋರಸರ್ಪಗಳಂತೆ, ವಾನರಸೇನಾಮಧ್ಯದಲ್ಲಿ ನಿಂತಿರುವುದನ್ನು ಮೇಘನಾದನು ಕಂಡನು (೧೯–೨೦). 'ಆಃ ಇವರೇ ಅವರು!' ಎಂದು ಆತನು ನಿಶ್ಚಯಿಸಿ, ಧನುಸ್ಸಿಗೆ ಹೆದೆಯನ್ನೇರಿಸಿ, ರಥಾರೂಢನಾಗಿ ಆಕಾಶ ಮಾರ್ಗದಲ್ಲಿಯೇ ಶ್ರೀರಾಮಲಕ್ಷ್ಮಣರಿದ್ದಲ್ಲಿಗೆ ಸಾರಿ, ಅದೃಶ್ಯನಾಗಿ ನಿಂತು, ಕಾರ್ಮೋಡದಂತೆ ನಿಶಿತಾಸ್ತ್ರಧಾರೆಗಳನ್ನು ಸುರಿಸತೊಡಗಿದನು!(೨೧–೨೨). ಶರವೃಷ್ಟಿಯಿಂದ ಆಚ್ಛಾದಿತರಾದ ಶ್ರೀರಾಮಲಕ್ಷ್ಮಣರು ಕೂಡಲೆ ಧನುಸ್ಸಿಗೆ ಶರಗಳನ್ನು ಹೂಡಿ ಆಕಾಶದ ಕಡೆಗೆ ಪ್ರಹರಿಸತೊಡಗಿದರು. ಆದರೇನು? ಸೂರ್ಯಸಂಕಾಶಗಳಾದ ಶರಜಾಲಗಳಿಂದ ಗಗನವನ್ನು ಮುಚ್ಚಿದರೂ ಅವರ ಅಸ್ತ್ರಗಳು ಇಂದ್ರಜಿತುವಿಗೆ ತಾಗಲೇ ಇಲ್ಲ! (೨೩–೨೪). ಏಕೆಂದರೆ, ಇಂದ್ರಜಿತು ತನ್ನ ಮಾಯೆಯಿಂದ ಆಕಾಶದಲ್ಲಿ ಹೊಗೆಯನ್ನು ಸೃಜಿಸಿ, ಸಕಲ ದಿಕ್ಕುಗಳಲ್ಲಿಯೂ ಮಂಜುಮುಸುಕಿ ದಟ್ಟವಾದ ಕತ್ತಲೆಯಾದಂತೆ

---

* ಶ್ರೀರಾಮಲಕ್ಷ್ಮಣರ ಶಿರಸ್ಸಿಗೆ ಸಮವಾಗಿ ಧನುಷ್ಕೋಟಿಯೂ ಬತ್ತಳಿಕೆಯೂ ಕಾಣುತ್ತಿದ್ದುದರಿಂದ ಮೂರು ಹೆಡೆಗಳ ಸರ್ಪಕ್ಕೆ ಹೋಲಿಸಲಾಗಿದೆ. ಅಥವಾ ಮಹಾಪುರುಷಲಕ್ಷಣದಂತೆ ಎರಡು ಭುಜಾಗ್ರಗಳೂ ಉನ್ನತವಾದ್ದರಿಂದ ಈ ಹೋಲಿಕೆ.

ನೈವ ಜ್ಯಾತಲನಿರ್ಘೋಷೋ ನ ಚ ನೇಮಿಖುರಸ್ವನಃ ।
ಶುಶ್ರುವೇ ಚರತಸ್ತಸ್ಯ ನ ಚ ರೂಪಂ ಪ್ರಕಾಶತೇ ॥ ೨೬

ಘನಾಂಧಕಾರೇ ತಿಮಿರೇ ಶಿಲಾವರ್ಷಮಿವಾದ್ಭುತಮ್ ।
ಸ ವವರ್ಷ ಮಹಾಬಾಹುರ್ನಾರಾಚಶರವೃಷ್ಟಿಭಿಃ ॥ ೨೭

ಸ ರಾಮಂ ಸೂರ್ಯಸಂಕಾಶೈಃ ಶರೈರ್ದತ್ತವರೋ ಭೃಶಮ್ ।
ವಿವ್ಯಾಧ ಸಮರೇ ಕ್ರುದ್ಧಃ ಸರ್ವಗಾತ್ರೇಷು ರಾವಣಿಃ ॥ ೨೮

ತೌ ಹನ್ಯಮಾನೌ ನಾರಾಚೈರ್ಧಾರಾಭಿರಿವ ಪರ್ವತೌ ।
ಹೇಮಪುಂಖಾನ್ನರವ್ಯಾಘ್ರೌ ತಿಗ್ಮಾನ್ ಮುಮುಚತುಃ ಶರಾನ್ ॥

ಅಂತರಿಕ್ಷೇ ಸಮಾಸಾದ್ಯ ರಾವಣಿಂ ಕಂಕಪತ್ರಿಣಃ ।
ನಿಕೃತ್ಯ ಪತಗಾ ಭೂಮೌ ಪೇತುಸ್ತೇ ಶೋಣಿತೋಕ್ಷಿತಾಃ ॥ ೩೦

ಅತಿಮಾತ್ರಂ ಶರೌಘೇಣ ಪೀಡ್ಯಮಾನೌ ನರೋತ್ತಮೌ ।
ತಾನಿಷೂನ್ ಪತತೋ ಭಲ್ಲೈರನೇಕೈರ್ನಿಚಕೃಂತತುಃ ॥ ೩೧

---

ಮಾಡಿಬಿಟ್ಟನು! ಆತನು ಆಕಾಶದಲ್ಲಿ ಸಂಚರಿಸುತ್ತ ಬಾಣಗಳನ್ನು ಪ್ರಯೋಗಿಸುವಾಗ, ನಾಣಿನ ಜೇಂಕಾರವಾಗಲಿ ರಥನೇಮಿಧ್ವನಿಯಾಗಲಿ ಅಶ್ವಖುರಪುಟಗಳ ಶಬ್ದವಾಗಲಿ ಕೇಳಿಸುತ್ತಿರಲಿಲ್ಲ. ಅವನ ರೂಪವಂತೂ ಕಾಣಿಸುತ್ತಲೇ ಇರಲಿಲ್ಲ! (೨೫-೨೬). ಏನೇನೂ ಕಾಣದ ಕಗ್ಗತ್ತಲೆಯಲ್ಲಿ ತೆರಪಿಲ್ಲದೆ ಕಲ್ಲುಗಳನ್ನೆಸೆಯುವಂತೆ, ವರಬಲದಿಂದ ಕೊಬ್ಬಿದ ಇಂದ್ರಜಿತು ಕ್ರುದ್ಧನಾಗಿ, ಸೂರ್ಯಸಂಕಾಶಗಳಾದ ವಿವಿಧಾಕೃತಿಯ ಶರಜಾಲಗಳನ್ನು ಶ್ರೀರಾಮಲಕ್ಷ್ಮಣರ ಸರ್ವಾಂಗಗಳಮೇಲೆ ನಿರಂತರವಾಗಿ ಸುರಿದನು (೨೭-೨೮). ಪುರುಷಸಿಂಹರಾದ ಆ ವೀರರೀರ್ವರೂ, ವೃಷ್ಟಿಧಾರೆಗಳಿಂದ ಆಚ್ಛಾದಿತವಾಗುವ ಪರ್ವತಗಳಂತೆ, ಶರಧಾರೆಗಳಿಂದ ಆಹತರಾದರೂ ಚಲಿಸದೆ ಹೇಮಪುಂಖಾಂಕಿತಗಳಾದ ತೀವ್ರಾಸ್ತ್ರಗಳನ್ನು ಪ್ರಯೋಗಿಸುತ್ತಲೇ ಇದ್ದರು (೨೯). ಗರಿಗಟ್ಟಿದ ಅವರ ಸರಳುಗಳು ಗಗನದಲ್ಲಿ ಹಾರಿ, ಒಮ್ಮೊಮ್ಮೆ ಇಂದ್ರಜಿತುವಿನ ಮೈಯನ್ನು ತೂರಿ, ನೆತ್ತರಲ್ಲಿ ನೆನೆದು ಕೆಳಗೆ ಬೀಳುತ್ತಿದ್ದವು. ಇಂದ್ರಜಿತುವಿನ ಹೊಡೆತವು ಬಹು ತೀವ್ರವಾಯಿತು. ಆದರೂ ಅವನ ಕೂರ್ಗಣೆಗಳನ್ನು ಶ್ರೀರಾಮಲಕ್ಷ್ಮಣರು ಭಲ್ಲೆಗಳಿಂದ ಕತ್ತರಿ

ಯತೋ ಹಿ ದದೃಶಾತೇ ತೌ ಶರಾನ್ನಿಪತತಃ ಶಿತಾನ್ ।
ತತಸ್ತು ತೌ ದಾಶರಥೀ ಸಸೃಜಾತೇಽಸ್ತ್ರಮುತ್ತಮಮ್ ॥ ೩೨

ರಾವಣಿಸ್ತು ದಿಶಃ ಸರ್ವಾ ರಥೇನಾತಿರಥಃ ಪತನ್ ।
ವಿವ್ಯಾಧ ತೌ ದಾಶರಥೀ ಲಘ್ವಸ್ತ್ರೋ ನಿಶಿತೈಃ ಶರೈಃ ॥ ೩೩

ತೇನಾತಿವಿದ್ಧೌ ತೌ ವೀರೌ ರುಕ್ಮಪುಂಖೈಃ ಸುಸಂಹಿತೈಃ ।
ಬಭೂವತುರ್ದಾಶರಥೀ ಪುಷ್ಪಿತಾವಿವ ಕಿಂಶುಕೌ ॥ ೩೪

ನಾಸ್ಯ ವೇದ ಗತಿಂ ಕಶ್ಚಿನ್ನ ಚ ರೂಪಂ ಧನುಃ ಶರಾನ್ ।
ನ ಚಾನ್ಯದ್ವಿದಿತಂ ಕಿಂಚಿತ್ ಸೂರ್ಯಸ್ಯೇವಾಭ್ರಸಂಪ್ಲವೇ ॥ ೩೫

ತೇನ ವಿದ್ಧಾಶ್ಚ ಹರಯೋ ನಿಹತಾಶ್ಚ ಗತಾಸವಃ ।
ಬಭೂವುಃ ಶತಶಸ್ತತ್ರ ಪತಿತಾ ಧರಣೀತಲೇ ॥ ೩೬

ಲಕ್ಷ್ಮಣಸ್ತು ಸುಸಂಕ್ರುದ್ಧೋ ಭ್ರಾತರಂ ವಾಕ್ಯಮಬ್ರವೀತ್ ।
ಬ್ರಾಹ್ಮಮಸ್ತ್ರಂ ಪ್ರಯೋಕ್ಷ್ಯಾಮಿ ವಧಾರ್ಥಂ ಸರ್ವರಕ್ಷಸಾಮ್ ॥

---

ಸುತ್ತ ಹೋದರು (೩೦-೩೧). ಯಾವ ಯಾವ ದಿಕ್ಕಿನಿಂದ ಅಸ್ತ್ರಗಳು ಬಂದು ಎರಗುತ್ತಿದ್ದವೋ ಆಯಾ ದಿಕ್ಕಿಗೆ ದಶರಥಾತ್ಮಜರು ಗುರಿಯಿಟ್ಟು ಉತ್ತಮಾಸ್ತ್ರಗಳನ್ನು ಪ್ರಯೋಗಿಸುತ್ತ ಹೋದರು. ಅತಿರಥನಾದ ರಾವಣಿ ಯಾದರೋ ಒಂದೆಡೆ ನಿಲ್ಲದೆ ಸಮಸ್ತ ದಿಕ್ಕುಗಳಲ್ಲಿಯೂ ಸಂಚರಿಸುತ್ತ, ಕೈಚಳಕದಿಂದ ನಿಶಿತ ಶರಗಳನ್ನು ಶ್ರೀರಾಮಲಕ್ಷ್ಮಣರಿಗೆ ಗುರಿಯಿಟ್ಟು ಹೊಡೆಯುತ್ತಲೇ ಇದ್ದನು (೩೨-೩೩). ತೀಕ್ಷ್ಣಾಗ್ರವುಳ್ಳ ಶರಗಳಿಂದ ನಿರ್ಭಿನ್ನಗಾತ್ರರಾದ ಅವರಿಬ್ಬರೂ ಅರಳಿದ ಮುತ್ತುಗದ ಮರಗಳಂತಾದರು. ಇಂದ್ರಜಿತುವಿನ ಗತಿಯಾಗಲಿ, ರೂಪವಾಗಲಿ, ಧನುಸ್ಸಾಗಲಿ, ಶರವಾಗಲಿ, ಇನ್ನು ಯಾವುದೇ ಒಂದು ಅವನ ಚರ್ಯೆಯಾಗಲಿ ಯಾರಿಗೂ ತಿಳಿಯಲಿಲ್ಲ! ಗಗನವನ್ನಾವರಿಸಿದ ಮೇಘಪಂಕ್ತಿಯ ಹಿಂದಿರುವ ಸೂರ್ಯನಂತೆ ಅವನಿದ್ದನು (೩೪-೩೫). ರಣರಂಗದಲ್ಲಿ ಎಲ್ಲೆಡೆಯೂ ಅವನ ಅಸ್ತ್ರಗಳಿಂದ ವಾನರಸೈನಿಕರು ಗಾಯಗೊಂಡರು. ತಂಡತಂಡವಾಗಿ ಸತ್ತು ಬಿದ್ದರು. ಲಕ್ಷ್ಮಣನ ಸೈರಣೆ ಮುಗಿಯಿತು. ಅವನು ಕ್ರೋಧಾವಿಷ್ಟನಾಗಿ "ಅಣ್ಣ, ಈಗ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವೆನು. ಸಕಲ ರಾಕ್ಷಸರೂ

ತಮುವಾಚ ತತೋ ರಾಮೋ ಲಕ್ಷ್ಮಣಂ ಶುಭಲಕ್ಷಣಮ್ ।
ನೈಕಸ್ಯ ಹೇತೋ ರಕ್ಷಾಂಸಿ ಪೃಥಿವ್ಯಾಂ ಹಂತುಮರ್ಹಸಿ ॥ ೩೮

ಅಯುಧ್ಯಮಾನಂ ಪ್ರಚ್ಛನ್ನಂ ಪ್ರಾಂಜಲಿಂ ಶರಣಾಗತಮ್ ।
ಪಲಾಯಂತಂ ಪ್ರಮತ್ತಂ ವಾ ನ ತ್ವಂ ಹಂತುಮಿಹಾರ್ಹಸಿ ॥ ೩೯

ಅಸ್ಯೈವ ತು ವಧೇ ಯತ್ನಂ ಕರಿಷ್ಯಾವೋ ಮಹಾಬಲ ।
ಆದೇಕ್ಷ್ಯಾವೋ ಮಹಾವೇಗಾನಸ್ತ್ರಾನಾಶೀವಿಷೋಪಮಾನ್ ॥ ೪೦

ತಮೇನಂ ಮಾಯಿನಂ ಕ್ಷುದ್ರಮಂತರ್ಹಿತರಥಂ ಬಲಾತ್ ।
ರಾಕ್ಷಸಂ ನಿಹನಿಷ್ಯಂತಿ ದೃಷ್ಟ್ವಾ ವಾನರಯೂಥಪಾಃ ॥ ೪೧

ಯದ್ಯೇಷ ಭೂಮಿಂ ವಿಶತೇ ದಿವಂ ವಾ
ರಸಾತಲಂ ವಾಪಿ ನಭಃಸ್ಥಲಂ ವಾ ।
ಏವಂ ನಿಗೂಢೋಽಪಿ ಮಮಾಸ್ತ್ರದಗ್ಧಃ
ಪತಿಷ್ಯತೇ ಭೂಮಿತಲೇ ಗತಾಸುಃ ॥ ೪೨

---

ಸತ್ತು ಹೋಗಲಿ!" ಎಂದನು (೩೬-೩೭). ಆಗ ಶ್ರೀರಾಮನು ಲಕ್ಷ್ಮಣನಿಗೆ "ವತ್ಸ-ಲಕ್ಷ್ಮಣ, ಇವನೊಬ್ಬನಿಗೋಸ್ಕರ ಪೃಥಿವಿಯಲ್ಲಿರುವ ಸಕಲ ರಾಕ್ಷಸರನ್ನೂ ಕೊಲ್ಲುವುದು ಸರಿಯಲ್ಲ. ಯುದ್ಧಮಾಡದವನು, ಭಯದಿಂದ ಅಡಗಿದವನು, ಕೈಜೋಡಿಸಿ ನಮಸ್ಕರಿಸಿದವನು, ಶರಣಾಗತ, ಹೆದರಿ ಓಡುವವನು, ಮೈಮರೆತವನು–ಈ ಆರು ಬಗೆಯ ಜನರನ್ನು ಸಂಹರಿಸಬಾರದು (೩೮-೩೯). ಈ ವೈರಿಯೊಬ್ಬನನ್ನೇ ಈಗ ಸಂಹರಿಸಲು ಯತ್ನಿಸೋಣ. ಸರ್ಪಸಮಾನಗಳಾದ ಕ್ರೂರಶರಗಳನ್ನು ಪ್ರಯೋಗಿಸೋಣ. ಕ್ಷುದ್ರನಾದ ಈ ರಾಕ್ಷಸನು ಮಾಯಾಬಲದಿಂದ ಅದೃಶ್ಯನಾಗಿದ್ದಾನೆ. ಈತನು ಕಣ್ಣಿಗೆ ಬಿದ್ದರೆ ಸಾಕು, ನಮ್ಮ ವಾನರವೀರರೇ ಇವನನ್ನು ವಧಿಸುವರು (೪೦-೪೧). ಈ ರಾಕ್ಷಸನು ಭೂಮಿಯಲ್ಲಡಗಲಿ-ಸ್ವರ್ಗವನ್ನಡರಲಿ, ರಸಾತಳವನ್ನೇ ಹೊಗಲಿ-ನಭಸ್ಥಳವನ್ನೇ ಏರಲಿ, ನನ್ನ ದಿವ್ಯಾಸ್ತ್ರದಿಂದ ದಗ್ಧನಾಗಿ ಸತ್ತು ನೆಲದಲ್ಲೊರಗುವನು" ಎಂದು ಹೇಳಿ ಸಂತೈಸಿದನು

ಇತ್ಯೇವಮುಕ್ತ್ವಾ ವಚನಂ ಮಹಾತ್ಮಾ
ರಘುಪ್ರವೀರಃ ಪ್ಲವಗರ್ಷಭೈರ್ವೃತಃ ।
ವಧಾಯ ರೌದ್ರಸ್ಯ ನೃಶಂಸಕರ್ಮಣ-
ಸ್ತದಾ ಮಹಾತ್ಮಾ ತ್ವರಿತಂ ನಿರೀಕ್ಷತೇ ॥ ೪೩

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಶೀತಿತಮಃ ಸರ್ಗಃ



(೪೨). ಮಹಾತ್ಮನಾದ ಆ ರಘುವಂಶತಿಲಕನು ಲಕ್ಷ್ಮಣನಿಗೆ ಈ ಪ್ರಕಾರವಾಗಿ ಹೇಳಿ, ವಾನರಯೂಥಪರಿಂದ ಪರಿವೃತನಾಗಿ, ಭೀಕರನೂ ಘಾತುಕನೂ ಆದ ಇಂದ್ರಜಿತುವನ್ನು ಬೇಗನೆ ವಧಿಸುವ ಬಗೆ ಏನೆಂದು ಆಲೋಚಿಸಿದನು (೪೩).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತನೆಯ ಸರ್ಗ



## ಏಕಾಶೀತಿತಮಃ ಸರ್ಗಃ

### ಮಾಯಾಸೀತಾವಧಃ

ವಿಜ್ಞಾಯ ತು ಮನಸ್ತಸ್ಯ ರಾಘವಸ್ಯ ಮಹಾತ್ಮನಃ ।
ಸಂನಿವೃತ್ಯಾಹವಾತ್ತಸ್ಮಾತ್ ಸಂವಿವೇಶ ಪುರಂ ತತಃ ॥ ೧

ಸೋಽನುಸ್ಮೃತ್ಯ ವಧಂ ತೇಷಾಂ ರಾಕ್ಷಸಾನಾಂ ತರಸ್ವಿನಾಮ್ ।
ಕ್ರೋಧತಾಮ್ರೇಕ್ಷಣಃ ಶೂರೋ ನಿರ್ಜಗಾಮ ಮಹಾದ್ಯುತಿಃ ॥ ೨

ಸ ಪಶ್ಚಿಮೇನ ದ್ವಾರೇಣ ನಿರ್ಯಯೌ ರಾಕ್ಷಸೈರ್ವೃತಃ ।
ಇಂದ್ರಜಿತ್ತು ಮಹಾವೀರ್ಯಃ ಪೌಲಸ್ತ್ಯೋ ದೇವಕಂಟಕಃ ॥ ೩

## ಸರ್ಗ ೮೧

ಇಂದ್ರಜಿತು ಮಾಯಾಸೀತೆಯನ್ನು ನಿರ್ಮಿಸಿ ತಂದು,
ಹನುಮಂತನೆದುರಿಗೆ ಅವಳನ್ನು ಛೇದಿಸುವುದು.

ಮಹಾತ್ಮನಾದ ಶ್ರೀರಾಮನ ಮನಸ್ಸಿನಲ್ಲೇನಿರುವುದೆಂಬುದನ್ನೂಹಿಸಿ, (ದಿವ್ಯಾಸ್ತ್ರಬಲದಿಂದ ತನ್ನನ್ನು ಸಂಹರಿಸಬಹುದೆಂಬ ಭಯದಿಂದ) ಇಂದ್ರಜಿತು ಯುದ್ಧವನ್ನು ನಿಲ್ಲಿಸಿ ಲಂಕೆಯನ್ನು ಪ್ರವೇಶಿಸಿದನು. ಕುಂಭಕರ್ಣಾದಿ ರಾಕ್ಷಸವೀರರ ವಧೆಯನ್ನು ಸ್ಮರಿಸಿಕೊಂಡೊಡನೆ ಅವನ ಕಣ್ಣುಗಳು ಸಿಟ್ಟಿನಿಂದ ಕೆಂಪಡರಿದವು. ತೇಜಸ್ವಿಯಾದ ಆ ಶೂರನು ಮತ್ತೆ ಲಂಕೆಯ ಪಶ್ಚಿಮದ್ವಾರದಿಂದ* ಹೊರಟನು (೧-೨). ಶೂರನೂ ದೇವಕಂಟಕನೂ ಆದ ರಾವಣತನಯನು, ವೀರರಾದ ಶ್ರೀರಾಮಲಕ್ಷ್ಮಣರು

* ಶ್ರೀರಾಮಲಕ್ಷ್ಮಣರೆದುರಿಗೆ ಪ್ರಕಟವಾಗಿ ಮಾಯಾಸೀತೆಯನ್ನು ವಧಿಸುವ ಧೈರ್ಯ ಇಂದ್ರಜಿತುವಿಗೆ ಬರಲಿಲ್ಲ. ವಾನರರಲ್ಲಿ ಹನುಮಂತನೊಬ್ಬನೇ ಸೀತೆಯನ್ನು ನೋಡಿದವನು. ಆದ್ದರಿಂದ ಹನುಮಂತನಿದ್ದ ಪಶ್ಚಿಮದ್ವಾರಕ್ಕೆ ಇಂದ್ರಜಿತು ಬಂದನು. ನಿಕುಂಭಿಳಾಯಾಗದಿಂದ ನೂತನಶಕ್ತಿಯನ್ನು ಸಂಪಾದಿಸಬೇಕೆಂದೂ, ಅದಕ್ಕೆ ಶ್ರೀರಾಮಲಕ್ಷ್ಮಣರಿಂದ ಅಡ್ಡಿಯಾಗದಿರಲೆಂದೂ ಮಾಯಾಸೀತೆಯನ್ನು ಕೊಲ್ಲುವ ಇಂದ್ರಜಿತುವಿನ ಉದ್ದೇಶ.

ಇಂದ್ರಜಿತ್ತು ತತೋ ದೃಷ್ಟ್ವಾ ಭ್ರಾತರೌ ರಾಮಲಕ್ಷ್ಮಣೌ ।
ರಣಾಯಾಭ್ಯುದ್ಯತೌ ವೀರೌ ಮಾಯಾಂ ಪ್ರಾದುಷ್ಕರೋತ್ತದಾ ॥ ೪

ಇಂದ್ರಜಿತ್ತು ರಥೇ ಸ್ಥಾಪ್ಯ ಸೀತಾಂ ಮಾಯಾಮಯೀಂ ತತಃ ।
ಬಲೇನ ಮಹತಾವೃತ್ಯ ತಸ್ಯಾ ವಧಮರೋಚಯತ್ ॥ ೫

ಮೋಹನಾರ್ಥಂ ತು ಸರ್ವೇಷಾಂ ಬುದ್ಧಿಂ ಕೃತ್ವಾ ಸುದುರ್ಮತಿಃ ।
ಹಂತುಂ ಸೀತಾಂ ವ್ಯವಸಿತೋ ವಾನರಾಭಿಮುಖೋ ಯಯೌ ॥ ೬

ತಂ ದೃಷ್ಟ್ವಾ ತ್ವಭಿನಿರ್ಯಾಂತಂ ನಗರ್ಯಾಃ ಕಾನನೌಕಸಃ ।
ಉತ್ಪೇತುರಭಿಸಂಕ್ರುದ್ಧಾಃ ಶಿಲಾಹಸ್ತಾ ಯುಯುತ್ಸವಃ ॥ ೭

ಹನುಮಾನ್ ಪುರತಸ್ತೇಷಾಂ ಜಗಾಮ ಕಪಿಕುಂಜರಃ ।
ಪ್ರಗೃಹ್ಯ ಸುಮಹಚ್ಛೃಂಗಂ ಪರ್ವತಸ್ಯ ದುರಾಸದಮ್ ॥ ೮

ಸ ದದರ್ಶ ಹತಾನಂದಾಂ ಸೀತಾಮಿಂದ್ರಜಿತೋ ರಥೇ ।
ಏಕವೇಣೀಧರಾಂ ದೀನಾಮುಪವಾಸಕೃಶಾನನಾಮ್ ॥ ೯

---

ಯುದ್ಧೋನ್ಮುಖರಾಗಿ ಬಂದಾರೆಂದು ಚಿಂತಿಸಿ, ಅವರನ್ನು ವ್ಯಾಮೋಹಗೊಳಿಸುವುದಕ್ಕಾಗಿ ಮಾಯಾಶಕ್ತಿಯನ್ನು ಬಳಸಬೇಕೆಂದು ಸಂಕಲ್ಪಿಸಿದನು (೩-೪). ಮಾಯಾನಿರ್ಮಿತವಾದ ಸೀತಾಕೃತಿಯ ಸ್ತ್ರೀಯನ್ನು ತನ್ನ ರಥದಲ್ಲಿರಿಸಿಕೊಂಡುಹೋಗಿ, ಮಾಯಾಬಲದಿಂದ ಅವಳನ್ನು ವಧಿಸಬೇಕೆಂದು ಇಂದ್ರಜಿತು ಆಲೋಚಿಸಿದನು. ಆ ದುರ್ಬುದ್ಧಿಯು ಸಕಲರ ಬುದ್ಧಿಯನ್ನೂ ವ್ಯಾಮೋಹಗೊಳಿಸುವುದಕ್ಕಾಗಿ ಮಾಯಾಸೀತೆಯನ್ನು ವಧಿಸಬೇಕೆಂದು ನಿರ್ಧರಿಸಿ, ವಾನರಸೇನೆಗೆ ಅಭಿಮುಖನಾಗಿ ನಡೆದನು (೫-೬). ನಗರದಿಂದ ಇಂದ್ರಜಿತು ಹೊರಬರುವುದನ್ನು ನೋಡಿದೊಡನೆ, ವಾನರಯೋಧರು ಕ್ರುದ್ಧರಾಗಿ ಶಿಲೆಗಳನ್ನು ಹೊತ್ತು ಅವನನ್ನೆದುರಿಸಲು ನುಗ್ಗಿದರು. ಕಪಿಕುಂಜರನಾದ ಹನುಮಂತನು ದೊಡ್ಡದಾದ ಪರ್ವತ ಶೃಂಗವನ್ನು ಹೊತ್ತು ಅವರೆಲ್ಲರ ಮುಂದೆ ನಡೆದನು! (೭-೮). (ಏನಾಶ್ಚರ್ಯ!) ಇಂದ್ರಜಿತುವಿನ ರಥದಲ್ಲಿ ಸೀತೆಯು ದುಃಖಾಕ್ರಾಂತಳಾಗಿ ಕುಳಿತಿದ್ದಾಳೆ! ಏಕವೇಣಿಯನ್ನು ಧರಿಸಿ ದೀನಳಾಗಿದ್ದಾಳೆ! ಉಪವಾಸ

**ಪರಿಕ್ಲಿಷ್ಟೈಕವಸನಾಮಮೃಜಾಂ ರಾಘವಪ್ರಿಯಾಮ್ ।**
**ರಜೋಮಲಾಭ್ಯಾಮಾಲಿಪ್ತೈಃ ಸರ್ವಗಾತ್ರೈರ್ವರಸ್ತ್ರಿಯಮ್ ॥ ೧೦**

**ತಾಂ ನಿರೀಕ್ಷ್ಯ ಮುಹೂರ್ತಂ ತು ಮೈಥಿಲೀತ್ಯಧ್ಯವಸ್ಯ ತು ।**
**ಬಭೂವಾಚಿರದೃಷ್ಟಾ ಹಿ ತೇನ ಸಾ ಜನಕಾತ್ಮಜಾ ॥ ೧೧**

**ತಾಂ ದೀನಾಂ ಮಲದಿಗ್ಧಾಂಗೀಂ ರಥಸ್ಥಾಂ ದೃಶ್ಯ ಮೈಥಿಲೀಮ್ ।**
**ಬಾಷ್ಪಪರ್ಯಾಕುಲಮುಖೋ ಹನುಮಾನ್ ವ್ಯಥಿತೋಽಭವತ್ ॥**

**ಅಬ್ರವೀತ್ತಾಂ ತು ಶೋಕಾರ್ತಾಂ ನಿರಾನಂದಾಂ ತಪಸ್ವಿನೀಮ್ ।**
**ಸೀತಾಂ ರಥಸ್ಥಿತಾಂ ದೃಷ್ಟ್ವಾ ರಾಕ್ಷಸೇಂದ್ರಸುತಾಶ್ರಿತಾಮ್ ॥ ೧೩**

**ಕಿಂ ಸಮರ್ಥಿತಮಸ್ಯೇತಿ ಚಿಂತಯನ್ ಸ ಮಹಾಕಪಿಃ ।**
**ಸಹ ತೈರ್ವಾನರಶ್ರೇಷ್ಠೈರಭ್ಯಧಾವತ ರಾವಣಿಮ್ ॥ ೧೪**

---

ದಿಂದ ಅವಳ ಮುಖವು ಬಾಡಿ ಕೃಶವಾಗಿದೆ! (೯). ಶ್ರೀರಾಮನ ಕಾಂತೆಯು ಸುಕ್ಕುಗಟ್ಟಿದ ಸೀರೆಯನ್ನುಟ್ಟಿದ್ದಾಳೆ! ಸ್ನಾನಾದಿ ಸಂಸ್ಕಾರವಾವುದೂ ಇಲ್ಲವಾಗಿದೆ! ದೇಹವು ಧೂಳಿಯಿಂದ ವ್ಯಾಪ್ತವಾಗಿ ಮಲಿನವಾಗಿದೆ! ಆದರೂ ಲಕ್ಷಣಸಂಪನ್ನೆಯಾದ ಉತ್ತಮಾಂಗನೆಯಾಗಿದ್ದಾಳೆ! (೧೦). ಹನುಮಂತನು ಬೆರಗಾಗಿ ಒಂದುಕ್ಷಣ ಅವಳನ್ನೇ ದೃಷ್ಟಿಸಿ ನೋಡಿದನು! ಸ್ವಲ್ಪದಿನಗಳ ಹಿಂದೆ ಅದೇ ರೀತಿಯಲ್ಲಿದ್ದ ಜಾನಕಿಯನ್ನು ಅವನು ಪ್ರತ್ಯಕ್ಷವಾಗಿ ನೋಡಿದ್ದನಲ್ಲವೆ? ಆದ್ದರಿಂದ ಅವಳೇ ಮೈಥಿಲಿಯೆಂದು ಹನುಮಂತನ ಮನಸ್ಸಿಗೆ ನಿಶ್ಚಯವಾಯಿತು! (೧೧). ಇಂದ್ರಜಿತುವಿನ ರಥದಲ್ಲಿ ಮಲಿನಗಾತ್ರಳಾಗಿದ್ದ ಅವಳ ದೈನ್ಯಾವಸ್ಥೆಯನ್ನು ಕಂಡು ಹನುಮಂತನಿಗೆ ದುಃಖವಾಯಿತು. ಕಣ್ಣೀರು ಉಕ್ಕಿಬಂದಿತು. ಶೋಕಾರ್ತಳೂ ಆನಂದದ ಲೇಶವೂ ಇಲ್ಲದವಳೂ ತಪಸ್ವಿನಿಯೂ ಆಗಿ ತೋರುತ್ತಿದ್ದ ಆ ಸ್ತ್ರೀವ್ಯಕ್ತಿಯನ್ನು ಹನುಮಂತನು ನೋಡಿ, ಇಂದ್ರಜಿತುವಿಗೆ ಸೆರೆಯಾಗಿ ಅವನ ರಥದಲ್ಲಿ ಕಾಣಿಸತಕ್ಕ ಅವಳೇ ಸೀತೆಯೆಂದು ವಾನರರಿಗೆ ತಿಳಿಸಿದನು! (೧೨-೧೩). 'ಎಲಾ! ಈತನ ಉದ್ದೇಶವೇನಿರಬಹುದು?' ಎಂದು ಚಿಂತಿಸುತ್ತ ಆ ಕಪಿಕುಂಜರನು ವಾನರಯೋಧ

ತದ್ವಾನರಬಲಂ ದೃಷ್ಟ್ವಾ ರಾವಣಿಃ ಕ್ರೋಧಮೂರ್ಛಿತಃ ।
ಕೃತ್ವಾ ವಿಕೋಶಂ ನಿಸ್ತ್ರಿಂಶಂ ಮೂರ್ಧ್ನಿ ಸೀತಾಂ ಪರಾಮೃಶತ್ ॥
ತಾಂ ಸ್ತ್ರಿಯಂ ಪಶ್ಯತಾಂ ತೇಷಾಂ ತಾಡಯಾಮಾಸ ರಾವಣಿಃ ।
ಕ್ರೋಶಂತೀಂ ರಾಮ ರಾಮೇತಿ ಮಾಯಯಾ ಯೋಜಿತಾಂ ರಥೇ ॥
ಗೃಹೀತಮೂರ್ಧಜಾಂ ದೃಷ್ಟ್ವಾ ಹನುಮಾನ್ ದೈನ್ಯಮಾಗತಃ ।
ಶೋಕಜಂ ವಾರಿ ನೇತ್ರಾಭ್ಯಾಮುತ್ಸೃಜನ್ಮಾರುತಾತ್ಮಜಃ ॥ ೧೭
ತಾಂ ದೃಷ್ಟ್ವಾ ಚಾರುಸರ್ವಾಂಗೀಂ ರಾಮಸ್ಯ ಮಹಿಷೀಂ ಪ್ರಿಯಾಮ್
ಅಬ್ರವೀತ್ಪರುಷಂ ವಾಕ್ಯಂ ಕ್ರೋಧಾದ್ರಕ್ಷೋಽಧಿಪಾತ್ಮಜಮ್ ॥ ೧೮
ದುರಾತ್ಮನ್ನಾತ್ಮನಾಶಾಯ ಕೇಶಪಕ್ಷೇ ಪರಾಮೃಶಃ ।
ಬ್ರಹ್ಮರ್ಷೀಣಾಂ ಕುಲೇ ಜಾತೋ ರಾಕ್ಷಸೀಂ ಯೋನಿಮಾಶ್ರಿತಃ ॥
ಧಿಕ್ತ್ವಾಂ ಪಾಪಸಮಾಚಾರಂ ಯಸ್ಯ ತೇ ಮತಿರೀದೃಶೀ ।
ನೃಶಂಸಾನಾರ್ಯ ದುರ್ವೃತ್ತ ಕ್ಷುದ್ರ ಪಾಪಪರಾಕ್ರಮ ॥ ೨೦

---

ರೊಡನೆ ರಾವಣಿಯಕಡೆಗೆ ನುಗ್ಗಿದನು. ವಾನರಸೇನೆಯು ತನ್ನ ಕಡೆಗೆ ನುಗ್ಗಿಬರುತ್ತಿರುವುದನ್ನು ನೋಡಿ ಇಂದ್ರಜಿತು ಸಂಕ್ರುದ್ಧನಾಗಿ ಕತ್ತಿಯನ್ನು ಒರೆಯಿಂದ ಹಿರಿದು ಆ ಮಾಯಾಸೀತೆಯ ತುರುಬನ್ನು ತುಡುಕಿದನು (೧೪-೧೫). ಮಾಯಾನಿರ್ಮಿತಳಾದ ಆ ಸ್ತ್ರೀಯು 'ರಾಮ! ರಾಮ!' ಎಂದು ಕೂಗಿಕೊಳ್ಳುತ್ತಿರಲು, ವಾನರರೆದುರಿಗೇ ಇಂದ್ರಜಿತು ಅವಳನ್ನು ಹೊಡೆದನು! ಅವಳ ತಲೆಗೂದಲನ್ನು ಇಂದ್ರಜಿತು ಹಿಡಿದುದನ್ನು ಕಂಡೊಡನೆ, ಹನುಮಂತನು ದೈನ್ಯದಿಂದ ಕಂಗೆಟ್ಟನು. ಅವನ ಕಣ್ಣುಗಳಿಂದ ಪಳಪಳನೆ ಕಣ್ಣೀರು ಹರಿಯಿತು (೧೬-೧೭). ಸರ್ವಾಂಗಸುಂದರಿಯಾದ ಆ ಮಾಯಾನಿರ್ಮಿತ ಸ್ತ್ರೀವ್ಯಕ್ತಿಯು ಶ್ರೀರಾಮನ ಮುದ್ದಿನ ರಾಣಿಯೆಂದೇ ತಿಳಿದು ಮಾರುತಾತ್ಮಜನು ರಾವಣಿಯನ್ನು ಕುರಿತು "ಎಲಾ ಖೂಳ! ನಿನ್ನ ಸರ್ವನಾಶಕ್ಕಾಗಿಯೇ ಅವಳ ತುರುಬನ್ನು ತುಡುಕಿದ್ದೀಯೆ. ಬ್ರಹ್ಮರ್ಷಿಗಳ ವಂಶದಲ್ಲಿ ಜನಿಸಿದರೂ ರಾಕ್ಷಸಯೋನಿಯಲ್ಲಿ ಬಂದವನಲ್ಲವೆ ನೀನು? (೧೮-೧೯). ಥೂ ಪಾಪಿ! ನಿನಗೆ ಧಿಕ್ಕಾರ! ಇಂತಹ ದುರ್ಬುದ್ಧಿ ಬಂದಿತೆ ನಿನಗೆ? ಎಲಾ ಘಾತುಕ, ಅಯೋಗ್ಯ, ದುಷ್ಟ,




‘ ತಾಂ ಸ್ತ್ರಿಯಂ ಪಶ್ಯತಾಂ ತೇಷಾಂ ತಾಡಯಾಮಾಸ ರಾವಣಿಃ ’

ಅನಾರ್ಯಸ್ಯೇದೃಶಂ ಕರ್ಮ ಘೃಣಾ ತೇ ನಾಸ್ತಿ ನಿರ್ಘೃಣ ।
ಚ್ಯುತಾ ಗೃಹಾಚ್ಚ ರಾಜ್ಯಾಚ್ಚ ರಾಮಹಸ್ತಾಚ್ಚ ಮೈಥಿಲೀ ॥ ೨೧
ಕಿಂ ತವೈಷಾಪರಾದ್ಧಾ ಹಿ ಯದೇನಾಂ ಹಂತುಮಿಚ್ಛಸಿ ।
ಸೀತಾಂ ಚ ಹತ್ವಾ ನ ಚಿರಂ ಜೀವಿಷ್ಯಸಿ ಕಥಂಚನ ॥ ೨೨
ವಧಾರ್ಹಕರ್ಮಣಾನೇನ ಮಮ ಹಸ್ತಗತೋ ಹ್ಯಸಿ ।
ಯೇ ಚ ಸ್ತ್ರೀಘಾತಿನಾಂ ಲೋಕಾ ಲೋಕವಧ್ಯೈಶ್ಚ ಕುತ್ಸಿತಾಃ ॥
ಇಹ ಜೀವಿತಮುತ್ಸೃಜ್ಯ ಪ್ರೇತ್ಯ ತಾನ್ ಪ್ರತಿಪತ್ಸ್ಯಸೇ ।
ಇತಿ ಬ್ರುವಾಣೋ ಹನುಮಾನ್ ಸಾಯುಧೈರ್ಹರಿಭಿರ್ವೃತಃ ॥ ೨೪
ಅಭ್ಯಧಾವತ ಸಂಕ್ರುದ್ಧೋ ರಾಕ್ಷಸೇಂದ್ರಸುತಂ ಪ್ರತಿ ।
ಆಪತಂತಂ ಮಹಾವೀರ್ಯಂ ತದನೀಕಂ ವನೌಕಸಾಮ್ ॥ ೨೫

---

ನೀಚ! ಪಾಪಕಾರ್ಯದಲ್ಲಿ ನಿನ್ನ ಪರಾಕ್ರಮವೆ? (೨೦). ಅನಾರ್ಯನಾದ ದಸ್ಯುವಿನ ಕೆಲಸವಿದು! ನಿರ್ಘೃಣ, ಈ ಮೈಥಿಲಿಯು ತನ್ನ ಗೃಹದಿಂದ, ರಾಜ್ಯದಿಂದ, ಕೈಹಿಡಿದ ಪತಿಯಾದ ಶ್ರೀರಾಮನ ಕೈಯಿಂದ—ಚ್ಯುತಳಾಗಿ ದಿಕ್ಕಿಲ್ಲದವಳಾಗಿದ್ದಾಳೆಂದು ನಿನಗೆ ಮರುಕವೂ ಆಗದೆ? (೨೧). ಇವಳನ್ನು ಕೊಲ್ಲಲು ಹೊರಟಿರುವೆಯಲ್ಲ, ಯಾವ ಅಪರಾಧವನ್ನಿವಳು ನಿನಗೆ ಮಾಡಿದ್ದಾಳೆ? ಒಂದು ವೇಳೆ ಸೀತೆಯನ್ನು ಸಂಹರಿಸಿದರೂ ನೀನು ಬಹುಕಾಲ ಎಂದಿಗೂ ಬದುಕಿರಲಾರೆ! (೨೨). ವಧೆಯೋಗ್ಯವಾದ ದುಷ್ಕಾರ್ಯವನ್ನು ನಡೆಸಿದ ನೀನು ನನ್ನ ಮುಷ್ಟಿಯಲ್ಲಿ ಸಿಕ್ಕಿಬಿದ್ದಿರುವೆ! ಸ್ತ್ರೀಘಾತುಕರಿಗೆ ಪ್ರಾಪ್ತವಾಗುವ ನರಕವು ಲೋಕವಧ್ಯರಾದ ಕೊಲೆಗಡುಕರಿಗೂ ಬೇಡವಾದದ್ದು * (೨೩). ನೀನು ಸತ್ತು ಪ್ರೇತವಾಗಿ ಅಂಥ ನರಕಕ್ಕೇ ಹೋಗಿ ಬೀಳುತ್ತೀಯೆ!" ಎಂದು ಕೂಗಿ ಹೇಳಿದನು. ಹೀಗೆ ಹೇಳುತ್ತಲೇ ಹನುಮಂತನು ಆಯುಧಧಾರಿಗಳಾದ ವಾನರಯೋಧರೊಡನೆ ರಾವಣಿಯತ್ತ ನುಗ್ಗಿದನು. ಹಾಗೆ ನುಗ್ಗುತ್ತಿದ್ದ ವಾನರಸೇನೆಯನ್ನು ಬಲೋದ್ಧತವಾದ ರಾಕ್ಷಸಸೇನೆಯು ಅಡ್ಡಗಟ್ಟಿತು (೨೪–೨೫).

---

* ಕೊಲೆಗಡುಕರೂ ಸಹ ಸ್ತ್ರೀಹತ್ಯೆಯನ್ನು ಮಾಡಲು ಹಿಂಜರಿಯುತ್ತಾರೆ ಎಂದು ತಾತ್ಪರ್ಯ.

ರಕ್ಷಸಾಂ ಭೀಮವೇಗಾನಾಮನೀಕಂ ತು ನ್ಯವಾರಯತ್ ।
ಸ ತಾಂ ಬಾಣಸಹಸ್ರೇಣ ವಿಕ್ಷೋಭ್ಯ ಹರಿವಾಹಿನೀಮ್ ॥ ೨೬

ಹರಿಶ್ರೇಷ್ಠಂ ಹನುಮಂತಮಿಂದ್ರಜಿತ್ ಪ್ರತ್ಯುವಾಚ ಹ ।
ಸುಗ್ರೀವಸ್ತ್ವಂ ಚ ರಾಮಶ್ಚ ಯನ್ನಿಮಿತ್ತಮಿಹಾಗತಾಃ ॥ ೨೭

ತಾಂ ಹನಿಷ್ಯಾಮಿ ವೈದೇಹೀಮದ್ಯೈವ ತವ ಪಶ್ಯತಃ ।
ಇಮಾಂ ಹತ್ವಾ ತತೋ ರಾಮಂ ಲಕ್ಷ್ಮಣಂ ತ್ವಾಂ ಚ ವಾನರ ॥ ೨೮

ಸುಗ್ರೀವಂ ಚ ವಧಿಷ್ಯಾಮಿ ತಂ ಚಾನಾರ್ಯಂ ವಿಭೀಷಣಮ್ ।
ನ ಹಂತವ್ಯಾಃ ಸ್ತ್ರಿಯಶ್ಚೇತಿ ಯದ್ಬ್ರವೀಷಿ ಪ್ಲವಂಗಮ ॥ ೨೯

ಪೀಡಾಕರಮಮಿತ್ರಾಣಾಂ ಯತ್ ಸ್ಯಾತ್ ಕರ್ತವ್ಯಮೇವ ತತ್ ।
ತಮೇವಮುಕ್ತ್ವಾ ರುದತೀಂ ಸೀತಾಂ ಮಾಯಾಮಯೀಂ ತದಾ ॥

ಶಿತಧಾರೇಣ ಖಡ್ಗೇನ ನಿಜಘಾನೇಂದ್ರಜಿತ್ ಸ್ವಯಮ್ ।
ಯಜ್ಞೋಪವೀತಮಾರ್ಗೇಣ ಭಿನ್ನಾ ತೇನ ತಪಸ್ವಿನೀ ॥ ೩೧

---

ಅದೇ ಸಮಯದಲ್ಲಿ ಇಂದ್ರಜಿತುವೂ ಕೂಡ ಸಾವಿರಾರು ಕೂರ್ಗಣೆಗಳಿಂದ ಕಪಿಸೇನೆಯನ್ನು ಈಡಾಡಿ, ಹನುಮಂತನನ್ನು ಕುರಿತು "ಸುಗ್ರೀವನೂ ನೀನೂ ರಾಮನೂ ಯಾರಿಗೋಸ್ಕರ ಇಲ್ಲಿಗೆ ಬಂದಿದ್ದೀರೋ ಆ ಸೀತೆಯನ್ನು ಈಗಲೇ ನಿನ್ನೆದುರಿಗೇ ಕೊಂದುಹಾಕುವೆನು! (೨೬-೨೭). ಇವಳನ್ನು ಕೊಂದು, ಎಲೈ ವಾನರ, ರಾಮಲಕ್ಷ್ಮಣರನ್ನೂ ನಿನ್ನನ್ನೂ ಸುಗ್ರೀವನನ್ನೂ ಸಂಹರಿಸುವೆನು! ಅನಾರ್ಯನಾದ ಆ ವಿಭೀಷಣನನ್ನೂ ಬಿಡುವುದಿಲ್ಲ! ಸ್ತ್ರೀಯರನ್ನು ಕೊಲ್ಲಬಾರದೆಂದು ಹೇಳುವೆಯಲ್ಲ, ಎಲೈ ಕಪಿಯೆ, ಶತ್ರುಗಳಿಗೆ ಸಂಕಟವನ್ನುಂಟುಮಾಡುವ ಯಾವ ಕಾರ್ಯವನ್ನಾದರೂ ಮಾಡಲೇ ಬೇಕು!" ಎಂದು ಉತ್ತರ ಕೊಟ್ಟನು (೨೮-೨೯). ಹೀಗೆ ಹೇಳಿ ಆ ಇಂದ್ರಜಿತು ಹರಿತವಾದ ಖಡ್ಗವನ್ನೆತ್ತಿ, ಅನಾಥೆಯಾಗಿ ಗೋಳಿಡುತ್ತಿದ್ದ ಮಾಯಾನಿರ್ಮಿತಳಾದ ಸೀತೆಯನ್ನು (ಎಡಹೆಗಲಿನಮೇಲೆ ಹೊಡೆದು) ಜನಿವಾರದ ಆಕಾರದಲ್ಲಿ ಉದ್ದವಾಗಿ ಸೀಳಿಬಿಟ್ಟನು! (೩೦-೩೧).

ಸಾ ಪೃಥಿವ್ಯಾಂ ಪೃಥುಶ್ರೋಣೀ ಪಪಾತ ಪ್ರಿಯದರ್ಶನಾ ।
ತಾಮಿಂದ್ರಜಿತ್ ಸ್ವಯಂ ಹತ್ವಾ ಹನುಮಂತಮುವಾಚ ಹ ॥ ೩೨

ಮಯಾ ರಾಮಸ್ಯ ಪಶ್ಯೇಮಾಂ ಕೋಪೇನ ಚ ನಿಷೂದಿತಾಮ್ ।
ಏಷಾ ವಿಶಸ್ತಾ ವೈದೇಹೀ ವಿಫಲೋ ವಃ ಪರಿಶ್ರಮಃ ॥ ೩೩

ತತಃ ಖಡ್ಗೇನ ಮಹತಾ ಹತ್ವಾ ತಾಮಿಂದ್ರಜಿತ್ ಸ್ವಯಮ್ ।
ಹೃಷ್ಟಃ ಸ ರಥಮಾಸ್ಥಾಯ ವಿನನಾದ ಮಹಾಸ್ವನಮ್ ॥ ೩೪

ವಾನರಾಃ ಶುಶ್ರುವುಃ ಶಬ್ದಮದೂರೇ ಪ್ರತ್ಯವಸ್ಥಿತಾಃ ।
ವ್ಯಾದಿತಾಸ್ಯಸ್ಯ ನದತಸ್ತದ್ದುರ್ಗಂ ಸಂಶ್ರಿತಸ್ಯ ಚ ॥ ೩೫

ತಥಾ ತು ಸೀತಾಂ ವಿನಿಹತ್ಯ ದುರ್ಮತಿಃ
　ಪ್ರಹೃಷ್ಟಚೇತಾಃ ಸ ಬಭೂವ ರಾವಣಿಃ ।
ತಂ ಹೃಷ್ಟರೂಪಂ ಸಮುದೀಕ್ಷ್ಯ ವಾನರಾ
　ವಿಷಣ್ಣರೂಪಾಃ ಸಹಸಾ ಪ್ರದುದ್ರುವುಃ ॥ ೩೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಾಶೀತಿತಮಃ ಸರ್ಗಃ

---

ಸುಂದರಾಕೃತಿಯ ಮಾಯಾಂಗನೆಯು ನೆಲದಲ್ಲಿ ಸತ್ತು ಬಿದ್ದಳು. ಈ ಪ್ರಕಾರದಲ್ಲಿ ಇಂದ್ರಜಿತು ಅವಳನ್ನು ಸಂಹರಿಸಿ ಹನುಮಂತನ ಕಡೆಗೆ ತಿರುಗಿ "ಎಲೈ ವಾನರ, ಇಲ್ಲಿ ನೋಡು! ರಾಮನ ಭಾರ್ಯೆಯನ್ನು ಕತ್ತರಿಸಿ ಹಾಕಿದ್ದೇನೆ. ಸೀತೆಯು ಸತ್ತುಹೋದಳು! ನಿಮ್ಮ ಶ್ರಮವೆಲ್ಲವೂ ನಿರರ್ಥಕ ವಾಯಿತು!" ಎಂದನು (೩೨-೩೩). ಈ ರೀತಿಯಲ್ಲಿ ಮೇಘನಾದನು ಮಾಯಾಸೀತೆಯನ್ನು ತನ್ನ ಕತ್ತಿಯಿಂದ ಕತ್ತರಿಸಿ, ಹರ್ಷದಿಂದ ರಥದಲ್ಲಿ ನಿಂತು ಸಿಂಹನಾದಮಾಡಿದನು. (ಅಭೇದ್ಯವಾದ ರಾಕ್ಷಸಸೇನೆಯ ನಡುವೆ ಆಕಾಶವೆಂಬ) ದುರ್ಗದಲ್ಲಿ ನಿಂತು ಬಾಯ್ದೆರೆದು ಬೊಬ್ಬಿಡುವ ಇಂದ್ರಜಿತು ವಿನ ಗರ್ಜನೆಯನ್ನು, ಎದುರಿಗೇ ನಿಂತಿದ್ದ ವಾನರರು ಅಸಹಾಯಕರಾಗಿ ಕೇಳಿದರು (೩೪-೩೫). ದುರುಳನಾದ ರಾವಣಿಯು ಸೀತೆಯನ್ನು ಕೊಂದೆನೆಂಬ ಹರ್ಷವನ್ನು ತೋರಿಸುತ್ತ ಉತ್ಸಾಹದಿಂದ ಮೆರೆದನು. ಅವನನ್ನು ನೋಡಿ ವಾನರರು ವಿಷಣ್ಣರಾಗಿ ದಿಕ್ಕುದಿಕ್ಕಿಗೆ ಚದರಿದರು (೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತೊಂದನೆಯ ಸರ್ಗ

## ದ್ವ್ಯಶೀತಿತಮಃ ಸರ್ಗಃ

### ಹನೂಮದಾದಿನಿರ್ವೇದಃ

ಶ್ರುತ್ವಾ ತು ಭೀಮನಿರ್ಹ್ರಾದಂ ಶಕ್ರಾಶನಿಸಮಸ್ವನಮ್ ।
ವೀಕ್ಷಮಾಣಾ ದಿಶಃ ಸರ್ವಾ ದುದ್ರುವುರ್ವಾನರರ್ಷಭಾಃ ॥ ೧

ತಾನುವಾಚ ತತಃ ಸರ್ವಾನ್ ಹನುಮಾನ್ ಮಾರುತಾತ್ಮಜಃ ।
ವಿಷಣ್ಣವದನಾನ್ ದೀನಾಂಸ್ತ್ರಸ್ತಾನ್ ವಿದ್ರವತಃ ಪೃಥಕ್ ॥ ೨

ಕಸ್ಮಾದ್ವಿಷಣ್ಣವದನಾ ವಿದ್ರವಧ್ವಂ ಪ್ಲವಂಗಮಾಃ ।
ತ್ಯಕ್ತಯುದ್ಧಸಮುತ್ಸಾಹಾಃ ಶೂರತ್ವಂ ಕ್ವ ನು ವೋ ಗತಮ್ ॥ ೩

ಪೃಷ್ಠತೋಽನುವ್ರಜಧ್ವಂ ಮಾಮಗ್ರತೋ ಯಾಂತಮಾಹವೇ ।
ಶೂರೈರಭಿಜನೋಪೇತೈರಯುಕ್ತಂ ಹಿ ನಿವರ್ತಿತುಮ್ ॥ ೪

## ಸರ್ಗ ೮೨

ಹನುಮಂತನು ವಾನರರಿಗೆ ಧೈರ್ಯವನ್ನು ಹೇಳಿ ಸ್ವಲ್ಪಕಾಲ ಯುದ್ಧವನ್ನು ಮಾಡಿ, ಖೇದದಿಂದ ಹೊರಟುಹೋಗುವುದು. ಮೇಘನಾದನು ನಿಕುಂಭಿಳೆಗೆ ಹೋಗಿ ಯಜ್ಞವನ್ನಾರಂಭಿಸುವುದು.

ಈ ಪ್ರಕಾರದಲ್ಲಿ ಇಂದ್ರಜಿತು ಸಿಡಿಲಿನಂತೆ ಭೀಕರವಾಗಿ ಗರ್ಜಿಸುವುದನ್ನು ಕೇಳಿ, ವಾನರಯೂಥಪರು ಸುತ್ತಲೂ ನೋಡುತ್ತ ದಿಕ್ಕುದಿಕ್ಕುಗಳಿಗೆ ಓಡಲಾರಂಭಿಸಿದರು (೧). ಹೆದರಿ ಕಂಗೆಟ್ಟು ವಿಷಣ್ಣವದನರಾಗಿ ಪಲಾಯನಮಾಡುತ್ತಿದ್ದ ಅವರನ್ನು ನೋಡಿ ಹನುಮಂತನು "ಎಲೈ ಕಪಿಯೋಧರೆ, ವಿಷಣ್ಣವದನರಾಗಿ ಏಕೆ ಓಡುತ್ತಿದ್ದೀರಿ ? ಯುದ್ಧೋತ್ಸಾಹವನ್ನು ತ್ಯಜಿಸಿಬಿಟ್ಟಿರಾ ? ನಿಮ್ಮ ಶೌರ್ಯವು ಎಲ್ಲಿ ಹೋಯಿತು ? (೨-೩). ರಣರಂಗದಲ್ಲಿ ನಾನು ಮುಂದೆ ನುಗ್ಗಿಹೋಗುವೆನು ! ನನ್ನ ಹಿಂದೆ ಬನ್ನಿರಿ. ವಿಖ್ಯಾತವಂಶದಲ್ಲಿ ಜನಿಸಿದ ನಿಮ್ಮಂತಹ ವೀರರಿಗೆ ಯುದ್ಧದಿಂದ ಹಿಮ್ಮೆಟ್ಟುವುದು ತರವಲ್ಲ" ಎಂದು ಧೈರ್ಯವನ್ನು ಹೇಳಿದನು (೪).

ಏವಮುಕ್ತಾಃ ಸುಸಂಹೃಷ್ಟಾ ವಾಯುಪುತ್ರೇಣ ವಾನರಾಃ ।
ಶೈಲಶೃಂಗಾಣ್ಯಗಾಂಶ್ಚೈವ ಜಗೃಹುರ್ಹೃಷ್ಟಮಾನಸಾಃ ॥ ೫

ಅಭಿಪೇತುಶ್ಚ ಗರ್ಜಂತೋ ರಾಕ್ಷಸಾನ್ ವಾನರರ್ಷಭಾಃ ।
ಪರಿವಾರ್ಯ ಹನೂಮಂತಮನ್ವಯುಶ್ಚ ಮಹಾಹವೇ ॥ ೬

ಸ ತೈರ್ವಾನರಮುಖ್ಯೈಶ್ಚ ಹನುಮಾನ್ ಸರ್ವತೋ ವೃತಃ ।
ಹುತಾಶನ ಇವಾರ್ಚಿಷ್ಮಾನದಹಚ್ಛತ್ರುವಾಹಿನೀಮ್ ॥ ೭

ಸ ರಾಕ್ಷಸಾನಾಂ ಕದನಂ ಚಕಾರ ಸುಮಹಾಕಪಿಃ ।
ವೃತೋ ವಾನರಸೈನ್ಯೇನ ಕಾಲಾಂತಕಯಮೋಪಮಃ ॥ ೮

ಸ ತು ಕೋಪೇನ ಚಾವಿಷ್ಟಃ ಶೋಕೇನ ಚ ಮಹಾಕಪಿಃ ।
ಹನುಮಾನ್ ರಾವಣಿರಥೇಽಪಾತಯನ್ಮಹತೀಂ ಶಿಲಾಮ್ ॥ ೯

ತಾಮಾಪತಂತೀಂ ದೃಷ್ಟ್ವೈವ ರಥಃ ಸಾರಥಿನಾ ತದಾ ।
ವಿಧೇಯಾಶ್ವಸಮಾಯುಕ್ತಃ ಸುದೂರಮಪವಾಹಿತಃ ॥ ೧೦

---

ಹನುಮಂತನ ನುಡಿಯಿಂದ ವಾನರರು ಮತ್ತೆ ಉತ್ಸಾಹಗೊಂಡು ಶೈಲ ಶಿಖರಗಳನ್ನೂ ವೃಕ್ಷಗಳನ್ನೂ ಹಿಡಿದು ಗರ್ಜಿಸುತ್ತ ರಾಕ್ಷಸರನ್ನೆದುರಿಸಿದರು. ಅವರೆಲ್ಲರೂ ಹನುಮಂತನನ್ನು ಹಿಂಬಾಲಿಸಿ ಹೋಗಿ ಯುದ್ಧರಂಗಕ್ಕಿಳಿದರು (೫–೬). ಆ ಕಪಿಯೋಧರ ಪರಿವಾರದೊಡನೆ ಹನುಮಂತನು, ಪ್ರಜ್ವಲಿಸುವ ಅಗ್ನಿಯಂತೆ, ಶತ್ರುಸೇನೆಯನ್ನು ಹುರಿದು ಮುಕ್ಕಲಾರಂಭಿಸಿದನು. ಕಪಿಸೇನಾಪರಿವೃತನಾದ ಆ ಕಪಿಕುಂಜರನು, ಪ್ರಳಯಕಾಲದಲ್ಲಿ ಸರ್ವ ನಾಶಕ್ಕಾಗಿ ಹೊರಟ ಯಮನಂತೆ, ರಾಕ್ಷಸರ ಕೊಲೆಯನ್ನೇ ನಡೆಸಿದನು (೭–೮). ಹನುಮಂತನಿಗೆ ರೋಷವೂ ಶೋಕವೂ ಏಕಕಾಲದಲ್ಲಿ ಆವರಿಸಿದ್ದವು. ಅವನು ಒಂದು ದೊಡ್ಡ ಬಂಡೆಯನ್ನೆತ್ತಿ ಇಂದ್ರಜಿತುವಿನ ರಥಕ್ಕೆ ಆವೇಶದಿಂದ ಬೀಸಿ ಹೊಡೆದನು! ಆ ಬಂಡೆಯನ್ನು ಕಂಡೊಡನೆ ಜಾಣಾಕ್ಷನಾದ ಸಾರಥಿಯು ಪಳಗಿದ ಕುದುರೆಗಳನ್ನೆಳೆದು, ಬಂಡೆಯು ತಾಗದಂತೆ ಇಂದ್ರಜಿತುವಿನ ರಥವನ್ನು ಬಹುದೂರದವರೆಗೆ ಅಡ್ಡಲಾಗಿ

ತಮಿಂದ್ರಜಿತಮಪ್ರಾಪ್ಯ ರಥಸ್ಥಂ ಸಹಸಾರಥಿಮ್ ।
ವಿವೇಶ ಧರಣೀಂ ಭಿತ್ತ್ವಾ ಸಾ ಶಿಲಾ ವ್ಯರ್ಥಮುದ್ಯತಾ ॥ ೧೧

ಪತಿತಾಯಾಂ ಶಿಲಾಯಾಂ ತು ರಕ್ಷಸಾಂ ವ್ಯಥಿತಾ ಚಮೂಃ ।
ನಿಪತಂತ್ಯಾ ಚ ಶಿಲಯಾ ರಾಕ್ಷಸಾ ಮಥಿತಾ ಭೃಶಮ್ ॥ ೧೨

ತಮಭ್ಯಧಾವನ್ ಶತಶೋ ನದಂತಃ ಕಾನನೌಕಸಃ ।
ತೇ ದ್ರುಮಾಂಶ್ಚ ಮಹಾವೀರ್ಯಾ ಗಿರಿಶೃಂಗಾಣಿ ಚೋದ್ಯತಾಃ ॥

ಕ್ಷಿಪಂತೀಂದ್ರಜಿತಂ ಸಂಖ್ಯೇ ವಾನರಾ ಭೀಮವಿಕ್ರಮಾಃ ।
ವೃಕ್ಷಶೈಲಮಹಾವರ್ಷಂ ವಿಸೃಜಂತಃ ಪ್ಲವಂಗಮಾಃ ॥ ೧೪

ಶತ್ರೂಣಾಂ ಕದನಂ ಚಕ್ರುರ್ನೇದುಶ್ಚ ವಿವಿಧೈಃ ಸ್ವರೈಃ ।
ವಾನರೈಸ್ತೈರ್ಮಹಾವೀರ್ಯೈರ್ಘೋರರೂಪಾ ನಿಶಾಚರಾಃ ॥ ೧೫

ವೀರ್ಯಾದಭಿಹತಾ ವೃಕ್ಷೈರ್ವ್ಯವೇಷ್ಟಂತ ರಣಾಜಿರೇ ।
ಸ್ವಸೈನ್ಯಮಭಿವೀಕ್ಷ್ಯಾಥ ವಾನರಾರ್ದಿತಮಿಂದ್ರಜಿತ್ ॥ ೧೬

ಪ್ರಗೃಹೀತಾಯುಧಃ ಕ್ರುದ್ಧಃ ಪರಾನಭಿಮುಖೋ ಯಯೌ ।
ಸ ಶರೌಘಾನವಸೃಜನ್ ಸ್ವಸೈನ್ಯೇನಾಭಿಸಂವೃತಃ ॥ ೧೭

---

ಓಡಿಸಿದನು (೯–೧೦). ಆ ಮಹಾಶಿಲೆಯು ರಥದಲ್ಲಿದ್ದ ಇಂದ್ರಜಿತುವಿಗಾಗಲಿ ಸಾರಥಿಗಾಗಲಿ ತಾಗದೆ ಕೆಳಗೆ ಬಿದ್ದು ನೆಲವನ್ನೊಡೆದು ವ್ಯರ್ಥವಾಯಿತು. ಆದರೆ ಆ ಮಹಾಶಿಲೆಯು ಸುತ್ತಲೂ ಇದ್ದ ಬಹುಮಂದಿ ರಾಕ್ಷಸರನ್ನು ಜಜ್ಜಿ ಕೊಂದು ಗಾಯಗೊಳಿಸಿ ನೋಯಿಸಿತು (೧೧–೧೨). ಆಮೇಲೆ ವೀರರಾದ ವಾನರಯೋಧರು ಗಿರಿಶೃಂಗಗಳನ್ನೂ ತರುಗಳನ್ನೂ ಎತ್ತಿ ಎತ್ತಿ ಇಂದ್ರಜಿತುವಿನ ಕಡೆಗೆ ಎಸೆಯುತ್ತ, ಗಿರಿ ಶಿಖರ ವೃಕ್ಷಗಳ ಮಳೆಯನ್ನೇ ಸುರಿಸಿದರು (೧೩–೧೪). ವಿವಿಧಧ್ವನಿಗಳಿಂದ ಕೂಗುತ್ತ ಕಿರಿಚುತ್ತ ಶತ್ರುಗಳನ್ನು ಮರ್ದಿಸಿದರು. ಘೋರಾಕೃತಿಯ ನಿಶಾಚರರು ವಾನರರ ವೃಕ್ಷಗಳ ಬಡಿತದಿಂದ ಸತ್ತು ಉರುಳಿದರು. ತನ್ನ ರಾಕ್ಷಸಪಡೆಯು ಕಪಿಗಳ ಆಕ್ರಮಣಕ್ಕೆ ಸಿಕ್ಕಿ ನಾಶವಾಗುತ್ತಿರುವುದನ್ನು ನೋಡಿ ಇಂದ್ರಜಿತು ಕ್ರುದ್ಧನಾದನು (೧೫–೧೬). ಅವನು ಆಯುಧಪಾಣಿಯಾಗಿ ಶತ್ರುಗಳನ್ನೆದುರಿಸಿ ಶರಜಾಲಗಳಿಂದ ಹೊಡೆಯಲಾರಂಭಿಸಿದನು.

ಜಘಾನ ಕಪಿಶಾರ್ದೂಲಾನ್ ಸುಬಹೂನ್ ದೃಷ್ಟವಿಕ್ರಮಃ ।
ಶೂಲೈರಶನಿಭಿಃ ಖಡ್ಗೈಃ ಪಟ್ಟಿಸೈಃ ಕೂಟಮುದ್ಗರೈಃ ॥ ೧೮
ತೇ ಚಾಪ್ಯನುಚರಾಸ್ತಸ್ಯ ವಾನರಾನ್ ಜಘ್ನುರೋಜಸಾ ।
ಸಸ್ಕಂಧವಿಟಪೈಃ ಸಾಲೈಃ ಶಿಲಾಭಿಶ್ಚ ಮಹಾಬಲಃ ॥ ೧೯
ಹನುಮಾನ್ ಕದನಂ ಚಕ್ರೇ ರಕ್ಷಸಾಂ ಭೀಮಕರ್ಮಣಾಮ್ ।
ಸ ನಿವಾರ್ಯ ಪರಾನೀಕಮಬ್ರವೀತ್ತಾನ್ ವನೌಕಸಃ ॥ ೨೦
ಹನುಮಾನ್ ಸಂನಿವರ್ತಧ್ವಂ ನ ನಃ ಸಾಧ್ಯಮಿದಂ ಬಲಮ್ ।
ತ್ಯಕ್ತ್ವಾ ಪ್ರಾಣಾನ್ ವಿಚೇಷ್ಟಂತೋ ರಾಮಪ್ರಿಯಚಿಕೀರ್ಷವಃ ॥
ಯನ್ನಿಮಿತ್ತಂ ಹಿ ಯುಧ್ಯಾಮೋ ಹತಾ ಸಾ ಜನಕಾತ್ಮಜಾ ।
ಇಮಮರ್ಥಂ ಹಿ ವಿಜ್ಞಾಪ್ಯ ರಾಮಂ ಸುಗ್ರೀವಮೇವ ಚ ॥ ೨೨
ತೌ ಯತ್ ಪ್ರತಿವಿಧಾಸ್ಯೇತೇ ತತ್ ಕರಿಷ್ಯಾಮಹೇ ವಯಮ್ ।
ಇತ್ಯುಕ್ತ್ವಾ ವಾನರಶ್ರೇಷ್ಠೋ ವಾರಯನ್ ಸರ್ವವಾನರಾನ್ ॥ ೨೩

---

ಆ ಪರಾಕ್ರಮಿಯು ಬಹುಮಂದಿ ಕಪಿಶಾರ್ದೂಲರನ್ನು ಕೊಂದನು. ರಾಕ್ಷಸ ಭಟರೂ ಸಹ ಶೂಲ, ಅಶನಿ, ಖಡ್ಗ, ಪಟ್ಟಿಸ, ಕೂಟಮುದ್ಗರ–ಮುಂತಾದ ಆಯುಧಗಳಿಂದ ವಾನರಭಟರನ್ನು ಕೊಂದರು (೧೭–೧೮). ಬಲಾಢ್ಯನಾದ ಹನುಮಂತನು ತರುಸ್ಕಂಧ, ಕೊಂಬೆ, ವೃಕ್ಷ ಮತ್ತು ಶಿಲೆಗಳಿಂದ ಭೀಕರ ರಾಕ್ಷಸರನ್ನು ಬಡಿದು ಬಡಿದು ಸಂಹರಿಸಿದನು. ಹೀಗೆ ತನ್ನ ಸಾಮರ್ಥ್ಯದಿಂದ ಶತ್ರುಗಳ ಆಕ್ರಮಣವನ್ನು ತಡೆದು ನಿಲ್ಲಿಸಿ, ವಾನರಸೇನೆಯನ್ನು ನೋಡಿ ಹೀಗೆಂದನು (೧೯–೨೦): "ಮಿತ್ರರೆ, ಹಿಂದಿರುಗಿರಿ! ಈ ಸೇನೆಯನ್ನು ನಾವು ಜಯಿಸಬೇಕಾದ್ದಿಲ್ಲ. ಶ್ರೀರಾಮನಿಗೆ ಪ್ರಿಯವಾಗಲೆಂದು ಪ್ರಾಣದ ಹಂಗುದೊರೆದು ಯಾರಿಗಾಗಿ ನಾವು ಯುದ್ಧಮಾಡುತ್ತಿರುವೆವೋ, ಆ ಜನಕಾತ್ಮಜೆಯು ಹತಳಾದಳು! ಈ ವಿಷಯವನ್ನು ಶ್ರೀರಾಮನಿಗೂ ಸುಗ್ರೀವನಿಗೂ ಮೊದಲು ತಿಳಿಸೋಣ (೨೧–೨೨). ಅವರಿಬ್ಬರೂ ಮುಂದೆ ಯಾವ ನಿರ್ಣಯವನ್ನು ಕೈಗೊಳ್ಳುವರೋ ಅದರಂತೆ ನಾವು ಮಾಡೋಣ" ಎಂದು ಹೇಳಿ ಆ ವಾನರೋತ್ತಮನು ಯುದ್ಧವನ್ನು ಮುಂದರಿಸದಂತೆ ಸಮಸ್ತ ವಾನರರನ್ನೂ ತಡೆದನು. ಅವನು ಧೀರತನ

ಶನೈಃ ಶನೈರಸಂತ್ರಸ್ತಃ ಸಬಲಃ ಸಂನ್ಯವರ್ತತ ।
ತತಃ ಪ್ರೇಕ್ಷ್ಯ ಹನೂಮಂತಂ ವ್ರಜಂತಂ ಯತ್ರ ರಾಘವಃ ॥ ೨೪

ಸ ಹೋತುಕಾಮೋ ದುಷ್ಟಾತ್ಮಾ ಗತಶ್ಚೈತ್ಯನಿಕುಂಭಿಲಾಮ್ ।
ನಿಕುಂಭಿಲಾಮಧಿಷ್ಠಾಯ ಪಾವಕಂ ಜುಹವೇಂದ್ರಜಿತ್ ॥ ೨೫

ಯಜ್ಞಭೂಮ್ಯಾಂ ತು ವಿಧಿವತ್ ಪಾವಕಸ್ತೇನ ರಕ್ಷಸಾ ।
ಹೂಯಮಾನಃ ಪ್ರಜಜ್ವಾಲ ಮಾಂಸಶೋಣಿತಭುಕ್ ತದಾ ॥ ೨೬

ಸೋಽರ್ಚಿಃಪಿನದ್ಧೋ ದದೃಶೇ ಹೋಮಶೋಣಿತತರ್ಪಿತಃ ।
ಸಂಧ್ಯಾಗತ ಇವಾದಿತ್ಯಃ ಸುತೀವ್ರೋಽಗ್ನಿಃ ಸಮುತ್ಥಿತಃ ॥ ೨೭

ಅಥೇಂದ್ರಜಿದ್ರಾಕ್ಷಸಭೂತಯೇ ತು
ಜುಹಾವ ಹವ್ಯಂ ವಿಧಿನಾ ವಿಧಾನವಿತ್ ।
ದೃಷ್ಟ್ವಾ ವ್ಯತಿಷ್ಠಂತ ಚ ರಾಕ್ಷಸಾಸ್ತೇ
ಮಹಾಸಮೂಹೇಷು ನಯಾನಯಜ್ಞಾಃ ॥ ೨೮

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವ್ಯಶೀತಿತಮಃ ಸರ್ಗಃ

---

ದಿಂದಲೇ ವಾನರಬಲದೊಡನೆ ಮೆಲ್ಲಮೆಲ್ಲಗೆ ಹಿಂದಕ್ಕೆ ಸರಿದನು. ಹನುಮಂತನು ಶ್ರೀರಾಮನಿದ್ದಲ್ಲಿಗೆ ಹೋಗುತ್ತಿರುವನೆಂಬುದನ್ನರಿತು ದುರುಳನಾದ ಮೇಘನಾದನು ಹೋಮಮಾಡುವುದಕ್ಕಾಗಿ ನಿಕುಂಭಿಳಾ ದೇವಾಲಯಕ್ಕೆ ಹೊರಟುಹೋದನು! (೨೩-೨೪). ಅಲ್ಲಿ ಇಂದ್ರಜಿತು ಅಗ್ನಿಯನ್ನು ಪ್ರತಿಷ್ಠಾಪಿಸಿ ಹೋಮನ್ನಾರಂಭಿಸಿದನು. ಯಜ್ಞಕುಂಡದಲ್ಲಿ ವಿಧಿಪೂರ್ವಕವಾಗಿ ಆ ರಾಕ್ಷಸನು ಹವನಮಾಡಲು, ರಕ್ತಮಾಂಸಗಳೆಂಬ ಹವಿಸ್ಸನ್ನು ಭಕ್ಷಿಸುತ್ತ ಅಗ್ನಿಯು ಪ್ರಜ್ವಲಿಸಿತು! (೨೫-೨೬). ರಕ್ತಹೋಮದಿಂದ ಸಂತೃಪ್ತಿಗೊಂಡು ಜ್ವಾಲೆಯೊಡನೆ ವರ್ಧಿಸಿದ ದಟ್ಟವಾದ ಅಗ್ನಿಯು, ಸಂಧ್ಯಾಕಾಲದ ಸೂರ್ಯನಂತೆ ರಕ್ತವರ್ಣವಾಗಿ ಗೋಚರಿಸಿತು (೨೭). ಯಜ್ಞನಿಯಮಗಳನ್ನು ಬಲ್ಲ ಮೇಘನಾದನು ರಾಕ್ಷಸರ ಅಭ್ಯುದಯಕ್ಕೋಸ್ಕರ ವಿಧಿಪೂರ್ವಕವಾಗಿ ಹವಿಸ್ಸನ್ನು ಅರ್ಪಿಸುತ್ತಿದ್ದನು. ಅಲ್ಲಿ ನೆರೆದಿದ್ದ ರಾಕ್ಷಸಸಮೂಹದಲ್ಲಿ ಯಜ್ಞವಿಧಿಯನ್ನು ಬಲ್ಲ ಅನೇಕ ರಾಕ್ಷಸರು ಲೋಪದೋಷಗಳಾಗದಂತೆ ನೋಡಿಕೊಳ್ಳುತ್ತಿದ್ದರು (೨೮).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತೆರಡನೆಯ ಸರ್ಗ

## ತ್ರ್ಯಶೀತಿತಮಃ ಸರ್ಗಃ

### ರಾಮಾಶ್ವಾಸನಮ್

ರಾಘವಶ್ಚಾಪಿ ವಿಪುಲಂ ತಂ ರಾಕ್ಷಸವನೌಕಸಾಮ್ ।
ಶ್ರುತ್ವಾ ಸಂಗ್ರಾಮನಿರ್ಘೋಷಂ ಜಾಂಬವಂತಮುವಾಚ ಹ ॥ ೧

ಸೌಮ್ಯ ನೂನಂ ಹನುಮತಾ ಕ್ರಿಯತೇ ಕರ್ಮ ದುಷ್ಕರಮ್ ।
ಶ್ರೂಯತೇ ಹಿ ಯಥಾ ಭೀಮಃ ಸುಮಹಾನಾಯುಧಸ್ವನಃ ॥ ೨

ತದ್ಗಚ್ಛ ಕುರು ಸಾಹಾಯ್ಯಂ ಸ್ವಬಲೇನಾಭಿಸಂವೃತಃ ।
ಕ್ಷಿಪ್ರಮೃಕ್ಷಪತೇ ತಸ್ಯ ಕಪಿಶ್ರೇಷ್ಠಸ್ಯ ಯುಧ್ಯತಃ ॥ ೩

ಋಕ್ಷರಾಜಸ್ತಥೋಕ್ತಸ್ತು ಸ್ವೇನಾನೀಕೇನ ಸಂವೃತಃ ।
ಆಗಚ್ಛತ್ ಪಶ್ಚಿಮಂ ದ್ವಾರಂ ಹನುಮಾನ್ ಯತ್ರ ವಾನರಃ ॥ ೪

ಅಥಾಯಾಂತಂ ಹನೂಮಂತಂ ದದರ್ಶರ್ಕ್ಷಪತಿಃ ಪಥಿ ।
ವಾನರೈಃ ಕೃತಸಂಗ್ರಾಮೈಃ ಶ್ವಸದ್ಭಿರಭಿಸಂವೃತಮ್ ॥ ೫

### ಸರ್ಗ ೮೩

#### ಮಾಯಾಸೀತೆಯ ವೃತ್ತಾಂತವನ್ನು ಕೇಳಿ ಶ್ರೀರಾಮನ ದುಃಖ ಲಕ್ಷ್ಮಣನ ಸಮಾಧಾನ.

ಇತ್ತ ರಾಕ್ಷಸರಿಗೂ ವಾನರಯೋಧರಿಗೂ ಯುದ್ಧವು ನಡೆಯುತ್ತಿದ್ದಾಗ ಜನಿಸಿದ ದೊಡ್ಡ ಕೋಲಾಹಲವು ಶ್ರೀರಾಮನಿಗೆ ತಿಳಿಯಿತು. ಅವನು ಜಾಂಬವಂತನನ್ನು ನೋಡಿ "ಸೌಮ್ಯ-ಜಾಂಬವಂತ, ಅಲ್ಲಿ ಹನುಮಂತನು ಯಾವುದೋ ಅದ್ಭುತಕಾರ್ಯದಲ್ಲಿ ತೊಡಗಿದಂತಿದೆ! ಆಯುಧಗಳ ಘರ್ಷಣೆಯಿಂದ ಭೈರವಧ್ವನಿ ಕೇಳಿಬರುತ್ತಿದೆಯಲ್ಲವೆ? (೧-೨). ಆದ್ದರಿಂದ, ಋಕ್ಷರಾಜ, ನಿನ್ನ ಸೇನೆಯೊಡನೆ ಅಲ್ಲಿ ಹೋಗಿ, ಯುದ್ಧದಲ್ಲಿ ತೊಡಗಿರುವ ಆ ಕಪಿಶ್ರೇಷ್ಠನಿಗೆ ಸಹಾಯಮಾಡು" ಎಂದನು. ಕೂಡಲೆ ಜಾಂಬವಂತನು ತನ್ನ ಸೇನೆಯೊಡನೆ, ಹನುಮಂತನು ಹೋರಾಡುತ್ತಿದ್ದ ಪಶ್ಚಿಮದ್ವಾರದ ಕಡೆಗೆ ತೆರಳಿದನು (೩-೪). ದಾರಿಯಲ್ಲಿ ವಾನರಯೋಧರೊಡನೆ ಹಿಂದಿರುಗಿ ಬರುತ್ತಿದ್ದ ಹನುಮಂತನನ್ನು ಜಾಂಬವಂತನು

**ದೃಷ್ಟ್ವಾ ಪಥಿ ಹನೂಮಾಂಶ್ಚ ತದೃಕ್ಷಬಲಮುದ್ಯತಮ್ ।**
**ನೀಲಮೇಘನಿಭಂ ಭೀಮಂ ಸಂನಿವಾರ್ಯ ನ್ಯವರ್ತತ ॥** ೬

**ಸ ತೇನ ಹರಿಸೈನ್ಯೇನ ಸಂನಿಕರ್ಷಂ ಮಹಾಯಶಾಃ ।**
**ಶೀಘ್ರಮಾಗಮ್ಯ ರಾಮಾಯ ದುಃಖಿತೋ ವಾಕ್ಯಮಬ್ರವೀತ್ ॥** ೭

**ಸಮರೇ ಯುಧ್ಯಮಾನಾನಾಮಸ್ಮಾಕಂ ಪ್ರೇಕ್ಷತಾಂ ಪುರಃ ।**
**ಜಘಾನ ರುದತೀಂ ಸೀತಾಮಿಂದ್ರಜಿದ್ರಾವಣಾತ್ಮಜಃ ॥** ೮

**ಉದ್ಭ್ರಾಂತಚಿತ್ತಸ್ತಾಂ ದೃಷ್ಟ್ವಾ ವಿಷಣ್ಣೋಽಹಮರಿಂದಮ ।**
**ತದಹಂ ಭವತೋ ವೃತ್ತಂ ವಿಜ್ಞಾಪಯಿತುಮಾಗತಃ ॥** ೯

**ತಸ್ಯ ತದ್ವಚನಂ ಶ್ರುತ್ವಾ ರಾಘವಃ ಶೋಕಮೂರ್ಛಿತಃ ।**
**ನಿಪಪಾತ ತದಾ ಭೂಮೌ ಛಿನ್ನಮೂಲ ಇವ ದ್ರುಮಃ ॥** ೧೦

**ತಂ ಭೂಮೌ ದೇವಸಂಕಾಶಂ ಪತಿತಂ ಪ್ರೇಕ್ಷ್ಯ ರಾಘವಮ್ ।**
**ಅಭಿಪೇತುಃ ಸಮುತ್ಪತ್ಯ ಸರ್ವತಃ ಕಪಿಸತ್ತಮಾಃ ॥** ೧೧

---

ಕಂಡನು. ಆ ವಾನರರು ನಿಟ್ಟುಸಿರುಬಿಡುತ್ತ ಬರುತ್ತಿದ್ದರು. ಆಗ ಹನುಮಂತನು ಕಾರ್ಮೋಡದ ಸಾಲಿನಂತೆ ಬರುತ್ತಿದ್ದ ಭೀಕರವಾದ ಭಲ್ಲೂಕ ಸೈನ್ಯವನ್ನು ನೋಡಿ, ಮುಂದೆ ಹೋಗಬೇಕಾಗಿಲ್ಲವೆಂದು ಹೇಳಿ ಅವರೆಲ್ಲರನ್ನೂ ತಡೆದು, ತಾನು ವಾನರಸೇನೆಯೊಡನೆ ಶ್ರೀರಾಮನ ಬಳಿಗೆ ಬೇಗನೆ ಹೊರಟುಹೋದನು (೫-೬). ಅವನು ಶ್ರೀರಾಮನ ಸನ್ನಿಧಿಯನ್ನು ಸೇರಿ ಶೋಕಾರ್ತನಾಗಿ "ಶ್ರೀರಾಮ, ನಾವು ರಣರಂಗದಲ್ಲಿ ಹೋರಾಡುತ್ತಿದ್ದೆವು. ರಾವಣಪುತ್ರನಾದ ಇಂದ್ರಜಿತು, ರೋದಿಸುತ್ತಿದ್ದ ಸೀತಾದೇವಿಯನ್ನು ಕರೆತಂದು, ನಮ್ಮೆದುರಿಗೇ–ನಾವು ನೋಡುತ್ತಿರುವಾಗಲೇ ಕೊಂದು ಹಾಕಿದನು (೭-೮). ನನ್ನ ಬುದ್ಧಿ ಗಿರ್ರೆಂದಿತು. ದಿಗ್ಭ್ರಾಂತನಾಗಿ ದುಃಖದಲ್ಲಿ ಮುಳುಗಿಹೋದೆನು. ಶ್ರೀರಾಮ, ಇದನ್ನು ನಿನಗೆ ಅರಿಕೆ ಮಾಡಲು ಬಂದೆನು" ಎಂದು ಹೇಳಿದನು. ಹನುಮಂತನ ಮಾತನ್ನು ಕೇಳಿ ಶ್ರೀರಾಮನು ದುಃಖಭರದಿಂದ ಬಸವಳಿದು, ಬುಡವನ್ನು ಕತ್ತರಿಸಿದ ಮರದಂತೆ ಎಚ್ಚರದಪ್ಪಿ ಬಿದ್ದನು (೯-೧೦). ದೇವತಾಸದೃಶನಾದ ರಾಘವನು ಮೂರ್ಛಿತನಾಗಿ ಬಿದ್ದುದನ್ನು ಕಂಡು, ಕಪಿಯೂಥಪರು

ಅಸಿಂಚನ್ ಸಲಿಲೈಶ್ಚೈನಂ ಪದ್ಮೋತ್ಪಲಸುಗಂಧಿಭಿಃ ।
ಪ್ರದಹಂತಮಿವಾಸಾದ್ಯಂ ಸಹಸಾಗ್ನಿಮಿವೋಚ್ಛಿಖಮ್ ॥ ೧೨

ತಂ ಲಕ್ಷ್ಮಣೋಽಥ ಬಾಹುಭ್ಯಾಂ ಪರಿಷ್ವಜ್ಯ ಸುದುಃಖಿತಃ ।
ಉವಾಚ ರಾಮಮಸ್ವಸ್ಥಂ ವಾಕ್ಯಂ ಹೇತ್ವರ್ಥಸಂಯುತಮ್ ॥ ೧೩

ಶುಭೇ ವರ್ತ್ಮನಿ ತಿಷ್ಠಂತಂ ತ್ವಾಮಾರ್ಯ ವಿಜಿತೇಂದ್ರಿಯಮ್ ।
ಅನರ್ಥೇಭ್ಯೋ ನ ಶಕ್ನೋತಿ ತ್ರಾತುಂ ಧರ್ಮೋ ನಿರರ್ಥಕಃ ॥ ೧೪

ಭೂತಾನಾಂ ಸ್ಥಾವರಾಣಾಂ ಚ ಜಂಗಮಾನಾಂ ಚ ದರ್ಶನಮ್ ।
ಯಥಾಸ್ತಿ ನ ತಥಾ ಧರ್ಮಸ್ತೇನ ನಾಸ್ತೀತಿ ಮೇ ಮತಿಃ ॥ ೧೫

ಯಥೈವ ಸ್ಥಾವರಂ ವ್ಯಕ್ತಂ ಜಂಗಮಂ ಚ ತಥಾವಿಧಮ್ ।
ನಾಯಮರ್ಥಸ್ತಥಾ ಯುಕ್ತಸ್ತ್ವದ್ವಿಧೋ ನ ವಿಪದ್ಯತೇ ॥ ೧೬

---

ಸುತ್ತಲೂ ಬಂದು ನೆರೆದರು. ತಾವರೆನೈದಿಲೆಹೂಗಳಿಂದ ಸುಗಂಧಿಯಾದ ನೀರನ್ನು ತಂದು ಶ್ರೀರಾಮನನ್ನು ಸಿಂಪಡಿಸಿದರು (೧೧). ಮೂರ್ಛಿತನಾದರೂ ಜ್ವಲಿಸುವ ಅಗ್ನಿಯಂತೆ ದಿವ್ಯತೇಜೋನ್ವಿತನಾದ ರಾಘವನನ್ನು ಮುಟ್ಟುವ ಧೈರ್ಯವಿಲ್ಲದೆ ನಿಂತರು. ಆಗ ಲಕ್ಷ್ಮಣನು ದುಃಖಾರ್ತನಾಗಿ ಮುಂದೆ ಬಂದು, ಅಸ್ವಸ್ಥನಾದ ಶ್ರೀರಾಮನನ್ನು ಎರಡು ತೋಳುಗಳಿಂದಲೂ ಅಪ್ಪಿಕೊಂಡು ಹೀಗೆಂದನು (೧೨-೧೩) : "ಅಣ್ಣ, ಜಿತೇಂದ್ರಿಯನಾಗಿ ಸದಾಚಾರದಲ್ಲಿಯೇ ನಿರತನಾದವನು ನೀನು. ಧರ್ಮವು ನಿನ್ನನ್ನು ಅನರ್ಥಗಳಿಂದ ಪಾರುಮಾಡಲು ಶಕ್ತವಾಗಲಿಲ್ಲ. ಧರ್ಮವೆಂಬುದು ನಿರರ್ಥಕ! (೧೪). ವಸ್ತುತಃ ಧರ್ಮವೆಂಬುದೇ ಇಲ್ಲ! ಸ್ಥಾವರಜಂಗಮಾತ್ಮಕವಾದ ಪದಾರ್ಥಗಳ ಸ್ಥಿತಿಯನ್ನು ಪರಿಶೀಲಿಸಿದರೆ, ಧರ್ಮವಿಲ್ಲವೆಂದೇ ನನಗನಿಸುವುದು. (ವೃಕ್ಷಾದಿ ಸ್ಥಾವರಗಳೂ ಅಶ್ವಾದಿ ಜಂಗಮ ಪ್ರಾಣಿಗಳೂ ಸುಖವಾಗಿರುವುದು ಕಂಡುಬರುತ್ತದೆ. ಅವು ಯಾವ ಧರ್ಮಕಾರ್ಯವನ್ನು ಮಾಡುತ್ತವೆ? ಆದ್ದರಿಂದ ಸುಖಕ್ಕೆ ಕಾರಣವಾಗಿ ಧರ್ಮವು ಇರಬೇಕಾಗಿಲ್ಲ) (೧೫). ಸ್ಥಾವರವಾದ ವೃಕ್ಷಾದಿ ವಸ್ತುಗಳೂ ಜಂಗಮವಾದ ಅಶ್ವಾದಿ ಪ್ರಾಣಿಗಳೂ ಸುಖದುಃಖಗಳಿಂದ ಕೂಡಿರುವುದು

**ಯದ್ಯಧರ್ಮೋ ಭವೇದ್ಭೂತೋ ರಾವಣೋ ನರಕಂ ವ್ರಜೇತ್ ।**
**ಭವಾಂಶ್ಚ ಧರ್ಮಯುಕ್ತೋ ವೈ ನೈವಂ ವ್ಯಸನಮಾಪ್ನುಯಾತ್ ॥**

**ತಸ್ಯ ಚ ವ್ಯಸನಾಭಾವಾದ್ವ್ಯಸನಂ ಚ ಗತೇ ತ್ವಯಿ ।**
**ಧರ್ಮೋ ಭವತ್ಯಧರ್ಮಶ್ಚ ಪರಸ್ಪರವಿರೋಧಿನೌ ॥ ೧೮**

**ಧರ್ಮೇಣೋಪಲಭೇದ್ಧರ್ಮಮಧರ್ಮಂ ಚಾಪ್ಯಧರ್ಮತಃ ।**
**ಯದ್ಯ† ಧರ್ಮೇಣ ಯುಜ್ಯೇಯುರ್ಯೇಷ್ವಧರ್ಮಃ ಪ್ರತಿಷ್ಠಿತಃ ॥**

**ನ ಧರ್ಮೇಣ ವಿಯುಜ್ಯೇರನ್ನಾಧರ್ಮರುಚಯೋ ಜನಾಃ ।**
**ಧರ್ಮೇಣ ಚರತಾಂ ಧರ್ಮಸ್ತಥಾ ಚೈಷಾಂ ಫಲಂ ಭವೇತ್ ॥ ೨೦**

---

ಸ್ಪಷ್ಟವಾಗಿದೆ. (ಸುಖದುಃಖಗಳಿಗೆ ಕಾರಣವೆಂದು ಹೇಳಲ್ಪಡುವ ಧರ್ಮಾಧರ್ಮಗಳು ಅವುಗಳಿಗಿಲ್ಲವಲ್ಲ ! *) ಆದ್ದರಿಂದ ಸುಖಕ್ಕೆ ಧರ್ಮವೂ ದುಃಖಕ್ಕೆ ಅಧರ್ಮವೂ ನಿಮಿತ್ತವೆಂಬುದು ಸರಿಯಲ್ಲ. ಹಾಗಿದ್ದರೆ ನಿನ್ನಂತಹ ಧರ್ಮಶೀಲನು ವಿಪತ್ತಿಗೆ ಒಳಗಾಗುತ್ತಿರಲಿಲ್ಲ (೧೬). ಅಧರ್ಮವು ದಿಟವಾಗಿಯೂ ಇರುವುದಾದರೆ, ರಾವಣನು ನರಕದಲ್ಲಿರಬೇಕಾಗಿತ್ತು ! ಧರ್ಮನಿಷ್ಠನಾದ ನೀನು ಎಂದಿಗೂ ಇಂತಹ ಕಷ್ಟವನ್ನು ಪಡೆಯಬಾರದಾಗಿತ್ತು (೧೭). ರಾವಣನಿಗೆ ಯಾವ ಕಷ್ಟವೂ ಇಲ್ಲ ! ಅವನು ಸುಖದಲ್ಲಿದ್ದಾನೆ. ನೀನು ಬಗೆಬಗೆಯ ಕಷ್ಟಕ್ಕೆ ಒಳಗಾಗುತ್ತಿದ್ದೀಯೆ. ಇಲ್ಲಿ ಧರ್ಮವು ಅಧರ್ಮವಾಗಿದೆ ! ಅಧರ್ಮವು ಧರ್ಮವಾಗಿದೆ ! ಇವು ವಿರುದ್ಧವಾದ ಫಲಗಳನ್ನು ಕೊಡುತ್ತಿವೆಯಲ್ಲ ! (೧೮). ಧರ್ಮದಿಂದ ಅದರ ಫಲವಾದ ಸುಖವೂ ಅಧರ್ಮದಿಂದ ದುಃಖವೂ ಬರುವುದಾಗಿದ್ದರೆ, ಯಾರಲ್ಲಿ ಅಧರ್ಮವು ನೆಲೆಸಿದೆಯೋ ಅವರಿಗೆ ದುಃಖವೇ ಬರಬೇಕಾಗುತ್ತಿತ್ತು (೧೯). ಯಾರಲ್ಲಿ ಅಧರ್ಮದ ಲೇಶವೂ ಇಲ್ಲವೋ ಅವರಿಗೆ ಸುಖವು ತಪ್ಪಬಾರದಾಗಿತ್ತು. ಧರ್ಮದಿಂದ ನಡೆಯುವವರಿಗೆ ಸುಖವು

---

† 'ಯದಿ' ಶಬ್ದಕ್ಕೆ ಈ ಶ್ಲೋಕದ ಪೂರ್ವಾರ್ಧದೊಡನೆ ಸಂಬಂಧವಿದೆ.

* ಸ್ಥಾವರಗಳು ಸ್ವತಃ ಯಾವ ಕರ್ಮವನ್ನೂ ಮಾಡಲಾರವು ಸಿಂಹಾದಿ ಜಂತುಗಳು ಹಿಂಸಾದಿ ಕರ್ಮವನ್ನು ಮಾಡಿದರೂ ಅವುಗಳಿಗೆ ವಿಧಿನಿಷೇಧಗಳಿಲ್ಲವಾದ್ದರಿಂದ ಪಾಪಪುಣ್ಯಗಳು ಅಂಟುವುದಿಲ್ಲ.

ಯಸ್ಮಾದರ್ಥಾ ವಿವರ್ಧಂತೇ ಯೇಷ್ವಧರ್ಮಃ ಪ್ರತಿಷ್ಠಿತಃ ।
ಕ್ಲಿಶ್ಯಂತೇ ಧರ್ಮಶೀಲಾಶ್ಚ ತಸ್ಮಾದೇತೌ ನಿರರ್ಥಕೌ ॥ ೨೧

ವಧ್ಯಂತೇ ಪಾಪಕರ್ಮಾಣೋ ಯದ್ಯಧರ್ಮೇಣ ರಾಘವ ।
ವಧಕರ್ಮಹತೋಽಧರ್ಮಃ ಸ ಹತಃ ಕಂ ವಧಿಷ್ಯತಿ ॥ ೨೨

ಅಥವಾ ವಿಹಿತೇನಾಯಂ ಹನ್ಯತೇ ಹಂತಿ ವಾ ಪರಮ್ ।
ವಿಧಿರಾಲಿಪ್ಯತೇ ತೇನ ನ ಸ ಪಾಪೇನ ಕರ್ಮಣಾ ॥ ೨೩

ಅದೃಷ್ಟಪ್ರತಿಕಾರೇಣ ತ್ವವ್ಯಕ್ತೇನಾಸತಾ ಸತಾ ।
ಕಥಂ ಶಕ್ಯಂ ಪರಂ ಪ್ರಾಪ್ತುಂ ಧರ್ಮೇಣಾರಿವಿಕರ್ಶನ ॥ ೨೪

---

ದೊರೆಯುಬೇಕಲ್ಲವೆ? ಧರ್ಮಾಧರ್ಮಗಳಿಗೆ ತಕ್ಕ ಫಲವು ಸಿಗಬೇಕಲ್ಲವೆ? (೨೦). ಯಾರಲ್ಲಿ ಅಧರ್ಮವು ಸ್ಥಿರವಾಗಿ ನೆಲೆಸಿದೆಯೋ ಅವರಿಗೆ ಅಭ್ಯುದಯಗಳು ಹೆಚ್ಚುತ್ತಲೇ ಇವೆ! ಧರ್ಮಶೀಲರು ಕಷ್ಟಪಡುತ್ತಲೇ ಇದ್ದಾರೆ! ಆದ್ದರಿಂದ, ಅಣ್ಣ, ಈ ಪಾಪ-ಪುಣ್ಯ ಎಂಬುದು ನಿರರ್ಥಕ; ಸುಳ್ಳು! (೨೧). ಅಧರ್ಮದಿಂದ ಪಾಪಿಗಳು ಹಿಂಸೆಗೆ ಗುರಿಯಾಗುವುದಾದರೆ, ರಾಘವ, ಅಧರ್ಮವೇ ನಾಶಕ್ರಿಯೆಯಿಂದ* ಸತ್ತುಹೋಗುವುದಲ್ಲ! ತಾನೇ ಸತ್ತುಹೋಗಿರುವಾಗ, ಅದು ಯಾರನ್ನು ಹಿಂಸೆಪಡಿಸೀತು? ಯಾರನ್ನು ಕೊಂದೀತು? (೨೨). ಅಥವಾ ದೈವಪ್ರೇರಣೆಯಿಂದ ಪಾಪಿಯು ಘಾತಿಸಲ್ಪಡುತ್ತಾನೆ. ದೈವಪ್ರೇರಣೆಯಿಂದಲೇ ಇನ್ನೊಬ್ಬನನ್ನು ಘಾತಿಸುತ್ತಾನೆ (ದೈವವು ಪಾಪಪುಣ್ಯಗಳಿಗೆ ತಕ್ಕ ಫಲವನ್ನು ಕೊಡುತ್ತದೆ) ಎನ್ನುವುದಾದರೆ, ಪ್ರೇರಣೆಮಾಡುವ ದೈವಕ್ಕೆ ಪಾಪಕರ್ಮದ ಲೇಪವಾಗಬೇಕೇ ಹೊರತು ಪುರುಷನಿಗಲ್ಲ! (೨೩). (ಕರ್ಮದಿಂದ ಅದೃಷ್ಟವೆಂಬ ಗುಣವಿಶೇಷವು ಹುಟ್ಟುತ್ತದೆ. ಅದೃಷ್ಟವು

---

* ಅಧರ್ಮವೆಂದರೆ ಪಾಪಕರ್ಮ. ಕರ್ಮವೆಂದರೆ ಕ್ರಿಯೆ. ಅದು ಕ್ಷಣಿಕವಾದದ್ದು. ಒಂದನೆಯ ಕ್ಷಣದಲ್ಲಿ ಹುಟ್ಟಿ, ಎರಡನೆಯ ಕ್ಷಣದಲ್ಲಿ ಇದ್ದು, ಮೂರನೆಯ ಕ್ಷಣದಲ್ಲಿ ನಾಶವಾಗುತ್ತದೆ. ನಾಶವಾದ ಪಾಪಕರ್ಮವು ಕಾಲಾಂತರದಲ್ಲಿ ಇರುವುದಿಲ್ಲವಾದ್ದರಿಂದ, ಅದು ಮನುಷ್ಯನಿಗೆ ಕೆಟ್ಟಫಲವನ್ನು ಹೇಗೆ ಕೊಡಲು ಸಾಧ್ಯ? ಎಂದು ಅಭಿಪ್ರಾಯ. ಈ ನ್ಯಾಯವು ಪುಣ್ಯಕರ್ಮಕ್ಕೂ ಅನ್ವಯಿಸುತ್ತದೆ. ಶಬ್ದ, ಜ್ಞಾನ, ಕ್ರಿಯೆ–ಈ ಮೂರು ಕ್ಷಣಿಕಗಳೆಂದು ಶಾಸ್ತ್ರದ ನಿರ್ಣಯ.

ಯದಿ ಸತ್ ಸ್ಯಾತ್ ಸತಾಂ ಮುಖ್ಯ ನಾಸತ್ ಸ್ಯಾತ್ತ್ರವ ಕಿಂಚನ ।
ತ್ವಯಾ ಯದೀದೃಶಂ ಪ್ರಾಪ್ತಂ ತಸ್ಮಾತ್ ಸನ್ನೋಽಪಪದ್ಯತೇ ॥ ೨೫

ಅಥವಾ ದುರ್ಬಲಃ ಕ್ಲೀಬೋ ಬಲಂ ಧರ್ಮೋಽನುವರ್ತತೇ ।
ದುರ್ಬಲೋ ಹೃತಮರ್ಯಾದೋ ನ ಸೇವ್ಯ ಇತಿ ಮೇ ಮತಿಃ ॥ ೨೬

ಬಲಸ್ಯ ಯದಿ ಚೇದ್ಧರ್ಮೋ ಗುಣಭೂತಃ ಪರಾಕ್ರಮೇ ।
ಧರ್ಮಮುತ್ಸೃಜ್ಯ ವರ್ತಸ್ವ ಯಥಾ ಧರ್ಮೇ ತಥಾ ಬಲೇ ॥ ೨೭

---

ಚಿರಕಾಲ ಇರುವುದರಿಂದ, ಪಾಪಪುಣ್ಯಗಳಿಗೆ ತಕ್ಕ ಫಲವನ್ನು ಅದು ಕೊಡುತ್ತದೆ ಎಂದು ಹೇಳುವುದಾದರೆ) ಅಂಥ ಅದೃಷ್ಟವು ಅಸತ್–ಇಲ್ಲವೆಂದೇ ಹೇಳುತ್ತೇನೆ! ಅದು ವ್ಯಕ್ತವಾಗಿ ಕಣ್ಣಿಗೆ ಕಾಣಿಸುತ್ತಿಲ್ಲ. ಪ್ರತೀಕಾರ–ಎಂದರೆ, ಸರಿಯಾದ ಹೇತುವೇ ಇಲ್ಲವಾದ್ದರಿಂದ, ಅನುಮಾನದಿಂದಲೂ ಅದೃಷ್ಟವನ್ನು ಊಹಿಸಲು ಶಕ್ಯವಿಲ್ಲ. ಶ್ರೀರಾಮ, ಅದೃಷ್ಟವೇ ಇಲ್ಲವಾದಕಾರಣ ಧರ್ಮದಿಂದ ಸದ್ಗತಿಯನ್ನು ಪಡೆಯಲು ಹೇಗೆ ಸಾಧ್ಯ?* (೨೪). ಧರ್ಮದಿಂದ ಅದೃಷ್ಟವು ಹುಟ್ಟಿ ಅದರಿಂದ ಫಲವು ದೊರೆಯುವುದು ಸತ್ಯವಾಗಿದ್ದರೆ, ನಿನಗೆ ಯಾವ ಬಗೆಯ ಕೆಡಕೂ ಆಗುತ್ತಲೇ ಇರಲಿಲ್ಲ. ಸತ್ಪುರುಷರಲ್ಲಿ ಶ್ರೇಷ್ಠನಾದ ನಿನಗೆ ಇಂತಹ ವಿಪತ್ತು ಬಂದಿದೆಯಲ್ಲ! ಆದ್ದರಿಂದ ಧರ್ಮವು ಸತ್ಫಲವನ್ನು ಕೊಡುತ್ತದೆಯೆಂಬುದು ಸುಳ್ಳು! (೨೫). ಧರ್ಮವು ಫಲವನ್ನು ಕೊಡಬೇಕಾದರೆ ಮನುಷ್ಯನ ಪೌರುಷವನ್ನಪೇಕ್ಷಿಸುತ್ತದೆಯೆಂದೂ ಧರ್ಮವು ದುರ್ಬಲವಾದ್ದರಿಂದ ಸ್ವತಃ ಫಲವನ್ನು ಕೊಡಲು ಅಸಮರ್ಥವೆಂದೂ ಹೇಳುವುದಾದರೆ, ಅಂಥ ಕೈಲಾಗದ ಧರ್ಮದ ಗೊಡವೆಯೇ ಬೇಡ! ಸ್ವತಃ ಫಲವನ್ನೀಯಲಾರದ ಹೇಡಿಯಾದ ಧರ್ಮವನ್ನಾಶ್ರಯಿಸುವುದೇ ಬೇಡವೆಂದು ನನ್ನ ಅಭಿಪ್ರಾಯ! (೨೬). ಪೌರುಷವು ಫಲವನ್ನು ಕೊಡಬೇಕಾದರೆ ಧರ್ಮವು ಸಹಕಾರಿಯಾಗಿರು

---

* ಪುಣ್ಯಪಾಪಗಳು ತಕ್ಕ ಫಲವನ್ನು ಹೇಗೆ ಕೊಡುತ್ತವೆ? ಸ್ವತಃ ತಾವೇ ಕೊಡುತ್ತವೆಯೊ? ಈಶ್ವರನ ಮೂಲಕವೊ? ಅದೃಷ್ಟದ ಮೂಲಕವೊ?—ಕರ್ಮಗಳು ಸ್ವತಃ ನಾಶವಾಗಿಬಿಡುವುದರಿಂದ ಕಾಲಾಂತರದಲ್ಲಿ ಅವು ಫಲವನ್ನು ಕೊಡಲಾರವು. ಈಶ್ವರನ ಮೂಲಕವಾದರೆ, ಪ್ರೇರಕನಾದ ಈಶ್ವರನಿಗೇ ಕರ್ಮದ ಲೇಪವಾಗಬೇಕು. ಅದೃಷ್ಟದ ಮೂಲಕವೆಂಬುದು ಸರಿಯಲ್ಲ. ಏಕೆಂದರೆ ಅದೃಷ್ಟವೇ ಇಲ್ಲ ಎಂದು ತಾತ್ಪರ್ಯ.

ಅಥ ಚೇತ್ ಸತ್ಯವಚನಂ ಧರ್ಮಃ ಕಿಲ ಪರಂತಪ ।
ಅನೃತಸ್ತ್ವಯ್ಯಕರುಣಃ ಕಿಂ ನ ಬದ್ಧಸ್ತ್ವಯಾ ಪಿತಾ ॥ ೨೮

ಯದಿ ಧರ್ಮೋ ಭವೇದ್ಭೂತಃ ಅಧರ್ಮೋ ವಾ ಪರಂತಪ ।
ನ ಸ್ಮ ಹತ್ವಾ ಮುನಿಂ ವಜ್ರೀ ಕುರ್ಯಾದಿಜ್ಯಾಂ ಶತಕ್ರತುಃ ॥ ೨೯

ಅಧರ್ಮಸಂಶ್ರಿತೋ ಧರ್ಮೋ ವಿನಾಶಯತಿ ರಾಘವ ।
ಸರ್ವಮೇತದ್ಯಥಾಕಾಮಂ ಕಾಕುತ್ಸ್ಥ ಕುರುತೇ ನರಃ ॥ ೩೦

---

ತ್ತದೆ ಎನ್ನುವುದಾದರೆ, ಪ್ರಧಾನವಾದ ಪೌರುಷವನ್ನೇ ಅವಲಂಬಿಸು! ಗೌಣವಾದ ಧರ್ಮವನ್ನು ಆಚೆಗೆ ತಳ್ಳಿಬಿಡು (೨೭). ಅಣ್ಣ, ನಿನ್ನ ಅಭಿಪ್ರಾಯದಲ್ಲಿ ಸತ್ಯಪಾಲನೆಯೇ ಮುಖ್ಯವಾದ ಧರ್ಮವಷ್ಟೆ. ನಿನ್ನ ವಿಷಯದಲ್ಲಿ ಅಸತ್ಯವನ್ನು ಹೇಳಿ ನಿಷ್ಕರುಣೆಯಿಂದ ವರ್ತಿಸಿದ ನಮ್ಮ ತಂದೆಯನ್ನು ನೀನೇಕೆ ತಡೆಯಲಿಲ್ಲ? (ನಿನಗೆ ಪಟ್ಟಾಭಿಷೇಕವನ್ನು ಮಾಡುವೆನೆಂದು ದಶರಥರಾಜನು ಸುಳ್ಳುಹೇಳಿದನು! ಸತ್ಯಮಾರ್ಗದಲ್ಲಿ ನಡೆಯುವಂತೆ ಅವನನ್ನು ನೀನೇಕೆ ನಿರ್ಬಂಧಿಸಲಿಲ್ಲ?) (೨೮). ರಾಘವ, ಧರ್ಮವನ್ನೇ ಆಚರಿಸಬೇಕು - ಅಧರ್ಮವನ್ನೇ ಆಚರಿಸಬೇಕು ಎಂಬ ನಿಯಮವೇನೂ ಇಲ್ಲ. (ಪರಿಸ್ಥಿತಿಗೆ ಅನುಗುಣವಾಗಿ ಯಾವುದನ್ನಾದರೂ ಮಾಡಬಹುದು.) ಹಾಗಿಲ್ಲದಿದ್ದರೆ ವಜ್ರಧಾರಿಯಾದ ಇಂದ್ರನು ವಿಶ್ವರೂಪ ಮುನಿಯನ್ನೂ ಕೊಂದು ಯಾಗವನ್ನೂ ಆಚರಿಸುತ್ತಿರಲಿಲ್ಲ* (೨೯). ಅಧರ್ಮವೆಂಬ ಪೌರುಷದಿಂದ ಸಮೇತವಾದ ಧರ್ಮವು ವೈರಿಗಳನ್ನು ನಾಶಪಡಿಸಲು ಶಕ್ತವಾಗುತ್ತದೆ. ಆದ್ದರಿಂದ ಸಂದರ್ಭೋಚಿತವಾಗಿ

---

* ವಿಶ್ವರೂಪನು ತ್ವಷ್ಟೃಬ್ರಹ್ಮನ ಮಗ. ಅವನು ದೈತ್ಯಪಕ್ಷಪಾತಿಯೆಂದು ಇಂದ್ರನು ಕೊಂದನು. ನೂರು ಕ್ರತುಗಳನ್ನು ನಡೆಸಿದವನು ಇಂದ್ರ. ಕ್ರತುವನ್ನು ಆಚರಿಸುವುದು ಧರ್ಮ, ವಿಶ್ವರೂಪನನ್ನು ಸಂಹರಿಸಿದ್ದು ಅಧರ್ಮ ಎಂದು ಅಭಿಪ್ರಾಯ. ಮೂಲದಲ್ಲಿರುವ 'ಮುನಿ' ಎಂಬ ಶಬ್ದಕ್ಕೆ ವಿಶ್ವರೂಪನೆಂದು ವ್ಯಾಖ್ಯಾನಕಾರರು ಬರೆದಿದ್ದಾರೆ. ಆದರೆ ದಧೀಚಿಮುನಿಯೆಂದು ಹೇಳುವುದು ಯುಕ್ತವಾಗಿ ತೋರುತ್ತದೆ. ದಧೀಚಿಯನ್ನು ಕೊಂದು ವಜ್ರಾಯುಧವನ್ನು ಇಂದ್ರನು ನಿರ್ಮಿಸಿಕೊಂಡನೆಂದು ಕಥೆ ಇದೆ. ಈ ಪಕ್ಷದಲ್ಲಿ 'ವಜ್ರೀ', 'ಶತಕ್ರತು' ಎಂಬವು ಅರ್ಥವತ್ತಾದ ಶಬ್ದಗಳಾಗುತ್ತವೆ.

ಮಮ ಚೇದಂ ಮತಂ ತಾತ ಧರ್ಮೋಽಯಮಿತಿ ರಾಘವ ।
ಧರ್ಮಮೂಲಂ ತ್ವಯಾ ಛಿನ್ನಂ ರಾಜ್ಯಮುತ್ಸೃಜತಾ ತದಾ ॥ ೩೧

ಅರ್ಥೇಭ್ಯೋ ಹಿ ವಿವೃದ್ಧೇಭ್ಯಃ ಸಂವೃತ್ತೇಭ್ಯಸ್ತತಸ್ತತಃ ।
ಕ್ರಿಯಾಃ ಸರ್ವಾಃ ಪ್ರವರ್ತಂತೇ ಪರ್ವತೇಭ್ಯ ಇವಾಪಗಾಃ ॥ ೩೨

ಅರ್ಥೇನ ಹಿ ವಿಯುಕ್ತಸ್ಯ ಪುರುಷಸ್ಯಾಲ್ಪತೇಜಸಃ ।
ವ್ಯುಚ್ಛಿದ್ಯಂತೇ ಕ್ರಿಯಾಃ ಸರ್ವಾ ಗ್ರೀಷ್ಮೇ ಕುಸರಿತೋ ಯಥಾ ॥

ಸೋಽಯಮರ್ಥಂ ಪರಿತ್ಯಜ್ಯ ಸುಖಕಾಮಃ ಸುಖೈಧಿತಃ ।
ಪಾಪಮಾರಭತೇ ಕರ್ತುಂ ತತೋ ದೋಷಃ ಪ್ರವರ್ತತೇ ॥ ೩೪

ಯಸ್ಯಾರ್ಥಾಸ್ತಸ್ಯ ಮಿತ್ರಾಣಿ ಯಸ್ಯಾರ್ಥಾಸ್ತಸ್ಯ ಬಾಂಧವಾಃ ।
ಯಸ್ಯಾರ್ಥಾಃ ಸ ಪುಮಾನ್ ಲೋಕೇ ಯಸ್ಯಾರ್ಥಾಃ ಸ ಚ ಪಂಡಿತಃ

ಯಸ್ಯಾರ್ಥಾಃ ಸ ಚ ವಿಕ್ರಾಂತೋ ಯಸ್ಯಾರ್ಥಾಃ ಸ ಚ ಬುದ್ಧಿಮಾನ್
ಯಸ್ಯಾರ್ಥಾಃ ಸ ಮಹಾಭಾಗೋ ಯಸ್ಯಾರ್ಥಾಃ ಸ ಗುಣಾಧಿಕಃ ॥

---

ಧರ್ಮವನ್ನೋ ಪೌರುಷವನ್ನೋ ಅವಲಂಬಿಸಬೇಕು (೩೦). ಅಣ್ಣ-ಶ್ರೀರಾಮ, ಇದೇ ನನ್ನ ದೃಢವಾದ ಅಭಿಪ್ರಾಯ. ನೀನಾದರೋ ರಾಜ್ಯತ್ಯಾಗವೇ ಧರ್ಮವೆಂದು ತಿಳಿದು ರಾಜ್ಯವನ್ನು ತ್ಯಜಿಸಿದ್ದರಿಂದ ಧರ್ಮದ ಬೇರನ್ನೇ ಕತ್ತರಿಸಿದಂತಾಯಿತು! (೩೧). ಏಕೆಂದರೆ, ಚೆನ್ನಾಗಿ ಗಳಿಸಿ ಬೆಳೆಸಿದ ಐಶ್ವರ್ಯವಿದ್ದರೆ, ಅದರಿಂದ ಸಕಲ ಕಾರ್ಯಗಳನ್ನೂ ನಡೆಸಲು ಸಾಧ್ಯವಾಗುವುದು. ಪರ್ವತಗಳಿಂದ ನದಿಗಳು ಹುಟ್ಟುವಂತೆ, ಸಂಪತ್ತುಗಳಿಂದ ಧರ್ಮಕಾರ್ಯಗಳು ಸಂಭವಿಸುತ್ತವೆ (೩೨). ಧನಹೀನನಾಗಿ ನಿಸ್ತೇಜಸ್ಕನಾಗಿರುವ ಪುರುಷನ ಸಮಸ್ತ ಕಾರ್ಯಗಳೂ ಬೇಸಿಗೆಯಲ್ಲಿ ಹಳ್ಳಗಳು ಇಂಗಿಹೋಗುವಂತೆ, ತಾವಾಗಿಯೇ ನಶಿಸುತ್ತವೆ (೩೩). (ಧನವಿಲ್ಲದಿದ್ದರೆ ಪಾಪಕರ್ಮವನ್ನಾಚರಿಸಿ ಪಾಪಿಯಾಗುವ ಸಂಭವವೂ ಉಂಟು.) ಸುಖವಾಗಿ ಬೆಳೆದವನು ಸುಖವನ್ನೇ ಸದಾ ಬಯಸುತ್ತಾನೆ. ಧನವಿಲ್ಲದಿದ್ದರೆ ಅವನು ಪಾಪಕರ್ಮವನ್ನಾಚರಿಸುತ್ತಾನೆ. ಆಗ ಪಾಪವು ಗಂಟುಬೀಳುತ್ತದೆ (೩೪). ಹಣವಿದ್ದವನಿಗೆ ಎಲ್ಲರೂ ಮಿತ್ರರೇ, ಎಲ್ಲರೂ ಬಂಧುಗಳೇ! ಈ ಲೋಕದಲ್ಲಿ ಹಣವಂತನೇ ಪುರುಷ, ಹಣವಂತನೇ ಪಂಡಿತ! ಹಣವುಳ್ಳವನೇ ಪರಾಕ್ರಮಿ, ಅವನೇ ಬುದ್ಧಿವಂತ! ಹಣವುಳ್ಳ

ಅರ್ಥಸ್ಯೈತೇ ಪರಿತ್ಯಾಗೇ ದೋಷಾಃ ಪ್ರವ್ಯಾಹೃತಾ ಮಯಾ ।
ರಾಜ್ಯಮುತ್ಸೃಜತಾ ವೀರ ಯೇನ ಬುದ್ಧಿಸ್ತ್ವಯಾ ಕೃತಾ ॥ ೩೭

ಯಸ್ಯಾರ್ಥಾ ಧರ್ಮಕಾಮಾರ್ಥಾಸ್ತಸ್ಯ ಸರ್ವಂ ಪ್ರದಕ್ಷಿಣಮ್ ।
ಅಧನೇನಾರ್ಥಕಾಮೇನ ನಾರ್ಥಃ ಶಕ್ಯೋ ವಿಚಿನ್ವತಾ ॥ ೩೮

ಹರ್ಷಃ ಕಾಮಶ್ಚ ದರ್ಪಶ್ಚ ಧರ್ಮಃ ಕ್ರೋಧಃ ಶಮೋ ದಮಃ ।
ಅರ್ಥಾದೇತಾನಿ ಸರ್ವಾಣಿ ಪ್ರವರ್ತಂತೇ ನರಾಧಿಪ ॥ ೩೯

ಯೇಷಾಂ ನಶ್ಯತ್ಯಯಂ ಲೋಕಶ್ಚರತಾಂ ಧರ್ಮಚಾರಿಣಾಮ್ ।
ತೇಽರ್ಥಾಸ್ತ್ವಯಿ ನ ದೃಶ್ಯಂತೇ ದುರ್ದಿನೇಷು ಯಥಾ ಗ್ರಹಾಃ ॥ ೪೦

ತ್ವಯಿ ಪ್ರವ್ರಾಜಿತೇ ವೀರ ಗುರೋಶ್ಚ ವಚನೇ ಸ್ಥಿತೇ ।
ರಕ್ಷಸಾಪಹೃತಾ ಭಾರ್ಯಾ ಪ್ರಾಣೈಃ ಪ್ರಿಯತರಾ ತವ ॥ ೪೧

---

ವನೇ ದೊಡ್ಡಮನುಷ್ಯ, ಅವನೇ ಗುಣಶಾಲಿ! (೩೫-೩೬). ಶ್ರೀರಾಮ, ನೀನು ರಾಜ್ಯವನ್ನು ಪರಿತ್ಯಜಿಸಿ ಐಶ್ವರ್ಯವು ಬೇಡವೆಂಬ ನಿರ್ಧಾರವನ್ನು ಮಾಡಿದೆಯಲ್ಲ, ಐಶ್ವರ್ಯವನ್ನು ತ್ಯಜಿಸಿದರೆ ಯಾವ ಅನರ್ಥಗಳು ಸಂಭವಿಸುತ್ತವೆಯೆಂಬುದನ್ನು ಅದಕ್ಕೋಸ್ಕರ ಹೇಳಿದ್ದೇನೆ (೩೭). ಯಾರಲ್ಲಿ ಧನವಿದೆಯೋ ಅವನಿಗೆ ಧರ್ಮಕಾಮಗಳು ಲಭ್ಯವಾಗುತ್ತವೆ. ಎಲ್ಲವೂ ಅವನಿಗೆ ಅನುಕೂಲವಾಗಿ ಪರಿಣಮಿಸುತ್ತದೆ. ಧನವಿಲ್ಲದವನು ಧನವು ಬೇಕೆಂದು ಯತ್ನಿಸಿದರೂ ಪೌರುಷವಿಲ್ಲದೆಯೇ ಅದು ಎಂದಿಗೂ ದೊರೆಯದು (೩೮). ಹರ್ಷ, ಕಾಮ, ದರ್ಪ, ಧರ್ಮ, ಕ್ರೋಧ, ಶಮ, ದಮ—ಇವೆಲ್ಲವೂ ಧನಬಲವಿದ್ದರೇ ಶೋಭಿಸುತ್ತವೆ. ರಾಜಕುಮಾರ, ಧನವಿಲ್ಲದಿದ್ದರೆ ಈ ಗುಣಗಳಿಗೆ ಬೆಲೆ ಇಲ್ಲ. ಹಣವನ್ನುಪೇಕ್ಷಿಸಿ ಕೇವಲ ಧರ್ಮನಿಷ್ಠರಾದವರಿಗೆ ಈ ಲೋಕದ ಸಕಲ ಅಭ್ಯುದಯವೂ ಕ್ಷೀಣಿಸುತ್ತದೆ. ಸಮಸ್ತ ಸುಖಕ್ಕೂ ಕಾರಣವಾದ ಐಶ್ವರ್ಯವು ನಿನ್ನಲ್ಲಿಲ್ಲ. ಮೋಡವು ಮುಸುಕಿದ ದಿನಗಳಲ್ಲಿ ಗ್ರಹಗಳು ಕಾಣಿಸದಂತೆ, ಐಶ್ವರ್ಯವು ಅದೃಶ್ಯವಾಗಿದೆ (೩೯–೪೦). ವೀರಾಗ್ರಣಿ-ಶ್ರೀರಾಮ, ನೀನು ತಂದೆಯ ಮಾತನ್ನು ನಡೆಸಬೇಕೆಂದು ರಾಜ್ಯವನ್ನು ತ್ಯಜಿಸಿ ಬಂದುದರಿಂದ, ಪ್ರಾಣಕ್ಕಿಂತಲೂ ನಿನಗೆ ಪ್ರಿಯಳಾದ ನಿನ್ನ ಪತ್ನಿಯನ್ನು ರಾಕ್ಷಸನು ಅಪಹರಿಸಲು

ತದದ್ಯ ವಿಪುಲಂ ವೀರ ದುಃಖಮಿಂದ್ರಜಿತಾ ಕೃತಮ್ ।
ಕರ್ಮಣಾ ವ್ಯಪನೇಷ್ಯಾಮಿ ತಸ್ಮಾದುತ್ತಿಷ್ಠ ರಾಘವ ॥ ೪೨

ಉತ್ತಿಷ್ಠ ನರಶಾರ್ದೂಲ ದೀರ್ಘಬಾಹೋ ದೃಢವ್ರತ ।
ಕಿಮಾತ್ಮಾನಂ ಮಹಾತ್ಮಾನಮಾತ್ಮಾನಂ ನಾವಬುಧ್ಯಸೇ ॥ ೪೩

ಅಯಮನಘ ತವೋದಿತಃ ಪ್ರಿಯಾರ್ಥಂ
ಜನಕಸುತಾನಿಧನಂ ನಿರೀಕ್ಷ್ಯ ರುಷ್ಟಃ ।
ಸಹಯಗಜರಥಾಂ ಸರಾಕ್ಷಸೇಂದ್ರಾಂ
ಭೃಶಮಿಷುಭಿರ್ವಿನಿಪಾತಯಾಮಿ ಲಂಕಾಮ್ ॥ ೪೪

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರ್ಯಶೀತಿತಮಃ ಸರ್ಗಃ

---

ನಾಥ್ಯವಾಯಿತು (೪೧). ಇಂದ್ರಜಿತು ನಮಗೆ ವಿಪುಲವಾದ ದುಃಖವನ್ನು ತಂದೊಡ್ಡಿದನಲ್ಲವೆ? ಇರಲಿ; ಅಣ್ಣ-ವೀರಾಗ್ರಣಿ, ಧೈರ್ಯವನ್ನು ತಂದುಕೊಂಡು ಮೇಲೇಳು. ನನ್ನ ಪೌರುಷದಿಂದ ಇದಕ್ಕೆ ಪ್ರತೀಕಾರವನ್ನು ಮಾಡುವೆನು! (೪೨). ಓ ಪುರುಷೋತ್ತಮ, ದೀರ್ಘಬಾಹು, ದೃಢವ್ರತ, ಮೇಲೇಳು. ಮಹಾಪ್ರಾಜ್ಞನಾದ ನೀನು ದುಃಖದ ಸೋಂಕಿಲ್ಲದ ಪರಮಾತ್ಮಸ್ವರೂಪನೆಂಬುದನ್ನು ಅರಿಯೆಯಾ? * (೪೩). ನಿಷ್ಕಳಂಕ ಹೃದಯ-ಅಣ್ಣ, ಮೇಲೇಳು. ನಿನ್ನ ಸಂತೋಷಕ್ಕಾಗಿಯೇ ನಾನು ಸರ್ವದಾ ಉದ್ಯುಕ್ತನಾಗಿದ್ದೇನೆ. ಜನಕಪುತ್ರಿಯ ವಧೆಯನ್ನು ಕೇಳಿ ರೋಷಾವಿಷ್ಟನಾಗಿದ್ದೇನೆ. ನನ್ನ ದಿವ್ಯಾಸ್ತ್ರಗಳಿಂದ ರಾವಣನ ರಥಗಜ ತುರಗಾದಿ ಸೇನೆಯನ್ನು ಮರ್ದಿಸಿ, ರಾಕ್ಷಸರಾಜನನ್ನು ವಧಿಸಿ, ಲಂಕೆಯನ್ನು ಧೂಳಿಬ್ಬಿಸುವೆನು" ಎಂದನು (೪೪).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತುಮೂರನೆಯ ಸರ್ಗ

* 'ಕಿಮಾತ್ಮಾನಂ ಮಹಾತ್ಮಾನಮಾತ್ಮಾನಂ ನಾವಬುಧ್ಯಸೇ'. 'ಕಿಮಾತ್ಮಾನಂ' ಎಂಬುದನ್ನು ಸಮಸ್ತಪದವೆಂದೂ ಗ್ರಹಿಸಲು ಸಾಧ್ಯವಿದೆ. 'ಆತ್ಮ' ಎಂದರೆ ಬುದ್ಧಿ. ಕಿಮಾತ್ಮಾನಂ = ಅಲ್ಪಬುದ್ಧಿಯಾದ ಸಾಮಾನ್ಯನಂತೆ ದುಃಖಾಕ್ರಾಂತನಾಗಿರುವ, ಆತ್ಮಾನಂ = ನಿನ್ನನ್ನು, ಮಹಾತ್ಮಾನಂ = ದುಃಖಾತೀತನಾದ ಮಹಾಪುರುಷನೆಂದು, ನಾವಬುಧ್ಯಸೇ = ತಿಳಿದುಕೊಳ್ಳದೆ ಇರುವೆಯಲ್ಲ—ಮಹಾತ್ಮನಾದ ನೀನು ಸಾಮಾನ್ಯ ಮನುಷ್ಯನಂತೆ ದುಃಖಿಸುವೆಯಲ್ಲ ಎಂದು ತಾತ್ಪರ್ಯ.

## ಚತುರಶೀತಿತಮಃ ಸರ್ಗಃ

### ಇಂದ್ರಜಿನ್ಮಾಯಾವಿವರಣಮ್

ರಾಮಮಾಶ್ವಾಸಯಾನೇ ತು ಲಕ್ಷ್ಮಣೇ ಭ್ರಾತೃವತ್ಸಲೇ ।
ನಿಕ್ಷಿಪ್ಯ ಗುಲ್ಮಾನ್ ಸ್ವಸ್ಥಾನೇ ತತ್ರಾಗಚ್ಛದ್ವಿಭೀಷಣಃ ॥ ೧

ನಾನಾಪ್ರಹರಣೈರ್ವೀರೈಶ್ಚತುರ್ಭಿಃ ಸಚಿವೈರ್ವೃತಃ ।
ನೀಲಾಂಜನಚಯಾಕಾರೈರ್ಮಾತಂಗೈರಿವ ಯೂಥಪಃ ॥ ೨

ಸೋಽಭಿಗಮ್ಯ ಮಹಾತ್ಮಾನಂ ರಾಘವಂ ಶೋಕಲಾಲಸಮ್ ।
ವಾನರಾಂಶ್ಚೈವ ದದೃಶೇ ಬಾಷ್ಪಪರ್ಯಾಕುಲೇಕ್ಷಣಾನ್ ॥ ೩

ರಾಘವಂ ಚ ಮಹಾತ್ಮಾನಮಿಕ್ಷ್ವಾಕುಕುಲನಂದನಮ್ ।
ದದರ್ಶ ಮೋಹಮಾಪನ್ನಂ ಲಕ್ಷ್ಮಣಸ್ಯಾಂಕಮಾಶ್ರಿತಮ್ ॥ ೪

## ಸರ್ಗ ೮೪

### ಎಲ್ಲವೂ ಇಂದ್ರಜಿತುವಿನ ಮಾಯಾಜಾಲವೆಂದು ವಿಭೀಷಣನು ಹೇಳಿ ಶ್ರೀರಾಮನನ್ನು ಸಂತೈಸಿ, ಇಂದ್ರಜಿತುವನ್ನು ವಧಿಸಲು ಲಕ್ಷ್ಮಣನನ್ನು ಕಳಿಸಬೇಕೆಂದು ಪ್ರಾರ್ಥಿಸುವುದು.

ಹೀಗೆ ಭ್ರಾತೃವತ್ಸಲನಾದ ಲಕ್ಷ್ಮಣನು ಶ್ರೀರಾಮನಿಗೆ ಸಮಾಧಾನ ಹೇಳುತ್ತಿರುವಾಗ, ವಿಭೀಷಣನು ಸೇನಾವ್ಯೂಹವನ್ನು ಆಯಾ ಸ್ಥಾನಗಳಲ್ಲಿ ಕಾವಲಾಗಿರುವಂತೆ ಏರ್ಪಡಿಸಿ ಬಂದನು (೧). ಕಪ್ಪುಕಾಡಿಗೆಯ ರಾಶಿಯಂತೆ ಕೃಷ್ಣಕಾಯರಾಗಿ ವಿವಿಧಾಯುಧಗಳನ್ನು ಧರಿಸಿದ ವೀರರಾದ ನಾಲ್ವರು ಮಂತ್ರಿಗಳಿಂದ ಪರಿವೃತನಾದ ವಿಭೀಷಣನು, ಆನೆಗಳಿಂದ ಸಮಾವೃತವಾದ ಸಲಗದಂತೆ ಗಂಭೀರವಾಗಿ ನಡೆಯುತ್ತ ಬಂದನು! (೨). ಅವನು ಸಮೀಪಕ್ಕೆ ಬಂದು ಶೋಕಾರ್ತನಾಗಿದ್ದ ಲಕ್ಷ್ಮಣನನ್ನೂ ಕಣ್ಣೀರು ಬಿಡುತ್ತಿದ್ದ ವಾನರರನ್ನೂ ಕಂಡನು. ಇಕ್ಷ್ವಾಕುಕುಲನಂದನನೂ ಮಹಾಧೀರನೂ ಆದ ಶ್ರೀರಾಮನು ಲಕ್ಷ್ಮಣನ ತೊಡೆಯಮೇಲೆ ಮೈಮರೆತು

ವ್ರೀಡಿತಂ ಶೋಕಸಂತಪ್ತಂ ದೃಷ್ಟ್ವಾ ರಾಮಂ ವಿಭೀಷಣಃ ।
ಅಂತರ್ದುಃಖೇನ ದೀನಾತ್ಮಾ ಕಿಮೇತದಿತಿ ಸೋಽಬ್ರವೀತ್ ॥ ೫

ವಿಭೀಷಣಮುಖಂ ದೃಷ್ಟ್ವಾ ಸುಗ್ರೀವಂ ತಾಂಶ್ಚ ವಾನರಾನ್ ।
ಲಕ್ಷ್ಮಣೋವಾಚ ಮಂದಾರ್ಥಮಿದಂ ಬಾಷ್ಪಪರಿಪ್ಲುತಃ ॥ ೬

ಹತಾಮಿಂದ್ರಜಿತಾ ಸೀತಾಮಿಹ ಶ್ರುತ್ವೈವ ರಾಘವಃ ।
ಹನುಮದ್ವಚನಾತ್ ಸೌಮ್ಯ ತತೋ ಮೋಹಮುಪಾಗತಃ ॥ ೭

ಕಥಯಂತಂ ತು ಸೌಮಿತ್ರಿಂ ಸಂನಿವಾರ್ಯ ವಿಭೀಷಣಃ ।
ಪುಷ್ಕಲಾರ್ಥಮಿದಂ ವಾಕ್ಯಂ ವಿಸಂಜ್ಞಂ ರಾಮಮಬ್ರವೀತ್ ॥ ೮

ಮನುಜೇಂದ್ರಾರ್ತರೂಪೇಣ ಯದುಕ್ತಂ ಚ ಹನೂಮತಾ ।
ತದಯುಕ್ತಮಹಂ ಮನ್ಯೇ ಸಾಗರಸ್ಯೇವ ಶೋಷಣಮ್ ॥ ೯

---

ಮಲಗಿರುವುದು ವಿಭೀಷಣನಿಗೆ ಗೋಚರಿಸಿತು (೩-೪). ಶ್ರೀರಾಮನು ಶೋಕಸಂತಪ್ತನಾಗಿ ಲಜ್ಜೆಯಿಂದ ತಲೆಯೆತ್ತದಿರುವುದನ್ನು ನೋಡಿದೊಡನೆ ವಿಭೀಷಣನ ಅಂತರಂಗದಲ್ಲಿ ದುಃಖವು ಪುಟಿಯಿತು. ಅವನು ದೈನ್ಯದಿಂದ 'ಏನಿದು ?' ಎಂದು ಕೇಳಿದನು (೫). ಲಕ್ಷ್ಮಣನು ಕಣ್ಣೀರು ಸುರಿಸುತ್ತ ವಿಭೀಷಣನ ಮುಖವನ್ನು ನೋಡಿ ಸುಗ್ರೀವನನ್ನೂ ಇತರ ವಾನರರನ್ನೂ ನೋಡುತ್ತ "ಸೌಮ್ಯ-ವಿಭೀಷಣ, ಇಂದ್ರಜಿತು ಸೀತಾದೇವಿಯನ್ನು ಸಂಹರಿಸಿದನೆಂದು ಹನುಮಂತನು ಹೇಳಿದನು. ಅದನ್ನು ಕೇಳಿ ರಾಘವನು ಮೂರ್ಛಿತನಾದನು" ಎಂದು ಸಂಕ್ಷೇಪವಾಗಿ ತಿಳಿಸಿದನು (೬-೭). ಆ ವಾಕ್ಯವನ್ನು ಸೌಮಿತ್ರಿಯು ಮುಗಿಸುವಷ್ಟರಲ್ಲಿಯೇ ವಿಭೀಷಣನು 'ಅದೆಲ್ಲವೂ ಇಂದ್ರಜಿತುವಿನ ಮಾಯಾಜಾಲ' ಎನ್ನುತ್ತ ಲಕ್ಷ್ಮಣನನ್ನು ತಡೆದು, ಬಸವಳಿದು ಮಲಗಿದ್ದ ಶ್ರೀರಾಮನನ್ನು ಸಂಬೋಧಿಸಿ ಅರ್ಥವತ್ತಾದ ಮಾತನ್ನಾಡಿದನು (೮): "ರಾಜಪುತ್ರ-ಶ್ರೀರಾಮ, ಹನುಮಂತನು ಹೇಳಿದುದು ಸರಿಯಾದ ಸುದ್ದಿಯಲ್ಲ. ಸಮುದ್ರವು ಒಣಗಿಹೋಯಿತು ಎಂಬಂತೆ ಅದು ವಿಶ್ವಾಸಾರ್ಹವಲ್ಲವೆಂದು ನಾನು ತಿಳಿಯುತ್ತೇನೆ. ದುರಾತ್ಮ

ಅಭಿಪ್ರಾಯಂ ತು ಜಾನಾಮಿ ರಾವಣಸ್ಯ ದುರಾತ್ಮನಃ ।
ಸೀತಾಂ ಪ್ರತಿ ಮಹಾಬಾಹೋ ನ ಚ ಘಾತಂ ಕರಿಷ್ಯತಿ ॥ ೧೦

ಯಾಚ್ಯಮಾನಸ್ತು ಬಹುಶೋ ಮಯಾ ಹಿತಚಿಕೀರ್ಷುಣಾ ।
ವೈದೇಹೀಮುತ್ಸೃಜಸ್ವೇತಿ ನ ಚ ತತ್ ಕೃತವಾನ್ ವಚಃ ॥ ೧೧

ನೈವ ಸಾಮ್ನಾ ನ ದಾನೇನ ನ ಭೇದೇನ ಕುತೋ ಯುಧಾ ।
ಸಾ ದ್ರಷ್ಟುಮಪಿ ಶಕ್ಯೇತ ನೈವ ಚಾನ್ಯೇನ ಕೇನಚಿತ್ ॥ ೧೨

ವಾನರಾನ್ ಮೋಹಯಿತ್ವಾ ತು ಪ್ರತಿಯಾತಃ ಸ ರಾಕ್ಷಸಃ ।
ಚೈತ್ಯಂ ನಿಕುಂಭಿಲಾಂ ನಾಮ ಯತ್ರ ಹೋಮಂ ಕರಿಷ್ಯತಿ ॥ ೧೩

ಹುತವಾನುಪಯಾತೋ ಹಿ ದೇವೈರಪಿ ಸವಾಸವೈಃ ।
ದುರಾಧರ್ಷೋ ಭವತ್ಯೇವ ಸಂಗ್ರಾಮೇ ರಾವಣಾತ್ಮಜಃ ॥ ೧೪

---

ನಾದ ರಾವಣನ ಅಭಿಪ್ರಾಯವೇನೆಂಬುದು ನನಗೆ ಗೊತ್ತಿದೆ! ಮಹಾಬಾಹು, ಅವನು ಸೀತಾದೇವಿಯನ್ನು ಎಂದಿಗೂ ಕೊಲ್ಲಿಸುವುದಿಲ್ಲ! (೯-೧೦). ಅವನಿಗೆ ಒಳ್ಳೆಯದನ್ನು ಮಾಡೋಣವೆಂದು ನಾನು ಎಷ್ಟೋಸಲ ರಾವಣನನ್ನು ಬೇಡಿಕೊಂಡಿದ್ದೇನೆ. ಸೀತಾದೇವಿಯನ್ನು ರಾಘವನಿಗೆ ಒಪ್ಪಿಸಿಬಿಡೆಂದು ಪ್ರಾರ್ಥಿಸಿದ್ದೇನೆ. ಆದರೂ ಅವನು ನನ್ನ ಹಿತವಚನವನ್ನು ನಡೆಸಲಿಲ್ಲ (೧೧). ಇನ್ನೊಬ್ಬ ಪುರುಷನು ವೈದೇಹಿಯನ್ನು ಕಣ್ಣಿಂದ ನೋಡಲು ಸಹ ರಾವಣನು ಅವಕಾಶವನ್ನು ಕೊಡುವುದಿಲ್ಲ! ಸಾಮ ದಾನ ಭೇದಗಳಿಗೂ ಜಗ್ಗುವವನಲ್ಲ; ಇನ್ನು ಯುದ್ಧಕ್ಕೆ ಜಗ್ಗುವನೆ? (ಹೀಗಿರುವಾಗ ಸೇನಾಮಧ್ಯಕ್ಕೆ ಕರೆತಂದು ಅವಳನ್ನು ಸಂಹರಿಸಲು ಇಂದ್ರಜಿತುವಿಗೆ ಅವಕಾಶ ಕೊಡುವನೆ?) (೧೨). ಇಂದ್ರಜಿತು ವಾನರರನ್ನು ಮಾಯಾಜಾಲದಿಂದ ಭ್ರಮೆಗೊಳಿಸಿ ನಿಕುಂಭಿಳಾದೇವಾಲಯಕ್ಕೆ ಹೊರಟುಹೋಗಿದ್ದಾನೆ! ಅಲ್ಲಿ ಅವನು ಮತ್ತೆ ಆಭಿಚಾರಿಕಹೋಮವನ್ನು ಮಾಡುವನು! (೧೩). ಶ್ರೀರಾಮ, ಅವನು ವಿಧಿವತ್ತಾಗಿ ಹೋಮವನ್ನು ಮುಗಿಸಿ ಬಂದನಾದರೆ ದುರ್ಧರ್ಷನಾಗುವನು. ಇಂದ್ರಾದಿ ದೇವತೆಗಳಿಗೂ ಕಾಳಗದಲ್ಲಿ ಅವನನ್ನೆದುರಿಸುವುದು

ತೇನ ಮೋಹಯತಾ ನೂನಮೇಷಾ ಮಾಯಾ ಪ್ರಯೋಜಿತಾ ।
ವಿಘ್ನಮನ್ವಿಚ್ಛತಾಂ ತತ್ರ ವಾನರಾಣಾಂ ಪರಾಕ್ರಮೇ ॥ ೧೫

ಸಸೈನ್ಯಾಸ್ತತ್ರ ಗಚ್ಛಾಮೋ ಯಾವತ್ತನ್ನ ಸಮಾಪ್ಯತೇ ।
ತ್ಯಜೇಮಂ ನರಶಾರ್ದೂಲ ಮಿಥ್ಯಾಸಂತಾಪಮಾಗತಮ್ ॥ ೧೬

ಸೀದತೇ ಹಿ ಬಲಂ ಸರ್ವಂ ದೃಷ್ಟ್ವಾ ತ್ವಾಂ ಶೋಕಕರ್ಶಿತಮ್ ।
ಇಹ ತ್ವಂ ಸ್ವಸ್ಥಹೃದಯಸ್ತಿಷ್ಠ ಸತ್ತ್ವಸಮುಚ್ಛ್ರಿತಃ ॥ ೧೭

ಲಕ್ಷ್ಮಣಂ ಪ್ರೇಷಯಾಸ್ಮಾಭಿಃ ಸಹಸೈನ್ಯಾನುಕರ್ಷಿಭಿಃ ।
ಏಷ ತಂ ನರಶಾರ್ದೂಲೋ ರಾವಣಿಂ ನಿಶಿತೈಃ ಶರೈಃ ॥ ೧೮

ತ್ಯಾಜಯಿಷ್ಯತಿ ತತ್ ಕರ್ಮ ತತೋ ವಧ್ಯೋ ಭವಿಷ್ಯತಿ ।
ತಸ್ಯೈತೇ ನಿಶಿತಾಸ್ತೀಕ್ಷ್ಣಾಃ ಪತ್ರಿಪತ್ರಾಂಗವಾಜಿನಃ ॥ ೧೯

---

ಅಸಾಧ್ಯವಾಗುವುದು (೧೪). ತಾನು ಸಂಕಲ್ಪಿಸಿದ ಯಜ್ಞಕ್ಕೆ ವಾನರಯೋಧರು ವಿಘ್ನವನ್ನು ಒಡ್ಡಿಯಾರೆಂಬ ಭಯದಿಂದ, ಇವರನ್ನು ವ್ಯಾಮೋಹಗೊಳಿಸುವುದಕ್ಕಾಗಿ ಇಂದ್ರಜಿತು ಈ ಮಾಯಾಜಾಲವನ್ನು ಬೀರಿದ್ದಾನೆಂಬುದು ನಿಶ್ಚಯ! (೧೫). ಪುರುಷೋತ್ತಮ - ರಾಘವ, ಆತನ ಹೋಮವು ಸಮಾಪ್ತವಾಗುವಷ್ಟರಲ್ಲಿ ಸೇನಾಸಮೇತರಾಗಿ ನಾವು ಅಲ್ಲಿಗೆ ನುಗ್ಗಬೇಕು. ಬುಡವಿಲ್ಲದ ಸುಳ್ಳುಸುದ್ದಿಯಿಂದ ಬಂದಿರುವ ಈ ಸಂತಾಪವನ್ನು ತ್ಯಜಿಸು. ನೀನು ಹೀಗೆ ಶೋಕಾಕುಲನಾದರೆ ಸಕಲ ಸೇನೆಯೂ ಧೈರ್ಯವನ್ನು ಕಳೆದುಕೊಂಡು ಕಂಗೆಟ್ಟುಹೋಗುವುದು. ನೀನು ಧೈರ್ಯವನ್ನವಲಂಬಿಸಿ ನಿಶ್ಚಿಂತನಾಗಿ ಇಲ್ಲಿರು (೧೬-೧೭). ಲಕ್ಷ್ಮಣನನ್ನು ನಮ್ಮೊಂದಿಗೆ ಕಳಿಸು. ನಾವು ಸೇನಾಸಮೇತರಾಗಿ ನಿಕುಂಭಿಳೆಗೆ ಹೋಗುವೆವು. ಪುರುಷಸಿಂಹನಾದ ಲಕ್ಷ್ಮಣನು ನಿಶಿತ ಶರಗಳನ್ನು ಪ್ರಯೋಗಿಸಿ, ಆಭಿಚಾರಿಕಕರ್ಮವನ್ನು ನಡೆಸದಂತೆ ರಾವಣಿಯನ್ನು ತಡೆಯುವನು. ಅನಂತರ ಆತನು ಲಕ್ಷ್ಮಣನಿಂದಲೇ ವಧ್ಯನಾಗುವನು. ಹಕ್ಕಿಗಳ ಗರಿಗಳಿಂದ ಅಂಕಿತಗಳಾಗಿ ಬಹುವೇಗದಿಂದ ಧಾವಿಸುವ

**ಪತತ್ರಿಣ ಇವಾಸೌಮ್ಯಾಃ ಶರಾಃ ಪಾಸ್ಯಂತಿ ಶೋಣಿತಮ್ ।**
**ತಂ ಸಂದಿಶ ಮಹಾಬಾಹೋ ಲಕ್ಷ್ಮಣಂ ಶುಭಲಕ್ಷಣಮ್ ॥ ೨೦**
**ರಾಕ್ಷಸಸ್ಯ ವಿನಾಶಾಯ ವಜ್ರಂ ವಜ್ರಧರೋ ಯಥಾ ॥**

**ಮನುಜವರ ನ ಕಾಲವಿಪ್ರಕರ್ಷೋ**
**ರಿಪುನಿಧನಂ ಪ್ರತಿ ಯತ್ ಕ್ಷಮೋಽದ್ಯ ಕರ್ತುಮ್ ।**
**ತ್ವಮತಿಸೃಜ ರಿಪೋರ್ವಧಾಯ ವಾಣೀ-**
**ಮಸುರರಿಪೋರ್ಮಘನೇ ಯಥಾ ಮಹೇಂದ್ರಃ ॥ ೨೧**

**ಸಮಾಪ್ತಕರ್ಮಾ ಹಿ ಸ ರಾಕ್ಷಸಾಧಿಪೋ**
**ಭವತ್ಯದೃಶ್ಯಃ ಸಮರೇ ಸುರಾಸುರೈಃ ।**
**ಯುಯುತ್ಸತಾ ತೇನ ಸಮಾಪ್ತಕರ್ಮಣಾ**
**ಭವೇತ್ ಸುರಾಣಾಮಪಿ ಸಂಶಯೋ ಮಹಾನ್ ॥ ೨೨**

**ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರಶೀತಿತಮಃ ಸರ್ಗಃ**

---

ಲಕ್ಷ್ಮಣಬಾಣಗಳು ಅತ್ಯುಗ್ರವಾದವು (೧೮-೧೯). ಈ ಬಾಣಗಳೇ ಘೋರಪಕ್ಷಿಗಳಾದ ರಣಹದ್ದುಗಳಂತೆ ಮುತ್ತಿ ಇಂದ್ರಜಿತುವಿನ ರಕ್ತವನ್ನು ಕುಡಿಯುವುವು. ಆದ್ದರಿಂದ, ಮಹಾಬಾಹು-ಶ್ರೀರಾಮ, ಶುಭಲಕ್ಷಣನಾದ ಲಕ್ಷ್ಮಣನನ್ನು ನಮ್ಮೊಡನೆ ಕಳಿಸು. ಆ ರಾಕ್ಷಸನನ್ನು ವಧಿಸುವುದಕ್ಕಾಗಿ, ವಜ್ರಧಾರಿಯಾದ ದೇವೇಂದ್ರನು ವಜ್ರಾಯುಧವನ್ನು ಚೋದಿಸುವಂತೆ ಲಕ್ಷ್ಮಣನನ್ನು ಚೋದಿಸು (೨೦). ಹೇ ಪುರುಷಶ್ರೇಷ್ಠ, ವೈರಿವಧೆಯ ವಿಷಯದಲ್ಲಿ ಈಗ ವಿಳಂಬಮಾಡುವುದು ಸರ್ವಥಾ ಯುಕ್ತವಲ್ಲ. ರಾಕ್ಷಸಸಂಹಾರದ ಸಮಯದಲ್ಲಿ ಇಂದ್ರನು ಆಜ್ಞಾಪಿಸುವಂತೆ, ಈಗ ಲಕ್ಷ್ಮಣನಿಗೆ ಆಜ್ಞೆಯನ್ನಿತ್ತು ಶತ್ರುಸಂಹಾರಕ್ಕಾಗಿ ಕಳಿಸು (೨೧). ಇಂದ್ರಜಿತು ನಿಕುಂಭಿಳೆಯಲ್ಲಿ ಆರಂಭಿಸಿರುವ ಹೋಮಕಾರ್ಯವು ಸಮಾಪ್ತವಾದಲ್ಲಿ, ಆತನು ರಣಭೂಮಿಯಲ್ಲಿ ದೇವಾಸುರರಿಗೂ ಅದೃಶ್ಯನಾಗಿ ಯುದ್ಧಮಾಡುವನು. ಅವನು ನಿಕುಂಭಿಳಾಯಾಗವನ್ನು ಮುಗಿಸಿ ಬಂದರೆ, ದೇವತೆಗಳಿಗೂ ಪ್ರಾಣಸಂಶಯವು ತಪ್ಪದು" ಎಂದನು (೨೨).

**ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತುನಾಲ್ಕನೆಯ ಸರ್ಗ**

## ಪಂಚಾಶೀತಿತಮಃ ಸರ್ಗಃ

### ನಿಕುಂಭಿಲಾಭಿಯಾನಮ್

ತಸ್ಯ ತದ್ವಚನಂ ಶ್ರುತ್ವಾ ರಾಘವಃ ಶೋಕಕರ್ಶಿತಃ ।
ನೋಪಧಾರಯತೇ ವ್ಯಕ್ತಂ ಯದುಕ್ತಂ ತೇನ ರಕ್ಷಸಾ ॥ ೧

ತತೋ ಧೈರ್ಯಮವಷ್ಟಭ್ಯ ರಾಮಃ ಪರಪುರಂಜಯಃ ।
ವಿಭೀಷಣಮುಪಾಸೀನಮುವಾಚ ಕಪಿಸಂನಿಧೌ ॥ ೨

ನೈರ್ಋತಾಧಿಪತೇ ವಾಕ್ಯಂ ಯದುಕ್ತಂ ತೇ ವಿಭೀಷಣ ।
ಭೂಯಸ್ತಚ್ಛ್ರೋತುಮಿಚ್ಛಾಮಿ ಬ್ರೂಹಿ ಯತ್ತೇ ವಿವಕ್ಷಿತಮ್ ॥

ರಾಘವಸ್ಯ ವಚಃ ಶ್ರುತ್ವಾ ವಾಕ್ಯಂ ವಾಕ್ಯವಿಶಾರದಃ ।
ಯತ್ತತ್ ಪುನರಿದಂ ವಾಕ್ಯಂ ಬಭಾಷೇ ಸ ವಿಭೀಷಣಃ ॥ ೪

ಯಥಾಜ್ಞಪ್ತಂ ಮಹಾಬಾಹೋ ತ್ವಯಾ ಗುಲ್ಮನಿವೇಶನಮ್ ।
ತತ್ತಥಾನುಷ್ಠಿತಂ ವೀರ ತ್ವದ್ವಾಕ್ಯಸಮನಂತರಮ್ ॥ ೫

### ಸರ್ಗ ೮೫

ಶ್ರೀರಾಮನು ಧೈರ್ಯವನ್ನವಲಂಬಿಸಿ, ಇಂದ್ರಜಿತುವಿನ ವಧೆಗಾಗಿ
ಲಕ್ಷ್ಮಣನನ್ನು ಕಳಿಸುವುದು.

ವಿಭೀಷಣನ ಮಾತನ್ನು ಕೇಳುತ್ತಿದ್ದರೂ, ಶೋಕಾಕುಲನಾಗಿದ್ದ ಶ್ರೀರಾಮನು ವಿಭೀಷಣನ ಅಭಿಪ್ರಾಯವನ್ನು ಸ್ಪಷ್ಟವಾಗಿ ಗ್ರಹಿಸಲಿಲ್ಲ. ಆದರೂ ಸ್ವಲ್ಪ ಧೈರ್ಯವನ್ನವಲಂಬಿಸಿ, ವಾನರಯೋಧರೆದುರಿಗೆ ತನ್ನ ಸಮೀಪದಲ್ಲಿ ಕುಳಿತಿದ್ದ ವಿಭೀಷಣನನ್ನು ನೋಡಿ "ರಾಕ್ಷಸೇಂದ್ರ-ವಿಭೀಷಣ, ನೀನು ಹೇಳಿದ್ದೇನು ? ಇನ್ನೊಂದುಸಲ ಹೇಳು, ಆಲಿಸುವೆನು" ಎಂದನು! (೧-೩). ಆಗ ವಾಕ್ಯವಿಶಾರದನಾದ ವಿಭೀಷಣನು ಅದೇ ವಿಷಯವನ್ನು ಮತ್ತೆ ಈ ರೀತಿಯಲ್ಲಿ ತಿಳಿಸಿದನು: "ವೀರಾಗ್ರಣಿ-ಶ್ರೀರಾಮ, ನೀನು ಆಜ್ಞಾಪಿಸಿದೊಡನೆಯೇ ನಾನು ಸೇನಾವ್ಯೂಹವನ್ನು ಆಯಾ ಸ್ಥಾನಗಳಲ್ಲಿ

ತಾನ್ಯನೀಕಾನಿ ಸರ್ವಾಣಿ ವಿಭಕ್ತಾನಿ ಸಮಂತತಃ ।
ವಿನ್ಯಸ್ತಾ ಯೂಥಪಾಶ್ಚೈವ ಯಥಾನ್ಯಾಯಂ ವಿಭಾಗಶಃ ॥ ೬

ಭೂಯಸ್ತು ಮಮ ವಿಜ್ಞಾಪ್ಯಂ ತಚ್ಛೃಣುಷ್ವ ಮಹಾಯಶಃ ।
ತ್ವಯ್ಯಕಾರಣಸಂತಪ್ತೇ ಸಂತಪ್ತಹೃದಯಾ ವಯಮ್ ॥ ೭

ತ್ಯಜ ರಾಜನ್ನಿಮಂ ಶೋಕಂ ಮಿಥ್ಯಾಸಂತಾಪಮಾಗತಮ್ ।
ತದಿಯಂ ತ್ಯಜ್ಯತಾಂ ಚಿಂತಾ ಶತ್ರುಹರ್ಷವಿವರ್ಧಿನೀ ॥ ೮

ಉದ್ಯಮಃ ಕ್ರಿಯತಾಂ ವೀರ ಹರ್ಷಃ ಸಮುಪಸೇವ್ಯತಾಮ್ ।
ಪ್ರಾಪ್ತವ್ಯಾ ಯದಿ ತೇ ಸೀತಾ ಹಂತವ್ಯಾಶ್ಚ ನಿಶಾಚರಾಃ ॥ ೯

ರಘುನಂದನ ವಕ್ಷ್ಯಾಮಿ ಶ್ರೂಯತಾಂ ಮೇ ಹಿತಂ ವಚಃ ।
ಸಾಧ್ವಯಂ ಯಾತು ಸೌಮಿತ್ರಿರ್ಬಲೇನ ಮಹತಾ ವೃತಃ ॥ ೧೦

ನಿಕುಂಭಿಲಾಯಾಂ ಸಂಪ್ರಾಪ್ಯ ಹಂತುಂ ರಾವಣಿಮಾಹವೇ ।
ಧನುರ್ಮಂಡಲನಿರ್ಮುಕ್ತೈರಾಶೀವಿಷವಿಷೋಪಮೈಃ ॥ ೧೧

---

ಸ್ಥಾಪಿಸಿ ಬಂದೆನು (೪-೫). ಸೇನೆಗಳನ್ನು ವಿಂಗಡಿಸಿ ಬೇರೆಬೇರೆ ಯೂಥ ಪಾಲರೊಡನೆ ಗೊತ್ತಾದ ಸ್ಥಳದಲ್ಲಿ ನಿಲ್ಲುವಂತೆ ಅವರಿಗೆ ತಿಳಿಸಿ ವ್ಯವಸ್ಥೆ ಮಾಡಿದೆನು. ಈಗ ನಿನ್ನಲ್ಲಿ ನನ್ನದೊಂದು ವಿಜ್ಞಾಪನೆಯುಂಟು. ನೀನು ಹೀಗೆ ನಿಷ್ಕಾರಣವಾಗಿ ಶೋಕಸಂತಪ್ತನಾದರೆ, ನಾವೂ ವಿಷಣ್ಣರಾಗಿ ಬಿಡುತ್ತೇವೆ (೬-೭). ರಾಜಪುತ್ರ, ಹೀಗೆ ಶೋಕಿಸುವುದನ್ನು ಬಿಟ್ಟುಬಿಡು. ಇದು ಕೇವಲ ಭ್ರಾಂತಿಯಿಂದ ಬಂದಿರುವ ಶೋಕ. ನೀನು ಚಿಂತಾಕ್ರಾಂತ ನಾದರೆ ಶತ್ರುಗಳ ಹರ್ಷವು ಇಮ್ಮಡಿಸುವುದು. ಈ ಚಿಂತೆಯನ್ನು ಪರಿತ್ಯಜಿಸು (೮). ಕಾರ್ಯೋನ್ಮುಖನಾಗು. ಉತ್ಸಾಹದಿಂದಿರು. ರಾಕ್ಷಸ ರನ್ನು ಸಂಹರಿಸಿ ಸೀತೆಯನ್ನು ಪಡೆಯಬೇಕೆಂದಿದ್ದರೆ, ರಘುನಂದನ, ನನ್ನ ಹಿತೋಕ್ತಿಯನ್ನು ಕೇಳು. ಈಗಲೇ ಸೌಮಿತ್ರಿಯು ಪ್ರಬಲವಾದ ಸೇನೆ ಯೊಡನೆ ರಾವಣಿಯನ್ನು ಸಂಹರಿಸುವುದಕ್ಕಾಗಿ ಹೊರಡಲಿ! (೯-೧೦). ಪರಂತಪನೂ ಮಹಾಧನುರ್ಧಾರಿಯೂ ಆದ ಲಕ್ಷ್ಮಣನು ನಿಕುಂಭಿಳೆಗೆ ಹೋಗಿ ಸರ್ಪವಿಷಸಮಾನಗಳಾದ ಸರಳುಗಳನ್ನು ಚಾಪದಿಂದ ಚಿಮ್ಮಿ,

ಶರೈರ್ಹಂತುಂ ಮಹೇಷ್ವಾಸೋ ರಾವಣಿಂ ಸಮಿತಿಂಜಯಃ ।
ತೇನ ವೀರೇಣ ತಪಸಾ ವರದಾನಾತ್ ಸ್ವಯಂಭುವಃ ॥ ೧೨

ಅಸ್ತ್ರಂ ಬ್ರಹ್ಮಶಿರಃ ಪ್ರಾಪ್ತಂ ಕಾಮಗಾಶ್ಚ ತುರಂಗಮಾಃ ।
ಸ ಏಷ ಸಹ ಸೈನ್ಯೇನ ಪ್ರಾಪ್ತಃ ಕಿಲ ನಿಕುಂಭಿಲಾಮ್ ॥ ೧೩

ಯದ್ಯುತ್ತಿಷ್ಠೇತ್ ಕೃತಂ ಕರ್ಮ ಹತಾನ್ ಸರ್ವಾಂಶ್ಚ ವಿದ್ಧಿ ನಃ ।
ನಿಕುಂಭಿಲಾಮಸಂಪ್ರಾಪ್ತಮಹುತಾಗ್ನಿಂ ಚ ಯೋ ರಿಪುಃ ॥ ೧೪

ತ್ವಾಮಾತತಾಯಿನಂ ಹನ್ಯಾದಿಂದ್ರಶತ್ರೋ ಸ ತೇ ವಧಃ ।
ವರೋ ದತ್ತೋ ಮಹಾಬಾಹೋ ಸರ್ವಲೋಕೇಶ್ವರೇಣ ವೈ ॥ ೧೫

---

ಇಂದ್ರಜಿತುವನ್ನು ಸಂಹರಿಸಲಿ. ವೀರನಾದ ಮೇಘನಾದನು ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ ವರವನ್ನು ಪಡೆದಿದ್ದಾನೆ (೧೧-೧೨). ಬ್ರಹ್ಮಶಿರಸ್ಸೆಂಬ ಅಸ್ತ್ರವನ್ನೂ ಕಾಮಚಾರಿಗಳಾದ ರಥಾಶ್ವಗಳನ್ನೂ ವರವಾಗಿ ಪಡೆದಿದ್ದಾನೆ. ಈಗ ಹೋಮಮಾಡುವುದಕ್ಕಾಗಿ ತನ್ನ ಸೇನೆಯೊಡನೆ ನಿಕುಂಭಿಳೆಯನ್ನು ಸೇರಿದ್ದಾನೆ. ಆತನು ಹೋಮಕಾರ್ಯವನ್ನು ಸಮಾಪ್ತಿಗೊಳಿಸಿ ಎದ್ದನೆಂದರೆ, ಶ್ರೀರಾಮ, ನಾವೆಲ್ಲರೂ ಹತರಾದಂತೆಯೇ ಎಂದು ತಿಳಿ ! (೧೩-೧೪). ಲೋಕೇಶ್ವರನಾದ ಬ್ರಹ್ಮದೇವನು ಇಂದ್ರಜಿತುವನ್ನು ಕುರಿತು 'ಎಲೈ ಇಂದ್ರಜಿತು, (ನೀನು ನಿಕುಂಭಿಳಾಯಾಗವನ್ನು ಸಂಕಲ್ಪಿಸಿದಮೇಲೆ) ನಿಕುಂಭಿಳಾಯಾಗಭೂಮಿಯನ್ನು ಸೇರಿ ಆಭಿಚಾರಿಕ ಹೋಮವನ್ನು ಪೂರ್ತಿಗೊಳಿಸದ ಅಸ್ತ್ರಧಾರಿಯಾಗಿದ್ದಾಗ, ಯಾವನು ನಿನ್ನೊಡನೆ ಯುದ್ಧಮಾಡುವನೋ ಅವನಿಂದ ಮಾತ್ರವೇ ನಿನ್ನ ವಧೆಯಾಗುವುದು. (ಆ ಸಂದರ್ಭವನ್ನು ಬಿಟ್ಟು ಬೇರೆ ಯಾವಾಗಲೂ ಯಾರೂ ನಿನ್ನನ್ನು ಸಂಹರಿಸಲಾರರು)' ಎಂದು ವರವನ್ನು ಕೊಟ್ಟಿದ್ದಾನೆ *

---

* 'ನಿಕುಂಭಿಳೆ' ಎಂದರೆ ಲಂಕಾವಲಯದಲ್ಲಿರುವ ಭದ್ರಕಾಳಿ. ಆ ದೇವಾಲಯದ ಪರಿಸರಭೂಮಿಯನ್ನೂ ಅಲ್ಲಿರುವ ಆಲದಮರದ ಬುಡವನ್ನೂ ನಿಕುಂಭಿಳೆಯೆಂದು ವ್ಯವಹರಿಸಲಾಗಿದೆ. ಹೋಮಮಾಡಿದಾಗ ಬ್ರಹ್ಮಶಿರೋಽಸ್ತ್ರವೂ ಮಾಯಿಕವಾದ ರಥಾಶ್ವಗಳೂ ಇಂದ್ರಜಿತುವಿಗೆ ದೊರೆಯುತ್ತಿದ್ದವು. ಒಂದುಸಲ ಅವುಗಳನ್ನು ಉಪಯೋಗಿಸಿದಮೇಲೆ ನಿರುಪಯುಕ್ತವಾಗುತ್ತಿದ್ದವು. ಪುನಃ ಬೇಕಾದರೆ ಮತ್ತೆ ಹೋಮವನ್ನು ಮಾಡಬೇಕಾಗಿತ್ತು.

ಇತ್ಯೇವಂ ವಿಹಿತೋ ರಾಜನ್ ವಧಸ್ತಸ್ಯೈಷ ಧೀಮತಃ ।
ವಧಾಯೇಂದ್ರಜಿತೋ ರಾಮ ಸಂದಿಶಸ್ವ ಮಹಾಬಲ ॥ ೧೬

ಹತೇ ತಸ್ಮಿನ್ ಹತಂ ವಿದ್ಧಿ ರಾವಣಂ ಸಸುಹೃಜ್ಜನಮ್ ।
ವಿಭೀಷಣವಚಃ ಶ್ರುತ್ವಾ ರಾಘವೋ ವಾಕ್ಯಮಬ್ರವೀತ್ ॥ ೧೭

ಜಾನಾಮಿ ತಸ್ಯ ರೌದ್ರಸ್ಯ ಮಾಯಾಂ ಸತ್ಯಪರಾಕ್ರಮ ।
ಸ ಹಿ ಬ್ರಹ್ಮಾಸ್ತ್ರವಿತ್ ಪ್ರಾಜ್ಞೋ ಮಹಾಮಾಯೋ ಮಹಾಬಲಃ ॥

ಕರೋತ್ಯಸಂಜ್ಞಾನ್ ಸಂಗ್ರಾಮೇ ದೇವಾನ್ ಸವರುಣಾನಪಿ ।
ತಸ್ಯಾಂತರಿಕ್ಷೇ ಚರತೋ ರಥಸ್ಥಸ್ಯ ಮಹಾಯಶಃ ॥ ೧೯

ನ ಗತಿರ್ಜ್ಞಾಯತೇ ತಸ್ಯ ಸೂರ್ಯಸ್ಯೇವಾಭ್ರಸಂಪ್ಲವೇ ।
ರಾಘವಸ್ತು ರಿಪೋರ್ಜ್ಞಾತ್ವಾ ಮಾಯಾವೀರ್ಯಂ ದುರಾತ್ಮನಃ ॥ ೨೦

ಲಕ್ಷ್ಮಣಂ ಕೀರ್ತಿಸಂಪನ್ನಮಿದಂ ವಚನಮಬ್ರವೀತ್ ।
ಯದ್ವಾನರೇಂದ್ರಸ್ಯ ಬಲಂ ತೇನ ಸರ್ವೇಣ ಸಂವೃತಃ ॥ ೨೧

---

(೧೫). ರಾಜಪುತ್ರ, ಧೀಮಂತನಾದ ಇಂದ್ರಜಿತುವಿನ ವಧೆಯು ಈ ಸಮಯದಲ್ಲಿಯೇ ಆಗಬೇಕು. ಅವನನ್ನು ವಧಿಸುವುದಕ್ಕಾಗಿ ಲಕ್ಷ್ಮಣನನ್ನು ಕಳಿಸು. ಇಂದ್ರಜಿತು ಒಬ್ಬನು ಹತನಾದನೆಂದರೆ, ರಾವಣನು ಪರಿವಾರಸಮೇತನಾಗಿ ಹತನಾದನೆಂದೇ ತಿಳಿ!" ಎಂಬುದಾಗಿ ತಿಳಿಸಿದನು (೧೬-೧೭). ವಿಭೀಷಣನು ಹೇಳುವುದನ್ನು ಆಲಿಸಿ ಕೇಳುತ್ತಿದ್ದ ರಾಘವನು "ವಿಭೀಷಣ, ನೀನು ಹೇಳುವುದು ಸತ್ಯ. ಆ ಕ್ರೂರರಾಕ್ಷಸನ ಮಾಯಾಬಲವೇನೆಂಬುದು ನನಗೆ ಗೊತ್ತಿದೆ. ಮೇಘನಾದನು ಬ್ರಹ್ಮಾಸ್ತ್ರವನ್ನು ಬಲ್ಲ ಪ್ರಾಜ್ಞನೇ ಹೌದು. ಮಹಾಮಾಯಾವಿಯೂ ಬಲಾಢ್ಯನೂ ಆಗಿದ್ದಾನೆ (೧೮). ವರುಣಾದಿದೇವತೆಗಳನ್ನು ಸಂಗ್ರಾಮದಲ್ಲಿ ಎದುರಿಸಿ ದಿಗ್ಭ್ರಾಂತರನ್ನಾಗಿ ಮಾಡಬಲ್ಲನು. ಇಂದ್ರಜಿತು ರಥದಲ್ಲಿ ಕುಳಿತು ಅಂತರಿಕ್ಷದಲ್ಲಿ ಸಂಚರಿಸುವಾಗ ಅವನ ಗತಿಯನ್ನೇ ತಿಳಿಯಲು ಶಕ್ಯವಿಲ್ಲ. ಮೋಡವು ಕವಿದಾಗ ಅದರ ಹಿಂದಿರುವ ಸೂರ್ಯನಂತೆ ಕಣ್ಮರೆಯಾಗಿಬಿಡುತ್ತಾನೆ" ಎಂದನು (೧೯-೨೦). ಶ್ರೀರಾಮನು ತನ್ನಲ್ಲಿಯೇ ವೈರಿಯೂ ದುರಾತ್ಮನೂ ಆದ ಇಂದ್ರಜಿತುವಿನ ಮಾಯಾಬಲವನ್ನು ಆಲೋಚಿಸಿ, ಲಕ್ಷ್ಮಣನನ್ನು

ಹನುಮತ್ಪ್ರಮುಖೈಶ್ಚೈವ ಯೂಥಪೈಃ ಸಹ ಲಕ್ಷ್ಮಣ ।
ಜಾಂಬವೇನರ್ಕ್ಷಪತಿನಾ ಸಹ ಸೈನ್ಯೇನ ಸಂವೃತಃ ॥ ೨೨

ಜಹಿ ತಂ ರಾಕ್ಷಸಸುತಂ ಮಾಯಾಬಲವಿಶಾರದಮ್ ।
ಅಯಂ ತ್ವಾಂ ಸಚಿವೈಃ ಸಾರ್ಧಂ ಮಹಾತ್ಮಾ ರಜನೀಚರಃ ॥ ೨೩

ಅಭಿಜ್ಞಸ್ತಸ್ಯ ದೇಶಸ್ಯ ಪೃಷ್ಠತೋಽನುಗಮಿಷ್ಯತಿ ।
ರಾಘವಸ್ಯ ವಚಃ ಶ್ರುತ್ವಾ ಲಕ್ಷ್ಮಣಃ ಸವಿಭೀಷಣಃ ॥ ೨೪

ಜಗ್ರಾಹ ಕಾರ್ಮುಕಶ್ರೇಷ್ಠಮತ್ಯದ್ಭುತಪರಾಕ್ರಮಃ ।
ಸಂನದ್ಧಃ ಕವಚೀ ಖಡ್ಗೀ ಸಶರೋ ಹೇಮಚಾಪಧೃತ್ ॥ ೨೫

ರಾಮಪಾದಾವುಪಸ್ಪೃಶ್ಯ ಹೃಷ್ಟಃ ಸೌಮಿತ್ರಿರಬ್ರವೀತ್ ।
ಅದ್ಯ ಮತ್ಕಾರ್ಮುಕೋನ್ಮುಕ್ತಾಃ ಶರಾ ನಿರ್ಭಿದ್ಯ ರಾವಣಿಮ್ ॥

---

ನೋಡಿ "ವತ್ಸ-ಲಕ್ಷ್ಮಣ, ಕಪೀಂದ್ರನಾದ ಸುಗ್ರೀವನ ಸಮಸ್ತ ಕಪಿಸೇನೆಯನ್ನೂ ಹನುಮಂತನೇ ಮೊದಲಾದ ಕೆಲವು ಸೇನಾಪತಿಗಳನ್ನೂ ಕರೆದುಕೊಂಡುಹೋಗು. ಭಲ್ಲೂಕಪತಿಯಾದ ಜಾಂಬವಂತನೂ ತನ್ನ ಭಲ್ಲೂಕ ಸೇನೆಯೊಡನೆ ನಿನ್ನ ಸಂಗಡ ಹೋಗಲಿ. ನೀನು ಈ ಪ್ರಬಲ ಸೇನಾ ಪರಿವೃತನಾಗಿ ಹೋಗಿ, ಮಾಯಾಬಲವಿಶಾರದನಾದ ಇಂದ್ರಜಿತುವನ್ನು ಸಂಹರಿಸು (೨೧-೨೨). ಮಹಾಭಾಗನಾದ ಈ ವಿಭೀಷಣನು ನಿಕುಂಭಿಳೆಯೆಂಬ ಆ ಪ್ರದೇಶವನ್ನು ಚೆನ್ನಾಗಿ ಬಲ್ಲನು. ಇವನು ತನ್ನ ಮಂತ್ರಿಗಳೊಡನೆ ನಿನ್ನ ಹಿಂದೆ ಬರುವನು" ಎಂದನು (೨೩). ಶ್ರೀರಾಮನ ವಚನವನ್ನು ಕೇಳಿದೊಡನೆ ಅದ್ಭುತಪರಾಕ್ರಮಿಯಾದ ಲಕ್ಷ್ಮಣನು ತನ್ನ ಮಹಾಧನುಸ್ಸನ್ನು ಕೈಗೆತ್ತಿಕೊಂಡನು; ಕವಚವನ್ನು ತೊಟ್ಟು, ಖಡ್ಗಧಾರಿಯಾಗಿ, ಶರಗಳನ್ನೂ ಚಿನ್ನದ ಕಟ್ಟುಳ್ಳ ಚಾಪವನ್ನೂ ಹಿಡಿದು ಸನ್ನದ್ಧನಾದನು. ವಿಭೀಷಣನೂ ಹೊರಡಲು ಸಿದ್ಧನಾದನು (೨೪-೨೫). ಯುದ್ಧೋತ್ಸಾಹದಿಂದ ಸಂಹೃಷ್ಟನಾದ ಸೌಮಿತ್ರಿಯು ಶ್ರೀರಾಮನ ಪಾದಗಳನ್ನು ಮುಟ್ಟಿ ನಮಸ್ಕರಿಸಿ "ಅಣ್ಣ, ಈ ದಿನ ನನ್ನ ಕಾರ್ಮುಕದಿಂದ ಸಿಡಿಯುವ ಶರಗಳು ರಾವಣಾತ್ಮಜನ ದೇಹವನ್ನು ಭೇದಿಸಿ, ಲಂಕಾ

ಲಂಕಾಮಭಿಪತಿಷ್ಯಂತಿ ಹಂಸಾಃ ಪುಷ್ಕರಿಣೀಮಿವ |
ಅದ್ಯೈವ ತಸ್ಯ ರೌದ್ರಸ್ಯ ಶರೀರಂ ಮಾಮಕಾಃ ಶರಾಃ || ೨೭
ವಿಧಮಿಷ್ಯಂತಿ ಭಿತ್ತ್ವಾ ತಂ ಮಹಾಚಾಪಗುಣಚ್ಯುತಾಃ |
ಸ ಏವಮುಕ್ತ್ವಾ ದ್ಯುತಿಮಾನ್ ವಚನಂ ಭ್ರಾತುರಗ್ರತಃ || ೨೮
ಸ ರಾವಣಿವಧಾಕಾಂಕ್ಷೀ ಲಕ್ಷ್ಮಣಸ್ತ್ವರಿತೋ ಯಯೌ |
ಸೋಽಭಿವಾದ್ಯ ಗುರೋಃ ಪಾದೌ ಕೃತ್ವಾ ಚಾಪಿ ಪ್ರದಕ್ಷಿಣಮ್ ||
ನಿಕುಂಭಿಲಾಮಭಿಯಯೌ ಚೈತ್ಯಂ ರಾವಣಿಪಾಲಿತಮ್ |
ವಿಭೀಷಣೇನ ಸಹಿತೋ ರಾಜಪುತ್ರಃ ಪ್ರತಾಪವಾನ್ || ೩೦
ಕೃತಸ್ವಸ್ತ್ಯಯನೋ ಭ್ರಾತ್ರಾ ಲಕ್ಷ್ಮಣಸ್ತ್ವರಿತೋ ಯಯೌ |
ವಾನರಾಣಾಂ ಸಹಸ್ರೈಸ್ತು ಹನುಮಾನ್ ಬಹುಭಿರ್ವೃತಃ || ೩೧
ವಿಭೀಷಣಶ್ಚ ಸಾಮಾತ್ಯಸ್ತದಾ ಲಕ್ಷ್ಮಣಮನ್ವಗಾತ್ |
ಮಹತಾ ಹರಿಸೈನ್ಯೇನ ಸವೇಗಮಭಿಸಂವೃತಃ || ೩೨

---

ನಗರದೊಳಗೆ ತೂರಾಡುವುವು! ಹಂಸಗಳು ಪುಷ್ಕರಿಣಿಗೆ ತಡೆಯಿಲ್ಲದೆ ಬಂದೆರಗುವಂತೆ ಲಂಕೆಗೆ ನುಗ್ಗುವುವು. ನನ್ನ ಧನುಸ್ಸಿನ ಹೆದೆಯಿಂದ ಜಿಗಿದುಹೋಗುವ ಶರಗಳು, ಈ ದಿನವೇ ಆ ಕ್ರೂರರಾಕ್ಷಸನ ಶರೀರವನ್ನು ಕೊರೆದು ಅರೆಯುವುವು!" ಎಂದನು (೨೬–೨೭). ತೇಜಸ್ವಿಯಾದ ಆ ಧೀರನು ಈ ರೀತಿಯಲ್ಲಿ ಅಣ್ಣನಿಗೆ ಅರಿಕೆಮಾಡಿ, ಶ್ರೀರಾಮನ ಪಾದಗಳನ್ನು ಮುಟ್ಟಿ ಪ್ರದಕ್ಷಿಣೆಮಾಡಿ ನಮಸ್ಕರಿಸಿ, ರಾವಣಿಯನ್ನು ವಧಿಸಬೇಕೆಂಬ ದೃಢಸಂಕಲ್ಪದಿಂದ ತ್ವರಿತವಾಗಿ ಹೊರಟನು (೨೮–೨೯). ಪ್ರತಾಪಶಾಲಿಯಾದ ಆ ರಾಜಕುಮಾರನು ಇಂದ್ರಜಿತುವಿನಿಂದ ರಕ್ಷಿತವಾಗಿದ್ದ ನಿಕುಂಭಿಳೆಯೆಂಬ ದೇವಾಲಯದ ಕಡೆಗೆ ವಿಭೀಷಣನೊಡನೆ ಹೊರಡಲು ಸಿದ್ಧನಾಗಲು, ಶ್ರೀರಾಮನು ಲಕ್ಷ್ಮಣನಿಗೆ ಶುಭವಾಗಲೆಂದು ಆಶೀರ್ವದಿಸಿದನು. ಅನಂತರ ಲಕ್ಷ್ಮಣನು ತ್ವರೆಯಿಂದ ಮುಂದೆ ನಡೆಯಲು, ಹನುಮಂತನು ಬಹುಸಹಸ್ರ ವಾನರಯೋಧರೊಡನೆ ಹಿಂಬಾಲಿಸಿ ಹೋದನು (೩೦–೩೧). ವಿಭೀಷಣನು ತನ್ನ ಸಚಿವರೊಡನೆ ಲಕ್ಷ್ಮಣನ ಹಿಂದೆ ನಡೆದನು. ಬಹು ದೊಡ್ಡದಾದ ವಾನರಸೇನೆಯು ಬೇಗಬೇಗನೆ ಜೊತೆಯಲ್ಲಿ

ಋಕ್ಷರಾಜಬಲಂ ಚೈವ ದದರ್ಶ ಪಥಿ ನಿಷ್ಠಿತಮ್ ।
ಸ ಗತ್ವಾ ದೂರಮಧ್ವಾನಂ ಸೌಮಿತ್ರಿರ್ಮಿತ್ರನಂದನಃ ॥ ೩೩

ರಾಕ್ಷಸೇಂದ್ರಬಲಂ ದೂರಾದಪಶ್ಯದ್ವ್ಯೂಹಮಾಸ್ಥಿತಮ್ ।
ಸ ತಂ ಪ್ರಾಪ್ಯ ಧನುಷ್ಪಾಣಿರ್ಮಾಯಾಯೋಗಮರಿಂದಮಃ ॥ ೩೪

ತಸ್ಥೌ ಬ್ರಹ್ಮವಿಧಾನೇನ ವಿಜೇತುಂ ರಘುನಂದನಃ ।
ವಿಭೀಷಣೇನ ಸಹಿತೋ ರಾಜಪುತ್ರಃ ಪ್ರತಾಪವಾನ್ ॥ ೩೫

ಅಂಗದೇನ ಚ ವೀರೇಣ ತಥಾನಿಲಸುತೇನ ಚ ॥

ವಿವಿಧಮಮಲಶಸ್ತ್ರಭಾಸ್ವರಂ ತ-
ದ್ಧ್ವಜಗಹನಂ ವಿಪುಲಂ ಮಹಾರಥೈಶ್ಚ ।
ಪ್ರತಿಭಯತಮಮಪ್ರಮೇಯವೇಗಂ
ತಿಮಿರಮಿವ ದ್ವಿಷತಾಂ ಬಲಂ ವಿವೇಶ ॥ ೩೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಾಶೀತಿತಮಃ ಸರ್ಗಃ

---

ಬರಲಾಗಿ, ತನ್ನೊಡನೆ ಸೇರಿಕೊಳ್ಳಲು ದಾರಿಯಲ್ಲಿ ಸಿದ್ಧವಾಗಿ ನಿಂತಿದ್ದ ಜಾಂಬವಂತನ ಸೇನೆಯನ್ನೂ ಲಕ್ಷ್ಮಣನು ಕಂಡನು. ಮಿತ್ರಾನಂದಕರನಾದ ಸೌಮಿತ್ರಿಯು ಅವರೆಲ್ಲರಿಂದ ಪರಿವೃತನಾಗಿ ಬಹುದೂರದವರೆಗೆ ಪ್ರಯಾಣಮಾಡಿ, ದೂರದಲ್ಲಿ ಇಂದ್ರಜಿತುವಿನ ರಾಕ್ಷಸಸೇನೆಯು ವ್ಯೂಹಾಕಾರವಾಗಿ ನಿಂತಿರುವುದನ್ನು ವೀಕ್ಷಿಸಿದನು (೩೨-೩೩). ರಘುನಂದನನಾದ ಆ ವೀರನು ಧನುಷ್ಪಾಣಿಯಾಗಿ ನಿಕುಂಭಿಳೆಯನ್ನು ಸೇರಿ, ಮಾಯಾವಿಯಾದ ಇಂದ್ರಜಿತು ಬ್ರಹ್ಮವರಾನುಗುಣವಾಗಿ ನಿಕುಂಭಿಳಾ ಯಾಗವನ್ನು ಮುಗಿಸುವುದಕ್ಕೆ ಮೊದಲೇ ಅವನನ್ನು ಸಂಹರಿಸಬೇಕೆಂದು ಸಂಕಲ್ಪಿಸಿದ್ದನು. ಪ್ರತಾಪಿಯಾದ ಆ ರಾಜಪುತ್ರನು ವಿಭೀಷಣ, ಅಂಗದ, ಹನುಮಂತ ಮೊದಲಾದವರ ಬೆಂಬಲದೊಡನೆ ಸನ್ನದ್ಧನಾದನು(೩೪-೩೫). ವ್ಯೂಹಾಕಾರವಾಗಿ ನಿಂತಿದ್ದ ರಾಕ್ಷಸಪಡೆಯು ಮಿರುಮಿರುಗುವ ಆಯುಧಗಳಿಂದ ಉಜ್ವಲವಾಗಿತ್ತು. ಧ್ವಜಪಟಗಳು ಹಾರಾಡುತ್ತಿದ್ದವು. ಮಹಾರಥಗಳು ವಿಪುಲವಾಗಿದ್ದವು. ಊಹಾತೀತವಾದ ಪ್ರಾಬಲ್ಯವುಳ್ಳ ಆ ಸೇನೆಯು ಅತ್ಯಂತ ಭೀಕರವಾಗಿತ್ತು. ಕಪ್ಪುಬಣ್ಣದ ರಾಕ್ಷಸವೀರರಿಂದ ಕಾರ್ಗತ್ತಲೆಯಂತೆ ಭೀಷಣವಾಗಿದ್ದ ಆ ಸೈನ್ಯದಲ್ಲಿ ಲಕ್ಷ್ಮಣನು ನುಗ್ಗಿದನು (೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತೈದನೆಯ ಸರ್ಗ

## ಷಡಶೀತಿತಮಃ ಸರ್ಗಃ

### ರಾವಣಿಬಲಕದನಮ್

ಅಥ ತಸ್ಯಾಮುಪಸ್ಥಾಯಾಂ ಲಕ್ಷ್ಮಣಂ ರಾವಣಾನುಜಃ ।
ಪರೇಷಾಮಹಿತಂ ವಾಕ್ಯಮರ್ಥಸಾಧಕಮಬ್ರವೀತ್ ॥ ೧

ಯದೇತದ್ರಾಕ್ಷಸಾನೀಕಂ ಮೇಘಶ್ಯಾಮಂ ವಿಲೋಕ್ಯತೇ ।
ಏತದಾಯೋಧ್ಯತಾಂ ಶೀಘ್ರಂ ಕಪಿಭಿಃ ಪಾದಪಾಯುಧೈಃ ॥ ೨

ಅಸ್ಯಾನೀಕಸ್ಯ ಮಹತೋ ಭೇದನೇ ಯತ ಲಕ್ಷ್ಮಣ ।
ರಾಕ್ಷಸೇಂದ್ರಸುತೋಽಪ್ಯತ್ರ ಭಿನ್ನೇ ದೃಶ್ಯೋ ಭವಿಷ್ಯತಿ ॥ ೩

ಸ ತ್ವಮಿಂದ್ರಾಶನಿಪ್ರಖ್ಯೈಃ ಶರೈರವಕಿರನ್ ಪರಾನ್ ।
ಅಭಿದ್ರವಾಶು ಯಾವದ್ವೈ ನೈತತ್ ಕರ್ಮ ಸಮಾಪ್ಯತೇ ॥ ೪

### ಸರ್ಗ ೮೬

ಲಕ್ಷ್ಮಣನೂ ವಾನರಯೋಧರೂ ರಾಕ್ಷಸಸೇನೆಯನ್ನು ಭೇದಿಸುವುದು.
ಕುಪಿತನಾದ ಇಂದ್ರಜಿತು ತನ್ನ ಹೋಮಕಾರ್ಯವನ್ನು
ಮುಗಿಸದೆ ಯುದ್ಧಕ್ಕೆ ಬರುವುದು.

ಆ ಸಮಯದಲ್ಲಿ ವಿಭೀಷಣನು ಶತ್ರುಗಳಾದ ರಾಕ್ಷಸರಿಗೆ ಹಾನಿಕರವೂ ತನ್ನ ಪಕ್ಷಕ್ಕೆ ಕಾರ್ಯಸಾಧಕವೂ ಆದ ಮಾತನ್ನು ಲಕ್ಷ್ಮಣನಿಗೆ ಹೇಳಿದನು. ಅವನು "ಲಕ್ಷ್ಮಣ, ಎದುರಿಗೆ ಕಾರ್ಮೋಡದಂತೆ ಕಪ್ಪಾದ ರಾಕ್ಷಸಪಡೆಯು ಕಾಣುವುದಷ್ಟೆ. ನಮ್ಮ ವಾನರಯೋಧರು ವೃಕ್ಷಾದ್ಯಾಯುಧಗಳನ್ನು ಪ್ರಯೋಗಿಸಿ ಆ ಪಡೆಯಮೇಲೆ ಬೇಗನೆ ಧಾಳಿಮಾಡಬೇಕು (೧–೨). ಮಹತ್ತರವಾದ ಆ ಶತ್ರುಸೇನೆಯನ್ನು ಭೇದಿಸಿ ಧೂಳೆಬ್ಬಿಸು, ಲಕ್ಷ್ಮಣ. ಅದನ್ನು ಭೇದಿಸಿದಲ್ಲಿ ರಾಕ್ಷಸೇಂದ್ರನ ಸುತನಾದ ಮೇಘನಾದನು ಕಾಣಿಸಿಕೊಳ್ಳುವನು. ಇಂದ್ರನ ವಜ್ರಾಯುಧಕ್ಕೆ ಸಾಟಿಯಾದ ನಿನ್ನ ಕೂರ್ಗಣೆಗಳನ್ನು ತೂರುತ್ತ ವೈರಿಗಳನ್ನು ಆಕ್ರಮಿಸು. ಹೋಮಕರ್ಮವು ಮುಗಿಯುವುದರೊಳಗೆ ಈ ಕಾರ್ಯವಾಗಬೇಕು (೩–೪).

ಜಹಿ ವೀರ ದುರಾತ್ಮಾನಂ ಮಾಯಾಪರಮಧಾರ್ಮಿಕಮ್ ।
ರಾವಣಿಂ ಕ್ರೂರಕರ್ಮಾಣಂ ಸರ್ವಲೋಕಭಯಾವಹಮ್ ॥ ೫

ವಿಭೀಷಣವಚಃ ಶ್ರುತ್ವಾ ಲಕ್ಷ್ಮಣಃ ಶುಭಲಕ್ಷಣಃ ।
ವವರ್ಷ ಶರವರ್ಷಾಣಿ ರಾಕ್ಷಸೇಂದ್ರಸುತಂ ಪ್ರತಿ ॥ ೬

ಋಕ್ಷಾಃ ಶಾಖಾಮೃಗಾಶ್ಚಾಪಿ ದ್ರುಮಾದ್ರಿನಖಯೋಧಿನಃ ।
ಅಭ್ಯಧಾವಂತ ಸಹಿತಾಸ್ತದನೀಕಮವಸ್ಥಿತಮ್ ॥ ೭

ರಾಕ್ಷಸಾಶ್ಚ ಶಿತೈರ್ಬಾಣೈರಸಿಭಿಃ ಶಕ್ತಿತೋಮರೈಃ ।
ಉದ್ಯತೈಃ ಸಮವರ್ತಂತ ಕಪಿಸೈನ್ಯಜಿಘಾಂಸವಃ ॥ ೮

ಸ ಸಂಪ್ರಹಾರಸ್ತುಮುಲಃ ಸಂಜಜ್ಞೇ ಕಪಿರಕ್ಷಸಾಮ್ ।
ಶಬ್ದೇನ ಮಹತಾ ಲಂಕಾಂ ನಾದಯನ್ ವೈ ಸಮಂತತಃ ॥ ೯

ಶಸ್ತ್ರೈಶ್ಚ ವಿವಿಧಾಕಾರೈಃ ಶಿತೈರ್ಬಾಣೈಶ್ಚ ಪಾದಪೈಃ ।
ಉದ್ಯತೈರ್ಗಿರಿಶೃಂಗೈಶ್ಚ ಘೋರೈರಾಕಾಶಮಾವೃತಮ್ ॥ ೧೦

---

ವೀರಾಗ್ರೇಸರ–ಲಕ್ಷ್ಮಣ, ದುರುಳನಾದ ಆ ರಾವಣಿಯು ಮಾಯಾವಿಯೂ ಧರ್ಮದ್ವೇಷಿಯೂ ಆಗಿದ್ದಾನೆ. ಕ್ರೂರಾತ್ಮನೂ ಸರ್ವಲೋಕಭಯಂಕರನೂ ಆಗಿರುವ ಇಂದ್ರಜಿತುವನ್ನು ಸಂಹರಿಸು" ಎಂದನು (೫). ವಿಭೀಷಣನ ನುಡಿಯನ್ನು ಕೇಳಿ ಲಕ್ಷ್ಮಣನು ಇಂದ್ರಜಿತುವಿದ್ದ ರಾಕ್ಷಸಸೇನೆಯ ಕಡೆಗೆ ಶರವೃಷ್ಟಿಯನ್ನು ಸುರಿಸಲಾರಂಭಿಸಿದನು. ಒಡನೆಯೇ ಭಲ್ಲೂಕವೀರರೂ ಕಪಿಯೋಧರೂ ವೃಕ್ಷಗಳಿಂದಲೂ, ಬೆಟ್ಟಗಳಿಂದಲೂ, ನಖಗಳಿಂದಲೂ ಹೋರಾಡುತ್ತ ರಾಕ್ಷಸಸೇನೆಯಮೇಲೆ ಆಕ್ರಮಣವನ್ನೆಸಗಿದರು (೬–೭). ಅತ್ತ ರಾಕ್ಷಸಸೈನಿಕರೂ ನಿಶಿತಶರಗಳು, ಖಡ್ಗಶಕ್ತಿತೋಮರಗಳು ಮೊದಲಾದ ಆಯುಧಗಳಿಂದ ವಾನರಸೇನೆಯನ್ನು ಸಂಹರಿಸತೊಡಗಿದರು. ಕಪಿರಾಕ್ಷಸರ ನಡುವೆ ಘೋರವಾದ ತುಮುಲಕದನವು ಉಪಕ್ರಮಿಸಿತು. ಕೋಲಾಹಲವು ಸುತ್ತಲೂ ಲಂಕೆಯನ್ನು ಮೊಳಗಿಸಿತು (೮–೯). ಎಸೆದಾಡುವ ವಿವಿಧಾಕಾರದ ಭೀಕರಶಸ್ತ್ರಗಳು, ಕೂರಂಬುಗಳು, ವೃಕ್ಷಗಳು, ಗಿರಿಶೃಂಗಗಳು—ಆಕಾಶವನ್ನು ಮುಚ್ಚಿದವು.

ತೇ ರಾಕ್ಷಸಾ ವಾನರೇಷು ವಿಕೃತಾನನಬಾಹವಃ ।
ನಿವೇಶಯಂತಃ ಶಸ್ತ್ರಾಣಿ ಚಕ್ರುಸ್ತೇ ಸುಮಹದ್ಭಯಮ್ ॥ ೧೧

ತಥೈವ ಸಕಲೈರ್ವೃಕ್ಷೈರ್ಗಿರಿಶೃಂಗೈಶ್ಚ ವಾನರಾಃ ।
ಅಭಿಜಘ್ನುರ್ನಿಜಘ್ನುಶ್ಚ ಸಮರೇ ರಾಕ್ಷಸರ್ಷಭಾನ್ ॥ ೧೨

ಋಕ್ಷವಾನರಮುಖ್ಯೈಶ್ಚ ಮಹಾಕಾಯೈರ್ಮಹಾಬಲೈಃ ।
ರಕ್ಷಸಾಂ ವಧ್ಯಮಾನಾನಾಂ ಮಹದ್ಭಯಮಜಾಯತ ॥ ೧೩

ಸ್ವಮನೀಕಂ ವಿಷಣ್ಣಂ ತು ಶ್ರುತ್ವಾ ಶತ್ರುಭಿರರ್ದಿತಮ್ ।
ಉದತಿಷ್ಠತ ದುರ್ಧರ್ಷಸ್ತತ್ಕರ್ಮಣ್ಯನನುಷ್ಠಿತೇ ॥ ೧೪

ವೃಕ್ಷಾಂಧಕಾರಾನ್ನಿರ್ಗತ್ಯ ಜಾತಕ್ರೋಧಃ ಸ ರಾವಣಿಃ ।
ಆರುರೋಹ ರಥಂ ಸಜ್ಜಂ ಪೂರ್ವಯುಕ್ತಂ ಸ ರಾಕ್ಷಸಃ ॥ ೧೫

ಸ ಭೀಮಕಾರ್ಮುಕಧರಃ ಕಾಲಮೇಘಸಮಪ್ರಭಃ ।
ರಕ್ತಾಸ್ಯನಯನಃ ಕ್ರುದ್ಧೋ ಬಭೌ ಮೃತ್ಯುರಿವಾಂತಕಃ ॥ ೧೬

---

ವಿಕೃತಾಕಾರದ ಮುಖಬಾಹುಗಳುಳ್ಳ ರಾಕ್ಷಸರು ವಾನರರನ್ನು ಶಸ್ತ್ರಗಳಿಂದ ಇರಿಯುತ್ತ ಮಹಾಭೀತಿಯನ್ನುಂಟುಮಾಡಿದರು. ಅದಕ್ಕೆ ಪ್ರತಿಯಾಗಿ ವಾನರರೂ ಸಹ ಕೊಂಬೆಗಳಿಂದ ಸಹಿತವಾದ ಮಹಾವೃಕ್ಷಗಳಿಂದಲೂ ಗಿರಿಶೃಂಗಗಳಿಂದಲೂ ರಾಕ್ಷಸನಾಯಕರನ್ನು ಬಡಿಯುತ್ತ ಜಡಿಯುತ್ತ ಕೊಲ್ಲುತ್ತ ನಡೆದರು (೧೧–೧೨). ಮಹಾಕಾಯರೂ ಬಲಾಢ್ಯರೂ ಆದ ವಾನರಭಲ್ಲೂಕವೀರರು ವೈರಿಗಳನ್ನು ಬಡಿದು ಕೊಲ್ಲುತ್ತಿರಲು, ರಾಕ್ಷಸರು ಹೆದರಿದರು. ಈ ರೀತಿಯಲ್ಲಿ ಶತ್ರುಗಳು ಬಂದು ತನ್ನ ಸೇನೆಯನ್ನು ಧ್ವಂಸಮಾಡುತ್ತಿರುವುದು ಇಂದ್ರಜಿತುವಿಗೆ ತಿಳಿಯಿತು. ದುರ್ಧರ್ಷನಾದ ಆ ವೀರನು ಹೋಮಕರ್ಮವನ್ನು ಮುಗಿಸದೆ ಅರ್ಧದಲ್ಲಿಯೇ ನಿಲ್ಲಿಸಿ ಮೇಲೆದ್ದನು! (೧೩–೧೪). ರೋಷಾವಿಷ್ಟನಾದ ರಾವಣಿಯು ಕತ್ತಲೆ ಕವಿದಂತಿದ್ದ ಮರಗಳ ಮರೆಯಿಂದ ಹೊರಬಂದು, ಮೊದಲೇ ಸಜ್ಜಾಗಿ ನಿಂತಿದ್ದ ರಥವನ್ನೇರಿದನು. ಭೀಕರವಾದ ಕಾರ್ಮುಕವನ್ನು ಕೈಯಲ್ಲಿ ಹಿಡಿದನು. ಕಾರ್ಮೋಡದಂತೆ ಕಪ್ಪಾಗಿದ್ದ ಆ ರಾಕ್ಷಸನ ಮುಖವೂ ಕಣ್ಣುಗಳೂ ಕೋಪದಿಂದ ಕೆಂಪಡರಿದ್ದವು. ಸರ್ವನಾಶಕ್ಕಾಗಿ ಹೊರಟ

ದೃಷ್ಟ್ವೈವ ತು ರಥಸ್ಥಂ ತಂ ಪರ್ಯವರ್ತತ ತದ್ಬಲಮ್ ।
ರಕ್ಷಸಾಂ ಭೀಮವೇಗಾನಾಂ ಲಕ್ಷ್ಮಣೇನ ಯುಯುತ್ಸತಾಮ್ ॥ ೧೭

ತಸ್ಮಿನ್ ಕಾಲೇ ತು ಹನುಮಾನುದ್ಯಮ್ಯ ಸುದುರಾಸದಮ್ ।
ಧರಣೀಧರಸಂಕಾಶೋ ಮಹಾವೃಕ್ಷಮರಿಂದಮಃ ॥ ೧೮

ಸ ರಾಕ್ಷಸಾನಾಂ ತತ್ ಸೈನ್ಯಂ ಕಾಲಾಗ್ನಿರಿವ ನಿರ್ದಹನ್ ।
ಚಕಾರ ಬಹುಭಿರ್ವೃಕ್ಷೈರ್ನಿಃಸಂಜ್ಞಂ ಯುಧಿ ವಾನರಃ ॥ ೧೯

ವಿಧ್ವಂಸಯಂತಂ ತರಸಾ ದೃಷ್ಟ್ವೈವ ಪವನಾತ್ಮಜಮ್ ।
ರಾಕ್ಷಸಾನಾಂ ಸಹಸ್ರಾಣಿ ಹನುಮಂತಮವಾಕಿರನ್ ॥ ೨೦

ಶಿತಶೂಲಧರಾಃ ಶೂಲೈರಸಿಭಿಶ್ಚಾಸಿಪಾಣಯಃ ।
ಶಕ್ತಿಭಿಃ ಶಕ್ತಿಹಸ್ತಾಶ್ಚ ಪಟ್ಟಿಸೈಃ ಪಟ್ಟಿಸಾಯುಧಾಃ ॥ ೨೧

ಪರಿಘೈಶ್ಚ ಗದಾಭಿಶ್ಚ ಚಕ್ರೈಶ್ಚ ಶುಭದರ್ಶನೈಃ ।
ಶತಶಶ್ಚ ಶತಘ್ನೀಭಿರಾಯಸೈರಪಿ ಮುದ್ಗರೈಃ ॥ ೨೨

---

ಮೃತ್ಯುವಿನಂತೆ ಅವನು ಕಂಗೊಳಿಸಿದನು (೧೫-೧೬). ಇಂದ್ರಜಿತು ರಥವೇರಿದುದನ್ನು ಕಂಡು, ಭೀಮಪರಾಕ್ರಮಿಗಳಾದ ರಾಕ್ಷಸರ ಸೇನೆಯು ಲಕ್ಷ್ಮಣನೊಡನೆ ಹೋರಾಡಬೇಕೆಂದು ಇಂದ್ರಜಿತುವಿನ ಸುತ್ತಲೂ ನೆರೆಯಿತು (೧೭). ಆ ಸಮಯದಲ್ಲಿ ಪರ್ವತಾಕಾರನಾಗಿ ಬೆಳೆದುನಿಂತ ಹನುಮಂತನು ಬಹು ದೊಡ್ಡದಾದ ಒಂದು ವೃಕ್ಷವನ್ನು ಬೀಸುತ್ತ, ಉರಿಯುವ ಕಾಲಾಗ್ನಿಯಂತೆ ರಾಕ್ಷಸಸೇನೆಯನ್ನು ಸದೆಬಡಿಯುತ್ತ ಹೋದನು. ಮತ್ತೆ ಮತ್ತೆ ಬೇರೆ ಬೇರೆ ವೃಕ್ಷಗಳನ್ನು ಕಿತ್ತು ಅಪ್ಪಳಿಸಿ ರಾಕ್ಷಸಸೇನೆಯನ್ನು ಕೊಲ್ಲುತ್ತ ನಡೆದನು (೧೮-೧೯). ಹೀಗೆ ರಾಕ್ಷಸ ಸೈನ್ಯವನ್ನು ವೇಗದಿಂದ ವಿಧ್ವಂಸಗೊಳಿಸುತ್ತಿರುವ ಆ ವಾಯುಪುತ್ರನನ್ನು ಕಂಡು, ಸಾವಿರಾರು ರಾಕ್ಷಸಯೋಧರು ಆತನನ್ನು ತರುಬಿದರು. ಶೂಲಧಾರಿಗಳು ಶೂಲಗಳಿಂದಲೂ ಖಡ್ಗಧಾರಿಗಳು ಖಡ್ಗಗಳಿಂದಲೂ ಶಕ್ತಿಪಾಣಿಗಳು ಶಕ್ತಿಗಳಿಂದಲೂ ಪಟ್ಟಿಸಾಯುಧರು ಪಟ್ಟಿಸಗಳಿಂದಲೂ ಪ್ರಹರಿಸುತ್ತ ಹನುಮಂತನನ್ನು ಮುತ್ತಿದರು (೨೦-೨೧). ನೂರಾರು ಪರಿಘ, ಗದೆ, ಚಕ್ರ, ಶತಘ್ನಿ, ಕಬ್ಬಿಣದ ಮುದ್ಗರ, ಘೋರವಾದ ಪರಶು, ಭಿಂಡಿಪಾಲ

ಘೋರೈಃ ಪರಶ್ವಧೈಶ್ಚೈವ ಭಿಂಡಿಪಾಲೈಶ್ಚ ರಾಕ್ಷಸಾಃ ।
ಮುಷ್ಟಿಭಿರ್ವಜ್ರಕಲ್ಪೈಶ್ಚ ತಲೈರಶನಿಸಂನಿಭೈಃ ॥ ೨೩

ಅಭಿಜಘ್ನುಃ ಸಮಾಸಾದ್ಯ ಸಮಂತಾತ್ ಪರ್ವತೋಪಮಮ್ ।
ತೇಷಾಮಪಿ ಚ ಸಂಕ್ರುದ್ಧಶ್ಚಕಾರ ಕದನಂ ಮಹತ್ ॥ ೨೪

ಸ ದದರ್ಶ ಕಪಿಶ್ರೇಷ್ಠಮಚಲೋಪಮಮಿಂದ್ರಜಿತ್ ।
ಸೂದಯಂತಮಮಿತ್ರಘ್ನಮಮಿತ್ರಾನ್ ಪವನಾತ್ಮಜಮ್ ॥ ೨೫

ಸ ಸಾರಥಿಮುವಾಚೇದಂ ಯಾಹಿ ಯತ್ರೈಷ ವಾನರಃ ।
ಕ್ಷಯಮೇಷ ಹಿ ನಃ ಕುರ್ಯಾದ್ರಾಕ್ಷಸಾನಾಮುಪೇಕ್ಷಿತಃ ॥ ೨೬

ಇತ್ಯುಕ್ತಃ ಸಾರಥಿಸ್ತೇನ ಯಯೌ ಯತ್ರ ಸ ಮಾರುತಿಃ ।
ವಹನ್ ಪರಮದುರ್ಧರ್ಷಂ ಸ್ಥಿತಮಿಂದ್ರಜಿತಂ ರಥೇ ॥ ೨೭

ಸೋಽಭ್ಯುಪೇತ್ಯ ಶರಾನ್ ಖಡ್ಗಾನ್ ಪಟ್ಟಿಸಾಂಶ್ಚ ಪರಶ್ವಧಾನ್ ।
ಅಭ್ಯವರ್ಷತ ದುರ್ಧರ್ಷಃ ಕಪಿಮೂರ್ಧ್ನಿ ಸ ರಾಕ್ಷಸಃ ॥ ೨೮

---

ಮುಂತಾದ ವಿವಿಧಾಯುಧಗಳಿಂದ ರಾಕ್ಷಸರು ಹನುಮಂತನನ್ನು ಎದುರಿಸಿದರು. ವಜ್ರಾಯುಧಗಳಂತಹ ಮುಷ್ಟಿಗಳಿಂದ ಗುದ್ದಿದರು. ಸಿಡಿಲಿನಂತಹ ಅಂಗೈಗಳಿಂದ ಅಪ್ಪಳಿಸಿದರು (೨೨–೨೩). ಪರ್ವತಾಕಾರನಾದ ಆಂಜನೇಯನನ್ನು ರಾಕ್ಷಸರು ಏಕಕಾಲದಲ್ಲಿ ಸುತ್ತಲೂ ಮುತ್ತಿಕೊಂಡು, ಬಗೆಬಗೆಯಲ್ಲಿ ಪ್ರಹರಿಸಿದರು. ಆಂಜನೇಯನು ಕ್ರೋಧಾವಿಷ್ಟನಾಗಿ ಅವರೆಲ್ಲರನ್ನೂ ಎದುರಿಸಿ ಹೋರಾಡಿದನು (೨೪). ಶೈಲೋನ್ನತಕಾಯನಾದ ಆ ವಾನರೋತ್ತಮನು ಈ ರೀತಿಯಲ್ಲಿ ಶತ್ರುಗಳನ್ನು ಸದೆಬಡಿಯುತ್ತಿರುವುದು ಇಂದ್ರಜಿತುವಿಗೆ ಗೋಚರಿಸಿತು. ಅವನು ತನ್ನ ಸಾರಥಿಯನ್ನು ಕುರಿತು "ಸಾರಥಿ, ಆ ವಾನರನು ಕಾಣಿಸುತ್ತಿರುವನಲ್ಲ; ನಡೆ ಅಲ್ಲಿಗೆ! ಉಪೇಕ್ಷಿಸಿದರೆ, ಅವನು ನಮ್ಮ ಸೇನೆಯನ್ನೇ ನಿರ್ನಾಮಗೊಳಿಸಿಯಾನು!" ಎಂದು ಆಜ್ಞಾಪಿಸಿದನು (೨೫–೨೬). ಆಗ ಸಾರಥಿಯು ವೀರಾಗ್ರೇಸರನಾದ ಇಂದ್ರಜಿತು ಕುಳಿತಿದ್ದ ರಥವನ್ನು ಹನುಮಂತನ ಕಡೆಗೆ ನಡೆಸಿದನು. ಇಂದ್ರಜಿತು ಮಾರುತಿಯ ಸಮೀಪಕ್ಕೆ ಸಾರಿದೊಡನೆ ಶರ, ಖಡ್ಗ, ಪಟ್ಟಿಸ, ಪರಶ್ವಧಾದಿಗಳನ್ನು ಆತನ ತಲೆಗೆ

**ತಾನಿ ಶಸ್ತ್ರಾಣಿ ಘೋರಾಣಿ ಪ್ರತಿಗೃಹ್ಯ ಸ ಮಾರುತಿಃ |**
**ರೋಷೇಣ ಮಹತಾವಿಷ್ಟೋ ವಾಕ್ಯಂ ಚೇದಮುವಾಚ ಹ ||** ೨೯

**ಯುಧ್ಯಸ್ವ ಯದಿ ಶೂರೋಽಸಿ ರಾವಣಾತ್ಮಜ ದುರ್ಮತೇ |**
**ವಾಯುಪುತ್ರಂ ಸಮಾಸಾದ್ಯ ಜೀವನ್ನ ಪ್ರತಿಯಾಸ್ಯಸಿ ||** ೩೦

**ಬಾಹುಭ್ಯಾಂ ಪ್ರತಿಯುಧ್ಯಸ್ವ ಯದಿ ಮೇ ದ್ವಂದ್ವಮಾಹವೇ |**
**ವೇಗಂ ಸಹಸ್ವ ದುರ್ಬುದ್ಧೇ ತತಸ್ತ್ವಂ ರಕ್ಷಸಾಂ ವರಃ ||** ೩೧

**ಹನುಮಂತಂ ಜಿಘಾಂಸಂತಂ ಸಮುದ್ಯತಶರಾಸನಮ್ |**
**ರಾವಣಾತ್ಮಜಮಾಚಷ್ಟೇ ಲಕ್ಷ್ಮಣಾಯ ವಿಭೀಷಣಃ ||** ೩೨

**ಯಃ ಸ ವಾಸವನಿರ್ಜೇತಾ ರಾವಣಸ್ಯಾತ್ಮಸಂಭವಃ |**
**ಸ ಏಷ ರಥಮಾಸ್ಥಾಯ ಹನುಮಂತಂ ಜಿಘಾಂಸತಿ ||** ೩೩

**ತಮಪ್ರತಿಮಸಂಸ್ಥಾನೈಃ ಶರೈಃ ಶತ್ರುವಿದಾರಣೈಃ |**
**ಜೀವಿತಾಂತಕರೈರ್ಘೋರೈಃ ಸೌಮಿತ್ರೇ ರಾವಣಿಂ ಜಹಿ ||** ೩೪

---

ಗುರಿಯಿಟ್ಟು ಪ್ರಯೋಗಿಸಿದನು (೨೭-೨೮). ಮಾರುತಿಯು ಘೋರವಾದ ಆ ಶಸ್ತ್ರಗಳನ್ನು ಲಕ್ಷಿಸದೆ ಎದುರಿಸಿ, ರೋಷಾಕ್ರಾಂತನಾಗಿ "ಎಲೈ ಖೂಳ-ರಾವಣಪುತ್ರ! ನೀನು ಶೂರನಾದರೆ (ಕಣ್ಣೆದುರಿಗೆ) ಹೋರಾಡು! ಈ ವಾಯುಪುತ್ರನನ್ನೆದುರಿಸಿದಮೇಲೆ, ಜೀವಂತನಾಗಿ ನೀನು ಹಿಂದಿರುಗಲಾರೆ (೨೯-೩೦). ನಿನಗೆ ದ್ವಂದ್ವಯುದ್ಧದಲ್ಲಿ ಪರಿಚಯವಿದ್ದರೆ, ಬಾಹುಗಳಿಂದಲೇ ಕುಸ್ತಿಯನ್ನಾಡೋಣ ಬಾ! ದುರಾತ್ಮ, ನನ್ನ ವೇಗವನ್ನು ಸಹಿಸಿಕೊ. ಆಗ ನೀನು ರಾಕ್ಷಸಶ್ರೇಷ್ಠನೆಂದೊಪ್ಪುವೆನು!" ಎಂದನು(೩೧). ಹೀಗೆ ಧನುರ್ಧಾರಿಯಾಗಿ ಹನುಮಂತನನ್ನೆದುರಿಸುತ್ತಿದ್ದವನೇ ರಾವಣಾತ್ಮಜನೆಂದು ಅಷ್ಟರಲ್ಲಿ ವಿಭೀಷಣನು ಲಕ್ಷ್ಮಣನಿಗೆ ತಿಳಿಸಿದನು. ಅವನು "ಲಕ್ಷ್ಮಣ, ಅಲ್ಲಿ ನೋಡು, ದೇವೇಂದ್ರನನ್ನು ಜಯಿಸಿದ ಆ ರಾವಣತನಯನು ರಥವನ್ನೇರಿ ಬಂದಿದ್ದಾನೆ. ಹನುಮಂತನನ್ನು ಕೊಲ್ಲಬೇಕೆಂಬ ಯತ್ನದಲ್ಲಿ ತೊಡಗಿದ್ದಾನೆ (೩೨-೩೩). ಸೌಮಿತ್ರಿ, ಅಸದೃಶಗಳೂ ಶತ್ರುನಿರ್ಭೇದಕಗಳೂ ಆದ ನಿನ್ನ ಕೂರ್ಗಣೆಗಳನ್ನು ಪ್ರಯೋಗಿಸು. ಪ್ರಾಣವನ್ನು ಹೀರುವ ಘೋರಾಸ್ತ್ರಗಳಿಂದ ಇಂದ್ರಜಿತುವನ್ನು ಸಂಹರಿಸು"

ಇತ್ಯೇವಮುಕ್ತಸ್ತು ತದಾ ಮಹಾತ್ಮಾ
ವಿಭೀಷಣೇನಾರಿವಿಭೀಷಣೇನ ।
ದದರ್ಶ ತಂ ಪರ್ವತಸಂನಿಕಾಶಂ
ರಥೇ ಸ್ಥಿತಂ ಭೀಮಬಲಂ ನದಂತಮ್ ॥ ೩೫

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಡಶೀತಿತಮಃ ಸರ್ಗಃ



ಎಂದನು (೩೪). ಅರಿಭಯಂಕರನಾದ ವಿಭೀಷಣನು ಈ ರೀತಿಯಲ್ಲಿ ಹೇಳಲು, ಧೀರನಾದ ಲಕ್ಷ್ಮಣನು ಇಂದ್ರಜಿತುವಿದ್ದ ಕಡೆಗೆ ನೋಡಿದನು. ದೂರದಲ್ಲಿ ಚಂಡಪರಾಕ್ರಮಿಯೂ ಪರ್ವತಾಕಾರನೂ ಆದ ಇಂದ್ರಜಿತು ರಥವನ್ನೇರಿ ಗರ್ಜಿಸುತ್ತಿರುವುದು ಗೋಚರಿಸಿತು (೩೫).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತಾರನೆಯ ಸರ್ಗ



# ಸಪ್ತಾಶೀತಿತಮಃ ಸರ್ಗಃ

## ವಿಭೀಷಣ ರಾವಣಿ ಪರಸ್ಪರ ನಿಂದಾ

ಏವಮುಕ್ತ್ವಾ ತು ಸೌಮಿತ್ರಿಂ ಜಾತಹರ್ಷೋ ವಿಭೀಷಣಃ ।
ಧನುಷ್ಪಾಣಿನಮಾದಾಯ ತ್ವರಮಾಣೋ ಜಗಾಮ ಹ ॥ ೧

ಅವಿದೂರಂ ತತೋ ಗತ್ವಾ ಪ್ರವಿಶ್ಯ ಚ ಮಹದ್ವನಮ್ ।
ದರ್ಶಯಾಮಾಸ ತತ್ಕರ್ಮ ಲಕ್ಷ್ಮಣಾಯ ವಿಭೀಷಣಃ ॥ ೨

ನೀಲಜೀಮೂತಸಂಕಾಶಂ ನ್ಯಗ್ರೋಧಂ ಭೀಮದರ್ಶನಮ್ ।
ತೇಜಸ್ವೀ ರಾವಣಭ್ರಾತಾ ಲಕ್ಷ್ಮಣಾಯ ನ್ಯವೇದಯತ್ ॥ ೩

ಇಹೋಪಹಾರಂ ಭೂತಾನಾಂ ಬಲವಾನ್ ರಾವಣಾತ್ಮಜಃ ।
ಉಪಹೃತ್ಯ ತತಃ ಪಶ್ಚಾತ್ ಸಂಗ್ರಾಮಮಭಿವರ್ತತೇ ॥ ೪

ಅದೃಶ್ಯಃ ಸರ್ವಭೂತಾನಾಂ ತತೋ ಭವತಿ ರಾಕ್ಷಸಃ ।
ನಿಹಂತಿ ಸಮರೇ ಶತ್ರೂನ್ ಬಧ್ನಾತಿ ಚ ಶರೋತ್ತಮೈಃ ॥ ೫

## ಸರ್ಗ ೮೭

### ಲಕ್ಷ್ಮಣನಿಗೆ ತನ್ನ ರಹಸ್ಯವನ್ನು ತಿಳಿಸಿದ್ದಕ್ಕಾಗಿ ಕ್ರುದ್ಧನಾದ ಇಂದ್ರಜಿತು ವಿಭೀಷಣನನ್ನು ನಿಂದಿಸುವುದು. ವಿಭೀಷಣನ ಪ್ರತ್ಯುತ್ತರ.

ವಿಭೀಷಣನು ಹೀಗೆ ಹೇಳಿ, ಧನುಷ್ಪಾಣಿಯಾಗಿದ್ದ ಸೌಮಿತ್ರಿಯನ್ನು ಕರೆದುಕೊಂಡು ತೀವ್ರಗತಿಯಿಂದ ಮುಂದೆ ಮುಂದೆ ನಡೆದನು. (ಇಂದ್ರಜಿತು ಕಣ್ಣಿಗೆ ಗೋಚರಿಸಿದ್ದರಿಂದ) ವಿಭೀಷಣನಿಗೆ ಹರ್ಷವಾಗಿತ್ತು. ಸ್ವಲ್ಪ ದೂರದವರೆಗೆ ಹೋಗಿ ದೊಡ್ಡದಾಗಿದ್ದ ನಿಕುಂಭಿಳಾವನವನ್ನು ಪ್ರವೇಶಿಸಿ, ವಿಭೀಷಣನು ಲಕ್ಷ್ಮಣನಿಗೆ ಇಂದ್ರಜಿತು ಹೋಮಮಾಡುತ್ತಿದ್ದ ಸ್ಥಳವನ್ನು ತೋರಿಸಿದನು (೧–೨). ಆ ರಾವಣಾನುಜನು ಕಾಲಮೇಘದಂತೆ ದಟ್ಟವಾಗಿ ಬೆಳೆದಿದ್ದ ಅದ್ಭುತಾಕಾರದ ಆಲದಮರವನ್ನು ಲಕ್ಷ್ಮಣನಿಗೆ ತೋರಿಸಿ "ಲಕ್ಷ್ಮಣ, ಬಲಶಾಲಿಯಾದ ರಾವಣಿಯು ಇಲ್ಲಿಯೇ ಭೂತಗಣಗಳಿಗೆ ಮೊದಲು ಬಲಿಯನ್ನು ಅರ್ಪಿಸಿ, ಆಮೇಲೆ ರಣರಂಗಕ್ಕೆ ತೆರಳುವನು (೩–೪). ಅಲ್ಲಿ ಸಕಲಜೀವಜಾತಗಳಿಗೂ ಆ ರಾಕ್ಷಸನು ಅದೃಶ್ಯನಾಗಿ

ತಮನುಪ್ರವಿಷ್ಟನ್ಯಗ್ರೋಧಂ ಬಲಿನಂ ರಾವಣಾತ್ಮಜಮ್ ।
ವಿಧ್ವಂಸಯ ಶರೈಸ್ತೀಕ್ಷ್ಣೈಃ ಸರಥಂ ಸಾಶ್ವಸಾರಥಿಮ್ ॥ ೬

ತಥೇತ್ಯುಕ್ತ್ವಾ ಮಹಾತೇಜಾಃ ಸೌಮಿತ್ರಿರ್ಮಿತ್ರನಂದನಃ ।
ಬಭೂವಾವಸ್ಥಿತಸ್ತತ್ರ ಚಿತ್ರಂ ವಿಸ್ಫಾರಯನ್ ಧನುಃ ॥ ೭

ಸ ರಥೇನಾಗ್ನಿವರ್ಣೇನ ಬಲವಾನ್ ರಾವಣಾತ್ಮಜಃ ।
ಇಂದ್ರಜಿತ್ ಕವಚೀ ಧನ್ವೀ ಸಧ್ವಜಃ ಪ್ರತ್ಯದೃಶ್ಯತ ॥ ೮

ತಮುವಾಚ ಮಹಾತೇಜಾಃ ಪೌಲಸ್ತ್ಯಮಪರಾಜಿತಮ್ ।
ಸಮಾಹ್ವಯೇ ತ್ವಾಂ ಸಮರೇ ಸಮ್ಯಗ್ಯುದ್ಧಂ ಪ್ರಯಚ್ಛ ಮೇ ॥ ೯

ಏವಮುಕ್ತೋ ಮಹಾತೇಜಾ ಮನಸ್ವೀ ರಾವಣಾತ್ಮಜಃ ।
ಅಬ್ರವೀತ್ ಪರುಷಂ ವಾಕ್ಯಂ ತತ್ರ ದೃಷ್ಟ್ವಾ ವಿಭೀಷಣಮ್ ॥ ೧೦

---

ಶತ್ರುಗಳನ್ನು ಸಂಹರಿಸುವನಲ್ಲದೆ, ಶರವಿಶೇಷಗಳಿಂದ ಅವರನ್ನು ಬಂಧಿಸುವನು. ಈಗ ಅವನು ಆಲದಮರದ ವನವನ್ನು ಸೇರಿ ಹೋಮಕಾರ್ಯವನ್ನು ಮುಗಿಸಿಲ್ಲ. ಪುನಃ ಅದನ್ನು ಪ್ರವೇಶಿಸುವುದರೊಳಗೆ ಆ ಇಂದ್ರಜಿತುವನ್ನೂ ಅವನ ರಥಾಶ್ವಸಾರಥಿಗಳನ್ನೂ ತೀಕ್ಷ್ಣಾಸ್ತ್ರಗಳಿಂದ ವಿಧ್ವಂಸಗೊಳಿಸು" ಎಂದು ಹೇಳಿದನು (೫-೬). "ಹಾಗೆಯೇ ಮಾಡುವೆನು" ಎಂದು ನುಡಿದು ತೇಜಸ್ವಿಯಾದ ಸೌಮಿತ್ರಿಯು ಧನುಸ್ಸನ್ನು ಅದ್ಭುತವಾಗಿ ಜೇಗೈಯುತ್ತ ನಿಂತನು. ಅಷ್ಟರಲ್ಲಿ ಪ್ರತಾಪಿಯಾದ ಇಂದ್ರಜಿತು ಕವಚಧಾರಿಯಾಗಿ ಧನುಸ್ಸನ್ನು ಹಿಡಿದು ಧ್ವಜವನ್ನು ಹಾರಿಸುತ್ತ ಅಗ್ನಿವರ್ಣದ ರಥವನ್ನಡರಿ ಅಲ್ಲಿಗೆ ಬಂದು ಕಾಣಿಸಿಕೊಂಡನು* (೭-೮). ಆಗ ತೇಜಸ್ವಿಯಾದ ಲಕ್ಷ್ಮಣನು ಸೋಲನ್ನು ಕಂಡರಿಯದ ಇಂದ್ರಜಿತುವನ್ನು ನೋಡಿ "ಎಲೈ ರಾಕ್ಷಸ, ಯುದ್ಧಕ್ಕಾಗಿ ನಿನಗೆ ಆಹ್ವಾನವನ್ನು ಕೊಡುತ್ತಿದ್ದೇನೆ. ವಂಚನೆಯಿಲ್ಲದೆ ನನ್ನೊಡನೆ ಯುದ್ಧಮಾಡು" ಎಂದನು (೯). ಅಭಿಮಾನಶಾಲಿಯಾದ ಇಂದ್ರಜಿತುವಿಗೆ ಅಲ್ಲಿ ವಿಭೀಷಣನಿರುವುದು ಗೋಚರಿಸಿತು.

---

* ನಿಕುಂಭಿಳಾಯಾಗವನ್ನು ಸಮಾಪ್ತಿಗೊಳಿಸುವುದಕ್ಕಾಗಿಯೋ ಅಥವಾ ಲಕ್ಷ್ಮಣನು ನಿಕುಂಭಿಳೆಗೆ ಬಂದಿರುವನೆಂಬ ಸುದ್ದಿಯನ್ನು ಕೇಳಿಯೋ ಇಂದ್ರಜಿತು ಅಲ್ಲಿಗೆ ಬಂದಿರಬಹುದು.

ಇಹ ತ್ವಂ ಜಾತಸಂವೃದ್ಧಃ ಸಾಕ್ಷಾದ್ಭ್ರಾತಾ ಪಿತುರ್ಮಮ ।
ಕಥಂ ದ್ರುಹ್ಯಸಿ ಪುತ್ರಸ್ಯ ಪಿತೃವ್ಯೋ ಮಮ ರಾಕ್ಷಸ ॥ ೧೧

ನ ಜ್ಞಾತಿತ್ವಂ ನ ಸೌಹಾರ್ದಂ ನ ಜಾತಿಸ್ತವ ದುರ್ಮತೇ ।
ಪ್ರಮಾಣಂ ನ ಚ ಸೋದರ್ಯಂ ನ ಧರ್ಮೋ ಧರ್ಮದೂಷಣ ॥ ೧೨

ಶೋಚ್ಯಸ್ತ್ವಮಸಿ ದುರ್ಬುದ್ಧೇ ನಿಂದನೀಯಶ್ಚ ಸಾಧುಭಿಃ ।
ಯಸ್ತ್ವಂ ಸ್ವಜನಮುತ್ಸೃಜ್ಯ ಪರಭೃತ್ಯತ್ವಮಾಗತಃ ॥ ೧೩

ನೈತಚ್ಛಿಥಿಲಯಾ ಬುದ್ಧ್ಯಾ ತ್ವಂ ವೇತ್ಸಿ ಮಹದಂತರಮ್ ।
ಕ್ವ ಚ ಸ್ವಜನಸಂವಾಸಃ ಕ್ವ ಚ ನೀಚಪರಾಶ್ರಯಃ ॥ ೧೪

ಗುಣವಾನ್ ವಾ ಪರಜನಃ ಸ್ವಜನೋ ನಿರ್ಗುಣೋಽಪಿ ವಾ ।
ನಿರ್ಗುಣಃ ಸ್ವಜನಃ ಶ್ರೇಯಾನ್ ಯಃ ಪರಃ ಪರ ಏವ ಸಃ ॥ ೧೫

ಯಃ ಸ್ವಪಕ್ಷಂ ಪರಿತ್ಯಜ್ಯ ಪರಪಕ್ಷಂ ನಿಷೇವತೇ ।
ಸ ಸ್ವಪಕ್ಷೇ ಕ್ಷಯಂ ಪ್ರಾಪ್ತೇ ಪಶ್ಚಾತ್ತೈರೇವ ಹನ್ಯತೇ ॥ ೧೬

---

ಅದನ್ನು ತಾಳಲಾರದೆ ಅವನು ಪರುಷವಾಕ್ಯಗಳಿಂದ ಹೀಗೆಂದನು: "ಎಲಾ ರಾಕ್ಷಸ-ವಿಭೀಷಣ, ಇಲ್ಲಿಯೇ ನೀನು ಹುಟ್ಟಿ ಬೆಳೆದವನು. ನನ್ನ ತಂದೆಗೆ ಸಾಕ್ಷಾತ್ ತಮ್ಮನಾಗಿದ್ದೀಯೆ. ಚಿಕ್ಕಪ್ಪನಾಗಿರುವ ನೀನು ಮಗನಾಗಿರುವ ನನಗೆ ದ್ರೋಹಮಾಡುವೆಯಾ? (೧೦-೧೧). ದುರಾತ್ಮ, ನಿನಗೆ ಬಂಧುತ್ವದ ಪರಿವೆಯಿಲ್ಲ, ಸ್ನೇಹವಿಲ್ಲ, ಜಾತಿಯಿಲ್ಲ! ಒಡಹುಟ್ಟಿದವನೆಂಬ ಗಣನೆಯಿಲ್ಲ! ಧರ್ಮದೂಷಕನಾದ ನಿನಗೆ ಧರ್ಮವೆಲ್ಲಿಂದ ಬಂದೀತು? ದುರ್ಬುದ್ಧಿಯಾದ ನಿನಗಾಗಿ ಎಷ್ಟು ಸಂಕಟಪಟ್ಟರೂ ಸಾಲದು; ಸಜ್ಜನರ ನಿಂದೆಗೆ ಪಾತ್ರನಾದವನು ನೀನು. ಸ್ವಜನರನ್ನು ಪರಿತ್ಯಜಿಸಿ ಪರರಿಗೆ ದಾಸನಾದೆಯಾ? (೧೨-೧೩). ಸ್ವಜನರೊಡನೆ ಬಾಳುವುದೆಲ್ಲಿ? ನೀಚರಾದ ಪರರಿಗೆ ಶರಣಾಗಿ ಬದುಕುವುದೆಲ್ಲಿ? ಇವುಗಳಿಗಿರುವ ದೊಡ್ಡ ಅಂತರವು ನಿನ್ನ ಕ್ಷುದ್ರಬುದ್ಧಿಗೆ ಹೊಳೆಯದೆ ಹೋಯಿತು! ಒಂದುವೇಳೆ ಶತ್ರುಗಳು ಗುಣವಂತರಾಗಿರಬಹುದು, ಸ್ವಜನರು ನಿರ್ಗುಣರಾಗಿರಬಹುದು, ಆದರೂ ನಿರ್ಗುಣರಾದ ಸ್ವಜನರೇ ಮೇಲು. ಶತ್ರುಗಳು ಯಾವಾಗಲೂ ಶತ್ರುಗಳೇ (೧೪-೧೫). ಯಾವನು ತನ್ನವರನ್ನು ಬಿಟ್ಟು ಪರರನ್ನು ಆಶ್ರಯಿಸುವನೋ, ತನ್ನವರು ಕ್ಷಯಿಸಿದಾಗ

ನಿರನುಕ್ರೋಶತಾ ಚೇಯಂ ಯಾದೃಶೀ ತೇ ನಿಶಾಚರ ।
ಸ್ವಜನೇನ ತ್ವಯಾ ಶಕ್ಯಂ ಪರುಷಂ ರಾವಣಾನುಜ ॥ ೧೭

ಇತ್ಯುಕ್ತೋ ಭ್ರಾತೃಪುತ್ರೇಣ ಪ್ರತ್ಯುವಾಚ ವಿಭೀಷಣಃ ।
ಅಜಾನನ್ನಿವ ಮಚ್ಛೀಲಂ ಕಿಂ ರಾಕ್ಷಸ ವಿಕತ್ಥಸೇ ॥ ೧೮

ರಾಕ್ಷಸೇಂದ್ರಸುತಾಸಾಧೋ ಪಾರುಷ್ಯಂ ತ್ಯಜ ಗೌರವಾತ್ ।
ಕುಲೇ ಯದ್ಯಪ್ಯಹಂ ಜಾತೋ ರಕ್ಷಸಾಂ ಕ್ರೂರಕರ್ಮಣಾಮ್ ॥ ೧೯

ಗುಣೋಽಯಂ ಪ್ರಥಮೋ ನೄಣಾಂ ತನ್ಮೇ ಶೀಲಮರಾಕ್ಷಸಮ್ ।
ನ ರಮೇ ದಾರುಣೇನಾಹಂ ನ ಚಾಧರ್ಮೇಣ ವೈ ರಮೇ ॥ ೨೦

ಭ್ರಾತ್ರಾ ವಿಷಮಶೀಲೇನ ಕಥಂ ಭ್ರಾತಾ ನಿರಸ್ಯತೇ ।
ಧರ್ಮಾತ್ ಪ್ರಚ್ಯುತಶೀಲಂ ಹಿ ಪುರುಷಂ ಪಾಪನಿಶ್ಚಯಮ್ ॥ ೨೧

ತ್ಯಕ್ತ್ವಾ ಸುಖಮವಾಪ್ನೋತಿ ಹಸ್ತಾದಾಶೀವಿಷಂ ಯಥಾ ।
ಹಿಂಸಾಪರಸ್ವಹರಣೇ ಪರದಾರಾಭಿಮರ್ಶನಮ್ ॥ ೨೨

---

ಅವನು ಪರರಿಂದಲೇ ಕೊಲ್ಲಲ್ಪಡುತ್ತಾನೆ. ಎಲಾ ರಾಕ್ಷಸ, (ನನ್ನ ಹೋಮಕಾರ್ಯಕ್ಕೆ ವಿಘ್ನವನ್ನೊಡ್ಡುವುದಕ್ಕಾಗಿ ಲಕ್ಷ್ಮಣನನ್ನು ಇಲ್ಲಿಗೆ ಕರೆತಂದೆಯಲ್ಲವೆ?) ಈ ನಿಷ್ಕಾರುಣ್ಯ, ಈ ಕ್ರೌರ್ಯ–ಬಂಧುವಾದ ನಿನಗೊಬ್ಬನಿಗೆ ಮಾತ್ರವೇ ಶಕ್ಯವಾದುದು. ಇನ್ನು ಯಾವನೂ ಇಂಥ ನೀಚ ಕಾರ್ಯವನ್ನು ಮಾಡಲಾರ" ಎಂದು ನಿಂದಿಸಿದನು (೧೬–೧೭). ಹೀಗೆ ಸೋದರಪುತ್ರನಾದ ಇಂದ್ರಜಿತು ನುಡಿಯಲಾಗಿ, ವಿಭೀಷಣನು ಅವನಿಗೆ ಪ್ರತ್ಯುತ್ತರಕೊಟ್ಟನು: "ಎಲೈ ಮೇಘನಾದ, ನನ್ನ ನಡತೆಯು ನಿನಗೆ ತಿಳಿದಿಲ್ಲವೆ? ತಿಳಿಯದವನಂತೆ ಏಕೆ ಬಗುಳುವೆ? (೧೮). ಎಲೈ ದುಷ್ಟ, ರಾಕ್ಷಸರಾಜನ ಸುತನೆಂಬ ಬಿಗುಮಾನದಿಂದ ಇಂಥ ಪರುಷವಚನವನ್ನಾಡಬೇಡ. ಕ್ರೂರಕರ್ಮಿಗಳಾದ ರಾಕ್ಷಸರ ವಂಶದಲ್ಲಿ ನಾನು ಹುಟ್ಟಿದ್ದರೂ ನನ್ನದು ರಾಕ್ಷಸರ ನಡತೆಯಲ್ಲ. ನಡತೆ–ಶೀಲ ಎಂಬುದು ಜನರಲ್ಲಿರಬೇಕಾದ ಮುಖ್ಯವಾದ ಗುಣ. ಕ್ರೌರ್ಯವು ನನಗೆ ಹಿಡಿಸದು. ಅಧರ್ಮವು ನನಗೆ ಸರಿಬೀಳದು (೧೯–೨೦). ಇದಕ್ಕೆ ವಿರುದ್ಧವಾಗಿ, ದುಶ್ಶೀಲನಾದ ಸೋದರನು ನಾನಾಗಿದ್ದರೆ ಸೋದರನಾದ ರಾವಣನನ್ನು ತ್ಯಜಿಸುತ್ತಿರಲಿಲ್ಲ. ಧರ್ಮಭ್ರಷ್ಟನೂ ಪಾಪಕಾರ್ಯದಲ್ಲಿ ನಿರತನೂ ಆದವನನ್ನು ಮೈಮೇಲೆ

ತ್ಯಾಜ್ಯಮಾಹುರ್ದುರಾಚಾರಂ ವೇಶ್ಮ ಪ್ರಜ್ವಲಿತಂ ಯಥಾ ।
ಪರಸ್ವಾನಾಂ ಚ ಹರಣಂ ಪರದಾರಾಭಿಮರ್ಶನಮ್ ॥ ೨೩

ಸುಹೃದಾಮತಿಶಂಕಾ ಚ ತ್ರಯೋ ದೋಷಾಃ ಕ್ಷಯಾವಹಾಃ ।
ಮಹರ್ಷೀಣಾಂ ವಧೋ ಘೋರಃ ಸರ್ವದೇವೈಶ್ಚ ವಿಗ್ರಹಃ ॥ ೨೪

ಅಭಿಮಾನಶ್ಚ ಕೋಪಶ್ಚ ವೈರಿತ್ವಂ ಪ್ರತಿಕೂಲತಾ ।
ಏತೇ ದೋಷಾ ಮಮ ಭ್ರಾತುರ್ಜೀವಿತೈಶ್ವರ್ಯನಾಶನಾಃ ॥ ೨೫

ಗುಣಾನ್ ಪ್ರಚ್ಛಾದಯಾಮಾಸುಃ ಪರ್ವತಾನಿವ ತೋಯದಾಃ ।
ದೋಷೈರೇತೈಃ ಪರಿತ್ಯಕ್ತೋ ಮಯಾ ಭ್ರಾತಾ ಪಿತಾ ತವ ॥ ೨೬

ನೇಯಮಸ್ತಿ ಪುರೀ ಲಂಕಾ ನ ಚ ತ್ವಂ ನ ಚ ತೇ ಪಿತಾ ।
ಅತಿಮಾನೀ ಚ ಬಾಲಶ್ಚ ದುರ್ವಿನೀತಶ್ಚ ರಾಕ್ಷಸ ॥ ೨೭

---

ಹತ್ತಿದ ವಿಷದಹಾವನ್ನು ಕೈಯಿಂದ ತೆಗೆದೆಸೆಯುವಂತೆ ತ್ಯಜಿಸುವುದೇ ಸುಖಕರ (೨೧-೨೨). ಪ್ರಾಣಿಹಿಂಸೆ, ಪರಧನಾಪಹಾರ, ಪರಸ್ತ್ರೀಸ್ಪರ್ಶನ—ಇವು ದುರಾಚಾರಗಳೆಂದು ಹಿರಿಯರು ಹೇಳಿದ್ದಾರೆ. ಬೆಂಕಿಬಿದ್ದ ಮನೆಯನ್ನು ಬಿಡುವಂತೆ, ಈ ದುರ್ಗುಣಗಳನ್ನು ದೂರವಿಡಬೇಕೆಂದು ಬೋಧಿಸಿದ್ದಾರೆ (೨೩). ಪರಧನಾಪಹಾರ, ಪರಸ್ತ್ರೀಸ್ಪರ್ಶನ, ಮಿತ್ರರಿಗೆ ಕೇಡನ್ನು ಬಯಸುವುದು—ಈ ಮೂರು ಸರ್ವನಾಶಕ್ಕೆ ಕಾರಣವಾದ ದೋಷಗಳು. ಮಹರ್ಷಿಗಳ ಘೋರವಧೆ, ಸಕಲ ದೇವತೆಗಳೊಡನೆ ಕಲಹ, ಅಹಂಕಾರ, ಕೋಪ, ದೀರ್ಘದ್ವೇಷ, ಹಿತವಾದಿಗಳೊಡನೆ ವಿರೋಧ—ಇವು ಆಯುಸ್ಸನ್ನೂ ಐಶ್ವರ್ಯವನ್ನೂ ನಾಶಪಡಿಸತಕ್ಕ ದೋಷಗಳು. ಈ ಎಲ್ಲ ದೋಷಗಳೂ ನನ್ನ ಅಣ್ಣನಲ್ಲಿ ನೆಲೆಸಿವೆ (೨೪-೨೫). ಮೋಡಗಳು ಕವಿದು ಪರ್ವತವನ್ನು ಮರೆಮಾಡುವಂತೆ, ಈ ದೋಷಗಳು ಅವನಲ್ಲಿದ್ದ ಕೆಲವು ಒಳ್ಳೆಯ ಗುಣಗಳನ್ನು ಮುಚ್ಚಿ ಮರೆಸಿಬಿಟ್ಟಿವೆ. ಈ ದೋಷಗಳು ಅವನಲ್ಲಿ ತುಂಬಿರುವುದರಿಂದ, ನನ್ನ ಅಣ್ಣನನ್ನು-ನಿನ್ನ ತಂದೆಯನ್ನು ತೊರೆದು ಬಂದಿದ್ದೇನೆ (೨೬). ಎಲೈ ರಾಕ್ಷಸ, ಈ ಲಂಕಾನಗರಿಗಾಗಲಿ ನಿನಗಾಗಲಿ ನಿನ್ನ ತಂದೆಗಾಗಲಿ, ಇನ್ನು ಉಳಿಗಾಲವಿಲ್ಲ. ನೀನು ಬಹಳ ಅಹಂಕಾರಿಯೂ

ಬದ್ಧಸ್ತ್ವಂ ಕಾಲಪಾಶೇನ ಬ್ರೂಹಿ ಮಾಂ ಯದ್ಯದಿಚ್ಛಸಿ ।
ಅದ್ಯ ತೇ ವ್ಯಸನಂ ಪ್ರಾಪ್ತಂ ಕಿಂ ಮಾಂ ತ್ವಮಿಹ ವಕ್ಷ್ಯಸಿ ॥ ೨೮
ಪ್ರವೇಷ್ಟುಂ ನ ತ್ವಯಾ ಶಕ್ಯೋ ನ್ಯಗ್ರೋಧೋ ರಾಕ್ಷಸಾಧಮ ।
ಧರ್ಷಯಿತ್ವಾ ಚ ಕಾಕುತ್ಸ್ಥೌ ನ ಶಕ್ಯಂ ಜೀವಿತುಂ ತ್ವಯಾ ॥ ೨೯
ಯುಧ್ಯಸ್ವ ನರದೇವೇನ ಲಕ್ಷ್ಮಣೇನ ರಣೇ ಸಹ ।
ಹತಸ್ತ್ವಂ ದೇವತಾಕಾರ್ಯಂ ಕರಿಷ್ಯಸಿ ಯಮಕ್ಷಯೇ ॥ ೩೦

ನಿದರ್ಶಯ ಸ್ವಾತ್ಮಬಲಂ ಸಮುದ್ಯತಂ
ಕುರುಷ್ವ ಸರ್ವಾಯುಧಸಾಯಕವ್ಯಯಮ್ ।
ನ ಲಕ್ಷ್ಮಣಸ್ಯೈತ್ಯ ಹಿ ಬಾಣಗೋಚರಂ
ತ್ವಮದ್ಯ ಜೀವನ್ ಸಬಲೋ ಗಮಿಷ್ಯಸಿ ॥ ೩೧

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತಾಶೀತಿತಮಃ ಸರ್ಗಃ

---

ಅವಿವೇಕಿಯೂ ಉದ್ಧತನೂ ಆಗಿದ್ದೀಯೆ. ಮೃತ್ಯುಪಾಶವು ನಿನ್ನ ಕೊರಳಿಗೆ ಸುತ್ತಿದೆ! ನಿನಗೆ ತೋರಿದ್ದನ್ನು–ಬಾಯಿಗೆ ಬಂದಿದ್ದನ್ನು ಹೇಳಿಬಿಡು! ನಿನಗೀಗ ಕಡೆಗಾಲದ ವ್ಯಸನವು ಬಂದು ಮುಸುಕಿದೆ. ನನ್ನೊಡನೆ ಹೀಗೆ ಹಲುಬುವುದೇಕೆ? (೨೭–೨೮). ರಾಕ್ಷಸರಲ್ಲಿ ಅಧಮ ನೀನು. ಮತ್ತೆ ಆಲದಮರದ ಬುಡವನ್ನು ಸೇರಿಕೊಳ್ಳಲು ನಿನಗೆ ಶಕ್ಯವಾಗದು. ಶ್ರೀರಾಮ ಲಕ್ಷ್ಮಣರನ್ನು ಕೆಣಕಿದ ನೀನು ಜೀವಸಹಿತ ಉಳಿಯುವೆಯಾ? ಪುರುಷ ಶ್ರೇಷ್ಠನಾದ ಲಕ್ಷ್ಮಣನೊಡನೆ ಈಗ ಯುದ್ಧಮಾಡು. ಸತ್ತು ಯಮಲೋಕ ವನ್ನು ಸೇರಿ, ಅಲ್ಲಿ ನಿನ್ನ ಹೋಮಕಾರ್ಯವನ್ನು* ಮುಗಿಸಬಹುದು! (೨೯–೩೦). ನಿನ್ನಲ್ಲಿರುವ ಸಮಸ್ತ ಬಲವನ್ನೂ ಈಗ ಪ್ರದರ್ಶಿಸು. ಸಕಲ ಆಯುಧಗಳನ್ನೂ ಅಸ್ತ್ರಗಳನ್ನೂ ಪ್ರಯೋಗಿಸು. ಲಕ್ಷ್ಮಣನ ಬಾಣ ಗಳಿಗೆ ಸಿಕ್ಕಿದಮೇಲೆ, ನೀನಾಗಲಿ ನಿನ್ನ ಸೇನೆಯಾಗಲಿ ಬದುಕಿ ಮರಳು ವುದು ಸಾಧ್ಯವಿಲ್ಲ" ಎಂದನು (೩೧).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತೇಳನೆಯ ಸರ್ಗ

---

* ಮೂಲದಲ್ಲಿ 'ದೇವತಾಕಾರ್ಯ' ಎಂದಿದೆ. ದೇವತೆಗಳಿಗೆ ಸಂತೋಷ ರೂಪವಾದ ಕಾರ್ಯ, ಯಮದೂತರೆಂಬ ದೇವತೆಗಳ ಆಜ್ಞಾಪಾಲನವೆಂಬ ಕಾರ್ಯ, ನರಕಯಾತನಾನುಭವವೆಂಬ ಕಾರ್ಯ–ಎಂಬುದಾಗಿ ವ್ಯಾಖ್ಯಾನಕಾರರು ಅರ್ಥ ಮಾಡಿದ್ದಾರೆ.

## ಅಷ್ಟಾಶೀತಿತಮಃ ಸರ್ಗಃ

### ಸೌಮಿತ್ರಿರಾವಣಿಯುದ್ಧಮ್

ವಿಭೀಷಣವಚಃ ಶ್ರುತ್ವಾ ರಾವಣಿಃ ಕ್ರೋಧಮೂರ್ಛಿತಃ ।
ಅಬ್ರವೀತ್ ಪರುಷಂ ವಾಕ್ಯಂ ವೇಗೇನಾಭ್ಯುತ್ಪಪಾತ ಹ ॥ ೧
ಉದ್ಯತಾಯುಧನಿಸ್ತ್ರಿಂಶೋ ರಥೇ ಸುಸಮಲಂಕೃತೇ ।
ಕಾಲಾಶ್ವಯುಕ್ತೇ ಮಹತಿ ಸ್ಥಿತಃ ಕಾಲಾಂತಕೋಪಮಃ ॥ ೨
ಮಹಾಪ್ರಮಾಣಮುದ್ಯಮ್ಯ ವಿಪುಲಂ ವೇಗವದ್ದೃಢಮ್ ।
ಧನುರ್ಭೀಮಂ ಪರಾಮೃಶ್ಯ ಶರಾಂಶ್ಚಾಮಿತ್ರಶಾತನಾನ್ ॥ ೩
ತಂ ದದರ್ಶ ಮಹೇಷ್ವಾಸೋ ರಥೇ ಸುಸಮಲಂಕೃತಃ ।
ಅಲಂಕೃತಮಮಿತ್ರಘ್ನಂ ರಾಘವಸ್ಯಾನುಜಂ ಬಲೀ ॥ ೪
ಹನುಮತ್ಪೃಷ್ಠಮಾಸೀನಮುದಯಸ್ಥರವಿಪ್ರಭಮ್ ।
ಉವಾಚೈನಂ ಸಮಾರಬ್ಧಃ ಸೌಮಿತ್ರಿಂ ಸವಿಭೀಷಣಮ್ ॥ ೫

## ಸರ್ಗ ೮೮

### ಲಕ್ಷ್ಮಣನಿಗೂ ಇಂದ್ರಜಿತುವಿಗೂ ಘೋರವಾದ ಯುದ್ಧ.

ವಿಭೀಷಣನ ನುಡಿಯನ್ನು ಕೇಳಿದ ರಾವಣಿಯು ಕೋಪಾವಿಷ್ಟನಾಗಿ ಪರುಷವಚನಗಳಿಂದ ವಿಭೀಷಣನನ್ನು ನಿಂದಿಸುತ್ತ ಮುಂದಕ್ಕೆ ನುಗ್ಗಿದನು. ಕಪ್ಪುಬಣ್ಣದ ಕುದುರೆಗಳನ್ನು ಹೂಡಿದ್ದ ಅಲಂಕೃತವಾದ ಮಹಾರಥದಲ್ಲಿ ಕುಳಿತು ಖಡ್ಗಾದ್ಯಾಯುಧಗಳನ್ನು ಹಿಡಿದಿದ್ದ ಇಂದ್ರಜಿತು ಕಾಲಯಮನಂತೆ ಕಂಡನು (೧-೨). ಆತನು ಬಹಳ ಉದ್ದವಾಗಿಯೂ ದಪ್ಪವಾಗಿಯೂ ಇದ್ದ ದೃಢವಾದ ಭೀಕರಧನುಸ್ಸನ್ನು ಹಿಡಿದು, ಶತ್ರುವಿಧ್ವಂಸಕಗಳಾದ ಬಾಣಗಳನ್ನು ಹಿರಿದು, ಯುದ್ಧಸನ್ನದ್ಧನಾದನು (೩). ಆಗ ಪರಂತಪನೂ, ರಾಮಾನುಜನೂ, ತನ್ನ ತೇಜೋವಿಶೇಷದಿಂದ ಭೂಷಿತನೂ ಆದ ಲಕ್ಷ್ಮಣನು ಹನುಮಂತನ ಹೆಗಲನ್ನೇರಿ ಕುಳಿತು, ಉದಯಶಿಖರಾರೂಢನಾದ ರವಿಯಂತೆ ಕಂಗೊಳಿಸಿದನು. ಧನುರ್ವಿದ್ಯಾಕೋವಿದನಾದ ಇಂದ್ರಜಿತು ತನ್ನ ರಥದಲ್ಲಿ

**ತಾಂಶ್ಚ ವಾನರಶಾರ್ದೂಲಾನ್ ಪಶ್ಯಧ್ವಂ ಮೇ ಪರಾಕ್ರಮಮ್ ।**
**ಅದ್ಯ ಮತ್ಕಾರ್ಮುಕೋತ್ಸೃಷ್ಟಂ ಶರವರ್ಷಂ ದುರಾಸದಮ್ ॥ ೬**

**ಮುಕ್ತಂ ವರ್ಷಮಿವಾಕಾಶೇ ವಾರಯಿಷ್ಯಥ ಸಂಯುಗೇ ।**
**ಅದ್ಯ ವೋ ಮಾಮಕಾ ಬಾಣಾ ಮಹಾಕಾರ್ಮುಕನಿಃಸೃತಾಃ ॥ ೭**

**ವಿಧಮಿಷ್ಯಂತಿ ಗಾತ್ರಾಣಿ ತೂಲರಾಶಿಮಿವಾನಲಃ ।**
**ತೀಕ್ಷ್ಣಸಾಯಕನಿರ್ಭಿನ್ನಾನ್ ಶೂಲಶಕ್ತ್ಯೃಷ್ಟಿತೋಮರೈಃ ॥ ೮**

**ಅದ್ಯ ವೋ ಗಮಯಿಷ್ಯಾಮಿ ಸರ್ವಾನೇವ ಯಮಕ್ಷಯಮ್ ।**
**ಕ್ಷಿಪತಃ ಶರವರ್ಷಾಣಿ ಕ್ಷಿಪ್ರಹಸ್ತಸ್ಯ ಮೇ ಯುಧಿ ॥ ೯**

**ಜೀಮೂತಸ್ಯೇವ ನದತಃ ಕಃ ಸ್ಥಾಸ್ಯತಿ ಮಮಾಗ್ರತಃ ।**
**ರಾತ್ರಿಯುದ್ಧೇ ಮಯಾ ಪೂರ್ವಂ ವಜ್ರಾಶನಿಸಮೈಃ ಶರೈಃ ॥ ೧೦**

**ಶಾಯಿತೌ ಸ್ಥೋ ಮಯಾ ಭೂಮೌ ವಿಸಂಜ್ಞೌ ಸಪುರಃಸರೌ ।**
**ಸ್ಮೃತಿರ್ನ ತೇಽಸ್ತಿ ವಾ ಮನ್ಯೇ ವ್ಯಕ್ತಂ ವಾ ಯಮಸಾದನಮ್ ॥ ೧೧**

---

ಕುಳಿತು ಮುಂದೆ ಬಂದು ಅವರೆಲ್ಲರನ್ನೂ ನೋಡಿ ಹೀಗೆಂದನು (೪-೫) : "ಎಲೈ ಲಕ್ಷ್ಮಣ, ವಿಭೀಷಣ ಮತ್ತು ವಾನರರೆ, ಇಂದು ನನ್ನ ಪರಾಕ್ರಮವನ್ನು ಕಣ್ಣಿಂದ ನೋಡಿರಿ! ಆಕಾಶದಿಂದ ಸುರಿಯುವ ವರ್ಷಧಾರೆಯಂತೆ, ನನ್ನ ಕಾರ್ಮುಕದಿಂದ ಸತತವಾಗಿ ಸುರಿಯುವ ಶರವೃಷ್ಟಿಯನ್ನು ತಡೆಯಿರಿ, ನೋಡೋಣ! (೬-೭). ಇಂದು ನನ್ನ ಧನುಸ್ಸಿನಿಂದ ಹೊರಚಿಮ್ಮುವ ಬಾಣಗಣಗಳು, ಬೆಂಕಿಯು ಅರಳೆಯನ್ನು ಸುಡುವಂತೆ, ನಿಮ್ಮ ಗಾತ್ರಗಳನ್ನು ಸುಟ್ಟು ವಿಧ್ವಂಸಗೊಳಿಸುವುವು. ಕೂರಂಬುಗಳಿಂದಲೂ ಶೂಲ ಶಕ್ತಿ ಋಷ್ಟಿ* ತೋಮರಾದ್ಯಾಯುಧಗಳಿಂದಲೂ ನಿಮ್ಮೆಲ್ಲರನ್ನೂ ಇಂದು ಯಮಸದನಕ್ಕಟ್ಟುವೆನು! (೮-೯). ಲಘುಹಸ್ತನಾದ ನಾನು ರಣರಂಗದಲ್ಲಿ ಶರವರ್ಷಗಳನ್ನು ಸುರಿಸುತ್ತ ಮೇಘದಂತೆ ಗರ್ಜಿಸುತ್ತಿದ್ದರೆ, ನನ್ನೆದುರಿಗೆ ಯಾವನು ನಿಂತಾನು? ಎಲೈ ಲಕ್ಷ್ಮಣ, ಹಿಂದೆ ರಾತ್ರಿ ಯುದ್ಧದಲ್ಲಿ ನಾನು ಸಿಡಿಲಿಗೆ ಸಮವಾದ ಸಾಯಕಗಳನ್ನು ಹೊಡೆದು, ನಿನ್ನನ್ನೂ ರಾಮನನ್ನೂ ನಿನ್ನ ಪರಿವಾರಗಳನ್ನೂ ಮೂರ್ಛೆಗೊಳಿಸಿ ನೆಲದಮೇಲೊರಗಿಸಿ ಬಂದಿದ್ದೇನೆ. ಇದೆಲ್ಲವೂ ನಿನಗೆ ಮರೆತುಹೋಯಿತೋ ಹೇಗೆ? ಅಥವಾ ನಿಮ್ಮೆಲ್ಲರಿಗೂ

---

* ಋಷ್ಟಿ = ಎರಡು ಅಲಗುಗಳುಳ್ಳ ಕತ್ತಿ.

ಆಶೀವಿಷಮಿವ ಕ್ರುದ್ಧಂ ಯನ್ಮಾಂ ಯೋದ್ಧುಂ ವ್ಯವಸ್ಥಿತಃ ।
ತಚ್ಛ್ರುತ್ವಾ ರಾಕ್ಷಸೇಂದ್ರಸ್ಯ ಗರ್ಜಿತಂ ಲಕ್ಷ್ಮಣಸ್ತದಾ ॥ ೧೨
ಅಭೀತವದನಃ ಕ್ರುದ್ಧೋ ರಾವಣಿಂ ವಾಕ್ಯಮಬ್ರವೀತ್ ।
ಉಕ್ತಶ್ಚ ದುರ್ಗಮಃ ಪಾರಃ ಕಾರ್ಯಾಣಾಂ ರಾಕ್ಷಸ ತ್ವಯಾ ॥ ೧೩
ಕಾರ್ಯಾಣಾಂ ಕರ್ಮಣಾ ಪಾರಂ ಯೋ ಗಚ್ಛತಿ ಸ ಬುದ್ಧಿಮಾನ್ ।
ಸ ತ್ವಮರ್ಥಸ್ಯ ಹೀನಾರ್ಥೋ ದುರವಾಪಸ್ಯ ಕೇನಚಿತ್ ॥ ೧೪
ವಚೋ ವ್ಯಾಹೃತ್ಯ ಜಾನೀಷೇ ಕೃತಾರ್ಥೋಽಸ್ಮೀತಿ ದುರ್ಮತೇ ।
ಅಂತರ್ಧಾನಗತೇನಾಜೌ ಯಸ್ತ್ವಯಾಚರಿತಸ್ತದಾ ॥ ೧೫
ತಸ್ಕರಾಚರಿತೋ ಮಾರ್ಗೋ ನೈಷ ವೀರನಿಷೇವಿತಃ ।
ಯಥಾ ಬಾಣಪಥಂ ಪ್ರಾಪ್ಯ ಸ್ಥಿತೋಽಹಂ ತವ ರಾಕ್ಷಸ ॥ ೧೬
ದರ್ಶಯಸ್ವಾದ್ಯ ತತ್ತೇಜೋ ವಾಚಾ ತ್ವಂ ಕಿಂ ವಿಕತ್ಥಸೇ ।
ಏವಮುಕ್ತೋ ಧನುರ್ಭೀಮಂ ಪರಾಮೃಶ್ಯ ಮಹಾಬಲಃ ॥ ೧೭

---

ಮೃತ್ಯುವು ಸಮೀಪಿಸಿದೆಯೆಂದು ನನಗೆ ತೋರುತ್ತದೆ! (೧೦-೧೧). ಕೆರಳಿದ ಕಾಲಸರ್ಪದಂತಿರುವ ನನ್ನೊಡನೆ ಮತ್ತೆ ಯುದ್ಧಕ್ಕೆ ಬಂದಿರುವೆಯಲ್ಲ!" ಎಂದನು. ಆ ರಾಕ್ಷಸನಾಯಕನ ವಾಗ್ಡಂಬರವನ್ನು ಕೇಳಿ ಧೀರನಾದ ಲಕ್ಷ್ಮಣನು ಕ್ರೋಧದಿಂದ "ಎಲೈ ರಾಕ್ಷಸ, ಅಸಾಧ್ಯವಾದ ಕಾರ್ಯಗಳ ನಿರ್ವಾಹವನ್ನು ಬಾಯಿಮಾತಿನಿಂದ ಮಾತ್ರವೇ ಹೇಳಿ ಮುಗಿಸುತ್ತಿದ್ದೀಯೆ (೧೨-೧೩). ಅಂಥ ಕಾರ್ಯಗಳನ್ನು ಯಾವನು ಕೃತಿಯಿಂದ ಮಾಡಿ ಮುಗಿಸುವನೋ ಆತನೇ ಬುದ್ಧಿಶಾಲಿ. ನೀನಾದರೋ ಕೃತಿಯಿಂದ ಸಾಧಿಸಲಾರದೆ, ಯಾರಿಗೂ ಅಶಕ್ಯವಾದ ಕಾರ್ಯವನ್ನು ಮಾತಿನಿಂದಲೇ ಮುಗಿಸಿ 'ಆಹಾ! ನಾನು ಧನ್ಯ' ಎಂದುಕೊಳ್ಳುತ್ತಿದ್ದೀಯೆ! ಎಲಾ ದುರಾತ್ಮ, ಮೋಸದಿಂದ ಕಣ್ಮರೆಯಾಗಿ ನಿಂತು, ಆಗ ನಮ್ಮನ್ನು ಮೂರ್ಛೆಗೊಳಿಸಿದೆ (೧೪-೧೫). ಅದು ಕಳ್ಳರು ತುಳಿಯುವ ದಾರಿ; ವೀರರ ದಾರಿಯಲ್ಲ! ನಿನ್ನ ಬಾಣಗಳಿಗೆ ಈಗ ಎದೆಗೊಟ್ಟು ನಿಂತಿದ್ದೇನೆ. ಎಲ್ಲಿ, ನಿನ್ನ ಶೌರ್ಯವನ್ನು ತೋರಿಸು! ಏಕೆ ಹೀಗೆ ಬಡಾಯಿ ಕೊಚ್ಚುತ್ತೀಯೆ?" ಎಂದು ಪ್ರತ್ಯುತ್ತರಕೊಟ್ಟನು (೧೬-೧೭).

ಸಸರ್ಜ ನಿಶಿತಾನ್ ಬಾಣಾನಿಂದ್ರಜಿತ್ ಸಮಿತಿಂಜಯಃ ।
ತೇ ನಿಸೃಷ್ಟಾ ಮಹಾವೇಗಾಃ ಶರಾಃ ಸರ್ಪವಿಷೋಪಮಾಃ ॥ ೧೮

ಸಂಪ್ರಾಪ್ಯ ಲಕ್ಷ್ಮಣಂ ಪೇತುಃ ಶ್ವಸಂತ ಇವ ಪನ್ನಗಾಃ ।
ಶರೈರತಿಮಹಾವೇಗೈರ್ವೇಗವಾನ್ ರಾವಣಾತ್ಮಜಃ ॥ ೧೯

ಸೌಮಿತ್ರಿಮಿಂದ್ರಜಿದ್ಯುದ್ಧೇ ವಿವ್ಯಾಧ ಶುಭಲಕ್ಷಣಮ್ ।
ಸ ಶರೈರತಿವಿದ್ಧಾಂಗೋ ರುಧಿರೇಣ ಸಮುಕ್ಷಿತಃ ॥ ೨೦

ಶುಶುಭೇ ಲಕ್ಷ್ಮಣಃ ಶ್ರೀಮಾನ್ ವಿಧೂಮ ಇವ ಪಾವಕಃ ।
ಇಂದ್ರಜಿತ್ತ್ವಾತ್ಮನಃ ಕರ್ಮ ಪ್ರಸಮೀಕ್ಷ್ಯಾಧಿಗಮ್ಯ ಚ ॥ ೨೧

ವಿನದ್ಯ ಸುಮಹಾನಾದಮಿದಂ ವಚನಮಬ್ರವೀತ್ ।
ಪತ್ರಿಣಃ ಶಿತಧಾರಾಸ್ತೇ ಶರಾ ಮತ್ಕಾರ್ಮುಕಚ್ಯುತಾಃ ॥ ೨೨

ಆದಾಸ್ಯಂತೇಽದ್ಯ ಸೌಮಿತ್ರೇ ಜೀವಿತಂ ಜೀವಿತಾಂತಗಾಃ ।
ಅದ್ಯ ಗೋಮಾಯುಸಂಘಾಶ್ಚ ಶ್ಯೇನಸಂಘಾಶ್ಚ ಲಕ್ಷ್ಮಣ ॥ ೨೩

---

ಒಡನೆಯೇ ಶೂರಾಗ್ರೇಸರನಾದ ಇಂದ್ರಜಿತು ತನ್ನ ಭೀಮಚಾಪವನ್ನು ಹಿಡಿದು ನಿಶಿತಾಸ್ತ್ರಗಳನ್ನು ಬಿಡತೊಡಗಿದನು. ಸರ್ಪವಿಷದಂತೆ ಉಗ್ರವಾದ ಆ ಕ್ರೂರಶರಗಳು ವೇಗದಿಂದ ಬಂದು (ಲಕ್ಷ್ಮಣನ ಕವಚಕ್ಕೆ ತಾಗಿ), ನಿಡುಸುಯ್ಯುವ ಸರ್ಪಗಳಂತೆ ನೆಲದಮೇಲೆ ಬೀಳುತ್ತಿದ್ದವು (೧೮-೧೯). ಹೀಗೆ ವೇಗಶಾಲಿಗಳಾದ ಸರಳುಗಳಿಂದ ರಾವಣತನಯನು ಲಕ್ಷ್ಮಣನಿಗೆ ಗುರಿಯಿಟ್ಟು ಹೊಡೆಯತೊಡಗಲು, ಲಕ್ಷ್ಮಣನ ದೇಹವು ಗಾಯಗೊಂಡು ರಕ್ತವು ಸುರಿಯಿತು. ರುಧಿರಸಿಕ್ತನಾದ ಲಕ್ಷ್ಮಣನು ಹೊಗೆಯಿಲ್ಲದ ಅಗ್ನಿಜ್ವಾಲೆಯಂತೆ ಕಂಗೊಳಿಸಿದನು (೨೦-೨೧). ತನ್ನ ಸಾಮರ್ಥ್ಯವು ಸಫಲವಾಗುತ್ತಿರುವುದನ್ನು ಕಂಡು ಇಂದ್ರಜಿತು ಗಟ್ಟಿಯಾಗಿ ಬೊಬ್ಬಿರಿದು "ಎಲೈ ಸೌಮಿತ್ರಿ, ಮೊನಚಾದ ನನ್ನ ಕಂಕಪತ್ರಗಳು* ಬಿಲ್ಲಿನಿಂದ ಸಿಡಿದು ಬಂದು ನಿನ್ನ ಪ್ರಾಣವನ್ನು ಈ ದಿನ ಹೀರುತ್ತವೆ! ಸತ್ತುಬಿದ್ದಿರುವ ನಿನ್ನಮೇಲೆ ನರಿಗಳೂ ಗಿಡಗಗಳೂ ಹದ್ದುಗಳೂ ಈ ದಿನವೇ ಬಂದೆರಗಲಿ!

* ಕಂಕಪತ್ರ = ಗರಿಗಟ್ಟಿದ ಸರಳು, ಪುಂಖಾಂಕಿತ ಶರ.

ಗೃಧ್ರಾಶ್ಚ ನಿಪತಂತು ತ್ವಾಂ ಗತಾಸುಂ ನಿಹತಂ ಮಯಾ ।
ಅದ್ಯ ಯಾಸ್ಯತಿ ಸೌಮಿತ್ರೇ ಕರ್ಣಗೋಚರತಾಂ ತವ ॥ ೨೪

ತರ್ಜನಂ ಯಮದೂತಾನಾಂ ಸರ್ವಭೂತಭಯಾವಹಮ್ ।
ಕ್ಷತ್ರಬಂಧುಃ ಸದಾನಾರ್ಯೋ ರಾಮಃ ಪರಮದುರ್ಮತಿಃ ॥ ೨೫

ಭಕ್ತಂ ಭ್ರಾತರಮದ್ಯೈವ ತ್ವಾಂ ದ್ರಕ್ಷ್ಯತಿ ಮಯಾ ಹತಮ್ ।
ವಿಶಸ್ತಕವಚಂ ಭೂಮೌ ವ್ಯಪವಿದ್ಧಶರಾಸನಮ್ ॥ ೨೬

ಹೃತೋತ್ತಮಾಂಗಂ ಸೌಮಿತ್ರೇ ತ್ವಾಮದ್ಯ ನಿಹತಂ ಮಯಾ ।
ಇತಿ ಬ್ರುವಾಣಂ ಸಂರಬ್ಧಂ ಪರುಷಂ ರಾವಣಾತ್ಮಜಮ್ ॥ ೨೭

ಹೇತುಮದ್ವಾಕ್ಯಮತ್ಯರ್ಥಂ ಲಕ್ಷ್ಮಣಃ ಪ್ರತ್ಯುವಾಚ ಹ ।
ವಾಗ್ಬಲಂ ತ್ಯಜ ದುರ್ಬುದ್ಧೇ ಕ್ರೂರಕರ್ಮಾಸಿ ರಾಕ್ಷಸ ॥ ೨೮

ಅಥ ಕಸ್ಮಾದ್ವದಸ್ಯೇತತ್ ಸಂಪಾದಯ ಸುಕರ್ಮಣಾ ।
ಅಕೃತ್ವಾ ಕತ್ಥಸೇ ಕರ್ಮ ಕಿಮರ್ಥಮಿಹ ರಾಕ್ಷಸ ॥ ೨೯

---

(೨೨-೨೩). ಸಕಲ ಜೀವಿಗಳನ್ನೂ ಅಂಜಿಸುವ ಯಮದೂತರ ಭೀಕರ ಗರ್ಜನೆಯು ಈ ದಿನವೇ ನಿನ್ನ ಕಿವಿಗೆ ಕೇಳಿಸುವುದು! ಕ್ಷತ್ರಿಯನೀಚನೂ ಅಯೋಗ್ಯನೂ ಆದ ರಾಮನು ಮೃತನಾದ ನಿನ್ನನ್ನು ಈ ದಿನವೇ ನೋಡುವನು! ಆ ದುರುಳನು ತನ್ನ ಭಕ್ತನೂ ಸೋದರನೂ ಆದ ನಿನ್ನನ್ನು ನನ್ನ ಕೈಯಿಂದ ಕೊಲ್ಲಿಸಿ ಕಣ್ಣಾರೆ ನೋಡುವನು! (೨೪-೨೫). ಹರಿದ ಕವಚ, ಮುರಿದ ಬಿಲ್ಲು, ತರಿದ ತಲೆ – ಇವುಗಳೊಡನೆ ನೆಲದ ಮೇಲುರುಳಿದ ನಿನ್ನನ್ನು, ಸುಮಿತ್ರಾತನಯ, ರಾಮನು ಈ ದಿನವೇ ನೋಡುವನು!" ಎಂದು ಕರ್ಣಕಠೋರವಾದ ಮಾತನ್ನಾಡಿದನು (೨೬-೨೭). ಆಗ ಲಕ್ಷ್ಮಣನು ಯುಕ್ತಿಯುಕ್ತವಾದ ನುಡಿಯಿಂದ ಸರಿಯಾಗಿ ಉತ್ತರಕೊಟ್ಟನು: "ಛೀ! ಖೂಳ, ಬಿಡು ನಿನ್ನ ಕಟು ವಾಗ್ಜಾಲವನ್ನು! ಅತ್ಯಂತ ಕ್ರೂರನಾದ ರಾಕ್ಷಸ ನೀನು. ಮತ್ತೆ ಮತ್ತೆ ಏಕೆ ಹೀಗೆ ಹೇಳುವೆ? ಕೃತಿಯಿಂದ ಮಾಡಿ ಸಾಧಿಸು. ಏನನ್ನೂ ಸಾಧಿಸದೆ ವ್ಯರ್ಥವಾಗಿ ಏಕೆ ಗರ್ವದಿಂದ ಹಲುಬುವೆ? (೨೮-೨೯).

ಕುರು ತತ್ ಕರ್ಮ ಯೇನಾಹಂ ಶ್ರದ್ದಧ್ಯಾಂ ತವ ಕತ್ಥನಮ್ ।
ಅನುಕ್ತ್ವಾ ಪರುಷಂ ವಾಕ್ಯಂ ಕಿಂಚಿದಪ್ಯನವಕ್ಷಿಪನ್ ॥ ೩೦

ಅವಿಕತ್ಥನ್ ವಧಿಷ್ಯಾಮಿ ತ್ವಾಂ ಪಶ್ಯ ಪುರುಷಾಧಮ ।
ಇತ್ಯುಕ್ತ್ವಾ ಪಂಚ ನಾರಾಚಾನಾಕರ್ಣಾಪೂರಿತಾನ್ ಶಿತಾನ್ ॥ ೩೧

ನಿಜಘಾನ ಮಹಾವೇಗಾನ್ ಲಕ್ಷ್ಮಣೋ ರಾಕ್ಷಸೋರಸಿ ।
ಸುಪತ್ರವಾಜಿತಾ ಬಾಣಾ ಜ್ವಲಿತಾ ಇವ ಪನ್ನಗಾಃ ॥ ೩೨

ನೈರ್ಋತೋರಸ್ಯಭಾಸಂತ ಸವಿತೂ ರಶ್ಮಯೋ ಯಥಾ ।
ಸ ಶರೈರಾಹತಸ್ತೇನ ಸರೋಷೋ ರಾವಣಾತ್ಮಜಃ ॥ ೩೩

ಸುಪ್ರಯುಕ್ತೈಸ್ತ್ರಿಭಿರ್ಬಾಣೈಃ ಪ್ರತಿವಿವ್ಯಾಧ ಲಕ್ಷ್ಮಣಮ್ ।
ಸ ಬಭೂವ ತದಾ ಭೀಮೋ ನರರಾಕ್ಷಸಸಿಂಹಯೋಃ ॥ ೩೪

ವಿಮರ್ದಸ್ತುಮುಲೋ ಯುದ್ಧೇ ಪರಸ್ಪರಜಯೈಷಿಣೋಃ ।
ಉಭೌ ಹಿ ಬಲಸಂಪನ್ನಾವುಭೌ ವಿಕ್ರಮಶಾಲಿನೌ ॥ ೩೫

---

ಯಾವುದಾದರೊಂದು ಸಾಹಸಕೃತ್ಯವನ್ನು ಮಾಡಿತೋರಿಸು. ಆಗ ನಿನ್ನ ಬಾಯಿಬಡುಕತನವನ್ನು ದಿಟವೆಂದು ನಂಬಿಯೇನು! ನಿನ್ನಂತೆ ನಾನು ಚುಚ್ಚುಮಾತನ್ನಾಡದೆ, ಯಾರನ್ನೂ ನಿಂದಿಸದೆ, ನನ್ನನ್ನು ಹೊಗಳಿಕೊಳ್ಳದೆ, ಎಲೈ ಅಧಮ, ನಿನ್ನನ್ನು ಕೊಲ್ಲುವೆನು, ನೋಡುತ್ತಿರು!" ಎಂದನು (೩೦–೩೧). ಒಡನೆಯೇ ನಿಶಿತಾಗ್ರಗಳಾದ ಐದು ನಾರಾಚಗಳನ್ನು ಹೂಡಿ ಆಕರ್ಣಾಂತವಾಗಿ ಸೆಳೆದು ಇಂದ್ರಜಿತುವಿನ ಎದೆಗೆ ಗುರಿಯಿಟ್ಟು ವೇಗದಿಂದ ಬಿಗಿದನು. ಕೆರಳಿದ ಸರ್ಪಗಳಂತೆ ಎರಗಿದ ಪುಂಖಾಂಕಿತಗಳಾದ ಆ ಶರಗಳು ಇಂದ್ರಜಿತುವಿನ ಎದೆಯಲ್ಲಿ ನಾಟಿ, ಸೂರ್ಯರಶ್ಮಿಗಳಂತೆ ಬೆಳಗಿದವು. ಆಗ ರಾವಣತನಯನು ಕ್ರೋಧೋದ್ದೀಪಿತನಾದನು (೩೨–೩೩). ಅವನು ಆವೇಶದಿಂದ ಮೂರು ಕೂರಂಬುಗಳನ್ನು ಹಿರಿದು ಗುರಿಯಿಟ್ಟು ಲಕ್ಷ್ಮಣನಿಗೆ ಹೊಡೆದನು. ಹೀಗೆ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಛಲದಿಂದ ಸಿಂಹಸದೃಶರಾದ ಆ ವೀರರಿಬ್ಬರೂ ಘೋರವಾದ ತುಮುಲಯುದ್ಧವನ್ನಾರಂಭಿಸಿದರು. ಇಬ್ಬರೂ ಬಲಾಢ್ಯರು; ಇಬ್ಬರೂ

ಉಭಾವಪಿ ಸುವಿಕ್ರಾಂತೌ ಸರ್ವಶಸ್ತ್ರಾಸ್ತ್ರಕೋವಿದೌ ।
ಉಭೌ ಪರಮದುರ್ಜೇಯಾವತುಲ್ಯಬಲತೇಜಸೌ ॥ ೩೬

ಯುಯುಧಾತೇ ತದಾ ವೀರೌ ಗ್ರಹಾವಿವ ನಭೋಗತೌ ।
ಬಲವೃತ್ರಾವಿವಾಭೀತೌ ಯುಧಿ ತೌ ದುಷ್ಪ್ರಧರ್ಷಣೌ ॥ ೩೭

ಯುಯುಧಾತೇ ಮಹಾತ್ಮಾನೌ ತದಾ ಕೇಸರಿಣಾವಿವ ।
ಬಹೂನವಸೃಜಂತೌ ಹಿ ಮಾರ್ಗಣೌಘಾನವಸ್ಥಿತೌ ॥ ೩೮

ನರರಾಕ್ಷಸಸಿಂಹೌ ತೌ ಪ್ರಹೃಷ್ಟಾವಭ್ಯಯುಧ್ಯತಾಮ್ ॥

ಸುಸಂಪ್ರಹೃಷ್ಟೌ ನರರಾಕ್ಷಸೋತ್ತಮೌ
ಜಯೈಷಿಣೌ ಮಾರ್ಗಣಚಾಪಧಾರಿಣೌ ।
ಪರಸ್ಪರಂ ತೌ ಪ್ರವವರ್ಷತುರ್ಭೃಶಂ
ಶರೌಘವರ್ಷೇಣ ಬಲಾಹಕಾವಿವ ॥ ೩೯

---

ಪರಾಕ್ರಮಿಗಳು (೩೪-೩೫). ಇಬ್ಬರೂ ಯುದ್ಧದಲ್ಲಿ ಚೆನ್ನಾಗಿ ಪಳಗಿದವರು; ಇಬ್ಬರೂ ಸರ್ವಶಸ್ತ್ರಾಸ್ತ್ರಕೋವಿದರು. ಈರ್ವರೂ ಜಯಿಸಲು ಅಶಕ್ಯರು. ಈರ್ವರೂ ಅಸದೃಶತೇಜಸ್ವಿಗಳು. ದುರ್ಧರ್ಷರಾದ ಆ ವೀರರು ಗಗನದಲ್ಲಿ ಎರಡು ಗ್ರಹಗಳಂತೆ ಹೋರಾಡಿದರು. ದೇವೇಂದ್ರ* ವೃತ್ರಾಸುರರಂತೆ ಕದನವಾಡಿದರು (೩೬-೩೭). ಕುಪಿತಕೇಸರಿಗಳಂತೆ ಕಾದಾಡಿದರು. ಪುರುಷಶ್ರೇಷ್ಠನಾದ ಲಕ್ಷ್ಮಣನೂ ರಾಕ್ಷಸಶ್ರೇಷ್ಠನಾದ ಮೇಘನಾದನೂ ರಣದಿಂದ ಕದಲದೆ ಸ್ಥಿರವಾಗಿ ನಿಂತು, ಶರರಾಶಿಗಳನ್ನು ಪ್ರಯೋಗಿಸುತ್ತ ಉತ್ಸಾಹದಿಂದ ಯುದ್ಧಮಾಡಿದರು (೩೮). ವಿಜಯಾಪೇಕ್ಷಿಗಳಾದ ಅವರಿಬ್ಬರೂ ಧನುರ್ಬಾಣಗಳನ್ನು ಧರಿಸಿ, ಮೇಘಗಳು ಧಾರಾಕಾರವಾಗಿ ಮಳೆಸುರಿಸುವಂತೆ, ಶರರಾಶಿಗಳನ್ನು ಪ್ರಯೋಗಿಸುತ್ತ ಸಂಗ್ರಾಮವನ್ನು

---

* ಮೂಲದಲ್ಲಿರುವ 'ಬಲ' ಶಬ್ದಕ್ಕೆ ದೇವೇಂದ್ರನೆಂದು ಅರ್ಥ. ಬಲನೆಂಬ ಅಸುರನನ್ನು ಸಂಹರಿಸಿದ್ದರಿಂದ ಅವನಿಗೆ 'ಬಲಭಿತ್' ಎಂದು ಹೆಸರಿದೆ. ಭೀಮಸೇನನನ್ನು ಭೀಮ ಎಂಬಂತೆ ಇಲ್ಲಿ ಬಲಶಬ್ದದ ಪ್ರಯೋಗ. 'ನಾಮ್ನೈಕದೇಶೇ ನಾಮಗ್ರಹಣಮ್.'

ಅಭಿಪ್ರವೃದ್ಧೌ ಯುಧಿ ಯುದ್ಧಕೋವಿದೌ
ಶರಾಸಿಚಂಡೌ ಶಿತಶಸ್ತ್ರಧಾರಿಣೌ ।
ಅಭೀಕ್ಷ್ಣಮಾವಿವ್ಯಧತುರ್ಮಹಾಬಲೌ
ಮಹಾಹವೇ ಶಂಬರವಾಸವಾವಿವ ॥ ೪೦

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಾಶೀತಿತಮಃ ಸರ್ಗಃ



ನಡೆಸಿದರು (೩೯). ಕದನಕೋವಿದರಾದ ಅವರೀರ್ವರೂ ಶರಗಳನ್ನೂ ಖಡ್ಗಗಳನ್ನೂ ಹರಿತವಾದ ವಿವಿಧಾಯುಧಗಳನ್ನೂ ಹಿಡಿದು ಇಂದ್ರನೂ ಶಂಬರಾಸುರನೂ ಹೋರಾಡಿದಂತೆ ಭೀಕರವಾದ ಕಾಳಗವನ್ನು ನಡೆಸಿದರು* (೪೦).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತೆಂಟನೆಯ ಸರ್ಗ



* ೩೯-೪೦ನೆಯ ಶ್ಲೋಕಗಳು ಪ್ರಕ್ಷಿಪ್ತವೆಂದೂ ಸರ್ಗವು ಇಲ್ಲಿಗೆ ಮುಗಿಯುವುದಿಲ್ಲವೆಂದೂ ಕತಕವ್ಯಾಖ್ಯಾನದಲ್ಲಿ ಹೇಳಿದೆ.

## ಏಕೋನನವತಿತಮಃ ಸರ್ಗಃ

### ಸೌಮಿತ್ರಿಸಂಧುಕ್ಷಣಮ್

ತತಃ ಶರಂ ದಾಶರಥಿಃ ಸಂಧಾಯಾಮಿತ್ರಕರ್ಶನಃ ।
ಸಸರ್ಜ ರಾಕ್ಷಸೇಂದ್ರಾಯ ಕ್ರುದ್ಧಃ ಸರ್ಪ ಇವ ಶ್ವಸನ್ ॥ ೧

ತಸ್ಯ ಜ್ಯಾತಲನಿರ್ಘೋಷಂ ಸ ಶ್ರುತ್ವಾ ರಾವಣಾತ್ಮಜಃ ।
ವಿವರ್ಣವದನೋ ಭೂತ್ವಾ ಲಕ್ಷ್ಮಣಂ ಸಮುದೈಕ್ಷತ ॥ ೨

ತಂ ವಿವರ್ಣಮುಖಂ ದೃಷ್ಟ್ವಾ ರಾಕ್ಷಸಂ ರಾವಣಾತ್ಮಜಮ್ ।
ಸೌಮಿತ್ರಿಂ ಯುದ್ಧಸಂಯುಕ್ತಂ ಪ್ರತ್ಯುವಾಚ ವಿಭೀಷಣಃ ॥ ೩

ನಿಮಿತ್ತಾನ್ಯನುಪಶ್ಯಾಮಿ ಯಾನ್ಯಸ್ಮಿನ್ ರಾವಣಾತ್ಮಜೇ ।
ತ್ವರ ತೇನ ಮಹಾಬಾಹೋ ಭಗ್ನ ಏಷ ನ ಸಂಶಯಃ ॥ ೪

ತತಃ ಸಂಧಾಯ ಸೌಮಿತ್ರಿರ್ಬಾಣಾನಗ್ನಿಶಿಖೋಪಮಾನ್ ।
ಮುಮೋಚ ನಿಶಿತಾಂಸ್ತಸ್ಮಿನ್ ಸರ್ಪಾನಿವ ಮಹಾವಿಷಾನ್ ॥ ೫

### ಸರ್ಗ ೮೯

#### ಲಕ್ಷ್ಮಣನಿಗೂ ಇಂದ್ರಜಿತುವಿಗೂ ಭೀಕರವಾದ ಕದನ. ವಿಭೀಷಣನು ಲಕ್ಷ್ಮಣನನ್ನು ಪ್ರೋತ್ಸಾಹಿಸುವುದು

ಶತ್ರುವನ್ನು ಸಂಹರಿಸಬೇಕೆಂಬ ನಿಶ್ಚಯವನ್ನು ತಳೆದಿದ್ದ ಲಕ್ಷ್ಮಣನು ಕೆರಳಿದ ಸರ್ಪದಂತೆ ನಿಡುಸುಯ್ಯುತ್ತ, ಶರಗಳನ್ನು ಹೂಡಿ ಇಂದ್ರಜಿತುವಿನ ಮೇಲೆ ಪ್ರಯೋಗಿಸುತ್ತಿದ್ದನು. ಲಕ್ಷ್ಮಣನ ಧನುಷ್ಟಂಕಾರದ ಬಿರುಸು ಏರುತ್ತಲೇ ಹೋಗುವುದನ್ನು ಕೇಳಿ, ಇಂದ್ರಜಿತುವಿನ ಮುಖದ ಕಳೆ ಕುಂದಿತು! ಅವನು ಖಿನ್ನನಾಗಿ ಲಕ್ಷ್ಮಣನನ್ನೇ ನೋಡುತ್ತಿದ್ದನು (೧-೨). ರಾವಣತನಯನ ಮುಖವು ಬಣ್ಣಗೆಟ್ಟಿರುವುದನ್ನು ಗಮನಿಸಿದ ವಿಭೀಷಣನು ಯುದ್ಧನಿರತನಾದ ಸೌಮಿತ್ರಿಯ ಬಳಿಗೆ ಹೋಗಿ "ಲಕ್ಷ್ಮಣ, ಈ ರಾವಣ ಪುತ್ರನ ಮುಖಲಕ್ಷಣಗಳನ್ನು ನೋಡಿದರೆ, ಇವನು ಪರಾಜಿತನಾದಂತೆಯೇ; ಸಂದೇಹವಿಲ್ಲ. ಆದ್ದರಿಂದ, ಮಹಾಬಾಹು, ಇವನನ್ನು ಸಂಹರಿಸಲು ತ್ವರೆಮಾಡು" ಎಂದನು (೩-೪). ಆಮೇಲೆ ಸೌಮಿತ್ರಿಯು ಅಗ್ನಿಜ್ವಾಲೆ

ಶಕ್ರಾಶನಿಸಮಸ್ಪರ್ಶೈರ್ಲಕ್ಷ್ಮಣೇನಾಹತಃ ಶರೈಃ ।
ಮುಹೂರ್ತಮಭವನ್ಮೂಢಃ ಸರ್ವಸಂಕ್ಷುಭಿತೇಂದ್ರಿಯಃ ॥ ೬

ಉಪಲಭ್ಯ ಮುಹೂರ್ತೇನ ಸಂಜ್ಞಾಂ ಪ್ರತ್ಯಾಗತೇಂದ್ರಿಯಃ ।
ದದರ್ಶಾವಸ್ಥಿತಂ ವೀರಂ ವೀರೋ ದಶರಥಾತ್ಮಜಮ್ ॥ ೭

ಸೋಽಭಿಚಕ್ರಾಮ ಸೌಮಿತ್ರಿಂ ರೋಷಾತ್ ಸಂರಕ್ತಲೋಚನಃ ।
ಅಬ್ರವೀಚ್ಚೈನಮಾಸಾದ್ಯ ಪುನಃ ಸ ಪರುಷಂ ವಚಃ ॥ ೮

ಕಿಂ ನ ಸ್ಮರಸಿ ತದ್ಯುದ್ಧೇ ಪ್ರಥಮೇ ಮತ್ಪರಾಕ್ರಮಮ್ ।
ನಿಬದ್ಧಸ್ತ್ವಂ ಸಹ ಭ್ರಾತ್ರಾ ಯದಾ ಭುವಿ ವಿವೇಷ್ಟಸೇ ॥ ೯

ಯುವಾಂ ಖಲು ಮಹಾಯುದ್ಧೇ ಶಕ್ರಾಶನಿಸಮೈಃ ಶರೈಃ ।
ಶಾಯಿತೌ ಪ್ರಥಮಂ ಭೂಮೌ ವಿಸಂಜ್ಞೌ ಸಪುರಃಸರೌ ॥ ೧೦

---

ಗಳಂತೆಯೂ ಘೋರವಿಷಸರ್ಪಗಳಂತೆಯೂ ಇರುವ ಉಗ್ರವಾದ ನಿಶಿತಾಸ್ತ್ರಗಳನ್ನು ಹೂಡಿ ಹೊಡೆಯತೊಡಗಿದನು. ಇಂದ್ರನ ವಜ್ರಾಯುಧದಂತೆ ಬಿರುಸಿನಿಂದ ಬಡಿಯುವ ಬಾಣಗಳ ಹೊಡೆತಕ್ಕೆ ಇಂದ್ರಜಿತುವಿನ ಸರ್ವೇಂದ್ರಿಯಗಳೂ ವಿಚಲಿತವಾಗಲು, ಅವನು ತುಸುಹೊತ್ತಿನವರೆಗೆ ಏನುಮಾಡಬೇಕೆಂದು ತೋರದೆ ಬಸವಳಿದು ದಿಙ್ಮೂಢನಾದನು (೫-೬). ಅನಂತರ ಹಾಗೆಯೇ ಇಂದ್ರಿಯಗಳನ್ನು ವಶಕ್ಕೆ ತಂದು ಚೇತರಿಸಿಕೊಂಡು ಮುಂದೆ ವೀಕ್ಷಿಸಲು, ವೀರಾಗ್ರೇಸರನಾದ ದಶರಥಾತ್ಮಜನು ನಿಂತಿರುವುದು ಗೋಚರಿಸಿತು! ಇಂದ್ರಜಿತುವಿನ ಕಣ್ಣುಗಳು ಕೆಂಪಡರಿದವು (೭). ಅವನು ರೋಷದಿಂದ ಲಕ್ಷ್ಮಣನನ್ನು ಕುರಿತು ಪರುಷವಚನಗಳಿಂದ "ಎಲೈ ಲಕ್ಷ್ಮಣ, ಹಿಂದೆ ಪ್ರಥಮಯುದ್ಧದಲ್ಲಿಯೇ ವ್ಯಕ್ತವಾದ ನನ್ನ ಪರಾಕ್ರಮದ ಸ್ಮರಣೆ ನಿನಗಿಲ್ಲವಾಯಿತೆ? ನೀನು, ನಿನ್ನ ಅಣ್ಣ—ಇಬ್ಬರೂ ನನ್ನ ನಾಗಪಾಶಕ್ಕೆ ಸಿಕ್ಕಿ ನೆಲದಮೇಲೆ ಲಿಬಿಲಿಬಿಯೆಂದು ಹೊರಳಾಡಲಿಲ್ಲವೆ? (೮-೯). ನಿಮ್ಮೊಡನೆ ಘೋರಸಂಗ್ರಾಮವನ್ನು ಹೂಡಿದ ನಾನು ವಜ್ರಾಯುಧಸಮಾನಗಳಾದ ಶರಗಳಿಂದ ಜಡಿದು, ನಿಮ್ಮಿಬ್ಬರನ್ನೂ ನಿಮ್ಮ

ಸ್ಮೃತಿರ್ವಾ ನಾಸ್ತಿ ತೇ ಮನ್ಯೇ ವ್ಯಕ್ತಂ ವಾ ಯಮಸಾದನಮ್ ।
ಗಂತುಮಿಚ್ಛಸಿ ಯಸ್ಮಾತ್ತ್ವಂ ಮಾಂ ಧರ್ಷಯಿತುಮಿಚ್ಛಸಿ ॥ ೧೧

ಯದಿ ತೇ ಪ್ರಥಮೇ ಯುದ್ಧೇ ನ ದೃಷ್ಟೋ ಮತ್ಪರಾಕ್ರಮಃ ।
ಅದ್ಯ ತೇ ದರ್ಶಯಿಷ್ಯಾಮಿ ತಿಷ್ಠೇದಾನೀಂ ವ್ಯವಸ್ಥಿತಃ ॥ ೧೨

ಇತ್ಯುಕ್ತ್ವಾ ಸಪ್ತಭಿರ್ಬಾಣೈರಭಿವಿವ್ಯಾಧ ಲಕ್ಷ್ಮಣಮ್ ।
ದಶಭಿಸ್ತು ಹನೂಮಂತಂ ತೀಕ್ಷ್ಣಧಾರೈಃ ಶರೋತ್ತಮೈಃ ॥ ೧೩

ತತಃ ಶರಶತೇನೈವ ಸುಪ್ರಯುಕ್ತೇನ ವೀರ್ಯವಾನ್ ।
ಕ್ರೋಧಾದ್ದ್ವಿಗುಣಸಂರಬ್ಧೋ ನಿರ್ಬಿಭೇದ ವಿಭೀಷಣಮ್ ॥ ೧೪

ತದ್ದೃಷ್ಟ್ವೇಂದ್ರಜಿತಾ ಕರ್ಮ ಕೃತಂ ರಾಮಾನುಜಸ್ತದಾ ।
ಅಚಿಂತಯಿತ್ವಾ ಪ್ರಹಸನ್ನೈತತ್ ಕಿಂಚಿದಿತಿ ಬ್ರುವನ್ ॥ ೧೫

ಮುಮೋಚ ಸ ಶರಾನ್ ಘೋರಾನ್ ಸಂಗೃಹ್ಯ ನರಪುಂಗವಃ ।
ಅಭೀತವದನಃ ಕ್ರುದ್ಧೋ ರಾವಣಿಂ ಲಕ್ಷ್ಮಣೋ ಯುಧಿ ॥ ೧೬

---

ಪರಿವಾರಸಹಿತವಾಗಿ ನೆಲದಮೇಲುರುಳಿಸಲಿಲ್ಲವೆ? ಅದರ ಸ್ಮರಣೆ ಇಲ್ಲವೋ ಹೇಗೆ? ಅಥವಾ ಯಮಸದನಕ್ಕೆ ಹೋಗಲು ಬಯಸುತ್ತಿರುವೆ ಎಂದು ತೋರುತ್ತದೆ. ಆದ್ದರಿಂದಲೇ ನೀನು ನನ್ನೊಡನೆ ಹೋರಾಡಲು ಅಪೇಕ್ಷಿಸುತ್ತಿದ್ದೀಯೆ (೧೦-೧೧). ಹಿಂದಿನ ಯುದ್ಧದಲ್ಲಿ ನನ್ನ ಪರಾಕ್ರಮವನ್ನು ಸರಿಯಾಗಿ ಕಂಡಿಲ್ಲವಾದರೆ, ಈ ದಿನ ತೋರಿಸುತ್ತೇನೆ; ಕದಲದೆ ನಿಲ್ಲು" ಎಂದು ಹೇಳಿದನು. ಹೇಳಿದುದೇ ತಡ, ಏಳು ಬಾಣಗಳಿಂದ ಲಕ್ಷ್ಮಣನನ್ನು ನೋಯಿಸಿ ಹತ್ತು ಕೂರಂಬುಗಳಿಂದ ಹನುಮಂತನನ್ನು ಹೊಡೆದನು (೧೨-೧೩). ಇಮ್ಮಡಿಯಾಗಿ ಉಕ್ಕಿದ ಕೋಪಾವೇಶದಿಂದ ಆ ಇಂದ್ರಜಿತು ನೂರು ಬಾಣಗಳನ್ನು ಗುರಿಯಿಟ್ಟು ವಿಭೀಷಣನಿಗೆ ಬಿಗಿದು ಅವನ ದೇಹವನ್ನು ಕತ್ತಿದನು! ಇಂದ್ರಜಿತುವಿನ ಆ ಸಾಹಸಕೃತ್ಯವನ್ನು ವೀಕ್ಷಿಸಿದ ಲಕ್ಷ್ಮಣನು ನಗುತ್ತ "ಓಹೊ! ಏನೂ ಇಲ್ಲ! ಇದು ಯಾವ ದೊಡ್ಡ ಕೃತ್ಯ!" ಎಂದು ನುಡಿದು, ಘೋರಶರಗಳನ್ನು ರಾವಣಿಯಮೇಲೆ ಪ್ರಯೋಗಿಸಿದನು (೧೪-೧೫). ಆ ನರಶ್ರೇಷ್ಠನು ಮುಖದಲ್ಲಿ ಸ್ವಲ್ಪವೂ ಕುಂದದೆ ಕುಗ್ಗದೆ, ನಿರ್ಭೀತಿಯಿಂದ "ಎಲೈ ನಿಶಾಚರ, ರಣರಂಗಕ್ಕೆ

ನೈವಂ ರಣಗತಾಃ ಶೂರಾಃ ಪ್ರಹರಂತೇ ನಿಶಾಚರ ।
ಲಘುವಶ್ಚಾಲ್ಪವೀರ್ಯಾಶ್ಚ ಸುಖಾ ಹೀಮೇ ಶರಾಸ್ತವ ॥ ೧೭

ನೈವಂ ಶೂರಾಸ್ತು ಯುಧ್ಯಂತೇ ಸಮರೇ ಜಯಕಾಂಕ್ಷಿಣಃ ।
ಇತ್ಯೇವಂ ತಂ ಬ್ರುವಾಣಸ್ತು ಶರವರ್ಷೈರವಾಕಿರತ್ ॥ ೧೮

ತಸ್ಯ ಬಾಣೈಃ ಸುವಿಧ್ವಸ್ತಂ ಕವಚಂ ಹೇಮಭೂಷಿತಮ್ ।
ವ್ಯಶೀರ್ಯತ ರಥೋಪಸ್ಥೇ ತಾರಾಜಾಲಮಿವಾಂಬರಾತ್ ॥ ೧೯

ವಿಧೂತವರ್ಮಾ ನಾರಾಚೈರ್ಬಭೂವ ಸ ಕೃತವ್ರಣಃ ।
ಇಂದ್ರಜಿತ್ ಸಮರೇ ವೀರಃ ಪ್ರರೂಢ ಇವ ಸಾನುಮಾನ್ ॥ ೨೦

ತತಃ ಶರಸಹಸ್ರೇಣ ಸಂಕ್ರುದ್ಧೋ ರಾವಣಾತ್ಮಜಃ ।
ಬಿಭೇದ ಸಮರೇ ವೀರಂ ಲಕ್ಷ್ಮಣಂ ಭೀಮವಿಕ್ರಮಃ ॥ ೨೧

ವ್ಯಶೀರ್ಯತ ಮಹಾದಿವ್ಯಂ ಕವಚಂ ಲಕ್ಷ್ಮಣಸ್ಯ ಚ ।
ಕೃತಪ್ರತಿಕೃತಾನ್ಯೋನ್ಯಂ ಬಭೂವತುರಭಿದ್ರುತೌ ॥ ೨೨

---

ಘುಮುಕಿದ ಶೂರರು ಇಷ್ಟು ಜಳ್ಳಾಗಿ ಬಾಣಪ್ರಹಾರಗಳನ್ನೆಂದಿಗೂ ಮಾಡುವುದಿಲ್ಲ! ನಿಸ್ಸಾರಗಳಾದ ನಿನ್ನ ಶರಗಳಿಗೆ ಸತ್ತ್ವವೇ ಇಲ್ಲ! ಮೈಗೆ ಮುಟ್ಟಿದರೆ ಸುಖಕರವಾಗಿವೆ! (೧೭–೧೭). ವಿಜಯಕಾಂಕ್ಷಿಗಳಾದ ವೀರರು ಹೀಗೆ ಯುದ್ಧಮಾಡುವುದಿಲ್ಲ!" ಎಂದು ಹೇಳುತ್ತ ಶರವೃಷ್ಟಿಗಳಿಂದ ಇಂದ್ರಜಿತುವನ್ನು ಆಚ್ಛಾದಿಸಿದನು. ಅವನ ಶರಗಳ ಬಿರುಸಿಗೆ ಇಂದ್ರಜಿತುವಿನ ಹೇಮಭೂಷಿತವಾದ ಕವಚವು ಪುಡಿಪುಡಿಯಾಗಿ, ಆಕಾಶದಿಂದುದುರುವ ನಕ್ಷತ್ರಗಳಂತೆ ರಥದಲ್ಲಿ ಉದುರಿತು (೧೮–೧೯). ಇಂದ್ರಜಿತು ಧರಿಸಿದ್ದ ಕವಚವು ಹರಿಯಲಾಗಿ ಅವನ ಮೈಯಲ್ಲಿ ಲಕ್ಷ್ಮಣನ ನಾರಾಚಗಳು ನಾಟಿಕೊಳ್ಳಲು, ಆ ರಾಕ್ಷಸನು ಬೆಳೆದ ಮರಗಳಿಂದೊಪ್ಪುವ ಪರ್ವತದಂತೆ ಕಾಣಿಸಿದನು (೨೦). ಆಗ ಭೀಮಪರಾಕ್ರಮಿಯಾದ ರಾವಣಾತ್ಮಜನು ಅತ್ಯಂತ ಕ್ರುದ್ಧನಾಗಿ ಸಾವಿರ ಸರಳುಗಳನ್ನು ಗುರಿಯಿಟ್ಟು ಲಕ್ಷ್ಮಣನಿಗೆ ಹೊಡೆದನು. ಅದರ ರಭಸಕ್ಕೆ ಲಕ್ಷ್ಮಣನ ದಿವ್ಯವಾದ ಮಹಾಕವಚವೂ ನಿರ್ಭಿನ್ನವಾಯಿತು. ಅವರೀರ್ವರೂ ಮುಯ್ಯಿಗೆ ಮುಯ್ಯಿ ತೀರಿಸುತ್ತ, ನಿಟ್ಟುಸಿರು ಬಿಡುತ್ತ, ಸ್ಪರ್ಧೆಯಿಂದ ಒಬ್ಬರ

ಅಭೀಕ್ಷ್ಣಂ ನಿಃಶ್ವಸಂತೌ ತೌ ಯುಧ್ಯೇತಾಂ ತುಮುಲಂ ಯುಧಿ ।
ಶರಸಂಕೃತ್ತಸರ್ವಾಂಗೌ ಸರ್ವತೋ ರುಧಿರೋಕ್ಷಿತೌ ॥ ೨೩

ಸುದೀರ್ಘಕಾಲಂ ತೌ ವೀರಾವನ್ಯೋನ್ಯಂ ನಿಶಿತೈಃ ಶರೈಃ ।
ತತಕ್ಷತುರ್ಮಹಾತ್ಮಾನೌ ರಣಕರ್ಮವಿಶಾರದೌ ॥ ೨೪

ಬಭೂವತುಶ್ಚಾತ್ಮಜಯೇ ಯತ್ತೌ ಭೀಮಪರಾಕ್ರಮೌ ।
ತೌ ಶರೌಘೈಸ್ತದಾ ಕೀರ್ಣೌ ನಿಕೃತ್ತಕವಚಧ್ವಜೌ ॥ ೨೫

ಸ್ರವಂತೌ ರುಧಿರಂ ಚೋಷ್ಣಂ ಜಲಂ ಪ್ರಸ್ರವಣಾವಿವ ।
ಶರವರ್ಷಂ ತತೋ ಘೋರಂ ಮುಂಚತೋರ್ಭೀಮನಿಃಸ್ವನಮ್ ॥

ಸಾಸಾರಯೋರಿವಾಕಾಶೇ ನೀಲಯೋಃ ಕಾಲಮೇಘಯೋಃ ।
ತಯೋರಥ ಮಹಾನ್ ಕಾಲೋ ವ್ಯತ್ಯಯಾದ್ಯುಧ್ಯಮಾನಯೋಃ ॥

ನ ಚ ತೌ ಯುದ್ಧವೈಮುಖ್ಯಂ ಶ್ರಮಂ ವಾಪ್ಯುಪಜಗ್ಮತುಃ ।
ಅಸ್ತ್ರಾಣ್ಯಸ್ತ್ರವಿದಾಂ ಶ್ರೇಷ್ಠೌ ದರ್ಶಯಂತೌ ಪುನಃ ಪುನಃ ॥ ೨೮

---

ನ್ನೊಬ್ಬರು ಆಕ್ರಮಿಸಿ ಖಾಡಾಖಾಡಿಯಾಗಿ ಹೋರಾಡಿದರು (೨೧-೨೨). ಈರ್ವರ ಸರ್ವಾಂಗಗಳೂ ಶರಪ್ರಹಾರದಿಂದ ಜರ್ಝರಿತವಾದವು. ಈರ್ವರೂ ನೆತ್ತರಲ್ಲಿ ನೆನೆದರು. ಸಮರಕರ್ಮವಿಶಾರದರಾದ ಆ ರಣಮಲ್ಲರು, ನಾನು ಜಯಿಸಬೇಕು-ನಾನು ಜಯಿಸಬೇಕು ಎಂಬ ಛಲದಿಂದ ಕವಚವನ್ನು ತರಿದು ಧ್ವಜವನ್ನು ಮುರಿದು ಶರಗಳಿಂದ ಎದುರಾಳಿಯನ್ನು ಆಚ್ಛಾದಿಸಿದರು (೨೩-೨೫). ಗಿರಿನದಿಗಳಿಂದ ಜಲಧಾರೆಯು ಹರಿಯುವಂತೆ, ಅವರ ಮೈಯಿಂದ ಬಿಸಿನೆತ್ತರು ಹರಿಯಿತು. ಪ್ರಳಯಕಾಲದ ಕಾರ್ಮೋಡಗಳು ಭೀಕರವಾಗಿ ಗುಡುಗುತ್ತ ಜಡಿಮಳೆಯನ್ನು ಸುರಿಸುವಂತೆ, ಚಾಪಗಳ ಟಂಕಾರ ಶರಗಳ ಝಂಕಾರಗಳೊಡನೆ ಆ ಶೂರರು ಶರಜಾಲಗಳನ್ನು ತೂರುತ್ತ ಹೋರಾಡುತ್ತಿರಲು, ಬಹುಕಾಲ ಕಳೆಯಿತು (೨೬-೨೭). ಆದರೇನು? ಅವರೀರ್ವರೂ ಯುದ್ಧದಿಂದ ಹಿಂಜರಿಯಲಿಲ್ಲ; ಆಯಾಸಗೊಳ್ಳಲಿಲ್ಲ. ಅಸ್ತ್ರವಿದರಲ್ಲಿ ಅಗ್ರಗಣ್ಯರಾದ ಲಕ್ಷ್ಮಣ ಇಂದ್ರಜಿತುಗಳಿಬ್ಬರೂ ಮತ್ತೆ ಮತ್ತೆ ವಿಪುಲಾಸ್ತ್ರಗಳನ್ನು ಪ್ರಯೋಗಿಸಿ, ಅಂತರಿಕ್ಷದಲ್ಲಿ ವಿವಿಧಾ

ಶರಾನುಚ್ಚಾವಚಾಕಾರಾನಂತರಿಕ್ಷೇ ಬಬಂಧತುಃ ।
ವ್ಯಪೇತದೋಷಮಸ್ಯಂತೌ ಲಘು ಚಿತ್ರಂ ಚ ಸುಷ್ಠು ಚ ॥ ೨೯
ಉಭೌ ತೌ ತುಮುಲಂ ಘೋರಂ ಚಕ್ರತುರ್ನರರಾಕ್ಷಸೌ ।
ತಯೋಃ ಪೃಥಕ್ ಪೃಥಕ್ ಭೀಮಃ ಶುಶ್ರುವೇ ತಲನಿಸ್ವನಃ ॥ ೩೦
ಪ್ರಕಂಪಯನ್ ಜನಂ ಘೋರೋ ನಿರ್ಘಾತ ಇವ ದಾರುಣಃ ।
ಸ ತಯೋರ್ಭ್ರಾಜತೇ ಶಬ್ದಸ್ತದಾ ಸಮರಸಕ್ತಯೋಃ ॥ ೩೧
ಸುಘೋರಯೋರ್ನಿಷ್ಟನತೋರ್ಗಗನೇ ಮೇಘಯೋರ್ಯಥಾ ।
ಸುವರ್ಣಪುಂಖೈರ್ನಾರಾಚೈರ್ಬಲವಂತೌ ಕೃತವ್ರಣೌ ॥ ೩೨
ಪ್ರಸುಸ್ರುವಾತೇ ರುಧಿರಂ ಕೀರ್ತಿಮಂತೌ ಜಯೇ ಧೃತೌ ।
ತೇ ಗಾತ್ರಯೋರ್ನಿಪತಿತಾ ರುಕ್ಮಪುಂಖಾಃ ಶರಾ ಯುಧಿ ॥ ೩೩
ಅಸೃಙ್ಮದಿಗ್ಧಾ ವಿನಿಷ್ಪತ್ಯ ವಿವಿಶುರ್ಧರಣೀತಲಮ್ ।
ಅನ್ಯೇ ಸುನಿಶಿತೈಃ ಶಸ್ತ್ರೈರಾಕಾಶೇ ಸಂಜಘಟ್ಟಿರೇ ॥ ೩೪
ಬಭಂಜುಶ್ಚಿಚ್ಛಿದುಶ್ಚಾನ್ಯೇ ತಯೋರ್ಬಾಣಾಃ ಸಹಸ್ರಶಃ ।
ಸ ಬಭೂವ ರಣೇ ಘೋರಸ್ತಯೋರ್ಬಾಣಮಯಶ್ಚಯಃ ॥ ೩೫

---

ಕೃತಿಯ ಶರಬಂಧಗಳನ್ನು ನಿರ್ಮಿಸುತ್ತಿದ್ದರು. ಇಬ್ಬರೂ ಗುರಿತಪ್ಪದೆ ಎಚ್ಚರಿಕೆಯಿಂದ ಸರಿಯಾಗಿ ಬಾಣಗಳನ್ನು ಪ್ರಯೋಗಿಸುತ್ತ ತಮ್ಮ ಕೈಚಳಕದಿಂದ ಅದ್ಭುತ ಚಮತ್ಕಾರವನ್ನು ಬೀರಿದರು (೨೮-೨೯). ಘೋರವಾದ ತುಮುಲಯುದ್ಧವನ್ನು ಬಹುಕಾಲ ನಡೆಸಿದರು. ಅವರಿಬ್ಬರ ದಾರುಣ ಧನುಷ್ಟಂಕಾರವು ಬೇರೆಬೇರೆಯಾಗಿ ಜನರನ್ನು ನಡುಗಿಸುತ್ತ ಸಿಡಿಲಿನಂತೆ ಕೇಳಿಸುತ್ತಿತ್ತು (೩೦). ಸಂಗ್ರಾಮಾಸಕ್ತರಾದ ಅವರ ಸಿಂಹನಾದವು ಗಗನದಲ್ಲಿ ಅಬ್ಬರಿಸುವ ಘೋರಮೇಘಗಳ ಧ್ವನಿಯಂತೆ ತೋರುತ್ತಿತ್ತು. ಗೆಲ್ಲುವ ಹಠದಿಂದ ಹೋರಾಡುತ್ತಿದ್ದ ಕೀರ್ತಿಶಾಲಿಗಳಾದ ಆ ಬಲಾಢ್ಯರು, ಕನಕಪುಂಖಾಂಕಿತ ನಾರಾಚಗಳಿಂದ ಗಾಯಗೊಂಡು ರಕ್ತವನ್ನು ಕೋಡಿಯಾಗಿ ಹರಿಸಿದರು (೩೧-೩೨). ಅವರು ಹೊಡೆದ ಶರಗಳು ಒಬ್ಬೊಬ್ಬರ ಶರೀರದಲ್ಲಿ ತೂರಿ ರಕ್ತದಲ್ಲಿ ನೆನೆದು ನೆಲವನ್ನು ಹೊಕ್ಕವು! ಕೆಲವು ನಿಶಿತಾಸ್ತ್ರಗಳು ಆಕಾಶಮಾರ್ಗದಲ್ಲಿ ಒಂದಕ್ಕೊಂದು ಘರ್ಷಿಸಿ ಮುರಿದುಬಿದ್ದವು (೩೩-೩೪). ಕೆಲವು ಅಸ್ತ್ರಗಳು ಅಡ್ಡಬಂದ ಸಾವಿರಾರು ಬಾಣಗಳನ್ನು ಕತ್ತರಿಸಿ ಕೆಡಹಿ

ಅಗ್ನಿಭ್ಯಾಮಿವ ದೀಪ್ತಾಭ್ಯಾಂ ಸತ್ರೇ ಕುಶಮಯಶ್ಚಯಃ ।
ತಯೋಃ ಕೃತವ್ರಣೌ ದೇಹೌ ಶುಶುಭಾತೇ ಮಹಾತ್ಮನೋಃ ॥ ೩೬

ಸಪುಷ್ಪಾವಿವ ನಿಷ್ಪತ್ರೌ ವನೇ ಶಾಲ್ಮಲಿಕಿಂಶುಕೌ ।
ಚಕ್ರತುಸ್ತುಮುಲಂ ಘೋರಂ ಸಂನಿಪಾತಂ ಮುಹುರ್ಮುಹುಃ ॥ ೩೭

ಇಂದ್ರಜಿಲ್ಲಕ್ಷ್ಮಣಶ್ಚೈವ ಪರಸ್ಪರವಧೈಷಿಣೌ ।
ಲಕ್ಷ್ಮಣೋ ರಾವಣಿಂ ಯುದ್ಧೇ ರಾವಣಿಶ್ಚಾಪಿ ಲಕ್ಷ್ಮಣಮ್ ॥ ೩೮

ಅನ್ಯೋನ್ಯಂ ತಾವಭಿಘ್ನಂತೌ ನ ಶ್ರಮಂ ಪ್ರತ್ಯಪದ್ಯತಾಮ್ ।
ಬಾಣಜಾಲೈಃ ಶರೀರಸ್ಥೈರವಗಾಢೈಸ್ತರಸ್ವಿನೌ ॥ ೩೯

ಶುಶುಭಾತೇ ಮಹಾವೀರ್ಯೌ ಪ್ರರೂಢಾವಿವ ಪರ್ವತೌ ।
ತಯೋ ರುಧಿರಸಿಕ್ತಾನಿ ಸಂವೃತಾನಿ ಶರೈರ್ಭೃಶಮ್ ॥ ೪೦

ಬಭ್ರಾಜುಃ ಸರ್ವಗಾತ್ರಾಣಿ ಜ್ವಲಂತ ಇವ ಪಾವಕಾಃ ।
ತಯೋರಥ ಮಹಾನ್ ಕಾಲೋ ವ್ಯತ್ಯಯಾದ್ಯುಧ್ಯಮಾನಯೋಃ ॥
ನ ಚ ತೌ ಯುದ್ಧವೈಮುಖ್ಯಂ ಶ್ರಮಂ ವಾಪ್ಯುಪಜಗ್ಮತುಃ ॥

---

ದವು. ಯಾಗಶಾಲೆಯಲ್ಲಿ ಪ್ರಜ್ವಲಿಸುವ ಗಾರ್ಹಪತ್ಯ, ಆಹವನೀಯ ಎಂಬ ಎರಡು ಅಗ್ನಿಗಳ ಸುತ್ತಲೂ ದರ್ಭೆಗಳು ಹರಡಿರುವಂತೆ, ರಣರಂಗದಲ್ಲಿ ಅವರೀರ್ವರ ಸುತ್ತಲೂ ಬಾಣಗಳು ರಾಶಿರಾಶಿಯಾಗಿ ಬಿದ್ದವು (೩೫-೩೬). ವೀರಾಗ್ರಣಿಗಳಾದ ಅವರ ವ್ರಣಿತದೇಹಗಳು, ವನದಲ್ಲಿ ಎಲೆಗಳಿಲ್ಲದೆ ಬರಿಯ ಹೂಗಳಿಂದ ತುಂಬಿದ ಬೂರುಗದ ಮರಗಳಂತೆಯೂ ಮುತ್ತುಗದ ಮರಗಳಂತೆಯೂ ಕಾಣಿಸಿದವು! ಒಬ್ಬರನ್ನೊಬ್ಬರು ವಧಿಸಬೇಕೆಂದು ಕಾದಾಡುತ್ತಿದ್ದ ಲಕ್ಷ್ಮಣ ಇಂದ್ರಜಿತು—ಇವರಿಬ್ಬರೂ ಮತ್ತೆಮತ್ತೆ ಘೋರವಾದ ಆಕ್ರಮಣವನ್ನೆಸಗಿದರು (೩೭-೩೮). ಲಕ್ಷ್ಮಣನು ರಾವಣಿಯನ್ನೂ ರಾವಣಿಯು ಲಕ್ಷ್ಮಣನನ್ನೂ ಅನ್ಯೋನ್ಯವಾಗಿ ಎಷ್ಟು ಪ್ರಹರಿಸಿದರೂ ಅವರಿಬ್ಬರಿಗೂ ದಣಿವು ಕಾಣಲಿಲ್ಲ. ಬಾಣಜಾಲಗಳು ದೇಹದಲ್ಲಿ ನೆಟ್ಟಿರಲಾಗಿ, ಆ ವೀರಾಗ್ರಗಣ್ಯರು ಬೆಳೆದ ಮರಗಳಿಂದೊಪ್ಪುವ ಗಿರಿಗಳಂತೆ ಕಂಗೊಳಿಸಿದರು (೩೯-೪೦). ರಕ್ತದಲ್ಲಿ ನೆನೆದ ಅವರ ಸರ್ವಾಂಗಗಳೂ ಉರಿಯುವ ಬೆಂಕಿಗಳಂತೆ ಕಾಣಿಸುತ್ತಿದ್ದವು. ಹೀಗೆ ತೆರಪಿಲ್ಲದೆ ಹೋರಾಡು

ಅಥ ಸಮರಪರಿಶ್ರಮಂ ನಿಹಂತುಂ
ಸಮರಮುಖೇಷ್ವಜಿತಸ್ಯ ಲಕ್ಷ್ಮಣಸ್ಯ ।
ಪ್ರಿಯಹಿತಮುಪಪಾದಯನ್ಮಹೌಜಾಃ
ಸಮರಮುಪೇತ್ಯ ವಿಭೀಷಣೋಽವತಸ್ಥೇ ॥ ೪೨

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನನವತಿತಮಃ ಸರ್ಗಃ



ತ್ತಲೇ ಬಹಳ ಹೊತ್ತು ಕಳೆಯಿತು. ಆದರೂ ಅವರು ಯುದ್ಧದಿಂದ ಹಿಂಜರಿಯಲಿಲ್ಲ; ಅವರಿಗೆ ದಣಿವೂ ತೋರಲಿಲ್ಲ (೪೧). ಅನಂತರ ಸಮರದುರ್ಜಯನಾದ ಲಕ್ಷ್ಮಣನಿಗೆ ಸ್ವಲ್ಪಕಾಲ ವಿಶ್ರಾಂತಿಯನ್ನು ಕೊಟ್ಟು ಅವನ ಆಯಾಸವನ್ನು ಪರಿಹರಿಸಬೇಕೆಂದು ವಿಭೀಷಣನಿಗೆ ತೋರಿತು. ಲಕ್ಷ್ಮಣನಿಗೆ ಪ್ರಿಯವನ್ನೂ ಹಿತವನ್ನೂ ಮಾಡುವ ಉದ್ದೇಶದಿಂದ ಆ ತೇಜಸ್ವಿಯು ಯುದ್ಧರಂಗದ ಮುಂದೆ ಬಂದು ನಿಂತನು (೪೨).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಎಂಬತ್ತೊಂಬತ್ತನೆಯ ಸರ್ಗ



## ನವತಿತಮಃ ಸರ್ಗಃ

### ಸೌಮಿತ್ರಿರಾವಣಿಯುದ್ಧಮ್

ಯುಧ್ಯಮಾನೌ ತು ತೌ ದೃಷ್ಟ್ವಾ ಪ್ರಸಕ್ತೌ ನರರಾಕ್ಷಸೌ ।
ಪ್ರಭಿನ್ನಾವಿವ ಮಾತಂಗೌ ಪರಸ್ಪರವಧೈಷಿಣೌ ॥ ೧

ತೌ ದ್ರಷ್ಟುಕಾಮಃ ಸಂಗ್ರಾಮೇ ಪರಸ್ಪರಗತೌ ಬಲೀ ।
ಶೂರಃ ಸ ರಾವಣಭ್ರಾತಾ ತಸ್ಥೌ ಸಂಗ್ರಾಮಮೂರ್ಧನಿ ॥ ೨

ತತೋ ವಿಸ್ಫಾರಯಾಮಾಸ ಮಹದ್ಧನುರವಸ್ಥಿತಃ ।
ಉತ್ಸಸರ್ಜ ಚ ತೀಕ್ಷ್ಣಾಗ್ರಾನ್ ರಾಕ್ಷಸೇಷು ಮಹಾಶರಾನ್ ॥ ೩

ತೇ ಶರಾಃ ಶಿಖಿಸಂಕಾಶಾ ನಿಪತಂತಃ ಸಮಾಹಿತಾಃ ।
ರಾಕ್ಷಸಾನ್ ದಾರಯಾಮಾಸುರ್ವಜ್ರಾಣೀವ ಮಹಾಗಿರೀನ್ ॥ ೪

ವಿಭೀಷಣಸ್ಯಾನುಚರಾಸ್ತೇಽಪಿ ಶೂಲಾಸಿಪಟ್ಟಿಸೈಃ ।
ಚಿಚ್ಛಿದುಃ ಸಮರೇ ವೀರಾನ್ ರಾಕ್ಷಸಾನ್ ರಾಕ್ಷಸೋತ್ತಮಾಃ ॥ ೫

## ಸರ್ಗ ೯೦

### ವಿಭೀಷಣನು ವಾನರಯೋಧರನ್ನು ಪ್ರೋತ್ಸಾಹಿಸುವುದು. ಲಕ್ಷ್ಮಣನಿಗೂ ಇಂದ್ರಜಿತುವಿಗೂ ಘೋರವಾದ ಯುದ್ಧ.

ಮದೋದಕವನ್ನು ಸುರಿಸುವ ಮತ್ತಮಾತಂಗಗಳಂತೆ, ಸೌಮಿತ್ರಿಯೂ ರಾವಣಿಯೂ ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ದೃಢನಿರ್ಧಾರದಿಂದ ಹೋರಾಡಿದರು. ಸಂಗ್ರಾಮಭೂಮಿಯಲ್ಲಿ ಹೋರಾಡುತ್ತಿದ್ದ ಅವರೀರ್ವರ ಯುದ್ಧವೈಖರಿಯನ್ನು ನೋಡಬೇಕೆಂದು ಶೂರನಾದ ವಿಭೀಷಣನು ರಣರಂಗದ ಅಗ್ರಭಾಗದಲ್ಲಿ ನಿಂತಿದ್ದನು (೧-೨). ಸ್ವಲ್ಪಕಾಲದಮೇಲೆ ವಿಭೀಷಣನೂ ಸಹ ತನ್ನ ಮಹಾಧನುಸ್ಸನ್ನು ಜೇಗೈದು, ತೀಕ್ಷ್ಣಾಸ್ತ್ರಗಳನ್ನು ರಾಕ್ಷಸರಮೇಲೆ ಪ್ರಯೋಗಿಸತೊಡಗಿದನು. ಬೆಂಕಿಯಂತೆ ಬೆಳಗುತ್ತಿದ್ದ ಅವನ ಕೂರ್ಗಣೆಗಳು ಗುರಿತಪ್ಪದೆ ರಾಕ್ಷಸಸೇನೆಯಲ್ಲಿ ನುಗ್ಗಿ, ಸಿಡಿಲುಗಳು ಮಹಾಶೈಲಗಳನ್ನು ಭೇದಿಸುವಂತೆ ರಾಕ್ಷಸರನ್ನು ಭೇದಿಸಿ ಉರುಳಿಸುತ್ತಿದ್ದವು (೩-೪). ವಿಭೀಷಣನ ಸಚಿವರೂ ಕೂಡ ಶೂಲ, ಖಡ್ಗ, ಪಟ್ಟಸಾದ್ಯಾಯುಧ

ರಾಕ್ಷಸೈಸ್ತ್ರೈಃ ಪರಿವೃತಃ ಸ ತದಾ ತು ವಿಭೀಷಣಃ ।
ಬಭೌ ಮಧ್ಯೇ ಪ್ರಹೃಷ್ಟಾನಾಂ ಕಲಭಾನಾಮಿವ ದ್ವಿಪಃ ॥ ೬

ತತಃ ಸಂಚೋದಯಾನೋ ವೈ ಹರೀನ್ ರಕ್ಷೋರಣಪ್ರಿಯಾನ್ ।
ಉವಾಚ ವಚನಂ ಕಾಲೇ ಕಾಲಜ್ಞೋ ರಕ್ಷಸಾಂ ವರಃ ॥ ೭

ಏಕೋಽಯಂ ರಾಕ್ಷಸೇಂದ್ರಸ್ಯ ಪರಾಯಣಮಿವ ಸ್ಥಿತಃ ।
ಏತಚ್ಛೇಷಂ ಬಲಂ ತಸ್ಯ ಕಿಂ ತಿಷ್ಠತ ಹರೀಶ್ವರಾಃ ॥ ೮

ಅಸ್ಮಿನ್ ವಿನಿಹತೇ ಪಾಪೇ ರಾಕ್ಷಸೇ ರಣಮೂರ್ಧನಿ ।
ರಾವಣಂ ವರ್ಜಯಿತ್ವಾ ತು ಶೇಷಮಸ್ಯ ಹತಂ ಬಲಮ್ ॥ ೯

ಪ್ರಹಸ್ತೋ ನಿಹತೋ ವೀರೋ ನಿಕುಂಭಶ್ಚ ಮಹಾಬಲಃ ।
ಕುಂಭಕರ್ಣಶ್ಚ ಕುಂಭಶ್ಚ ಧೂಮ್ರಾಕ್ಷಶ್ಚ ನಿಶಾಚರಃ ॥ ೧೦

ಜಂಬುಮಾಲೀ ಮಹಾಮಾಲೀ ತೀಕ್ಷ್ಣವೇಗೋಽಶನಿಪ್ರಭಃ ।
ಸುಪ್ತಘ್ನೋ ಯಜ್ಞಕೋಪಶ್ಚ ವಜ್ರದಂಷ್ಟ್ರಶ್ಚ ರಾಕ್ಷಸಃ ॥ ೧೧

---

ಗಳಿಂದ ರಾಕ್ಷಸಭಟರನ್ನು ಸೀಳಿ ಸೀಳಿ ಕೊಂದರು. ಸಚಿವರಾದ ಆ ರಾಕ್ಷಸರೊಡನೆ ಪರಿವೃತನಾದ ವಿಭೀಷಣನು, ಉತ್ಸಾಹಿಗಳಾದ ಗಜಕಲಭಗಳಿಂದ ಪರಿವೃತವಾದ ಸಲಗದಂತೆ ಗೋಚರಿಸಿದನು (೫-೬). ರಾಕ್ಷಸರೊಡನೆ ಹೋರಾಡಬೇಕೆಂಬ ಇಚ್ಛೆಯಿಂದ ಉಲ್ಲಾಸಗೊಂಡಿದ್ದ ವಾನರಯೋಧರನ್ನು ನೋಡಿ, ಇದೇ (ತೀವ್ರಗತಿಯಿಂದ ಯುದ್ಧಮಾಡಬೇಕಾದ) ಸಮಯವೆಂದರಿತ ವಿಭೀಷಣನು ಹೀಗೆಂದನು (೭): "ಎಲೈ ವಾನರವೀರರೆ, ರಾಕ್ಷಸರಾಜನಾದ ರಾವಣನಿಗೆ ಈ ಇಂದ್ರಜಿತು ಒಬ್ಬನೇ ಪರಾಯಣದಂತೆ ಕಡೆಯ ಅವಲಂಬನವಾಗಿದ್ದಾನೆ. ರಾವಣನ ಬಲ ಇಷ್ಟು ಮಾತ್ರ ಉಳಿದಿದೆ. ಏಕೆ ಸುಮ್ಮನೆ ನಿಂತಿದ್ದೀರಿ? (೮). ಪಾಪಿಯಾದ ಈ ರಾಕ್ಷಸನೊಬ್ಬನನ್ನು ರಣರಂಗದಲ್ಲಿ ಮುಗಿಸಿಬಿಟ್ಟರೆ ಸಾಕು, ರಾವಣನೊಬ್ಬನನ್ನು ಬಿಟ್ಟು ಉಳಿದ ಬಲವೆಲ್ಲವೂ ಹತವಾದಂತೆಯೇ. ಪ್ರಹಸ್ತ, ನಿಕುಂಭ, ಕುಂಭಕರ್ಣ, ಕುಂಭ, ಧೂಮ್ರಾಕ್ಷರೆಂಬ ಪರಾಕ್ರಮಿಗಳು ಹತರಾದರು (೯-೧೦). ಜಂಬುಮಾಲಿ, ಮಹಾಮಾಲಿ, ತೀಕ್ಷ್ಣವೇಗ, ಅಶನಿಪ್ರಭ, ಸುಪ್ತಘ್ನ, ಯಜ್ಞಕೋಪ,

ಸಂಹ್ರಾದೀ ವಿಕಟೋ ನಿಘ್ನಸ್ತಪನೋ ದಮ ಏವ ಚ ।
ಪ್ರಘಾಸಃ ಪ್ರಘಸಶ್ಚೈವ ಪ್ರಜಂಘೋ ಜಂಘ ಏವ ಚ ॥ ೧೨

ಅಗ್ನಿಕೇತುಶ್ಚ ದುರ್ಧರ್ಷೋ ರಶ್ಮಿಕೇತುಶ್ಚ ವೀರ್ಯವಾನ್ ।
ವಿದ್ಯುಜ್ಜಿಹ್ವೋ ದ್ವಿಜಿಹ್ವಶ್ಚ ಸೂರ್ಯಶತ್ರುಶ್ಚ ರಾಕ್ಷಸಃ ॥ ೧೩

ಅಕಂಪನಃ ಸುಪಾರ್ಶ್ವಶ್ಚ ಚಕ್ರಮಾಲೀ ಚ ರಾಕ್ಷಸಃ ।
ಕಂಪನಃ ಸತ್ತ್ವವಂತೌ ತೌ ದೇವಾಂತಕನರಾಂತಕೌ ॥ ೧೪

ಏತಾನ್ನಿಹತ್ಯಾತಿಬಲಾನ್ ಬಹೂನ್ ರಾಕ್ಷಸಸತ್ತಮಾನ್ ।
ಬಾಹುಭ್ಯಾಂ ಸಾಗರಂ ತೀರ್ತ್ವಾ ಲಂಘ್ಯತಾಂ ಗೋಷ್ಪದಂ ಲಘು ॥

ಏತಾವದೇವ ಶೇಷಂ ವೋ ಜೇತವ್ಯಮಿಹ ವಾನರಾಃ ।
ಹತಾಃ ಸರ್ವೇ ಸಮಾಗಮ್ಯ ರಾಕ್ಷಸಾ ಬಲದರ್ಪಿತಾಃ ॥ ೧೬

ಅಯುಕ್ತಂ ನಿಧನಂ ಕರ್ತುಂ ಪುತ್ರಸ್ಯ ಜನಿತುರ್ಮಮ ।
ಘೃಣಾಮಪಾಸ್ಯ ರಾಮಾರ್ಥೇ ನಿಹನ್ಯಾಂ ಭ್ರಾತುರಾತ್ಮಜಮ್ ॥ ೧೭

---

ವಜ್ರದಂಷ್ಟ್ರ, ಸಂಹ್ರಾದಿ, ವಿಕಟ, ನಿಘ್ನ, ತಪನ, ದಮ, ಪ್ರಘಾಸ, ಪ್ರಘಸ, ಪ್ರಜಂಘ, ಜಂಘ ಎಂಬ ರಾಕ್ಷಸಭಟರು ಸತ್ತುಹೋದರು (೧೧-೧೨). ಅಗ್ನಿಕೇತು, ರಶ್ಮಿಕೇತು, ವಿದ್ಯುಜ್ಜಿಹ್ವ, ದ್ವಿಜಿಹ್ವ, ಸೂರ್ಯಶತ್ರು, ಅಕಂಪನ, ಸುಪಾರ್ಶ್ವ, ಚಕ್ರಮಾಲಿ, ಕಂಪನ, ದೇವಾಂತಕ, ನರಾಂತಕ ಮುಂತಾದ ಮಹಾಯೋಧರೂ ನಾಶವನ್ನೈದಿದರು (೧೩-೧೪). ಅತ್ಯಂತ ಪರಾಕ್ರಮಿಗಳಾದ ಅಂಥ ರಾಕ್ಷಸಶಾರ್ದೂಲರನ್ನೇ ಸಂಹರಿಸಿ ಮಹಾಸಾಗರವನ್ನು ಈಜಿ ದಾಟಿದವರಿಗೆ, ಗೋಪಾದದಷ್ಟಿರುವ ಈ ಕೊಳ್ಳವು ಯಾವ ಲೆಕ್ಕ? ಇದನ್ನು ದಾಟಿರಿ (೧೫). ವಾನರಯೋಧರೆ, ಹತಶೇಷವಾದ ಈ ಸೇನಾಬಲವೊಂದನ್ನು ಮಾತ್ರವೇ ನೀವು ಜಯಿಸಬೇಕಾಗಿದೆ. ಬಲದರ್ಪಿತರಾದ ಸಕಲರಾಕ್ಷಸರನ್ನೂ ಕೊಂದು ಹಾಕಿದ್ದೀರಿ. ಮೇಘನಾದನಿಗೆ ಚಿಕ್ಕಪ್ಪನಾದ ನಾನು ಎಷ್ಟಾದರೂ ಅವನಿಗೆ ತಂದೆಯಿದ್ದಂತೆ. ಈತನು ನನಗೆ ಮಗನಿದ್ದಂತೆ. ನನ್ನ ಮಗನನ್ನು ನನ್ನ ಕೈಯಿಂದಲೇ ಕೊಲ್ಲುವುದು ಯುಕ್ತವಲ್ಲ. ಆದರೂ ಶ್ರೀರಾಮನ ಕಾರ್ಯವೆಂದು ಬಗೆದು, ನನ್ನ ಅಣ್ಣನ ಮಗನಾದ ಈತನನ್ನು ಮರುಕವಿಲ್ಲದೆ

ಹಂತುಕಾಮಸ್ಯ ಮೇ ಬಾಷ್ಪಂ ಚಕ್ಷುಶ್ಚೈವ ನಿರುಧ್ಯತಿ ।
ತಮೇವೈಷ ಮಹಾಬಾಹುರ್ಲಕ್ಷ್ಮಣಃ ಶಮಯಿಷ್ಯತಿ ॥ ೧೮

ವಾನರಾ ಘ್ನತ ಸಂಭೂಯ ಭೃತ್ಯಾನಸ್ಯ ಸಮೀಪಗಾನ್ ।
ಇತಿ ತೇನಾತಿಯಶಸಾ ರಾಕ್ಷಸೇನಾಭಿಚೋದಿತಾಃ ॥ ೧೯

ವಾನರೇಂದ್ರಾ ಜಹೃಷಿರೇ ಲಾಂಗೂಲಾನಿ ಚ ವಿವ್ಯಧುಃ ।
ತತಸ್ತೇ ಕಪಿಶಾರ್ದೂಲಾಃ ಕ್ಷ್ವೇಲಂತಶ್ಚ ಮುಹುರ್ಮುಹುಃ ॥ ೨೦

ಮುಮುಚುರ್ವಿವಿಧಾನ್ನಾದಾನ್ ಮೇಘಾನ್ ದೃಷ್ಟ್ವೇವ ಬರ್ಹಿಣಃ ।
ಜಾಂಬವಾನಪಿ ತೈಃ ಸರ್ವೈಃ ಸ್ವಯೂಥೈರಪಿ ಸಂವೃತಃ ॥ ೨೧

ಅಶ್ಮಭಿಸ್ತಾಡಯಾಮಾಸ ನಖೈರ್ದಂತೈಶ್ಚ ರಾಕ್ಷಸಾನ್ ।
ನಿಘ್ನಂತಮೃಕ್ಷಾಧಿಪತಿಂ ರಾಕ್ಷಸಾಸ್ತೇ ಮಹಾಬಲಾಃ ॥ ೨೨

ಪರಿವವ್ರುರ್ಭಯಂ ತ್ಯಕ್ತ್ವಾ ತಮನೇಕವಿಧಾಯುಧಾಃ ।
ಶರೈಃ ಪರಶುಭಿಸ್ತೀಕ್ಷ್ಣೈಃ ಪಟ್ಟಿಸೈರ್ಯಷ್ಟಿತೋಮರೈಃ ॥ ೨೩

---

ಕೊಂದುಹಾಕಿಯೇನು ! (೧೬-೧೭). ಆದರೆ ಇವನನ್ನು ಕೊಲ್ಲಲು ಕೈ ಎತ್ತಲಾರೆ ! ಕೈ ಎತ್ತಿದರೆ ಕಣ್ಣೀರು ಸುರಿದು ನನ್ನನ್ನು ಅಡ್ಡಿಪಡಿಸುವುದು ! ಮಹಾಬಾಹುವಾದ ಲಕ್ಷ್ಮಣನೇ ಇಂದ್ರಜಿತುವಿನ ಕಥೆಯನ್ನು ಮುಗಿಸುವನು. ಕಪಿಯೋಧರೆ, ಕೈಮಾಡಿರಿ ! ಎಲ್ಲರೂ ಒಟ್ಟುಸೇರಿ ಇಂದ್ರಜಿತುವಿನ ಭಟರಾದ ರಾಕ್ಷಸರನ್ನು ಸಂಹರಿಸಿರಿ !" ಎಂದು ಹುರಿದುಂಬಿಸಿದನು (೧೮-೧೯). ವಿಭೀಷಣನ ನುಡಿಯನ್ನು ಕೇಳಿ ವಾನರಯೂಥಪರು ಉತ್ಸಾಹದಿಂದ ಉಬ್ಬಿದರು. ಸಂತೋಷದಿಂದ ಬಾಲವನ್ನಲ್ಲಾಡಿಸಿದರು ! ಮೇಘಪಂಕ್ತಿಯನ್ನು ಕಂಡ ನವಿಲುಗಳಂತೆ ಕೇಕೆ ಹಾಕುತ್ತ ಬಗೆಬಗೆಯಲ್ಲಿ ಗರ್ಜಿಸಿದರು (೨೦). ಜಾಂಬವಂತನು ತನ್ನ ಭಲ್ಲೂಕಗಳ ಪಡೆ ಮತ್ತು ಕಪಿಸೇನೆಯೊಡನೆ ರಾಕ್ಷಸರನ್ನಾಕ್ರಮಿಸಿ ಬಂಡೆಗಳನ್ನು ಬೀಸುತ್ತ ನಖಗಳಿಂದ ಪರಚುತ್ತ ಕೋರೆದಾಡೆಗಳಿಂದ ಸೀಳುತ್ತ ಸಂಹರಿಸತೊಡಗಿದನು. ಹೀಗೆ ರಾಕ್ಷಸರನ್ನು ಕೊಂದೆಸೆಯುತ್ತಿದ್ದ ಜಾಂಬವಂತನಮೇಲೆ ರಾಕ್ಷಸರು ನಿರ್ಭೀತಿಯಿಂದ ಹಲ್ಲೆಯನ್ನೆಸಗಿದರು. ಶರ, ಪರಶು, ಪಟ್ಟಿಸ, ಯಷ್ಟಿ, ತೋಮರ ಮುಂತಾದ ವಿವಿಧಾಯುಧ

ಜಾಂಬವಂತಂ ಮೃಧೇ ಜಘ್ನುರ್ನಿಘ್ನಂತಂ ರಾಕ್ಷಸೀಂ ಚಮೂಮ್ ।
ಸ ಸಂಪ್ರಹಾರಸ್ತುಮುಲಃ ಸಂಜಜ್ಞೇ ಕಪಿರಕ್ಷಸಾಮ್ ॥ ೨೪

ದೇವಾಸುರಾಣಾಂ ಕ್ರುದ್ಧಾನಾಂ ಯಥಾ ಭೀಮೋ ಮಹಾಸ್ವನಃ ।
ಹನುಮಾನಪಿ ಸಂಕ್ರುದ್ಧಃ ಸಾಲಮುತ್ಪಾಟ್ಯ ವೀರ್ಯವಾನ್ ॥

ಸ ಲಕ್ಷ್ಮಣಂ ಸ್ವಾಂಸಪೃಷ್ಠಾದವರೋಪ್ಯ ಮಹಾಮನಾಃ ।
ರಕ್ಷಸಾಂ ಕದನಂ ಚಕ್ರೇ ಸಮಾಸಾದ್ಯ ಸಹಸ್ರಶಃ ॥ ೨೬

ಸ ದತ್ತ್ವಾ ತುಮುಲಂ ಯುದ್ಧಂ ಪಿತೃವ್ಯಸ್ಯೇಂದ್ರಜಿದ್ಯುಧಿ ।
ಲಕ್ಷ್ಮಣಂ ಪರವೀರಘ್ನಂ ಪುನರೇವಾಭ್ಯಧಾವತ ॥ ೨೭

ತೌ ಪ್ರಯುದ್ಧೌ ತದಾ ವೀರೌ ಮೃಧೇ ಲಕ್ಷ್ಮಣರಾಕ್ಷಸೌ ।
ಶರೌಘಾನಭಿವರ್ಷಂತೌ ಜಘ್ನತುಸ್ತೌ ಪರಸ್ಪರಮ್ ॥ ೨೮

ಅಭೀಕ್ಷ್ಣಮಂತರ್ದಧತುಃ ಶರಜಾಲೈರ್ಮಹಾಬಲೌ ।
ಚಂದ್ರಾದಿತ್ಯಾವಿವೋಷ್ಣಾಂತೇ ಯಥಾ ಮೇಘೈಸ್ತರಸ್ವಿನೌ ॥ ೨೯

---

ಗಳನ್ನು ಪ್ರಯೋಗಿಸುತ್ತ ಜಾಂಬವಂತನನ್ನು ಮುತ್ತಿದರು (೨೧–೨೩). ಕೋಪಾವಿಷ್ಟರಾದ ಕಪಿರಾಕ್ಷಸರ ಕಾಳಗವು, ದೇವಾಸುರರಿಗೆ ಸಂಭವಿಸಿದ ಕಾಳಗದಂತೆ ಅತಿಭೀಕರವಾಯಿತು. ಎಲ್ಲೆಲ್ಲಿಯೂ ಕೋಲಾಹಲ ಉಂಟಾಯಿತು. ಅಷ್ಟರಲ್ಲಿ ಧೀರನಾದ ಹನುಮಂತನು ತನ್ನ ಹೆಗಲಿನಿಂದ ಲಕ್ಷ್ಮಣನನ್ನು ಕೆಳಗಿಳಿಸಿ,* ಒಂದು ಸಾಲವೃಕ್ಷವನ್ನು ಕಿತ್ತುಕೊಂಡು ರೋಷದಿಂದ ಸಾವಿರಾರು ರಾಕ್ಷಸರನ್ನು ಬಡಿದು ಕೊಂದನು (೨೪–೨೬). ಆಗ ಇಂದ್ರಜಿತು ತನ್ನ ಚಿಕ್ಕಪ್ಪನಾದ ವಿಭೀಷಣನೊಡನೆ ತುಮುಲಯುದ್ಧವನ್ನು ನಡೆಸಿ, ಪರಂತಪನಾದ ಲಕ್ಷ್ಮಣನಮೇಲೆ ಮತ್ತೆ ಯುದ್ಧಕ್ಕಾಗಿ ಧಾವಿಸಿ ಬಂದನು (೨೭). ಮತ್ತೆ ಆ ರಾಕ್ಷಸನಿಗೂ ಲಕ್ಷ್ಮಣನಿಗೂ ಯುದ್ಧವು ತೊಡಗಿತು. ಶರಜಾಲಗಳನ್ನು ಮಳೆಗರೆಯುತ್ತ ಆ ವೀರರು ಖಾಡಾಖಾಡಿಯಾಗಿ ಹೋರಾಡಿದರು. ಮಳೆಗಾಲದಲ್ಲಿ ಮೋಡಗಳ ನಡುವೆ ಮರೆಯಾಗುವ ಸೂರ್ಯಚಂದ್ರರಂತೆ, ವೇಗಶಾಲಿಗಳಾದ ಆ ಶೂರರು ದಟ್ಟವಾದ

---

* ಇಂದ್ರಜಿತು ವಿಭೀಷಣನೊಡನೆ ಯುದ್ಧವನ್ನಾರಂಭಿಸಿದ್ದರಿಂದ, ಲಕ್ಷ್ಮಣನು ವಿಶ್ರಮಿಸಲೆಂದು ಹನುಮಂತನು ಅವನನ್ನು ಕೆಳಗಿಳಿಸಿದನು.

ನ ಹ್ಯಾದಾನಂ ನ ಸಂಧಾನಂ ಧನುಷೋ ವಾ ಪರಿಗ್ರಹಃ ।
ನ ವಿಪ್ರಮೋಕ್ಷೋ ಬಾಣಾನಾಂ ನ ವಿಕರ್ಷೋ ನ ವಿಗ್ರಹಃ ॥ ೩೦

ನ ಮುಷ್ಟಿಪ್ರತಿಸಂಧಾನಂ ನ ಲಕ್ಷ್ಯಪ್ರತಿಪಾದನಮ್ ।
ಅದೃಶ್ಯತ ತಯೋಸ್ತತ್ರ ಯುಧ್ಯತೋಃ ಪಾಣಿಲಾಘವಾತ್ ॥ ೩೧

ಚಾಪವೇಗವಿನಿರ್ಮುಕ್ತೈರ್ಬಾಣಜಾಲೈಃ ಸಮಂತತಃ ।
ಅಂತರಿಕ್ಷೇ ಹಿ ಸಂಛನ್ನೇ ನ ರೂಪಾಣಿ ಚಕಾಶಿರೇ ॥ ೩೨

ಲಕ್ಷ್ಮಣೋ ರಾವಣಿಂ ಪ್ರಾಪ್ಯ ರಾವಣಿಶ್ಚಾಪಿ ಲಕ್ಷ್ಮಣಮ್ ।
ಅವ್ಯವಸ್ಥಾ ಭವತ್ಯುಗ್ರಾ ತಾಭ್ಯಾಮನ್ಯೋನ್ಯವಿಗ್ರಹೇ ॥ ೩೩

ತಾಭ್ಯಾಮುಭಾಭ್ಯಾಂ ತರಸಾ ವಿಸೃಷ್ಟೈರ್ವಿಶಿಖೈಃ ಶಿತೈಃ ।
ನಿರಂತರಮಿವಾಕಾಶಂ ಬಭೂವ ತಮಸಾವೃತಮ್ ॥ ೩೪

ತೈಃ ಪತದ್ಭಿಶ್ಚ ಬಹುಭಿಸ್ತಯೋಃ ಶರಶತೈಃ ಶಿತೈಃ ।
ದಿಶಶ್ಚ ಪ್ರದಿಶಶ್ಚೈವ ಬಭೂವುಃ ಶರಸಂಕುಲಾಃ ॥ ೩೫

---

ಬಾಣರಾಶಿಗಳಲ್ಲಿ ಯಾರಿಗೂ ಕಾಣದಂತೆ ಆಗಾಗ ಮರೆಯಾಗುತ್ತಿದ್ದರು (೨೮-೨೯). ಅವರೀರ್ವರ ಹಸ್ತಲಾಘವವು ಎಷ್ಟು ತೀವ್ರವಾಗಿತ್ತೆಂದರೆ, ಆ ಕೈಚಳಕದಲ್ಲಿ ಬಾಣವನ್ನು ಹಿರಿಯುವುದು, ಹೂಡುವುದು, ಧನುಸ್ಸನ್ನು ಎಡಗೈ ಬಲಗೈಗಳಿಗೆ ಬದಲಾಯಿಸುವುದು, ಬಾಣವನ್ನು ಬಿಡುವುದು, ಹೆದೆಯನ್ನು ಎಳೆಯುವುದು, ಬಾಣಗಳ ವಿಭಾಗ, ಬಾಣವನ್ನು ಮುಷ್ಟಿಯಲ್ಲಿ ಹಿಡಿಯುವುದು, ಲಕ್ಷ್ಯಕ್ಕೆ ಗುರಿ ಇಡುವುದು—ಯಾವುದೂ ಕಾಣಿಸುತ್ತಿರಲಿಲ್ಲ (೩೦-೩೧). ಕಾರ್ಮುಕ ನಿರ್ಮುಕ್ತ ಶರರಾಶಿಗಳು ಅಂತರಿಕ್ಷವನ್ನು ಆಚ್ಛಾದಿಸಲು, ಯಾವ ವಸ್ತುಗಳೂ ಗೋಚರಿಸಲಿಲ್ಲ. ಲಕ್ಷ್ಮಣನು ರಾವಣಿಯನ್ನೂ ರಾವಣಿಯು ಲಕ್ಷ್ಮಣನನ್ನೂ ಜಯಿಸಬೇಕೆಂಬ ಹಠದಿಂದ ನಡೆಸಿದ ದಾರುಣ ಸಂಗ್ರಾಮದಲ್ಲಿ, ಯಾರು ಗೆಲ್ಲುವರೆಂಬ ನಿಶ್ಚಯವೇ ದೊರೆಯದಷ್ಟು ಕಾಳಗವು ಉಗ್ರವಾಯಿತು (೩೨-೩೩). ಅವರಿಬ್ಬರೂ ಸಂತತವಾಗಿ ಸೆಳೆಸೆಳೆದು ಬಿಡುತ್ತಿದ್ದ ಹರಿತವಾದ ಸರಳುಗಳಿಂದ ಮುಚ್ಚಿದ ಮುಗಿಲು, ಕತ್ತಲೆ ಮುಸುಕಿದಂತೆ ಮುಸುಕಾಯಿತು. ಶಿತಗಳಾದ ಶರಶತಗಳು ಅಸಂಖ್ಯಾತವಾಗಿ ಎಲ್ಲೆಲ್ಲಿಯೂ ತೂರಾಡಲು, ದಿಗ್ದಿಗಂತರಗಳಲ್ಲಿ

ತಮಸಾ ಸಂವೃತಂ ಸರ್ವಮಾಸೀದ್ಭೀಮತರಂ ಮಹತ್ ।
ಅಸ್ತಂ ಗತೇ ಸಹಸ್ರಾಂಶೌ ಸಂವೃತಂ ತಮಸೇವ ಹಿ ॥ ೩೬

ರುಧಿರೌಘಾ ಮಹಾನದ್ಯಃ ಪ್ರಾವರ್ತಂತ ಸಹಸ್ರಶಃ ।
ಕ್ರವ್ಯಾದಾ ದಾರುಣಾ ವಾಗ್ಭಿಶ್ಚಿಕ್ಷಿಪುರ್ಭೀಮನಿಃಸ್ವನಮ್ ॥ ೩೭

ನ ತದಾನೀಂ ವವೌ ವಾಯುರ್ನ ಚ ಜಜ್ವಾಲ ಪಾವಕಃ ।
ಸ್ವಸ್ತ್ಯಸ್ತು ಲೋಕೇಭ್ಯ ಇತಿ ಜಜಲ್ಪುಶ್ಚ ಮಹರ್ಷಯಃ ॥ ೩೮

ಸಂಪೇತುಶ್ಚಾತ್ರ ಸಂಪ್ರಾಪ್ತಾ ಗಂಧರ್ವಾಃ ಸಹ ಚಾರಣೈಃ ।
ಅಥ ರಾಕ್ಷಸಸಿಂಹಸ್ಯ ಕೃಷ್ಣಾನ್ ಕನಕಭೂಷಣಾನ್ ॥ ೩೯

ಶರೈಶ್ಚತುರ್ಭಿಃ ಸೌಮಿತ್ರಿರ್ವಿವ್ಯಾಧ ಚತುರೋ ಹಯಾನ್ ।
ತತೋಽಪರೇಣ ಭಲ್ಲೇನ ಶಿತೇನ ನಿಶಿತೇನ ಚ ॥ ೪೦

ಸಂಪೂರ್ಣಾಯತಮುಕ್ತೇನ ಸುಪತ್ರೇಣ ಸುವರ್ಚಸಾ ।
ಮಹೇಂದ್ರಾಶನಿಕಲ್ಪೇನ ಸೂತಸ್ಯ ವಿಚರಿಷ್ಯತಃ ॥ ೪೧

---

ಶರಗಳೇ ಗೋಚರಿಸಿದವು (೩೪-೩೫). ಭಾಸ್ಕರನು ಅಸ್ತಂಗತನಾದಾಗ ಸರ್ವತ್ರ ಕತ್ತಲೆ ಕವಿಯುವಂತೆ, ಗಾಢಾಂಧಕಾರವು ಹರಡಿ ಸರ್ವವೂ ಬಹು ಭೀಕರವಾಗಿ ಪರಿಣಮಿಸಿತು. ದೊಡ್ಡ ದೊಡ್ಡ ನೆತ್ತರಹೊಳೆಗಳು ಹರಿದವು. ಮಾಂಸಾಶಿಗಳಾದ ಕ್ರೂರಪಕ್ಷಿಗಳು ದಾರುಣಸ್ವರದಿಂದ ಅರಚಿದವು (೩೬-೩೭). ಗಾಳಿ ಸುಳಿಯಲಿಲ್ಲ; ಬೆಂಕಿ ಉರಿಯಲಿಲ್ಲ. 'ಲೋಕಕ್ಕೆ ಶುಭವಾಗಲಿ' ಎಂದು ಮಹರ್ಷಿಗಳು ಗೋಗರೆದರು. ಯುದ್ಧವನ್ನು ನೋಡಲು ಬಂದಿದ್ದ ಗಂಧರ್ವರೂ ಚಾರಣರೂ ಅದರ ಘೋರತೆಯನ್ನು ನೋಡಲಾರದೆ ಹೊರಟುಹೋದರು. ಆ ಸಮಯದಲ್ಲಿ ಸೌಮಿತ್ರಿಯು ರಾಕ್ಷಸಸಿಂಹನಾದ ಇಂದ್ರಜಿತುವಿನ ಕನಕಭೂಷಿತಗಳೂ ಕೃಷ್ಣವರ್ಣದವೂ ಆದ ನಾಲ್ಕು ರಥಾಶ್ವಗಳನ್ನು ನಾಲ್ಕು ಬಾಣಗಳಿಂದ ಬಿಗಿದು ಗಾಯಗೊಳಿಸಿದನು (೩೮-೩೯). ಹರಿತವಾಗಿ ಹೊಳೆಹೊಳೆಯುತ್ತಿದ್ದ ಗರಿಗಟ್ಟಿದ ವಜ್ರಾಯುಧಸಮಾನವಾದ ಮತ್ತೊಂದು ಕೂರ್ಗಣೆಯನ್ನು ಆಕರ್ಣಾಂತವಾಗಿ ಸೆಳೆದು ಹೊಡೆದನು. ಗುಂಯ್ ಎನ್ನುತ್ತ ಹೋದ ಆ ಬಾಣದಿಂದ

**ಸ ತೇನ ಬಾಣಾಶನಿನಾ ತಲಶಬ್ದಾನುನಾದಿನಾ ।**
**ಲಾಘವಾದ್ರಾಘವಃ ಶ್ರೀಮಾನ್ ಶಿರಃ ಕಾಯಾದಪಾಹರತ್ ॥ ೪೨**

**ಸ ಯಂತರಿ ಮಹಾತೇಜಾ ಹತೇ ಮಂದೋದರೀಸುತಃ ।**
**ಸ್ವಯಂ ಸಾರಥ್ಯಮಕರೋತ್ ಪುನಶ್ಚ ಧನುರಸ್ಪೃಶತ್ ॥ ೪೩**

**ತದದ್ಭುತಮಭೂತ್ತತ್ರ ಸಾಮರ್ಥ್ಯಂ ಪಶ್ಯತಾಂ ಯುಧಿ ।**
**ಹಯೇಷು ವ್ಯಗ್ರಹಸ್ತಂ ತಂ ವಿವ್ಯಾಧ ನಿಶಿತೈಃ ಶರೈಃ ॥ ೪೪**

**ಧನುಷ್ಯಥ ಪುನರ್ವ್ಯಗ್ರೇ ಹಯೇಷು ಮುಮುಚೇ ಶರಾನ್ ।**
**ಛಿದ್ರೇಷು ತೇಷು ಬಾಣೇಷು ಸೌಮಿತ್ರಿಃ ಶೀಘ್ರವಿಕ್ರಮಃ ॥ ೪೫**

**ಅರ್ದಯಾಮಾಸ ಬಾಣೌಘೈರ್ವಿಚರಂತಮಭೀತವತ್ ।**
**ನಿಹತಂ ಸಾರಥಿಂ ದೃಷ್ಟ್ವಾ ಸಮರೇ ರಾವಣಾತ್ಮಜಃ ॥ ೪೬**

**ಪ್ರಜಹೌ ಸಮರೋದ್ಧರ್ಷಂ ವಿಷಣ್ಣಃ ಸ ಬಭೂವ ಹ ।**
**ವಿಷಣ್ಣವದನಂ ದೃಷ್ಟ್ವಾ ರಾಕ್ಷಸಂ ಹರಿಯೂಥಪಾಃ ॥ ೪೭**

---

ಲಕ್ಷ್ಮಣನು ಇಂದ್ರಜಿತುವಿನ ಸಾರಥಿಯ ತಲೆಯನ್ನು ತರಿದು ದೇಹದಿಂದ ಬೇರ್ಪಡಿಸಿದನು (೪೦–೪೨). ಹೀಗೆ ಸಾರಥಿಯು ಹತನಾದರೂ ಮಹಾ ತೇಜಸ್ವಿಯಾದ ಮೇಘನಾದನು ಎದೆಗುಂದಲಿಲ್ಲ. ಆ ಮಂಡೋದರೀ ತನಯನು ಸ್ವತಃ ಸಾರಥ್ಯವನ್ನು ಕೈಗೊಂಡು ರಥವನ್ನು ನಡೆಸುತ್ತ, ಧನುಸ್ಸನ್ನು ಹಿಡಿದು ಹೋರಾಡಿದನು (೪೩). ಇಂದ್ರಜಿತುವಿನ ಅದ್ಭುತ ವಾದ ಸಾಮರ್ಥ್ಯವನ್ನು ಕಂಡು ವಾನರಾದಿಗಳು ಬೆರಗಾದರು. ಅವನು ತನ್ನ ಅಶ್ವಗಳನ್ನು ಚೋದಿಸುವುದಕ್ಕಾಗಿ ಕೈನೀಡಿದಾಗ ಇಂದ್ರಜಿತುವಿಗೂ ಮತ್ತೆ ಧನುಸ್ಸನ್ನು ಹಿಡಿದು ಬಾಣವನ್ನು ಸೆಳೆಯುವಾಗ ಅವನ ಅಶ್ವಗಳಿಗೂ ಲಕ್ಷ್ಮಣನು ತ್ವರೆಯಿಂದ ಶರಗಳನ್ನು ಬಿಗಿಯುತ್ತಿದ್ದನು (೪೪–೪೫). ಇಂದ್ರಜಿತುವಿಗೆ ಲಕ್ಷ್ಮಣನ ಬಾಣಗಳನ್ನು ಕತ್ತರಿಸುವುದೇ ಕೆಲಸವಾಯಿತು. ಅವನು ಬಾಣಗಳನ್ನು ಕತ್ತರಿಸುತ್ತಿದ್ದಂತೆ ಲಕ್ಷ್ಮಣನು ಮೇಲಿಂದಮೇಲೆ ಬಾಣರಾಶಿಗಳನ್ನು ಪ್ರಯೋಗಿಸಿ, ನಿರ್ಭೀತನಾದ ಇಂದ್ರಜಿತುವನ್ನು ಕಂಗೆಡಿಸಿದನು. ತನ್ನ ಸಾರಥಿಯು ಹತನಾದುದನ್ನು ವೀಕ್ಷಿಸಿದ ರಾವಣ ತನಯನಿಗೆ ಯುದ್ಧೋತ್ಸಾಹವು ತಗ್ಗಿತು. ಅವನು ವಿಷಣ್ಣನಾದನು

ತತಃ ಪರಮಸಂಹೃಷ್ಟಾ ಲಕ್ಷ್ಮಣಂ ಚಾಭ್ಯಪೂಜಯನ್ ।
ತತಃ ಪ್ರಮಾಥೀ ಶರಭೋ ರಭಸೋ ಗಂಧಮಾದನಃ ॥ ೪೮

ಅಮೃಷ್ಯಮಾಣಾಶ್ಚತ್ವಾರಶ್ಚಕ್ರುರ್ವೇಗಂ ಹರೀಶ್ವರಾಃ ।
ತೇ ಚಾಸ್ಯ ಹಯಮುಖ್ಯೇಷು ತೂರ್ಣಮುತ್ಪ್ಲುತ್ಯ ವಾನರಾಃ ॥ ೪೯

ಚತುರ್ಷು ಸುಮಹಾವೀರ್ಯಾ ನಿಪೇತುರ್ಭೀಮವಿಕ್ರಮಾಃ ।
ತೇಷಾಮಧಿಷ್ಠಿತಾನಾಂ ತೈರ್ವಾನರೈಃ ಪರ್ವತೋಪಮೈಃ ॥ ೫೦

ಮುಖೇಭ್ಯೋ ರುಧಿರಂ ರಕ್ತಂ ಹಯಾನಾಂ ಸಮವರ್ತತ ।
ತೇ ಹಯಾ ಮಥಿತಾ ಭಗ್ನಾ ವ್ಯಸವೋ ಧರಣೀಂ ಗತಾಃ ॥ ೫೧

ತೇ ನಿಹತ್ಯ ಹಯಾಂಸ್ತಸ್ಯ ಪ್ರಮಥ್ಯ ಚ ಮಹಾರಥಮ್ ।
ಪುನರುತ್ಪತ್ಯ ವೇಗೇನ ತಸ್ಥುರ್ಲಕ್ಷ್ಮಣಪಾರ್ಶ್ವತಃ ॥ ೫೨

ಸ ಹತಾಶ್ವಾದವಪ್ಲುತ್ಯ ರಥಾನ್ಮಥಿತಸಾರಥೇಃ ।
ಶರವರ್ಷೇಣ ಸೌಮಿತ್ರಿಮಭ್ಯಧಾವತ ರಾವಣಿಃ ॥ ೫೩

---

(೪೬-೪೭). ಅವನ ಮುಖವು ಖಿನ್ನವಾಗಿರುವುದನ್ನು ನೋಡಿ, ಕಪಿನಾಯಕರು ಆನಂದತುಂದಿಲರಾಗಿ ಲಕ್ಷ್ಮಣನ ಶೌರ್ಯವನ್ನು ಕೊಂಡಾಡಿದರು. ಆಗ ಪ್ರಮಾಥಿ, ಶರಭ, ರಭಸ, ಗಂಧಮಾದನ ಎಂಬ ಭೀಮವಿಕ್ರಮರಾದ ನಾಲ್ವರು ಕಪಿಯೂಥಪರು ಸುಮ್ಮನಿರಲಾರದೆ ಮೇಲಕ್ಕೆ ನೆಗೆದು, ಇಂದ್ರಜಿತುವಿನ ನಾಲ್ಕು ಕುದುರೆಗಳಮೇಲೆ ಧುಮುಕಿ ಕುಳಿತರು! (೪೮-೪೯). ಪರ್ವತಾಕಾರದ ಆ ವಾನರರು ಒತ್ತಿ ಕುಳಿತೊಡನೆ ಕುದುರೆಗಳ ಬಾಯಿಂದ ರಕ್ತವು ಸುರಿಯಿತು. ವಾನರರ ಭಾರದಿಂದ ಜಜ್ಜಿಹೋದ ಆ ರಥಾಶ್ವಗಳ ಅಂಗಗಳು ನಿರ್ಭಗ್ನವಾದವು. ಅವು ಪ್ರಾಣವನ್ನು ನೀಗಿ ನೆಲದಮೇಲುರುಳಿದವು (೫೦-೫೧). ಆ ವಾನರಯೂಥಪರು ಈ ರೀತಿಯಲ್ಲಿ ಇಂದ್ರಜಿತುವಿನ ಅಶ್ವಗಳನ್ನು ಕೊಂದು ರಥವನ್ನು ಮುರಿದು ಈಡಾಡಿ, ಮಹಾವೇಗದಿಂದ ಹಾರಿ ಮತ್ತೆ ಲಕ್ಷ್ಮಣನ ಬಳಿಗೆ ಬಂದು ನಿಂತರು! (೫೨). ಹೀಗೆ ಇಂದ್ರಜಿತುವಿನ ಸಾರಥಿಯು ಹತನಾದನು; ಅಶ್ವಗಳು ಮೃತವಾದವು. ರಥವು ಭಗ್ನವಾಯಿತು. ಅಷ್ಟರಲ್ಲಿ ಆ ರಾವಣಿಯು ರಥದಿಂದ ಧುಮುಕಿ ಸೌಮಿತ್ರಿಯಮೇಲೆ ಶರಗಳ

ತತೋ ಮಹೇಂದ್ರಪ್ರತಿಮಃ ಸ ಲಕ್ಷ್ಮಣಃ
ಪದಾತಿನಂ ತಂ ನಿಶಿತೈಃ ಶರೋತ್ತಮೈಃ ।
ಸೃಜಂತಮಾಜೌ ನಿಶಿತಾನ್ ಶರೋತ್ತಮಾನ್
ಭೃಶಂ ತದಾ ಬಾಣಗಣೈರ್ನ್ಯವಾರಯತ್ ॥ ೫೪

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ನವತಿತಮಃ ಸರ್ಗಃ



ಮುಳಿಗರೆದನು (೫೩). ದೇವೇಂದ್ರನಿಗೆ ಸಾಟಿಯಾದ ಲಕ್ಷ್ಮಣನು ಪದಾತಿಯಾಗಿದ್ದ ಇಂದ್ರಜಿತುವನ್ನು ನಿಶಿತಶರಗಳಿಂದ ಎದುರಿಸಿದನು. ಆ ಸಂಗ್ರಾಮಾಂಗಣದಲ್ಲಿ ಉತ್ತಮಶರಗಳನ್ನೇ ತೆಗೆತೆಗೆದು ಬಿಗಿಯುತ್ತಿದ್ದ ಆ ರಾಕ್ಷಸನ ಶರಗಳನ್ನು ತನ್ನ ಬಾಣಗಳಿಂದ ಛೇದಿಸುತ್ತಿದ್ದನು (೫೪).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತನೆಯ ಸರ್ಗ



## ಏಕನವತಿತಮಃ ಸರ್ಗಃ

### ರಾವಣಿವಧಃ

ಸ ಹತಾಶ್ವೋ ಮಹಾತೇಜಾ ಭೂಮೌ ತಿಷ್ಠನ್ನಿಶಾಚರಃ ।
ಇಂದ್ರಜಿತ್ ಪರಮಕ್ರುದ್ಧಃ ಸಂಪ್ರಜಜ್ವಾಲ ತೇಜಸಾ ॥ ೧

ತೌ ಧನ್ವಿನೌ ಜಿಘಾಂಸಂತಾವನ್ಯೋಽನ್ಯಮಿಷುಭಿರ್ಭೃಶಮ್ ।
ವಿಜಯೇನಾಭಿನಿಷ್ಕ್ರಾಂತೌ ವನೇ ಗಜವೃಷಾವಿವ ॥ ೨

ನಿಬರ್ಹಯಂತಶ್ಚಾನ್ಯೋಽನ್ಯಂ ತೇ ರಾಕ್ಷಸವನೌಕಸಃ ।
ಭರ್ತಾರಂ ನ ಜಹುರ್ಯುದ್ಧೇ ಸಂಪತಂತಸ್ತತಸ್ತತಃ ॥ ೩

ತತಸ್ತಾನ್ ರಾಕ್ಷಸಾನ್ ಸರ್ವಾನ್ ಹರ್ಷಯನ್ ರಾವಣಾತ್ಮಜಃ ।
ಸ್ತುವಾನೋ ಹರ್ಷಮಾಣಶ್ಚ ಇದಂ ವಚನಮಬ್ರವೀತ್ ॥ ೪

ತಮಸಾ ಬಹುಲೇನೇಮಾಃ ಸಂಸಕ್ತಾಃ ಸರ್ವತೋ ದಿಶಃ ।
ನೇಹ ವಿಜ್ಞಾಯತೇ ಸ್ವೋ ವಾ ಪರೋ ವಾ ರಾಕ್ಷಸೋತ್ತಮಾಃ ॥ ೫

## ಸರ್ಗ ೯೧

### ಲಕ್ಷ್ಮಣನಿಂದ ಇಂದ್ರಜಿತುವಿನ ವಧೆ.

ಹೀಗೆ ರಥಾಶ್ವಗಳು ನಷ್ಟವಾದರೂ ಮಹಾತೇಜಸ್ವಿಯಾದ ಇಂದ್ರಜಿತು ಭೂಮಿಯಲ್ಲಿಯೇ ನಿಂತು ಅತ್ಯಂತಕ್ರುದ್ಧನಾಗಿ ಶೌರ್ಯಾತಿಶಯದಿಂದ ಮತ್ತಷ್ಟು ಅಧಿಕವಾಗಿ ಮೆರೆದನು. ಆತನೂ ಲಕ್ಷ್ಮಣನೂ ಧನುರ್ಧಾರಿಗಳಾಗಿ ಪರಸ್ಪರರನ್ನು ಸಂಹರಿಸಬೇಕೆಂದು ಶರಗಳನ್ನು ಪ್ರಯೋಗಿಸುತ್ತ ಒಬ್ಬರಮೇಲೊಬ್ಬರು ವಿಜಯವನ್ನು ಗಳಿಸುತ್ತ ಸಲಗಗಳಂತೆ ಹೋರಾಡಿದರು (೧–೨). ಹಾಗೆಯೇ ರಾಕ್ಷಸಭಟರೂ ವಾನರಯೋಧರೂ ತಮ್ಮ ತಮ್ಮ ನಾಯಕರಾದ ಇಂದ್ರಜಿತುವನ್ನೂ ಲಕ್ಷ್ಮಣನನ್ನೂ ಅಗಲಿ ದೂರ ಹೋಗದೆ, ಅವರ ಸಮೀಪದಲ್ಲಿಯೇ ಕಾದಾಡುತ್ತಿದ್ದರು (೩). ಆಗ ಇಂದ್ರಜಿತು ರಾಕ್ಷಸಭಟರಿಗೆ ಹರ್ಷವಾಗುವಂತೆ ಅವರನ್ನು ಕೊಂಡಾಡುತ್ತ ಉತ್ಸಾಹದಿಂದ "ಎಲೈ ರಾಕ್ಷಸಭಟರೆ, ಸಕಲ ದಿಕ್ಕನ್ನೂ ಕತ್ತಲೆಯು ವ್ಯಾಪಿಸಿಬಿಟ್ಟಿತು. ಈ ಕತ್ತಲೆಯಲ್ಲಿ ನಮ್ಮವನು ಯಾರು, ಶತ್ರು ಯಾರು

ಧೃಷ್ಟಂ ಭವಂತೋ ಯುಧ್ಯಂತು ಹರೀಣಾಂ ಮೋಹನಾಯ ವೈ ।
ಅಹಂ ತು ರಥಮಾಸ್ಥಾಯ ಆಗಮಿಷ್ಯಾಮಿ ಸಂಯುಗಮ್ ॥ ೭

ತಥಾ ಭವಂತಃ ಕುರ್ವಂತು ಯಥೇಮೇ ಕಾನನೌಕಸಃ ।
ನ ಯುಧ್ಯೇಯುರ್ದುರಾತ್ಮಾನಃ ಪ್ರವಿಷ್ಟೇ ನಗರಂ ಮಯಿ ॥ ೭

ಇತ್ಯುಕ್ತ್ವಾ ರಾವಣಸುತೋ ವಂಚಯಿತ್ವಾ ವನೌಕಸಃ ।
ಪ್ರವಿವೇಶ ಪುರೀಂ ಲಂಕಾಂ ರಥಹೇತೋರಮಿತ್ರಹಾ ॥ ೮

ಸ ರಥಂ ಭೂಷಯಿತ್ವಾ ತು ರುಚಿರಂ ಹೇಮಭೂಷಿತಮ್ ।
ಪ್ರಾಸಾಸಿಶತಸಂಪೂರ್ಣಂ ಯುಕ್ತಂ ಪರಮವಾಜಿಭಿಃ ॥ ೯

ಅಧಿಷ್ಠಿತಂ ಹಯಜ್ಞೇನ ಸೂತೇನಾಪ್ತೋಪದೇಶಿನಾ ।
ಆರುರೋಹ ಮಹಾತೇಜಾ ರಾವಣಿಃ ಸಮಿತಿಂಜಯಃ ॥ ೧೦

ಸ ರಾಕ್ಷಸಗಣೈರ್ಮುಖ್ಯೈರ್ವೃತೋ ಮಂದೋದರೀಸುತಃ ।
ನಿರ್ಯಯೌ ನಗರಾತ್ತೂರ್ಣಂ ಕೃತಾಂತಬಲಚೋದಿತಃ ॥ ೧೧

---

ಎಂಬುದೇ ತಿಳಿಯುವುದಿಲ್ಲ (೪-೫). ನಾನು ಲಂಕೆಗೆ ಹೋಗಿ ಬೇರೊಂದು ರಥವನ್ನು ತೆಗೆದುಕೊಂಡು ಮತ್ತೆ ರಣಭೂಮಿಗೆ ಬರುವೆನು. ನಾನಿಲ್ಲವೆಂಬುದು ವಾನರರಿಗೆ ತಿಳಿಯದಂತೆ, ನೀವು ಶೌರ್ಯವನ್ನು ಪ್ರದರ್ಶಿಸುತ್ತ ಅಳುಕದೆ ಕಾದಾಡುತ್ತಿರಿ. ನಾನು ನಗರಕ್ಕೆ ಹಿಂದಿರುಗಿದಾಗ, ಖೂಳರಾದ ಈ ಕಪಿಗಳು ನಾನಿಲ್ಲವೆಂದು ಧೈರ್ಯದಿಂದ ಘೋರವಾದ ಯುದ್ಧವನ್ನು ಆರಂಭಿಸಿಯಾರು ! ಹಾಗೆ ಮಾಡದಂತೆ ನೀವು ಅವರನ್ನು ಮೋಸದಿಂದ ತಡೆದು ನಿಲ್ಲಿಸಿರಿ ! ” ಎಂದು ತಿಳಿಸಿದನು (೬-೭). ಆಮೇಲೆ ರಾವಣ ತನಯನು ವಾನರರಿಗೆ ತಿಳಿಯದಂತೆ ಅವರನ್ನು ವಂಚಿಸಿ, ರಥವನ್ನು ತರುವುದಕ್ಕಾಗಿ ಲಂಕೆಗೆ ಹೋದನು. ಅಲ್ಲಿ ಹೇಮಭೂಷಿತವಾದ ಒಂದು ಸುಂದರ ರಥವನ್ನು ಬೇಗನೆ ತರಿಸಿ ಅಲಂಕರಿಸಿದನು. ಆ ರಥದಲ್ಲಿ ಪ್ರಾಸ, ಖಡ್ಗ ಮುಂತಾದ ನೂರಾರು ಆಯುಧಗಳು ತುಂಬಿದ್ದವು. ಉತ್ತಮ ಜಾತಿಯ ಅಶ್ವಗಳನ್ನು ಅದಕ್ಕೆ ಹೂಡಲಾಗಿತ್ತು (೮-೯). ಆಪ್ತನೂ ಅಶ್ವಶಾಸ್ತ್ರಜ್ಞನೂ ಆದ ಪಳಗಿದ ಸಾರಥಿಯು ರಥದಲ್ಲಿ ಕುಳಿತಿದ್ದನು. ತೇಜಸ್ವಿಯಾದ ರಾವಣಿಯು ಬಂದು ಆ ರಥವನ್ನೇರಿದನು. ಮತ್ತೆ ಕೆಲವು

ಸೋಽಭಿನಿಷ್ಕ್ರಮ್ಯ ನಗರಾದಿಂದ್ರಜಿತ್ ಪರವೀರಹಾ ।
ಅಭ್ಯಯಾಜ್ಜವನೈರಶ್ವೈರ್ಲಕ್ಷ್ಮಣಂ ಸವಿಭೀಷಣಮ್ ॥ ೧೨
ತತೋ ರಥಸ್ಥಮಾಲೋಕ್ಯ ಸೌಮಿತ್ರೀ ರಾವಣಾತ್ಮಜಮ್ ।
ವಾನರಾಶ್ಚ ಮಹಾವೀರ್ಯಾ ರಾಕ್ಷಸಾಶ್ಚ ವಿಭೀಷಣಃ ॥ ೧೩
ವಿಸ್ಮಯಂ ಪರಮಂ ಜಗ್ಮುರ್ಲಾಘವಾತ್ತಸ್ಯ ಧೀಮತಃ ।
ರಾವಣಿಶ್ಚಾಪಿ ಸಂಕ್ರುದ್ಧೋ ರಣೇ ವಾನರಯೂಥಪಾನ್ ॥ ೧೪
ಪಾತಯಾಮಾಸ ಬಾಣೌಘೈಃ ಶತಶೋಽಥ ಸಹಸ್ರಶಃ ।
ಸ ಮಂಡಲೀಕೃತಧನೂ ರಾವಣಿಃ ಸಮಿತಿಂಜಯಃ ॥ ೧೫
ಹರೀನಭ್ಯಹನತ್ ಕ್ರುದ್ಧಃ ಪರಂ ಲಾಘವಮಾಸ್ಥಿತಃ ।
ತೇ ವಧ್ಯಮಾನಾ ಹರಯೋ ನಾರಾಚೈರ್ಭೀಮವಿಕ್ರಮಾಃ ॥ ೧೬
ಸೌಮಿತ್ರಿಂ ಶರಣಂ ಪ್ರಾಪ್ತಾಃ ಪ್ರಜಾಪತಿಮಿವ ಪ್ರಜಾಃ ।
ತತಃ ಸಮರಕೋಪೇನ ಜ್ವಲಿತೋ ರಘುನಂದನಃ ॥ ೧೭

---

ಮುಖ್ಯರಾದ ರಾಕ್ಷಸಯೋಧರಿಂದ ಪರಿವೃತನಾದ ಆ ಮಂಡೋದರೀ ತನಯನು ತ್ವರಿತವಾಗಿ ನಗರದಿಂದ ಹೊರಟನು. ಕಾಲಮೃತ್ಯುವು ತ್ವರೆಯಿಂದ ಅವನನ್ನು ಹೊರಗೆ ದಬ್ಬುತ್ತಿತ್ತು! (೧೦-೧೧). ಮಹಾಪ್ರತಾಪಶಾಲಿಯಾದ ಆ ಇಂದ್ರಜಿತು ಲಂಕಾನಗರದಿಂದ ಹೊರಟು ಕುದುರೆಗಳನ್ನು ದೌಡಾಯಿಸುತ್ತ, ಲಕ್ಷ್ಮಣನು ವಿಭೀಷಣಸಮೇತನಾಗಿದ್ದ ಸ್ಥಳಕ್ಕೆ ಬಂದನು. ಇಂದ್ರಜಿತು ಬೇರೊಂದು ರಥದಲ್ಲಿ ಮಂಡಿಸಿರುವುದನ್ನು ಕಂಡು, ಲಕ್ಷ್ಮಣನೂ ವಿಭೀಷಣನೂ ವಾನರರೂ ವಿಸ್ಮಿತರಾದರು ! ಎಷ್ಟು ಬೇಗನೆ ಬೇರೊಂದು ರಥವನ್ನು ತಂದನೆಂದು ಅಚ್ಚರಿಗೊಂಡರು ! (೧೨-೧೩). ರೋಷಾವಿಷ್ಟನಾದ ರಾವಣಿಯು ರಣರಂಗದಲ್ಲಿ ಶರರಾಶಿಗಳನ್ನು ತೂರಿ, ನೂರುಗಟ್ಟಲೆ ಸಾವಿರಗಟ್ಟಲೆ ವಾನರರನ್ನು ಹೊಡೆದುರುಳಿಸಿದನು. ಧನುಸ್ಸನ್ನು ಮಂಡಲಾಕಾರವಾಗಿ ಜಗ್ಗಿ, ಕೈಚಳಕದಿಂದ ಅತಿವೇಗವಾಗಿ ಬಾಣಗಳನ್ನು ಹೊಡೆದು ಕಪಿಗಳನ್ನು ಕೊಂದೊಟ್ಟಿದನು (೧೪-೧೫). ಅವನ ಶರಹತಿಗಳಿಂದ ಕಂಗೆಟ್ಟು ಭೀಮವಿಕ್ರಮರಾದ ವಾನರರೂ ಸಹ, ಭೀತರಾದ ಪ್ರಜೆಗಳು ತಮ್ಮ ರಾಜನನ್ನು ಮರೆಹೊಗುವಂತೆ ಸೌಮಿತ್ರಿಯನ್ನು ಮರೆಹೊಕ್ಕರು (೧೬). ಆ ರಘುನಂದನನು ಕೋಪದಿಂದ ಉರಿದುಬಿದ್ದು

ಚಿಚ್ಛೇದ ಕಾರ್ಮುಕಂ ತಸ್ಯ ದರ್ಶಯನ್ ಪಾಣಿಲಾಘವಮ್ ।
ಸೋಽನ್ಯತ್ ಕಾರ್ಮುಕಮಾದಾಯ ಸಜ್ಯಂ ಚಕ್ರೇ ತ್ವರನ್ನಿವ ॥ ೧೮

ತದಪ್ಯಸ್ಯ ತ್ರಿಭಿರ್ಬಾಣೈರ್ಲಕ್ಷ್ಮಣೋ ನಿರಕೃಂತತ ।
ಅಥೈನಂ ಛಿನ್ನಧನ್ವಾನಮಾಶೀವಿಷವಿಷೋಪಮೈಃ ॥ ೧೯

ವಿವ್ಯಾಧೋರಸಿ ಸೌಮಿತ್ರೀ ರಾವಣಿಂ ಪಂಚಭಿಃ ಶರೈಃ ।
ತೇ ತಸ್ಯ ಕಾಯಂ ನಿರ್ಭಿದ್ಯ ಮಹಾಕಾರ್ಮುಕನಿಃಸೃತಾಃ ॥ ೨೦

ನಿಪೇತುರ್ಧರಣೀಂ ಬಾಣಾ ರಕ್ತಾ ಇವ ಮಹೋರಗಾಃ ।
ಸ ಭಿನ್ನವರ್ಮಾ ರುಧಿರಂ ವಮನ್ ವಕ್ತ್ರೇಣ ರಾವಣಿಃ ॥ ೨೧

ಜಗ್ರಾಹ ಕಾರ್ಮುಕಶ್ರೇಷ್ಠಂ ದೃಢಜ್ಯಂ ಬಲವತ್ತರಮ್ ।
ಸ ಲಕ್ಷ್ಮಣಂ ಸಮುದ್ದಿಶ್ಯ ಪರಂ ಲಾಘವಮಾಸ್ಥಿತಃ ॥ ೨೨

ವವರ್ಷ ಶರವರ್ಷಾಣಿ ವರ್ಷಾಣೀವ ಪುರಂದರಃ ।
ಮುಕ್ತಮಿಂದ್ರಜಿತಾ ತತ್ತು ಶರವರ್ಷಮರಿಂದಮಃ ॥ ೨೩

---

ಇಂದ್ರಜಿತುವಿನ ಚಾಪವನ್ನು ಕತ್ತರಿಸಿ, ತನ್ನ ಹಸ್ತಲಾಘವವನ್ನು ಮೆರೆಸಿದನು. ಆಗ ಇಂದ್ರಜಿತು ಬೇಗಬೇಗನೆ ಇನ್ನೊಂದು ಚಾಪವನ್ನು ತೆಗೆದು ಹೆದೆಯೇರಿಸಿದನು. ಲಕ್ಷ್ಮಣನು ಮೂರು ಬಾಣಗಳನ್ನು ಹೊಡೆದು ಅದನ್ನೂ ತುಂಡರಿಸಿದನು (೧೭-೧೮). ಇಂದ್ರಜಿತುವಿನ ಚಾಪವು ತುಂಡರಿಸಿ ಹೋಗಲು, ಲಕ್ಷ್ಮಣನು ಸರ್ಪವಿಷದಂತೆ ಕ್ರೂರವಾದ ಐದು ಸರಳುಗಳಿಂದ ಅವನ ಎದೆಗೆ ಎಚ್ಚನು. ಲಕ್ಷ್ಮಣನ ಮಹಾಧನುಸ್ಸಿನಿಂದ ಚಿಮ್ಮಿಹೋದ ಆ ಸರಳುಗಳು ರಾವಣಿಯ ದೇಹವನ್ನು ಕೊರೆದು ರಕ್ತದಲ್ಲಿ ನೆನೆದು, ಕೆಂಪನೆಯ ಮಹಾಸರ್ಪಗಳೋ ಎಂಬಂತೆ ಹೊಳೆಯುತ್ತ ನೆಲದಲ್ಲಿ ತೂರಿ ಹೋದವು. ಇಂದ್ರಜಿತುವಿನ ಕವಚವು ಭಿನ್ನವಾಯಿತು. ಅವನು ರಕ್ತವನ್ನು ಕಕ್ಕಿದನು (೧೯-೨೧). ಮರುನಿಮಿಷದಲ್ಲಿಯೇ ಅವನು ದೃಢವಾದ ಹೆದೆಯುಳ್ಳ ಶ್ರೇಷ್ಠವಾದ ಕಾರ್ಮುಕವನ್ನು ಹಿಡಿದು, ಇಂದ್ರನು ಮಳೆಗರೆಯುವಂತೆ ಕರಲಾಘವದಿಂದ ಶರಜಾಲಗಳನ್ನು ಸೌಮಿತ್ರಿಯಮೇಲೆ ಸುರಿದನು (೨೨). ಅದಕ್ಕೆ ಲಕ್ಷ್ಮಣನು ಕೊಂಚವೂ ಅಳುಕದೆ ಇಂದ್ರಜಿತು

ಅವಾರಯದಸಂಭ್ರಾಂತೋ ಲಕ್ಷ್ಮಣಃ ಸುದುರಾಸದಮ್ ।
ದರ್ಶಯಾಮಾಸ ಚ ತದಾ ರಾವಣಿಂ ರಘುನಂದನಃ ॥ ೨೪

ಅಸಂಭ್ರಾಂತೋ ಮಹಾತೇಜಾಸ್ತದದ್ಭುತಮಿವಾಭವತ್ ।
ತತಸ್ತಾನ್ ರಾಕ್ಷಸಾನ್ ಸರ್ವಾಂಸ್ತ್ರಿಭಿರೇಕೈಕಮಾಹವೇ ॥ ೨೫

ಅವಿಧ್ಯತ್ ಪರಮಕ್ರುದ್ಧಃ ಶೀಘ್ರಾಸ್ತ್ರಂ ಸಂಪ್ರದರ್ಶಯನ್ ।
ರಾಕ್ಷಸೇಂದ್ರಸುತಂ ಚಾಪಿ ಬಾಣೌಘೈಃ ಸಮತಾಡಯತ್ ॥ ೨೬

ಸೋಽತಿವಿದ್ಧೋ ಬಲವತಾ ಶತ್ರುಣಾ ಶತ್ರುಘಾತಿನಾ ।
ಅಸಕ್ತಂ ಪ್ರೇಷಯಾಮಾಸ ಲಕ್ಷ್ಮಣಾಯ ಬಹೂನ್ ಶರಾನ್ ॥ ೨೭

ತಾನಪ್ರಾಪ್ತಾನ್ ಶಿತೈರ್ಬಾಣೈಶ್ಚಿಚ್ಛೇದ ರಘುನಂದನಃ ।
ಸಾರಥೇರಸ್ಯ ಚ ರಣೇ ರಥಿನೋ ರಘುಸತ್ತಮಃ ॥ ೨೮

ಶಿರೋ ಜಹಾರ ಧರ್ಮಾತ್ಮಾ ಭಲ್ಲೇನಾನತಪರ್ವಣಾ ।
ಅಸೂತಾಸ್ತೇ ಹಯಾಸ್ತತ್ರ ರಥಮೂಹುರವಿಕ್ಲವಾಃ ॥ ೨೯

---

ವಿನ ದುರ್ಧರ್ಷವಾದ ಬಾಣಗಣವನ್ನು ತರಿದನು. ತನ್ನ ಕರಲಾಘವವೂ ಯಾವ ಪರಿಯದೆಂಬುದನ್ನು ಸೌಮಿತ್ರಿಯು ರಾವಣಿಗೆ ಅದ್ಭುತರೀತಿಯಲ್ಲಿ ಪರಿಚಯಮಾಡಿಕೊಟ್ಟನು (೨೩-೨೪). ಸಂಕ್ರುದ್ಧನಾದ ಲಕ್ಷ್ಮಣನು ರಣರಂಗದಲ್ಲಿ ನೆರೆದಿದ್ದ ನಿಖಿಲ ರಾಕ್ಷಸ ಭಟರಲ್ಲಿ ಒಬ್ಬೊಬ್ಬನನ್ನೂ ಮೂರು ಮೂರು ಬಾಣಗಳಿಂದ ಬಿಗಿದು, ಇಂದ್ರಜಿತುವನ್ನೂ ಬಾಣರಾಶಿಗಳಿಂದ ಹೊಡೆದನು (೨೫-೨೬). ಪ್ರಬಲನೂ ಶತ್ರುಘಾತಿಯೂ ಆದ ಶತ್ರುವಿನಿಂದ ಬಹಳ ಗಾಯಗೊಂಡ ಇಂದ್ರಜಿತು ಲಕ್ಷ್ಮಣನಮೇಲೆ ಸಂತತವಾಗಿ ಶರರಾಶಿಯನ್ನು ಹರಿಸಿದನು. ಲಕ್ಷ್ಮಣನಾದರೋ ಆ ಶರಗಳು ಬಳಿಗೆ ಬರುವುದರೊಳಗೆ ಮಧ್ಯದಲ್ಲಿಯೇ ನಿಶಿತಾಸ್ತ್ರಗಳಿಂದ ಕೊಚ್ಚಿಹಾಕಿದನು (೨೭). ಆ ರಘುಶ್ರೇಷ್ಠನು ಒಂದು ಕೊಂಕು ಬಾಣವನ್ನು ಪ್ರಯೋಗಿಸಿ, ಇಂದ್ರಜಿತುವಿನ ಸಾರಥಿಯ ತಲೆಯನ್ನು ತರಿದನು. ಅನಂತರ ಸಾರಥಿಯಿಲ್ಲದಿದ್ದರೂ ಇಂದ್ರಜಿತುವಿನ ರಥಾಶ್ವಗಳು ಸ್ವಲ್ಪವೂ ತಲ್ಲಣಗೊಳ್ಳದೆ ಮಂಡಲಾಕಾರವಾಗಿ ಸುತ್ತುತ್ತ ರಥವನ್ನು ಸರಿಯಾಗಿ ಎಳೆಯುತ್ತಲೇ ಇದ್ದವು! ಅದನ್ನು ನೋಡಿ ಸಕಲರೂ ಆಶ್ಚರ್ಯಚಕಿತರಾದರು (೨೮-೨೯).

ಮಂಡಲಾನ್ಯಭಿಧಾವಂತಸ್ತದದ್ಭುತಮಿವಾಭವತ್ ।
ಅಮರ್ಷವಶಮಾಪನ್ನಃ ಸೌಮಿತ್ರಿರ್ದೃಢವಿಕ್ರಮಃ ॥ ೩೦

ಪ್ರತ್ಯವಿಧ್ಯದ್ಧಯಾಂಸ್ತಸ್ಯ ಶರೈರ್ವಿತ್ರಾಸಯನ್ ರಣೇ ।
ಅಮೃಷ್ಯಮಾಣಸ್ತತ್ಕರ್ಮ ರಾವಣಸ್ಯ ಸುತೋ ಬಲೀ ॥ ೩೧

ವಿವ್ಯಾಧ ದಶಭಿರ್ಬಾಣೈಃ ಸೌಮಿತ್ರಿಂ ತಮಮರ್ಷಣಮ್ ।
ತೇ ತಸ್ಯ ವಜ್ರಪ್ರತಿಮಾಃ ಶರಾಃ ಸರ್ಪವಿಷೋಪಮಾಃ ॥ ೩೨

ವಿಲಯಂ ಜಗ್ಮುರಾಹತ್ಯ ಕವಚಂ ಕಾಂಚನಪ್ರಭಮ್ ।
ಅಭೇದ್ಯಕವಚಂ ಮತ್ವಾ ಲಕ್ಷ್ಮಣಂ ರಾವಣಾತ್ಮಜಃ ॥ ೩೩

ಲಲಾಟೇ ಲಕ್ಷ್ಮಣಂ ಬಾಣೈಃ ಸುಪುಂಖೈಸ್ತ್ರಿಭಿರಿಂದ್ರಜಿತ್ ।
ಅವಿಧ್ಯತ್ ಪರಮಕ್ರುದ್ಧಃ ಶೀಘ್ರಾಸ್ತ್ರಂ ಚ ಪ್ರದರ್ಶಯನ್ ॥ ೩೪

ತೈಃ ಪೃಷತ್ಕೈರ್ಲಲಾಟಸ್ಥೈಃ ಶುಶುಭೇ ರಘುನಂದನಃ ।
ರಣಾಗ್ರೇ ಸಮರಶ್ಲಾಘೀ ತ್ರಿಶೃಂಗ ಇವ ಪರ್ವತಃ ॥ ೩೫

ಸ ತಥಾ ಹ್ಯರ್ದಿತೋ ಬಾಣೈ ರಾಕ್ಷಸೇನ ಮಹಾಮೃಧೇ ।
ತಮಾಶು ಪ್ರತಿವಿವ್ಯಾಧ ಲಕ್ಷ್ಮಣಃ ಪಂಚಭಿಃ ಶರೈಃ ॥ ೩೬

---

ದೃಢವಿಕ್ರಮನಾದ ಸೌಮಿತ್ರಿಯು ರೋಷಾವಿಷ್ಟನಾಗಿ ಶರಗಳಿಂದ ಹೊಡೆದು ಆ ಕುದುರೆಗಳನ್ನು ಕಂಗೆಡಿಸಿದನು. ಅದನ್ನು ನೋಡಿ ಸಹಿಸಲಾರದೆ ಬಲಾಢ್ಯನಾದ ರಾವಣತನಯನು ಹತ್ತು ಕೂರ್ಗಣೆಗಳಿಂದ ಗುರಿಯಿಟ್ಟು ಲಕ್ಷ್ಮಣನನ್ನು ಪ್ರಹರಿಸಿದನು (೩೦-೩೧). ವಜ್ರಾಯುಧದಂತೆ ಕಠೋರವಾಗಿಯೂ ಸರ್ಪವಿಷದಂತೆ ಉಗ್ರವಾಗಿಯೂ ಇದ್ದ ಆ ಘೋರ ಶರಗಳು ಲಕ್ಷ್ಮಣನ ಕನಕರಂಜಿತವಾದ ಕವಚಕ್ಕೆ ತಾಕಿ ಮುರಿದುಬಿದ್ದವು. ಲಕ್ಷ್ಮಣನ ಕವಚವು ಅಭೇದ್ಯವೆಂಬುದನ್ನರಿತು ಕ್ರುದ್ಧನಾದ ಇಂದ್ರಜಿತು ತನ್ನ ಹಸ್ತಲಾಘವವನ್ನು ಪ್ರದರ್ಶಿಸುತ್ತ, ಪುಂಖಾಂಕಿತಗಳಾದ ಮೂರು ಶರಗಳಿಂದ ಲಕ್ಷ್ಮಣನ ಹಣೆಗೆ ಹೊಡೆದನು (೩೨-೩೪). ಆ ಶರಗಳು ಹಣೆಯಲ್ಲಿ ನೆಟ್ಟುಕೊಳ್ಳಲು ಶೂರಾಗ್ರಗಣ್ಯನಾದ ರಘುನಂದನನು, ಮೂರು ಶಿಖರಗಳಿಂದ ರಾಜಿಸುವ ಬೆಟ್ಟದಂತೆ ಕಂಗೊಳಿಸಿದನು. ಒಡನೆಯೇ ಲಕ್ಷ್ಮಣನು ಐದು ಬಾಣಗಳನ್ನು ಹಿರಿದು ಇಂದ್ರಜಿತುವಿನ ಕುಂಡಲಾಲಂಕೃತ

ವಿಕೃಷ್ಯೇಂದ್ರಜಿತೋ ಯುದ್ಧೇ ವದನೇ ಶುಭಕುಂಡಲೇ |
ಲಕ್ಷ್ಮಣೇಂದ್ರಜಿತೌ ವೀರೌ ಮಹಾಬಲಶರಾಸನೌ || ೩೭

ಅನ್ಯೋನ್ಯಂ ಜಘ್ನತುರ್ಬಾಣೈರ್ವಿಶಿಖೈರ್ಭೀಮವಿಕ್ರಮೌ |
ತತಃ ಶೋಣಿತದಿಗ್ಧಾಂಗೌ ಲಕ್ಷ್ಮಣೇಂದ್ರಜಿತಾವುಭೌ || ೩೮

ರಣೇ ತೌ ರೇಜತುರ್ವೀರೌ ಪುಷ್ಪಿತಾವಿವ ಕಿಂಶುಕೌ |
ತೌ ಪರಸ್ಪರಮಭ್ಯೇತ್ಯ ಸರ್ವಗಾತ್ರೇಷು ಧನ್ವಿನೌ || ೩೯

ಘೋರೈರ್ವಿವ್ಯಧತುರ್ಬಾಣೈಃ ಕೃತಭಾವಾವುಭೌ ಜಯೇ |
ತತಃ ಸಮರಕೋಪೇನ ಸಂಯುಕ್ತೋ ರಾವಣಾತ್ಮಜಃ || ೪೦

ವಿಭೀಷಣಂ ತ್ರಿಭಿರ್ಬಾಣೈರ್ವಿವ್ಯಾಧ ವದನೇ ಶುಭೇ |
ಅಯೋಮುಖೈಸ್ತ್ರಿಭಿರ್ವಿದ್ಧ್ವಾ ರಾಕ್ಷಸೇಂದ್ರಂ ವಿಭೀಷಣಮ್ || ೪೧

ಏಕೈಕೇನಾಭಿವಿವ್ಯಾಧ ತಾನ್ ಸರ್ವಾನ್ ಹರಿಯೂಥಪಾನ್ |
ತಸ್ಮೈ ದೃಢತರಂ ಕ್ರುದ್ಧೋ ಜಘಾನ ಗದಯಾ ಹಯಾನ್ || ೪೨

---

ವಾದ ಮುಖಕ್ಕೆ ಹೊಡೆದು ಗಾಯಪಡಿಸಿದನು (೩೫-೩೭). ಭೀಮವಿಕ್ರಮರೂ ಪ್ರಬಲಧನುರ್ಧಾರಿಗಳೂ ಶೂರಾಗ್ರಗಣ್ಯರೂ ಆದ ಲಕ್ಷ್ಮಣನೂ ಇಂದ್ರಜಿತುವೂ ಈ ಪ್ರಕಾರವಾಗಿ ನಿಶಿತಶರಗಳಿಂದ ಕಾದಾಡಿದರು. ಇಬ್ಬರ ಶರೀರಗಳೂ ರಕ್ತದಲ್ಲಿ ನೆನೆದವು. ಆ ರಣಾಂಗಣದಲ್ಲಿ ಅವರಿಬ್ಬರೂ ಅರಳಿದ ಮುತ್ತುಗದ ಮರಗಳಂತೆ ವಿರಾಜಿಸಿದರು (೩೭-೩೮). ಧನ್ವಿಗಳಾದ ಆ ವೀರರು ಜಯಿಸಬೇಕೆಂಬ ಹಠದಿಂದ ಒಬ್ಬರನ್ನೊಬ್ಬರು ಘೋರಾಸ್ತ್ರಗಳಿಂದ ಹೊಡೆದು ಸರ್ವಾಂಗಗಳಲ್ಲಿಯೂ ಗಾಯಗೊಂಡರು. ಆಮೇಲೆ ಸಮರಕಾಲದಲ್ಲುಂಟಾದ ಕೋಪೋದ್ರೇಕದಿಂದ ರಾವಣಾತ್ಮಜನು ವಿಭೀಷಣನ ಮುಖಕ್ಕೆ ಗುರಿಯಿಟ್ಟು ಮೂರು ಬಾಣಗಳನ್ನು ಹೊಡೆದನು ! (೩೯-೪೦). ಉಕ್ಕಿನ ಅಲಗುಗಳಿಂದ ಯುಕ್ತವಾದ ಮೂರು ಸರಳುಗಳನ್ನು ಮತ್ತೆ ವಿಭೀಷಣನಿಗೆ ಹೊಡೆದು, ಒಂದೊಂದು ಬಾಣದಿಂದ ಅಲ್ಲಿದ್ದ ಸಮಸ್ತ ಕಪಿಯೂಥರಿಗೂ ಬಿಗಿದನು. ಆಗ ವಿಭೀಷಣನು ರೋಷಾವಿಷ್ಟನಾಗಿ ತನ್ನ ಗದೆಯಿಂದ ದುರಾತ್ಮನಾದ ಇಂದ್ರಜಿತುವಿನ ರಥಕ್ಕೆ ಹೂಡಿದ್ದ

ವಿಭೀಷಣೋ ಮಹಾತೇಜಾ ರಾವಣೇಃ ಸ ದುರಾತ್ಮನಃ ।
ಸ ಹತಾಶ್ವಾದವಪ್ಲುತ್ಯ ರಥಾನ್ನಿಹತಸಾರಥೇಃ ॥ ೪೩

ರಥಶಕ್ತಿಂ ಮಹಾತೇಜಾಃ ಪಿತೃವ್ಯಾಯ ಮುಮೋಚ ಹ ।
ತಾಮಾಪತಂತೀಂ ಸಂಪ್ರೇಕ್ಷ್ಯ ಸುಮಿತ್ರಾನಂದವರ್ಧನಃ ॥ ೪೪

ಚಿಚ್ಛೇದ ನಿಶಿತೈರ್ಬಾಣೈರ್ದಶಧಾ ಸಾಪತದ್ಭುವಿ ।
ತಸ್ಮೈ ದೃಢಧನುಃ ಕ್ರುದ್ಧೋ ಹತಾಶ್ವಾಯ ವಿಭೀಷಣಃ ॥ ೪೫

ವಜ್ರಸ್ಪರ್ಶಸಮಾನ್ ಪಂಚ ಸಸರ್ಜೋರಸಿ ಮಾರ್ಗಣಾನ್ ।
ತೇ ತಸ್ಯ ಕಾಯಂ ನಿರ್ಭಿದ್ಯ ರುಕ್ಮಪುಂಖಾ ನಿಮಿತ್ತಗಾಃ ॥ ೪೬

ಬಭೂವುರ್ಲೋಹಿತಾದಿಗ್ಧಾ ರಕ್ತಾ ಇವ ಮಹೋರಗಾಃ ।
ಸ ಪಿತೃವ್ಯಾಯ ಸಂಕ್ರುದ್ಧ ಇಂದ್ರಜಿಚ್ಛರಮಾದದೇ ॥ ೪೭

ಉತ್ತಮಂ ರಕ್ಷಸಾಂ ಮಧ್ಯೇ ಯಮದತ್ತಂ ಮಹಾಬಲಃ ।
ತಂ ಸಮೀಕ್ಷ್ಯ ಮಹಾತೇಜಾ ಮಹೇಷುಂ ತೇನ ಸಂಹಿತಮ್ ॥ ೪೮

---

ಕುದುರೆಗಳನ್ನು ಬಡಿದು ಕೊಂದನು (೪೧-೪೨). ಹೀಗೆ ಅಶ್ವಗಳೂ ಸಾರಥಿಯೂ ಹತರಾಗಲು ತೇಜಸ್ವಿಯಾದ ಇಂದ್ರಜಿತು ನೆಲಕ್ಕೆ ಧುಮುಕಿ, ರಥಶಕ್ತಿಯೆಂಬ ಆಯುಧವನ್ನು ತನ್ನ ಚಿಕ್ಕಪ್ಪನಮೇಲೆ ಪ್ರಯೋಗಿಸಿದನು. ಅದು ರಭಸದಿಂದ ಬರುತ್ತಿರಲು ಸುಮಿತ್ರಾನಂದವರ್ಧನನಾದ ಲಕ್ಷ್ಮಣನು ನಿಶಿತಬಾಣಗಳಿಂದ ಆ ಶಕ್ತಿಯನ್ನು ಹತ್ತು ತುಂಡುಗಳಾಗಿ ಕತ್ತರಿಸಿ ಕೆಡಹಿದನು (೪೩-೪೪). ಆಗ ವಿಭೀಷಣನು ಸಂಕ್ರುದ್ಧನಾಗಿ ಧನುಸ್ಸನ್ನೆತ್ತಿ ಹಿಡಿದು ಇಂದ್ರಜಿತುವಿನ ಎದೆಗೆ ಗುರಿಯಿಟ್ಟು, ಸಿಡಿಲುಗಳಂತಿದ್ದ ಐದು ಕೂರಂಬುಗಳನ್ನು ಹೊಡೆದನು. ಗುರಿತಪ್ಪದೆ ಎರಗಿದ ಕನಕಪುಂಖಾಂಕಿತಗಳಾದ ಆ ಕೂರಂಬುಗಳು ಇಂದ್ರಜಿತುವಿನ ದೇಹವನ್ನು ಕತ್ತಿ ರಕ್ತಸಿಕ್ತಗಳಾಗಿ, ಕೆಂಪನೆಯ ಮಹಾಭುಜಂಗಗಳಂತೆ ತೂರಿಹೋದವು (೪೫-೪೬). ಇಂದ್ರಜಿತುವಿಗೆ ತನ್ನ ಚಿಕ್ಕಪ್ಪನಮೇಲೆ ಕೋಪವು ಮಿತಿಮೀರಿತು. ಸಕಲ ರಾಕ್ಷಸರೂ ನೋಡುತ್ತಿರಲಾಗಿ, ಬಲಾಢ್ಯನಾದ ಆ ಮೇಘನಾದನು ಯಮ ದೇವತಾಕವಾದ ಘೋರಮಂತ್ರಾಸ್ತ್ರವನ್ನು ಹಿರಿದನು. ಆ ಮಂತ್ರಾಸ್ತ್ರವನ್ನು ಧನುಸ್ಸಿಗೆ ಅಳವಡಿಸಿದ್ದನ್ನು ಲಕ್ಷ್ಮಣನು ನೋಡಿದನು (೪೭-೪೮).

ಲಕ್ಷ್ಮಣೋಽಪ್ಯಾದದೇ ಬಾಣಮನ್ಯಂ ಭೀಮಪರಾಕ್ರಮಃ ।
ಕುಬೇರೇಣ ಸ್ವಯಂ ಸ್ವಪ್ನೇ ಸ್ವಸ್ಮೈ ದತ್ತಂ ಮಹಾತ್ಮನಾ ॥ ೪೯

ದುರ್ಜಯಂ ದುರ್ವಿಷಹ್ಯಂ ಚ ಸೇಂದ್ರೈರಪಿ ಸುರಾಸುರೈಃ ।
ತಯೋಸ್ತೇ ಧನುಷೀ ಶ್ರೇಷ್ಠೇ ಬಾಹುಭಿಃ ಪರಿಘೋಪಮೈಃ ॥ ೫೦

ವಿಕೃಷ್ಯಮಾಣೇ ಬಲವತ್ ಕ್ರೌಂಚಾವಿವ ಚುಕೂಜತುಃ ।
ತಾಭ್ಯಾಂ ತೌ ಧನುಷಿ ಶ್ರೇಷ್ಠೇ ಸಂಹಿತೌ ಸಾಯಕೋತ್ತಮೌ ॥ ೫೧

ವಿಕೃಷ್ಯಮಾಣೌ ವೀರಾಭ್ಯಾಂ ಭೃಶಂ ಜಜ್ವಲತುಃ ಶ್ರಿಯಾ ।
ತೌ ಭಾಸಯಂತಾವಾಕಾಶಂ ಧನುರ್ಭ್ಯಾಂ ವಿಶಿಖೌ ಚ್ಯುತೌ ॥ ೫೨

ಮುಖೇನ ಮುಖಮಾಹತ್ಯ ಸಂನಿಪೇತತುರೋಜಸಾ ।
ಸಂನಿಪಾತಸ್ತಯೋರಾಸೀಚ್ಛರಯೋರ್ಘೋರರೂಪಯೋಃ ॥ ೫೩

ಸಧೂಮವಿಸ್ಫುಲಿಂಗಶ್ಚ ತಜ್ಜೋಽಗ್ನಿರ್ದಾರುಣೋಽಭವತ್ ।
ತೌ ಮಹಾಗ್ರಹಸಂಕಾಶಾವನ್ಯೋನ್ಯಂ ಸಂನಿಪತ್ಯ ಚ ॥ ೫೪

---

ಒಡನೆಯೇ ಭೀಮವಿಕ್ರಮನಾದ ಲಕ್ಷ್ಮಣನು ತನಗೆ ಸ್ವಪ್ನದಲ್ಲಿ ಕುಬೇರನು ಸಾಕ್ಷಾತ್ತಾಗಿ ಅನುಗ್ರಹಿಸಿದ ಮತ್ತು ಇಂದ್ರಾದಿಗಳಿಗೂ ದುರ್ವಿಷಹ್ಯವಾದ ದಾರುಣಶರವನ್ನು ಹಿರಿದು ಧನುಸ್ಸಿಗೆ ಅಳವಡಿಸಿದನು (೪೯). ಲಕ್ಷ್ಮಣ ಇಂದ್ರಜಿತು—ಇಬ್ಬರೂ ಆ ಮಹಾಶರಗಳನ್ನು ಹೂಡಿ, ಪರಿಘಗಳಂತಿದ್ದ ತಮ್ಮ ಬಾಹುಗಳಿಂದ ಶ್ರೇಷ್ಠವಾದ ತಮ್ಮ ಧನುಸ್ಸುಗಳ ಹೆದೆಯನ್ನು ಮೀಟೆ ಬಲವಾಗಿ ಜಗ್ಗಲು, ಆ ಧನುಸ್ಸುಗಳು ಕ್ರೌಂಚಪಕ್ಷಿಗಳಂತೆ ಧ್ವನಿಗೈದವು! (೫೦). ವೀರಾಗ್ರಗಣ್ಯರಾದ ಅವರೀರ್ವರೂ ಹೂಡಿ ಸೆಳೆದ ಆ ದಿವ್ಯಾಸ್ತ್ರಗಳು ಜಾಜ್ವಲ್ಯಮಾನವಾಗಿ ಕಂಗೊಳಿಸಿದವು. ಮರುನಿಮಿಷದಲ್ಲಿ ಆಕಾಶವನ್ನು ಬೆಳಗುತ್ತ ಧನುಸ್ಸಿನಿಂದ ಜಿಗಿದ ಆ ಮಹಾಸ್ತ್ರಗಳು ರಭಸದಿಂದ ನುಗ್ಗಿ ಒಂದಕ್ಕೊಂದು ಢಿಕ್ಕಿಹೊಡೆದವು! (೫೧-೫೨). ಢಿಕ್ಕಿಹೊಡೆದೊಡನೆ, ಹೊಗೆಯುಗುಳುತ್ತ ಕಿಡಿಸಿಡಿಸುತ್ತ ದಾರುಣವಾದ ಅಗ್ನಿಜ್ವಾಲೆ ಎದ್ದಿತು! ಅಂತರಿಕ್ಷದಲ್ಲಿ ಮಹಾಗ್ರಹಗಳು ಒಂದನ್ನೊಂದು ಸಂಘರ್ಷಿಸುವಂತೆ, ಆ ಘೋರಶರಗಳು ಒಂದನ್ನೊಂದು ಅಪ್ಪಳಿಸಿ, ನೂರು

ಸಂಗ್ರಾಮೇ ಶತಧಾ ಯಾಂತೌ ಮೇದಿನ್ಯಾಂ ವಿನಿಪೇತತುಃ ।
ಶರೌ ಪ್ರತಿಹತೌ ದೃಷ್ಟ್ವಾ ತಾವುಭೌ ರಣಮೂರ್ಧನಿ ॥ ೫೫
ವ್ರೀಡಿತೌ ಜಾತರೋಷೌ ಚ ಲಕ್ಷ್ಮಣೇಂದ್ರಜಿತೌ ತದಾ ।
ಸುಸಂರಬ್ಧಸ್ತು ಸೌಮಿತ್ರಿರಸ್ತ್ರಂ ವಾರುಣಮಾದದೇ ॥ ೫೬
ರೌದ್ರಂ ಮಹೇಂದ್ರಜಿದ್ಯುದ್ಧೇ ವ್ಯಸೃಜದ್ಯುಧಿ ನಿಷ್ಠಿತಃ ।
ತೇನ ತದ್ವಿಹತಂ ತ್ವಸ್ತ್ರಂ ವಾರುಣಂ ಪರಮಾದ್ಭುತಮ್ ॥ ೫೭
ತತಃ ಕ್ರುದ್ಧೋ ಮಹಾತೇಜಾ ಇಂದ್ರಜಿತ್ ಸಮಿತಿಂಜಯಃ ।
ಆಗ್ನೇಯಂ ಸಂದಧೇ ದೀಪ್ತಂ ಸ ಲೋಕಂ ಸಂಕ್ಷಿಪನ್ನಿವ ॥ ೫೮
ಸೌರೇಣಾಸ್ತ್ರೇಣ ತದ್ವೀರೋ ಲಕ್ಷ್ಮಣಃ ಪ್ರತ್ಯವಾರಯತ್ ।
ಅಸ್ತ್ರಂ ನಿವಾರಿತಂ ದೃಷ್ಟ್ವಾ ರಾವಣಿಃ ಕ್ರೋಧಮೂರ್ಛಿತಃ ॥ ೫೯
ಆಸುರಂ ಶತ್ರುನಾಶಾಯ ಘೋರಮಸ್ತ್ರಂ ಸಮಾದದೇ ।
ತಸ್ಮಾಚ್ಚಾಪಾದ್ವಿನಿಷ್ಪೇತುರ್ಭಾಸ್ವರಾಃ ಕೂಟಮುದ್ಗರಾಃ ॥ ೬೦
ಶೂಲಾನಿ ಚ ಭುಸುಂಡ್ಯಶ್ಚ ಗದಾಃ ಖಡ್ಗಾಃ ಪರಶ್ವಧಾಃ ।
ತದ್ದೃಷ್ಟ್ವಾ ಲಕ್ಷ್ಮಣಃ ಸಂಖ್ಯೇ ಘೋರಮಸ್ತ್ರಮಥಾಸುರಮ್ ॥ ೬೧

---

ಚೂರುಗಳಾಗಿ ರಣಭೂಮಿಯಲ್ಲಿ ಬಿದ್ದವು! (೫೩-೫೪). ತಾವು ಪ್ರಯೋಗಿಸಿದ ದಿವ್ಯಾಸ್ತ್ರಗಳು ಪ್ರತಿಹತವಾಗಿ ವ್ಯರ್ಥವಾದುದನ್ನು ಕಂಡು, ಲಕ್ಷ್ಮಣನಿಗೂ ಇಂದ್ರಜಿತುವಿಗೂ ಲಜ್ಜೆಯಾಯಿತು; ರೋಷ ಉಕ್ಕಿತು. ಸಿಟ್ಟಿನಿಂದ ಸೌಮಿತ್ರಿಯು ವರುಣಾಸ್ತ್ರವನ್ನು ಬಿಡಲು, ಇಂದ್ರಜಿತು ರೌದ್ರಾಸ್ತ್ರವನ್ನು ಬಿಟ್ಟು ಎಲ್ಲರೂ ಅಚ್ಚರಿಗೊಳ್ಳುವಂತೆ ವರುಣಾಸ್ತ್ರವನ್ನು ಖಂಡಿಸಿದನು (೫೫-೫೭). ವೀರಾಗ್ರೇಸರನಾದ ಇಂದ್ರಜಿತು ರುಷ್ಟನಾಗಿ ಲೋಕವನ್ನೇ ದಹಿಸಿಬಿಡುವನೋ ಎಂಬಂತೆ, ದೀಪ್ತವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಶೂರಾಗ್ರೇಸರನಾದ ಲಕ್ಷ್ಮಣನು ಸೌರಾಸ್ತ್ರದಿಂದ ಅದನ್ನು ನಿವಾರಿಸಿದನು. ತನ್ನ ಅಸ್ತ್ರವು ನಿವಾರಿಸಲ್ಪಟ್ಟುದನ್ನು ನೋಡಿ ರಾವಣಿಯು ಕೋಪೋದ್ರಿಕ್ತನಾದನು (೫೮-೫೯). ಶತ್ರುವಾದ ಲಕ್ಷ್ಮಣನನ್ನು ಕೊಲ್ಲಬೇಕೆಂಬ ನಿಶ್ಚಯದಿಂದ ಆಸುರವೆಂಬ ಘೋರಾಸ್ತ್ರವನ್ನು ಅವನು ಕೈಗೆತ್ತಿಕೊಂಡನು. ಅದನ್ನು ಹೂಡಿದೊಡನೆ ಇಂದ್ರಜಿತುವಿನ ಧನುಸ್ಸಿನಿಂದ ಕೂಟಮುದ್ಗರ, ಶೂಲ, ಭುಸುಂಡಿ, ಗದೆ, ಖಡ್ಗ, ಪರಶು

ಅವಾರ್ಯಂ ಸರ್ವಭೂತಾನಾಂ ಸರ್ವಶತ್ರುವಿನಾಶನಮ್ ।
ಮಾಹೇಶ್ವರೇಣ ದ್ಯುತಿಮಾಂಸ್ತದಸ್ತ್ರಂ ಪ್ರತ್ಯವಾರಯತ್ ॥ ೬೨

ತಯೋಃ ಸುತುಮುಲಂ ಯುದ್ಧಂ ಸಂಬಭೂವಾದ್ಭುತೋಪಮಮ್
ಗಗನಸ್ಥಾನಿ ಭೂತಾನಿ ಲಕ್ಷ್ಮಣಂ ಪರ್ಯವಾರಯನ್ ॥ ೬೩

ಭೈರವಾಭಿರುತೇ ಭೀಮೇ ಯುದ್ಧೇ ವಾನರರಕ್ಷಸಾಮ್ ।
ಭೂತೈರ್ಬಹುಭಿರಾಕಾಶಂ ವಿಸ್ಮಿತೈರಾವೃತಂ ಬಭೌ ॥ ೬೪

ಋಷಯಃ ಪಿತರೋ ದೇವಾ ಗಂಧರ್ವಾ ಗರುಡೋರಗಾಃ ।
ಶತಕ್ರತುಂ ಪುರಸ್ಕೃತ್ಯ ರರಕ್ಷುರ್ಲಕ್ಷ್ಮಣಂ ರಣೇ ॥ ೬೫

ಅಥಾನ್ಯಂ ಮಾರ್ಗಣಶ್ರೇಷ್ಠಂ ಸಂದಧೇ ರಾಘವಾನುಜಃ ।
ಹುತಾಶನಸಮಸ್ಪರ್ಶಂ ರಾವಣಾತ್ಮಜದಾರಣಮ್ ॥ ೬೬

ಸುಪತ್ರಮನುವೃತ್ತಾಂಗಂ ಸುಪರ್ವಾಣಂ ಸುಸಂಸ್ಥಿತಮ್ ।
ಸುವರ್ಣವಿಕೃತಂ ವೀರಃ ಶರೀರಾಂತಕರಂ ಶರಮ್ ॥ ೬೭

---

ಮುಂತಾದ ಭೀಷಣಾಯುಧಗಳು ಚಿಮ್ಮಿ ಚಿಮ್ಮಿ ಬರಲಾರಂಭಿಸಿದವು ! (೬೦-೬೧). ಅತ್ಯಂತ ಭೀಕರವೂ ಸರ್ವಭೂತಗಳಿಗೆ ತಡೆಯಲು ಅಶಕ್ಯವೂ ಸರ್ವಶತ್ರು ವಿಧ್ವಂಸಕವೂ ಆದ ಆಸುರಾಸ್ತ್ರವನ್ನು ಕಂಡು, ತೇಜಸ್ವಿಯಾದ ಲಕ್ಷ್ಮಣನು ಮಾಹೇಶ್ವರಾಸ್ತ್ರದಿಂದ ಅದನ್ನು ನಾಶಗೊಳಿಸಿದನು (೬೨). ಅವರೀರ್ವರಿಗೂ ಅತಿದಾರುಣವೂ ಅತ್ಯದ್ಭುತವೂ ಆದ ಭೀಕರಕದನವು ಮುಂದುವರಿಯಿತು. ಪಕ್ಕದಲ್ಲಿಯೇ ವಾನರರಾಕ್ಷಸರಿಗೆ ಭೈರವಗರ್ಜನೆಗಳಿಂದ ಭೀಷಣವಾದ ಯುದ್ಧವು ನಡೆಯುತ್ತಿತ್ತು. ಆಕಾಶದಲ್ಲಿ ನೆರೆದಿದ್ದ ಸಕಲ ಭೂತಗಳೂ ಲಕ್ಷ್ಮಣನ ರಕ್ಷಣೆಗಾಗಿ ಸುತ್ತುಗಟ್ಟಿ ನಿಂತವು. ದೇವಯೋನಿಗಳಾದ ಕಿಂಪುರುಷಾದಿಗಳು ಬೆಕ್ಕಸಬೆರಗಾಗಿ ನಿಂತಿರಲು, ಆಕಾಶಕ್ಕೆ ಒಂದು ಶೋಭೆಯುಂಟಾಯಿತು (೬೩-೬೪). ದೇವರ್ಷಿಗಳೂ ಪಿತೃದೇವತೆಗಳೂ ದೇವ ಗಂಧರ್ವ ಗರುಡೋರಗರೂ ದೇವೇಂದ್ರನೂ ಲಕ್ಷ್ಮಣನನ್ನು ರಕ್ಷಿಸುವುದಕ್ಕಾಗಿ 'ಲಕ್ಷ್ಮಣನಿಗೆ ಶುಭವಾಗಲಿ' ಎಂದು ಹೇಳುತ್ತ ನಿಂತಿದ್ದರು (೬೫). ಅನಂತರ ಲಕ್ಷ್ಮಣನು ರಾವಣಾತ್ಮಜನನ್ನು ಸಂಹರಿಸುವುದಕ್ಕಾಗಿ ಅಗ್ನಿಯಂತೆ ದಹಿಸುವ ಅತ್ಯುತ್ತಮವಾದ ಐಂದ್ರಾಸ್ತ್ರವನ್ನು ಹಿರಿದನು. ದೃಢವಾದ ಪರ್ವಗಳಿಂದ ಕೂಡಿ ಪುಂಖಾಂಕಿತವೂ ಸುವರ್ಣಾಲಂಕೃತವೂ

ದುರಾವಾರಂ ದುರ್ವಿಷಹ್ಯಂ ರಾಕ್ಷಸಾನಾಂ ಭಯಾವಹಮ್ ।
ಆಶೀವಿಷವಿಷಪ್ರಖ್ಯಂ ದೇವಸಂಘೈಃ ಸಮರ್ಚಿತಮ್ ॥ ೬೮

ಯೇನ ಶಕ್ರೋ ಮಹಾತೇಜಾ ದಾನವಾನಜಯತ್ ಪ್ರಭುಃ ।
ಪುರಾ ದೈವಾಸುರೇ ಯುದ್ಧೇ ವೀರ್ಯವಾನ್ ಹರಿವಾಹನಃ ॥ ೬೯

ತದೈಂದ್ರಮಸ್ತ್ರಂ ಸೌಮಿತ್ರಿಃ ಸಂಯುಗೇಷ್ವಪರಾಜಿತಮ್ ।
ಶರಶ್ರೇಷ್ಠಂ ಧನುಃಶ್ರೇಷ್ಠೇ ನರಶ್ರೇಷ್ಠೋಽಭಿಸಂದಧೇ ॥ ೭೦

ಸಂಧಾಯಾಮಿತ್ರದಲನಂ ವಿಚಕರ್ಷ ಶರಾಸನಮ್ ।
ಸಜ್ಯಮಾಯಮ್ಯ ದುರ್ಧರ್ಷಂ ಕಾಲೋ ಲೋಕಕ್ಷಯೇ ಯಥಾ ॥

ಸಂಧಾಯ ಧನುಷಿ ಶ್ರೇಷ್ಠೇ ವಿಕರ್ಷನ್ನಿದಮಬ್ರವೀತ್ ।
ಲಕ್ಷ್ಮೀವಾನ್ ಲಕ್ಷ್ಮಣೋ ವಾಕ್ಯಮರ್ಥಸಾಧಕಮಾತ್ಮನಃ ॥ ೭೨

ಧರ್ಮಾತ್ಮಾ ಸತ್ಯಸಂಧಶ್ಚ ರಾಮೋ ದಾಶರಥಿರ್ಯದಿ ।
ಪೌರುಷೇ ಚಾಪ್ರತಿದ್ವಂದ್ವಃ ಶರೈನಂ ಜಹಿ ರಾವಣಿಮ್ ॥ ೭೩

---

ಆದ ಆ ಶರವು ಶತ್ರುಶರೀರವನ್ನು ಕೊನೆಗಾಣಿಸುವ ಸಾಮರ್ಥ್ಯವುಳ್ಳು ದಾಗಿತ್ತು (೬೬-೬೭). ರಾಕ್ಷಸಭಯಂಕರವೂ ದುರಾವಾರವೂ ದುರ್ವಿಷಹ್ಯವೂ ಆಗಿತ್ತು. ಘಟಸರ್ಪದ ವಿಷದಂತೆ ಅತಿಕ್ರೂರವಾಗಿತ್ತು. ದೇವತೆಗಳಿಂದ ಪೂಜಿಸಲ್ಪಟ್ಟಿತ್ತು. ಅತುಲಪರಾಕ್ರಮಿಯಾದ ದೇವೇಂದ್ರನು ಆ ಐಂದ್ರಾಸ್ತ್ರದಿಂದ ಹಿಂದೆ ದೈವಾಸುರ ಯುದ್ಧದಲ್ಲಿ ದಾನವರನ್ನು ದಮನ ಮಾಡಿದ್ದನು (೬೮-೬೯). ಸಂಗ್ರಾಮಭೂಮಿಯಲ್ಲಿ ಆ ಐಂದ್ರಾಸ್ತ್ರವು ಸೋಲನ್ನು ಕಂಡುದೇ ಇಲ್ಲ. ನರಶ್ರೇಷ್ಠನಾದ ಸೌಮಿತ್ರಿಯು ಆ ದಿವ್ಯಾಸ್ತ್ರವನ್ನು ಶ್ರೇಷ್ಠವಾದ ತನ್ನ ಧನುಸ್ಸಿಗೆ ಹೂಡಿದನು. ವೈರಿಯನ್ನು ನಿರ್ಮೂಲಗೊಳಿಸುವ ದುರ್ಧರ್ಷವಾದ ಆ ಕ್ರೂರಶರವನ್ನು ಧನುಸ್ಸಿಗೆ ಹೂಡಿ, ಪ್ರಳಯಕಾಲದ ಕಾಲಯಮನಂತೆ ಕಂಗೊಳಿಸುತ್ತಿದ್ದ ಲಕ್ಷ್ಮಣನು ಹೆದೆಯನ್ನು ಎಳೆದನು (೭೦-೭೧). ವೀರಲಕ್ಷ್ಮೀಯುಕ್ತನಾದ ಲಕ್ಷ್ಮಣನು ಆ ಶರವನ್ನು ಐಂದ್ರಮಂತ್ರದಿಂದ ಅಭಿಮಂತ್ರಿಸಿ, ಅದನ್ನು ಎಳೆಯುತ್ತಿರುವಾಗಲೇ ತನ್ನ ಈ ಪ್ರಯತ್ನವು ಸಾರ್ಥಕವಾಗಲೆಂದು "ದಶರಥಾತ್ಮಜನಾದ ಶ್ರೀರಾಮನು ಧರ್ಮಾತ್ಮನೂ ಸತ್ಯಸಂಧನೂ ಪೌರುಷದಲ್ಲಿ ಎದುರಿಲ್ಲದ

**ಇತ್ಯುಕ್ತ್ವಾ ಬಾಣಮಾಕರ್ಣಂ ವಿಕೃಷ್ಯ ತಮಜಿಹ್ಮಗಮ್ ।**
**ಲಕ್ಷ್ಮಣಃ ಸಮರೇ ವೀರಃ ಸಸರ್ಜೇಂದ್ರಜಿತಂ ಪ್ರತಿ ॥ ೨೪**

**ಐಂದ್ರಾಸ್ತ್ರೇಣ ಸಮಾಯೋಜ್ಯ ಲಕ್ಷ್ಮಣಃ ಪರವೀರಹಾ ।**
**ಸ ಶಿರಃ ಸಶಿರಸ್ತ್ರಾಣಂ ಶ್ರೀಮಜ್ಜ್ವಲಿತಕುಂಡಲಮ್ ॥ ೨೫**

**ಪ್ರಮಥ್ಯೇಂದ್ರಜಿತಃ ಕಾಯಾತ್ ಪಾತಯಾಮಾಸ ಭೂತಲೇ ।**
**ತದ್ರಾಕ್ಷಸತನೂಜಸ್ಯ ಛಿನ್ನಸ್ಕಂಧಂ ಶಿರೋ ಮಹತ್ ॥ ೨೬**

**ತಪನೀಯನಿಭಂ ಭೂಮೌ ದದೃಶೇ ರುಧಿರೋಕ್ಷಿತಮ್ ।**
**ಹತಸ್ತು ನಿಪಪಾತಾಶು ಧರಣ್ಯಾಂ ರಾವಣಾತ್ಮಜಃ ॥ ೨೭**

**ಕವಚೀ ಸಶಿರಸ್ತ್ರಾಣೋ ವಿಧ್ವಸ್ತಃ ಸಶರಾಸನಃ ।**
**ಚುಕ್ರುಶುಸ್ತೇ ತತಃ ಸರ್ವೇ ವಾನರಾಃ ಸವಿಭೀಷಣಾಃ ॥ ೨೮**

**ಹೃಷ್ಯಂತೋ ನಿಹತೇ ತಸ್ಮಿನ್ ದೇವಾ ವೃತ್ರವಧೇ ಯಥಾ ।**
**ಅಥಾಂತರಿಕ್ಷೇ ದೇವಾನಾಮೃಷೀಣಾಂ ಚ ಮಹಾತ್ಮನಾಮ್ ॥ ೨೯**

**ಅಭಿಜಜ್ಞೇ ಚ ಸಂನಾದೋ ಗಂಧರ್ವಾಪ್ಸರಸಾಮಪಿ ।**
**ಪತಿತಂ ತಮಭಿಜ್ಞಾಯ ರಾಕ್ಷಸೀ ಸಾ ಮಹಾಚಮೂಃ ॥ ೩೦**

---

ಅದ್ವಿತೀಯ ಪರಾಕ್ರಮಿಯೂ ಆಗಿರುವುದು ದಿಟವಾದರೆ, ಎಲೈ ಶರವೆ, ಈ ರಾವಣಪುತ್ರನನ್ನು ಸಂಹರಿಸು!" ಎಂದು ನುಡಿದು ಶರವನ್ನು ಆಕರ್ಣಾಂತವಾಗಿ ಸೆಳೆದು ಇಂದ್ರಜಿತುವಿನಮೇಲೆ ಪ್ರಯೋಗಿಸಿದನು (೨೨-೨೪). ವೀರಾಗ್ರಣಿಯಾದ ಲಕ್ಷ್ಮಣನು ಪ್ರಯೋಗಿಸಿದ ಆ ಅಸ್ತ್ರವು ಪ್ರಜ್ವಲಿಸುವ ಕರ್ಣಕುಂಡಲಗಳಿಂದಲೂ ಶಿರಸ್ತ್ರಾಣದಿಂದಲೂ ಯುಕ್ತವಾದ ಇಂದ್ರಜಿತುವಿನ ಶಿರಸ್ಸನ್ನು ಕತ್ತರಿಸಿ ದೇಹದಿಂದ ಧರೆಗುರುಳಿಸಿತು (೨೫-೨೬). ರಾಕ್ಷಸರಾಜತನಯನ ಮಹತ್ತರವಾದ ಶಿರಸ್ಸು ರುಂಡದಿಂದ ಬೇರ್ಪಟ್ಟು ಧರೆಗುರುಳಿ ರಕ್ತದಲ್ಲಿ ನೆನೆದು, ಸುವರ್ಣಮಯವಾದಂತೆ ಹೊಳೆಯಿತು. ಕವಚಕಿರೀಟಗಳನ್ನು ಧರಿಸಿ ಚಾಪವನ್ನು ಹಿಡಿದಿದ್ದ ಇಂದ್ರಜಿತು ಲಕ್ಷ್ಮಣನಿಂದ ಹತನಾಗಿ ಬಿದ್ದನು (೨೭-೨೮). ಇಂದ್ರಜಿತು ಹತನಾದೊಡನೆ ಸಮಸ್ತ ವಾನರಯೋಧರೂ ವಿಭೀಷಣನೂ ವೃತ್ರವಧೆಯಾದಾಗ ದೇವತೆಗಳಂತೆ ಸಂತೋಷದಿಂದ ಕೋಲಾಹಲಮಾಡಿದರು. ಇಂದ್ರಜಿದ್ವಧೆಯನ್ನು ವೀಕ್ಷಿಸಿದ ದೇವತೆಗಳೂ ಮಹಾತ್ಮರಾದ ಋಷಿಗಳೂ

ವಧ್ಯಮಾನಾ ದಿಶೋ ಭೇಜೇ ಹರಿಭಿರ್ಜಿತಕಾಶಿಭಿಃ |
ವಾನರೈರ್ವಧ್ಯಮಾನಾಸ್ತೇ ಶಸ್ತ್ರಾಣ್ಯುತ್ಸೃಜ್ಯ ರಾಕ್ಷಸಾಃ || ೮೧

ಲಂಕಾಮಭಿಮುಖಾಃ ಸಸ್ರುರ್ನಷ್ಟಸಂಜ್ಞಾಃ ಪ್ರಧಾವಿತಾಃ |
ದುದ್ರುವುರ್ಬಹುಧಾ ಭೀತಾ ರಾಕ್ಷಸಾಃ ಶತಶೋ ದಿಶಃ || ೮೨

ತ್ಯಕ್ತ್ವಾ ಪ್ರಹರಣಾನ್ ಸರ್ವೇ ಪಟ್ಟಿಸಾಸಿಪರಶ್ವಧಾನ್ |
ಕೇಚಿಲ್ಲಂಕಾಂ ಪರಿತ್ರಸ್ತಾಃ ಪ್ರವಿಷ್ಟಾ ವಾನರಾರ್ದಿತಾಃ || ೮೩

ಸಮುದ್ರೇ ಪತಿತಾಃ ಕೇಚಿತ್ ಕೇಚಿತ್ ಪರ್ವತಮಾಶ್ರಿತಾಃ |
ಹತಮಿಂದ್ರಜಿತಂ ದೃಷ್ಟ್ವಾ ಶಯಾನಂ ಸಮರಕ್ಷಿತೌ || ೮೪

ರಾಕ್ಷಸಾನಾಂ ಸಹಸ್ರೇಷು ನ ಕಶ್ಚಿತ್ ಪ್ರತ್ಯದೃಶ್ಯತ |
ಯಥಾಸ್ತಂ ಗತ ಆದಿತ್ಯೇ ನಾವತಿಷ್ಠಂತಿ ರಶ್ಮಯಃ || ೮೫

ತಥಾ ತಸ್ಮಿನ್ನಿಪತಿತೇ ರಾಕ್ಷಸಾಸ್ತೇ ಗತಾ ದಿಶಃ |
ಶಾಂತರಶ್ಮಿರಿವಾದಿತ್ಯೋ ನಿರ್ವಾಣ ಇವ ಪಾವಕಃ || ೮೬

---

ಗಂಧರ್ವರೂ ಅಪ್ಸರೆಯರೂ ಅಂತರಿಕ್ಷದಲ್ಲಿ ಹರ್ಷಧ್ವನಿಗೈದರು (೭೯-೮೦). ಇಂದ್ರಜಿತು ಹತನಾಗಿ ಬಿದ್ದನೆಂಬುದನ್ನರಿತೊಡನೆ, ಜಯಶಾಲಿಗಳಾದ ವಾನರರು ರಾಕ್ಷಸರನ್ನು ಬೆನ್ನಟ್ಟಿ ಸಂಹರಿಸತೊಡಗಲು, ರಾಕ್ಷಸಸೇನೆಯು ದಿಕ್ಕುದಿಕ್ಕಿಗೆ ಚದರಿ ಓಡಿಹೋಯಿತು (೮೧). ಕೆಲವು ರಾಕ್ಷಸರು ಆಯುಧಗಳನ್ನೆಸೆದು ಲಂಕೆಯ ಕಡೆ ಓಡಿದರು. ಕೆಲವರು ಎಚ್ಚರದಪ್ಪಿ ಬಿದ್ದರು. ಕೆಲವರು ಅಂಜಿಕೆಯಿಂದ ಕಂಡಕಂಡ ದಿಕ್ಕಿಗೆ ಪಲಾಯನಮಾಡಿದರು. ಎಲ್ಲರೂ ಕೈಯಲ್ಲಿದ್ದ ಪಟ್ಟಿಸ, ಖಡ್ಗ, ಪರಶು ಮುಂತಾದ ಆಯುಧಗಳನ್ನು ಬಿಸುಟು ಓಡಿಹೋದರು. ಕೆಲವು ರಾಕ್ಷಸರು ಬೇಗನೆ ಓಡಿಹೋಗಿ ಲಂಕೆಯೊಳಗೆ ಸೇರಿಕೊಂಡರು (೮೨-೮೩). ಕೆಲವರು ಸಮುದ್ರಕ್ಕೆ ಹಾರಿದರು. ಕೆಲವರು ಪರ್ವತವನ್ನು ಹತ್ತಿ ಅಡಗಿಕೊಂಡರು. ಇಂದ್ರಜಿತು ಹತನಾಗಿ ಬಿದ್ದನೆಂಬುದು ತಿಳಿದೊಡನೆ ಆ ರಣರಂಗದಲ್ಲಿ ಒಬ್ಬ ರಾಕ್ಷಸನೂ ಕಂಡುಬರಲಿಲ್ಲ! ಸೂರ್ಯನು ಅಸ್ತಂಗತನಾದ ಕೂಡಲೆ ಅವನ ಕಿರಣಗಳು ಹೇಗೆ ಕಾಣಿಸುವುದಿಲ್ಲವೋ ಹಾಗೆ ಮೇಘನಾದನು ಹತನಾದೊಡನೆ ಅವನ ಪಕ್ಷದ ರಾಕ್ಷಸಭಟರು ಕಣ್ಣಿಗೆ ಕಾಣದಂತೆ ದಿಕ್ಕುದಿಕ್ಕಿಗೆ ಓಡಿಹೋದರು! (೮೪-೮೫). ಮಹಾತೇಜೋರಾಶಿಯಾದ ಇಂದ್ರಜಿತು ಕಿರಣಗಳುಡುಗಿದ

ಸ ಬಭೂವ ಮಹಾತೇಜಾ ವ್ಯಪಾಸ್ತಗತಜೀವಿತಃ ।
ಪ್ರಶಾಂತಪೀಡಾಬಹುಲೋ ನಷ್ಟಾರಿಷ್ಟಃ ಪ್ರತಾಪವಾನ್ ॥ ೮೭

ಬಭೂವ ಲೋಕಃ ಪತಿತೇ ರಾಕ್ಷಸೇಂದ್ರಸುತೇ ತದಾ ।
ಹರ್ಷಂ ಚ ಶಕ್ರೋ ಭಗವಾನ್ ಸಹ ಸರ್ವೈಃ ಸುರರ್ಷಭೈಃ ॥ ೮೮

ಜಗಾಮ ನಿಹತೇ ತಸ್ಮಿನ್ ರಾಕ್ಷಸೇ ಪಾಪಕರ್ಮಣಿ ।
ಆಕಾಶೇ ಚಾಪಿ ದೇವಾನಾಂ ಶುಶ್ರುವೇ ದುಂದುಭಿಸ್ವನಃ ॥ ೮೯

ನೃತ್ಯದ್ಭಿರಪ್ಸರೋಭಿಶ್ಚ ಗಂಧರ್ವೈಶ್ಚ ಮಹಾತ್ಮಭಿಃ ।
ವವೃಷುಃ ಪುಷ್ಪವರ್ಷಾಣಿ ತದದ್ಭುತಮಭೂತ್ತದಾ ॥ ೯೦

ಪ್ರಶಶಂಸುರ್ಹತೇ ತಸ್ಮಿನ್ ರಾಕ್ಷಸೇ ಕ್ರೂರಕರ್ಮಣಿ ।
ಶುದ್ಧಾ ಆಪೋ ದಿಶಶ್ಚೈವ ಜಹೃಷುರ್ದೈತ್ಯದಾನವಾಃ ॥ ೯೧

ಆಜಗ್ಮುಃ ಪತಿತೇ ತಸ್ಮಿನ್ ಸರ್ವಲೋಕಭಯಾವಹೇ ।
ಊಚುಶ್ಚ ಸಹಿತಾಃ ಸರ್ವೇ ದೇವಗಂಧರ್ವದಾನವಾಃ ॥ ೯೨

---

ಸೂರ್ಯನಂತೆಯೂ ಆರಿಹೋದ ಅಗ್ನಿಯಂತೆಯೂ ಗತಪ್ರಾಣನಾಗಿ ಮಲಗಿದನು. ಲೋಕದ ಒಂದು ದೊಡ್ಡ ಪೀಡೆಯು ನಾಶವಾಯಿತು. ಅರಿಷ್ಟವು ಕಳೆಯಿತು. ಇಂದ್ರಜಿತು ಹತನಾದ್ದರಿಂದ ದಿಕ್ಕುಗಳು ಪ್ರಕಾಶಿಸಿದವು (೮೬–೮೭). ಪಾಪಕರ್ಮಿಯಾದ ಆ ರಾಕ್ಷಸನು ಹತನಾದನೆಂದು ಭಗವಾನ್ ಇಂದ್ರನೂ ದೇವತೆಗಳೂ ಸಂತೋಷಿಸಿದರು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು. ಅಪ್ಸರೆಯರು ಕುಣಿದರು. ಗಂಧರ್ವರು ಹಾಡಿದರು. ಅವರೆಲ್ಲರೂ ಹೂಮಳೆಗರೆದರು. ಎಲ್ಲವೂ ಅದ್ಭುತವಾಗಿ ತೋರಿತು (೮೮–೯೦). ನೃಶಂಸನಾದ ಇಂದ್ರಜಿತುವನ್ನು ಸಂಹರಿಸಿದ್ದಕ್ಕಾಗಿ ದೇವಾದಿಗಳು ಲಕ್ಷ್ಮಣನನ್ನು ಕೊಂಡಾಡಿದರು. ನದೀ ಸರೋವರಾದಿಗಳಲ್ಲಿ ನೀರು ತಿಳಿಯಾಯಿತು! ದಿಕ್ಕುಗಳು ಸ್ವಚ್ಛವಾಗಿ ಪ್ರಕಾಶಿಸಿದವು. ದೈತ್ಯದಾನವರೂ * ಸಹ ಹರ್ಷಗೊಂಡರು (೯೧–೯೨). ಲೋಕಭಯಂಕರನಾದ ಇಂದ್ರಜಿತು ಹತನಾಗಿ ಬೀಳಲಾಗಿ, ದೇವ ದಾನವ ಗಂಧರ್ವರೆಲ್ಲರೂ

---

* ದೈತ್ಯದಾನವರು ಲಂಕೆಯಲ್ಲಿದ್ದ ರಾಕ್ಷಸರ ಗುಂಪಿಗೆ ಸೇರಿದವರಲ್ಲ.

ವಿಜ್ವರಾಃ ಶಾಂತಕಲುಷಾ ಬ್ರಾಹ್ಮಣಾ ವಿಚರಂತ್ವಿತಿ ।
ತತೋಽಭ್ಯನಂದನ್ ಸಂಹೃಷ್ಟಾಃ ಸಮರೇ ಹರಿಯೂಥಪಾಃ ॥ ೯೩

ತಮಪ್ರತಿಬಲಂ ದೃಷ್ಟ್ವಾ ಹತಂ ನೈರ್ಋತಪುಂಗವಮ್ ।
ವಿಭೀಷಣೋ ಹನೂಮಾಂಶ್ಚ ಜಾಂಬವಾಂಶ್ಚರ್ಕ್ಷಯೂಥಪಃ ॥ ೯೪

ವಿಜಯೇನಾಭಿನಂದಂತಸ್ತುಷ್ಟುವುಶ್ಚಾಪಿ ಲಕ್ಷ್ಮಣಮ್ ।
ಕ್ಷ್ವೇಲಂತಶ್ಚ ನದಂತಶ್ಚ ಗರ್ಜಂತಶ್ಚ ಪ್ಲವಂಗಮಾಃ ॥ ೯೫

ಲಬ್ಧಲಕ್ಷಾ ರಘುಸುತಂ ಪರಿವಾರ್ಯೋಪತಸ್ಥಿರೇ ।
ಲಾಂಗೂಲಾನಿ ಪ್ರವಿಧ್ಯಂತಃ ಸ್ಫೋಟಯಂತಶ್ಚ ವಾನರಾಃ ॥ ೯೬

ಲಕ್ಷ್ಮಣೋ ಜಯತೀತ್ಯೇವಂ ವಾಕ್ಯಂ ವಿಶ್ರಾವಯಂಸ್ತದಾ ।
ಅನ್ಯೋನ್ಯಂ ಚ ಸಮಾಶ್ಲಿಷ್ಯ ಕಪಯೋ ಹೃಷ್ಟಮಾನಸಾಃ ॥ ೯೭
ಚಕ್ರುರುಚ್ಚಾವಚಗುಣಾ ರಾಘವಾಶ್ರಯಜಾಃ ಕಥಾಃ ॥

ತದಸುಕರಮಥಾಭಿವೀಕ್ಷ್ಯ ಹೃಷ್ಟಾಃ
ಪ್ರಿಯಸುಹೃದೋ ಯುಧಿ ಲಕ್ಷ್ಮಣಸ್ಯ ಕರ್ಮ ।

---

“ ಆಹಾ ! ಇನ್ನುಮೇಲೆ ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರು ನಿರ್ಭಯದಿಂದ ನೆಮ್ಮದಿಯಾಗಿ ಸಂಚರಿಸಬಹುದು ! ” ಎಂದು ಉದ್ಗರಿಸಿದರು. ಅಸಾಧಾರಣ ಪರಾಕ್ರಮಿಯಾದ ರಾಕ್ಷಸಶಾರ್ದೂಲನು ಹತನಾದುದನ್ನು ಕಂಡು ವಾನರಯೂಥಪರು ಲಕ್ಷ್ಮಣನನ್ನು ಅಭಿನಂದಿಸಿದರು (೯೩-೯೪). ವಿಭೀಷಣ, ಹನುಮಂತ, ಜಾಂಬವಂತ ಮೊದಲಾದವರು ವಿಜಯವನ್ನು ಗಳಿಸಿದ ಲಕ್ಷ್ಮಣನನ್ನು ಮೆಚ್ಚಿಗೆಯಿಂದ ಸ್ತುತಿಸಿದರು. ತಮ್ಮ ಗುರಿ ಸಿದ್ಧಿಸಿತೆಂದು ವಾನರರು ಹಾರುತ್ತ ಕೂಗುತ್ತ ಕೇಕೆಹಾಕುತ್ತ ಲಕ್ಷ್ಮಣನ ಸುತ್ತಲೂ ಬಂದು ನೆರೆದರು (೯೫). ಬಾಲಗಳನ್ನು ಬಡಿಯುತ್ತ ಭುಜಗಳನ್ನು ಚಪ್ಪರಿಸುತ್ತ ಆ ವಾನರರು “ಲಕ್ಷ್ಮಣನಿಗೆ ಜಯವಾಗಲಿ ! ” ಎಂದು ಘೋಷಿಸಿದರು. ಅವರು ಹರ್ಷಾತಿರೇಕದಿಂದ ಒಬ್ಬರನ್ನೊಬ್ಬರು ಅಪ್ಪಿಕೊಂಡರು ! ಲಕ್ಷ್ಮಣನ ಯುದ್ಧಕೌಶಲವನ್ನು ಬಗೆಬಗೆಯಾಗಿ ಬಣ್ಣಿಸಿದರು (೯೬-೯೭). ಇಂದ್ರಜಿದ್ವಧೆಯ ವೃತ್ತಾಂತವನ್ನು ಕೇಳಿದ ದೇವತೆಗಳು ರಣಭೂಮಿಗೆ ಬಂದು, ಅತಿದುಷ್ಕರವಾದ ಆ ಕಾರ್ಯವನ್ನು

ಪರಮಮುಪಲಭನ್ ಮನಃಪ್ರಹರ್ಷಂ
ವಿನಿಹತಮಿಂದ್ರರಿಪುಂ ನಿಶಮ್ಯ ದೇವಾಃ ॥ ೯೮

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕನವತಿತಮಃ ಸರ್ಗಃ

---

## ದ್ವಿನವತಿತಮಃ ಸರ್ಗಃ

ರಾವಣಿಶಸ್ತ್ರಹತಚಿಕಿತ್ಸಾ

**ರುಧಿರಕ್ಲಿನ್ನಗಾತ್ರಸ್ತು ಲಕ್ಷ್ಮಣಃ ಶುಭಲಕ್ಷಣಃ ।**
**ಬಭೂವ ಹೃಷ್ಟಸ್ತಂ ಹತ್ವಾ ಶಕ್ರಜೇತಾರಮಾಹವೇ ॥ ೧**

**ತತಃ ಸ ಜಾಂಬವಂತಂ ಚ ಹನುಮಂತಂ ಚ ವೀರ್ಯವಾನ್ ।**
**ಸಂನಿವರ್ತ್ಯ ಮಹಾತೇಜಾಸ್ತಾಂಶ್ಚ ಸರ್ವಾನ್ ವನೌಕಸಃ ॥ ೨**

---

ಪ್ರಿಯಮಿತ್ರನಾದ ಲಕ್ಷ್ಮಣನು ಸಾಧಿಸಿರುವುದನ್ನು ಕಣ್ಣಾರೆ ನೋಡಿ ಆನಂದತುಂದಿಲರಾದರು (೯೮).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತೊಂದನೆಯ ಸರ್ಗ

---

## ಸರ್ಗ ೯೨

ಲಕ್ಷ್ಮಣನು ವಿಭೀಷಣಾದಿಗಳೊಡನೆ ಬಂದು ಶ್ರೀರಾಮನನ್ನು ಕಾಣುವುದು.
ರಾವಣಿಯ ವಧೆಯನ್ನು ಕೇಳಿ ಶ್ರೀರಾಮನ ಅಭಿನಂದನೆ.
ಸುಷೇಣನಿಂದ ಲಕ್ಷ್ಮಣಾದಿಗಳಿಗೆ ಚಿಕಿತ್ಸೆ.

ಶುಭಲಕ್ಷಣಯುಕ್ತನಾದ ಲಕ್ಷ್ಮಣನು ರಕ್ತಾರ್ದ್ರಗಾತ್ರನಾಗಿದ್ದರೂ ದೇವೇಂದ್ರನನ್ನು ಜಯಿಸಿದ್ದ ವೈರಿಯು ಹತನಾದನೆಂದು ಸಂತುಷ್ಟನಾದನು. ಆ ತೇಜಸ್ವಿಯು ಜಾಂಬವಂತನನ್ನೂ, ಹನುಮಂತನನ್ನೂ ಮತ್ತು ಇತರ ವಾನರಪ್ರಮುಖರನ್ನೂ ಯುದ್ಧರಂಗದಿಂದ ತನ್ನೊಡನೆ ಕರೆದುಕೊಂಡು

ಆಜಗಾಮ ತತಸ್ತೀವ್ರಂ ಯತ್ರ ಸುಗ್ರೀವರಾಘವೌ ।
ವಿಭೀಷಣಮವಷ್ಟಭ್ಯ ಹನೂಮಂತಂ ಚ ಲಕ್ಷ್ಮಣಃ ॥ ೩

ತತೋ ರಾಮಮಭಿಕ್ರಮ್ಯ ಸೌಮಿತ್ರಿರಭಿವಾದ್ಯ ಚ ।
ತಸ್ಥೌ ಭ್ರಾತೃಸಮೀಪಸ್ಥಃ ಶಕ್ರಸ್ಯೇಂದ್ರಾನುಜೋ ಯಥಾ ॥ ೪

ನಿಷ್ಟನನ್ನಿವ ಚಾಗಮ್ಯ ರಾಘವಾಯ ಮಹಾತ್ಮನೇ ।
ಆಚಚಕ್ಷೇ ತದಾ ವೀರೋ ಘೋರಮಿಂದ್ರಜಿತೋ ವಧಮ್ ॥ ೫

ರಾವಣೇಸ್ತು ಶಿರಶ್ಛಿನ್ನಂ ಲಕ್ಷ್ಮಣೇನ ಮಹಾತ್ಮನಾ ।
ನ್ಯವೇದಯತ ರಾಮಾಯ ತದಾ ಹೃಷ್ಟೋ ವಿಭೀಷಣಃ ॥ ೬

ಶ್ರುತ್ವೈತತ್ತು ಮಹಾವೀರ್ಯೋ ಲಕ್ಷ್ಮಣೇನೇಂದ್ರಜಿದ್ವಧಮ್ ।
ಪ್ರಹರ್ಷಮತುಲಂ ಲೇಭೇ ರಾಮೋ ವಾಕ್ಯಮುವಾಚ ಹ ॥ ೭

ಸಾಧು ಲಕ್ಷ್ಮಣ ತುಷ್ಟೋಽಸ್ಮಿ ಕರ್ಮಣಾ ಸುಕೃತಂ ಕೃತಮ್ ।
ರಾವಣೇರ್ಹಿ ವಿನಾಶೇನ ಜಿತಮಿತ್ಯುಪಧಾರಯ ॥ ೮

---

ಹಿಂದಿರುಗಿದನು (೧-೨). ಆ ವೀರನು ಹನುಮಂತ ಮತ್ತು ವಿಭೀಷಣರ ಹೆಗಲಮೇಲೆ ಕೈಯಿಟ್ಟುಕೊಂಡು, ಶ್ರೀರಾಮನೂ ಸುಗ್ರೀವನೂ ಇರುವ ಸ್ಥಳಕ್ಕೆ ಶೀಘ್ರವಾಗಿ ಬಂದನು. ಆತನು ಶ್ರೀರಾಮನ ಸಮೀಪಕ್ಕೆ ಬಂದು ಅವನಿಗೆ ನಮಸ್ಕರಿಸಿ, ಇಂದ್ರನ ಬಳಿಯಲ್ಲಿ ಉಪೇಂದ್ರನಿರುವಂತೆ ಅಣ್ಣನ ಹತ್ತಿರ ನಿಂತುಕೊಂಡನು (೩-೪). ಅಷ್ಟರಲ್ಲಿ ವಿಭೀಷಣನು ಸಂತೋಷದ ಮುಖಮುದ್ರೆಯಿಂದಲೇ ಕಾರ್ಯಸಿದ್ಧಿಯನ್ನು ಸೂಚಿಸುತ್ತ ಮುಂದೆ ಬಂದು, ಶೂರಾಗ್ರಣಿಯಾದ ಲಕ್ಷ್ಮಣನಿಂದ ಇಂದ್ರಜಿತುವಿನ ಸಂಹಾರವು ಹೇಗೆ ನಡೆಯಿತೆಂಬುದನ್ನು ಮಹಾತ್ಮನಾದ ಶ್ರೀರಾಮನಿಗೆ ನಿವೇದಿಸಿದನು (೫-೬). ಲಕ್ಷ್ಮಣನು ಇಂದ್ರಜಿತುವನ್ನು ವಧಿಸಿದನೆಂಬ ಸುದ್ದಿಯನ್ನು ಕೇಳಿ ಶ್ರೀರಾಮನು ಆನಂದದಿಂದ "ಸಾಧು! ಭಲೆ! ವತ್ಸ-ಲಕ್ಷ್ಮಣ, ಸಂಪ್ರೀತನಾದೆನು! ಬಹು ದೊಡ್ಡ ಅದ್ಭುತಕಾರ್ಯವನ್ನು ಸಾಧಿಸಿದೆ. ರಾವಣಿಯನ್ನು ಸಂಹರಿಸಿದಮೇಲೆ ನಾವು ಗೆದ್ದೆವೆಂದೇ ತಿಳಿ!" ಎಂದು

ಸ ತಂ ಶಿರಸ್ಯುಪಾಘ್ರಾಯ ಲಕ್ಷ್ಮಣಂ ಲಕ್ಷ್ಮಿವರ್ಧನಮ್ ।
ಲಜ್ಜಮಾನಂ ಬಲಾತ್ಸ್ನೇಹಾದಂಕಮಾರೋಪ್ಯ ವೀರ್ಯವಾನ್ ॥ ೯

ಉಪವೇಶ್ಯ ತಮುತ್ಸಂಗೇ ಪರಿಷ್ವಜ್ಯಾವಪೀಡಿತಮ್ ।
ಭ್ರಾತರಂ ಲಕ್ಷ್ಮಣಂ ಸ್ನಿಗ್ಧಂ ಪುನಃ ಪುನರುದೈಕ್ಷತ ॥ ೧೦

ಶಲ್ಯಸಂಪೀಡಿತಂ ಶಸ್ತಂ ನಿಃಶ್ವಸಂತಂ ತು ಲಕ್ಷ್ಮಣಮ್ ।
ರಾಮಸ್ತು ದುಃಖಸಂತಪ್ತಸ್ತದಾ ನಿಃಶ್ವಸಿತೋ ಭೃಶಮ್ ॥ ೧೧

ಮೂರ್ಧ್ನಿ ಚೈನಮುಪಾಘ್ರಾಯ ಭೂಯಃ ಸಂಸ್ಪೃಶ್ಯ ಚ ತ್ವರನ್ ।
ಉವಾಚ ಲಕ್ಷ್ಮಣಂ ವಾಕ್ಯಮಾಶ್ವಾಸ್ಯ ಪುರುಷರ್ಷಭಃ ॥ ೧೨

ಕೃತಂ ಪರಮಕಲ್ಯಾಣಂ ಕರ್ಮ ದುಷ್ಕರಕರ್ಮಣಾ ।
ಅದ್ಯ ಮನ್ಯೇ ಹತೇ ಪುತ್ರೇ ರಾವಣಂ ನಿಹತಂ ಯುಧಿ ॥ ೧೩

ಅದ್ಯಾಹಂ ವಿಜಯೀ ಶತ್ರೌ ಹತೇ ತಸ್ಮಿನ್ ದುರಾತ್ಮನಿ ।
ರಾವಣಸ್ಯ ನೃಶಂಸಸ್ಯ ದಿಷ್ಟ್ಯಾ ವೀರ ತ್ವಯಾ ರಣೇ ॥ ೧೪

---

ಉದ್ಗರಿಸಿದನು (೭-೮). ಹೀಗೆ ನುಡಿದು ಶ್ರೀರಾಮನು ಲಕ್ಷ್ಮಣನ ಶಿರಸ್ಸನ್ನು ಆಘ್ರಾಣಿಸಿದನಲ್ಲದೆ, ನಾಚುತ್ತಿದ್ದ ಲಕ್ಷ್ಮಣನನ್ನು ಸ್ನೇಹದಿಂದ ಎಳೆದು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು. ಅವನನ್ನು ಬಿಗಿದಪ್ಪಿಕೊಂಡು ಸ್ನೇಹಾಕುಲನಾದ ಶ್ರೀರಾಮನು ತನ್ನ ತಮ್ಮನನ್ನು ವಾತ್ಸಲ್ಯದಿಂದ ಮತ್ತೆ ಮತ್ತೆ ನೋಡಿದನು (೯-೧೦). ಲಕ್ಷ್ಮಣನ ಮೈಯಲ್ಲಿ ಬಾಣಗಳ ಅಲಗು ನಾಟಿರುವುದನ್ನೂ ಅವನು ಆಯಾಸದಿಂದ ಉಸಿರೆಳೆಯುವುದನ್ನೂ ಕಂಡು, ಶ್ರೀರಾಮನು ದುಃಖಸಂತಪ್ತನಾದನು. ಅವನು ಕನಿಕರದಿಂದ ನಿಟ್ಟುಸಿರುಬಿಡುತ್ತ ಲಕ್ಷ್ಮಣನ ಶಿರಸ್ಸನ್ನು ಮತ್ತೆ ಮತ್ತೆ ಆಘ್ರಾಣಿಸಿ ಮೈದಡವಿ ಸಂತೈಸುತ್ತ ಹೀಗೆಂದನು (೧೧-೧೨): "ತಮ್ಮ-ಲಕ್ಷ್ಮಣ, ಇತರರಿಗೆ ಅಸಾಧ್ಯವಾದ ದುಷ್ಕರಕಾರ್ಯವನ್ನೆಸಗಿದ್ದೀಯೆ. ಅದ್ಭುತವಾದ ಶುಭಕಾರ್ಯವಿದು. ರಾವಣಪುತ್ರನು ಹತನಾದಮೇಲೆ ರಾವಣನೀಗ ಹತನಾದನೆಂದೇ ತಿಳಿಯುತ್ತೇನೆ (೧೩). ದುರಾತ್ಮನಾದ ಇಂದ್ರಜಿತು ಹತನಾದಮೇಲೆ ನಾನು ವಿಜಯಶಾಲಿಯಾದಂತೆಯೇ. ಲಕ್ಷ್ಮಣ, ನಮ್ಮ ಭಾಗ್ಯವಶದಿಂದ ಈ ದಿನ ಘಾತುಕನಾದ ರಾವಣನ ಬಲಗೈಯನ್ನೇ ನೀನು

ಛಿನ್ನೋ ಹಿ ದಕ್ಷಿಣೋ ಬಾಹುಃ ಸ ಹಿ ತಸ್ಯ ವ್ಯಪಾಶ್ರಯಃ ।
ವಿಭೀಷಣಹನೂಮದ್ಭ್ಯಾಂ ಕೃತಂ ಕರ್ಮ ಮಹದ್ರಣೇ ॥ ೧೫

ಅಹೋರಾತ್ರೈಸ್ತ್ರಿಭಿರ್ವೀರಃ ಕಥಂಚಿದ್ವಿನಿಪಾತಿತಃ ।
ನಿರಮಿತ್ರಃ ಕೃತೋಽಸ್ಮ್ಯದ್ಯ ನಿರ್ಯಾಸ್ಯತಿ ಹಿ ರಾವಣಃ ॥ ೧೬

ಬಲವ್ಯೂಹೇನ ಮಹತಾ ಶ್ರುತ್ವಾ ಪುತ್ರಂ ನಿಪಾತಿತಮ್ ।
ತಂ ಪುತ್ರವಧಸಂತಪ್ತಂ ನಿರ್ಯಾಂತಂ ರಾಕ್ಷಸಾಧಿಪಮ್ ॥ ೧೭

ಬಲೇನಾವೃತ್ಯ ಮಹತಾ ನಿಹನಿಷ್ಯಾಮಿ ದುರ್ಜಯಮ್ ।
ತ್ವಯಾ ಲಕ್ಷ್ಮಣ ನಾಥೇನ ಸೀತಾ ಚ ಪೃಥಿವೀ ಚ ಮೇ ॥ ೧೮

ನ ದುಷ್ಪ್ರಾಪಾ ಹತೇ ತ್ವದ್ಯ ಶಕ್ರಜೇತರಿ ಚಾಹವೇ ।
ಸ ತಂ ಭ್ರಾತರಮಾಶ್ವಾಸ್ಯ ಪರಿಷ್ವಜ್ಯ ಚ ರಾಘವಃ ॥ ೧೯

---

ಕತ್ತರಿಸಿದ್ದೀಯೆ! ಅವನೊಬ್ಬನೇ ರಾವಣನಿಗೆ ಮುಖ್ಯವಾದ ಅವಲಂಬನೆಯಾಗಿದ್ದನು. ವಿಭೀಷಣನೂ ಹನುಮಂತನೂ ರಣರಂಗದಲ್ಲಿ ಮಹತ್ತರವಾದ ಕಾರ್ಯವನ್ನು ನಡೆಸಿರಬೇಕು (೧೪-೧೫). ಮೂರು ದಿನಗಳವರೆಗೆ* ಅಹೋರಾತ್ರವೂ ಹೋರಾಡಿ ಕಷ್ಟದಿಂದ ಆ ವೀರನನ್ನು ಸಂಹರಿಸಿದ್ದಾಯಿತು. ತಮ್ಮ, ನನ್ನ ಶತ್ರುಗಳೆಲ್ಲರೂ ವಿಧ್ವಸ್ತರಾದರು. ರಾವಣನೊಬ್ಬನಿದ್ದಾನೆ. ಅವನೂ ಇನ್ನು ಯುದ್ಧಕ್ಕಾಗಿ ಹೊರಟುಬರುವನು (೧೬). ತನ್ನ ಮಗನು ಹತನಾದನೆಂಬುದನ್ನು ಕೇಳಿದೊಡನೆ, ದೊಡ್ಡಪಡೆಯೊಡನೆ ಬಂದೇ ಬರುವನು! ಪುತ್ರವಧೆಯಿಂದ ಸಂತಪ್ತನಾದ ರಾಕ್ಷಸೇಶ್ವರನು ಎಷ್ಟು ದೊಡ್ಡ ಸೇನೆಯನ್ನಾದರೂ ತರಲಿ, ದುರ್ಜಯನೆನಿಸಿದ ಅವನನ್ನು ನಾನು ಸಂಹರಿಸುವೆನು (೧೭). ಇಂದ್ರಜಿತುವನ್ನೇ ಸಂಹರಿಸಿರುವ ನೀನು, ಲಕ್ಷ್ಮಣ, ನನಗೆ ದಿಕ್ಕಾಗಿರುವಾಗ ಸೀತೆಯನ್ನಾಗಲಿ ಪೃಥ್ವಿಯನ್ನಾಗಲಿ ಪಡೆಯುವುದು ನನಗೆ ದುಷ್ಕರವಲ್ಲ" ಎಂದನು (೧೮). ಮತ್ತೆ ಶ್ರೀರಾಮನು ತಮ್ಮನನ್ನು ಆಲಿಂಗಿಸಿಕೊಂಡು ಸಂತೈಸುತ್ತ ಸಂಪ್ರೀತನಾಗಿ ಸುಷೇಣನನ್ನು

* ದಶಮೀ ರಾತ್ರಿಯ ನಾಲ್ಕನೆಯ ಜಾವದಲ್ಲಿ ಇಂದ್ರಜಿಲ್ಲಕ್ಷ್ಮಣರಿಗೆ ಯುದ್ಧವು ಆರಂಭಿಸಿತು. ಏಕಾದಶೀ, ದ್ವಾದಶೀ, ತ್ರಯೋದಶಿಗಳಲ್ಲಿ ನಿರಂತರವಾಗಿ ಯುದ್ಧವು ನಡೆದು ತ್ರಯೋದಶೀ ರಾತ್ರಿಯ ನಾಲ್ಕನೆಯ ಜಾವದಲ್ಲಿ ಕೊನೆಗೊಂಡಿತು.

ರಾಮಃ ಸುಷೇಣಂ ಮುದಿತಃ ಸಮಾಭಾಷ್ಯೇದಮಬ್ರವೀತ್ ।
ಸಶಲ್ಯೋಽಯಂ ಮಹಾಪ್ರಾಜ್ಞ ಸೌಮಿತ್ರಿರ್ಮಿತ್ರವತ್ಸಲಃ ॥ ೨೦

ಯಥಾ ಭವತಿ ಸುಸ್ವಸ್ಥಸ್ತಥಾ ತ್ವಂ ಸಮುಪಾಚರ ।
ವಿಶಲ್ಯಃ ಕ್ರಿಯತಾಂ ಕ್ಷಿಪ್ರಂ ಸೌಮಿತ್ರಿಃ ಸವಿಭೀಷಣಃ ॥ ೨೧

ಋಕ್ಷವಾನರಸೈನ್ಯಾನಾಂ ಶೂರಾಣಾಂ ದ್ರುಮಯೋಧಿನಾಮ್ ।
ಯೇ ಚಾಪ್ಯನ್ಯೇಽತ್ರ ಯುಧ್ಯಂತಿ ಸಶಲ್ಯಾ ವ್ರಣಿನಸ್ತಥಾ ॥ ೨೨

ತೇಽಪಿ ಸರ್ವೇ ಪ್ರಯತ್ನೇನ ಕ್ರಿಯಂತಾಂ ಸುಖಿನಸ್ತ್ವಯಾ ।
ಏವಮುಕ್ತಸ್ತು ರಾಮೇಣ ಮಹಾತ್ಮಾ ಹರಿಯೂಥಪಃ ॥ ೨೩

ಲಕ್ಷ್ಮಣಾಯ ದದೌ ನಸ್ತಃ ಸುಷೇಣಃ ಪರಮೌಷಧಿಮ್ ।
ಸ ತಸ್ಯಾ ಗಂಧಮಾಘ್ರಾಯ ವಿಶಲ್ಯಃ ಸಮಪದ್ಯತ ॥ ೨೪

ತಥಾ ನಿರ್ವೇದನಶ್ಚೈವ ಸಂರೂಢವ್ರಣ ಏವ ಚ ।
ವಿಭೀಷಣಮುಖಾನಾಂ ಚ ಸುಹೃದಾಂ ರಾಘವಾಜ್ಞಯಾ ॥ ೨೫

---

ಕರೆಸಿ "ಸುಷೇಣ, ನೀನು ಮಹಾಪ್ರಾಜ್ಞನಾದ ವೈದ್ಯನಾಗಿದ್ದೀಯೆ. ಮಿತ್ರವತ್ಸಲನಾದ ನಮ್ಮ ಸೌಮಿತ್ರಿಯ ಮೈಯಲ್ಲಿ ಬಾಣಗಳು ನಾಟಿಕೊಂಡಿವೆ (೧೯-೨೦) ಇವನು ಸ್ವಸ್ಥನಾಗುವಂತೆ ಚಿಕಿತ್ಸೆಮಾಡಿ ಉಪಚರಿಸು. ಲಕ್ಷ್ಮಣ ಮತ್ತು ವಿಭೀಷಣರ ಗಾಯವನ್ನು ಬೇಗನೆ ಗುಣಪಡಿಸು. ಅಲ್ಲದೆ ವಾನರಭಲ್ಲೂಕಸೇನೆಗಳಲ್ಲಿ ಯಾವ ಯಾವ ಯೋಧರು ಯುದ್ಧ ಮಾಡಿ ಗಾಯಗೊಂಡಿರುವರೋ, ಯಾರ ದೇಹದಲ್ಲಿ ಆಯುಧಗಳು ನಾಟಿಕೊಂಡಿವೆಯೋ ಅವರೆಲ್ಲರಿಗೂ ಚಿಕಿತ್ಸೆಮಾಡು (೨೧-೨೨). ಎಲ್ಲರೂ ಸ್ವಸ್ಥರಾಗುವಂತೆ ಪ್ರಯತ್ನಿಸು" ಎಂದು ತಿಳಿಸಿದನು. ಶ್ರೀರಾಮನು ಈ ರೀತಿಯಲ್ಲಿ ಹೇಳಲು, ವಾನರಯೂಥಪನಾದ ಸುಷೇಣನು ಒಂದು ದಿವ್ಯ ಮೂಲಿಕೆಯನ್ನು* ತಂದು ಲಕ್ಷ್ಮಣನ ಮೂಗಿನಲ್ಲಿ ಅದರ ರಸವನ್ನು ಹಿಂಡಿ ಮೂಸಿಸಿದನು. ಲಕ್ಷ್ಮಣನ ಮೈಯಲ್ಲಿ ನಾಟಿದ್ದ ಅಲಗುಗಳು ಹೊರ ಬಂದವು (೨೩-೨೪) ಯಾತನೆಯು ನಿಂತಿತು. ಗಾಯಗಳು ಮಾದವು.

---

* ಹನುಮಂತನು ತಂದಿದ್ದ ಓಷಧಿಪರ್ವತದಿಂದ ಸುಷೇಣನು ಕೆಲವು ಮೂಲಿಕೆಗಳನ್ನು ಸಂಗ್ರಹಿಸಿ ಇಟ್ಟುಕೊಂಡಿರಬಹುದು.

ಸರ್ವವಾನರಮುಖ್ಯಾನಾಂ ಚಿಕಿತ್ಸಾಂ ಸ ತದಾಕರೋತ್ ।
ತತಃ ಪ್ರಕೃತಿಮಾಪನ್ನೋ ಹೃತಶಲ್ಯೋ ಗತವ್ಯಥಃ ॥ ೨೬

ಸೌಮಿತ್ರಿರ್ಮುದಿತಸ್ತತ್ರ ಕ್ಷಣೇನ ವಿಗತಜ್ವರಃ ॥

ತಥೈವ ರಾಮಃ ಪ್ಲವಗಾಧಿಪಸ್ತದಾ
ವಿಭೀಷಣಶ್ಚರ್ಕ್ಷಪತಿಶ್ಚ ಜಾಂಬವಾನ್ ।
ಅವೇಕ್ಷ್ಯ ಸೌಮಿತ್ರಿಮರೋಗಮುತ್ಥಿತಂ
ಮುದಾ ಸಸೈನ್ಯಾಃ ಸುಚಿರಂ ಜಹರ್ಷಿರೇ ॥ ೨೭

ಅಪೂಜಯತ್ ಕರ್ಮ ಸ ಲಕ್ಷ್ಮಣಸ್ಯ
ಸುದುಷ್ಕರಂ ದಾಶರಥಿರ್ಮಹಾತ್ಮಾ ।
ಹೃಷ್ಟಾ ಬಭೂವುರ್ಯುಧಿ ಯೂಥಪೇಂದ್ರಾ
ನಿಪಾತಿತಂ ಶಕ್ರಜಿತಂ ನಿಶಮ್ಯ ॥ ೨೮

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಿನವತಿತಮಃ ಸರ್ಗಃ



ಶ್ರೀರಾಮನ ಆಜ್ಞೆಯಂತೆ ಸುಷೇಣನು ವಿಭೀಷಣನೇ ಮೊದಲಾದ ಮಿತ್ರರಿಗೂ ಸಕಲವಾನರಯೋಧರಿಗೂ ಚಿಕಿತ್ಸೆಯನ್ನು ನೀಡಿದನು. ಲಕ್ಷ್ಮಣನು ಕ್ಷಣಮಾತ್ರದಲ್ಲಿ ವಿಶಲ್ಯನೂ ಸಕಲಬಾಧೆಯಿಂದ ನಿವೃತ್ತನೂ ಆಗಿ ಸ್ವಸ್ಥನಾದನು (೨೫-೨೬). ಸೌಮಿತ್ರಿಯು ಮೊದಲಿನಂತೆ ಆರೋಗ್ಯದಿಂದಲೂ ಉಲ್ಲಾಸದಿಂದಲೂ ಇರುವುದನ್ನು ವೀಕ್ಷಿಸಿ, ಶ್ರೀರಾಮ ಸುಗ್ರೀವ ವಿಭೀಷಣ ಜಾಂಬವಂತ ವಾನರಯೋಧರು-ಎಲ್ಲರೂ ಆನಂದದಿಂದ ನಲಿದರು (೨೭). ದಶರಥಾತ್ಮಜನಾದ ಶ್ರೀರಾಮನು, ದುಷ್ಕರವಾದ ಕಾರ್ಯವನ್ನು ಲಕ್ಷ್ಮಣನು ಸಾಧಿಸಿದನೆಂದು ಅವನನ್ನು ಕೊಂಡಾಡಿದನು. ಇಂದ್ರಜಿತು ಯುದ್ಧದಲ್ಲಿ ಹತನಾದನೆಂಬುದನ್ನು ಕೇಳಿ, ವಾನರಯೂಥಪರೆಲ್ಲರೂ ಪರಮಾನಂದವನ್ನನುಭವಿಸಿದರು (೨೮).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತೆರಡನೆಯ ಸರ್ಗ



## ತ್ರಿನವತಿತಮಃ ಸರ್ಗಃ

### ಸೀತಾಹನನೋದ್ಯಮನಿವೃತ್ತಿಃ

ತತಃ ಪೌಲಸ್ತ್ಯಸಚಿವಾಃ ಶ್ರುತ್ವಾ ಚೇಂದ್ರಜಿತಂ ಹತಮ್ ।
ಆಚಚಕ್ಷುರಭಿಜ್ಞಾಯ ದಶಗ್ರೀವಾಯ ಸವ್ಯಥಾಃ ॥ ೧

ಯುದ್ಧೇ ಹತೋ ಮಹಾರಾಜ ಲಕ್ಷ್ಮಣೇನ ತವಾತ್ಮಜಃ ।
ವಿಭೀಷಣಸಹಾಯೇನ ಮಿಷತಾಂ ನೋ ಮಹಾದ್ಯುತಿಃ ॥ ೨

ಶೂರಃ ಶೂರೇಣ ಸಂಗಮ್ಯ ಸಂಯುಗೇಷ್ವಪರಾಜಿತಃ ।
ಲಕ್ಷ್ಮಣೇನ ಹತಃ ಶೂರಃ ಪುತ್ರಸ್ತೇ ವಿಬುಧೇಂದ್ರಜಿತ್ ॥ ೩

ಗತಃ ಸ ಪರಮಾನ್ ಲೋಕಾನ್ ಶರೈಃ ಸಂತಾಪ್ಯ ಲಕ್ಷ್ಮಣಮ್ ।
ಸ ತಂ ಪ್ರತಿಭಯಂ ಶ್ರುತ್ವಾ ವಧಂ ಪುತ್ರಸ್ಯ ದಾರುಣಮ್ ॥ ೪

## ಸರ್ಗ ೯೩

ರಾವಣನು ಇಂದ್ರಜಿದ್ವಧೆಯನ್ನು ಕೇಳಿ ವಿಲಪಿಸುವುದು. ಅನಂತರ ಕೋಪಾವಿಷ್ಟ ನಾಗಿ ಸೀತಾದೇವಿಯನ್ನು ಕೊಲ್ಲುವೆನೆಂದು ಅಶೋಕವನಕ್ಕೆ ಹೋಗುವುದು. ಸುಪಾರ್ಶ್ವನೆಂಬ ಮಂತ್ರಿಯು ಅವನನ್ನು ತಡೆಯುವುದು.

ಇಂದ್ರಜಿತು ಮೃತನಾದನೆಂಬ ಸುದ್ದಿ ರಾವಣನ ಸಚಿವರಿಗೆ ಮುಟ್ಟಿತು. ಅವರು ಸುದ್ದಿಯ ಸತ್ಯಾಂಶವನ್ನು ತಿಳಿದುಬಂದು ಖಿನ್ನರಾಗಿ ದಶಕಂಠ ನನ್ನು ಕಂಡು "ಮಹಾರಾಜ, ನಿನ್ನ ತನಯನಾದ ಮೇಘನಾದನು ಯುದ್ಧ ದಲ್ಲಿ ಲಕ್ಷ್ಮಣನಿಂದ ಹತನಾದನು. ವಿಭೀಷಣನು ಲಕ್ಷ್ಮಣನಿಗೆ ಸಹಾಯ ಮಾಡಿದನು. ನಮ್ಮ ರಾಕ್ಷಸರ ಕಣ್ಣೆದುರಿಗೇ ಇದು ನಡೆಯಿತು (೧–೨). ದೇವೇಂದ್ರನನ್ನೂ ಜಯಿಸಿ, ಯುದ್ಧದಲ್ಲಿ ಸೋಲನ್ನೇ ಕಂಡರಿಯದ ಶೂರಾಗ್ರೇಸರನಾದ ನಿನ್ನ ಪುತ್ರನು, ಮಹಾಪ್ರಭು, ಶೂರನಾದ ಲಕ್ಷ್ಮಣ ನಿಂದ ಹತನಾದನು. ಇಂದ್ರಜಿತು ತನ್ನ ಕೂರಂಬುಗಳಿಂದ ಲಕ್ಷ್ಮಣನನ್ನು ಸಾಕುಬೇಕೆನಿಸುವಂತೆ ಪೀಡಿಸಿ, ಕಡೆಯಲ್ಲಿ ವೀರಯೋಗ್ಯವಾದ ಉತ್ತಮ ಲೋಕವನ್ನು ಸೇರಿಕೊಂಡನು" ಎಂದು ಅರಿಕೆ ಮಾಡಿದರು (೩–೪).

ಘೋರಮಿಂದ್ರಜಿತಃ ಸಂಖ್ಯೇ ಕಶ್ಮಲಂ ಚಾವಿಶನ್ಮಹತ್ ।
ಉಪಲಭ್ಯ ಚಿರಾತ್ ಸಂಜ್ಞಾಂ ರಾಜಾ ರಾಕ್ಷಸಪುಂಗವಃ ॥ ೫

ಪುತ್ರಶೋಕಾರ್ದಿತೋ ದೀನೋ ವಿಲಲಾಪಾಕುಲೇಂದ್ರಿಯಃ ।
ಹಾ ರಾಕ್ಷಸಚಮೂಮುಖ್ಯ ಮಮ ವತ್ಸ ಮಹಾರಥ ॥ ೬

ಜಿತ್ವೇಂದ್ರಂ ಕಥಮದ್ಯ ತ್ವಂ ಲಕ್ಷ್ಮಣಸ್ಯ ವಶಂ ಗತಃ ।
ನನು ತ್ವಮಿಷುಭಿಃ ಕ್ರುದ್ಧೋ ಭಿಂದ್ಯಾಃ ಕಾಲಾಂತಕಾವಪಿ ॥ ೭

ಮಂದರಸ್ಯಾಪಿ ಶೃಂಗಾಣಿ ಕಿಂ ಪುನರ್ಲಕ್ಷ್ಮಣಂ ಯುಧಿ ।
ಅದ್ಯ ವೈವಸ್ವತೋ ರಾಜಾ ಭೂಯೋ ಬಹುಮತೋ ಮಮ ॥ ೮

ಯೇನಾದ್ಯ ತ್ವಂ ಮಹಾಬಾಹೋ ಸಂಯುಕ್ತಃ ಕಾಲಧರ್ಮಣಾ ।
ಏಷ ಪಂಥಾಃ ಸುಯೋಧಾನಾಂ ಸರ್ವಾಮರಗಣೇಷ್ವಪಿ ॥ ೯

---

ತನ್ನ ಪುತ್ರನಾದ ಇಂದ್ರಜಿತು ಹತನಾದನೆಂಬ ಹೃದಯವಿದ್ರಾವಕವಾದ ದಾರುಣವಾರ್ತೆಯನ್ನು ಕೇಳಿ, ರಾವಣನು ಶೋಕಾಕುಲನಾಗಿ ಮೂರ್ಛೆ ಹೋದನು. ಬಹಳ ಹೊತ್ತಾದಮೇಲೆ ಮೆಲ್ಲಗೆ ಮೂರ್ಛೆಯಿಂದೆದ್ದು, ಆ ರಾಕ್ಷಸಪುಂಗವನು ಪುತ್ರಶೋಕಾರ್ತನಾಗಿ ದೈನ್ಯದಿಂದ ಅಳತೊಡಗಿದನು. ಅವನ ಇಂದ್ರಿಯಗಳು ಕಲಕಿಹೋದವು (೫–೬). "ಹಾ! ಮಗನೆ, ರಾಕ್ಷಸ ಸೇನಾಗ್ರಣಿ, ಮಹಾರಥ! ದೇವೇಂದ್ರನನ್ನೇ ಜಯಿಸಿಬಂದ ನೀನು ಒಬ್ಬ ಮನುಷ್ಯಮಾತ್ರನಾದ ಲಕ್ಷ್ಮಣನ ಕೈಗೆ ಸಿಕ್ಕಿಹೋದೆಯಾ? ನೀನು ಕ್ರುದ್ಧನಾದರೆ ಮೃತ್ಯುದೇವತೆಯನ್ನೂ ಯಮನನ್ನೂ ಅಸ್ತ್ರಗಳಿಂದ ಭೇದಿಸುವ ಸಾಮರ್ಥ್ಯವುಳ್ಳವನಲ್ಲವೆ? ಮಂದರಗಿರಿಯ ಶೃಂಗಗಳನ್ನೂ ಉರುಳಿಸಬಲ್ಲ ಸಾಹಸಿಯಲ್ಲವೆ? ಓ ಮಹಾಬಾಹು, ಇಂದು ನನಗಿಂತ ಯಮರಾಜನೇ ನಿನಗೆ ಬಹಳ ಪ್ರಿಯನಾದನೆ?* (೭–೮). ಕಾಲಧರ್ಮವನ್ನೈದಿ ಯಮಲೋಕಕ್ಕೆ ನೀನು ಹೊರಟುಹೋದೆಯಲ್ಲವೆ? ಸಂಗ್ರಾಮಶೂರರಾದ ಪಟುಭಟರಿಗೆ ವೀರೋಚಿತವಾದ ಮರಣವೇ ಯೋಗ್ಯವಾದ ದಾರಿ. ದೇವತೆಗಳಿಗೂ ಇದು

---

* 'ನನ್ನ ಪುತ್ರನ ಸಹವಾಸಭಾಗ್ಯವನ್ನು ಬಯಸಿದ ಯಮರಾಜನು ಈಗ ನನ್ನ ಆದರಕ್ಕೆ ಪಾತ್ರನಾದನು' ಎಂದೂ ತಾತ್ಪರ್ಯವನ್ನು ಹೇಳಬಹುದು.

ಯಃ ಕೃತೇ ಹನ್ಯತೇ ಭರ್ತುಃ ಸ ಪುಮಾನ್ ಸ್ವರ್ಗಮೃಚ್ಛತಿ ।
ಅದ್ಯ ದೇವಗಣಾಃ ಸರ್ವೇ ಲೋಕಪಾಲಾಸ್ತಥರ್ಷಯಃ ॥ ೧೦
ಹತಮಿಂದ್ರಜಿತಂ ಶ್ರುತ್ವಾ ಸುಖಂ ಸ್ವಪ್ಸ್ಯಂತಿ ನಿರ್ಭಯಾಃ ।
ಅದ್ಯ ಲೋಕಾಸ್ತ್ರಯಃ ಕೃತ್ಸ್ನಾ ಪೃಥಿವೀ ಚ ಸಕಾನನಾ ॥ ೧೧
ಏಕೇನೇಂದ್ರಜಿತಾ ಹೀನಾ ಶೂನ್ಯೇವ ಪ್ರತಿಭಾತಿ ಮೇ ।
ಅದ್ಯ ನೈರ್ಋತಕನ್ಯಾನಾಂ ಶ್ರೋಷ್ಯಾಮ್ಯಂತಃಪುರೇ ರವಮ್ ॥ ೧೨
ಕರೇಣುಸಂಘಸ್ಯ ಯಥಾ ನಿನಾದಂ ಗಿರಿಗಹ್ವರೇ ।
ಯೌವರಾಜ್ಯಂ ಚ ಲಂಕಾಂ ಚ ರಕ್ಷಾಂಸಿ ಚ ಪರಂತಪ ॥ ೧೩
ಮಾತರಂ ಮಾಂ ಚ ಭಾರ್ಯಾಂ ಚ ಕ್ವ ಗತೋಽಸಿ ವಿಹಾಯ ನಃ ।
ಮಮ ನಾಮ ತ್ವಯಾ ವೀರ ಗತಸ್ಯ ಯಮಸಾದನಮ್ ॥ ೧೪
ಪ್ರೇತಕಾರ್ಯಾಣಿ ಕಾರ್ಯಾಣಿ ವಿಪರೀತೇ ಹಿ ವರ್ತಸೇ ।
ಸ ತ್ವಂ ಜೀವತಿ ಸುಗ್ರೀವೇ ಲಕ್ಷ್ಮಣೇ ಚ ಸರಾಘವೇ ॥ ೧೫

---

ಆದರ್ಶವಾದ ಮಾರ್ಗ! ಯಾವನು ತನ್ನ ಸ್ವಾಮಿಗಾಗಿ ಪ್ರಾಣವನ್ನು ತೆರುವನೋ ಅವನು ಸದ್ಗತಿಯನ್ನು ಪಡೆಯುವನು! ಈ ದಿನ ಸಮಸ್ತ ದೇವತೆಗಳೂ ದಿಕ್ಪಾಲರೂ ಋಷಿಗಳೂ ನಿರ್ಭೀತರಾದರು (೯-೧೦). ಇಂದ್ರಜಿತು ಹತನಾದನೆಂದು ಕೇಳಿ ಅವರೆಲ್ಲರೂ ನೆಮ್ಮದಿಯಿಂದ ಈ ದಿನ ನಿದ್ರಿಸುವರು! ಅಯ್ಯೊ, ಒಬ್ಬ ಇಂದ್ರಜಿತು ಇಲ್ಲದ್ದರಿಂದ ಮೂರು ಲೋಕಗಳೂ ಅರಣ್ಯಸಹಿತವಾದ ಈ ಭೂಮಂಡಲವೂ ನನಗೆ ಶೂನ್ಯವಾಗಿ ತೋರುತ್ತವೆ. ಹಾ ಕಷ್ಟವೆ! ಈ ದಿವಸ ರಾಕ್ಷಸಕನ್ಯೆಯರು ಅಂತಃಪುರದಲ್ಲಿ ಗೋಳಾಡುವುದನ್ನು ನಾನು ಕೇಳಬೇಕಾಯಿತು! (೧೧-೧೨). ಗಜೇಂದ್ರನನ್ನು ವಧಿಸಿದಾಗ ಬೆಟ್ಟದ ತಪ್ಪಲಲ್ಲಿ ಹೆಣ್ಣಾನೆಗಳ ಆರ್ತಧ್ವನಿಯಂತೆ, ಅಂತಃಪುರದಲ್ಲಿ ಅಳುವ ಹೆಂಗಸರ ರೋದನಧ್ವನಿಯನ್ನು ನಾನು ಕೇಳಬೇಕಾಗುವುದು! ಅಪ್ಪಾ-ಇಂದ್ರಜಿತು, ಯೌವರಾಜ್ಯವನ್ನೂ ಲಂಕಾನಗರವನ್ನೂ ಪ್ರಜೆಗಳಾದ ರಾಕ್ಷಸರನ್ನೂ ಬಿಟ್ಟು ಎಲ್ಲಿಗೆ ಹೊರಟುಹೋದೆ? (೧೩). ಹಾ ವತ್ಸ, ನಿನ್ನ ತಾಯಿಯನ್ನೂ ನನ್ನನ್ನೂ ನಿನ್ನ ಮಡದಿಯನ್ನೂ-ನಮ್ಮೆಲ್ಲರನ್ನೂ ತೊರೆದು ಎಲ್ಲಿಗೆ ಹೋಗಿಬಿಟ್ಟೆ? ಓ ವೀರಾಗ್ರಣಿ, ನಾನು ಸತ್ತಮೇಲೆ ನೀನಲ್ಲವೆ ನನಗೆ ಪ್ರೇತಕಾರ್ಯಗಳನ್ನು ಮಾಡ

ಮಮ ಶಲ್ಯಮನುದ್ಧೃತ್ಯ ಕ್ವ ಗತೋಽಸಿ ವಿಹಾಯ ನಃ ।
ಏವಮಾದಿವಿಲಾಪಾರ್ತಂ ರಾವಣಂ ರಾಕ್ಷಸಾಧಿಪಮ್ ॥ ೧೬

ಆವಿವೇಶ ಮಹಾನ್ ಕೋಪಃ ಪುತ್ರವ್ಯಸನಸಂಭವಃ ।
ಪ್ರಕೃತ್ಯಾ ಕೋಪನಂ ಹ್ಯೇನಂ ಪುತ್ರಸ್ಯ ಪುನರಾಧಯಃ ॥ ೧೭

ದೀಪ್ತಂ ಸಂದೀಪಯಾಮಾಸುರ್ಘರ್ಮೇಽರ್ಕಮಿವ ರಶ್ಮಯಃ ।
ಲಲಾಟೇ ಭ್ರುಕುಟೀಭಿಶ್ಚ ಸಂಗತಾಭಿರ್ವ್ಯರೋಚತ ॥ ೧೮

ಯುಗಾಂತೇ ಸಹ ನಕ್ರೈಸ್ತು ಮಹೋರ್ಮಿಭಿರಿವೋದಧಿಃ ।
ಕೋಪಾದ್ವಿಜೃಂಭಮಾಣಸ್ಯ ವಕ್ತ್ರಾದ್ವ್ಯಕ್ತಮಭಿಜ್ವಲನ್ ॥ ೧೯

ಉತ್ಪಪಾತ ಸಧೂಮೋಽಗ್ನಿರ್ವೃತ್ರಸ್ಯ ವದನಾದಿವ ।
ಸ ಪುತ್ರವಧಸಂತಪ್ತಃ ಶೂರಃ ಕ್ರೋಧವಶಂ ಗತಃ ॥ ೨೦

---

ಬೇಕಾದುದು? ಅದು ಈಗ ಹಿಂದುಮುಂದಾಯಿತಲ್ಲ! (೧೪-೧೫). ಸುಗ್ರೀವನೂ ರಾಮಲಕ್ಷ್ಮಣರೂ ಇನ್ನೂ ಬದುಕಿರುವಾಗ, ನನ್ನ ಎದೆಗೆ ನಾಟಿದ ಈ ಶೂಲವನ್ನು ಕಿತ್ತೆಸೆಯದೆ, ಮಗು, ನಮ್ಮೆಲ್ಲರನ್ನೂ ತೊರೆದು ಎಲ್ಲಿಗೆ ಹೊರಟುಹೋದೆ?". ಈ ರೀತಿಯಲ್ಲಿ ರಾವಣನು ಬಗೆಬಗೆಯಾಗಿ ಹಲುಬಿ ಗೋಳಾಡಿದನು (೧೬). ಹೀಗೆ ದುಃಖಾರ್ತನಾಗಿದ್ದ ರಾಕ್ಷಸಾಧಿಪನಿಗೆ ಪುತ್ರವ್ಯಸನದಿಂದ ಮಹಾಕ್ರೋಧವು ಹೊಮ್ಮಿತು. ಸಹಜವಾಗಿಯೇ ಕ್ರೋಧಶೀಲನಾದ ರಾವಣನನ್ನು ಪುತ್ರವಧೆಯಿಂದಾದ ಸಂಕಟವು ಕೆರಳಿಸಿತು. ಉಗ್ರಕಿರಣನಾದ ಸೂರ್ಯನನ್ನು ಬೇಸಿಗೆಯಲ್ಲಿ ಕಿರಣಗಳು ಸಂದೀಪನಗೊಳಿಸುವಂತೆ, ಮನೋವ್ಯಥೆಗಳು ರಾವಣನನ್ನು ರೋಷಗೊಳಿಸಿದವು (೧೭). ಅವನ ಹುಬ್ಬು ಗಂಟಿಕ್ಕಿತು. ಲಲಾಟತಟದಲ್ಲಿ ಪ್ರಕಟವಾದ ಕುಟಿಲಭ್ರುಕುಟಿಗಳು ಪ್ರಳಯಕಾಲದ ಮಹಾಸಾಗರದಲ್ಲಿ ಎದ್ದೆದ್ದು ಬೀಳುವ ಮೊಸಳೆಗಳಂತೆಯೂ ಮಹಾತರಂಗಗಳಂತೆಯೂ ಕಾಣಿಸಿದವು! ಕೋಪಾವೇಶದಿಂದ ರಾವಣನು ಬಾಯ್ದೆರೆಯಲು, ವೃತ್ರಾಸುರನ ಬಾಯಿಯಂತಿದ್ದ ಆತನ ಬಾಯಿಯಿಂದ ಹೊಗೆಯಾಡಿಸುತ್ತ ಉರಿಯುವ ಬೆಂಕಿಯು ಹೊರಹೊಮ್ಮಿತು! (೧೮-೧೯). ತನ್ನ ಮಗನು ಹತನಾದನೆಂಬ ಅಳಲಿಂದ ಉರಿದುಬಿದ್ದ ರಾವಣನು ಹಾಗೆಯೇ ಚಿಂತಿಸಿ, 'ಸೀತೆ

ಸಮೀಕ್ಷ್ಯ ರಾವಣೋ ಬುದ್ಧ್ಯಾ ವೈದೇಹ್ಯಾ ರೋಚಯದ್ವಧಮ್ ।
ತಸ್ಯ ಪ್ರಕೃತ್ಯಾ ರಕ್ತೇ ಚ ರಕ್ತೇ ಕ್ರೋಧಾಗ್ನಿನಾಪಿ ಚ ॥ ೨೧

ರಾವಣಸ್ಯ ಮಹಾಘೋರೇ ದೀಪ್ತೇ ನೇತ್ರೇ ಬಭೂವತುಃ ।
ಘೋರಂ ಪ್ರಕೃತ್ಯಾ ರೂಪಂ ತತ್ತಸ್ಯ ಕ್ರೋಧಾಗ್ನಿಮೂರ್ಛಿತಮ್ ॥

ಬಭೂವ ರೂಪಂ ಕ್ರುದ್ಧಸ್ಯ ರುದ್ರಸ್ಯೇವ ದುರಾಸದಮ್ ।
ತಸ್ಯ ಕ್ರುದ್ಧಸ್ಯ ನೇತ್ರಾಭ್ಯಾಂ ಪ್ರಾಪತನ್ನಸ್ರಬಿಂದವಃ ॥ ೨೩

ದೀಪ್ತಾಭ್ಯಾಮಿವ ದೀಪಾಭ್ಯಾಂ ಸಾರ್ಚಿಷಃ ಸ್ನೇಹಬಿಂದವಃ ।
ದಂತಾನ್ ವಿದಶತಸ್ತಸ್ಯ ಶ್ರೂಯತೇ ದಶನಸ್ವನಃ ॥ ೨೪

ಯಂತ್ರಸ್ಯಾವೇಷ್ಟ್ಯಮಾನಸ್ಯ ಮಹತೋ ದಾನವೈರಿವ ।
ಕಾಲಾಗ್ನಿರಿವ ಸಂಕ್ರುದ್ಧೋ ಯಾಂ ಯಾಂ ದಿಶಮವೈಕ್ಷತ ॥ ೨೫

ತಸ್ಯಾಂ ತಸ್ಯಾಂ ಭಯತ್ರಸ್ತಾ ರಾಕ್ಷಸಾಃ ಸಂವಿಲಿಲ್ಯಿರೇ ।
ತಮಂತಕಮಿವ ಕ್ರುದ್ಧಂ ಚರಾಚರಚಿಖಾದಿಷುಮ್ ॥ ೨೬

---

ಯನ್ನು ಕೊಂದುಬಿಡಬೇಕು' ಎಂದು ನಿಶ್ಚಯಿಸಿದನು! ಸಹಜವಾಗಿಯೇ ಕೆಂಪಗಿದ್ದ ಅವನ ಕೆಂಗಣ್ಣುಗಳು ಕ್ರೋಧಾಗ್ನಿಯಿಂದ ಉರಿದು ಮತ್ತಷ್ಟು ಕೆಂಪಾಗಿ ಘೋರವಾದವು (೨೦-೨೧). ಸಹಜವಾಗಿಯೇ ಘೋರವಾಗಿದ್ದ ರಾವಣನ ರೂಪವು ಸಿಟ್ಟಿನ ಭರದಿಂದ ಉರಿದೆದ್ದಾಗ, ಸಂಕ್ರುದ್ಧನಾದ ರುದ್ರನ ರೂಪದಂತೆ ಅತಿಭೀಷಣವಾಯಿತು. ಉರಿಯುವ ದೀಪಗಳಿಂದ ಎಣ್ಣೆಯ ಹನಿಗಳು ಛಟಛಟನೆ ಸಿಡಿಯುವಂತೆ ಅವನ ಕಣ್ಣುಗಳಿಂದ ಕ್ರೋಧಾಶ್ರುಬಿಂದುಗಳು ಸಿಡಿದವು! (೨೨-೨೩). ರಾವಣನು ರೋಷಾವಿಷ್ಟನಾಗಿ ಹಲ್ಲುಗಳನ್ನು ಕಟಕಟನೆ ಕಡಿಯಲು, ಆ ಶಬ್ದವು ದಾನವರಂತಹ ಬಲಶಾಲಿಗಳು ದೊಡ್ಡಗಾಣವನ್ನಾಡಿಸಿದಾಗ ಉಂಟಾಗುವ ಕರಕರ ಶಬ್ದದಂತೆ ಕೇಳಿಸಿತು! ಕಾಲಾಗ್ನಿಯಂತೆ ಕ್ರೋಧೋದ್ರಿಕ್ತನಾದ ಆ ರಾಕ್ಷಸೇಶ್ವರನು ಯಾವ ಯಾವ ದಿಕ್ಕಿಗೆ ತಿರುಗಿ ನೋಡಿದನೋ, ಆ ದಿಕ್ಕಿನಲ್ಲಿದ್ದ ರಾಕ್ಷಸ ಭಟರು ಅಲ್ಲಲ್ಲಿಯೇ ಅಂಜಿಕೆಯಿಂದ ಅವಿತುಕೊಂಡರು! (೨೪-೨೫). ಚರಾಚರ ಪ್ರಪಂಚವನ್ನೇ ನುಂಗಿ ನೊಣೆಯಲು ಉದ್ಯುಕ್ತನಾದ ಕಾಲ

ವೀಕ್ಷಮಾಣಂ ದಿಶಃ ಸರ್ವಾ ರಾಕ್ಷಸಾ ನೋಪಚಕ್ರಮುಃ ।
ತತಃ ಪರಮಸಂಕ್ರುದ್ಧೋ ರಾವಣೋ ರಾಕ್ಷಸಾಧಿಪಃ ॥ ೨೭

ಅಬ್ರವೀದ್ರಕ್ಷಸಾಂ ಮಧ್ಯೇ ಸಂಸ್ತಂಭಯಿಷುರಾಹವೇ ।
ಮಯಾ ವರ್ಷಸಹಸ್ರಾಣಿ ಚರಿತ್ವಾ ದುಶ್ಚರಂ ತಪಃ ॥ ೨೮

ತೇಷು ತೇಷ್ವವಕಾಶೇಷು ಸ್ವಯಂಭೂಃ ಪರಿತೋಷಿತಃ ।
ತಸ್ಯೈವ ತಪಸೋ ವ್ಯುಷ್ಟ್ಯಾ ಪ್ರಸಾದಾಚ್ಚ ಸ್ವಯಂಭುವಃ ॥ ೨೯

ನಾಸುರೇಭ್ಯೋ ನ ದೇವೇಭ್ಯೋ ಭಯಂ ಮಮ ಕದಾಚನ ।
ಕವಚಂ ಬ್ರಹ್ಮದತ್ತಂ ಮೇ ಯದಾದಿತ್ಯಸಮಪ್ರಭಮ್ ॥ ೩೦

ದೇವಾಸುರವಿಮರ್ದೇಷು ನ ಭಿನ್ನಂ ವಜ್ರಶಕ್ತಿಭಿಃ ।
ತೇನ ಮಾಮದ್ಯ ಸಂಯುಕ್ತಂ ರಥಸ್ಥಮಿಹ ಸಂಯುಗೇ ॥ ೩೧

ಪ್ರತೀಯಾತ್ ಕೋಽದ್ಯ ಮಾಮಾಜೌ ಸಾಕ್ಷಾದಪಿ ಪುರಂದರಃ ।
ಯತ್ತದಾಭಿಪ್ರಸನ್ನೇನ ಸಶರಂ ಕಾರ್ಮುಕಂ ಮಹತ್ ॥ ೩೨

---

ಮೃತ್ಯುವಿನಂತೆ ಕೆರಳಿ ಸುತ್ತಲೂ ನೋಡುತ್ತಿದ್ದ ರಾವಣನ ಹತ್ತಿರ ಬರಲು ಯಾವ ರಾಕ್ಷಸರಿಗೂ ಧೈರ್ಯವಾಗಲಿಲ್ಲ. ಯಾರೂ ಸಮೀಪಿಸಲಿಲ್ಲ (೨೬-೨೭). ಸಿಟ್ಟಿನಿಂದ ಸಿಡಿದೆದ್ದ ಆ ರಾಕ್ಷಸಾಧಿಪನು ರಾಕ್ಷಸಯೋಧರನ್ನು ಮತ್ತೆ ಹುರಿದುಂಬಿಸಿ ರಣರಂಗಕ್ಕೆ ಕಳಿಸುವುದಕ್ಕಾಗಿ ಹೀಗೆಂದನು: "ಎಲೈ ಯೋಧರೆ, ಹತ್ತುಸಾವಿರ ವರ್ಷಗಳಕಾಲ ನಾನು ವಿಭಿನ್ನ ಸ್ಥಳಗಳಲ್ಲಿ ಕಠಿನವಾದ ತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಮೆಚ್ಚಿಸಿದ್ದೇನೆ! (೨೮). ತಪಃಸಮೃದ್ಧಿಯಿಂದಲೂ ಬ್ರಹ್ಮನ ಅನುಗ್ರಹದಿಂದಲೂ ನನಗೆ ಯಾರ ಭಯವೂ ಇಲ್ಲ. ಅಸುರರಿಂದಲೂ ದೇವತೆಗಳಿಂದಲೂ ನನಗೆ ಯಾವ ಅಂಜಿಕೆಯೂ ಇಲ್ಲ. ಸೂರ್ಯನಂತೆ ವಿಭ್ರಾಜಿಸುವ ಬ್ರಹ್ಮದತ್ತವಾದ ದಿವ್ಯಕವಚವು ನನ್ನಲ್ಲಿದೆ (೨೯-೩೦). ದೇವಾಸುರರೊಡನೆ ಹೋರಾಡಿದಾಗ ವಜ್ರದ ಬಡಿತಕ್ಕೂ ಶಕ್ತಿಗಳ ಜಡಿತಕ್ಕೂ ಆ ಕವಚವು ಜಗ್ಗಲಿಲ್ಲ! ಈಗ ಆ ಕವಚವನ್ನು ತೊಟ್ಟು ರಥಾರೂಢನಾಗಿ ನಾನು ಯುದ್ಧರಂಗಕ್ಕಿಳಿದರೆ, ಯಾವನು ಈಗ ಯುದ್ಧದಲ್ಲಿ ನನ್ನನ್ನು ಎದುರಿಸಿಯಾನು?* ಸಾಕ್ಷಾತ್

---

* ಮೂಲದ ಶ್ಲೋಕದಲ್ಲಿ 'ಅದ್ಯ, ಮಾಂ, ಅಜೌ' ಎಂಬಿವು ಪುನರುಕ್ತವಾಗಿವೆ. ಈ ಪುನರುಕ್ತಿಯು ರಾವಣನ ರೋಷಾವೇಶವನ್ನು ವ್ಯಂಜಿಸುವುದರಿಂದ ದೋಷವಲ್ಲ. ಇದು ಕಾವ್ಯಗುಣ.

ದೇವಾಸುರವಿಮರ್ದೇಷು ಮಮ ದತ್ತಂ ಸ್ವಯಂಭುವಾ ।
ಅದ್ಯ ತೂರ್ಯಶತೈರ್ಭೀಮಂ ಧನುರುತ್ಥಾಪ್ಯತಾಂ ಮಮ ॥ ೩೩

ರಾಮಲಕ್ಷ್ಮಣಯೋರೇವ ವಧಾಯ ಪರಮಾಹವೇ ।
ಸ ಪುತ್ರವಧಸಂತಪ್ತಃ ಶೂರಃ ಕ್ರೋಧವಶಂ ಗತಃ ॥ ೩೪

ಸಮೀಕ್ಷ್ಯ ರಾವಣೋ ಬುದ್ಧ್ಯಾ ಸೀತಾಂ ಹಂತುಂ ವ್ಯವಸ್ಯತ ।
ಪ್ರತ್ಯವೇಕ್ಷ್ಯ ತು ತಾಮ್ರಾಕ್ಷಃ ಸುಘೋರೋ ಘೋರದರ್ಶನಃ ॥ ೩೫

ದೀನೋ ದೀನಸ್ವರಾನ್ ಸರ್ವಾಂಸ್ತಾನುವಾಚ ನಿಶಾಚರಾನ್ ।
ಮಾಯಯಾ ಮಮ ವತ್ಸೇನ ವಂಚನಾರ್ಥಂ ವನೌಕಸಾಮ್ ॥ ೩೬

ಕಿಂಚಿದೇವ ಹತಂ ತತ್ರ ಸೀತೇಯಮಿತಿ ದರ್ಶಿತಮ್ ।
ತದಿದಂ ತಥ್ಯಮೇವಾಹಂ ಕರಿಷ್ಯೇ ಪ್ರಿಯಮಾತ್ಮನಃ ॥ ೩೭

---

ದೇವೇಂದ್ರನಿಗೂ ಸಹ ಸಾಧ್ಯವಿಲ್ಲ (೩೧-೩೨). ದೇವಾಸುರರೊಡನೆ ಸಂಭವಿಸಿದ ಕದನಸಮಯದಲ್ಲಿ ಬ್ರಹ್ಮದೇವನು ಶರಸಹಿತವಾದ ಯಾವ ಮಹಾಧನುಸ್ಸನ್ನು ನನಗೆ ಅನುಗ್ರಹಿಸಿಕೊಟ್ಟಿದ್ದನೋ, ಎಲೈ ರಾಕ್ಷಸಭಟರೆ, ಅದನ್ನು ಈಗ ಹೊರಡಿಸಿರಿ! ಆ ಭೀಮಕಾರ್ಮುಕವನ್ನು ಮಂಗಳವಾದ್ಯ ಘೋಷಗಳೊಡನೆ ತಂದಿರಿಸಿರಿ. ಘನಘೋರಸಂಗ್ರಾಮದಲ್ಲಿ ರಾಮಲಕ್ಷ್ಮಣರನ್ನು ವಧಿಸುವುದಕ್ಕಾಗಿಯೇ ಅದು ಉಪಯುಕ್ತವಾಗಲಿ!" ಎಂದು ಆರ್ಭಟಿಸಿದನು (೩೩). ಪುತ್ರವಧೆಯಿಂದ ಸಂತಪ್ತನಾಗಿ ರೊಚ್ಚಿಗೆದ್ದ ಆ ರಾವಣನು ಸೀತೆಯನ್ನು ಕೊಲ್ಲಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿದನು. ಕ್ರೋಧತಾಮ್ರಾಕ್ಷನಾದ ಆ ಘೋರರಾಕ್ಷಸೇಂದ್ರನು ಈ ರೀತಿಯಲ್ಲಿ ಕ್ರೂರ ನಿರ್ಧಾರವನ್ನು ಕೈಗೊಂಡನು (೩೪-೩೫). (ಇಂದ್ರಜಿದ್ವಧೆಯಿಂದ ಖಿನ್ನರಾಗಿ) ದೈನ್ಯಸ್ವರದಿಂದ ಮಾತಾಡುತ್ತಿದ್ದ ತನ್ನ ಸಚಿವರನ್ನು ನೋಡಿ ರಾವಣನು ವಿಷಣ್ಣನಾಗಿ "ಎಲೈ ಸಚಿವರೆ, ನನ್ನ ಮಗನು ಕಪಿಗಳನ್ನು ವಂಚಿಸುವುದಕ್ಕಾಗಿ ಮಾಯೆಯಿಂದ ಏನನ್ನೋ ಕೊಂದಂತೆ ಮಾಡಿ 'ಇವಳೇ ಸೀತೆ' ಎಂದು ತೋರಿಸಿದನು. ಅದನ್ನೀಗ ಸತ್ಯವನ್ನಾಗಿಯೇ ಮಾಡುವೆನು!

ವೈದೇಹೀಂ ನಾಶಯಿಷ್ಯಾಮಿ ಕ್ಷತ್ರಬಂಧುಮನುವ್ರತಾಮ್ ।
ಇತ್ಯೇವಮುಕ್ತ್ವಾ ಸಚಿವಾನ್ ಖಡ್ಗಮಾಶು ಪರಾಮೃಶತ್ ॥ ೩೮

ಉದ್ಧೃತ್ಯ ಗುಣಸಂಪನ್ನಂ ವಿಮಲಾಂಬರವರ್ಚಸಮ್ ।
ನಿಷ್ಪಪಾತ ಸ ವೇಗೇನ ಸಭಾರ್ಯಃ ಸಚಿವೈರ್ವೃತಃ ॥ ೩೯

ರಾವಣಃ ಪುತ್ರಶೋಕೇನ ಭೃಶಮಾಕುಲಚೇತನಃ ।
ಸಂಕ್ರುದ್ಧಃ ಖಡ್ಗಮಾದಾಯ ಸಹಸಾ ಯತ್ರ ಮೈಥಿಲೀ ॥ ೪೦

ವ್ರಜಂತಂ ರಾಕ್ಷಸಂ ಪ್ರೇಕ್ಷ್ಯ ಸಿಂಹನಾದಂ ಪ್ರಚುಕ್ರುಶುಃ ।
ಊಚುಶ್ಚಾನ್ಯೋನ್ಯಮಾಶ್ಲಿಷ್ಯ ಸಂಕ್ರುದ್ಧಂ ಪ್ರೇಕ್ಷ್ಯ ರಾಕ್ಷಸಾಃ ॥

ಅದ್ಯೈನಂ ತಾವುಭೌ ದೃಷ್ಟ್ವಾ ಭ್ರಾತರೌ ಪ್ರವ್ಯಥಿಷ್ಯತಃ ।
ಲೋಕಪಾಲಾ ಹಿ ಚತ್ವಾರಃ ಕ್ರುದ್ಧೇನಾನೇನ ನಿರ್ಜಿತಾಃ ॥ ೪೨

ಬಹವಃ ಶತ್ರವಶ್ಚಾಪಿ ಸಂಯುಗೇಷು ನಿಪಾತಿತಾಃ ।
ತ್ರಿಷು ಲೋಕೇಷು ರತ್ನಾನಿ ಭುಂಕ್ತೇ ಚಾಹೃತ್ಯ ರಾವಣಃ ॥ ೪೩

---

ಅದೇ ನನಗೆ ಪ್ರಿಯವಾದುದು! (೩೬-೩೭). ಆ ಕ್ಷತ್ರಿಯ ನೀಚನನ್ನೇ ನಂಬಿದ ಸೀತೆಯನ್ನು ಕೊಂದುಹಾಕುವೆನು!" ಎಂದು ಹೇಳಿ ಖಡ್ಗವನ್ನು ಸೆಳೆದನು. ನಿರ್ಮಲಾಕಾಶದಂತೆ ನೀಲವೂ ನಿಶಿತವೂ ಆದ ಖಡ್ಗವನ್ನು ಹೊರಸೆಳೆದು ಆ ರಾವಣನು ರಭಸದಿಂದ ಅಶೋಕವನಕ್ಕೆ ನಡೆದನು. ಅವನ ಮಡದಿಯರೂ ಸಚಿವರೂ ಆತನನ್ನು ಹಿಂಬಾಲಿಸಿ ಹೋದರು (೩೮-೩೯). ಪುತ್ರಶೋಕದಿಂದ ರಾವಣನು ಅತ್ಯಂತವ್ಯಾಕುಲಚಿತ್ತನಾಗಿ ಸಿಟ್ಟಿನ ಆವೇಶದಲ್ಲಿ ಖಡ್ಗವನ್ನು ಹಿರಿದು ಮೈಥಿಲಿಯಿದ್ದ ಸ್ಥಳಕ್ಕೆ ಬೇಗಬೇಗನೆ ಹೋದನು. ಈ ರೀತಿಯಲ್ಲಿ ರಾವಣನು ಸಿಟ್ಟಿನಿಂದ ಅಶೋಕವನಕ್ಕೆ ಧಾವಿಸುವುದನ್ನು ಕಂಡು ಹಿಂಬಾಲಿಸಿ ಹೋದ ರಾಕ್ಷಸರು ಸಂತೋಷದಿಂದ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡು ಕೂಗಾಡಿದರು! (೪೦-೪೧). "ಆಹಾ! ಇಂದು ನಮ್ಮ ಮಹಾರಾಜನನ್ನು ಕಂಡಮೇಲೆ ಆ ಅಣ್ಣತಮ್ಮಂದಿರಿಬ್ಬರೂ ದುಃಖಿಸಬೇಕಾಗುವುದು! ನಮ್ಮ ರಾಕ್ಷಸೇಂದ್ರನು ನಾಲ್ವರು ದಿಕ್ಪಾಲರನ್ನು–ಇಂದ್ರ ಯಮ ವರುಣ ಕುಬೇರರನ್ನು–ಗೆದ್ದವನಲ್ಲವೆ! ಲೆಕ್ಕವಿಲ್ಲದಷ್ಟು ಶತ್ರುಗಳನ್ನು ಸಂಗ್ರಾಮದಲ್ಲಿ ಧ್ವಂಸಮಾಡಿದ್ದಾನೆ. ಮೂರುಲೋಕಗಳಲ್ಲಿರುವ ಸರ್ವ

ವಿಕ್ರಮೋ ಚ ಬಲೇ ಚೈವ ನಾಸ್ತ್ಯಸ್ಯ ಸದೃಶೋ ಭುವಿ ।
ತೇಷಾಂ ಸಂಜಲ್ಪಮಾನಾನಾಮಶೋಕವನಿಕಾಂ ಗತಾಮ್ ॥ ೪೪

ಅಭಿದುದ್ರಾವ ವೈದೇಹೀಂ ರಾವಣಃ ಕ್ರೋಧಮೂರ್ಛಿತಃ ।
ವಾರ್ಯಮಾಣಃ ಸುಸಂಕ್ರುದ್ಧಃ ಸುಹೃದ್ಭಿರ್ಹಿತಬುದ್ಧಿಭಿಃ ॥ ೪೫

ಅಭ್ಯಧಾವತ ಸಂಕ್ರುದ್ಧಃ ಖೇ ಗ್ರಹೋ ರೋಹಿಣೀಮಿವ ।
ಮೈಥಿಲೀ ರಕ್ಷ್ಯಮಾಣಾ ತು ರಾಕ್ಷಸೀಭಿರನಿಂದಿತಾ ॥ ೪೬

ದದರ್ಶ ರಾಕ್ಷಸಂ ಕ್ರುದ್ಧಂ ನಿಸ್ತ್ರಿಂಶವರಧಾರಿಣಮ್ ।
ತಂ ನಿಶಮ್ಯ ಸನಿಸ್ತ್ರಿಂಶಂ ವ್ಯಥಿತಾ ಜನಕಾತ್ಮಜಾ ॥ ೪೭

ನಿವಾರ್ಯಮಾಣಂ ಬಹುಶಃ ಸುಹೃದ್ಭಿರನಿವರ್ತಿನಮ್ ।
ಸೀತಾ ದುಃಖಸಮಾವಿಷ್ಟಾ ವಿಲಪಂತೀದಮಬ್ರವೀತ್ ॥ ೪೮

ಯಥಾಯಂ ಮಾಮಭಿಕ್ರುದ್ಧಃ ಸಮಭಿದ್ರವತಿ ಸ್ವಯಮ್ ।
ವಧಿಷ್ಯತಿ ಸನಾಥಾಂ ಮಾಮನಾಥಾಮಿವ ದುರ್ಮತಿಃ ॥ ೪೯

---

ಶ್ರೇಷ್ಠವಸ್ತುಗಳನ್ನು ತಂದು ಭೋಗಿಸುತ್ತಿದ್ದಾನೆ (೪೨-೪೩). ದೇಹಬಲದಲ್ಲಾಗಲಿ ಅಸ್ತ್ರಬಲದಲ್ಲಾಗಲಿ ಈತನಿಗೆ ಎಣೆಯಾದವನು ಜಗತ್ತಿನಲ್ಲಿ ಇನ್ನೊಬ್ಬನಿಲ್ಲ!" ಎಂದು ಅವರು ಮಾತಾಡಿಕೊಳ್ಳುತ್ತಿರುವಾಗಲೇ ರಾವಣನು ವೈದೇಹಿಯಿದ್ದ ಅಶೋಕವನಕ್ಕೆ ಧಾವಿಸಿದನು. ಅವನಿಗೆ ಹಿತವನ್ನು ಬಯಸುವ ಆಪ್ತಜನರು, ಸೀತೆಯನ್ನು ಕೊಲ್ಲುವುದು ಬೇಡಬೇಡವೆಂದು ಹೇಳುತ್ತಿದ್ದರೂ ಕೇಳದೆ ಕ್ರೋಧಾಂಧನಾದ ರಾವಣನು, ಗಗನದಲ್ಲಿ ಕ್ರೂರವಾದ ಗ್ರಹವು ರೋಹಿಣಿಯ ಕಡೆಗೆ ಧಾವಿಸುವಂತೆ ನುಗ್ಗಿಹೋದನು (೪೪-೪೫). ಯಾವ ತಪ್ಪನ್ನೂ ಮಾಡದೆ ರಾಕ್ಷಸಿಯರ ಕಾವಲಲ್ಲಿದ್ದ ಮೈಥಿಲಿಯು, ಕತ್ತಿಯನ್ನು ಝಳಪಿಸುತ್ತ ಕ್ರೋಧದಿಂದ ಧಾವಿಸಿಬರುತ್ತಿದ್ದ ರಾವಣನನ್ನು ಕಂಡಳು. ರಾವಣನು ಖಡ್ಗಧಾರಿಯಾಗಿರುವುದನ್ನೂ ಆಪ್ತಜನರು ತಡೆಯುತ್ತಿದ್ದರೂ ಅವರನ್ನು ತಳ್ಳಿಕೊಂಡು ಅವನು ನುಗ್ಗಿಬರುವುದನ್ನೂ ಕಂಡು ಜಾನಕಿಯು ಗಾಬರಿಯಾದಳು. ರಾವಣನ ಉದ್ದೇಶವೇನಿರಬಹುದೆಂಬುದನ್ನು ಊಹಿಸಿ, ಅವಳು ದುಃಖಾರ್ತಳಾಗಿ ವಿಲಪಿಸತೊಡಗಿದಳು (೪೬-೪೮): "ಆ ದುಷ್ಟನು ಸಿಟ್ಟಿನ ರಭಸದಿಂದ ನುಗ್ಗಿ

ಬಹುಶಶ್ಚೋದಯಾಮಾಸ ಭರ್ತಾರಂ ಮಾಮನುವ್ರತಾಮ್ ।
ಭಾರ್ಯಾ ಭವ ರಮಸ್ವೇತಿ ಪ್ರತ್ಯಾಖ್ಯಾತೋ ಧ್ರುವಂ ಮಯಾ ॥

ಸೋಽಯಂ ಮಮಾನುಪಸ್ಥಾನೇ ವ್ಯಕ್ತಂ ನೈರಾಶ್ಯಮಾಗತಃ ।
ಕ್ರೋಧಮೋಹಸಮಾವಿಷ್ಟೋ ನಿಹಂತುಂ ಮಾಂ ಸಮುದ್ಯತಃ ॥ ೫೧

ಅಥವಾ ತೌ ನರವ್ಯಾಘ್ರೌ ಭ್ರಾತರೌ ರಾಮಲಕ್ಷ್ಮಣೌ ।
ಮನ್ನಿಮಿತ್ತಮನಾರ್ಯೇಣ ಸಮರೇಽದ್ಯ ನಿಪಾತಿತೌ ॥ ೫೨

ಅಹೋ ಧಿಙ್ಮನ್ನಿಮಿತ್ತೋಽಯಂ ವಿನಾಶೋ ರಾಜಪುತ್ರಯೋಃ ।
ಅಥವಾ ಪುತ್ರಶೋಕೇನ ಅಹತ್ವಾ ರಾಮಲಕ್ಷ್ಮಣೌ ॥ ೫೩

ವಿಧಮಿಷ್ಯತಿ ಮಾಂ ರೌದ್ರೋ ರಾಕ್ಷಸಃ ಪಾಪನಿಶ್ಚಯಃ ।
ಹನೂಮತೋಽಪಿ ಯದ್ವಾಕ್ಯಂ ನ ಕೃತಂ ಕ್ಷುದ್ರಯಾ ಮಯಾ ॥ ೫೪

ಯದ್ಯಹಂ ತಸ್ಯ ಪೃಷ್ಠೇನ ತದಾ ಯಾಯಾಮನಿಂದಿತಾ ।
ನಾದ್ಯೈವಮನುಶೋಚೇಯಂ ಭರ್ತುರಂಕಗತಾ ಸತೀ ॥ ೫೫

---

ಬರುವುದನ್ನು ನೋಡಿದರೆ, ನನ್ನನ್ನು ಅವನು ವಧಿಸುವನೆಂದು ತೋರುತ್ತದೆ! ನನ್ನ ನಾಥನು ಇಷ್ಟು ಹತ್ತಿರದಲ್ಲಿದ್ದರೂ ಅನಾಥೆಯಂತೆ ನಾನು ಹತಳಾಗುವೆನು (೪೯). ನನ್ನ ಪತಿಯನ್ನೇ ದೃಢವಾಗಿ ನಂಬಿರುವ ನನಗೆ ಈ ರಾವಣನು 'ನನ್ನ ಮಡದಿಯಾಗು, ಉಲ್ಲಾಸದಿಂದ ನಲಿಯುತ್ತಿರು!' ಎಂದು ಎಷ್ಟುಸಲ ಹೇಳಲಿಲ್ಲ? ನಾನಂತೂ ಇವನನ್ನು ಧಿಕ್ಕರಿಸಿಬಿಟ್ಟಿದ್ದೇನೆ (೫೦). ನಾನು ಈತನ ಕೋರಿಕೆಗೆ ಒಪ್ಪಲಿಲ್ಲವಾದ್ದರಿಂದ ಈತನಿಗೆ ಪೂರ್ಣ ನಿರಾಸೆಯಾಗಿದೆ. ಕ್ರೋಧಮೋಹಗಳಿಂದ ಆವಿಷ್ಟನಾಗಿ ಈ ರಾವಣನು ನನ್ನನ್ನು ಕೊಲ್ಲಲು ಬರುತ್ತಿದ್ದಾನೆ. ಅಥವಾ ಈ ಅನಾರ್ಯನು ಪುರುಷೋತ್ತಮರಾದ ಶ್ರೀರಾಮಲಕ್ಷ್ಮಣರನ್ನು ಯುದ್ಧದಲ್ಲಿ ಸಂಹರಿಸಿರಬಹುದೆ? (೫೧-೫೨). ಅಯ್ಯೋ! ನನ್ನ ಬಾಳಿಗೆ ಧಿಕ್ಕಾರ! ನನಗೋಸ್ಕರ ಆ ರಾಜಪುತ್ರರು ಹತರಾಗಬೇಕಾಯಿತೆ? ಇಲ್ಲದಿದ್ದರೆ, ತನ್ನ ಮಗನು ಹತನಾದನೆಂಬ ಶೋಕಾವೇಶದಲ್ಲಿ ನನ್ನನ್ನು ಕೊಲ್ಲಬೇಕೆಂದು ಕ್ರೂರ ರಾಕ್ಷಸನು ಬರುತ್ತಿರಬಹುದೆ? ಶ್ರೀರಾಮಲಕ್ಷ್ಮಣರನ್ನು ಎದುರಿಸುವ ಸಾಮರ್ಥ್ಯವಿಲ್ಲದೆ ಈ ಪಾಪಿಯು ನನ್ನನ್ನು ಸಂಹರಿಸುವನು! (೫೩-೫೪). ಅಯ್ಯೋ, ಅವಿವೇಕಿಯಾದ ನಾನು ಹನುಮಂತನ ಮಾತಿನಂತೆಯೂ ನಡೆಯ

ಮನ್ಯೇ ತು ಹೃದಯಂ ತಸ್ಯಾಃ ಕೌಸಲ್ಯಾಯಾಃ ಫಲಿಷ್ಯತಿ ।
ಏಕಪುತ್ರಾ ಯದಾ ಪುತ್ರಂ ವಿನಷ್ಟಂ ಶ್ರೋಷ್ಯತೇ ಯುಧಿ ॥ ೫೬
ಸಾ ಹಿ ಜನ್ಮ ಚ ಬಾಲ್ಯಂ ಚ ಯೌವನಂ ಚ ಮಹಾತ್ಮನಃ ।
ಧರ್ಮಕಾರ್ಯಾನುರೂಪಂ ಚ ರುದತೀ ಸಂಸ್ಮರಿಷ್ಯತಿ ॥ ೫೭
ನಿರಾಶಾ ನಿಹತೇ ಪುತ್ರೇ ದತ್ತ್ವಾ ಶ್ರಾದ್ಧಮಚೇತನಾ ।
ಅಗ್ನಿಮಾರೋಕ್ಷ್ಯತೇ ನೂನಮಪೋ ವಾಪಿ ಪ್ರವೇಕ್ಷ್ಯತಿ ॥ ೫೮
ಧಿಗಸ್ತು ಕುಬ್ಜಾಮಸತೀಂ ಮಂಥರಾಂ ಪಾಪನಿಶ್ಚಯಾಮ್ ।
ಯನ್ನಿಮಿತ್ತಮಿದಂ ದುಃಖಂ ಕೌಸಲ್ಯಾ ಪ್ರತಿಪತ್ಸ್ಯತೇ ॥ ೫೯
ಇತ್ಯೇವಂ ಮೈಥಿಲೀಂ ದೃಷ್ಟ್ವಾ ವಿಲಪಂತೀಂ ತಪಸ್ವಿನೀಮ್ ।
ರೋಹಿಣೀಮಿವ ಚಂದ್ರೇಣ ವಿನಾ ಗ್ರಹವಶಂ ಗತಾಮ್ ॥ ೬೦
ಏತಸ್ಮಿನ್ನಂತರೇ ತಸ್ಯ ಅಮಾತ್ಯೋ ಬುದ್ಧಿಮಾನ್ ಶುಚಿಃ ।
ಸುಪಾರ್ಶ್ವೋ ನಾಮ ಮೇಧಾವೀ ರಾಕ್ಷಸೋ ರಾಕ್ಷಸೇಶ್ವರಮ್ ॥

---

ಲಿಲ್ಲ. ಅವನ ಹೆಗಲಮೇಲೆ ಕುಳಿತು ನನ್ನ ಪತಿಯು ಬಳಿಗೆ ಹೋಗಿಬಿಟ್ಟಿದ್ದರೆ, ಈ ಕಷ್ಟ ಬರುತ್ತಿರಲಿಲ್ಲ. ಯಾರೂ ನನ್ನನ್ನು ನಿಂದಿಸುತ್ತಿರಲಿಲ್ಲ. ನನ್ನ ಪತಿಯು ಸನ್ನಿಧಿಯಲ್ಲಿ ಇರುತ್ತಿದ್ದೆ. ಈ ದಿನ ಹೀಗೆ ಶೋಕಿಸಬೇಕಾಗಿರಲಿಲ್ಲ (೫೫). ಇನ್ನು ಕೌಸಲ್ಯಾದೇವಿಯ ಗತಿಯೇನು? ಇರುವ ಒಬ್ಬನೇ ಮಗನು ಯುದ್ಧದಲ್ಲಿ ಹತನಾದನೆಂಬುದನ್ನು ಕೇಳಿದಾಗ, ಅಕಟ, ಅವಳ ಎದೆಯೇ ಒಡೆದುಹೋದೀತು! (೫೬). ಮಹಾತ್ಮನಾದ ತನ್ನ ಮಗನ ಜನ್ಮ, ಬಾಲ್ಯ, ಯೌವನ, ಅವನ ಧರ್ಮನಿಷ್ಠೆ–ಸಕಲವನ್ನೂ ನನ್ನ ಅತ್ತೆ ನೆನೆನೆನೆಸಿಕೊಂಡು ಅಳುವಳು (೫೭). ಪುತ್ರನು ಹತನಾದರೆ ಕೌಸಲ್ಯೆಗೆ ನಿರಾಸೆ ಕವಿಯುವುದು. ತನ್ನ ಪುತ್ರನಿಗೆ ಮುಂದಿನ ಕ್ರಿಯೆಯನ್ನು ನಡೆಸಿ, ಬಾಳುವ ಚೈತನ್ಯವಿಲ್ಲದೆ ಅವಳು ಅಗ್ನಿಕುಂಡದಲ್ಲೋ ನೀರಿನಲ್ಲೋ ಬಿದ್ದು ನಿಶ್ಚಯವಾಗಿಯೂ ಪ್ರಾಣವನ್ನು ಬಿಡುವಳು (೫೮). ಪಾಪಿಯಾದ ಆ ಮಂಥರೆಗೆ ಧಿಕ್ಕಾರ! ಆ ಕೆಟ್ಟ ಗೂನಿಯನ್ನು ಈಗ ನಿಂದಿಸಬೇಕಾಗಿದೆ. ಅವಳಿಂದಲೇ ಕೌಸಲ್ಯೆಗೆ ಇಂತಹ ಸಂಕಟವು ಬಂದೊದಗುವುದು” ಎಂದು ಹಲುಬಿದಳು. ಚಂದ್ರಮನಿಲ್ಲದಾಗ ನೀಚಗ್ರಹದ ಕೈಗೆ ಸಿಕ್ಕಿದ ರೋಹಿಣಿ

ನಿವಾರ್ಯಮಾಣಃ ಸಚಿವೈರಿದಂ ವಚನಮಬ್ರವೀತ್ ।
ಕಥಂ ನಾಮ ದಶಗ್ರೀವ ಸಾಕ್ಷಾದ್ವೈಶ್ರವಣಾನುಜ ॥ ೬೨

ಹಂತುಮಿಚ್ಛಸಿ ವೈದೇಹೀಂ ಕ್ರೋಧಾದ್ಧರ್ಮಮಪಾಸ್ಯ ಹಿ ।
ವೇದವಿದ್ಯಾವ್ರತಸ್ನಾತಃ ಸ್ವಕರ್ಮನಿರತಃ ಸದಾ ॥ ೬೩

ಸ್ತ್ರಿಯಾಃ ಕಸ್ಮಾದ್ವಧಂ ವೀರ ಮನ್ಯಸೇ ರಾಕ್ಷಸೇಶ್ವರ ।
ಮೈಥಿಲೀಂ ರೂಪಸಂಪನ್ನಾಂ ಪ್ರತ್ಯವೇಕ್ಷಸ್ವ ಪಾರ್ಥಿವ ॥ ೬೪

ತ್ವಮೇವ ತು ಸಹಾಸ್ಮಾಭೀ ರಾಘವೇ ಕ್ರೋಧಮುತ್ಸೃಜ ।
ಅಭ್ಯುತ್ಥಾನಂ ತ್ವಮದ್ಯೈವ ಕೃಷ್ಣಪಕ್ಷಚತುರ್ದಶೀಮ್ ॥ ೬೫

ಕೃತ್ವಾ ನಿರ್ಯಾಹ್ಯಮಾವಾಸ್ಯಾಂ ವಿಜಯಾಯ ಬಲೈರ್ವೃತಃ ।
ಶೂರೋ ಧೀಮಾನ್ ರಥೀ ಖಡ್ಗೀ ರಥಪ್ರವರಮಾಸ್ಥಿತಃ ॥ ೬೬

ಹತ್ವಾ ದಾಶರಥಿಂ ರಾಮಂ ಭವಾನ್ ಪ್ರಾಪ್ಸ್ಯತಿ ಮೈಥಿಲೀಮ್ ॥

---

ಯಂತೆ ಅನಾಥೆಯಾಗಿ ವಿಲಪಿಸುತ್ತಿದ್ದ ಮೈಥಿಲಿಯನ್ನು ಸುಪಾರ್ಶ್ವನೆಂಬ ರಾವಣನ ಅಮಾತ್ಯನು ನೋಡಿ ಮರುಗಿದನು (೫೯-೬೦). ಆತನು ಬುದ್ಧಿವಂತನೂ ಶುಚಿವ್ರತನೂ ವಿವೇಕಿಯೂ ಆಗಿದ್ದನು. ಇತರ ಸಚಿವರು ತಡೆದರೂ ಲೆಕ್ಕಿಸದೆ ಆ ಸುಪಾರ್ಶ್ವನು ಮುಂದೆ ಬಂದು ರಾವಣನನ್ನು ಕುರಿತು "ಮಹಾರಾಜ–ದಶಗ್ರೀವ, ಸಾಕ್ಷಾತ್ ವೈಶ್ರವಣನಿಗೆ ತಮ್ಮನಾದ ನೀನು ಮಹಾಕುಲಪ್ರಸೂತನಾಗಿದ್ದೀಯೆ (೬೧-೬೨). ನೀನು ಧರ್ಮವನ್ನು ಮೂಲೆಗೊತ್ತಿ ಬರಿಯ ಸಿಟ್ಟಿಗೆ ವಶನಾಗಿ, ಈ ವೈದೇಹಿಯನ್ನು ಕೊಲ್ಲಲು ಹೊರಡಬಹುದೆ? ವೇದಗಳನ್ನು ಕಲಿತು ವಿದ್ಯಾವಂತನಾಗಿ ವ್ರತಸ್ನಾನವನ್ನು ಮಾಡಿದ್ದೀಯೆ. ಗೃಹಸ್ಥನಾಗಿ ಸ್ವಧರ್ಮದಲ್ಲಿ ನಿರತನಾಗಿದ್ದೀಯೆ (೬೩). ರಾಕ್ಷಸೇಶ್ವರ, ಶೂರಾಗ್ರೇಸರನಾದ ನಿನಗೆ ಒಬ್ಬ ಹೆಂಗಸಿನ ಕೊಲೆಮಾಡುವ ಬುದ್ಧಿ ಹೇಗೆ ಬಂದಿತು? ಸೀತೆಯು ರೂಪಸಂಪನ್ನೆಯೆಂಬುದನ್ನು ಗಮನಿಸಿ ಅವಳನ್ನು ಸರಿಯಾಗಿ ನೋಡಿಕೊ. ನಿನ್ನ ಸಿಟ್ಟನ್ನು ಪೂರ್ತಿಯಾಗಿ ರಾಮನಲ್ಲಿ ತೋರಿಸು. ನಾವೂ ನಿನ್ನ ಸಹಾಯಕ್ಕೆ ಬರುತ್ತೇವೆ. ಈ ದಿನ ಕೃಷ್ಣಪಕ್ಷ ಚತುರ್ದಶಿಯಾಗಿದೆ. ಇಂದೇ ಯುದ್ಧಕ್ಕೆ ಬೇಕಾದ ಸಕಲಸಿದ್ಧತೆಗಳನ್ನೂ ಮಾಡು (೬೪-೬೫). ನಾಳೆ ಅಮಾವಾಸ್ಯೆಯ ದಿನ ಸಿಖಿಲಬಲ

ಸ ತದ್ದುರಾತ್ಮಾ ಸುಹೃದಾ ನಿವೇದಿತಂ
ವಚಃ ಸುಧರ್ಮ್ಯಂ ಪ್ರತಿಗೃಹ್ಯ ರಾವಣಃ ।
ಗೃಹಂ ಜಗಾಮಾಥ ತತಶ್ಚ ವೀರ್ಯವಾನ್
ಪುನಃ ಸಭಾಂ ಚ ಪ್ರಯಯೌ ಸುಹೃದ್ವೃತಃ ॥ ೬೭

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಿನವತಿತಮಃ ಸರ್ಗಃ



ಸಮೇತನಾಗಿ ದಿಗ್ವಿಜಯಕ್ಕಾಗಿ ಹೊರಡು! ನೀನು ಶೂರನೂ ಧೀಮಂತನೂ ಮಹಾರಥನೂ ಆಗಿದ್ದೀಯೆ. ಉತ್ತಮರಥವನ್ನೇರಿ ಈ ಖಡ್ಗವನ್ನು ಹಿಡಿದು ರಣರಂಗಕ್ಕೆ ಹೋಗು! ದಶರಥಾತ್ಮಜನಾದ ರಾಮನನ್ನು ಸಂಹರಿಸಿ, ಅನಂತರ ಈ ಮೈಥಿಲಿಯನ್ನು ಪಡೆಯಬಹುದು" ಎಂದು ನಿವೇದಿಸಿದನು (೬೬). ಹೀಗೆ ಸೌಹಾರ್ದದಿಂದ ಸುಪಾರ್ಶ್ವನು ಧರ್ಮಯುಕ್ತವಾದ ಮಾತನ್ನು ಅರಿಕೆಮಾಡಲು, ದುರಾತ್ಮನಾದ ರಾವಣನು ಅದಕ್ಕೆ ಸಮ್ಮತಿಸಿ ಅರಮನೆಗೆ ಹಿಂದಿರುಗಿದನು. ಆ ವೀರನು ಮತ್ತೆ ತನ್ನ ಸಚಿವರೊಡನೆ ರಾಜಸಭೆಯನ್ನು ಪ್ರವೇಶಿಸಿದನು (೬೭).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತುಮೂರನೆಯ ಸರ್ಗ



## ಚತುರ್ನವತಿತಮಃ ಸರ್ಗಃ

### ಗಾಂಧರ್ವಾಸ್ತ್ರಮೋಹನಮ್

ಸ ಪ್ರವಿಶ್ಯ ಸಭಾಂ ರಾಜಾ ದೀನಃ ಪರಮದುಃಖಿತಃ ।
ನಿಷಸಾದಾಸನೇ ಮುಖ್ಯೇ ಸಿಂಹಃ ಕ್ರುದ್ಧ ಇವ ಶ್ವಸನ್ ॥ ೧

ಅಬ್ರವೀಚ್ಚ ಸ ತಾನ್ ಸರ್ವಾನ್ ಬಲಮುಖ್ಯಾನ್ ಮಹಾಬಲಃ ।
ರಾವಣಃ ಪ್ರಾಂಜಲಿರ್ವಾಕ್ಯಂ ಪುತ್ರವ್ಯಸನಕರ್ಶಿತಃ ॥ ೨

ಸರ್ವೇ ಭವಂತಃ ಸರ್ವೇಣ ಹಸ್ತ್ಯಶ್ವೇನ ಸಮಾವೃತಾಃ ।
ನಿರ್ಯಾಂತು ರಥಸಂಘೈಶ್ಚ ಪಾದಾತೈಶ್ಚೋಪಶೋಭಿತಾಃ ॥ ೩

ಏಕಂ ರಾಮಂ ಪರಿಕ್ಷಿಪ್ಯ ಸಮರೇ ಹಂತುಮರ್ಹಥ ।
ವರ್ಷಂತಃ ಶರವರ್ಷೇಣ ಪ್ರಾವೃಟ್ಕಾಲ ಇವಾಂಬುದಾಃ ॥ ೪

ಅಥವಾಹಂ ಶರೈಸ್ತೀಕ್ಷ್ಣೈರ್ಭಿನ್ನಗಾತ್ರಂ ಮಹಾರಣೇ ।
ಭವದ್ಭಿಃ ಶ್ವೋ ನಿಹಂತಾಸ್ಮಿ ರಾಮಂ ಲೋಕಸ್ಯ ಪಶ್ಯತಃ ॥ ೫

### ಸರ್ಗ ೯೪

ರಾವಣನ ಆದೇಶದಂತೆ ಬಲಾಧ್ಯಕ್ಷರು ಸೇನಾಸಮೇತರಾಗಿ ಕಪಿಸೇನೆಯೊಡನೆ ಯುದ್ಧಮಾಡುವುದು. ಶ್ರೀರಾಮನ ಅತ್ಯದ್ಭುತವಾದ ಯುದ್ಧಸಾಮರ್ಥ್ಯ ಗಂಧರ್ವಾಸ್ತ್ರಪ್ರಯೋಗ.

ರಾವಣನು ರಾಜಸಭೆಯನ್ನು ಪ್ರವೇಶಿಸಿ ದೈನ್ಯದಿಂದ ಸಿಂಹಾಸನದಲ್ಲಿ ಕುಳಿತನು. ತಡೆಯಲಾರದ ದುಃಖದಿಂದ ಅವನು ವ್ಯಾಕುಲನಾಗಿದ್ದನು. ಕೆರಳಿದ ಸಿಂಹದಂತೆ ನಿಡುಸುಯ್ಯುತ್ತಿದ್ದನು. ಮಗನ ಮರಣದಿಂದಾದ ವ್ಯಸನವು ಅವನನ್ನು ಕಿತ್ತೆಳೆಯುತ್ತಿತ್ತು (೧). ಸಭೆಯಲ್ಲಿ ನೆರೆದಿದ್ದ ಸಮಸ್ತ ಬಲಾಧ್ಯಕ್ಷರನ್ನೂ ಕುರಿತು, ರಾವಣನು **ಕೈಮುಗಿದುಕೊಂಡು** "ಮಿತ್ರರೆ, ನೀವೆಲ್ಲರೂ ಚತುರಂಗಬಲ ಸಮೇತರಾಗಿ ರಣಯಾತ್ರೆಗೆ ಹೊರಡಿರಿ. ಎಲ್ಲರೂ ಒಟ್ಟುಗೂಡಿ ರಾಮನೊಬ್ಬನನ್ನೇ ಸುತ್ತುಗಟ್ಟಿ ಅವನನ್ನು ಕೊಲ್ಲಲು ಪ್ರಯತ್ನಿಸಿರಿ. ಮಳೆಗಾಲದ ಕಾರ್ಮೋಡಗಳಂತೆ ಶರವರ್ಷಗಳನ್ನು ಸುರಿಸಿರಿ (೨-೪) ಒಂದುವೇಳೆ ಅವನು ಸಾಯದಿದ್ದರೂ ನೀವು ಅವನ ಗಾತ್ರವನ್ನು

ಇತ್ಯೇತದ್ರಾಕ್ಷಸೇಂದ್ರಸ್ಯ ವಾಕ್ಯಮಾದಾಯ ರಾಕ್ಷಸಾಃ ।
ನಿರ್ಯಯುಸ್ತೇ ರಥೈಃ ಶೀಘ್ರೈರ್ನಾನಾನೀಕೈಃ ಸುಸಂವೃತಾಃ ॥ ೬

ಪರಿಘಾನ್ ಪಟ್ಟಿಸಾಂಶ್ಚೈವ ಶರಖಡ್ಗಪರಶ್ವಧಾನ್ ।
ಶರೀರಾಂತಕರಾನ್ ಸರ್ವೇ ಚಿಕ್ಷಿಪುರ್ವಾನರಾನ್ ಪ್ರತಿ ॥ ೭

ವಾನರಾಶ್ಚ ದ್ರುಮಾನ್ ಶೈಲಾನ್ ರಾಕ್ಷಸಾನ್ ಪ್ರತಿ ಚಿಕ್ಷಿಪುಃ ।
ಸ ಸಂಗ್ರಾಮೋ ಮಹಾನ್ ಭೀಮಃ ಸೂರ್ಯಸ್ಯೋದಯನಂ ಪ್ರತಿ॥

ರಕ್ಷಸಾಂ ವಾನರಾಣಾಂ ಚ ತುಮುಲಃ ಸಮಪದ್ಯತ ।
ತೇ ಗದಾಭಿರ್ವಿಚಿತ್ರಾಭಿಃ ಪ್ರಾಸೈಃ ಖಡ್ಗೈಃ ಪರಶ್ವಧೈಃ ॥ ೯

ಅನ್ಯೋನ್ಯಂ ಸಮರೇ ಜಘ್ನುಸ್ತದಾ ವಾನರರಾಕ್ಷಸಾಃ ।
ಏವಂ ಪ್ರವೃತ್ತೇ ಸಂಗ್ರಾಮೇ ಹ್ಯದ್ಭುತಂ ಸುಮಹದ್ರಜಃ ॥ ೧೦

---

ಕೆತ್ತಿ ಕೊರೆದಿರುತ್ತೀರಿ. ನಾಳೆ ನಾನು ಹೋಗಿ ಘೋರಸಂಗ್ರಾಮವನ್ನು ಹೂಡಿ ತೀಕ್ಷ್ಣಾಸ್ತ್ರಗಳಿಂದ ರಾಮನನ್ನು ಕೊಲ್ಲುವೆನು. ಆ ಪರಿಯನ್ನಾದರೂ ಜಗತ್ತು ನೋಡಲಿ!" ಎಂದು ಹೇಳಿದನು (೫). ಆಗ ರಾಕ್ಷಸರಾಜನ ಆದೇಶದಂತೆ ರಾಕ್ಷಸಬಲಾಧ್ಯಕ್ಷರು ಸನ್ನದ್ಧರಾಗಿ ಶೀಘ್ರಗಾಮಿಗಳಾದ ರಥಗಳನ್ನೇರಿ, ತಮ್ಮ ತಮ್ಮ ವಿವಿಧ ಸೇನೆಗಳೊಡನೆ ರಣರಂಗಕ್ಕೆ ಸಾಗಿದರು. ಪರಿಘ, ಪಟ್ಟಿಸ, ಶರ, ಖಡ್ಗ, ಪರಶು ಮುಂತಾದ ಮಾರಕಾಯುಧಗಳನ್ನು ವಾನರರಮೇಲೆ ಬೀಸುತ್ತ ಹೋರಾಡಿದರು (೬-೭). ವಾನರಯೋಧರು ವೃಕ್ಷಗಳನ್ನೂ ಶೈಲಗಳನ್ನೂ ಎಸೆಯುತ್ತ ಕಾದಾಡಿದರು. ರಾಕ್ಷಸರಿಗೂ ವಾನರರಿಗೂ ಸೂರ್ಯೋದಯಕಾಲದಲ್ಲಿ* ಆರಂಭವಾದ ದಾರುಣ ಯುದ್ಧವು ಅತಿಘೋರವಾಗಿ ಬೆಳೆಯಿತು. ವಿಚಿತ್ರಾಕೃತಿಯ ಗದೆ, ಪ್ರಾಸ, ಖಡ್ಗ, ಪರಶುಗಳಿಂದ ರಾಕ್ಷಸರು ವಾನರರನ್ನು ಬಡಿದರು. ವಾನರರು ರಾಕ್ಷಸರ ಕೈಯಿಂದ ಅವುಗಳನ್ನು ಕಿತ್ತುಕೊಂಡು ಅವರನ್ನು ಸದೆದರು (೮-೯) ಎಲ್ಲೆಲ್ಲಿಯೂ ಧೂಳಿನ ದೊಡ್ಡ ರಾಶಿ ಮೇಲೆದ್ದು ಕಪಿರಾಕ್ಷಸರ

---

* ಚತುರ್ದಶಿಯ ಪ್ರಾತಃಕಾಲದಲ್ಲಿ ಈ ಯುದ್ಧವು ಆರಬ್ಧವಾಯಿತು. ಸೂರ್ಯೋದಯಕ್ಕೂ ಮೊದಲು ರಾವಣನು ಸೀತೆಯನ್ನು ಸಂಹರಿಸುವುದಕ್ಕಾಗಿ ಅಶೋಕವನಕ್ಕೆ ಹೋಗಿದ್ದನೆಂದು ತಿಳಿಯಬೇಕು.

ರಕ್ಷಸಾಂ ವಾನರಾಣಾಂ ಚ ಶಾಂತಂ ಶೋಣಿತವಿಸ್ರವೈಃ ।
ಮಾತಂಗರಥಕೂಲಾಶ್ಚ ವಾಜಿಮತ್ಸ್ಯಾ ಧ್ವಜದ್ರುಮಾಃ ॥　　೧೧

ಶರೀರಸಂಘಾಟವಹಾಃ ಪ್ರಸಸ್ರುಃ ಶೋಣಿತಾಪಗಾಃ ।
ತತಸ್ತೇ ವಾನರಾಃ ಸರ್ವೇ ಶೋಣಿತೌಘಪರಿಪ್ಲುತಾಃ ॥　　೧೨

ಧ್ವಜವರ್ಮರಥಾನಶ್ವಾನ್ನಾನಾಪ್ರಹರಣಾನಿ ಚ ।
ಆಪ್ಲುತ್ಯಾಪ್ಲುತ್ಯ ಸಮರೇ ರಾಕ್ಷಸಾನಾಂ ಬಭಂಜಿರೇ ॥　　೧೩

ಕೇಶಾನ್ ಕರ್ಣಲಲಾಟಾಂಶ್ಚ ನಾಸಿಕಾಶ್ಚ ಪ್ಲವಂಗಮಾಃ ।
ರಕ್ಷಸಾಂ ದಶನೈಸ್ತೀಕ್ಷ್ಣೈರ್ನಖೈಶ್ಚಾಪಿ ನ್ಯಕರ್ತಯನ್ ॥　　೧೪

ಏಕೈಕಂ ರಾಕ್ಷಸಂ ಸಂಖ್ಯೇ ಶತಂ ವಾನರಪುಂಗವಾಃ ।
ಅಭ್ಯಧಾವಂತ ಫಲಿನಂ ವೃಕ್ಷಂ ಶಕುನಯೋ ಯಥಾ ॥　　೧೫

ತಥಾ ಗದಾಭಿರ್ಗುರ್ವೀಭಿಃ ಪ್ರಾಸೈಃ ಖಡ್ಗೈಃ ಪರಶ್ವಧೈಃ ।
ನಿಜಘ್ನುರ್ವಾನರಾನ್ ಘೋರಾನ್ ರಾಕ್ಷಸಾಃ ಪರ್ವತೋಪಮಾಃ ॥

---

ರಕ್ತದ ಕೋಡಿಯಿಂದ ಹಾಗೆಯೇ ಶಾಂತವಾಗುತ್ತಿತ್ತು ! ರಕ್ತದ ಹೊಳೆಗಳು ಹರಿದವು. ಆ ಹೊಳೆಗಳಿಗೆ ಆನೆಗಳೂ ರಥಗಳೂ ದಡಗಳಾದವು ! ಕುದುರೆಗಳು ಮೀನುಗಳಾದವು ! ಧ್ವಜಗಳು ತೀರವೃಕ್ಷಗಳಾದವು ! (೧೦-೧೧). ತೇಲಿಹೋಗುವ ಯೋಧರ ದೇಹಗಳು ತೆಪ್ಪಗಳಾದವು ! ಸಮಸ್ತ ಕಪಿಯೋಧರೂ ರಕ್ತದಲ್ಲಿ ನೆನೆದು, ಮೇಲಕ್ಕೆ ಹಾರಿಹಾರಿ ರಾಕ್ಷಸರ ಧ್ವಜ, ಕವಚ, ರಥ, ಅಶ್ವ ಮತ್ತು ವಿವಿಧಾಯುಧಗಳನ್ನು ಮುರಿದು ಹರಿದು ಉರುಳಿಸಿ ಕೊಂದು ಭಗ್ನಗೊಳಿಸುತ್ತಿದ್ದರು (೧೨-೧೩). ಆ ಕಪಿಯೋಧರು ತೀಕ್ಷ್ಣವಾದ ತಮ್ಮ ಕೋರೆಹಲ್ಲುಗಳಿಂದಲೂ ನಖಗಳಿಂದಲೂ ಕಚ್ಚುತ್ತ ಪರಚುತ್ತ, ರಾಕ್ಷಸರ ಕೂದಲನ್ನು ಕಿತ್ತು ಕಿವಿಗಳನ್ನು ಹರಿದು ಹಣೆಗಳನ್ನು ಗಾಯಗೊಳಿಸಿ ಮೂಗುಗಳನ್ನು ತರಿದರು ! ಹಣ್ಣುಗಳಿರುವ ಮರವನ್ನು ಹಕ್ಕಿಗಳು ಮುತ್ತುವಂತೆ, ಒಬ್ಬೊಬ್ಬ ರಾಕ್ಷಸನನ್ನೂ ಬಹುಮಂದಿ ವಾನರರು ಮುತ್ತಿ ಹಿರಿದು ಹೀಚಿದರು (೧೪-೧೫). ಆಗ ಪರ್ವತಾಕಾರರಾದ ರಾಕ್ಷಸರು ದೊಡ್ಡ ದೊಡ್ಡ ಗದೆಗಳಿಂದಲೂ, ಪ್ರಾಸ ಖಡ್ಗ ಪರಶು

ರಾಕ್ಷಸೈರ್ಯುಧ್ಯಮಾನಾನಾಂ ವಾನರಾಣಾಂ ಮಹಾಚಮೂಃ ।
ಶರಣ್ಯಂ ಶರಣಂ ಯಾತಾ ರಾಮಂ ದಶರಥಾತ್ಮಜಮ್ ॥ ೧೭

ತತೋ ರಾಮೋ ಮಹಾತೇಜಾ ಧನುರಾದಾಯ ವೀರ್ಯವಾನ್ ।
ಪ್ರವಿಶ್ಯ ರಾಕ್ಷಸಂ ಸೈನ್ಯಂ ಶರವರ್ಷಂ ವವರ್ಷ ಹ ॥ ೧೮

ಪ್ರವಿಷ್ಟಂ ತು ತದಾ ರಾಮಂ ಮೇಘಾಃ ಸೂರ್ಯಮಿವಾಂಬರೇ ।
ನಾಭಿಜಗ್ಮುರ್ಮಹಾಘೋರಂ ನಿರ್ದಹಂತಂ ಶರಾಗ್ನಿನಾ ॥ ೧೯

ಕೃತಾನ್ಯೇವ ಸುಘೋರಾಣಿ ರಾಮೇಣ ರಜನೀಚರಾಃ ।
ರಣೇ ರಾಮಸ್ಯ ದದೃಶುಃ ಕರ್ಮಾಣ್ಯಸುಕರಾಣಿ ಚ ॥ ೨೦

ಚಾಲಯಂತಂ ಮಹಾನೀಕಂ ವಿಧಮಂತಂ ಮಹಾರಥಾನ್ ।
ದದೃಶುಸ್ತೇ ನ ವೈ ರಾಮಂ ವಾತಂ ವನಗತಂ ಯಥಾ ॥ ೨೧

---

ಗಳಿಂದಲೂ ಘೋರವಾನರರನ್ನು ಹೊಡೆದು ಬಡಿದು ವಿಧ್ವಂಸಗೊಳಿಸಿದರು (ರಾಕ್ಷಸರ ಕೈಮೇಲಾಯಿತು). ರಾಕ್ಷಸರೊಡನೆ ಹೊಡೆದಾಡುತ್ತಿದ್ದ ವಾನರ ಸೇನೆಯು ದಶರಥಾತ್ಮಜನಾದ ಶ್ರೀರಾಮನೇ ಶರಣೆಂದು ಅವನ ಮರೆ ಹೊಕ್ಕಿತು (೧೬-೧೭). ಅನಂತರ ವೀರಾಗ್ರಣಿಯೂ ಮಹಾತೇಜಸ್ವಿಯೂ ಆದ ಶ್ರೀರಾಮನು ತನ್ನ ಕೋದಂಡವನ್ನು ಹಿಡಿದು ರಾಕ್ಷಸಸೇನೆ ಯನ್ನಾಕ್ರಮಿಸಿ ಶರವರ್ಷವನ್ನು ಸುರಿಸಲಾರಂಭಿಸಿದನು (೧೮). ಖರಕಿರಣ ನಾದ ಸೂರ್ಯನು ಅಂಬರದಲ್ಲಿ ನುಗ್ಗಿಬರುವಂತೆ ರಾಕ್ಷಸಸೇನೆಯಲ್ಲಿ ನುಗ್ಗಿ, ಬಾಣಾಗ್ನಿಯಿಂದ ರಾಕ್ಷಸಸೇನೆಯನ್ನು ಶ್ರೀರಾಮನು ಸುಟ್ಟುಹಾಕಲಾರಂಭಿ ಸಿದನು. ಮೇಘಪಂಕ್ತಿಯಂತಿದ್ದ ರಾಕ್ಷಸರಿಗೆ ಶ್ರೀರಾಮನೆಲ್ಲಿರುವನೆಂಬುದೇ ಗೋಚರಿಸಲಿಲ್ಲ (೧೯). ಅನ್ಯದುಷ್ಕರವಾದ ಶ್ರೀರಾಮನ ಅದ್ಭುತಕೃತ್ಯದ ದೃಶ್ಯಗಳು, ನಡೆದಮೇಲೆ ನಿಶಾಚರರಿಗೆ ಗೋಚರಿಸುತ್ತಿದ್ದವೇ ಹೊರತು ಅವು ಗಳನ್ನು ನಡೆಸುತ್ತಿರುವಾಗ ಗೋಚರಿಸಲಿಲ್ಲ (೨೦). ಮಹಾರಥರಾದ ನಿಶಾಚರರು ಉರುಳುರುಳಿ ಬಿದ್ದರು. ರಾಕ್ಷಸರ ಮಹಾಸೇನೆಯು ಅಲ್ಲೋಲ ಕಲ್ಲೋಲವಾಗಿ ತತ್ತರಿಸಿ ತೂಗಾಡಿತು. ಅದಕ್ಕೆ ಕಾರಣನಾದ ಶ್ರೀರಾಮನು ಸೇನಾಮಧ್ಯದಲ್ಲಿರುವನೆಂದು ರಾಕ್ಷಸರು ಊಹಿಸಿದರೇ ಹೊರತು ಅವನನ್ನು ಕಣ್ಣಿಂದ ನೋಡಲು ಸಾಧ್ಯವಾಗಲಿಲ್ಲ. ಮಹಾವೃಕ್ಷಗಳನ್ನುರುಳಿಸಿ ಅರಣ್ಯ

ಛಿನ್ನಂ ಭಿನ್ನಂ ಶರೈರ್ದಗ್ಧಂ ಪ್ರಭಗ್ನಂ ಶಸ್ತ್ರಪೀಡಿತಮ್ ।
ಬಲಂ ರಾಮೇಣ ದದೃಶುರ್ನ ರಾಮಂ ಶೀಘ್ರಕಾರಿಣಮ್ ॥ ೨೨

ಪ್ರಹರಂತಂ ಶರೀರೇಷು ನ ತೇ ಪಶ್ಯಂತಿ ರಾಘವಮ್ ।
ಇಂದ್ರಿಯಾರ್ಥೇಷು ತಿಷ್ಠಂತಂ ಭೂತಾತ್ಮಾನಮಿವ ಪ್ರಜಾಃ ॥ ೨೩

ಏಷ ಹಂತಿ ಗಜಾನೀಕಮೇಷ ಹಂತಿ ಮಹಾರಥಾನ್ ।
ಏಷ ಹಂತಿ ಶರೈಸ್ತೀಕ್ಷ್ಣೈಃ ಪದಾತೀನ್ ವಾಜಿಭಿಃ ಸಹ ॥ ೨೪

ಇತಿ ತೇ ರಾಕ್ಷಸಾಃ ಸರ್ವೇ ರಾಮಸ್ಯ ಸದೃಶಾನ್ ರಣೇ ।
ಅನ್ಯೋನ್ಯಂ ಕುಪಿತಾ ಜಘ್ನುಃ ಸಾದೃಶ್ಯಾದ್ರಾಘವಸ್ಯ ತೇ ॥ ೨೫

---

ವನ್ನೇ ಅಲ್ಲಾಡಿಸುವ ಬಿರುಗಾಳಿಯಂತೆ*, ಶ್ರೀರಾಮನು ರಾಕ್ಷಸಸೇನೆಯಲ್ಲಿ ನುಗ್ಗಿದನು (೨೧). ಶ್ರೀರಾಮನ ಕೂರ್ಗಣೆಗಳು ರಾಕ್ಷಸಯೋಧರನ್ನು ಕಡಿಕಡಿದು ಕೆಡಹಿದವು; ತರಿತರಿದು ತೂರಿದವು; ಸುಟ್ಟು ಸುಟ್ಟು ಉರುಬಿದವು; ಕೈಕಾಲುಗಳನ್ನು ಮುರಿಮುರಿದು ಉರುಳಿಸಿದವು. ಆ ಕೂರ್ಗಣೆಗಳು ರಾಕ್ಷಸರ ಎದೆಎದೆಗಳಲ್ಲಿ ನೆಟ್ಟವು. ಅವನ ಅಚ್ಚರಿಯ ಕೈಚಳಕವು ಕಾಣಿಸುತ್ತಿತ್ತೇ ಹೊರತು, ಶ್ರೀರಾಮನು ಎಲ್ಲಿರುವನೆಂಬುದು ರಾಕ್ಷಸರಿಗೆ ಗೋಚರಿಸುತ್ತಿರಲಿಲ್ಲ! (೨೨). ಇಂದ್ರಿಯಗಳಿಂದ ಶಬ್ದಾದಿ ವಿಷಯಗಳನ್ನು ಅನುಭವಿಸುತ್ತ ಶರೀರದಲ್ಲಿ ನೆಲೆಸಿದ್ದರೂ ಅಂತರ್ಯಾಮಿಯಾದ ಜೀವಾತ್ಮನನ್ನು ಜನರು ಕಾಣರಲ್ಲವೆ? ಹಾಗೆ ಶರಗಳಿಂದ ನಿರಂತರವಾಗಿ ರಾಕ್ಷಸರನ್ನು ಪ್ರಹರಿಸುತ್ತ ಸೇನಾಮಧ್ಯದಲ್ಲಿ ಸಂಚರಿಸುತ್ತಿದ್ದ ರಾಘವನನ್ನು ಜನರು ಕಾಣಲಾರದೆ ಹೋದರು (೨೩). "ಇದೋ, ಗಜಸೇನೆಯನ್ನು ಮರ್ದಿಸುತ್ತಿದ್ದಾನೆ! ಅದೋ, ಮಹಾರಥರನ್ನು ಕೊಚ್ಚಿ ಉರುಳಿಸುತ್ತಿದ್ದಾನೆ! ಇದೋ, ತೀಕ್ಷ್ಣಾಸ್ತ್ರಗಳಿಂದ ಪದಾತಿಗಳನ್ನು ಸದೆಯುತ್ತಿದ್ದಾನೆ! ಅದೋ, ಅಶ್ವಸೇನೆಯನ್ನು ಧ್ವಂಸಮಾಡುತ್ತಿದ್ದಾನೆ!" ಎಂದು ರಾಕ್ಷಸರಲ್ಲಿ ಕೋಲಾಹಲವೆದ್ದಿತು (೨೪). ಆ ಸೇನೆಯಲ್ಲಿ ಶ್ರೀರಾಮನ ಸಾದೃಶ್ಯವನ್ನು

---

* ಬಿರುಗಾಳಿ ಬೀಸುವುದೆಂದು ಊಹಿಸಬಹುದೇ ಹೊರತು, ಅದನ್ನು ಕಣ್ಣಿಂದ ನೋಡಲು ಸಾಧ್ಯವಿಲ್ಲ.

ನ ತೇ ದದೃಶಿರೇ ರಾಮಂ ದಹಂತಮರಿವಾಹಿನೀಮ್ ।
ಮೋಹಿತಾಃ ಪರಮಾಸ್ತ್ರೇಣ ಗಾಂಧರ್ವೇಣ ಮಹಾತ್ಮನಾ ॥ ೨೬

ತೇ ತು ರಾಮಸಹಸ್ರಾಣಿ ರಣೇ ಪಶ್ಯಂತಿ ರಾಕ್ಷಸಾಃ ।
ಪುನಃ ಪಶ್ಯಂತಿ ಕಾಕುತ್ಸ್ಥಮೇಕಮೇವ ಮಹಾಹವೇ ॥ ೨೭

ಭ್ರಮಂತೀಂ ಕಾಂಚನೀಂ ಕೋಟಿಂ ಕಾರ್ಮುಕಸ್ಯ ಮಹಾತ್ಮನಃ ।
ಅಲಾತಚಕ್ರಪ್ರತಿಮಾಂ ದದೃಶುಸ್ತೇ ನ ರಾಘವಮ್ ॥ ೨೮

ಶರೀರನಾಭಿ ಸತ್ತ್ವಾರ್ಚಿಃ ಶರಾರಂ ನೇಮಿಕಾರ್ಮುಕಮ್ ।
ಜ್ಯಾಘೋಷತಲನಿರ್ಘೋಷಂ ತೇಜೋಬುದ್ಧಿಗುಣಪ್ರಭಮ್ ॥ ೨೯

---

ಕಂಡು 'ಓ! ಅವನೇ ರಾಮ' ಎಂಬ ಭ್ರಮೆಯಿಂದ ಸಂಕ್ರುದ್ಧರಾದ ರಾಕ್ಷಸರು ರಾಕ್ಷಸಯೋಧರನ್ನೇ ಪ್ರಹರಿಸಿದರು. ಹೀಗೆ ಅವರು ತಮ್ಮನ್ನು ತಾವೇ ಸಂಹರಿಸುತ್ತಿದ್ದರು (೨೫). ಮಹಾತ್ಮನಾದ ಶ್ರೀರಾಮನು ಅದ್ಭುತವಾದ ಗಂಧರ್ವಾಸ್ತ್ರವನ್ನು ಪ್ರಯೋಗಿಸಿ, ಈ ಪ್ರಕಾರವಾಗಿ ವೈರಿವಾಹಿನಿಯನ್ನು ಹುರಿದು ಮುಕ್ಕಿ ಧೂಳೆಬ್ಬಿಸಿದನು. ಅವನ ಹಸ್ತಲಾಘವ ಶೀಘ್ರಾತಿಶಯಗಳಿಂದ ಸಮ್ಮುಗ್ಧರಾದ ರಾಕ್ಷಸರಿಗೆ ಕಾಕುತ್ಸ್ಥನು ಎಲ್ಲಿರುವನೆಂಬುದೇ ಗೋಚರಿಸಲಿಲ್ಲ (೨೬). 'ರಣರಂಗದಲ್ಲಿ ಸಾವಿರಾರು ರಾಮರು ಇರಬಹುದೆ!' ಎಂದು ರಾಕ್ಷಸರಿಗೆ ಅನಿಸುತ್ತಿತ್ತು. ಮತ್ತೆ 'ಇಲ್ಲ, ಇಲ್ಲ! ಒಬ್ಬನೇ ರಾಮನಿದ್ದಾನೆ!' ಎಂದು ತೋರುತ್ತಿತ್ತು (೨೭). ಆ ಮಹಾತ್ಮನು ಹಿಡಿದಿದ್ದ ಕೋದಂಡದ ಕಾಂಚನಮಯವಾದ ಅಗ್ರಭಾಗವು ಅಲಾತಚಕ್ರ*ದಂತೆ ಗಿರ್ರೆಂದು ಸುತ್ತುವುದು ರಾಕ್ಷಸರಿಗೆ ಕಾಣಿಸಿತೇ ಹೊರತು ರಾಘವನು ಗೋಚರಿಸಲಿಲ್ಲ! (೨೮). ಮಂಡಲೀಕೃತಕೋದಂಡನಾದ ರಾಘವನು ರಾಮಚಕ್ರವಾಗಿ ಗೋಚರಿಸಿದನು. ಸಂಗ್ರಾಮಭೂಮಿಯಲ್ಲಿ ರಾಕ್ಷಸರನ್ನು ಸದೆಬಡಿಯುತ್ತಿದ್ದ ಆ ಘೋರಚಕ್ರಕ್ಕೆ ರಾಘವನ

---

* ಬೆಂಕಿಯ ಕೊಳ್ಳಿಯನ್ನು ವೇಗದಿಂದ ತಿರುಗಿಸಿದರೆ, ಬೆಂಕಿಯು ಚಕ್ರದಂತೆ ಕಾಣಿಸುವುದು. ಅದು ಅಲಾತಚಕ್ರ.

ದಿವ್ಯಾಸ್ತ್ರಗುಣಪರ್ಯಂತಂ ನಿಘ್ನಂತಂ ಯುಧಿ ರಾಕ್ಷಸಾನ್ ।
ದದೃಶೂ ರಾಮಚಕ್ರಂ ತತ್ ಕಾಲಚಕ್ರಮಿವ ಪ್ರಜಾಃ ॥ ೩೦

ಅನೀಕಂ ದಶಸಾಹಸ್ರಂ ರಥಾನಾಂ ವಾತರಂಹಸಾಮ್ ।
ಅಷ್ಟಾದಶ ಸಹಸ್ರಾಣಿ ಕುಂಜರಾಣಾಂ ತರಸ್ವಿನಾಮ್ ॥ ೩೧

ಚತುರ್ದಶ ಸಹಸ್ರಾಣಿ ಸಾರೋಹಾಣಾಂ ಚ ವಾಜಿನಾಮ್ ।
ಪೂರ್ಣೇ ಶತಸಹಸ್ರೇ ದ್ವೇ ರಾಕ್ಷಸಾನಾಂ ಪದಾತಿನಾಮ್ ॥ ೩೨

ದಿವಸಸ್ಯಾಷ್ಟಮೇ ಭಾಗೇ ಶರೈರಗ್ನಿಶಿಖೋಪಮೈಃ ।
ಹತಾನ್ಯೇಕೇನ ರಾಮೇಣ ರಕ್ಷಸಾಂ ಕಾಮರೂಪಿಣಾಮ್ ॥ ೩೩

---

ಶರೀರವೇ ದೃಢವಾದ ನಾಭಿ.* ಬಲವೇ ಚಕ್ರದ ಜ್ವಾಲೆ. ಶರಗಳೇ ಅರಗಳು. ಧನುಸ್ಸೇ ನೇಮಿ. ಜ್ಯಾಘೋಷ ತಲಘೋಷಗಳೇ ಆರ್ಭಟ. ಶ್ರೀರಾಮನ ಬುದ್ಧಿ, ಪರಾಕ್ರಮ, ಶರೀರಕಾಂತಿಗಳೇ ರಾಮಚಕ್ರದ ಪ್ರಭೆ! ದಿವ್ಯಾಸ್ತ್ರ ವೈಭವವೇ ನಿಶಿತಧಾರೆ. ಸರ್ವಸಂಹಾರಕವಾದ ಕಾಲಚಕ್ರವೋ ಎಂಬಂತೆ ಆ ರಾಮಚಕ್ರವು ಜನರಿಗೆ ಗೋಚರಿಸಿತು! (೨೯-೩೦). ರಾಕ್ಷಸಸೈನ್ಯದಲ್ಲಿ ವಾಯುವೇಗದಿಂದ ಸಂಚರಿಸುತ್ತಿದ್ದ ಏಳು ಕೋಟಿ ಇಪ್ಪತ್ತೊಂಬತ್ತು ಲಕ್ಷ ರಥಗಳು ಮುರಿದುಬಿದ್ದವು! ಬಲಶಾಲಿಗಳಾದ ಹದಿಮೂರು ಕೋಟಿ ಹನ್ನೆರಡು ಲಕ್ಷ ಇಪ್ಪತ್ತು ಸಾವಿರ ಆನೆಗಳು ಹತವಾದವು! (೩೧). ರಾವುತರಿಂದ ಯುಕ್ತವಾದ ಹತ್ತು ಕೋಟಿ ಇಪ್ಪತ್ತು ಲಕ್ಷ ಅರುವತ್ತು ಸಾವಿರ ಅಶ್ವಗಳು ಸಂಹೃತವಾದವು! ಒಂದುನೂರ ನಲವತ್ತೈದು ಕೋಟಿ ಎಂಬತ್ತು ಲಕ್ಷ ರಾಕ್ಷಸಪದಾತಿಗಳು ವಿಧ್ವಸ್ತರಾದರು! (೩೨). ಒಬ್ಬನೇ ಒಬ್ಬ ಶ್ರೀರಾಮನು ದಿವಸದ ಎಂಟನೆಯ ಒಂದಂಶದ ಸಮಯದಲ್ಲಿ ಅಗ್ನಿಜ್ವಾಲೆ ಗಳಂತಿದ್ದ ತನ್ನ ಕ್ರೂರಾಸ್ತ್ರಗಳಿಂದ ಕಾಮರೂಪಿಗಳಾದ ರಾಕ್ಷಸರ ಸೇನೆ

---

* ಧನುರ್ಧಾರಿಯಾದ ಶ್ರೀರಾಮನನ್ನು ಘೋರಚಕ್ರವಾಗಿ ರೂಪಿಸಲಾಗಿದೆ. ನಾಭಿ = ಚಕ್ರದ ಮಧ್ಯಭಾಗ, ಗುಂಬ (Axle-Box). ಅರ = ಚಕ್ರದ ಸಲಾಕೆ, ಆರೆಕಾಲು. ನೇಮಿ = ಚಕ್ರದ ಸುತ್ತಲೂ ಇರುವ ಬಳೆ (Rim of the wheel). ತಲ = ಬಿಲ್ಲಿನ ಹೆದೆಯ ಪೆಟ್ಟು ತಾಗದಂತೆ ಮುಂಗೈಗೆ ಕಟ್ಟಿಕೊಂಡಿರುವ ರಕ್ಷಣಾ ಕವಚ.

ತೇ ಹತಾಶ್ವಾ ಹತರಥಾಃ ಶಾಂತಾ ವಿಮಥಿತಧ್ವಜಾಃ ।
ಅಭಿಪೇತುಃ ಪುರೀಂ ಲಂಕಾಂ ಹತಶೇಷಾ ನಿಶಾಚರಾಃ ॥ ೩೪

ಹತೈರ್ಗಜಪದಾತ್ಯಶ್ವೈಸ್ತದ್ಬಭೂವ ರಣಾಜಿರಮ್ ।
ಆಕ್ರೀಡಮಿವ ರುದ್ರಸ್ಯ ಕ್ರುದ್ಧಸ್ಯ ಸುಮಹಾತ್ಮನಃ ॥ ೩೫

ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಸಾಧು ಸಾಧ್ವಿತಿ ರಾಮಸ್ಯ ತತ್ ಕರ್ಮ ಸಮಪೂಜಯನ್ ॥ ೩೬

ಅಬ್ರವೀಚ್ಚ ತದಾ ರಾಮಃ ಸುಗ್ರೀವಂ ಪ್ರತ್ಯನಂತರಮ್ ।
ವಿಭೀಷಣಂ ಚ ಧರ್ಮಾತ್ಮಾ ಹನೂಮಂತಂ ಚ ವಾನರಮ್ ॥ ೩೭

ಜಾಂಬವಂತಂ ಹರಿಶ್ರೇಷ್ಠಂ ಮೈಂದಂ ದ್ವಿವಿದಮೇವ ಚ ।
ಏತದಸ್ತ್ರಬಲಂ ದಿವ್ಯಂ ಮಮ ವಾ ತ್ರ್ಯಂಬಕಸ್ಯ ವಾ ॥ ೩೮

---

ಯನ್ನು ಈ ಪ್ರಕಾರವಾಗಿ ವಿಧ್ವಂಸಗೊಳಿಸಿದನು ! * (೩೩). ಹೀಗೆ ಅಶ್ವಗಳು ಹತವಾಗಿ ರಥಗಳು ಮುರಿದು ಧ್ವಜಗಳು ವಿಧ್ವಸ್ತವಾಗಲು, ಹತಶೇಷರಾದ ನಿಶಾಚರರು ಯುದ್ಧವನ್ನು ನಿಲ್ಲಿಸಿ ಲಂಕಾನಗರಕ್ಕೆ ಓಡಿ ಹೋದರು. ಎಲ್ಲೆಲ್ಲಿಯೂ ಗಜಗಳೂ ಪದಾತಿಗಳೂ ಅಶ್ವಗಳೂ ಸತ್ತು ಚೆಲ್ಲಾಪಿಲ್ಲಿಯಾಗಿ ಹರಡಿರಲು, ಆ ರಣಾಂಗಣವು ಅದ್ಭುತ ಸಾಮರ್ಥ್ಯವುಳ್ಳ ಕ್ರುದ್ಧನಾದ ರುದ್ರನ ಸಂಹಾರಲೀಲಾವಿಹಾರಭೂಮಿಯಂತೆ ಕಂಗೊಳಿಸಿತು ! (೩೪-೩೫). ಆಗ ದೇವಗಂಧರ್ವರೂ ಸಿದ್ಧರೂ ಮಹರ್ಷಿಗಳೂ ಶ್ರೀರಾಮನ ಅಸಾಧಾರಣ ಪರಾಕ್ರಮ ಕೃತ್ಯವನ್ನು ಕಂಡು 'ಆಹಾ ! ಆಶ್ಚರ್ಯ ! ಅದ್ಭುತ !' ಎಂದು ಕೊಂಡಾಡಿದರು (೩೬). ಅನಂತರ ಸುಗ್ರೀವ, ವಿಭೀಷಣ, ಹನುಮಂತ, ಜಾಂಬವಂತ, ಮೈಂದ, ದ್ವಿವಿದ ಮೊದಲಾದ ನಾಯಕರು ರಾಘವನ ಬಳಿಗೆ ಬೆಕ್ಕಸಬೆರಗಾಗಿ ಬಂದು ನಿಂತರು. ಅವರನ್ನು ನೋಡಿ ಶ್ರೀರಾಮನು "ಮಿತ್ರರೆ, ದಿವ್ಯವಾದ ಈ ಅಸ್ತ್ರಪ್ರಯೋಗಬಲವು ನನಗೊಬ್ಬನಿಗುಂಟು, ಮುಕ್ಕಣ್ಣನಾದ

* ಅನುಬಂಧವನ್ನು ನೋಡಿ.

ನಿಹತ್ಯ ತಾಂ ರಾಕ್ಷಸವಾಹಿನೀಂ ತು
ರಾಮಸ್ತದಾ ಶಕ್ರಸಮೋ ಮಹಾತ್ಮಾ ।
ಅಸ್ತ್ರೇಷು ಶಸ್ತ್ರೇಷು ಜಿತಕ್ಲಮಶ್ಚ
ಸಂಸ್ತೂಯತೇ ದೇವಗಣೈಃ ಪ್ರಹೃಷ್ಟೈಃ ॥ ೩೯

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ನವತಿತಮಃ ಸರ್ಗಃ



ಪರಮೇಶ್ವರನೊಬ್ಬನಿಗುಂಟು!" ಎಂದನು (೩೭-೩೮). ಹೀಗೆ ಶಸ್ತ್ರಾಸ್ತ್ರಗಳನ್ನು ಶ್ರಮವಿಲ್ಲದೆ ಪ್ರಯೋಗಿಸಬಲ್ಲ ರಣಕೋವಿದನೂ ದೇವೇಂದ್ರಸಮಾನನೂ ಆದ ಶ್ರೀರಾಮನು ರಾಕ್ಷಸವಾಹಿನಿಯನ್ನು ಸಂಹರಿಸಲಾಗಿ, ದೇವತೆಗಳು ಹರ್ಷದಿಂದ ಆ ಮಹಾತ್ಮನನ್ನು ಸ್ತುತಿಸುತ್ತಿದ್ದರು (೩೯).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತುನಾಲ್ಕನೆಯ ಸರ್ಗ



## ಪಂಚನವತಿತಮಃ ಸರ್ಗಃ

### ರಾಕ್ಷಸೀವಿಲಾಪಃ

ತಾನಿ ತಾನಿ ಸಹಸ್ರಾಣಿ ಸಾರೋಹಾಣಾಂ ಚ ವಾಜಿನಾಮ್ ।
ರಥಾನಾಂ ತ್ವಗ್ನಿವರ್ಣಾನಾಂ ಸಧ್ವಜಾನಾಂ ಸಹಸ್ರಶಃ ॥ ೧

ರಾಕ್ಷಸಾನಾಂ ಸಹಸ್ರಾಣಿ ಗದಾಪರಿಘಯೋಧಿನಾಮ್ ।
ಕಾಂಚನಧ್ವಜಚಿತ್ರಾಣಾಂ ಶೂರಾಣಾಂ ಕಾಮರೂಪಿಣಾಮ್ ॥ ೨

ನಿಹತಾನಿ ಶರೈಸ್ತೀಕ್ಷ್ಣೈಸ್ತಪ್ತಕಾಂಚನಭೂಷಣೈಃ ।
ರಾವಣೇನ ಪ್ರಯುಕ್ತಾನಿ ರಾಮೇಣಾಕ್ಲಿಷ್ಟಕರ್ಮಣಾ ॥ ೩

ದೃಷ್ಟ್ವಾ ಶ್ರುತ್ವಾ ಚ ಸಂಭ್ರಾಂತಾ ಹತಶೇಷಾ ನಿಶಾಚರಾಃ ।
ರಾಕ್ಷಸ್ಯಶ್ಚ ಸಮಾಗಮ್ಯ ದೀನಾಶ್ಚಿಂತಾಪರಿಪ್ಲುತಾಃ ॥ ೪

### ಸರ್ಗ ೯೫

ಲಂಕೆಯಲ್ಲಿ ರಾಕ್ಷಸಸ್ತ್ರೀಯರ ವಿಲಾಪ. ಶೂರ್ಪಣಖಿಯನ್ನೂ
ರಾವಣನನ್ನೂ ಅವರು ನಿಂದಿಸುವುದು.

ಈ ರೀತಿಯಲ್ಲಿ, ರಾವುತರಿಂದ ಸಹಿತವಾದ ಅಶ್ವಗಳೂ ಧ್ವಜಯುಕ್ತವಾದ ಅಗ್ನಿವರ್ಣದ ರಥಗಳೂ, ಗದಾಪರಿಘಾದ್ಯಾಯುಧಗಳಿಂದ ಹೊಡೆದಾಡುತ್ತಿದ್ದ ರಾಕ್ಷಸಯೋಧರೂ, ಕಾಂಚನಧ್ವಜಗಳಿಂದ ಯುಕ್ತರಾಗಿ ಕಾಮರೂಪಿಗಳಾದ ಶೂರರಾಕ್ಷಸರೂ ಸಾವಿರಸಾವಿರಗಟ್ಟಲೆ ಹಿಂಡುಹಿಂಡಾಗಿ ಅಸಂಖ್ಯಸಂಖ್ಯೆಯಲ್ಲಿ ಶ್ರೀರಾಮನಿಂದ ವಿಧ್ವಸ್ತರಾದರು (೧-೨). ರಾವಣನು ಕಳಿಸಿದ್ದ ಆ ಮಹಾಸೈನ್ಯವನ್ನು ಸುವರ್ಣಭೂಷಿತ ನಿಶಿತಾಸ್ತ್ರಗಳಿಂದ ಶ್ರೀರಾಮನು ಶ್ರಮವಿಲ್ಲದೆಯೇ ವಿಧ್ವಂಸಗೊಳಿಸಿದನು. ಹತಶೇಷರಾದ ರಾಕ್ಷಸಯೋಧರು ಆ ವಿನಾಶಕೃತ್ಯವನ್ನು ಕಣ್ಣಾರೆ ನೋಡಿಬಂದಿದ್ದರು. ಲಂಕೆಯಲ್ಲಿದ್ದ ರಾಕ್ಷಸಸ್ತ್ರೀಯರೇ ಮೊದಲಾದವರು ಆ ಸುದ್ದಿಯನ್ನು ಕೇಳಿದರು. ರಾಕ್ಷಸಸ್ತ್ರೀಯರು ದೈನ್ಯದಿಂದ ಚಿಂತಾಕ್ರಾಂತರಾದರು (೩-೪).

ವಿಧವಾ ಹತಪುತ್ರಾಶ್ಚ ಕ್ರೋಶಂತ್ಯೋ ಹತಬಾಂಧವಾಃ ।
ರಾಕ್ಷಸ್ಯಃ ಸಹ ಸಂಗಮ್ಯ ದುಃಖಾರ್ತಾಃ ಪರ್ಯದೇವಯನ್ ॥ ೫

ಕಥಂ ಶೂರ್ಪಣಖಾ ವೃದ್ಧಾ ಕರಾಲಾ ನಿರ್ಣತೋದರೀ ।
ಆಸಸಾದ ವನೇ ರಾಮಂ ಕಂದರ್ಪಮಿವ ರೂಪಿಣಮ್ ॥ ೬

ಸುಕುಮಾರಂ ಮಹಾಸತ್ತ್ವಂ ಸರ್ವಭೂತಹಿತೇ ರತಮ್ ।
ತಂ ದೃಷ್ಟ್ವಾ ಲೋಕವಧ್ಯಾ ಸಾ ಹೀನರೂಪಾ ಪ್ರಕಾಮಿತಾ ॥ ೭

ಕಥಂ ಸರ್ವಗುಣೈರ್ಹೀನಾ ಗುಣವಂತಂ ಮಹೌಜಸಮ್ ।
ಸುಮುಖಂ ದುರ್ಮುಖೀ ರಾಮಂ ಕಾಮಯಾಮಾಸ ರಾಕ್ಷಸೀ ॥ ೮

ಜನಸ್ಯಾಸ್ಯಾಲ್ಪಭಾಗ್ಯತ್ವಾದ್ವಲಿನೀ ಶ್ವೇತಮೂರ್ಧಜಾ ।
ಅಕಾರ್ಯಮಪಹಾಸ್ಯಂ ಚ ಸರ್ವಲೋಕವಿಗರ್ಹಿತಮ್ ॥ ೯

---

ಗಂಡಂದಿರು ಹತರಾದ್ದರಿಂದ ಕೆಲವರು ವಿಧವೆಯರಾದರು. ಕೆಲವರು ಮಕ್ಕಳನ್ನು ಕಳೆದುಕೊಂಡರು. ಕೆಲವರ ಬಂಧುಗಳು ನಿರ್ನಾಮವಾಗಿದ್ದರು. ಆ ರಾಕ್ಷಸಿಯರೆಲ್ಲರೂ ಶೋಕಾರ್ತರಾಗಿ ಒಬ್ಬರನ್ನೊಬ್ಬರು ತಬ್ಬಿಕೊಂಡು ಅಳತೊಡಗಿದರು (೫): "(ಅಯ್ಯೊ, ಈ ಅನರ್ಥಗಳಿಗೆ ಶೂರ್ಪಣಖೆಯೇ ಮೂಲಕಾರಣ!). ದೊಡ್ಡಹೊಟ್ಟೆಯ ಆ ಮುದುಕಿಗೆ ಇದೆಲ್ಲವೂ ಏಕೆ ಬೇಕಾಗಿತ್ತು? ಕಂದರ್ಪನಂತೆ ರೂಪಶಾಲಿಯಾದ ರಾಮನನ್ನು ಆ ಕರಾಳಿ ಹೇಗೆ ಮೋಹಿಸಿರಬಹುದು! ವನದಲ್ಲಿ ಅವನ ಬಳಿಗೆ ಹೇಗೆ ಹೋಗಿರಬಹುದು! (೬). ಅವನಾದರೋ ಸುಕುಮಾರನೂ ಮಹಾಸತ್ತ್ವಶಾಲಿಯೂ ಆಗಿದ್ದಾನೆ. ಸರ್ವಲೋಕದ ಹಿತದಲ್ಲಿ ನಿರತನಾಗಿದ್ದಾನೆ. ಇವಳಾದರೋ ಸರ್ವನಿಂದ್ಯಳು; ಕುರೂಪಿ. ಇವಳು ರಾಮನನ್ನು ಹೇಗೆ ಕಾಮಿಸಿರಬಹುದು? ಒಂದಾನೊಂದು ಸದ್ಗುಣವೂ ಇವಳಲ್ಲಿಲ್ಲ! ಗುಣಾಢ್ಯನೂ ಮಹಾತೇಜಸ್ವಿಯೂ ಆದ ರಾಮನನ್ನು ಶೂರ್ಪಣಖೆಯು ಬಯಸಬಹುದೆ? ಸುಂದರಾಸ್ಯನಾದ ರಾಮನನ್ನು ಕೆಟ್ಟಮೋರೆಯ ಈ ರಾಕ್ಷಸಿ ಕಾಮಿಸಬಹುದೆ? (೭-೮). ಒಟ್ಟಿನಲ್ಲಿ ನಾವು ಭಾಗ್ಯಹೀನರು! ನಮ್ಮ ದುರ್ಭಾಗ್ಯದಿಂದಲೇ ಸುಕ್ಕುಚರ್ಮದ ನರೆತ ಬಿಳಿಗೂದಲಿನ ಈ ರಾಕ್ಷಸಿ ಮಾಡಬಾರದ ಕೆಲಸವನ್ನು ಮಾಡಿದಳು! ಸರ್ವನಿಂದ್ಯವಾದ

ರಾಕ್ಷಸಾನಾಂ ವಿನಾಶಾಯ ದೂಷಣಸ್ಯ ಖರಸ್ಯ ಚ ।
ಚಕಾರಾಪ್ರತಿರೂಪಾ ಸಾ ರಾಘವಸ್ಯ ಪ್ರಧರ್ಷಣಮ್ ॥ ೧೦

ತನ್ನಿಮಿತ್ತಮಿದಂ ವೈರಂ ರಾವಣೇನ ಕೃತಂ ಮಹತ್ ।
ವಧಾಯ ಸೀತಾ ಸಾನೀತಾ ದಶಗ್ರೀವೇಣ ರಕ್ಷಸಾ ॥ ೧೧

ನ ಚ ಸೀತಾಂ ದಶಗ್ರೀವಃ ಪ್ರಾಪ್ನೋತಿ ಜನಕಾತ್ಮಜಾಮ್ ।
ಬದ್ಧಂ ಬಲವತಾ ವೈರಮಕ್ಷಯಂ ರಾಘವೇಣ ಚ ॥ ೧೨

ವೈದೇಹೀಂ ಪ್ರಾರ್ಥಯಾನಂ ತಂ ವಿರಾಧಂ ಪ್ರೇಕ್ಷ್ಯ ರಾಕ್ಷಸಮ್ ।
ಹತಮೇಕೇನ ರಾಮೇಣ ಪರ್ಯಾಪ್ತಂ ತನ್ನಿದರ್ಶನಮ್ ॥ ೧೩

ಚತುರ್ದಶ ಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಮ್ ।
ನಿಹತಾನಿ ಜನಸ್ಥಾನೇ ಶರೈರಗ್ನಿಶಿಖೋಪಮೈಃ ॥ ೧೪

ಖರಶ್ಚ ನಿಹತಃ ಸಂಖ್ಯೇ ದೂಷಣಸ್ತ್ರಿಶಿರಾಸ್ತಥಾ ।
ಶರೈರಾದಿತ್ಯಸಂಕಾಶೈಃ ಪರ್ಯಾಪ್ತಂ ತನ್ನಿದರ್ಶನಮ್ ॥ ೧೫

---

ಅಪಹಾಸ್ಯದ ಕೃತ್ಯವನ್ನು ಎಸಗಿದಳು (೯). ಈ ಕುರೂಪಿ ಹೆಂಗಸು ಹೋಗಿ ರಾಘವನಿಗೆ ಗಂಟುಬಿದ್ದದ್ದು ರಾಕ್ಷಸರನ್ನು ಕೊಲ್ಲಿಸುವುದಕ್ಕಾಗಿಯೋ ; ಖರ ದೂಷಣಾದಿ ವೀರರನ್ನು ನಾಶಮಾಡುವುದಕ್ಕಾಗಿಯೋ. ಅವಳಿಂದಲೇ ರಾವಣನು ರಾಮನೊಡನೆ ಘೋರವಾದ ವೈರವನ್ನು ಬೆಳೆಸಿದನು. ದಶಗ್ರೀವನು ತನ್ನನ್ನು ಕೊಲ್ಲಿಸಿಕೊಳ್ಳುವುದಕ್ಕಾಗಿಯೋ ಸೀತೆಯನ್ನು ತಂದಿದ್ದಾನೆ! (೧೦-೧೧). ಆದರೆ ಜನಕಾತ್ಮಜೆಯಾದ ಸೀತೆ ಎಂದಿಗೂ ರಾವಣನಿಗೆ ದಕ್ಕುವುದಿಲ್ಲ. ಬಲಾಢ್ಯನಾದ ರಾಘವನೊಡನೆ ಈತನು ದೃಢವಾದ ವೈರವನ್ನು ಬೆಳೆಸಿಬಿಟ್ಟನಲ್ಲ! ವೈದೇಹಿಯನ್ನು ಬಯಸಿದ ವಿರಾಧನನ್ನು ರಾಮನೊಬ್ಬನೇ ಕೊಂದುಹಾಕಿದ್ದಾನೆ. ಅದೊಂದನ್ನು ನೋಡಿದರೆ ಸಾಕು, ರಾಮನ ಬಲವೆಷ್ಟೆಂಬುದಕ್ಕೆ ಉದಾಹರಣೆಯಾಗುತ್ತದೆ (೧೨-೧೩). ಜನಸ್ಥಾನದಲ್ಲಿ ಭೀಮಪರಾಕ್ರಮಿಗಳಾದ ಹದಿನಾಲ್ಕುಸಾವಿರ ರಾಕ್ಷಸರನ್ನು ರಾಮನೊಬ್ಬನೇ ಅಗ್ನಿಜ್ವಾಲೆಯಂತಹ ಶರಗಳಿಂದ ಸಂಹರಿಸಿದ್ದಾನೆ. ಖರ ದೂಷಣ ತ್ರಿಶಿರರನ್ನು ಸೂರ್ಯಸಂಕಾಶಗಳಾದ ಅಸ್ತ್ರಗಳಿಂದ ವಿಧ್ವಂಸಗೊಳಿಸಿದ್ದಾನೆ. ಅವನ ಶೌರ್ಯಕ್ಕೆ ಅದೊಂದು ನಿದರ್ಶನ ಸಾಕು!

ಹತೋ ಯೋಜನಬಾಹುಶ್ಚ ಕಬಂಧೋ ರುಧಿರಾಶನಃ ।
ಕ್ರೋಧಾನ್ನಾದಂ ನದನ್ ಸೋಽಥ ಪರ್ಯಾಪ್ತಂ ತನ್ನಿದರ್ಶನಮ್ ॥
ಜಘಾನ ಬಲಿನಂ ರಾಮಃ ಸಹಸ್ರನಯನಾತ್ಮಜಮ್ ।
ವಾಲಿನಂ ಮೇರುಸಂಕಾಶಂ ಪರ್ಯಾಪ್ತಂ ತನ್ನಿದರ್ಶನಮ್ ॥ ೧೭
ಋಷ್ಯಮೂಕೇ ವಸನ್ ಶೈಲೇ ದೀನೋ ಭಗ್ನಮನೋರಥಃ ।
ಸುಗ್ರೀವಃ ಸ್ಥಾಪಿತೋ ರಾಜ್ಯೇ ಪರ್ಯಾಪ್ತಂ ತನ್ನಿದರ್ಶನಮ್ ॥
ಏಕೋ ವಾಯುಸುತಃ ಪ್ರಾಪ್ಯ ಲಂಕಾಂ ಹತ್ವಾ ಚ ರಾಕ್ಷಸಾನ್ ।
ದಗ್ಧ್ವಾ ತಾಂ ಚ ಪುನರ್ಯಾತಃ ಪರ್ಯಾಪ್ತಂ ತನ್ನಿದರ್ಶನಮ್ ॥
ನಿಗೃಹ್ಯ ಸಾಗರಂ ತಸ್ಮಿನ್ ಸೇತುಂ ಬದ್ಧ್ವಾ ಪ್ಲವಂಗಮೈಃ ।
ವೃತೋಽತರತ್ತಂ ಯದ್ರಾಮಃ ಪರ್ಯಾಪ್ತಂ ತನ್ನಿದರ್ಶನಮ್ ॥ ೨೦
ಧರ್ಮಾರ್ಥಸಹಿತಂ ವಾಕ್ಯಂ ಸರ್ವೇಷಾಂ ರಕ್ಷಸಾಂ ಹಿತಮ್ ।
ಯುಕ್ತಂ ವಿಭೀಷಣೇನೋಕ್ತಂ ಮೋಹಾತ್ತಸ್ಯ ನ ರೋಚತೇ ॥ ೨೧

---

(೧೪–೧೫). ಘೋರವಾಗಿ ಗರ್ಜಿಸುತ್ತಿದ್ದ ಯೋಜನಬಾಹುವಾದ ಕಬಂಧ ರಾಕ್ಷಸನನ್ನು ರಾಮನು ಸಂಹರಿಸಿದ್ದಾನೆ. ರಾಮನ ಶೌರ್ಯಕ್ಕೆ ಅದೊಂದು ನಿದರ್ಶನ ಸಾಕು! ಸೂರ್ಯಪುತ್ರನಾದ ವಾಲಿಯಾದರೋ ಅತ್ಯಂತ ಬಲಾಢ್ಯ. ಮೇರುಸಂಕಾಶನಾದ ಆತನನ್ನು ರಾಮನು ಕೊಂದನಲ್ಲವೆ? ಅದೊಂದು ನಿದರ್ಶನ ಸಾಕು! (೧೬–೧೭). ಋಷ್ಯಮೂಕಗಿರಿಯಲ್ಲಿ ಸುಗ್ರೀವನು ನಿರಾಶನಾಗಿ ದೈನ್ಯದಿಂದ ಜೀವಿಸುತ್ತಿದ್ದನು. ಅಂಥವನಿಗೆ ರಾಜ್ಯವನ್ನು ಕೊಡಿಸಿ, ಕಿಷ್ಕಿಂಧೆಯಲ್ಲಿ ಅವನನ್ನು ರಾಘವನು ಪ್ರತಿಷ್ಠಾಪಿಸಿದ್ದಾನೆ. ಅದೊಂದು ನಿದರ್ಶನ ಸಾಕು! (೧೮). ವಾಯುಪುತ್ರನಾದ ಹನುಮಂತನು ಏಕಾಕಿಯಾಗಿ ಲಂಕೆಗೆ ಬಂದು ಅಷ್ಟುಮಂದಿ ರಾಕ್ಷಸರನ್ನು ಕೊಂದಿದ್ದಾನೆ. ಲಂಕೆಗೆ ಬೆಂಕಿ ಹಚ್ಚಿ ನಿರಾತಂಕವಾಗಿ ಮತ್ತೆ ಹೊರಟು ಹೋದನಲ್ಲ! (ರಾಮನ ಪಕ್ಷದಲ್ಲಿ ಎಂತಹ ಬಲಶಾಲಿಗಳಿದ್ದಾರೆ, ದೈವಬಲ ಎತ್ತ ಇದೆ ಎಂಬುದಕ್ಕೆ) ಅದೊಂದು ನಿದರ್ಶನ ಸಾಕು! (೧೯). ಸಮುದ್ರ ರಾಜನನ್ನು ಹೆದರಿಸಿ, ಕಪಿಗಳಿಂದ ಸೇತುವನ್ನು ಕಟ್ಟಿಸಿ, ಅವರೆಲ್ಲರೊಡನೆ ಕಡಲನ್ನು ದಾಟಿ ಬಂದನಲ್ಲ! ರಾಮನ ಪರಾಕ್ರಮಕ್ಕೆ ಅದೊಂದು ನಿದರ್ಶನ ಸಾಕು! (೨೦). ಧರ್ಮಾರ್ಥಸಹಿತವಾದ ವಾಕ್ಯಗಳಿಂದ ವಿಭೀಷಣನು

ವಿಭೀಷಣವಚಃ ಕುರ್ಯಾದ್ಯದಿ ಸ್ಮ ಧನದಾನುಜಃ ।
ಶ್ಮಶಾನಭೂತಾ ದುಃಖಾರ್ತಾ ನೇಯಂ ಲಂಕಾಪುರೀ ಭವೇತ್ ॥ ೨೨

ಕುಂಭಕರ್ಣಂ ಹತಂ ಶ್ರುತ್ವಾ ರಾಘವೇಣ ಮಹಾಬಲಮ್ ।
ಅತಿಕಾಯಂ ಚ ದುರ್ಧರ್ಷಂ ಲಕ್ಷ್ಮಣೇನ ಹತಂ ಪುನಃ ॥ ೨೩

ಪ್ರಿಯಂ ಚೇಂದ್ರಜಿತಂ ಪುತ್ರಂ ರಾವಣೋ ನಾವಬುಧ್ಯತೇ ।
ಮಮ ಪುತ್ರೋ ಮಮ ಭ್ರಾತಾ ಮಮ ಭರ್ತಾ ರಣೇ ಹತಃ ॥ ೨೪

ಇತ್ಯೇವಂ ಶ್ರೂಯತೇ ಶಬ್ದೋ ರಾಕ್ಷಸೀನಾಂ ಕುಲೇ ಕುಲೇ ।
ರಥಾಶ್ಚಾಶ್ವಾಶ್ಚ ನಾಗಾಶ್ಚ ಹತಾಃ ಶತಸಹಸ್ರಶಃ ॥ ೨೫

ರಣೇ ರಾಮೇಣ ಶೂರೇಣ ರಾಕ್ಷಸಾಶ್ಚ ಪದಾತಯಃ ।
ರುದ್ರೋ ವಾ ಯದಿ ವಾ ವಿಷ್ಣುರ್ಮಹೇಂದ್ರೋ ವಾ ಶತಕ್ರತುಃ ॥

---

ಎಷ್ಟೋ ಬುದ್ಧಿವಾದವನ್ನು ಹೇಳಿದನು. ಅದು ರಾಕ್ಷಸರೆಲ್ಲರಿಗೂ ಹಿತಕರವಾಗಿತ್ತು. ಆದರೆ ಅಜ್ಞಾನವು ಕವಿದದ್ದರಿಂದ ರಾವಣನಿಗೆ ಅದು ರುಚಿಸಲಿಲ್ಲ. ವಿಭೀಷಣನ ಮಾತಿನಂತೆ ರಾವಣನು ನಡೆದುಕೊಂಡಿದ್ದರೆ, ಈ ಲಂಕಾಪುರಿಯು ಹೀಗೆ ಸ್ಮಶಾನವಾಗುತ್ತಿತ್ತೆ? ಈ ರೀತಿಯ ಗೋಳಾಟ ಇರುತ್ತಿತ್ತೆ? (೨೧-೨೨). ಮಹಾಬಲನಾದ ಕುಂಭಕರ್ಣನು ರಾಘವನಿಂದ ಹತನಾದುದನ್ನು ಕೇಳಿದರೂ ರಾವಣನಿಗೆ ಬುದ್ಧಿ ಬರಲಿಲ್ಲ. ದುರ್ಧರ್ಷನಾದ ಅತಿಕಾಯನನ್ನು ಲಕ್ಷ್ಮಣನು ಸಂಹರಿಸಿದರೂ ತಿಳಿವಳಿಕೆ ಹುಟ್ಟಲಿಲ್ಲ (೨೩). ಪ್ರಿಯಪುತ್ರನಾದ ಇಂದ್ರಜಿತು ಮೃತನಾದರೂ ಈ ರಾವಣನಿಗೆ ವಿವೇಕ ಉದಯಿಸಲಿಲ್ಲ! ಅಯ್ಯೊ, ಅಕಟ! ನನ್ನ ಮಗನು ಯುದ್ಧದಲ್ಲಿ ಮೃತನಾದನು. ನನ್ನ ಸೋದರನು ಇನ್ನಿಲ್ಲ. ನನ್ನ ಗಂಡನು ರಣರಂಗದಲ್ಲಿ ಹತನಾದನು" ಎಂಬುದಾಗಿ ರಾಕ್ಷಸಿಯರ ರೋದನಧ್ವನಿಯು ಲಂಕೆಯ ಮನೆಮನೆಯಲ್ಲಿಯೂ ಕೇಳಿಸಿತು (೨೪). ಮತ್ತೆ ಆ ರಾಕ್ಷಸಿಯರು ಅಳುತ್ತ ಹಲುಬಿದರು: "ಶೂರನಾದ ರಾಮನು ಲಕ್ಷೋಪಲಕ್ಷ ರಥಗಳನ್ನೂ ಗಜಾಶ್ವಗಳನ್ನೂ ನಾಶಮಾಡಿದನು. ಲೆಕ್ಕವಿಲ್ಲದಷ್ಟು ಪದಾತಿಗಳನ್ನು ಕೊಂದನು. ಅವನೇನು ರುದ್ರನೋ ವಿಷ್ಣುವೋ ಶತಯಾಗಗಳನ್ನು

**ಹಂತಿ ನೋ ರಾಮರೂಪೇಣ ಯದಿ ವಾ ಸ್ವಯಮಂತಕಃ ।**
**ಹತಪ್ರವೀರಾ ರಾಮೇಣ ನಿರಾಶಾ ಜೀವಿತೇ ವಯಮ್ ॥ ೨೭**

**ಅಪಶ್ಯಂತೋ ಭಯಸ್ಯಾಂತಮನಾಥಾ ವಿಲಪಾಮಹೇ ।**
**ರಾಮಹಸ್ತಾದ್ದಶಗ್ರೀವಃ ಶೂರೋ ದತ್ತಮಹಾವರಃ ॥ ೨೮**

**ಇದಂ ಭಯಂ ಮಹಾಘೋರಮುತ್ಪನ್ನಂ ನಾವಬುಧ್ಯತೇ ।**
**ನ ದೇವಾ ನ ಚ ಗಂಧರ್ವಾ ನ ಪಿಶಾಚಾ ನ ರಾಕ್ಷಸಾಃ ॥ ೨೯**

**ಉಪಸೃಷ್ಟಂ ಪರಿತ್ರಾತುಂ ಶಕ್ತಾ ರಾಮೇಣ ಸಂಯುಗೇ ।**
**ಉತ್ಪಾತಾಶ್ಚಾಪಿ ದೃಶ್ಯಂತೇ ರಾವಣಸ್ಯ ರಣೇ ರಣೇ ॥ ೩೦**

**ಕಥಯಿಷ್ಯಂತಿ ರಾಮೇಣ ರಾವಣಸ್ಯ ನಿಬರ್ಹಣಮ್ ।**
**ಪಿತಾಮಹೇನ ಪ್ರೀತೇನ ದೇವದಾನವರಾಕ್ಷಸೈಃ ॥ ೩೧**

**ರಾವಣಸ್ಯಾಭಯಂ ದತ್ತಂ ಮಾನುಷೇಭ್ಯೋ ನ ಯಾಚಿತಮ್ ।**
**ತದಿದಂ ಮಾನುಷಂ ಮನ್ಯೇ ಪ್ರಾಪ್ತಂ ನಿಃಸಂಶಯಂ ಭಯಮ್ ॥**

---

ಮಾಡಿದ ಮಹೇಂದ್ರನೋ! (೨೫–೨೬). ಅಥವಾ ಸಾಕ್ಷಾತ್ ಯಮನೇ ರಾಮರೂಪದಲ್ಲಿ ಬಂದು ನಮ್ಮನ್ನು ಕೊಲ್ಲುತ್ತಿರಬಹುದೆ? ನಮ್ಮ ರಾಕ್ಷಸ ವೀರರೆಲ್ಲರೂ ಹತರಾದರಲ್ಲ! ಇನ್ನು ನಮಗೆ ಬದುಕುವ ಆಸೆ ಹೋಯಿತು. ಈ ವಿಪತ್ತಿಗೆ ಅಂತ್ಯವೇ ಕಾಣದಲ್ಲ! ದಿಕ್ಕಿಲ್ಲದೆ ನಾವು ಅಳುವಂತಾಯಿತಲ್ಲ! ಇಷ್ಟಾದರೂ ರಾವಣನು ತನಗೆ ಬ್ರಹ್ಮನ ವರಬಲವಿದೆಯೆಂದೂ ತಾನು ಅಜೇಯನಾದ ಶೂರನೆಂದೂ ತಿಳಿದುಕೊಂಡಿದ್ದಾನೆ (೨೭–೨೮). ರಾಮನ ಕೈಯಿಂದ ಘೋರವಾದ ಭಯವು ಒದಗಿಬಂದಿದೆಯೆಂಬುದನ್ನು ಅರಿಯದಿದ್ದಾನೆ. ರಾಮನ ಆಕ್ರಮಣಕ್ಕೆ ಒಳಗಾದವನನ್ನು ರಕ್ಷಿಸಲು ದೇವ ಗಂಧರ್ವರಿಗೂ ಸಾಧ್ಯವಿಲ್ಲ; ಪಿಶಾಚರಾಕ್ಷಸರಿಗೂ ಸಾಧ್ಯವಿಲ್ಲ. ಪ್ರತಿಯೊಂದುಸಾರಿ ಯುದ್ಧಕ್ಕೆ ಹೊರಟಾಗಲೂ ರಾವಣನಿಗೆ ಅಪಶಕುನಗಳು ಕಾಣುತ್ತಲೇ ಇವೆ (೨೯–೩೦). ರಾಮನಿಂದ ರಾವಣನ ವಧೆಯಾಗುವುದೆಂದು ಅವು ಸೂಚಿಸುತ್ತಿವೆ. ಸಂಪ್ರೀತನಾದ ಬ್ರಹ್ಮದೇವನು ಈತನಿಗೆ ಕೊಟ್ಟ ವರವಾದರೂ ಯಾವುದು? ದೇವ ದಾನವ ರಾಕ್ಷಸರಿಂದ ಮರಣದ ಭಯವಿಲ್ಲವೆಂದು ರಾವಣನಿಗೆ ಅವನು ವರವನ್ನು ಕೊಟ್ಟಿದ್ದಾನೆ. ಮನುಷ್ಯ

ಜೀವಿತಾಂತಕರಂ ಘೋರಂ ರಕ್ಷಸಾಂ ರಾವಣಸ್ಯ ಚ ।
ಪೀಡ್ಯಮಾನಾಸ್ತು ಬಲಿನಾ ವರದಾನೇನ ರಕ್ಷಸಾ ॥ ೩೩
ದೀಪ್ತೈಸ್ತಪೋಭಿರ್ವಿಬುಧಾಃ ಪಿತಾಮಹಮಪೂಜಯನ್ ।
ದೇವತಾನಾಂ ಹಿತಾರ್ಥಾಯ ಮಹಾತ್ಮಾ ವೈ ಪಿತಾಮಹಃ ॥ ೩೪
ಉವಾಚ ದೇವತಾಃ ಸರ್ವಾ ಇದಂ ತುಷ್ಟೋ ಮಹದ್ವಚಃ ।
ಅದ್ಯಪ್ರಭೃತಿ ಲೋಕಾಂಸ್ತ್ರೀನ್ ಸರ್ವೇ ದಾನವರಾಕ್ಷಸಾಃ ॥ ೩೫
ಭಯೇನ ಪ್ರಾವೃತಾ ನಿತ್ಯಂ ವಿಚರಿಷ್ಯಂತಿ ಶಾಶ್ವತಮ್ ।
ದೈವತೈಸ್ತು ಸಮಾಗಮ್ಯ ಸರ್ವೈಶ್ಚೇಂದ್ರಪುರೋಗಮೈಃ ॥ ೩೬
ವೃಷಧ್ವಜಸ್ತ್ರಿಪುರಹಾ ಮಹಾದೇವಃ ಪ್ರಸಾದಿತಃ ।
ಪ್ರಸನ್ನಸ್ತು ಮಹಾದೇವೋ ದೇವಾನೇತದ್ವಚೋಽಬ್ರವೀತ್ ॥ ೩೭
ಉತ್ಪತ್ಸ್ಯತಿ ಹಿತಾರ್ಥಂ ವೋ ನಾರೀ ರಕ್ಷಃಕ್ಷಯಾವಹಾ ।
ಏಷಾ ದೇವೈಃ ಪ್ರಯುಕ್ತಾ ತು ಕ್ಷುದ್ಯಥಾ ದಾನವಾನ್ ಪುರಾ ॥ ೩೮

---

ರಿಂದ ಮರಣವಾಗಬಾರದೆಂಬ ವರವನ್ನು ರಾವಣನು ಕೇಳಿಕೊಳ್ಳಲೇ ಇಲ್ಲ! (೩೧-೩೨). ಈಗ ಬಂದಿರುವುದು ಮನುಷ್ಯನಿಂದೊದಗಿದ ಮರಣಭಯ! ಸಂದೇಹವೇ ಇಲ್ಲ. ರಾವಣನಿಗೂ ರಾಕ್ಷಸರಿಗೂ ಪ್ರಾಣಾಂತಕವಾದ ಭೀಕರ ವಿಪತ್ತು ಬಂದಿದೆ. ವರಬಲದಿಂದ ಬಲಾಢ್ಯನಾದ ರಾವಣನು ದೇವತೆಗಳನ್ನು ಪೀಡಿಸತೊಡಗಿದನಷ್ಟೆ (೩೩). ಆಗ ದೇವತೆಗಳು ಕಠೋರವಾದ ತಪಸ್ಸನ್ನು ಮಾಡಿ ಬ್ರಹ್ಮನನ್ನು ಅರ್ಚಿಸಿದರಂತೆ. ಮಹಾತ್ಮನಾದ ಬ್ರಹ್ಮನು ಪ್ರಸನ್ನನಾಗಿ, ದೇವತೆಗಳಿಗೆ ಸುಖವಾಗಲೆಂಬ ಉದ್ದೇಶದಿಂದ 'ಎಲೈ ದೇವತೆಗಳೆ, ಅಂಜಬೇಡಿರಿ. ಸಕಲ ದಾನವರಿಗೂ ರಾಕ್ಷಸರಿಗೂ ಇನ್ನುಮೇಲೆ ವಿಪತ್ತು ಸಂಭವಿಸುವುದು. ಅವರೆಲ್ಲರೂ ಭೀತರಾಗಿಯೇ ಸಂಚರಿಸುವ ಕಾಲ ಬರುವುದು' ಎಂದು ಹೇಳಿದನಂತೆ (೩೪-೩೫). ಅನಂತರ ಇಂದ್ರಾದಿ ದೇವತೆಗಳು ವೃಷಧ್ವಜನೂ ತ್ರಿಪುರಸಂಹಾರಿಯೂ ಆದ ಪರಮೇಶ್ವರನನ್ನು ಆರಾಧಿಸಿ ಒಲಿಸಿಕೊಂಡರು. ಆ ಮಹಾದೇವನು ಪ್ರಸನ್ನನಾಗಿ 'ಎಲೈ ದೇವತೆಗಳೆ, ರಾಕ್ಷಸರನ್ನು ನಾಶಗೊಳಿಸಿ ನಿಮಗೆ ಹಿತವನ್ನುಂಟುಮಾಡುವುದಕ್ಕಾಗಿ ಒಬ್ಬ ಸ್ತ್ರೀಯು ಅವತರಿಸುವಳು!' ಎಂದು ಹೇಳಿದನಂತೆ (೩೬-೩೭). ಹಿಂದೆ ದಾನವರನ್ನು ಕೊಲ್ಲುವುದಕ್ಕಾಗಿ

ಭಕ್ಷಯಿಷ್ಯತಿ ನಃ ಸೀತಾ ರಾಕ್ಷಸಘ್ನೀ ಸರಾವಣಾನ್ ।
ರಾವಣಸ್ಯಾಪನೀತೇನ ದುರ್ವಿನೀತಸ್ಯ ದುರ್ಮತೇಃ ॥ ೩೯

ಅಯಂ ನಿಷ್ಟಾನಕೋ ಘೋರಃ ಶೋಕೇನ ಸಮಭಿಪ್ಲುತಃ ।
ತಂ ನ ಪಶ್ಯಾಮಹೇ ಲೋಕೇ ಯೋ ನಃ ಶರಣದೋ ಭವೇತ್ ॥

ರಾಘವೇಣೋಪಸೃಷ್ಟಾನಾಂ ಕಾಲೇನೇವ ಯುಗಕ್ಷಯೇ ।
ನಾಸ್ತಿ ನಃ ಶರಣಂ ಕಶ್ಚಿದ್ಭಯೇ ಮಹತಿ ತಿಷ್ಠತಾಮ್ ॥ ೪೧

ದವಾಗ್ನಿವೇಷ್ಟಿತಾನಾಂ ಹಿ ಕರೇಣೂನಾಂ ಯಥಾ ವನೇ ।
ಪ್ರಾಪ್ತಕಾಲಂ ಕೃತಂ ತೇನ ಪೌಲಸ್ತ್ಯೇನ ಮಹಾತ್ಮನಾ ॥ ೪೨

ಯತ ಏವ ಭಯಂ ದೃಷ್ಟಂ ತಮೇವ ಶರಣಂ ಗತಃ ॥

ಇತೀವ ಸರ್ವಾ ರಜನೀಚರಸ್ತ್ರಿಯಃ
ಪರಸ್ಪರಂ ಸಂಪರಿರಭ್ಯ ಬಾಹುಭಿಃ ।

---

ಕ್ಷುಧೆಯೆಂಬವಳನ್ನು ದೇವತೆಗಳು ಪ್ರೇರಿಸಿ ಕಳಿಸಿದ್ದರಲ್ಲವೆ? ಈಗ ಸೀತೆಯೆಂಬವಳು ರಾಕ್ಷಸರನ್ನು ಕೊಲ್ಲಲು ಬಂದಿದ್ದಾಳೆ! ಇವಳು ನಮ್ಮನ್ನೂ ರಾವಣನನ್ನೂ ಭಕ್ಷಿಸುವಳು! (೩೮). ಉದ್ಧತನೂ ದುರುಳನೂ ಆದ ರಾವಣನ ದುರ್ನೀತಿಯಿಂದ ಘೋರವಿನಾಶವು ನಮಗೆ ಬಂದಿತು. ಶೋಕವು ಆವರಿಸಿತು. ನಾವು ಯಾರನ್ನು ಮರೆಹೊಗೋಣ? ನಮಗೆ ಆಶ್ರಯವನ್ನಿತ್ತು ರಕ್ಷಿಸತಕ್ಕವನೊಬ್ಬನೂ ಲೋಕದಲ್ಲಿ ಕಾಣನಲ್ಲ! (೩೯-೪೦). ಪ್ರಳಯಕಾಲದಲ್ಲಿ ಕಾಲರುದ್ರನ ಆಕ್ರಮಣಕ್ಕೆ ಸಿಕ್ಕಿದವರಂತೆ ರಾಘವನ ಕೋಪಕ್ಕೆ ಒಳಗಾಗಿರುವ ನಮ್ಮನ್ನು ಉಳಿಸುವವರಾರು? ಬಹು ದೊಡ್ಡ ವಿಪತ್ತಿನಲ್ಲಿ ಸಿಕ್ಕಿಬಿದ್ದೆವು. ಕಾಡಿನಲ್ಲಿ ಕಾಳ್ಗಿಚ್ಚಿನಿಂದ ಆವರಿಸಲ್ಪಟ್ಟ ಹೆಣ್ಣಾನೆಗಳಂತೆ ನಮ್ಮ ಗತಿಯಾಯಿತು. ಪುಲಸ್ತ್ಯಕುಲೋದ್ಭವನಾದ ವಿಭೀಷಣನನ್ನೇ ಮಹಾತ್ಮನೆನ್ನಬೇಕು. ಕಾಲೋಚಿತವಾಗಿ ಯೋಗ್ಯ ಕಾರ್ಯವನ್ನು ಅವನು ಮಾಡಿದನು. ಯಾರಿಂದ ಆಪತ್ತು ಸಂಭವಿಸುವುದೆಂದು ತೋರಿತೋ ಆ ರಾಮನನ್ನೇ ಅವನು ಮರೆಹೊಕ್ಕು ಪಾರಾದನು!" (೪೧-೪೨). ಈ ಪ್ರಕಾರವಾಗಿ ರಾಕ್ಷಸಸ್ತ್ರೀಯರು ಅಂಜಿಕೆಯಿಂದ ಕಂಗೆಟ್ಟು ಶೋಕಾರ್ತರಾಗಿ, ಒಬ್ಬರನ್ನೊಬ್ಬರು ತೋಳುಗಳಿಂದ ತಬ್ಬಿಕೊಂಡು

ವಿಷೇದುರಾರ್ತಾ ಭಯಭಾರಪೀಡಿತಾ
ವಿನೇದುರುಚ್ಚೈಶ್ಚ ತದಾ ಸುದಾರುಣಮ್ ॥ ೪೩

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚನವತಿತಮಃ ಸರ್ಗಃ

---

## ಷಣ್ಣವತಿತಮಃ ಸರ್ಗಃ

### ರಾವಣಾಭಿಷೇಣನಮ್

ಆರ್ತಾನಾಂ ರಾಕ್ಷಸೀನಾಂ ತು ಲಂಕಾಯಾಂ ವೈ ಕುಲೇ ಕುಲೇ ।
ರಾವಣಃ ಕರುಣಂ ಶಬ್ದಂ ಶುಶ್ರಾವ ಪರಿದೇವಿತಮ್ ॥ ೧

ಸ ತು ದೀರ್ಘಂ ವಿನಿಶ್ವಸ್ಯ ಮುಹೂರ್ತಂ ಧ್ಯಾನಮಾಸ್ಥಿತಃ ।
ಬಭೂವ ಪರಮಕ್ರುದ್ಧೋ ರಾವಣೋ ಭೀಮದರ್ಶನಃ ॥ ೨

---

ಗೋಳಾಡಿದರು. ಹೃದಯವಿದ್ರಾವಕವಾದ ಧ್ವನಿಯಿಂದ ಗಟ್ಟಿಯಾಗಿ ಅತ್ತರು (೪೩).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತೈದನೆಯ ಸರ್ಗ

---

## ಸರ್ಗ ೯೬

ರಾಕ್ಷಸಿಯರ ರೋದನಧ್ವನಿಯನ್ನು ಕೇಳಿ ಕ್ರುದ್ಧನಾದ ರಾವಣನ ವೀರಾಲಾಪ. ಮಹೋದರಾದಿ ಪರಿವಾರ ಸಮೇತನಾಗಿ ರಾವಣನು ಯುದ್ಧಕ್ಕೆ ಹೊರಡುವುದು. ದಾರಿಯಲ್ಲಿ ಅಪಶಕುನ.

ಶೋಕಾರ್ತರಾದ ರಾಕ್ಷಸಸ್ತ್ರೀಯರು ಮನೆಮನೆಯಲ್ಲಿಯೂ ಹೃದಯ ವಿದ್ರಾವಕವಾಗಿ ದೀನಸ್ವರದಿಂದ ಅಳುವುದು ರಾವಣನಿಗೆ ಕೇಳಿಸಿತು. ಅವನು ದೀರ್ಘವಾಗಿ ಬಿಸುಸುಯ್ದು ಒಂದು ಮುಹೂರ್ತಕಾಲ ತನ್ನಲ್ಲಿಯೇ ವಿಚಾರಮಗ್ನನಾದನು. ಆಮೇಲೆ ರೋಷಾವಿಷ್ಟನಾಗಿ ಭೀಷಣಾಕೃತಿ

ಸಂದಶ್ಯ ದಶನೈರೋಷ್ಠಂ ಕ್ರೋಧಸಂರಕ್ತಲೋಚನಃ ।
ರಾಕ್ಷಸೈರಪಿ ದುರ್ದರ್ಶಃ ಕಾಲಾಗ್ನಿರಿವ ಮೂರ್ಛಿತಃ ॥ ೩

ಉವಾಚ ಚ ಸಮೀಪಸ್ಥಾನ್ ರಾಕ್ಷಸಾನ್ ರಾಕ್ಷಸೇಶ್ವರಃ ।
ಕ್ರೋಧಾವ್ಯಕ್ತಕಥಸ್ತತ್ರ ನಿರ್ದಹನ್ನಿವ ಚಕ್ಷುಷಾ ॥ ೪

ಮಹೋದರಮಹಾಪಾರ್ಶ್ವೌ ವಿರೂಪಾಕ್ಷಂ ಚ ರಾಕ್ಷಸಮ್ ।
ಶೀಘ್ರಂ ವದತ ಸೈನ್ಯಾನಿ ನಿರ್ಯಾತೇತಿ ಮಮಾಜ್ಞಯಾ ॥ ೫

ತಸ್ಯ ತದ್ವಚನಂ ಶ್ರುತ್ವಾ ರಾಕ್ಷಸಾಸ್ತೇ ಭಯಾರ್ದಿತಾಃ ।
ಚೋದಯಾಮಾಸುರವ್ಯಗ್ರಾನ್ ರಾಕ್ಷಸಾಂಸ್ತಾನ್ನೃಪಾಜ್ಞಯಾ ॥ ೬

ತೇ ತು ಸರ್ವೇ ತಥೇತ್ಯುಕ್ತ್ವಾ ರಾಕ್ಷಸಾ ಘೋರದರ್ಶನಾಃ ।
ಕೃತಸ್ವಸ್ತ್ಯಯನಾಃ ಸರ್ವೇ ರಣಾಯಾಭಿಮುಖಾ ಯಯುಃ ॥ ೭

---

ಯಾದನು (೧-೨). ಹಲ್ಲುಗಳಿಂದ ಅವಡುಗಚ್ಚಿದನು. ಕೋಪದಿಂದ ಅವನ ಕಣ್ಣುಗಳು ಕೆಂಪಡರಿದವು. ಕ್ರೋಧಮೂರ್ಛಿತನಾದ ರಾವಣನು ಕಾಲಾಗ್ನಿಯಂತೆ ಕಾಣಿಸಿದನು. ರಾಕ್ಷಸರಿಗೂ ಭೀತಿಯಿಂದ ಅವನನ್ನು ಕಣ್ಣೆತ್ತಿ ನೋಡುವುದು ಅಶಕ್ಯವಾಯಿತು (೩). ಆ ರಾಕ್ಷಸೇಶ್ವರನು ಕಣ್ಣಿಂದಲೇ ಲೋಕವನ್ನು ಸುಡುವನೋ ಎಂಬಂತೆ ದುರದುರನೆ ನೋಡುತ್ತ, ಸಿಟ್ಟಿನ ಆವೇಶದಿಂದ ತೊದಲುತ್ತ, ಸಮೀಪದಲ್ಲಿದ್ದ ಮಹೋದರ, ಮಹಾಪಾರ್ಶ್ವ*, ವಿರೂಪಾಕ್ಷ ಎಂಬ ರಾಕ್ಷಸರನ್ನು ಕುರಿತು "ಸಚಿವರೆ, ಸೈನಿಕರೆಲ್ಲರೂ ಕೂಡಲೆ ಯುದ್ಧಕ್ಕೆ ಹೊರಡಲಿ! ನನ್ನ ಆಜ್ಞೆಯನ್ನು ಅವರಿಗೆ ತಿಳಿಸಿರಿ" ಎಂದು ಆಜ್ಞಾಪಿಸಿದನು (೪-೫). ರಾವಣನ ನುಡಿಯನ್ನು ಕೇಳಿ ಭೀತರಾದ ಆ ಸಚಿವರು ಧೀರರಾದ ರಾಕ್ಷಸಸೈನಿಕರಿಗೆ ರಾಜಾಜ್ಞೆಯನ್ನು ಅರುಹಿದರು. ಭೀಮರೂಪಿಗಳಾದ ರಾಕ್ಷಸಯೋಧರು ಹಾಗೆಯೇ ಆಗಲೆಂದು ಒಪ್ಪಿ ಹಿರಿಯರಿಂದ ಮಂಗಳಾಶೀರ್ವಾದಗಳನ್ನು

---

* ಈ ಮಹೋದರ, ಮಹಾಪಾರ್ಶ್ವರು ಸಚಿವರು. ಹಿಂದೆ ಹತರಾದವರು ರಾವಣನ ಸೋದರರು. ಅವರಿಗೆ ಮತ್ತ, ಉನ್ಮತ್ತ ಎಂಬ ನಾಮಾಂತರಗಳಿದ್ದವು.

ಪ್ರತಿಪೂಜ್ಯ ಯಥಾನ್ಯಾಯಂ ರಾವಣಂ ತೇ ನಿಶಾಚರಾಃ ।
ತಸ್ಥುಃ ಪ್ರಾಂಜಲಯಃ ಸರ್ವೇ ಭರ್ತುರ್ವಿಜಯಕಾಂಕ್ಷಿಣಃ ॥ ೮

ಅಥೋವಾಚ ಪ್ರಹಸ್ಯೈತಾನ್ ರಾವಣಃ ಕ್ರೋಧಮೂರ್ಛಿತಃ ।
ಮಹೋದರಮಹಾಪಾರ್ಶ್ವೌ ವಿರೂಪಾಕ್ಷಂ ಚ ರಾಕ್ಷಸಮ್ ॥ ೯

ಅದ್ಯ ಬಾಣೈರ್ಧನುರ್ಮುಕ್ತೈರ್ಯುಗಾಂತಾದಿತ್ಯಸಂನಿಭೈಃ ।
ರಾಘವಂ ಲಕ್ಷ್ಮಣಂ ಚೈವ ನೇಷ್ಯಾಮಿ ಯಮಸಾದನಮ್ ॥ ೧೦

ಖರಸ್ಯ ಕುಂಭಕರ್ಣಸ್ಯ ಪ್ರಹಸ್ತೇಂದ್ರಜಿತೋಸ್ತಥಾ ।
ಕರಿಷ್ಯಾಮಿ ಪ್ರತೀಕಾರಮದ್ಯ ಶತ್ರುವಧಾದಹಮ್ ॥ ೧೧

ನೈವಾಂತರಿಕ್ಷಂ ನ ದಿಶೋ ನ ನದ್ಯೋ ನಾಪಿ ಸಾಗರಾಃ ।
ಪ್ರಕಾಶತ್ವಂ ಗಮಿಷ್ಯಂತಿ ಮದ್ಬಾಣಜಲದಾವೃತಾಃ ॥ ೧೨

ಅದ್ಯ ವಾನರಮುಖ್ಯಾನಾಂ ತಾನಿ ಯೂಥಾನಿ ಭಾಗಶಃ ।
ಧನುಷಾ ಶರಜಾಲೇನ ವಿಧಮಿಷ್ಯಾಮಿ ಪತ್ರಿಣಾ ॥ ೧೩

---

ಪಡೆದು, ಯುದ್ಧಾಭಿಮುಖರಾಗಿ ಹೊರಟರು (೬-೭). ಆ ರಾಕ್ಷಸರು ರಾವಣನನ್ನು ಕಂಡು ಅಭಿವಂದಿಸಿ, ತಮ್ಮ ಒಡೆಯನಿಗೆ ವಿಜಯವಾಗಲೆಂದು ಹಾರೈಸುತ್ತ ಕೈಮುಗಿದುಕೊಂಡು ನಿಂತರು. ಆಗ ರೋಷಾವಿಷ್ಟನಾಗಿದ್ದ ರಾವಣನು ಅಟ್ಟಹಾಸದಿಂದ ನಕ್ಕು, ಮಹೋದರ ಮಹಾಪಾರ್ಶ್ವ ಮತ್ತು ವಿರೂಪಾಕ್ಷ ಎಂಬ ಸಚಿವರನ್ನು ನೋಡಿ ಹೀಗೆಂದನು (೮-೯): "ಎಲೈ ರಾಕ್ಷಸಯೋಧರೆ, ಈ ದಿನ ನನ್ನ ಧನುಸ್ಸಿನಿಂದ ಸಿಡಿಯುವ, ಪ್ರಳಯ ಕಾಲದ ಭಾಸ್ಕರನಂತೆ ಬೆಳಗುವ—ಬಾಣಗಳಿಂದ ರಾಮಲಕ್ಷ್ಮಣರನ್ನು ಯಮನ ಮನೆಗೆ ದಬ್ಬುವೆನು! (೧೦). ಈ ದಿನ ಶತ್ರುಗಳನ್ನು ಮರ್ದಿಸಿ, ಖರ ಕುಂಭಕರ್ಣ ಪ್ರಹಸ್ತೇಂದ್ರಜಿತುಗಳ ಸಂಹಾರದ ಸೇಡನ್ನು ತೀರಿಸಿ ಕೊಳ್ಳುವೆನು. ನನ್ನ ಬಾಣರಾಶಿಗಳೆಂಬ ಮೇಘಜಾಲಗಳನ್ನು ಎಲ್ಲೆಲ್ಲಿಯೂ ಆವರಿಸಿ, ಅಂತರಿಕ್ಷ ಯಾವುದು-ದಿಕ್ಕುಗಳಾವುವು-ನದಿಗಳಾವುವು-ಸಮುದ್ರ ಗಳಾವುವು—ಎಂಬುದೇ ಗೋಚರಿಸದಂತೆ ಮಾಡುವೆನು (೧೧-೧೨). ಈ ದಿನ ನನ್ನ ಧನುಸ್ಸಿನಿಂದ ಪುಂಖಾಂಕಿತ ಶರಜಾಲಗಳನ್ನು ತೂರಿ, ವಾನರಮುಖ್ಯರನ್ನು ಹಿಂಡುಹಿಂಡಾಗಿ ತುಂಡರಿಸಿ ಚೆಲ್ಲುವೆನು. ರಾಕ್ಷಸ

ಅದ್ಯ ವಾನರಸೈನ್ಯಾನಿ ರಥೇನ ಪವನೌಜಸಾ ।
ಧನುಃಸಮುದ್ರಾದುದ್ಭೂತೈರ್ಮಥಿಷ್ಯಾಮಿ ಶರೋರ್ಮಿಭಿಃ ॥ ೧೪

ವ್ಯಾಕೋಶಪದ್ಮವಕ್ತ್ರಾಣಿ ಪದ್ಮಕೇಸರವರ್ಚಸಾಮ್ ।
ಅದ್ಯ ಯೂಥತಟಾಕಾನಿ ಗಜವತ್ ಪ್ರಮಥಾಮ್ಯಹಮ್ ॥ ೧೫

ಸಶರೈರದ್ಯ ವದನೈಃ ಸಂಖ್ಯೇ ವಾನರಯೂಥಪಾಃ ।
ಮಂಡಯಿಷ್ಯಂತಿ ವಸುಧಾಂ ಸನಾಲೈರಿವ ಪಂಕಜೈಃ ॥ ೧೬

ಅದ್ಯ ಯುದ್ಧಪ್ರಚಂಡಾನಾಂ ಹರೀಣಾಂ ದ್ರುಮಯೋಧಿನಾಮ್ ।
ಮುಕ್ತೇನೈಕೇಷುಣಾ ಯುದ್ಧೇ ಭೇತ್ಸ್ಯಾಮಿ ಚ ಶತಂ ಶತಮ್ ॥

ಹತೋ ಭರ್ತಾ ಹತೋ ಭ್ರಾತಾ ಯಾಸಾಂ ಚ ತನಯಾ ಹತಾಃ ।
ವಧೇನಾದ್ಯ ರಿಪೋಸ್ತಾಸಾಂ ಕರೋಮ್ಯಸ್ರಪ್ರಮಾರ್ಜನಮ್ ॥ ೧೮

---

ಯೋಧರೆ, ಈ ದಿನ ನನ್ನ ರಥವೆಂಬ ಝಂಝಾವಾತವು ರಣಾಂಗಣದಲ್ಲಿ ಬಿರುಸಿನಿಂದ ಬೀಸುವುದು! ನನ್ನ ಧನುಸ್ಸೆಂಬ ಸಮುದ್ರದಿಂದ ಶರಗಳೆಂಬ ಅಲೆಗಳು ಎದ್ದೆದ್ದು ಹೋಗಿ, ವಾನರಸೇನೆಯನ್ನು ಕೊಚ್ಚಿಕೊಂಡುಹೋಗುವುವು! (೧೩-೧೪). ಈ ದಿನ ನಾನು, ಕಮಲಕೇಸರದಂತೆ ಕೆಂಬಣ್ಣದ ಕೋತಿಗಳ ಅರಳಿದ ಮುಖಪದ್ಮಗಳಿರುವ ಕಪಿಸೇನೆಯೆಂಬ ಕೊಳವನ್ನು ಮತ್ತಮಾತಂಗದಂತೆ ಪ್ರವೇಶಿಸಿ, ಕಡೆದು ಈಡಾಡುವೆನು! (೧೫). ಈ ದಿನ, ವಾನರಯೋಧರು ನನ್ನ ಶರಪ್ರಹಾರಗಳಿಂದ ಸತ್ತು ನೆಲದಮೇಲೆ ಉರುಳಿರಲು, ಬಾಣಗಳಿಂದ ಚುಚ್ಚಲ್ಪಟ್ಟ ಅವರ ಮುಖಗಳು ನಾಳಗಳಿಂದ ಕೂಡಿದ ತಾವರೆಗಳಂತೆ ರಣಭೂಮಿಯನ್ನು ಅಲಂಕರಿಸುವುವು! (೧೬). ಈ ದಿನ, ವೃಕ್ಷಗಳಿಂದ ಹೋರಾಡುವ ಸಮರಪ್ರಚಂಡರೆನಿಸಿದ ವಾನರರ ನೂರು ನೂರು ಮಂದಿಯನ್ನು ಒಂದೊಂದೇ ಸರಳಿನಿಂದ ತರಿತರಿದುರುಳಿಸುವೆನು! (೧೭). 'ಓ! ನನ್ನ ಪತಿ ಹತನಾದನು, ನನ್ನ ಸೋದರನು ಸತ್ತನು, ನನ್ನ ಮಕ್ಕಳು ಮಡಿದರು!' ಎಂದು ಯಾವ ಯಾವ ರಾಕ್ಷಸ ಸ್ತ್ರೀಯರು ಕಣ್ಣೀರು ಹರಿಸುತ್ತಿರುವರೋ, ಈ ದಿನ ವೈರಿಯನ್ನು ವಧಿಸಿ

ಅದ್ಯ ಮದ್ಬಾಣನಿರ್ಭಿನ್ನೈಃ ಪ್ರಕೀರ್ಣೈರ್ಗತಚೇತನೈಃ ।
ಕರೋಮಿ ವಾನರೈರ್ಯುದ್ಧೇ ಯತ್ನಾವೇಕ್ಷ್ಯತಲಾಂ ಮಹೀಮ್ ॥

ಅದ್ಯ ಗೋಮಾಯವೋ ಗೃಧ್ರಾ ಯೇ ಚ ಮಾಂಸಾಶಿನೋಽಪರೇ ।
ಸರ್ವಾಂಸ್ತಾಂಸ್ತರ್ಪಯಿಷ್ಯಾಮಿ ಶತ್ರುಮಾಂಸೈಃ ಶರಾರ್ಪಿತೈಃ ॥ ೨೦

ಕಲ್ಪ್ಯತಾಂ ಮೇ ರಥಃ ಶೀಘ್ರಂ ಕ್ಷಿಪ್ರಮಾನೀಯತಾಂ ಧನುಃ ।
ಅನುಪ್ರಯಾಂತು ಮಾಂ ಸರ್ವೇ ಯೇಽತ್ರಶಿಷ್ಟಾ ನಿಶಾಚರಾಃ ॥ ೨೧

ತಸ್ಯ ತದ್ವಚನಂ ಶ್ರುತ್ವಾ ಮಹಾಪಾರ್ಶ್ವೋಽಬ್ರವೀದ್ವಚಃ ।
ಬಲಾಧ್ಯಕ್ಷಾನ್ ಸ್ಥಿತಾಂಸ್ತತ್ರ ಬಲಂ ಸಂತ್ವರ್ಯತಾಮಿತಿ ॥ ೨೨

ಬಲಾಧ್ಯಕ್ಷಾಸ್ತು ಸಂರಬ್ಧಾ ರಾಕ್ಷಸಾಂಸ್ತಾನ್ ಗೃಹಾದ್ಗೃಹಾತ್ ।
ಚೋದಯಂತಃ ಪರಿಯಯುರ್ಲಂಕಾಂ ಲಘುಪರಾಕ್ರಮಾಃ ॥ ೨೩

ತತೋ ಮುಹೂರ್ತಾನ್ನಿಷ್ಪೇತೂ ರಾಕ್ಷಸಾ ಭೀಮದರ್ಶನಾಃ ।
ನರ್ದಂತೋ ಭೀಮವದನಾ ನಾನಾಪ್ರಹರಣೈರ್ಭುಜೈಃ ॥ ೨೪

---

ಅವರೆಲ್ಲರ ಕಣ್ಣೀರನ್ನು ಒರೆಸುವೆನು! (೧೮). ಈ ದಿನ, ನನ್ನ ಶರಗಳಿಂದ ನಿರ್ಭಿನ್ನಗಾತ್ರರಾಗಿ ಸತ್ತೊರಗುವ ವಾನರರ ಹಿಂಡಿನಿಂದ, ರಣರಂಗದಲ್ಲಿ ನೆಲವೇ ಕಣ್ಣಿಗೆ ಕಾಣದಂತೆ ಮಾಡುವೆನು. ಈ ದಿನ, ನನ್ನ ಕೂರ್ಗಣೆಗಳಿಂದ ಶತ್ರುಗಳ ಮಾಂಸರಾಶಿಯನ್ನು ಚೆಲ್ಲಿ ಚೆಲ್ಲಿ, ನರಿ ಹದ್ದು ಮುಂತಾದ ಮಾಂಸಭಕ್ಷಿಗಳಾದ ಪ್ರಾಣಿಗಳೆಲ್ಲವೂ ತಿಂದು ತೇಗುವಂತೆ ಉಣಬಡಿಸುವೆನು! (೧೯-೨೦). ಎಲೈ ಸಚಿವರೆ, ನನ್ನ ರಥವನ್ನು ಬೇಗನೆ ಸಜ್ಜುಗೊಳಿಸಿರಿ. ನನ್ನ ಧನುಸ್ಸನ್ನು ತಂದಿರಿಸಿರಿ. ಲಂಕೆಯಲ್ಲಿರುವ ಸಮಸ್ತ ರಾಕ್ಷಸರೂ ನನ್ನನ್ನು ಹಿಂಬಾಲಿಸಲಿ" ಎಂದು ಆರ್ಭಟಿಸಿದನು (೨೧). ಆತನ ಆಜ್ಞೆಯಂತೆ ಮಹಾಪಾರ್ಶ್ವನು ಅಲ್ಲಿದ್ದ ಬಲಾಧ್ಯಕ್ಷರಿಗೆ ಸಕಲಬಲವನ್ನೂ ತ್ವರೆಗೊಳಿಸಬೇಕೆಂದು ಆದೇಶಮಾಡಿದನು. ಆಗ ಬಲಾಧ್ಯಕ್ಷರು ಸಂವಿಗ್ನರಾಗಿ ಬೇಗಬೇಗನೆ ಹೊರಟು, ಲಂಕೆಯಲ್ಲಿದ್ದ ರಾಕ್ಷಸಯೋಧರೆಲ್ಲರೂ ಯುದ್ಧಕ್ಕೆ ಹೊರಡಬೇಕೆಂದು ಮನೆಮನೆಗೂ ತಿಳಿಸಿದರು (೨೨-೨೩). ಸ್ವಲ್ಪಕಾಲದಲ್ಲಿಯೇ ವಿಕೃತವದನರೂ ಭೀಷಣಾಕೃತಿಗಳೂ ಆದ ರಾಕ್ಷಸಭಟರು ವಿವಿಧಾಯುಧಗಳನ್ನು ಕೈಗಳಲ್ಲಿ ಹಿಡಿದು ಗರ್ಜಿಸುತ್ತ ಹೊರಟರು

ಅಸಿಭಿಃ ಪಟ್ಟಸೈಃ ಶೂಲೈರ್ಗದಾಭಿರ್ಮುಸಲೈರ್ಹಲೈಃ ।
ಶಕ್ತಿಭಿಸ್ತೀಕ್ಷ್ಣಧಾರಾಭಿರ್ಮಹದ್ಭಿಃ ಕೂಟಮುದ್ಗರೈಃ ॥ ೨೫

ಯಷ್ಟಿಭಿರ್ವಿಮಲೈಶ್ಚಕ್ರೈರ್ನಿಶಿತೈಶ್ಚ ಪರಶ್ವಧೈಃ ।
ಭಿಂಡಿಪಾಲೈಃ ಶತಘ್ನೀಭಿರನ್ಯೈಶ್ಚಾಪಿ ವರಾಯುಧೈಃ ॥ ೨೬

ಅಥಾನಯನ್ ಬಲಾಧ್ಯಕ್ಷಾಃ ಸತ್ವರಾ ರಾವಣಾಜ್ಞಯಾ ।
ರಥಾನಾಂ ನಿಯುತಂ ಸಾಗ್ರಂ ನಾಗಾನಾಂ ನಿಯುತತ್ರಯಮ್ ॥ ೨೭

ಅಶ್ವಾನಾಂ ಷಷ್ಟಿಕೋಟ್ಯಸ್ತು ಖರೋಷ್ಟ್ರಾಣಾಂ ತಥೈವ ಚ ।
ಪದಾತಯಸ್ತ್ವಸಂಖ್ಯಾತಾ ಜಗ್ಮುಸ್ತೇ ರಾಜಶಾಸನಾತ್ ॥ ೨೮

ಬಲಾಧ್ಯಕ್ಷಾಸ್ತು ಸಂಸ್ಥಾಪ್ಯ ರಾಜ್ಞಃ ಸೇನಾಂ ಪುರಃಸ್ಥಿತಾಃ ।
ಏತಸ್ಮಿನ್ನಂತರೇ ಸೂತಃ ಸ್ಥಾಪಯಾಮಾಸ ತಂ ರಥಮ್ ॥ ೨೯

ದಿವ್ಯಸ್ರಗ್ವಸ್ತ್ರಸಂಪನ್ನಂ ನಾನಾಲಂಕಾರಭೂಷಿತಮ್ ।
ದೀರ್ಘವಾಜಿಸಮಾಯುಕ್ತಂ ದಿವ್ಯಾಲಂಕಾರಭೂಷಣಮ್ ॥ ೩೦

---

(೨೪). ಕತ್ತಿ, ಪಟ್ಟಸ, ಶೂಲ, ಗದೆ, ಮುಸಲ, ಹಲ, ನಿಶಿತಧಾರೆಯುಳ್ಳ ಶಕ್ತಿ, ದೊಡ್ಡದೊಡ್ಡ ಕೂಟಮುದ್ಗರ, ಯಷ್ಟಿ, ಮಿರುಮಿರುಗುವ ಚಕ್ರ, ಹರಿತವಾದ ಪರಶು, ಭಿಂಡಿಪಾಲ, ಶತಘ್ನಿ ಮುಂತಾದ ಬಗೆಬಗೆಯ ತೀಕ್ಷ್ಣಾಯುಧಗಳನ್ನು ಅವರು ಧರಿಸಿದ್ದರು (೨೫–೨೬). ರಾವಣನ ಆಜ್ಞೆಯಂತೆ ಶೀಘ್ರವಾಗಿ ಸೇನಾಧ್ಯಕ್ಷರು ಸಮಸ್ತ ಸೇನೆಯನ್ನೂ ಸಜ್ಜುಗೊಳಿಸಿದರು. (ಹತ್ತು ಲಕ್ಷಕ್ಕಿಂತ ಹೆಚ್ಚು ರಥಗಳೂ ಮೂವತ್ತು ಲಕ್ಷ ಆನೆಗಳೂ ಅರುವತ್ತು ಕೋಟಿ ಕುದುರೆಗಳೂ ಅಷ್ಟೇ ಸಂಖ್ಯೆಯಲ್ಲಿ ಹೇಸರಗತ್ತೆಗಳೂ ಒಂಟೆಗಳೂ ಬಂದು ಸೇರಿದವು. ಕಾಲಾಳುಗಳ ಸಂಖ್ಯೆ ಅಸಂಖ್ಯಾತವಾಗಿತ್ತು. ಈ ಸೇನೆಯೆಲ್ಲವೂ ರಾಜಾಜ್ಞೆಯಂತೆ ಯುದ್ಧಾಭಿಮುಖವಾಗಿ ತೆರಳಿತು (೨೭–೨೮). ಅಷ್ಟುಹೊತ್ತಿಗೆ ಸಾರಥಿಯು ದಿವ್ಯಮಾಲೆಗಳಿಂದಲೂ ವಸ್ತ್ರಾಲಂಕಾರಗಳಿಂದಲೂ ಭೂಷಿತವಾದ ರಾವಣನ ರಥವನ್ನು ತಂದು ನಿಲ್ಲಿಸಿದನು. ಆ ರಥಕ್ಕೆ ಬೃಹದಾಕಾರದ ದಿವ್ಯಾಶ್ವಗಳನ್ನು ಹೂಡಲಾಗಿತ್ತು.

ನಾನಾಯುಧಸಮಾಕೀರ್ಣಂ ಕಿಂಕಿಣೀಜಾಲಮಂಡಿತಮ್ ।
ನಾನಾರತ್ನಪರಿಕ್ಷಿಪ್ತಂ ರತ್ನಸ್ತಂಭೈರ್ವಿರಾಜಿತಮ್ ॥ ೩೧

ಜಾಂಬೂನದಮಯೈಶ್ಚೈವ ಸಹಸ್ರಕಲಶೈರ್ಯುತಮ್ ।
ತಂ ದೃಷ್ಟ್ವಾ ರಾಕ್ಷಸಾಃ ಸರ್ವೇ ವಿಸ್ಮಯಂ ಪರಮಂ ಯಯುಃ ॥ ೩೨

ತಂ ದೃಷ್ಟ್ವಾ ಸಹಸೋತ್ಥಾಯ ರಾವಣೋ ರಾಕ್ಷಸೇಶ್ವರಃ ।
ಕೋಟಿಸೂರ್ಯಪ್ರತೀಕಾಶಂ ಜ್ವಲಂತಮಿವ ಪಾವಕಮ್ ॥ ೩೩

ದ್ರುತಂ ಸೂತಸಮಾಯುಕ್ತಂ ಯುಕ್ತಾಷ್ಟತುರಗಂ ರಥಮ್ ।
ಆರುರೋಹ ರಥಂ ಭೀಮೋ ದೀಪ್ಯಮಾನಂ ಸ್ವತೇಜಸಾ ॥ ೩೪

ತತಃ ಪ್ರಯಾತಃ ಸಹಸಾ ರಾಕ್ಷಸೈರ್ಬಹುಭಿರ್ವೃತಃ ।
ರಾವಣಃ ಸತ್ತ್ವಗಾಂಭೀರ್ಯಾದ್ದಾರಯನ್ನಿವ ಮೇದಿನೀಮ್ ॥ ೩೫

ರಾವಣೇನಾಭ್ಯನುಜ್ಞಾತೌ ಮಹಾಪಾರ್ಶ್ವಮಹೋದರೌ ।
ವಿರೂಪಾಕ್ಷಶ್ಚ ದುರ್ಧರ್ಷೋ ರಥಾನಾರುರುಹುಸ್ತದಾ ॥ ೩೬

---

ರಥದಲ್ಲಿ ವಿವಿಧಾಯುಧಗಳನ್ನು ಹೇರಲಾಗಿತ್ತು. ಕಿರುಗಂಟೆಗಳಿಂದ ಅದು ಭೂಷಿತವಾಗಿತ್ತು. ರತ್ನಸ್ತಂಭಗಳಿಂದ ವಿರಾಜಿಸುತ್ತಿತ್ತು (೨೯-೩೧). ಚಿನ್ನದ ಸಹಸ್ರಕಲಶಗಳಿಂದ ಅಲಂಕೃತವಾಗಿತ್ತು. ಆ ದಿವ್ಯರಥವನ್ನು ನೋಡಿ ಅಲ್ಲಿದ್ದ ರಾಕ್ಷಸರು ಆಶ್ಚರ್ಯಚಕಿತರಾದರು. ಕೋಟಿಸೂರ್ಯರಂತೆ ಜಗ್ಗನ್ನುವ, ಅಗ್ನಿಯಂತೆ ಬೆಳಗುವ–ಆ ರಥವನ್ನು ಕಂಡೊಡನೆ ರಾಕ್ಷಸೇಶ್ವರನು ಧಿಗ್ಗನೆ ಎದ್ದುನಿಂತನು)* (೩೨-೩೩). ಸಾರಥಿಯು ಮಂಡಿಸಿದ್ದ ಆ ರಥಕ್ಕೆ ಎಂಟು ಅಶ್ವಗಳನ್ನು ಹೂಡಲಾಗಿತ್ತು. ತೇಜಸ್ಸಿನಿಂದ ಬೆಳಗುತ್ತಿದ್ದ ಆ ಮಹಾರಥವನ್ನು ರಾವಣನು ಹತ್ತಿದನು. ಅನಂತರ ಅಪರಿಮಿತ ರಾಕ್ಷಸಪರಿವಾರದೊಡನೆ ರಾವಣನು ತನ್ನ ತೇಜೋಮಹಿಮೆಯಿಂದ ಮೇದಿನಿಯನ್ನೇ ಸೀಳುವನೋ ಎಂಬಂತೆ ದರ್ಪದಿಂದ ರಣರಂಗಕ್ಕೆ ಪ್ರಯಾಣಮಾಡಿದನು (೩೪-೩೫). ರಾವಣನ ಅನುಜ್ಞೆಯನ್ನು ಪಡೆದು

---

* ೨೭ನೆಯ ಶ್ಲೋಕದ ಉತ್ತರಾರ್ಧದಿಂದ ೩೩ನೆಯ ಶ್ಲೋಕ ಪೂರ್ತಿಯಾಗಿ ಅನೇಕ ಪ್ರತಿಗಳಲ್ಲಿ ದೊರೆಯುವುದಿಲ್ಲ. ವ್ಯಾಖ್ಯಾನಕಾರರು ಅರ್ಥವನ್ನೂ ಬರೆದಿಲ್ಲ. ಆದ್ದರಿಂದ ಇವು ಪ್ರಕ್ಷಿಪ್ತವಾಗಿರಬೇಕು.

ತೇ ತು ಹೃಷ್ಟಾ ವಿನರ್ದಂತೋ ಭಿಂದಂತ ಇವ ಮೇದಿನೀಮ್ ।
ನಾದಂ ಘೋರಂ ವಿಮುಂಚಂತೋ ನಿರ್ಯಯುರ್ಜಯಕಾಂಕ್ಷಿಣಃ ॥

ತತೋ ಯುದ್ಧಾಯ ತೇಜಸ್ವೀ ರಕ್ಷೋಗಣಬಲೈರ್ವೃತಃ ।
ನಿರ್ಯಯಾವುದ್ಯತಧನುಃ ಕಾಲಾಂತಕಯಮೋಪಮಃ ॥ ೩೮

ತತಃ ಪ್ರಜವನಾಶ್ವೇನ ರಥೇನ ಸ ಮಹಾರಥಃ ।
ದ್ವಾರೇಣ ನಿರ್ಯಯೌ ತೇನ ಯತ್ರ ತೌ ರಾಮಲಕ್ಷ್ಮಣೌ ॥ ೩೯

ತತೋ ನಷ್ಟಪ್ರಭಃ ಸೂರ್ಯೋ ದಿಶಶ್ಚ ತಿಮಿರಾವೃತಾಃ ।
ದ್ವಿಜಾಶ್ಚ ನೇದುರ್ಘೋರಾಶ್ಚ ಸಂಚಚಾಲೇವ ಮೇದಿನೀ ॥ ೪೦

ವವರ್ಷ ರುಧಿರಂ ದೇವಶ್ಚಸ್ಖಲುಸ್ತುರಗಾಃ ಪಥಿ ।
ಧ್ವಜಾಗ್ರೇ ನ್ಯಪತದ್ಗೃಧ್ರೋ ವಿನೇದುಶ್ಚಾಶಿವಂ ಶಿವಾಃ ॥ ೪೧

ನಯನಂ ಚಾಸ್ಫುರದ್ವಾಮಂ ಸವ್ಯೋ ಬಾಹುರಕಂಪತ ।
ವಿವರ್ಣಂ ವದನಂ ಚಾಸೀತ್ ಕಿಂಚಿದಭ್ರಶ್ಯತ ಸ್ವರಃ ॥ ೪೨

---

ಮಹಾಪಾರ್ಶ್ವ, ಮಹೋದರ ಮತ್ತು ವಿರೂಪಾಕ್ಷ ಎಂಬ ಸಚಿವರೂ ರಥಗಳನ್ನೇರಿದರು. ಅವರೆಲ್ಲರೂ ಉತ್ಸಾಹದಿಂದ ಉಬ್ಬಿ ಅಬ್ಬರಿಸುತ್ತ, ಭೂಮಂಡಲವನ್ನು ಭೇದಿಸುವರೋ ಎಂಬಂತೆ ಘೋರವಾಗಿ ಗರ್ಜಿಸುತ್ತ, ಜಯಾಕಾಂಕ್ಷೆಯಿಂದ ಪ್ರಯಾಣಮಾಡಿದರು (೩೬-೩೭). ಪ್ರಳಯಕಾಲದಲ್ಲಿ ಸರ್ವನಾಶಕ್ಕಾಗಿ ಹೊರಟ ಯಮನಂತೆ ಅದ್ಭುತ ತೇಜೋವಿಶಿಷ್ಟನಾದ ರಾಕ್ಷಸೇಶ್ವರನು, ರಾಕ್ಷಸಯೋಧರಿಂದ ಪರಿವೃತನಾಗಿ ಧನುಸ್ಸನ್ನೆತ್ತಿ ಹಿಡಿದು ಸಂಗ್ರಾಮಭೂಮಿಗೆ ನಡೆದನು. ಆ ಮಹಾರಥನು ಶೀಘ್ರಗಾಮಿಗಳಾದ ಅಶ್ವಗಳನ್ನು ಹೂಡಿದ ರಥವನ್ನು ದೌಡಾಯಿಸುತ್ತ, ಶ್ರೀರಾಮಲಕ್ಷ್ಮಣರಿದ್ದ ಉತ್ತರದ್ವಾರದ ಮಾರ್ಗವಾಗಿ ತೆರಳಿದನು (೩೮-೩೯). ಆ ಸಮಯದಲ್ಲಿ ಸೂರ್ಯನ ಪ್ರಭೆ ಮಾಸಿತು. ದಿಕ್ಕುಗಳು ಮಲಿನವಾದವು. ಗೃಧ್ರಾದಿ ಘೋರಪಕ್ಷಿಗಳು ಕೂಗಿದವು. ಭೂಮಿಯು ನಡುಗಿದಂತಾಯಿತು. ರಕ್ತದ ಮಳೆ ಸುರಿಯಿತು. ಕುದುರೆಗಳು ಎಡವಿದವು. ಧ್ವಜದಮೇಲೆ ಒಂದು ರಣಹದ್ದು ಬಂದಿಳಿಯಿತು. ನರಿಗಳು ಅಪಸ್ವರದಲ್ಲಿ ಊಳಿದವು! (೪೦-೪೧). ರಾವಣನ ಎಡಗಣ್ಣು ಅದುರಿತು; ಎಡದೋಳು ಹಾರಿತು. ಅವನ ಮುಖ

ತತೋ ನಿಷ್ಪತತೋ ಯುದ್ಧೇ ದಶಗ್ರೀವಸ್ಯ ರಕ್ಷಸಃ ।
ರಣೇ ನಿಧನಶಂಸೀನಿ ರೂಪಾಣ್ಯೇತಾನಿ ಜಜ್ಞಿರೇ ॥ ೪೩

ಅಂತರಿಕ್ಷಾತ್ ಪಪಾತೋಲ್ಕಾ ನಿರ್ಘಾತಸಮನಿಃಸ್ವನಾ ।
ವಿನೇದುರಶಿವಾ ಗೃಧ್ರಾ ವಾಯಸೈರನುನಾದಿತಾಃ ॥ ೪೪

ಏತಾನಚಿಂತಯನ್ ಘೋರಾನುತ್ಪಾತಾನ್ ಸಮುಪಸ್ಥಿತಾನ್ ।
ನಿರ್ಯಯೌ ರಾವಣೋ ಮೋಹಾದ್ವಧಾರ್ಥೀ ಕಾಲಚೋದಿತಃ ॥

ತೇಷಾಂ ತು ರಥಘೋಷೇಣ ರಾಕ್ಷಸಾನಾಂ ಮಹಾತ್ಮನಾಮ್ ।
ವಾನರಾಣಾಮಪಿ ಚಮೂರ್ಯುದ್ಧಾಯೈವಾಭ್ಯವರ್ತತ ॥ ೪೬

ತೇಷಾಂ ತು ತುಮುಲಂ ಯುದ್ಧಂ ಬಭೂವ ಕಪಿರಕ್ಷಸಾಮ್ ।
ಅನ್ಯೋನ್ಯಮಾಹ್ವಯಾನಾನಾಂ ಕ್ರುದ್ಧಾನಾಂ ಜಯಮಿಚ್ಛತಾಮ್

ತತಃ ಕ್ರುದ್ಧೋ ದಶಗ್ರೀವಃ ಶರೈಃ ಕಾಂಚನಭೂಷಣೈಃ ।
ವಾನರಾಣಾಮನೀಕೇಷು ಚಕಾರ ಕದನಂ ಮಹತ್ ॥ ೪೮

---

ಬಣ್ಣಗೆಟ್ಟಿತು; ಧ್ವನಿಯು ಕುಗ್ಗಿತು. ಹೀಗೆ ಯುದ್ಧಯಾತ್ರೆಗೆ ಹೊರಟಿದ್ದ ದಶಗ್ರೀವನಿಗೆ ನಿಧನಸೂಚಕವಾದ ಅಪಶಕುನಗಳು ತಲೆದೋರಿದವು (೪೨-೪೩). ಸಿಡಿಲುಹೊಡೆದಂತೆ ಉಲ್ಕೆಯು ಅಂತರಿಕ್ಷದಿಂದ ಬಿದ್ದಿತು. ಅಮಂಗಳಕರವಾಗಿ ಹದ್ದುಗಳು ಕೂಗಿದವು. ಅವುಗಳಿಗೆ ದನಿಗೂಡಿಸಿ ಕಾಗೆಗಳು ಕಿರ್ರೆಂದವು. ಆದರೆ ಭೀಕರವಾದ ಆ ಉತ್ಪಾತಗಳನ್ನು ಲೆಕ್ಕಿಸದೆ ರಾವಣನು ಮುಂದೆ ಸಾಗಿದನು. ಅಜ್ಞಾನವು ಅವನಿಗೆ ಕವಿದಿತ್ತು. ಸಾವು ಕಾದಿತ್ತು. ವಿನಾಶಕಾಲವು ತಳ್ಳುತ್ತಿತ್ತು (೪೪-೪೫). ಧೀರರಾದ ರಾಕ್ಷಸರ ರಥಘೋಷವು ಕೇಳಿದೊಡನೆ ವಾನರಸೇನೆಯು ಯುದ್ಧಕ್ಕೆ ಸಜ್ಜಾಗಿ ಮುಂದೆ ನುಗ್ಗಿತು! ಕಪಿರಾಕ್ಷಸರಿಗೆ ಕೈಕೈ ಮಿಲಾಯಿಸಿ ತುಮುಲಯುದ್ಧವು ತೊಡಗಿತು! ಜಯಾಪೇಕ್ಷಿಗಳಾದ ಆ ಯೋಧರು ಕ್ರುದ್ಧರಾಗಿ ವೀರಾಹ್ವಾನದಿಂದ ಒಬ್ಬರನ್ನೊಬ್ಬರು ಕರೆಯುತ್ತ ಹೋರಾಡಿದರು (೪೬-೪೭). ರೋಷೋದ್ರಿಕ್ತನಾದ ದಶಗ್ರೀವನು ಕಾಂಚನಭೂಷಿತ ಶರಗಳಿಂದ, ವಾನರ

ನಿಕೃತ್ತಶಿರಸಃ ಕೇಚಿದ್ರಾವಣೇನ ವಲೀಮುಖಾಃ ।
ಕೇಚಿದ್ವಿಚ್ಛಿನ್ನಹೃದಯಾಃ ಕೇಚಿಚ್ಛ್ರೋತ್ರವಿವರ್ಜಿತಾಃ ॥ ೪೯

ನಿರುಚ್ಛ್ವಾಸಾ ಹತಾಃ ಕೇಚಿತ್ ಕೇಚಿತ್ ಪಾರ್ಶ್ವೇಷು ದಾರಿತಾಃ ।
ಕೇಚಿದ್ವಿಭಿನ್ನಶಿರಸಃ ಕೇಚಿಚ್ಚಕ್ಷುರ್ವಿವರ್ಜಿತಾಃ ॥ ೫೦

ದಶಾನನಃ ಕ್ರೋಧವಿವೃತ್ತನೇತ್ರೋ
ಯತೋ ಯತೋಽಭ್ಯೇತಿ ರಥೇನ ಸಂಖ್ಯೇ ।
ತತಸ್ತತಸ್ತಸ್ಯ ಶರಪ್ರವೇಗಂ
ಸೋಢುಂ ನ ಶೇಕುರ್ಹರಿಪುಂಗವಾಸ್ತೇ ॥ ೫೧

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಣ್ಣವತಿತಮಃ ಸರ್ಗಃ



ಸೇನೆಯಲ್ಲಿ ಭೀಕರವಾದ ಕದನವನ್ನಾರಂಭಿಸಿದನು. ರಾವಣನ ಶರಪ್ರಹಾರಗಳಿಂದ ಕೆಲವು ಕಪಿಯೋಧರ ತಲೆಗಳು ತರಿದುಬಿದ್ದವು. ಕೆಲವರ ಎದೆಗಳು ಸೀಳಿದವು. ಕೆಲವರ ಕಿವಿಗಳು ಹರಿದವು! (೪೮-೪೯). ಕೆಲವು ವಾನರರು ಉಸಿರುಕಟ್ಟಿ ಸತ್ತರು. ಕೆಲವರ ಪಕ್ಕೆಗಳು ಸೀಳಿಹೋದವು. ಕೆಲವರ ತಲೆಗಳು ಒಡೆದವು. ಕೆಲವರ ಕಣ್ಣುಗಳು ಉದುರಿದವು! ರಾವಣನು ರೋಷದಿಂದ ನೇತ್ರಗಳನ್ನು ಹಿಗ್ಗಿಸಿ ದುರದುರನೆ ನೋಡುತ್ತ ಎತ್ತ ಎತ್ತ ರಣರಂಗದಲ್ಲಿ ನುಗ್ಗುತ್ತಿದ್ದನೋ, ಅತ್ತ ಅತ್ತ ಕಪಿಯೋಧರು ಅವನ ಶರವೇಗವನ್ನು ತಡೆದುಕೊಳ್ಳಲಾರದೆ ಹಿಂಜರಿದರು (೫೦-೫೧).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತಾರನೆಯ ಸರ್ಗ



## ಸಪ್ತನವತಿತಮಃ ಸರ್ಗಃ

### ವಿರೂಪಾಕ್ಷವಧಃ

ತಥಾ ತೈಃ ಕೃತ್ತಗಾತ್ರೈಸ್ತು ದಶಗ್ರೀವೇಣ ಮಾರ್ಗಣೈಃ ।
ಬಭೂವ ವಸುಧಾ ತತ್ರ ಪ್ರಕೀರ್ಣಾ ಹರಿಭಿಸ್ತದಾ ॥ ೧

ರಾವಣಸ್ಯಾಪ್ರಸಹ್ಯಂ ತಂ ಶರಸಂಪಾತಮೇಕತಃ ।
ನ ಶೇಕುಃ ಸಹಿತುಂ ದೀಪ್ತಂ ಪತಂಗಾ ಜ್ವಲನಂ ಯಥಾ ॥ ೨

ತೇಽರ್ದಿತಾ ನಿಶಿತೈರ್ಬಾಣೈಃ ಕ್ರೋಶಂತೋ ವಿಪ್ರದುದ್ರುವುಃ ।
ಪಾವಕಾರ್ಚಿಃಸಮಾವಿಷ್ಟಾ ದಹ್ಯಮಾನಾ ಯಥಾ ಗಜಾಃ ॥ ೩

ಪ್ಲವಂಗಾನಾಮನೀಕಾನಿ ಮಹಾಭ್ರಾಣೀವ ಮಾರುತಃ ।
ಸ ಯಯೌ ಸಮರೇ ತಸ್ಮಿನ್ ವಿಧಮನ್ ರಾವಣಃ ಶರೈಃ ॥ ೪

ಕದನಂ ತರಸಾ ಕೃತ್ವಾ ರಾಕ್ಷಸೇಂದ್ರೋ ವನೌಕಸಾಮ್ ।
ಆಸಸಾದ ತತೋ ಯುದ್ಧೇ ರಾಘವಂ ತ್ವರಿತಸ್ತದಾ ॥ ೫

## ಸರ್ಗ ೯೭

### ಸುಗ್ರೀವನಿಂದ ವಿರೂಪಾಕ್ಷನ ವಧೆ.

ದಶಗ್ರೀವನ ಕೂರ್ಗಣೆಗಳಿಂದ ಕತ್ತರಿಸಲ್ಪಟ್ಟು ತುಂಡುತುಂಡಾದ ವಾನರಯೋಧರಿಂದ ರಣರಂಗವು ತುಂಬಿಹೋಯಿತು. ಅವನ ಶರಗಳ ಬಿರುಸಿನ ಹೊಡೆತವನ್ನು ಸಹಿಸಿಕೊಳ್ಳಲು ರಣಭೂಮಿಯ ಯಾವ ಪ್ರದೇಶದಲ್ಲಿಯೂ ಕಪಿಯೋಧರಿಗೆ ಸಾಧ್ಯವಾಗಲಿಲ್ಲ. ಉರಿಯುವ ಬೆಂಕಿಯ ಜ್ವಾಲೆಯನ್ನು ದೀಪದಹುಳುಗಳು ಎದುರಿಸಿದಂತಾಯಿತು (೧-೨). ರಾವಣನ ನಿಶಿತಾಸ್ತ್ರಗಳಿಂದ ನೊಂದ ವಾನರರು ಅರಚಿಕೊಳ್ಳುತ್ತ ದಿಕ್ಕುದಿಕ್ಕಿಗೆ ಓಡಿದರು. ಕಾಳ್ಗಿಚ್ಚಿನ ಬೇಗೆಯಲ್ಲಿ ಸಿಕ್ಕಿ ಸುಟ್ಟುಹೋಗುತ್ತಿರುವ ಆನೆಗಳಂತೆ ಪಲಾಯನಮಾಡಿದರು. ಬಿರುಗಾಳಿಯು ಕಾರ್ಮೋಡಗಳನ್ನು ಚದರಿಸುತ್ತ ರಭಸದಿಂದ ಬೀಸುವಂತೆ, ರಾವಣನು ತನ್ನ ಸರಳುಗಳಿಂದ ಕಪಿಸೇನೆಗಳನ್ನು ಹೊಡೆದು ಧೂಳೆಬ್ಬಿಸುತ್ತ ಯುದ್ಧಭೂಮಿಯಲ್ಲಿ ಮುನ್ನುಗ್ಗಿದನು (೩-೪). ಆ ರಾಕ್ಷಸೇಂದ್ರನು ಕಪಿಯೋಧರನ್ನು ವಿಧ್ವಂಸ

ಸುಗ್ರೀವಸ್ತಾನ್ ಕಪೀನ್ ದೃಷ್ಟ್ವಾ ಭಗ್ನಾನ್ ವಿದ್ರವತೋ ರಣೇ ।
ಗುಲ್ಮೇ ಸುಷೇಣಂ ನಿಕ್ಷಿಪ್ಯ ಚಕ್ರೇ ಯುದ್ಧೇಽದ್ಭುತಂ ಮನಃ ॥ ೬

ಆತ್ಮನಃ ಸದೃಶಂ ವೀರಃ ಸ ತಂ ನಿಕ್ಷಿಪ್ಯ ವಾನರಮ್ ।
ಸುಗ್ರೀವೋಽಭಿಮುಖಃ ಶತ್ರುಂ ಪ್ರತಸ್ಥೇ ಪಾದಪಾಯುಧಃ ॥ ೭

ಪಾರ್ಶ್ವತಃ ಪೃಷ್ಠತಶ್ಚಾಸ್ಯ ಸರ್ವೇ ಯೂಥಾಧಿಪಾಃ ಸ್ವಯಮ್ ।
ಅನುಜಹ್ರುರ್ಮಹಾಶೈಲಾನ್ ವಿವಿಧಾಂಶ್ಚ ಮಹಾದ್ರುಮಾನ್ ॥ ೮

ಸ ನರ್ದನ್ ಯುಧಿ ಸುಗ್ರೀವಃ ಸ್ವರೇಣ ಮಹತಾ ಮಹಾನ್ ।
ಪಾತಯನ್ ವಿವಿಧಾಂಶ್ಚಾನ್ಯಾನ್ ಜಗಾಮೋತ್ತಮರಾಕ್ಷಸಾನ್ ॥ ೯

ಮಮಂಥ ಚ ಮಹಾಕಾಯೋ ರಾಕ್ಷಸಾನ್ ವಾನರೇಶ್ವರಃ ।
ಯುಗಾಂತಸಮಯೇ ವಾಯುಃ ಪ್ರವೃದ್ಧಾನಗಮಾನಿವ ॥ ೧೦

---

ಗೊಳಿಸಿ, ಶ್ರೀರಾಮನನ್ನು ಅರಸುತ್ತ ತ್ವರೆಯಿಂದ ಸಾಗಿದನು. ಅಷ್ಟರಲ್ಲಿ ಕಪಿಗಳೆಲ್ಲರೂ ಭಗ್ನರಾಗಿ ಓಡಿಹೋಗುವುದನ್ನು ಸುಗ್ರೀವನು ಕಂಡನು. ಆತನು ಸುಷೇಣನನ್ನು ಸೇನಾವ್ಯವಸ್ಥೆಗಾಗಿ ಗುಲ್ಮಸ್ಥಾನ*ದಲ್ಲಿ ನಿಲ್ಲಿಸಿ, ತಾನು ಭೀಕರವಾದ ಯುದ್ಧವನ್ನು ನಡೆಸಬೇಕೆಂದು ಸಂಕಲ್ಪಿಸಿದನು (೫-೬). ಸರ್ವವಿಧದಲ್ಲಿಯೂ ತನಗೆ ಸಮಾನನಾದ ಸುಷೇಣನಿಗೆ ಸೇನೆಯ ರಕ್ಷಣೆಯನ್ನು ವಹಿಸಿ, ವೀರಾಗ್ರಗಣ್ಯನಾದ ಸುಗ್ರೀವನು ಒಂದು ಮರವನ್ನು ಹೊತ್ತು ವೈರಿಗಳಿಗೆ ಅಭಿಮುಖನಾಗಿ ನಡೆದನು. ಆಗ ಯೂಥಪಾಲರಾದ ಕಪಿನಾಯಕರು ಸುಗ್ರೀವನ ಎಡಬಲಗಳಲ್ಲಿಯೂ ಹಿಂಭಾಗದಲ್ಲಿಯೂ ಅವನನ್ನನುಸರಿಸಿ, ಮಹಾಶೈಲಗಳನ್ನೂ ವೃಕ್ಷಗಳನ್ನೂ ಹೊತ್ತುಕೊಂಡು ಹೋದರು (೭-೮). ಆಗ ಸುಗ್ರೀವನು ಘೋರವಾಗಿ ಗರ್ಜಿಸುತ್ತ ಯುದ್ಧವನ್ನಾರಂಭಿಸಿ, ಎದುರಿಗೆ ಸಿಕ್ಕಿದ ರಾಕ್ಷಸರನ್ನು ಹೊಡೆಹೊಡೆದುರುಳಿಸಿ, ವೀರರಾದ ರಾಕ್ಷಸರನ್ನು ಅರಸುತ್ತ ಹೋಗಿ ಎದುರಿಸಿದನು. ಬೃಹದಾಕಾರನಾದ ಆ ವಾನರೇಶ್ವರನು ಪ್ರಳಯಕಾಲದ ಚಂಡಮಾರುತವು ದೊಡ್ಡ ಮರಗಳನ್ನುರುಳಿಸುವಂತೆ, ರಾಕ್ಷಸವೀರರನ್ನು ಬಡಿಬಡಿದು ಕೆಡವುತ್ತ

---

* ಗುಲ್ಮಸ್ಥಾನ = ಸೇನಾರಕ್ಷಣೆಯ ಸ್ಥಾನ; ಆಯಕಟ್ಟಿನ ಪ್ರದೇಶ.

ರಾಕ್ಷಸಾನಾಮನೀಕೇಷು ಶೈಲವರ್ಷಂ ವವರ್ಷ ಹ ।
ಅಶ್ಮವರ್ಷಂ ಯಥಾ ಮೇಘಃ ಪಕ್ಷಿಸಂಘೇಷು ಕಾನನೇ ॥ ೧೧

ಕಪಿರಾಜವಿಮುಕ್ತೈಸ್ತೈಃ ಶೈಲವರ್ಷೈಸ್ತು ರಾಕ್ಷಸಾಃ ।
ವಿಕೀರ್ಣಶಿರಸಃ ಪೇತುರ್ನಿಕೃತ್ತಾ ಇವ ಪರ್ವತಾಃ ॥ ೧೨

ಅಥ ಸಂಕ್ಷೀಯಮಾಣೇಷು ರಾಕ್ಷಸೇಷು ಸಮಂತತಃ ।
ಸುಗ್ರೀವೇಣ ಪ್ರಭಗ್ನೇಷು ಪತತ್ಸು ವಿನದತ್ಸು ಚ ॥ ೧೩

ವಿರೂಪಾಕ್ಷಃ ಸ್ವಕಂ ನಾಮ ಧನ್ವೀ ವಿಶ್ರಾವ್ಯ ರಾಕ್ಷಸಃ ।
ರಥಾದಾಪ್ಲುತ್ಯ ದುರ್ಧರ್ಷೋ ಗಜಸ್ಕಂಧಮುಪಾರುಹತ್ ॥ ೧೪

ಸ ತಂ ದ್ವಿರದಮಾರುಹ್ಯ ವಿರೂಪಾಕ್ಷೋ ಮಹಾರಥಃ ।
ವಿನದನ್ ಭೀಮನಿರ್ಹ್ರಾದಂ ವಾನರಾನಭ್ಯಧಾವತ ॥ ೧೫

ಸುಗ್ರೀವೇ ಸ ಶರಾನ್ ಘೋರಾನ್ ವಿಸಸರ್ಜ ಚಮೂಮುಖೇ ।
ಸ್ಥಾಪಯಾಮಾಸ ಚೋದ್ವಿಗ್ನಾನ್ ರಾಕ್ಷಸಾನ್ ಸಂಪ್ರಹರ್ಷಯನ್ ॥

---

ಹೋದನು (೯–೧೦). ಅಡವಿಯಲ್ಲಿರುವ ಬಡಹಕ್ಕಿಗಳಮೇಲೆ ಆಲಿಕಲ್ಲುಗಳ ಜಡಿಮಳೆಯನ್ನು ಮೋಡವು ಸುರಿಸುವಂತೆ, ಸುಗ್ರೀವನು ರಾಕ್ಷಸಸೈನಿಕರ ಮೇಲೆ ನಿಡಿದಾದ ಬಂಡೆಗಳನ್ನು ಬೀಸಿ ಜಡಿಯುತ್ತ ಹೋದನು. ಕಪಿರಾಜನು ಹೊಡೆದ ಬಂಡೆಗಳ ಸುರಿಮಳೆಯಿಂದ ರಾಕ್ಷಸರ ತಲೆಗಳು ಜಜ್ಜಿ ಹೋದವು. ಕಡಿದುರುಳಿಸಿದ ಮರಗಳಂತೆ ಅವರು ಸತ್ತು ಸತ್ತು ಬಿದ್ದರು (೧೧–೧೨). ಹೀಗೆ ಎಲ್ಲೆಡೆಯೂ ರಾಕ್ಷಸಪಡೆಯು ಹತವಾಗಿ ಕ್ಷಯಿಸತೊಡಗಿತು. ಸುಗ್ರೀವನ ಹೊಡೆತದಿಂದ ರಾಕ್ಷಸರು ಭಗ್ನರಾಗಿ ಪೆಟ್ಟನ್ನು ತಡೆಯಲಾರದೆ ಅರಚುತ್ತ ಉರುಳುರುಳಿ ಬೀಳುತ್ತಿದ್ದರು. ಅದನ್ನು ನೋಡಿ ಪರಾಕ್ರಮಿಯಾದ ವಿರೂಪಾಕ್ಷನೆಂಬ ರಾಕ್ಷಸನು ಧನುರ್ಧಾರಿಯಾಗಿ 'ಇದೋ, ನಾನು ವಿರೂಪಾಕ್ಷ!' ಎಂದು ತನ್ನ ಹೆಸರನ್ನು ಘೋಷಿಸಿ, ರಥದಿಂದ ಧುಮುಕಿದನು (೧೩–೧೪). ಒಡನೆಯೇ ಆತನು ಒಂದು ಆನೆಯನ್ನೇರಿ ಭಯಂಕರವಾಗಿ ಗರ್ಜಿಸುತ್ತ ವಾನರರನ್ನು ಅಟ್ಟಿಸಿಕೊಂಡು ಬಂದನು. ಬಂದವನೇ ಗುರಿಯಿಟ್ಟು ನಿಶಿತಾಸ್ತ್ರಗಳಿಂದ ಸುಗ್ರೀವನನ್ನು ಹೊಡೆದು, ಖಿನ್ನರಾಗಿದ್ದ

ಸ ತು ವಿದ್ಧಃ ಶಿತೈರ್ಬಾಣೈಃ ಕಪೀಂದ್ರಸ್ತೇನ ರಕ್ಷಸಾ ।
ಚುಕ್ರೋಧ ಸ ಮಹಾಕ್ರೋಧೋ ವಧೇ ಚಾಸ್ಯ ಮನೋ ದಧೇ ॥

ತತಃ ಪಾದಪಮುದ್ಧೃತ್ಯ ಶೂರಃ ಸಂಪ್ರಧನೋ ಹರಿಃ ।
ಅಭಿಪತ್ಯ ಜಘಾನಾಸ್ಯ ಪ್ರಮುಖೇ ತು ಮಹಾಗಜಮ್ ॥ ೧೮

ಸ ತು ಪ್ರಹಾರಾಭಿಹತಃ ಸುಗ್ರೀವೇಣ ಮಹಾಗಜಃ ।
ಅಪಾಸರ್ಪದ್ಧನುರ್ಮಾತ್ರಂ ನಿಷಸಾದ ನನಾದ ಚ ॥ ೧೯

ಗಜಾತ್ತು ಮಥಿತಾತ್ತೂರ್ಣಮಪಕ್ರಮ್ಯ ಸ ವೀರ್ಯವಾನ್ ।
ರಾಕ್ಷಸೋಽಭಿಮುಖಃ ಶತ್ರುಂ ಪ್ರತ್ಯುದ್ಗಮ್ಯ ತತಃ ಕಪಿಮ್ ॥ ೨೦

ಆರ್ಷಭಂ ಚರ್ಮ ಖಡ್ಗಂ ಚ ಪ್ರಗೃಹ್ಯ ಲಘುವಿಕ್ರಮಃ ।
ಭರ್ತ್ಸಯನ್ನಿವ ಸುಗ್ರೀವಮಾಸಸಾದ ವ್ಯವಸ್ಥಿತಮ್ ॥ ೨೧

ಸ ಹಿ ತಸ್ಯಾಭಿಸಂಕ್ರುದ್ಧಃ ಪ್ರಗೃಹ್ಯ ವಿಪುಲಾಂ ಶಿಲಾಮ್ ।
ವಿರೂಪಾಕ್ಷಾಯ ಚಿಕ್ಷೇಪ ಸುಗ್ರೀವೋ ಜಲದೋಪಮಾಮ್ ॥ ೨೨

---

ರಾಕ್ಷಸರನ್ನು ಹುರಿದುಂಬಿಸಿದನು (೧೫-೧೬). ವಿರೂಪಾಕ್ಷನ ಕೂರಂಬುಗಳಿಂದ ವಿದ್ಧನಾದ ವಾನರೇಶ್ವರನು ಸಂಕ್ರುದ್ಧನಾಗಿ, ಆ ರಾಕ್ಷಸನನ್ನು ವಧಿಸಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿದನು. ಒಡನೆಯೇ ಯುದ್ಧನಿಪುಣನಾದ ಆ ಕಪೀಂದ್ರನು ಒಂದು ವೃಕ್ಷವನ್ನೆತ್ತಿ ಮುನ್ನುಗ್ಗಿ, ವಿರೂಪಾಕ್ಷನೇರಿದ್ದ ಆನೆಯ ಮುಖಕ್ಕೆ ಬಡಿದನು (೧೭-೧೮). ಸುಗ್ರೀವನ ಬಡಿತದ ರಭಸಕ್ಕೆ ಆ ಮಹಾಗಜವು ಒಂದು ಬಿಲ್ಲಿನ ದೂರ ಹಿಮ್ಮೆಟ್ಟಿ, ನೋವಿನಿಂದ ಘೀಂಕರಿಸುತ್ತ ಕುಸಿದು ಕುಕ್ಕರಿಸಿತು. ಶೂರನಾದ ವಿರೂಪಾಕ್ಷನು ಅಭಿಹತವಾದ ಆನೆಯಮೇಲಿಂದ ಛಂಗನೆ ಕೆಳಗೆ ಜಿಗಿದನು. ಆ ರಾಕ್ಷಸನು ವೃಷಭಚರ್ಮನಿರ್ಮಿತವಾದ ಗುರಾಣಿಯನ್ನೂ ಖಡ್ಗವನ್ನೂ ಹಿಡಿದು, ಆನೆಯನ್ನು ಪ್ರಹರಿಸಿದುದಕ್ಕಾಗಿ ಸುಗ್ರೀವನನ್ನು ನಿಂದಿಸುತ್ತ, ಅವನನ್ನೆದುರಿಸಿದನು (೧೯-೨೧). ಅಲ್ಲಾಡದೆ ನಿಂತಿದ್ದ ಸುಗ್ರೀವನು ಮೇಘಖಂಡದಂತಿದ್ದ ಕಪ್ಪಾದ ಒಂದು ದೊಡ್ಡ ಬಂಡೆಯನ್ನೆತ್ತಿ ವಿರೂಪಾಕ್ಷನಮೇಲೆ ಎಸೆದನು.

ಸ ತಾಂ ಶಿಲಾಮಾಪತಂತೀಂ ದೃಷ್ಟ್ವಾ ರಾಕ್ಷಸಪುಂಗವಃ ।
ಅಪಕ್ರಮ್ಯ ಸುವಿಕ್ರಾಂತಃ ಖಡ್ಗೇನ ಪ್ರಾಹರತ್ತದಾ ॥ ೨೩

ತೇನ ಖಡ್ಗಪ್ರಹಾರೇಣ ರಕ್ಷಸಾ ಬಲಿನಾ ಹತಃ ।
ಮುಹೂರ್ತಮಭವದ್ವೀರೋ ವಿಸಂಜ್ಞ ಇವ ವಾನರಃ ॥ ೨೪

ಸ ತದಾ ಸಹಸೋತ್ಪತ್ಯ ರಾಕ್ಷಸಸ್ಯ ಮಹಾಹವೇ ।
ಮುಷ್ಟಿಂ ಸಂವರ್ತ್ಯ ವೇಗೇನ ಪಾತಯಾಮಾಸ ವಕ್ಷಸಿ ॥ ೨೫

ಮುಷ್ಟಿಪ್ರಹಾರಾಭಿಹತೋ ವಿರೂಪಾಕ್ಷೋ ನಿಶಾಚರಃ ।
ತೇನ ಖಡ್ಗೇನ ಸಂಕ್ರುದ್ಧಃ ಸುಗ್ರೀವಸ್ಯ ಚಮೂಮುಖೇ ॥ ೨೬

ಕವಚಂ ಪಾತಯಾಮಾಸ ಪದ್ಭ್ಯಾಮಭಿಹತೋಽಪತತ್ ।
ಸ ಸಮುತ್ಥಾಯ ಪತಿತಃ ಕಪಿಸ್ತಸ್ಯ ವ್ಯಸರ್ಜಯತ್ ॥ ೨೭

ತಲಪ್ರಹಾರಮಶನೇಃ ಸಮಾನಂ ಭೀಮನಿಃಸ್ವನಮ್ ।
ತಲಪ್ರಹಾರಂ ತದ್ರಕ್ಷಃ ಸುಗ್ರೀವೇಣ ಸಮುದ್ಯತಮ್ ॥ ೨೮

---

ಆ ರಾಕ್ಷಸಪುಂಗವನು ಅಡ್ಡ ಸರಿದು ಆ ಶಿಲಾಪ್ರಹಾರವನ್ನು ತಪ್ಪಿಸಿಕೊಂಡು ನುಗ್ಗಿಹೋಗಿ ಸುಗ್ರೀವನನ್ನು ಖಡ್ಗದಿಂದ ಪ್ರಹರಿಸಿದನು (೨೨-೨೩). ಬಲಾಢ್ಯನಾದ ರಾಕ್ಷಸನ ಖಡ್ಗದ ಹೊಡೆತದಿಂದ ಶೂರಾಗ್ರೇಸರನಾದ ಕಪೀಂದ್ರನು ಒಂದು ಮುಹೂರ್ತಕಾಲ ಎಚ್ಚರದಪ್ಪಿದಂತಾದನು. ಹಾಗೆಯೇ ಚೇತರಿಸಿಕೊಂಡು ಆ ಸುಗ್ರೀವನು ಗಪ್ಪನೆ ಮುಂದಕ್ಕೆ ನೆಗೆದು, ಮುಷ್ಟಿಯನ್ನು ಬಿಗಿದು, ವಿರೂಪಾಕ್ಷನ ಎದೆಯಮೇಲೆ ರಭಸದಿಂದ ಗುದ್ದಿದನು (೨೪-೨೫). ಸುಗ್ರೀವನ ಮುಷ್ಟಿಪ್ರಹಾರದಿಂದ ಅಭಿಹತನಾದ ಆ ನಿಶಾಚರನು ಸಿಟ್ಟಿನಿಂದ ಖಡ್ಗವನ್ನೆತ್ತಿ ಹೊಡೆಯಲು, ಸುಗ್ರೀವನ ಕವಚವು ಕತ್ತರಿಸಿ ಬಿದ್ದಿತು. ಆ ಹೊಡೆತದ ಬಿರುಸಿಗೆ ಸುಗ್ರೀವನು ಮುಗ್ಗರಿಸಿ ಡೊಗ್ಗಾಲೂರಿದನು. ಒಡನೆಯೇ ಆ ಕಪೀಂದ್ರನು ಮೇಲೆದ್ದು ಭೀಕರವಾಗಿ ಬೊಬ್ಬಿರಿದು, ಸಿಡಿಲಿನ ಜಡಿತದಂತೆ ಅಂಗೈಯಿಂದ ಅಪ್ಪಳಿಸಿದನು (೨೬-೨೭). ಆದರೆ ವಿರೂಪಾಕ್ಷನು ವಂಚನಾಚಮತ್ಕಾರದಿಂದ ಆ ಪೆಟ್ಟನ್ನು ತಪ್ಪಿಸಿಕೊಂಡು, ಸುಗ್ರೀವನ ಎದೆಯಮೇಲೆ ಗುದ್ದಿದನು,

ನೈಪುಣ್ಯಾನ್ಮೋಚಯಿತ್ವೈನಂ ಮುಷ್ಟಿನೋರಸ್ಯತಾಡಯತ್ ।
ತತಸ್ತು ಸಂಕ್ರುದ್ಧತರಃ ಸುಗ್ರೀವೋ ವಾನರೇಶ್ವರಃ ॥ ೨೯

ಮೋಕ್ಷಿತಂ ಚಾತ್ಮನೋ ದೃಷ್ಟ್ವಾ ಪ್ರಹಾರಂ ತೇನ ರಕ್ಷಸಾ ।
ಸ ದದರ್ಶಾಂತರಂ ತಸ್ಯ ವಿರೂಪಾಕ್ಷಸ್ಯ ವಾನರಃ ॥ ೩೦

ತತೋ ನ್ಯಪಾತಯತ್ ಕ್ರೋಧಾಚ್ಛಂಖದೇಶೇ ಮಹತ್ತಲಮ್ ।
ಮಹೇಂದ್ರಾಶನಿಕಲ್ಪೇನ ತಲೇನಾಭಿಹತಃ ಕ್ಷಿತೌ ॥ ೩೧

ಪಪಾತ ರುಧಿರಕ್ಲಿನ್ನಃ ಶೋಣಿತಂ ಚ ಸಮುದ್ವಮನ್ ।
ಸ್ರೋತೋಭ್ಯಸ್ತು ವಿರೂಪಾಕ್ಷೋ ಜಲಂ ಪ್ರಸ್ರವಣಾದಿವ ॥ ೩೨

ವಿವೃತ್ತನಯನಂ ಕ್ರೋಧಾತ್ ಸಫೇನಂ ರುಧಿರಾಪ್ಲುತಮ್ ।
ದದೃಶುಸ್ತೇ ವಿರೂಪಾಕ್ಷಂ ವಿರೂಪಾಕ್ಷತರಂ ಕೃತಮ್ ॥ ೩೩

ಸ್ಫುರಂತಂ ಪರಿವರ್ತಂತಂ ಪಾರ್ಶ್ವೇನ ರುಧಿರೋಕ್ಷಿತಮ್ ।
ಕರುಣಂ ಚ ವಿನರ್ದಂತಂ ದದೃಶುಃ ಕಪಯೋ ರಿಪುಮ್ ॥ ೩೪

---

ತನ್ನ ಹೊಡೆತವನ್ನು ವಿರೂಪಾಕ್ಷನು ತಪ್ಪಿಸಿಕೊಂಡು ಮತ್ತೆ ತನ್ನನ್ನು ಪ್ರಹರಿಸಿದ್ದರಿಂದ, ವಾನರೇಶ್ವರನ ಸಿಟ್ಟು ನೆತ್ತಿಗೇರಿತು (೨೮-೨೯). ಸುಗ್ರೀವನು ಸಮಯವನ್ನು ಸಾಧಿಸಿ ವಿರೂಪಾಕ್ಷನ ಹಣೆಯ ಮೂಳೆಯ ಮೇಲೆ, ಇಂದ್ರನ ವಜ್ರಾಯುಧದಂತೆ ಅತ್ಯುಗ್ರವಾಗಿ ಅಂಗೈಯಿಂದ ರಪ್ಪನೆ ಅಪ್ಪಳಿಸಿದನು. ವಿರೂಪಾಕ್ಷನು ರಕ್ತವನ್ನು ಕಕ್ಕುತ್ತ ನೆತ್ತರಲ್ಲಿ ನೆನೆದು ನೆಲದಮೇಲುರುಳಿದನು (೩೦-೩೧). ಆ ರಾಕ್ಷಸನ ಕಣ್ಣು, ಕಿವಿ, ಮೂಗು ಮುಂತಾದ ಸ್ರೋತೋಮಾರ್ಗಗಳಿಂದ, ಚಿಲುಮೆಯಿಂದ ಜಲವು ಚಿಮ್ಮು ವಂತೆ, ರಕ್ತವು ಚಿಮ್ಮಿತು. ನೊರೆನೊರೆಯಾಗಿ ಹರಿದ ರುಧಿರದ ಮಡುವಿ ನಲ್ಲಿ ಮುಳುಗಿದ ಆತನ ಕಣ್ಣುಗಳು ವಿಕಾರವಾಗಿ ಹೊರಹೊಮ್ಮಿರಲು, ವಿರೂಪಾಕ್ಷನು ಅತ್ಯಂತ ವಿಕಟಾಕ್ಷನಾಗಿ ಗೋಚರಿಸಿದನು (೩೨-೩೩). ನೆತ್ತರಲ್ಲಿ ನೆನೆದು ಮಗ್ಗುಲಾಗಿ ಹೊರಳುತ್ತ ಉರುಳುತ್ತ ಹೃದಯವಿದ್ರಾವಕ ವಾಗಿ ಅರಚುತ್ತಲಿದ್ದ ವಿರೂಪಾಕ್ಷನನ್ನು, ಅವನು ಶತ್ರುವಾದ್ದರಿಂದ

ತಥಾ ತು ತೌ ಸಂಯತಿ ಸಂಪ್ರಯುಕ್ತೌ
ತರಸ್ವಿನೌ ವಾನರರಾಕ್ಷಸಾನಾಮ್ ।
ಬಲಾರ್ಣವೌ ಸಸ್ವನತುಃ ಸುಭೀಮಂ
ಮಹಾರ್ಣವೌ ದ್ವಾವಿವ ಭಿನ್ನವೇಲೌ ॥ ೩೫

ವಿನಾಶಿತಂ ಪ್ರೇಕ್ಷ್ಯ ವಿರೂಪನೇತ್ರಂ
ಮಹಾಬಲಂ ತಂ ಹರಿಪಾರ್ಥಿವೇನ ।
ಬಲಂ ಸಮಸ್ತಂ ಕಪಿರಾಕ್ಷಸಾನಾ-
ಮುದ್ವೃತ್ತಗಂಗಾಪ್ರತಿಮಂ ಬಭೂವ ॥ ೩೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತನವತಿತಮಃ ಸರ್ಗಃ



ಕಪಿಯೋಧರು ಸಿಟ್ಟಿನಿಂದಲೇ ನೋಡುತ್ತ ನಿಂತಿದ್ದರು! (೩೪). ಈ ಪ್ರಕಾರವಾಗಿ ಬಲಾಢ್ಯರಾದ ಕಪಿರಾಕ್ಷಸರ ಮಹಾಸೇನೆಗಳು ಸಂಗ್ರಾಮಭೂಮಿಯಲ್ಲಿ ಒಂದನ್ನೊಂದು ಎದುರಿಸಿ ಹೋರಾಡುತ್ತ, ವೇಲೆಯನ್ನತಿಕ್ರಮಿಸಿ ನುಗ್ಗಿದ ಎರಡು ಮಹಾಸಮುದ್ರಗಳಂತೆ ಭೀಕರ ಕೋಲಾಹಲವನ್ನೆಬ್ಬಿಸಿದವು (೩೫). ಕಪಿರಾಜನಾದ ಸುಗ್ರೀವನು ಅತ್ಯಂತ ಬಲಶಾಲಿಯಾದ ವಿರೂಪಾಕ್ಷನನ್ನು ಈ ರೀತಿಯಲ್ಲಿ ಸಂಹರಿಸಿದುದನ್ನು ಕಂಡು, ಕಪಿರಾಕ್ಷಸರ ಸಮಸ್ತ ಸೇನೆಯೂ ಹುಚ್ಚೆದ್ದು ಉಕ್ಕಿ ಹರಿಯುವ ಗಂಗಾಪ್ರವಾಹದಂತೆ ಮೊರೆಯುತ್ತ ಎಲ್ಲೆಲ್ಲಿಯೂ ರಭಸದಿಂದ ನುಗ್ಗಿತು (೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತೇಳನೆಯ ಸರ್ಗ



## ಅಷ್ಟನವತಿತಮಃ ಸರ್ಗಃ

### ಮಹೋದರವಧಃ

ಹನ್ಯಮಾನೇ ಬಲೇ ತೂರ್ಣಮನ್ಯೋನ್ಯಂ ತೇ ಮಹಾಮೃಧೇ ।
ಸರಸೀವ ಮಹಾಘರ್ಮೇ ಸೂಪಕ್ಷೀಣೇ ಬಭೂವತುಃ ॥ ೧

ಸ್ವಬಲಸ್ಯ ವಿಘಾತೇನ ವಿರೂಪಾಕ್ಷವಧೇನ ಚ ।
ಬಭೂವ ದ್ವಿಗುಣಂ ಕ್ರುದ್ಧೋ ರಾವಣೋ ರಾಕ್ಷಸಾಧಿಪಃ ॥ ೨

ಪ್ರಕ್ಷೀಣಂ ತು ಬಲಂ ದೃಷ್ಟ್ವಾ ವಧ್ಯಮಾನಂ ವಲೀಮುಖೈಃ ।
ಬಭೂವಾಸ್ಯ ವ್ಯಥಾ ಯುದ್ಧೇ ಪ್ರೇಕ್ಷ್ಯ ದೈವವಿಪರ್ಯಯಮ್ ॥ ೩

ಉವಾಚ ಚ ಸಮೀಪಸ್ಥಂ ಮಹೋದರಮರಿಂದಮಮ್ ।
ಅಸ್ಮಿನ್ ಕಾಲೇ ಮಹಾಬಾಹೋ ಜಯಾಶಾ ತ್ವಯಿ ಮೇ ಸ್ಥಿತಾ ॥ ೪

### ಸರ್ಗ ೯೮

ಸಂಕ್ರುದ್ಧನಾದ ರಾವಣನು ಮಹೋದರನನ್ನು ಯುದ್ಧಕ್ಕೆ ಕಳಿಸುವುದು.
ಸುಗ್ರೀವನಿಂದ ಮಹೋದರನ ವಧೆ.

ಅತಿಭೀಕರವಾದ ಆ ಕಾಳಗದಲ್ಲಿ ಕಪಿರಾಕ್ಷಸರ ಸೇನೆಗಳ ಉಭಯ ಪಕ್ಷದವರೂ ಹೊಡೆದಾಡಿ ಸತ್ತು ಸತ್ತು ಬಿದ್ದರು. ಉರಿ ಬೇಸಗೆಯ ಸರೋವರಗಳಂತೆ ಎರಡು ಬಣಗಳೂ ಕ್ಷಯಿಸತೊಡಗಿದವು (೧). ತನ್ನ ರಾಕ್ಷಸಬಲವು ವಿಶೇಷವಾಗಿ ಹತವಾದುದನ್ನೂ ವಿರೂಪಾಕ್ಷನ ವಧೆಯನ್ನೂ ವೀಕ್ಷಿಸಿ, ರಾಕ್ಷಸೇಶ್ವರನಾದ ರಾವಣನಿಗೆ ಕೋಪವು ಇಮ್ಮಡಿಸಿತು. ವಾನರರು ರಾಕ್ಷಸರ ಪಡೆಯನ್ನು ಬಗ್ಗುಬಡಿದು ನಾಶಮಾಡುವುದನ್ನು ಅವನು ಕಂಡನು. ಯುದ್ಧದಲ್ಲಿ ದೈವವು ತನಗೆ ಪ್ರತಿಕೂಲವಾಗಿ ಪರಿಣಮಿಸಿದ್ದನ್ನು ಚಿಂತಿಸಿ ರಾವಣನು ವ್ಯಥೆಗೊಂಡನು (೨-೩). ಆತನು ಸಮೀಪದಲ್ಲಿದ್ದ ಶೂರನಾದ ಮಹೋದರನನ್ನು ಕರೆದು "ಮಹಾಬಾಹು-ಮಹೋದರ, ಈ ಸಂಕಟಸಮಯದಲ್ಲಿ ಜಯದ ಆಸೆಯು ನಿನ್ನಲ್ಲಿ ನನಗೆ ಉಳಿದಿದೆ.

ಜಹಿ ಶತ್ರುಚಮೂಂ ವೀರ ದರ್ಶಯಾದ್ಯ ಪರಾಕ್ರಮಮ್ ।
ಭರ್ತೃಪಿಂಡಸ್ಯ ಕಾಲೋಽಯಂ ನಿರ್ವೇಷ್ಟುಂ ಸಾಧು ಯುಧ್ಯತಾಮ್

ಏವಮುಕ್ತಸ್ತಥೇತ್ಯುಕ್ತ್ವಾ ರಾಕ್ಷಸೇಂದ್ರೋ ಮಹೋದರಃ ।
ಪ್ರವಿವೇಶಾರಿಸೇನಾಂ ತಾಂ ಪತಂಗ ಇವ ಪಾವಕಮ್ ॥ ೬

ತತಃ ಸ ಕದನಂ ಚಕ್ರೇ ವಾನರಾಣಾಂ ಮಹಾಬಲಃ ।
ಭರ್ತೃವಾಕ್ಯೇನ ತೇಜಸ್ವೀ ಸ್ವೇನ ವೀರ್ಯೇಣ ಚೋದಿತಃ ॥ ೭

ವಾನರಾಶ್ಚ ಮಹಾಸತ್ತ್ವಾಃ ಪ್ರಗೃಹ್ಯ ವಿಪುಲಾಃ ಶಿಲಾಃ ।
ಪ್ರವಿಶ್ಯಾರಿಬಲಂ ಭೀಮಂ ಜಘ್ನುಸ್ತೇ ರಜನೀಚರಾನ್ ॥ ೮

ಮಹೋದರಸ್ತು ಸಂಕ್ರುದ್ಧಃ ಶರೈಃ ಕಾಂಚನಭೂಷಣೈಃ ।
ಚಿಚ್ಛೇದ ಪಾಣಿಪಾದೋರೂನ್ ವಾನರಾಣಾಂ ಮಹಾಹವೇ ॥ ೯

ತತಸ್ತೇ ವಾನರಾಃ ಸರ್ವೇ ರಾಕ್ಷಸೈರರ್ದಿತಾ ಭೃಶಮ್ ।
ದಿಶೋ ದಶ ದ್ರುತಾಃ ಕೇಚಿತ್ಕೇಚಿತ್ಸುಗ್ರೀವಮಾಶ್ರಿತಾಃ ॥ ೧೦

---

ನಿನ್ನ ಪರಾಕ್ರಮವನ್ನು ಮೆರೆಸಿ, ಎಲೈ ವೀರಾಗ್ರೇಸರ, ವೈರಿಸೇನೆಯನ್ನು ಸಂಹರಿಸು. ಒಡೆಯನ ಅನ್ನದ ಋಣವನ್ನು ತೀರಿಸಲು ಇದೇ ಯೋಗ್ಯವಾದ ಕಾಲ. ಆದ್ದರಿಂದ, ಮಹೋದರ, ಸರಿಯಾಗಿ ಯುದ್ಧಮಾಡು" ಎಂದು ಆಜ್ಞಾಪಿಸಿದನು (೪-೫). ಹೀಗೆ ಆಜ್ಞಪ್ತನಾದ ಮಹೋದರನು 'ಆಗಲಿ' ಎಂದು ನುಡಿದು ಶತ್ರುಸೇನೆಯಲ್ಲಿ ನುಗ್ಗಿದನು. ಪತಂಗವು ಅಗ್ನಿಜ್ವಾಲೆಗೆ ಎರಗುವಂತೆ, ಕಪಿಸೇನೆಯನ್ನೆದುರಿಸಿ ಹೊರಟನು! ಅನಂತರ ಪರಾಕ್ರಮಿಯಾದ ಮಹೋದರನು ತನ್ನ ಸ್ವಾಮಿಯ ಆಜ್ಞೆಯಿಂದಲೂ ತನ್ನ ಶೌರ್ಯದಿಂದಲೂ ಚೋದಿತನಾಗಿ, ವಾನರರನ್ನು ಸಂಹರಿಸತೊಡಗಿದನು (೬-೭). ಸತ್ತ್ವಶಾಲಿಗಳಾದ ವಾನರಯೋಧರು ದೊಡ್ಡದೊಡ್ಡ ಬಂಡೆಗಳನ್ನೆತ್ತಿ ಬೀಸಿ ಹೊಡೆಯುತ್ತ ಭೀಕರವಾದ ವೈರಿಸೇನೆಯನ್ನು ಹೊಕ್ಕು, ರಾಕ್ಷಸರನ್ನು ವಧಿಸತೊಡಗಿದರು (೮). ರೋಷಾಕ್ರಾಂತನಾದ ಮಹೋದರನು ಕಾಂಚನಭೂಷಿತ ಶರಗಳನ್ನು ಸೆಳೆಸೆಳೆದು ಹೊಡೆದು, ಕಪಿಗಳ ಕೈಕಾಲು ತೊಡೆಗಳನ್ನು ಛೇದಿಸಿ ಚೆಲ್ಲುತ್ತ ಹೋದನು. ರಾಕ್ಷಸರ ಕೈ ಮೇಲಾಯಿತು. ರಾಕ್ಷಸರ ಹೊಡೆತವನ್ನು ತಡೆಯಲಾರದೆ ನೊಂದು,

ಪ್ರಭಗ್ನಾಂ ಸಮರೇ ದೃಷ್ಟ್ವಾ ವಾನರಾಣಾಂ ಮಹಾಚಮೂಮ್ ।
ಅಭಿದುದ್ರಾವ ಸುಗ್ರೀವೋ ಮಹೋದರಮನಂತರಮ್ ॥ ೧೧

ಪ್ರಗೃಹ್ಯ ವಿಪುಲಾಂ ಘೋರಾಂ ಮಹೀಧರಸಮಾಂ ಶಿಲಾಮ್ ।
ಚಿಕ್ಷೇಪ ಚ ಮಹಾತೇಜಾಸ್ತದ್ವಧಾಯ ಹರೀಶ್ವರಃ ॥ ೧೨

ತಾಮಾಪತಂತೀಂ ಸಹಸಾ ಶಿಲಾಂ ದೃಷ್ಟ್ವಾ ಮಹೋದರಃ ।
ಅಸಂಭ್ರಾಂತಸ್ತತೋ ಬಾಣೈರ್ನಿರ್ಬಿಭೇದ ದುರಾಸದಾಮ್ ॥ ೧೩

ರಕ್ಷಸಾ ತೇನ ಬಾಣೌಘೈರ್ನಿಕೃತ್ತಾ ಸಾ ಸಹಸ್ರಧಾ ।
ನಿಪಪಾತ ಶಿಲಾ ಭೂಮೌ ಗೃಧ್ರಚಕ್ರಮಿವಾಕುಲಮ್ ॥ ೧೪

ತಾಂ ತು ಭಿನ್ನಾಂ ಶಿಲಾಂ ದೃಷ್ಟ್ವಾ ಸುಗ್ರೀವಃ ಕ್ರೋಧಮೂರ್ಛಿತಃ
ಸಾಲಮುತ್ಪಾಟ್ಯ ಚಿಕ್ಷೇಪ ರಾಕ್ಷಸೇ ರಣಮೂರ್ಧನಿ ॥ ೧೫

ಶರೈಶ್ಚ ವಿದದಾರೈನಂ ಶೂರಃ ಪರಪುರಂಜಯಃ ।
ಸ ದದರ್ಶ ತತಃ ಕ್ರುದ್ಧಃ ಪರಿಘಂ ಪತಿತಂ ಭುವಿ ॥ ೧೬

---

ಕಪಿಸೈನಿಕರು ದಿಕ್ಕುದಿಕ್ಕಿಗೆ ಓಡಿಹೋದರು. ಕೆಲವರು ಸುಗ್ರೀವನ ಮರೆ ಹೊಕ್ಕರು (೯–೧೦). ಯುದ್ಧದಲ್ಲಿ ವಾನರಸೇನೆಯು ಭಗ್ನವಾದುದನ್ನು ಆಲೋಕಿಸಿ, ಸುಗ್ರೀವನು ಮಹೋದರನನ್ನು ಎದುರಿಸುವುದಕ್ಕಾಗಿ ವೇಗ ದಿಂದ ಬಂದನು. ತೇಜಸ್ವಿಯಾದ ಆ ಕಪೀಂದ್ರನು ಬೆಟ್ಟದಂತಿದ್ದ ಘೋರ ವಾದ ವಿಪುಲಶಿಲೆಯೊಂದನ್ನು ಎತ್ತಿ, ಮಹೋದರನನ್ನು ಕೊಲ್ಲುವ ಉದ್ದೇಶ ದಿಂದ ಅವನಿಗೆ ಗುರಿಯಿಟ್ಟು ಬೀಸಿ ಹೊಡೆದನು (೧೧–೧೨). ದುರ್ಧರ್ಷ ವಾದ ಆ ಶಿಲೆಯು ವೇಗದಿಂದ ಬರುವುದನ್ನು ನೋಡಿ ಮಹೋದರನು ಸ್ವಲ್ಪವೂ ಧೈರ್ಯಗೆಡದೆ, ಬಾಣಗಳನ್ನು ಹೊಡೆದು ನಡುದಾರಿಯಲ್ಲಿಯೇ ಅದನ್ನು ಭೇದಿಸಿದನು. ರಾಕ್ಷಸನ ಬಾಣರಾಶಿಗಳಿಂದ ನಿರ್ಭಿನ್ನವಾದ ಆ ಶಿಲೆಯು ಸಾವಿರಾರು ತುಂಡುಗಳಾಗಿ ತೂರಾಡಲು, ಚದರಿದ ಹದ್ದುಗಳು ವಿವಿಧ ದಿಕ್ಕುಗಳಿಂದ ಕೆಳಗಿಳಿಯುವಂತೆ ಆ ತುಂಡುಗಳು ಧರೆಗುರುಳಿದವು (೧೩–೧೪). ಅದನ್ನು ವೀಕ್ಷಿಸಿ ಕೋಪೋದ್ರಿಕ್ತನಾದ ಸುಗ್ರೀವನು ಒಂದು ದೊಡ್ಡ ಮರವನ್ನು ಕಿತ್ತು ಮಹೋದರನಮೇಲೆ ಗುರಿಯಿಟ್ಟು ಎಸೆದನು. ಪ್ರಚಂಡನಾದ ಮಹೋದರನು ಆ ಮರವನ್ನು ಸರಳುಗಳಿಂದ ತರಿದನು (೧೫). ಕೋಪೋದ್ದೀಪಿತನಾದ ಸುಗ್ರೀವನು ರಣಾಂಗಣದಲ್ಲಿ ಬಿದ್ದಿದ್ದ

ಆವಿಧ್ಯ ತು ಸ ತಂ ದೀಪ್ತಂ ಪರಿಘಂ ತಸ್ಯ ದರ್ಶಯನ್ ।
ಪರಿಘಾಗ್ರೇಣ ವೇಗೇನ ಜಘಾನಾಸ್ಯ ಹಯೋತ್ತಮಾನ್ ॥ ೧೭

ತಸ್ಮಾದ್ಧತಹಯಾದ್ವೀರಃ ಸೋಽವಪ್ಲುತ್ಯ ಮಹಾರಥಾತ್ ।
ಗದಾಂ ಜಗ್ರಾಹ ಸಂಕ್ರುದ್ಧೋ ರಾಕ್ಷಸೋಽಥ ಮಹೋದರಃ ॥ ೧೮

ಗದಾಪರಿಘಹಸ್ತೌ ತೌ ಯುಧಿ ವೀರೌ ಸಮೀಯತುಃ ।
ನರ್ದಂತೌ ಗೋವೃಷಪ್ರಖ್ಯೌ ಘನಾವಿವ ಸವಿದ್ಯುತೌ ॥ ೧೯

ತತಃ ಕ್ರುದ್ಧೋ ಗದಾಂ ತಸ್ಮೈ ಚಿಕ್ಷೇಪ ರಜನೀಚರಃ ।
ಜ್ವಲಂತೀಂ ಭಾಸ್ಕರಾಭಾಸಾಂ ಸುಗ್ರೀವಾಯ ಮಹೋದರಃ ॥ ೨೦

ಗದಾಂ ತಾಂ ಸುಮಹಾಘೋರಾಮಾಪತಂತೀಂ ಮಹಾಬಲಃ ।
ಸುಗ್ರೀವೋ ರೋಷತಾಮ್ರಾಕ್ಷಃ ಸಮುದ್ಯಮ್ಯ ಮಹಾಹವೇ ॥ ೨೧

ಆಜಘಾನ ಗದಾಂ ತಸ್ಯ ಪರಿಘೇಣ ಹರೀಶ್ವರಃ ।
ಪಪಾತ ಸ ಗದೋದ್ಭಿನ್ನಃ ಪರಿಘಸ್ತಸ್ಯ ಭೂತಲೇ ॥ ೨೨

---

ನಿಡಿದಾದ ಪರಿಘವನ್ನು ನೋಡಿ ಕೈಗೆತ್ತಿಕೊಂಡು, ಅದನ್ನು ಮಹೋದರನಿಗೆ ತೋರಿಸುತ್ತ ಗಿರಗಿರನೆ ತಿರುಗಿಸಿ, ಅವನ ಉತ್ತಮವಾದ ಕುದುರೆಗಳನ್ನು ಬಿರುಸಿನಿಂದ ಬಡಿದು ಕೊಂದನು (೧೬-೧೭). ಪರಾಕ್ರಮಿಯಾದ ಮಹೋದರನು ಒಡನೆಯೇ ತನ್ನ ಮಹಾರಥದಿಂದ ಧುಮುಕಿ, ಗದೆಯನ್ನು ಹಿಡಿದು ಕೋಪದಿಂದ ಮುಂದೆ ಬಂದನು. ಕ್ರಮವಾಗಿ ಗದಾಪರಿಘಗಳನ್ನು ಧರಿಸಿದ್ದ ಮಹೋದರಸುಗ್ರೀವರು ಮದಿಸಿದ ಹೋರಿಗಳಂತೆಯೂ ಮಿಂಚಿನೊಡನೆ ಮೆರೆಯುವ ಮೇಘಗಳಂತೆಯೂ ಅಬ್ಬರಿಸುತ್ತ ಒಬ್ಬರನ್ನೊಬ್ಬರು ಎದುರಿಸಿ ಹೋರಾಡಿದರು (೧೮-೧೯). ಸಂಕ್ರುದ್ಧನಾದ ಮಹೋದರನು ಭಾಸ್ಕರನಂತೆ ಬೆಳಗುವ ತನ್ನ ಗದೆಯನ್ನು ಸುಗ್ರೀವನಮೇಲೆ ಬೀಸಿದನು. ಘೋರವಾದ ಗದೆಯು ತನ್ನಮೇಲೆ ಎರಗುವುದನ್ನು ಕಂಡು, ಸುಗ್ರೀವನು ರೋಷತಾಮ್ರಾಕ್ಷನಾಗಿ ಪರಿಘದಿಂದ ಗದೆಯನ್ನು ಬಡಿದನು. ಗದೆಯಿಂದ ಅಭಿಹತವಾದ ಪರಿಘವು ಮುರಿದು ಕೆಳಗೆ ಬಿದ್ದಿತು (ಗದೆಯೂ ಮುರಿದು

ತತೋ ಜಗ್ರಾಹ ತೇಜಸ್ವೀ ಸುಗ್ರೀವೋ ವಸುಧಾತಲಾತ್ ।
ಆಯಸಂ ಮುಸಲಂ ಘೋರಂ ಸರ್ವತೋ ಹೇಮಭೂಷಿತಮ್ ॥ ೨೩

ಸ ತಮುದ್ಯಮ್ಯ ಚಿಕ್ಷೇಪ ಸೋಽಪ್ಯನ್ಯಾಂ ವ್ಯಾಕ್ಷಿಪದ್ಗದಾಮ್ ।
ಭಿನ್ನಾವನ್ಯೋನ್ಯಮಾಸಾದ್ಯ ಪೇತತುರ್ಧರಣೀತಲೇ ॥ ೨೪

ತತೋ ಭಗ್ನಪ್ರಹರಣೌ ಮುಷ್ಟಿಭ್ಯಾಂ ತೌ ಸಮೀಯತುಃ ।
ತೇಜೋಬಲಸಮಾವಿಷ್ಟೌ ದೀಪ್ತಾವಿವ ಹುತಾಶನೌ ॥ ೨೫

ಜಘ್ನತುಸ್ತೌ ತದಾನ್ಯೋನ್ಯಂ ನೇದತುಶ್ಚ ಪುನಃ ಪುನಃ ।
ತಲೈಶ್ಚಾನ್ಯೋನ್ಯಮಾಹತ್ಯ ಪೇತತುರ್ಧರಣೀತಲೇ ॥ ೨೬

ಉತ್ಪೇತತುಸ್ತತಸ್ತೂರ್ಣಂ ಜಘ್ನತುಶ್ಚ ಪರಸ್ಪರಮ್ ।
ಭುಜೈಶ್ಚಿಕ್ಷಿಪತುರ್ವೀರಾವನ್ಯೋನ್ಯಮಪರಾಜಿತೌ ॥ ೨೭

ಜಗ್ಮತುಸ್ತೌ ಶ್ರಮಂ ವೀರೌ ಬಾಹುಯುದ್ಧೇ ಪರಂತಪೌ ।
ಆಜಹಾರ ತತಃ ಖಡ್ಗಮದೂರಪರಿವರ್ತಿನಮ್ ॥ ೨೮

---

ಬಿದ್ದಿತು) (೨೦-೨೨). ಆಗ ತೇಜಸ್ವಿಯಾದ ಸುಗ್ರೀವನು ಹೇಮಭೂಷಿತವಾದ ಒಂದು ಘೋರ ಮುಸಲಾಯುಧವು ನೆಲದಲ್ಲಿ ಬಿದ್ದಿರುವುದನ್ನು ನೋಡಿ ಕೈಗೆತ್ತಿಕೊಂಡು, ಮಹೋದರನಮೇಲೆ ಬೀಸಿದನು. ಆಗ ಮಹೋದರನು ಬೇರೊಂದು ಗದೆಯಿಂದ ಬಡಿಯಲು, ಆ ಎರಡು ಆಯುಧಗಳೂ ಒಂದಕ್ಕೊಂದು ತಾಕಿ ಮುರಿದುಬಿದ್ದವು (೨೩-೨೪). ಹೀಗೆ ಇಬ್ಬರ ಆಯುಧಗಳೂ ಭಗ್ನವಾಗಲು, ತೇಜೋಬಲಾನ್ವಿತರಾದ ಆ ವೀರರು ಉರಿಯುವ ಎರಡು ಅಗ್ನಿಜ್ವಾಲೆಗಳಂತೆ ಕಂಗೊಳಿಸುತ್ತ, ಮುಷ್ಟಿಯುದ್ಧವನ್ನಾರಂಭಿಸಿದರು! (೨೫). ಸಮರದುರ್ಜಯರಾದ ಆ ವೀರರು ಒಬ್ಬರನ್ನೊಬ್ಬರು ಗುದ್ದಿದರು. ಮತ್ತೆ ಮತ್ತೆ ಬೊಬ್ಬಿರಿದರು. ಅಂಗೈಗಳಿಂದ ಅಪ್ಪಳಿಸಿದರು. ಅಪ್ಪಳಿಸಿದ ರಭಸಕ್ಕೆ ಉರುಳಿಬಿದ್ದರು. ಕ್ಷಣಮಾತ್ರದಲ್ಲಿ ಮೇಲೆದ್ದರು. ಮತ್ತೆ ಗುದ್ದಾಡಿದರು. ಭುಜಗಳಿಂದ ಒಬ್ಬರನ್ನೊಬ್ಬರು ತಳ್ಳಿದರು (೨೬-೨೭). ಈ ರೀತಿಯಲ್ಲಿ ಮುಷ್ಟಿಯುದ್ಧದಿಂದ ಹೋರಾಡಿ ಇಬ್ಬರೂ ಬಳಲಿದರು. ಅಷ್ಟರಲ್ಲಿ ಮಹೋದರನು ಸ್ವಲ್ಪದೂರದಲ್ಲಿ ಬಿದ್ದಿದ್ದ ಖಡ್ಗವನ್ನೂ ಗುರಾಣಿಯನ್ನೂ ಥಟ್ಟನೆ ಕೈಗೆತ್ತಿ

ರಾಕ್ಷಸಶ್ಚರ್ಮಣಾ ಸಾರ್ಧಂ ಮಹಾವೇಗೋ ಮಹೋದರಃ ।
ತಥೈವ ಚ ಮಹಾಖಡ್ಗಂ ಚರ್ಮಣಾ ಪತಿತಂ ಸಹ ॥ ೨೯

ಜಗ್ರಾಹ ವಾನರಶ್ರೇಷ್ಠಃ ಸುಗ್ರೀವೋ ವೇಗವತ್ತರಃ ।
ತೌ ತು ರೋಷಪರೀತಾಂಗೌ ನರ್ದಂತಾವಭ್ಯಧಾವತಾಮ್ ॥ ೩೦

ಉದ್ಯತಾಸೀ ರಣೇ ಹೃಷ್ಟೌ ಯುಧಿ ಶಸ್ತ್ರವಿಶಾರದೌ ।
ದಕ್ಷಿಣಂ ಮಂಡಲಂ ಚೋಭೌ ಸುತೂರ್ಣಂ ಸಂಪರೀಯತುಃ ॥ ೩೧

ಅನ್ಯೋನ್ಯಮಭಿಸಂಕ್ರುದ್ಧೌ ಜಯೇ ಪ್ರಣಿಹಿತಾವುಭೌ ।
ಸ ತು ಶೂರೋ ಮಹಾವೇಗೋ ವೀರ್ಯಶ್ಲಾಘೀ ಮಹೋದರಃ ॥

ಮಹಾಚರ್ಮಣಿ ತಂ ಖಡ್ಗಂ ಪಾತಯಾಮಾಸ ದುರ್ಮತಿಃ ।
ಲಗ್ನಮುತ್ಕರ್ಷತಃ ಖಡ್ಗಂ ಖಡ್ಗೇನ ಕಪಿಕುಂಜರಃ ॥ ೩೩

ಜಹಾರ ಸಶಿರಸ್ತ್ರಾಣಂ ಕುಂಡಲೋಪಹಿತಂ ಶಿರಃ ।
ನಿಕೃತ್ತಶಿರಸಸ್ತಸ್ಯ ಪತಿತಸ್ಯ ಮಹೀತಲೇ ॥ ೩೪

---

ಕೊಂಡನು (೨೮). ವಾನರೋತ್ತಮನಾದ ಸುಗ್ರೀವನೂ ಸಹ ಅತಿ ಶೀಘ್ರ ವಾಗಿ ಬಹುಚಮತ್ಕಾರದಿಂದ, ಅಲ್ಲಿ ಬಿದ್ದಿದ್ದ ಇನ್ನೊಂದು ಮಹಾಖಡ್ಗ ವನ್ನೂ ಗುರಾಣಿಯನ್ನೂ ಹಿಡಿದು ನಿಂತನು ! ಶಸ್ತ್ರವಿದ್ಯೆಯಲ್ಲಿ ನಿಪುಣರಾದ ಅವರೀರ್ವರೂ ರೋಷಾವಿಷ್ಟರಾಗಿ ಅಬ್ಬರಿಸುತ್ತ ಖಡ್ಗಗಳನ್ನು ಎತ್ತಿಹಿಡಿದು ಸವ್ಯಾಪಸವ್ಯಗಳಿಂದ ಮಂಡಲಾಕಾರವಾಗಿ ವೇಗದಿಂದ ಸುತ್ತುತ್ತ, ಒಬ್ಬರ ನ್ನೊಬ್ಬರು ಎದುರಿಸಿದರು (೨೯-೩೧). 'ನಾನು ಜಯಿಸಬೇಕು-ನಾನು ಜಯಿಸಬೇಕು' ಎಂದು ಅವರಿಬ್ಬರೂ ಛಲದಿಂದ ಕೆರಳಿ ನಿಂತಿದ್ದರು. ಮಹೋದರನು ಶೂರನೂ ವೇಗಶಾಲಿಯೂ ಆಗಿದ್ದರೂ ತಾನು ಪರಾಕ್ರಮಿ ಯೆಂಬ ದುರಹಂಕಾರವುಳ್ಳವನು. ದುಡುಕುಸ್ವಭಾವದ ಅವಿವೇಕಿ (೩೨). ಆತನು ಥಟ್ಟನೆ ಖಡ್ಗವನ್ನೆತ್ತಿ ಹೊಡೆಯಲು, ಅದು ಸುಗ್ರೀವನ ಗುರಾಣಿ ಯಲ್ಲಿ ನಾಟಿಕೊಂಡಿತು. ನಾಟಿಕೊಂಡ ಖಡ್ಗವನ್ನು ಬಿಡಿಸಿಕೊಳ್ಳುವುದ ಕ್ಕಾಗಿ ಅವನು ಎಳೆಯುತ್ತಿರಲು, ಕಪಿಕುಂಜರನಾದ ಸುಗ್ರೀವನು ಶಿರಸ್ತ್ರಾಣ ದಿಂದ ಕೂಡಿ ಕುಂಡಲಾಲಂಕೃತವಾದ ಮಹೋದರನ ಶಿರಸ್ಸನ್ನು ಖಡ್ಗದಿಂದ ಕತ್ತರಿಸಿದನು. ಮುಂಡವು ಖಂಡಿಸಲ್ಪಡಲು ಆ ರಾಕ್ಷಸನು ನೆಲದ

ತದ್ಬಲಂ ರಾಕ್ಷಸೇಂದ್ರಸ್ಯ ದೃಷ್ಟ್ವಾ ತತ್ರ ನ ತಿಷ್ಠತೇ ।
ಹತ್ವಾ ತಂ ವಾನರೈಃ ಸಾರ್ಧಂ ನನಾದ ಮುದಿತೋ ಹರಿಃ ॥ ३४

ಚುಕ್ರೋಧ ಚ ದಶಗ್ರೀವೋ ಬಭೌ ಹೃಷ್ಟಶ್ಚ ರಾಘವಃ ।
ವಿಷಣ್ಣವದನಾಃ ಸರ್ವೇ ರಾಕ್ಷಸಾ ದೀನಚೇತಸಃ ॥ ३೬

ವಿದ್ರವಂತಿ ತತಃ ಸರ್ವೇ ಭಯವಿತ್ರಸ್ತಚೇತಸಃ ॥

ಮಹೋದರಂ ತಂ ವಿನಿಪಾತ್ಯ ಭೂಮೌ
ಮಹಾಗಿರೇಃ ಕೀರ್ಣಮಿವೈಕದೇಶಮ್ ।
ಸೂರ್ಯಾತ್ಮಜಸ್ತತ್ರ ರರಾಜ ಲಕ್ಷ್ಮ್ಯಾ
ಸೂರ್ಯಃ ಸ್ವತೇಜೋಭಿರಿವಾಪ್ರಧೃಷ್ಯಃ ॥ ३೭

ಅಥ ವಿಜಯಮವಾಪ್ಯ ವಾನರೇಂದ್ರಃ
ಸಮರಮುಖೇ ಸುರಯಕ್ಷಸಿದ್ಧಸಂಘೈಃ ।
ಅವನಿತಲಗತೈಶ್ಚ ಭೂತಸಂಘೈ-
ರ್ಹರ್ಷಸಮಾಕುಲಿತೈಃ ಸ್ತುತೋ ಮಹಾತ್ಮಾ ॥ ३೮

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟನವತಿತಮಃ ಸರ್ಗಃ

---

ಮೇಲೊರಗಿದನು (३३–३೪). ಮಹೋದರನು ಹತನಾದುದನ್ನು ನೋಡಿ, ಅವನ ಸೇನೆಯು ಅಲ್ಲಿ ನಿಲ್ಲದೆ ಪಲಾಯನವೆಸಗಿತು. ವಾನರರೂ ವಾನರೇಂದ್ರನಾದ ಸುಗ್ರೀವನೂ ಹರ್ಷದಿಂದ ಸಿಂಹನಾದಮಾಡಿದರು (३४). ಆ ವೃತ್ತಾಂತವನ್ನು ಕೇಳಿ ದಶಗ್ರೀವನು ಕೆರಳಿದನು. ರಾಘವನು ಸಂತುಷ್ಟನಾದನು. ಸಮಸ್ತ ರಾಕ್ಷಸರೂ ವಿಷಣ್ಣವದನರಾದರು. ಅವರ ಮನಸ್ಸಿನಲ್ಲಿ ದೈನ್ಯವು ಮೂಡಿತು. ಹೆದರಿಕೆಯಿಂದ ಕಂಗೆಟ್ಟು ಅವರೆಲ್ಲರೂ ಓಡಲಾರಂಭಿಸಿದರು (३೬). ಪ್ರಚಂಡ ಪರಾಕ್ರಮಿಯೂ ಸೂರ್ಯ ತನಯನೂ ಆದ ಸುಗ್ರೀವನು ಮಹಾಪರ್ವತದ ಒಂದು ಭಾಗವೋ ಎಂದು ಕಾಣುತ್ತಿದ್ದ ಮಹೋದರನನ್ನು ಕೊಂದು ಧರೆಯಲ್ಲುರುಳಿಸಿ, ವೀರಲಕ್ಷ್ಮೀ ಸಮೇತನಾಗಿ ವಿರಾಜಿಸಿದನು (३೭). ಧೀರನಾದ ಆ ವಾನರೇಂದ್ರನು ಸಮರಾಂಗಣದಲ್ಲಿ ವಿಜಯವನ್ನು ಸಂಪಾದಿಸಿ, ಹರ್ಷಾಕುಲರಾದ ಸುರಯಕ್ಷಸಿದ್ಧರಿಂದಲೂ ಭೂತಳದಲ್ಲಿದ್ದ ಸಮಸ್ತ ಭೂತಜಾತಗಳಿಂದಲೂ ಸ್ತುತಿಸಲ್ಪಟ್ಟನು (३೮).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತೆಂಟನೆಯ ಸರ್ಗ

## ಏಕೋನಶತತಮಃ ಸರ್ಗಃ

### ಮಹಾಪಾರ್ಶ್ವವಧಃ

ಮಹೋದರೇ ತು ನಿಹತೇ ಮಹಾಪಾರ್ಶ್ವೋ ಮಹಾಬಲಃ ।
ಸುಗ್ರೀವೇಣ ಸಮೀಕ್ಷ್ಯಾಥ ಕ್ರೋಧಾತ್ ಸಂರಕ್ತಲೋಚನಃ ॥ ೧

ಅಂಗದಸ್ಯ ಚಮೂಂ ಭೀಮಾಂ ಕ್ಷೋಭಯಾಮಾಸ ಸಾಯಕೈಃ ।
ಸ ವಾನರಾಣಾಂ ಮುಖ್ಯಾನಾಮುತ್ತಮಾಂಗಾನಿ ಸರ್ವಶಃ ॥ ೨

ಪಾತಯಾಮಾಸ ಕಾಯೇಭ್ಯಃ ಫಲಂ ವೃಂತಾದಿವಾನಿಲಃ ।
ಕೇಷಾಂಚಿದಿಷುಭಿರ್ಬಾಹೂನ್ ಸ್ಕಂಧಾಂಶ್ಚಿಚ್ಛೇದ ರಾಕ್ಷಸಃ ॥ ೩

ವಾನರಾಣಾಂ ಸುಸಂಕ್ರುದ್ಧಃ ಪಾರ್ಶ್ವಂ ಕೇಷಾಂ ವ್ಯದಾರಯತ್ ।
ತೇಽರ್ದಿತಾ ಬಾಣವರ್ಷೇಣ ಮಹಾಪಾರ್ಶ್ವೇನ ವಾನರಾಃ ॥ ೪

## ಸರ್ಗ ೯೯

### ರಾವಣನ ಮಂತ್ರಿಯಾದ ಮಹಾಪಾರ್ಶ್ವನ ಯುದ್ಧ. ಅಂಗದನಿಂದ ಅವನ ವಧೆ.

ಸುಗ್ರೀವನಿಂದ ಮಹೋದರನು ಹತನಾದುದನ್ನು ಮಹಾಪಾರ್ಶ್ವನು ನೋಡಿದನು. ಸಿಟ್ಟಿನಿಂದ ಅವನ ಕಣ್ಣುಗಳು ಕೆಂಪೇರಿದವು. ಒಡನೆಯೇ ಅಂಗದನ ಭೀಕರಸೇನೆಯಲ್ಲಿ ಪ್ರವೇಶಿಸಿ, ಸಾಯಕಗಳಿಂದ ಅದನ್ನು ಮರ್ದಿಸ ತೊಡಗಿದನು. ಆ ಮಹಾಪಾರ್ಶ್ವನು ವಾನರೋತ್ತಮರ ತಲೆಗಳನ್ನು ತರಿತರಿದು ಉರುಳಿಸಿದನು. ಬಿರುಗಾಳಿಯು ಮರಗಳ ತೊಟ್ಟುಗಳಿಂದ ಹಣ್ಣುಗಳನ್ನು ಉದುರಿಸುವಂತೆ, ವಾನರರ ಶಿರಸ್ಸುಗಳನ್ನು ಕಡಿಕಡಿದು ದೇಹಗಳಿಂದ ಕೆಡಹಿದನು (೧-೨). ಕ್ರುದ್ಧನಾದ ಆ ರಾಕ್ಷಸನು ಕೆಲವು ಕಪಿಗಳ ತೋಳುಗಳನ್ನೂ ಕೆಲವರ ಹೆಗಲುಗಳನ್ನೂ ಕತ್ತರಿಸಿದನು. ಕೆಲವರ ಪಕ್ಕೆಗಳನ್ನು ಕೆತ್ತಿದನು. ಮಹಾಪಾರ್ಶ್ವನ ಶರವರ್ಷದ ಅಬ್ಬರವನ್ನು ತಡೆಯಲಾರದೆ ಕಂಗೆಟ್ಟು ವಾನರರು ವಿಷಣ್ಣರಾಗಿ, ಮುಂದೇನು ಮಾಡ

ವಿಷಾದವಿಮುಖಾಃ ಸರ್ವೇ ಬಭೂವುರ್ಗತಚೇತಸಃ ।
ನಿರೀಕ್ಷ್ಯ ಬಲಮುದ್ವಿಗ್ನಮಂಗದೋ ರಾಕ್ಷಸಾರ್ದಿತಮ್ ॥ ೫

ವೇಗಂ ಚಕ್ರೇ ಮಹಾಬಾಹುಃ ಸಮುದ್ರ ಇವ ಪರ್ವಣಿ ।
ಆಯಸಂ ಪರಿಘಂ ಗೃಹ್ಯ ಸೂರ್ಯರಶ್ಮಿಸಮಪ್ರಭಮ್ ॥ ೬

ಸಮರೇ ವಾನರಶ್ರೇಷ್ಠೋ ಮಹಾಪಾರ್ಶ್ವೇ ನ್ಯಪಾತಯತ್ ।
ಸ ತು ತೇನ ಪ್ರಹಾರೇಣ ಮಹಾಪಾರ್ಶ್ವೋ ವಿಚೇತನಃ ॥ ೭

ಸಸೂತಃ ಸ್ಯಂದನಾತ್ತಸ್ಮಾದ್ವಿಸಂಜ್ಞಃ ಪ್ರಾಪತದ್ಭುವಿ ।
ಸರ್ಕ್ಷರಾಜಸ್ತು ತೇಜಸ್ವೀ ನೀಲಾಂಜನಚಯೋಪಮಃ ॥ ೮

ನಿಷ್ಪತ್ಯ ಸುಮಹಾವೀರ್ಯಃ ಸ್ವಾದ್ಯೂಥ್ಯಾನ್ಮೇಘಸಂನಿಭಾತ್ ।
ಪ್ರಗೃಹ್ಯ ಗಿರಿಶೃಂಗಾಭಾಂ ಕ್ರುದ್ಧಃ ಸ ವಿಪುಲಾಂ ಶಿಲಾಮ್ ॥ ೯

ಅಶ್ವಾನ್ ಜಘಾನ ತರಸಾ ಸ್ಯಂದನಂ ಚ ಬಭಂಜ ತಮ್ ।
ಮುಹೂರ್ತಾಲ್ಲಬ್ಧಸಂಜ್ಞಸ್ತು ಮಹಾಪಾರ್ಶ್ವೋ ಮಹಾಬಲಃ ॥ ೧೦

---

ಬೇಕೆಂದು ತಿಳಿಯಲಾರದೆಹೋದರು (೩–೪). ಆ ರಾಕ್ಷಸನಿಂದ ಪೀಡಿತವಾದ ತನ್ನ ಸೇನೆಯು ಭಯದಿಂದ ಉದ್ವಿಗ್ನವಾಗಿರುವುದನ್ನು ಅಂಗದನು ನೋಡಿದನು. ಆ ಮಹಾಬಾಹುವು ಪರ್ವಕಾಲದ ಸಮುದ್ರದಂತೆ ಉತ್ಸಾಹದಿಂದ ಉಬ್ಬಿ ಸೂರ್ಯಕಿರಣದಂತೆ (ಚಿನ್ನದ ಕಟ್ಟಿನಿಂದ) ಮಿರುಮಿರುಗುವ ಕಬ್ಬಿಣದ ಪರಿಘವನ್ನು ಹಿಡಿದು ವೇಗದಿಂದ ಧಾವಿಸುತ್ತ ಬಂದು ಮಹಾಪಾರ್ಶ್ವನನ್ನು ಬಡಿದನು (೫–೬). ಆ ಪ್ರಹಾರದ ಬಿರುಸಿಗೆ ಮಹಾಪಾರ್ಶ್ವನೂ ಅವನ ಸಾರಥಿಯೂ ಮೂರ್ಛಿತರಾಗಿ ರಥದಿಂದ ಧರೆಗೆ ಉರುಳಿದರು. ಅಷ್ಟರಲ್ಲಿ ತೇಜಸ್ವಿಯಾದ ಗವಾಕ್ಷನು ಭಲ್ಲೂಕರಾಜನಾದ ಜಾಂಬವಂತನೊಡನೆ ಅಲ್ಲಿಗೆ ಬಂದನು. ಕಪ್ಪುಕಾಡಿಗೆಯ ರಾಶಿಯಂತಿದ್ದ ಆ ವೀರರಿಬ್ಬರೂ ಮೇಘಪಂಕ್ತಿಯಂತೆ ಕಪ್ಪಗೆ ದಟ್ಟವಾಗಿದ್ದ ತಮ್ಮ ಭಲ್ಲೂಕ ಸೇನೆಯಿಂದ ಹೊರಬಂದು, ಗಿರಿಶೃಂಗದಂತಿದ್ದ ದೊಡ್ಡ ಬಂಡೆಗಳನ್ನು ಬೀಸಿ ಮಹಾಪಾರ್ಶ್ವನ ಅಶ್ವಗಳನ್ನು ಕೊಂದು ರಥವನ್ನು ಪುಡಿಪುಡಿಮಾಡಿದರು (೭–೯). ಬಲಾಢ್ಯನಾದ ಮಹಾಪಾರ್ಶ್ವನು ತುಸುಹೊತ್ತಿನಲ್ಲಿ

ಅಂಗದಂ ಬಹುಭಿರ್ಬಾಣೈರ್ಭೀಮೈರಾಯಸೈಸ್ತಂ ಪ್ರತ್ಯವಿಧ್ಯತ ।
ಜಾಂಬವಂತಂ ತ್ರಿಭಿರ್ಬಾಣೈರಾಜಘಾನ ಸ್ತನಾಂತರೇ ॥ ೧೧

ಋಕ್ಷರಾಜಂ ಗವಾಕ್ಷಂ ಚ ಜಘಾನ ಬಹುಭಿಃ ಶರೈಃ ।
ಜಾಂಬವಂತಂ ಗವಾಕ್ಷಂ ಚ ಸ ದೃಷ್ಟ್ವಾ ಶರಪೀಡಿತೌ ॥ ೧೨

ಜಗ್ರಾಹ ಪರಿಘಂ ಘೋರಮಂಗದಃ ಕ್ರೋಧಮೂರ್ಛಿತಃ ।
ತಸ್ಯಾಂಗದಃ ಪ್ರಕುಪಿತೋ ರಾಕ್ಷಸಸ್ಯ ತಮಾಯಸಮ್ ॥ ೧೩

ದೂರಸ್ಥಿತಸ್ಯ ಪರಿಘಂ ರವಿರಶ್ಮಿಸಮಪ್ರಭಮ್ ।
ದ್ವಾಭ್ಯಾಂ ಭುಜಾಭ್ಯಾಂ ಸಂಗೃಹ್ಯ ಭ್ರಾಮಯಿತ್ವಾ ಚ ವೇಗವಾನ್ ॥
ಮಹಾಪಾರ್ಶ್ವಸ್ಯ ಚಿಕ್ಷೇಪ ವಧಾರ್ಥಂ ವಾಲಿನಃ ಸುತಃ ।
ಸ ತು ಕ್ಷಿಪ್ತೋ ಬಲವತಾ ಪರಿಘಸ್ತಸ್ಯ ರಕ್ಷಸಃ ॥ ೧೪

ಧನುಶ್ಚ ಸಶರಂ ಹಸ್ತಾಚ್ಛಿರಸ್ತ್ರಂ ಚಾಪ್ಯಪಾತಯತ್ ।
ತಂ ಸಮಾಸಾದ್ಯ ವೇಗೇನ ವಾಲಿಪುತ್ರಃ ಪ್ರತಾಪವಾನ್ ॥ ೧೫

ತಲೇನಾಭ್ಯಹನತ್ ಕ್ರುದ್ಧಃ ಕರ್ಣಮೂಲೇ ಸಕುಂಡಲೇ ।
ಸ ತು ಕ್ರುದ್ಧೋ ಮಹಾವೇಗೋ ಮಹಾಪಾರ್ಶ್ವೋ ಮಹಾದ್ಯುತಿಃ

---

ಎಚ್ಚೆತ್ತು ಬಹುಬಾಣಗಳಿಂದ ಅಂಗದನನ್ನು ಹೊಡೆದು, ಜಾಂಬವಂತನ ಎದೆಗೆ ಮೂರು ಬಾಣಗಳನ್ನು ಬಿಗಿದು, ಗವಾಕ್ಷನನ್ನು ಬಾಣವರ್ಷಗಳಿಂದ ಪೀಡಿಸಿದನು (೧೧-೧೨). ಜಾಂಬವಂತನೂ ಗವಾಕ್ಷನೂ ಹೀಗೆ ಶರಪೀಡಿತ ರಾದುದನ್ನು ವೀಕ್ಷಿಸಿದ ಅಂಗದನು ರೋಷಾವಿಷ್ಟನಾಗಿ ಘೋರವಾದ ಪರಿಘವನ್ನು ಕೈಗೆತ್ತಿಕೊಂಡನು. (ಕಾಂಚನಭೂಷಿತವಾದ) ಆ ಪರಿಘವು ರವಿರಶ್ಮಿಯಂತೆ ಥಳಥಳಿಸುತ್ತಿತ್ತು. ಆ ವಾಲಿಪುತ್ರನು ಎರಡು ಕೈಗಳಿಂದಲೂ ಅದನ್ನು ಗಿರಗಿರನೆ ತಿರುಗಿಸಿ, ಮಹಾಪಾರ್ಶ್ವನನ್ನು ವಧಿಸುವ ಉದ್ದೇಶದಿಂದ ಅವನಿಗೆ ಗುರಿಯಿಟ್ಟು ಬಿರ್‍ರನೆ ಬೀಸಿ ಹೊಡೆದನು (೧೩-೧೪). ಬಲಾಢ್ಯನಾದ ಅಂಗದನ ಆ ಹೊಡೆತದಿಂದ ಪರಿಘವು ಆ ರಾಕ್ಷಸನ ಕೈಯಿಂದ ಧನುರ್ಬಾಣಗಳನ್ನೂ ಅವನ ಶಿರಸ್ತ್ರಾಣವನ್ನೂ ಉರುಳಿಸಿತು. ಒಡನೆಯೇ ಪ್ರತಾಪಶಾಲಿಯಾದ ಆ ವಾಲಿಪುತ್ರನು ವೇಗದಿಂದ ಮುನ್ನುಗ್ಗಿ ಮಹಾಪಾರ್ಶ್ವನ ಕುಂಡಲಸಹಿತವಾದ ಕರ್ಣಮೂಲದಲ್ಲಿ ಅಂಗೈಯಿಂದ

ಕರೇಣೈಕೇನ ಜಗ್ರಾಹ ಸುಮಹಾಂತಂ ಪರಶ್ವಧಮ್ ।
ತಂ ತೈಲಧೌತಂ ವಿಮಲಂ ಶೈಲಸಾರಮಯಂ ದೃಢಮ್ ॥ ೧೮

ರಾಕ್ಷಸಃ ಪರಮಕ್ರುದ್ಧೋ ವಾಲಿಪುತ್ರೇ ನ್ಯಪಾತಯತ್ ।
ತೇನ ವಾಮಾಂಸಫಲಕೇ ಭೃಶಂ ಪ್ರತ್ಯವಪಾತಿತಮ್ ॥ ೧೯

ಅಂಗದೋ ಮೋಕ್ಷಯಾಮಾಸ ಸರೋಷಃ ಸ ಪರಶ್ವಧಮ್ ।
ಸ ವೀರೋ ವಜ್ರಸಂಕಾಶಮಂಗದೋ ಮುಷ್ಟಿಮಾತ್ಮನಃ ॥ ೨೦

ಸಂವರ್ತಯತ್ ಸುಸಂಕ್ರುದ್ಧಃ ಪಿತುಸ್ತುಲ್ಯಪರಾಕ್ರಮಃ ।
ರಾಕ್ಷಸಸ್ಯ ಸ್ತನಾಭ್ಯಾಶೇ ಮರ್ಮಜ್ಞೋ ಹೃದಯಂ ಪ್ರತಿ ॥ ೨೧

ಇಂದ್ರಾಶನಿಸಮಸ್ಪರ್ಶಂ ಸ ಮುಷ್ಟಿಂ ವ್ಯಪಾತಯತ್ ।
ತೇನ ತಸ್ಯ ನಿಪಾತೇನ ರಾಕ್ಷಸಸ್ಯ ಮಹಾಮೃಧೇ ॥ ೨೨

ಪಫಾಲ ಹೃದಯಂ ಚಾಶು ಸ ಪಪಾತ ಹತೋ ಭುವಿ ।
ತಸ್ಮಿನ್ನಿಪತಿತೇ ಭೂಮೌ ತತ್ಸೈನ್ಯಂ ಸಂಪ್ರಚುಕ್ಷುಭೇ ॥ ೨೩

---

ಅಪ್ಪಳಿಸಿದನು. ಶೂರಾಗ್ರಗಣ್ಯನೂ ತೇಜಸ್ವಿಯೂ ಆದ ಮಹಾಪಾರ್ಶ್ವನು ರೋಷಾವಿಷ್ಟನಾದನು (೧೬-೧೭). ಅವನು ದೊಡ್ಡದಾದ ಕೊಡಲಿಯನ್ನು ಕೈಗೆ ತೆಗೆದುಕೊಂಡನು. ಆ ಕೊಡಲಿಯು ಎಣ್ಣೆಯನ್ನು ಹಚ್ಚಿ ಹದಮಾಡಿದ್ದರಿಂದ ಸ್ವಚ್ಛವಾಗಿ ಹೊಳೆಯುತ್ತ ಕಗ್ಗಲ್ಲಿನಂತೆ ಕಠಿನವಾಗಿ ದೃಢವಾಗಿತ್ತು. ಮಹಾಪಾರ್ಶ್ವನು ಆ ಕೊಡಲಿಯನ್ನೆತ್ತಿ ರೋಷಾವೇಶದಿಂದ ಅಂಗದನ ಎಡಹೆಗಲಿನಮೇಲೆ ಜಡಿದನು (೧೮-೧೯). ಅಂಗದನು ಛಂಗನೆ ಹಾರಿ ಆ ಜಡಿತವನ್ನು ತಪ್ಪಿಸಿಕೊಂಡು ವಜ್ರಸದೃಶವಾದ ತನ್ನ ಮುಷ್ಟಿಯನ್ನು ಕಟ್ಟಿದನು. ತಂದೆಯಾದ ವಾಲಿಯಂತೆ ಅಸದೃಶಪರಾಕ್ರಮಿಯೂ ಯುದ್ಧಮರ್ಮಜ್ಞನೂ ಆದ ಆ ವೀರನು ಮಹಾಪಾರ್ಶ್ವನ ಎದೆಯಮೇಲೆ ಸಿಡಿಲಿನಂತೆ ರಭಸದಿಂದ ಗುದ್ದಿದನು (೨೦-೨೨). ಗುದ್ದಿದ ರಭಸಕ್ಕೆ ಆ ರಾಕ್ಷಸನ ಎದೆಯೊಡೆಯಿತು. ಅವನು ಹತನಾಗಿ ಬಿದ್ದನು. ಮಹಾಪಾರ್ಶ್ವನು ಮೃತನಾದನೆಂದು ತಿಳಿದೊಡನೆ, ರಾಕ್ಷಸಸೇನೆಯು

ಅಭವಚ್ಚ ಮಹಾನ್ ಕ್ರೋಧಃ ಸಮರೇ ರಾವಣಸ್ಯ ತು ।
ವಾನರಾಣಾಂ ಚ ಹೃಷ್ಟಾನಾಂ ಸಿಂಹನಾದಶ್ಚ ಪುಷ್ಕಲಃ ॥ ೨೪

ಸ್ಫೋಟಯನ್ನಿವ ಶಬ್ದೇನ ಲಂಕಾಂ ಸಾಟ್ಟಾಲಗೋಪುರಾಮ್ ।
ಮಹೇಂದ್ರೇಣೇವ ದೇವಾನಾಂ ನಾದಃ ಸಮಭವನ್ಮಹಾನ್ ॥ ೨೫

ಅಥೇಂದ್ರಶತ್ರುಸ್ತ್ರಿದಿವಾಲಾಯಾನಾಂ
ವನೌಕಸಾಂ ಚೈವ ಮಹಾಪ್ರಣಾದಮ್ ।
ಶ್ರುತ್ವಾ ಸರೋಷಂ ಯುಧಿ ರಾಕ್ಷಸೇಂದ್ರಃ
ಪುನಶ್ಚ ಯುದ್ಧಾಭಿಮುಖೋಽವತಸ್ಥೇ ॥ ೨೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಶತತಮಃ ಸರ್ಗಃ



ಕ್ಷುಬ್ಧವಾಗಿ ಚಲ್ಲಾಪಿಲ್ಲಿಯಾಗತೊಡಗಿತು. ರಾವಣನು ಕ್ರೋಧಾವಿಷ್ಟನಾದನು. ಸಂಹೃಷ್ಟರಾದ ವಾನರರ ಸಿಂಹನಾದವು ಮೊರೆಯಿತು. ದೇವೇಂದ್ರನೊಡನೆ ದೇವತೆಗಳೂ ಹರ್ಷಘೋಷಮಾಡಲು, ಆ ಕೋಲಾಹಲದಿಂದ ಉಪ್ಪರಿಗೆ ಗೋಪುರಗಳ ಸಹಿತವಾಗಿ ಲಂಕಾನಗರವು ಬಿರಿಯಿತೋ ಎಂಬಂತೆ ಆಯಿತು (೨೪-೨೫). ಇಂದ್ರಶತ್ರುವಾದ ರಾವಣನು ದೇವತೆಗಳ ಮತ್ತು ವಾನರಯೋಧರ ಹರ್ಷಘೋಷವನ್ನು ಕೇಳಿ ಸಿಟ್ಟಿನಿಂದ ಕೆರಳಿ ಮತ್ತೆ ಯುದ್ಧಾಭಿಮುಖನಾಗಿ ನಿಂತನು (೨೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ತೊಂಬತ್ತೊಂಬತ್ತನೆಯ ಸರ್ಗ



## ಶತತಮಃ ಸರ್ಗಃ

### ರಾಮರಾವಣಾಸ್ತ್ರಪರಂಪರಾ

ಮಹೋದರಮಹಾಪಾರ್ಶ್ವೌ ಹತೌ ದೃಷ್ಟ್ವಾ ತು ರಾಕ್ಷಸೌ ।
ತಸ್ಮಿಂಶ್ಚ ನಿಹತೇ ವೀರೇ ವಿರೂಪಾಕ್ಷೇ ಮಹಾಬಲೇ ॥ ೧
ಆವಿವೇಶ ಮಹಾನ್ ಕ್ರೋಧೋ ರಾವಣಂ ತಂ ಮಹಾಮೃಧೇ ।
ಸೂತಂ ಸಂಚೋದಯಾಮಾಸ ವಾಕ್ಯಂ ಚೇದಮುವಾಚ ಹ ॥ ೨
ನಿಹತಾನಾಮಮಾತ್ಯಾನಾಂ ರುದ್ಧಸ್ಯ ನಗರಸ್ಯ ಚ ।
ದುಃಖಮೇಷೋಽಪನೇಷ್ಯಾಮಿ ಹತ್ವಾ ತೌ ರಾಮಲಕ್ಷ್ಮಣೌ ॥ ೩
ರಾಮವೃಕ್ಷಂ ರಣೇ ಹನ್ಮಿ ಸೀತಾಪುಷ್ಪಫಲಪ್ರದಮ್ ।
ಪ್ರಶಾಖಾ ಯಸ್ಯ ಸುಗ್ರೀವೋ ಜಾಂಬವಾನ್ ಕುಮುದೋ ನಲಃ ॥
ಮೈಂದಶ್ಚ ದ್ವಿವಿದಶ್ಚೈವ ಹ್ಯಂಗದೋ ಗಂಧಮಾದನಃ ।
ಹನೂಮಾಂಶ್ಚ ಸುಷೇಣಶ್ಚ ಸರ್ವೇ ಚ ಹರಿಯೂಥಪಾಃ ॥ ೪

## ಸರ್ಗ ೧೦೦

**ಕ್ರೋಧಾವಿಷ್ಟನಾದ ರಾವಣನು ಶ್ರೀರಾಮನೊಡನೆ ಯುದ್ಧವನ್ನು ಆರಂಭಿಸುವುದು. ಅವರೀರ್ವರಿಗೆ ಭೀಕರವಾದ ಯುದ್ಧ.**

ಮಹಾವೀರನಾದ ವಿರೂಪಾಕ್ಷನೂ ಮಹೋದರ ಮಹಾಪಾರ್ಶ್ವರೂ ಈ ಪರಿಯಲ್ಲಿ ನಿಹತರಾದುದನ್ನು ನೋಡಿ, ರಾವಣನಿಗೆ ಮಿತಿಯಿಲ್ಲದ ಮಹಾಕೋಪವು ಆವರಿಸಿತು. ಒಡನೆಯೇ ರಣರಂಗದೊಳಗೆ ನುಗ್ಗಬೇಕೆಂದು ಸಾರಥಿಯನ್ನು ಚೋದಿಸುತ್ತ "ಸಾರಥಿ, ನಡೆಸು ನನ್ನ ರಥವನ್ನು! (೧-೨). ನಿಹತರಾದ ಅಮಾತ್ಯರ, ಮುತ್ತಿಗೆ ಹಾಕಲ್ಪಟ್ಟ ಲಂಕಾನಿವಾಸಿಗಳ–ದುಃಖವನ್ನು ಕೊನೆಗಾಣಿಸುವೆನು. ರಾಮಲಕ್ಷ್ಮಣರನ್ನು ವಧಿಸುವೆನು. ಸೀತೆಯೆಂಬ ಹೂ ಹಣ್ಣುಗಳಿಂದ ರಾಜಿಸುವ ರಾಮನೆಂಬ ವೃಕ್ಷವನ್ನು ಬುಡಸಹಿತ ಕಡಿದೊಗೆಯುವೆನು. ಸುಗ್ರೀವ, ಜಾಂಬವಂತ, ಕುಮುದ, ನಲ, ಮೈಂದ, ದ್ವಿವಿದ, ಅಂಗದ, ಗಂಧಮಾದನ, ಹನುಮಂತ, ಸುಷೇಣ ಮುಂತಾದ ಕಪಿಯೋಧರೆಂಬ ಶಾಖೋಪಶಾಖೆಗಳಿಂದ ಕೂಡಿದ ರಾಮವೃಕ್ಷವನ್ನು

ಸ ದಿಶೋ ದಶ ಘೋಷೇಣ ರಥಸ್ಯಾತಿರಥೋ ಮಹಾನ್ ।
ನಾದಯನ್ ಪ್ರಯಯೌ ತೂರ್ಣಂ ರಾಘವಂ ಚಾಭ್ಯವರ್ತತ ॥ ೬

ಪೂರಿತಾ ತೇನ ಶಬ್ದೇನ ಸನದೀಗಿರಿಕಾನನಾ ।
ಸಂಚಚಾಲ ಮಹೀ ಸರ್ವಾ ತ್ರಸ್ತಸಿಂಹಮೃಗದ್ವಿಜಾ ॥ ೭

ತಾಮಸಂ ಸ ಮಹಾಘೋರಂ ಚಕಾರಾಸ್ತ್ರಂ ಸುದಾರುಣಮ್ ।
ನಿರ್ದದಾಹ ಕಪೀನ್ ಸರ್ವಾಂಸ್ತೇ ಪ್ರಪೇತುಃ ಸಮಂತತಃ ॥ ೮

ಉತ್ಪಪಾತ ರಜೋ ಘೋರಂ ತೈರ್ಭಗ್ನೈಃ ಸಂಪ್ರಧಾವಿತೈಃ ।
ನ ಹಿ ತತ್ ಸಹಿತುಂ ಶೇಕುರ್ಬ್ರಹ್ಮಣಾ ನಿರ್ಮಿತಂ ಸ್ವಯಮ್ ॥ ೯

ತಾನ್ಯನೀಕಾನ್ಯನೇಕಾನಿ ರಾವಣಸ್ಯ ಶರೋತ್ತಮೈಃ ।
ದೃಷ್ಟ್ವಾ ಭಗ್ನಾನಿ ಶತಶೋ ರಾಘವಃ ಪರ್ಯವಸ್ಥಿತಃ ॥ ೧೦

---

ಕತ್ತರಿಸುವೆನು ! ” ಎಂದನು (೩-೫). ಅತಿರಥರಲ್ಲಿ ಅಗ್ರಗಣ್ಯನಾದ ರಾವಣನು ಹೀಗೆನ್ನುತ್ತ, ರಥಘೋಷದಿಂದ ದಶದಿಕ್ಕುಗಳನ್ನೂ ಮೊಳಗಿ ಸುತ್ತ, ಶ್ರೀರಾಮನಿದ್ದ ಸ್ಥಳಕ್ಕೆ ಧಾವಿಸಿದನು. ಅವನ ರಥಘೋಷವು ಎಲ್ಲೆಲ್ಲಿಯೂ ವ್ಯಾಪಿಸಿ ನದಿಗಳಲ್ಲಿ ಭೋರ್ಗರೆದು ಗಿರಿಗಳಲ್ಲಿ ಮಾರ್ದನಿಗೊಂಡು ವನಗಳಲ್ಲಿ ಪ್ರತಿಧ್ವನಿಸಿತು. ಭೂಮಿಯು ನಡುಗಿತು. ಸಿಂಹಾದಿ ಮೃಗಗಳು ಅಂಜಿದವು. ಹಕ್ಕಿಗಳು ಹೆದರಿದವು (೬-೭). ಆಗ ರಾವಣನು ಅತಿಘೋರವೂ ಶತ್ರುದಾರಣವೂ ಆದ ತಾಮಸಾಸ್ತ್ರ*ವನ್ನು ಪ್ರಯೋಗಿಸಿ ಸಕಲ ಕಪಿಯೋಧರನ್ನೂ ಸುಟ್ಟು ಉರುಬಿದನು. ಕಪಿಗಳು ಸತ್ತು ಸತ್ತು ಬಿದ್ದರು. ಸುತ್ತಲೂ ಓಡುತ್ತಿದ್ದ, ಅಳಿದು ಬೀಳುತ್ತಿದ್ದ ಕಪಿಗಳ ಕೋಲಾಹಲದಿಂದ ರಜೋರಾಶಿಯು ಮೇಲೆದ್ದು ಎಲ್ಲೆಲ್ಲಿಯೂ ಮುಸುಕಿತು. ಸಾಕ್ಷಾತ್ ಬ್ರಹ್ಮನೇ ನಿರ್ಮಿಸಿದ್ದ ಆ ಭೀಕರಾಸ್ತ್ರವನ್ನೆದುರಿಸಲು ವಾನರರಿಗೆ ಶಕ್ಯವಾದೀತೆ ? (೮-೯). ರಾವಣನ ಶರಜಾಲಗಳಿಂದ ಭಗ್ನರಾಗಿ ಗುಂಪು ಗುಂಪಾಗಿ ಮುರಿದೋಡುತ್ತಿದ್ದ ವಾನರಯೋಧರನ್ನು ವೀಕ್ಷಿಸಿ ಶ್ರೀರಾಮನು

---

* ತಾಮಸಾಸ್ತ್ರ = ರಾಹುದೇವತಾಕವಾದ ಮಂತ್ರಾಸ್ತ್ರ.

ತತೋ ರಾಕ್ಷಸಶಾರ್ದೂಲೋ ವಿದ್ರಾವ್ಯ ಹರಿವಾಹಿನೀಮ್ ।
ಸ ದದರ್ಶ ತತೋ ರಾಮಂ ತಿಷ್ಠಂತಮಪರಾಜಿತಮ್ ॥ ೧೧

ಲಕ್ಷ್ಮಣೇನ ಸಹ ಭ್ರಾತ್ರಾ ವಿಷ್ಣುನಾ ವಾಸವಂ ಯಥಾ ।
ಆಲಿಖಂತಮಿವಾಕಾಶಮವಷ್ಟಭ್ಯ ಮಹದ್ಧನುಃ ॥ ೧೨

ಪದ್ಮಪತ್ರವಿಶಾಲಾಕ್ಷಂ ದೀರ್ಘಬಾಹುಮರಿಂದಮಮ್ ।
ತತೋ ರಾಮೋ ಮಹಾತೇಜಾಃ ಸೌಮಿತ್ರಿಸಹಿತೋ ಬಲೀ ॥ ೧೩

ವಾನರಾಂಶ್ಚ ರಣೇ ಭಗ್ನಾನಾಪತಂತಂ ಚ ರಾವಣಮ್ ।
ಸಮೀಕ್ಷ್ಯ ರಾಘವೋ ಹೃಷ್ಟೋ ಮಧ್ಯೇ ಜಗ್ರಾಹ ಕಾರ್ಮುಕಮ್ ॥

ವಿಸ್ಫಾರಯಿತುಮಾರೇಭೇ ತತಃ ಸ ಧನುರುತ್ತಮಮ್ ।
ಮಹಾವೇಗಂ ಮಹಾನಾದಂ ನಿರ್ಭಿಂದನ್ನಿವ ಮೇದಿನೀಮ್ ॥ ೧೫

ಯುದ್ಧಸನ್ನದ್ಧನಾದನು. ರಾಕ್ಷಸಶಾರ್ದೂಲನಾದ ರಾವಣನು ಕಪಿಸೇನೆಯನ್ನು ವಿಚ್ಛಿದ್ರಗೊಳಿಸುತ್ತ ನುಗ್ಗಿ ಬರಲಾಗಿ, ಶತ್ರುದುರ್ಜಯನಾದ ಶ್ರೀರಾಮನು ಎದುರಿಗೆ ಗೋಚರಿಸಿದನು! (೧೦-೧೧). ಉಪೇಂದ್ರನೊಡನೆ ಇರುವ ದೇವೇಂದ್ರನಂತೆ, ತಮ್ಮನಾದ ಲಕ್ಷ್ಮಣನೊಡನೆ ಶ್ರೀರಾಮನು ಮಹಾಧನುಸ್ಸನ್ನು ಊರಿ ನಿಂತಿದ್ದನು. ಉನ್ನತವಾದ ತನ್ನ ಧನುಸ್ಸಿನಿಂದ ಆಕಾಶವನ್ನು ಅಳೆಯುವನೋ ಎಂಬಂತೆ ಕಾಣುತ್ತಿದ್ದನು (೧೨). ನಳಿನದಳಾಯತಾಕ್ಷನೂ ಆಜಾನುಬಾಹುವೂ ವೈರಿವಿಧ್ವಂಸಕನೂ ಆದ ಶ್ರೀರಾಮನನ್ನು ರಾವಣನು ಕಂಡನು. ಸೌಮಿತ್ರಿಸಹಿತನಾಗಿ ನಿಂತಿದ್ದ ಮಹಾತೇಜೋರಾಶಿಯೂ ವೀರಾಗ್ರಣಿಯೂ ರಘುಕುಲತಿಲಕನೂ ಆದ ಶ್ರೀರಾಮನು* ರಣರಂಗದಲ್ಲಿ ಭಗ್ನರಾಗಿ ಓಡುತ್ತಿದ್ದ ವಾನರಯೋಧರನ್ನು ಮೊದಲು ಕಂಡನು. ಅನಂತರ ಅವರ ಹಿಂದೆಯೇ ನುಗ್ಗಿ ಬರುತ್ತಿದ್ದ ರಾವಣನನ್ನು ಕಂಡು ಸಂಹೃಷ್ಟನಾದನು! (೧೩-೧೪). ಒಡನೆಯೇ ಶ್ರೀರಾಮನು ಮಹಾವೇಗವುಳ್ಳ ಕೋದಂಡದ ಮಧ್ಯಭಾಗವನ್ನು ಹಿಡಿದು

---

* ಈ ವರ್ಣನೆಯಿಂದ ವಾಲ್ಮೀಕಿ ಮುನಿಗಳಿಗೆ ಶ್ರೀರಾಮಚಂದ್ರನಲ್ಲಿರುವ ಆದರಾತಿಶಯವು ಅಭಿವ್ಯಕ್ತವಾಗುತ್ತದೆ. ಇದು ಪ್ರೇಯೋಲಂಕಾರಧ್ವನಿ. ಅಲ್ಲದೆ ಆ ಮಹಾಪುರುಷನ ಗುಣಾತಿಶಯಗಳಿಗೆ ಶರಣಾಗಲಿಲ್ಲವೆಂದು ರಾವಣನ ದೌರ್ಭಾಗ್ಯವೂ ವ್ಯಕ್ತವಾಗುತ್ತದೆ.

ರಾವಣಸ್ಯ ಚ ಬಾಣೌಘೈ ರಾಮವಿಸ್ಫಾರಿತೇನ ಚ ।
ಶಬ್ದೇನ ರಾಕ್ಷಸಾಸ್ತೇ ಚ ಪೇತುಶ್ಚ ಶತಶಸ್ತದಾ ॥ ೧೬

ತಯೋಃ ಶರಪಥಂ ಪ್ರಾಪ್ತೋ ರಾವಣೋ ರಾಜಪುತ್ರಯೋಃ ।
ಸ ಬಭೌ ಚ ಯಥಾ ರಾಹುಃ ಸಮೀಪೇ ಶಶಿಸೂರ್ಯಯೋಃ ॥ ೧೭

ತಮಿಚ್ಛನ್ ಪ್ರಥಮಂ ಯೋದ್ಧುಂ ಲಕ್ಷ್ಮಣೋ ನಿಶಿತೈಃ ಶರೈಃ ।
ಮುಮೋಚ ಧನುರಾಯಮ್ಯ ಶರಾನಗ್ನಿಶಿಖೋಪಮಾನ್ ॥ ೧೮

ತಾನ್ ಮುಕ್ತಮಾತ್ರಾನಾಕಾಶೇ ಲಕ್ಷ್ಮಣೇನ ಧನುಷ್ಮತಾ ।
ಬಾಣಾನ್ ಬಾಣೈರ್ಮಹಾತೇಜಾ ರಾವಣಃ ಪ್ರತ್ಯವಾರಯತ್ ॥ ೧೯

ಏಕಮೇಕೇನ ಬಾಣೇನ ತ್ರಿಭಿಸ್ತ್ರೀನ್ ದಶಭಿರ್ದಶ ।
ಲಕ್ಷ್ಮಣಸ್ಯ ಪ್ರಚಿಚ್ಛೇದ ದರ್ಶಯನ್ ಪಾಣಿಲಾಘವಮ್ ॥ ೨೦

---

ನಾಣನ್ನು ಮಿಡಿದು, ಭೂಮಂಡಲವೇ ಬಿರಿದುಹೋಗುವುದೋ ಎಂಬಂತೆ ಭೀಕರನಾದದಿಂದ ಜೇಗೈಯತೊಡಗಿದನು (೧೫). ಆ ಸಮಯದಲ್ಲಿ ರಾವಣನ ಶರರಾಶಿಗಳಿಂದ ತಾಡಿತರಾದ ವಾನರರೂ ಶ್ರೀರಾಮನ ಕೋದಂಡಠಂಕಾರದ ಭೀಷಣಧ್ವನಿಯನ್ನು ಕೇಳಿದ ರಾಕ್ಷಸರೂ ಹೆದರಿ ಗುಂಪುಗುಂಪಾಗಿ ನೆಲದಲ್ಲುರುಳಿದರು ! (೧೬). ಬಾಣವನ್ನು ಹೊಡೆಯುವಷ್ಟು ಸಮೀಪಕ್ಕೆ ರಾವಣನು ಬಂದನು. ರಾಜಪುತ್ರರಾದ ಶ್ರೀರಾಮಲಕ್ಷ್ಮಣರ ಅಭಿಮುಖದಲ್ಲಿ ಬಂದು ನಿಂತ ರಾವಣನು, ಸೂರ್ಯಚಂದ್ರರೆದುರಿಗೆ (ಅಮಾವಾಸ್ಯೆಯ ದಿನ) ಬಂದು ನಿಲ್ಲುವ ರಾಹುವಿನಂತೆ ಕಂಗೊಳಿಸಿದನು ! (೧೭). ಆಗ ಲಕ್ಷ್ಮಣನು ರಾವಣನೊಡನೆ ತಾನೇ ಮೊದಲು ಯುದ್ಧವನ್ನಾರಂಭಿಸಬೇಕೆಂದು ಬಯಸಿ ಮುಂದೆ ಬಂದು ಚಾಪವನ್ನೆಳೆದು, ಅಗ್ನಿಶಿಖೆಗಳಂತಿದ್ದ ನಿಶಿತಶರಗಳನ್ನು ಪ್ರಯೋಗಿಸಿದನು. ಚಾಪವಿದ್ಯಾವಿಶಾರದನಾದ ಲಕ್ಷ್ಮಣನು ಬಾಣಗಳನ್ನು ಪ್ರಯೋಗಿಸಿದಂತೆ, ತೇಜಸ್ವಿಯಾದ ರಾವಣನು ಅವುಗಳನ್ನು ಆಕಾಶಮಾರ್ಗದಲ್ಲಿ ಕತ್ತರಿಸುತ್ತಹೋದನು (೧೮–೧೯). ಲಕ್ಷ್ಮಣನ ಒಂದು ಬಾಣವನ್ನು ಒಂದೇ ಬಾಣದಿಂದಲೂ, ಮೂರನ್ನು ಮೂರರಿಂದಲೂ, ಹತ್ತನ್ನು ಹತ್ತರಿಂದಲೂ ಕತ್ತರಿಸಿ ತನ್ನ

ಅಭ್ಯತಿಕ್ರಮ್ಯ ಸೌಮಿತ್ರಿಂ ರಾವಣಃ ಸಮಿತಿಂಜಯಃ ।
ಆಸಸಾದ ತತೋ ರಾಮಂ ಸ್ಥಿತಂ ಶೈಲಮಿವಾಚಲಮ್ ॥ ೨೧

ಸ ಸಂಖ್ಯೇ ರಾಮಮಾಸಾದ್ಯ ಕ್ರೋಧಸಂರಕ್ತಲೋಚನಃ ।
ವ್ಯಸೃಜಚ್ಛರವರ್ಷಾಣಿ ರಾವಣೋ ರಾಘವೋಪರಿ ॥ ೨೨

ಶರಧಾರಾಸ್ತತೋ ರಾಮೋ ರಾವಣಸ್ಯ ಧನುಶ್ಚ್ಯುತಾಃ ।
ದೃಷ್ಟ್ವೈವಾಪತತಃ ಶೀಘ್ರಂ ಭಲ್ಲಾನ್ ಜಗ್ರಾಹ ಸತ್ವರಮ್ ॥ ೨೩

ತಾನ್ ಶರೌಘಾಂಸ್ತತೋ ಭಲ್ಲೈಸ್ತೀಕ್ಷ್ಣೈಶ್ಚಿಚ್ಛೇದ ರಾಘವಃ ।
ದೀಪ್ಯಮಾನಾನ್ ಮಹಾಘೋರಾನ್ ಕ್ರುದ್ಧಾನಾಶೀವಿಷಾನಿವ ॥

ರಾಘವೋ ರಾವಣಂ ತೂರ್ಣಂ ರಾವಣೋ ರಾಘವಂ ತದಾ ।
ಅನ್ಯೋನ್ಯಂ ವಿವಿಧೈಸ್ತೀಕ್ಷ್ಣೈಃ ಶರೈರಭಿವವರ್ಷತುಃ ॥ ೨೪

ಚೇರತುಶ್ಚ ಚಿರಂ ಚಿತ್ರಂ ಮಂಡಲಂ ಸವ್ಯದಕ್ಷಿಣಮ್ ।
ಬಾಣವೇಗಾತ್ ಸಮುತ್ಕ್ಷಿಪ್ತಾವನ್ಯೋನ್ಯಮಪರಾಜಿತೌ ॥ ೨೬

---

ಅದ್ಭುತವಾದ ಕೈಚಳಕವನ್ನು ರಾವಣನು ಪ್ರದರ್ಶಿಸಿದನು. ಹೀಗೆ ಸ್ವಲ್ಪ ಕಾಲದವರೆಗೆ ಕಾದಾಡಿದಮೇಲೆ ಶೂರಾಗ್ರಗಣ್ಯನಾದ ರಾವಣನು ಸೌಮಿತ್ರಿಯನ್ನು ಲೆಕ್ಕಿಸದೆ ಶರವರ್ಷಗಳಿಂದ ಅವನನ್ನು ತಡೆದು, ಶ್ರೀರಾಮನನ್ನೆದುರಿಸಿದನು (೨೦-೨೧). ಮಹಾಶೈಲದಂತೆ ಧೀರಮುದ್ರೆಯಿಂದ ಕದಲದೆ ನಿಂತಿದ್ದ ಶ್ರೀರಾಮನನ್ನೆದುರಿಸಿ, ಕ್ರೋಧದಿಂದ ಕೆಂಗಣ್ಣನಾದ ರಾವಣನು ರಾಘವನಮೇಲೆ ಶರವರ್ಷಗಳನ್ನು ಸುರಿದನು (೨೨). ರಾವಣನ ಚಾಪದಿಂದ ಶರಧಾರೆಗಳು ಹರಿಯುವುದನ್ನು ಕಂಡೊಡನೆ, ರಾಘವನು ಶೀಘ್ರಗಾಮಿಗಳಾದ ತೀಕ್ಷ್ಣಭಲ್ಲೆಗಳನ್ನು ಅಳವಡಿಸಿ ಸೆಳೆಸೆಳೆದು ಹೊಡೆದು, ಘೋರ ವಿಷಸರ್ಪಗಳಂತೆ ಭುಗಿಲೆಂದು ಬರುತ್ತಿದ್ದ ರಾವಣನ ಹೊಳೆಹೊಳೆಯುವ ಶರಜಾಲಗಳನ್ನು ಕೊಚ್ಚಿ ಕೆಡಹಿದನು (೨೩-೨೪). ಈ ರೀತಿಯಲ್ಲಿ ಶ್ರೀರಾಮನಿಗೂ ರಾವಣನಿಗೂ ಕೈಕೈ ಮಿಲಾಯಿಸಿತು. ಹರಿತವಾದ ಶರರಾಶಿಗಳನ್ನು ಈರ್ವರೂ ಮಳೆಗರೆದರು. ಸೋಲನ್ನೇ ಕಂಡರಿಯದ ಆ ಕಡುಗಲಿಗಳು ಎದುರಾಳಿಯ ಬಾಣವೇಗದಿಂದ ಆಗಾಗ ಹಿಂದಕ್ಕೆ ಸರಿಯುತ್ತ, ಸವ್ಯಾಪಸವ್ಯವಾಗಿ ಚಿತ್ರಗತಿಯಿಂದ ಮಂಡಲಾಕಾರವಾಗಿ

ತಯೋರ್ಭೂತಾನಿ ವಿತ್ರೇಸುರ್ಯುಗಪತ್ ಸಂಪ್ರಯುಧ್ಯತೋಃ ।
ರೌದ್ರಯೋಃ ಸಾಯಕಮುಖೋರ್ಯಮಾಂತಕನಿಕಾಶಯೋಃ ॥

ಸಂತತಂ ವಿವಿಧೈರ್ಬಾಣೈರ್ಬಭೂವ ಗಗನಂ ತದಾ ।
ಘನೈರಿವಾತಪಾಪಾಯೇ ವಿದ್ಯುನ್ಮಾಲಾಸಮಾಕುಲೈಃ ॥ ೨೮

ಗವಾಕ್ಷಿತಮಿವಾಕಾಶಂ ಬಭೂವ ಶರವೃಷ್ಟಿಭಿಃ ।
ಮಹಾವೇಗೈಃ ಸುತೀಕ್ಷ್ಣಾಗ್ರೈರ್ಗೃಧ್ರಪತ್ರೈಃ ಸುವಾಜಿತೈಃ ॥ ೨೯

ಶರಾಂಧಕಾರಮಾಕಾಶಂ ಚಕ್ರತುಃ ಪರಮಂ ತದಾ ।
ಗತೇಽಸ್ತಂ ತಪನೇ ಚಾಪಿ ಮಹಾಮೇಘಾವಿವೋತ್ಥಿತೌ ॥ ೩೦

ಬಭೂವ ತುಮುಲಂ ಯುದ್ಧಮನ್ಯೋನ್ಯವಧಕಾಂಕ್ಷಿಣೋಃ ।
ಅನಾಸಾದ್ಯಮಚಿಂತ್ಯಂ ಚ ವೃತ್ರವಾಸವಯೋರಿವ ॥ ೩೧

---

ಸುತ್ತುತ್ತ, ಬಹಳ ಹೊತ್ತಿನವರೆಗೆ ಕಾದಾಡಿದರು (೨೫-೨೬). ಯಮನಂತೆಯೂ ಯಮಾಂತಕನಾದ ಪರಮೇಶ್ವರನಂತೆಯೂ ರೋಷಾವಿಷ್ಟರಾಗಿ ಸಾಯಕಗಳನ್ನು ತೂರುತ್ತ ಅವರೀರ್ವರೂ ನೇರವಾಗಿ ಕಾದಾಡುತ್ತಿರಲು, ನಿರ್ಣಾಯಕವಾದ ಯುದ್ಧವು ಘಟಿಸಿತೆಂದು ಸಮಸ್ತರೂ ಭೀತರಾದರು (೨೭). ಸಂತತವಾಗಿ ಹೊರಹೊಮ್ಮುವ ಅವರೀರ್ವರ ವಿವಿಧ ಬಾಣರಾಶಿಗಳು ಆಕಾಶವನ್ನು ಆಚ್ಛಾದಿಸಲು, ಮಳೆಗಾಲದಲ್ಲಿ ಮಿಂಚುವ ಮೋಡಗಳು ಮುಗಿಲನ್ನು ಮುಚ್ಚಿದಂತೆ ಕಾಣಿಸಿತು. ಬಾಣಜಾಲಗಳು ಗಗನದಲ್ಲಿ ಹರಡಿರಲು, ಗಗನಕ್ಕೆ ಗವಾಕ್ಷಗಳನ್ನಿಟ್ಟಂತೆ ತೋರಿತು! ರಭಸದಿಂದ ಎರಗತಕ್ಕವೂ ಅತ್ಯಂತ ನಿಶಿತವಾದ ಅಗ್ರಭಾಗವುಳ್ಳವೂ ಹದ್ದಿನ ಗರಿಗಳ ಬಂಧನದಿಂದ ವೇಗಶಾಲಿಗಳೂ ಆದ ಶರಗಳಿಂದ, ಶ್ರೀರಾಮನೂ ರಾವಣನೂ ರಣಭೂಮಿಯಲ್ಲಿ ಕತ್ತಲು ಕವಿಯುವಂತೆ ಮಾಡಿದರು (೨೮-೨೯). ಸೂರ್ಯನು ಮುಳುಗಿದಾಗ ಮಹಾಮೇಘಗಳು ಮೇಲೆದ್ದು ಮಳೆಗರೆದು ಗಾಢಾಂಧಕಾರವನ್ನುಂಟುಮಾಡುವಂತೆ, ಅವರಿಬ್ಬರೂ ಬಾಣಗಳ ಮಳೆಗರೆದು ಕಗ್ಗತ್ತಲನ್ನುಂಟುಮಾಡಿದರು (೩೦). ವೃತ್ರಾಸುರನೂ ಇಂದ್ರನೂ ಕಾದಾಡಿದಂತೆ ಒಬ್ಬರನ್ನೊಬ್ಬರು ವಧಿಸಬೇಕೆಂಬ ಹಠದಿಂದ ಹೋರಾಡುತ್ತಿದ್ದ ಶ್ರೀರಾಮ ರಾವಣರ ದ್ವಂದ್ವಯುದ್ಧವು, ಇತರರಿಗೆ

ಉಭೌ ಹಿ ಪರಮೇಷ್ವಾಸಾವುಭೌ ಶಸ್ತ್ರವಿಶಾರದೌ ।
ಉಭಾವಸ್ತ್ರವಿದಾಂ ಮುಖ್ಯಾವುಭೌ ಯುದ್ಧೇ ವಿಚೇರತುಃ ॥ ೩೨

ಉಭೌ ಹಿ ಯೇನ ವ್ರಜತಸ್ತೇನ ತೇನ ಶರೋರ್ಮಯಃ ।
ಊರ್ಮಯೋ ವಾಯುನಾ ವಿದ್ಧಾ ಜಗ್ಮುಃ ಸಾಗರಯೋರಿವ ॥ ೩೩

ತತಃ ಸಂಸಕ್ತಹಸ್ತಸ್ತು ರಾವಣೋ ಲೋಕರಾವಣಃ ।
ನಾರಾಚಮಾಲಾಂ ರಾಮಸ್ಯ ಲಲಾಟೇ ಪ್ರತ್ಯಮುಂಚತ ॥ ೩೪

ರೌದ್ರಚಾಪಪ್ರಯುಕ್ತಾಂ ತಾಂ ನೀಲೋತ್ಪಲದಲಪ್ರಭಾಮ್ ।
ಶಿರಸಾ ಧಾರಯನ್ ರಾಮೋ ನ ವ್ಯಥಾಂ ಪ್ರತ್ಯಪದ್ಯತ ॥ ೩೫

ಅಥ ಮಂತ್ರಾನಭಿಜಪನ್ ರೌದ್ರಮಸ್ತ್ರಮುದೀರಯನ್ ।
ಶರಾನ್ ಭೂಯಃ ಸಮಾದಾಯ ರಾಮಃ ಕ್ರೋಧಸಮನ್ವಿತಃ ॥ ೩೬

---

ಅಶಕ್ಯವೂ ಅಚಿಂತ್ಯವೂ ಆಗಿ ಪರಿಣಮಿಸಿತು (೩೧). ಅವರಿಬ್ಬರೂ ಧನುರ್ವಿದ್ಯೆಯಲ್ಲಿ ಪಾರಂಗತರು; ವಿವಿಧ ಶಸ್ತ್ರವಿಶಾರದರು. ಇಬ್ಬರೂ ಮಂತ್ರಾಸ್ತ್ರಗಳನ್ನು ಚೆನ್ನಾಗಿ ಬಲ್ಲವರು. ಆದ್ದರಿಂದಲೇ ಸಮಬಲರಾಗಿ ಇಬ್ಬರೂ ಕಾದಾಡಿದರು (೩೨). ಮಹಾಸಮುದ್ರಗಳಂತಿದ್ದ ಅವರಿಬ್ಬರೂ ಮಂಡಲಗತಿಯಿಂದ ಸುತ್ತುತ್ತ ಎತ್ತೆತ್ತ ಸರಿಯುತ್ತಿದ್ದರೋ ಆ ದಿಕ್ಕಿನಿಂದ ಎದುರಾಳಿಯಮೇಲೆ ಬಾಣಗಳು ಅಲೆಯಲೆಯಾಗಿ ತೂರಿಬರುತ್ತಿದ್ದವು. ಸಮುದ್ರದಲ್ಲಿ ಚಂಡಮಾರುತದಿಂದ ತಳ್ಳಲ್ಪಡುವ ಅಲೆಗಳಂತೆ ಬಾಣಗಳು ನುಗ್ಗಿಬರುತ್ತಿದ್ದವು (೩೩). ಆ ಸಮಯದಲ್ಲಿ ಲೋಕರಾವಣನಾದ ರಾವಣನು ಹಸ್ತಲಾಘವದಿಂದ ಒಂದರಮೇಲೊಂದು ಸರಳನ್ನು ಹೊಡೆದು ಸರಳಿನ ಮಾಲೆಯನ್ನೇ ಶ್ರೀರಾಮನ ಹಣೆಯಲ್ಲಿ ನೆಟ್ಟನು. ರಾವಣನ ಭೀಮಚಾಪದಿಂದ ಸಿಡಿದುಬಂದು ಕನ್ನೈದಿಲೆಯ ದಳಗಳಂತೆ ಹೊಳೆಯುತ್ತಿದ್ದ ಸರಳಿನ ಮಾಲೆಯು ಹಣೆಯಲ್ಲಿ ನೆಟ್ಟರೂ ಶ್ರೀರಾಮನು ವ್ಯಥೆಪಡಲಿಲ್ಲ; ವಿಚಲಿತನಾಗಲಿಲ್ಲ (೩೪-೩೫). ಕೂಡಲೆ ಕೋಪದಿಂದ ಶ್ರೀರಾಮನು ರೌದ್ರಾಸ್ತ್ರವನ್ನು ಪ್ರಯೋಗಿಸುವ ಉದ್ದೇಶದಿಂದ ಶರಗಳನ್ನು ಹಿರಿದು, ವಿಹಿತವಾದ ಮಂತ್ರಗಳನ್ನು ಜಪಿಸಿ, ಧನುಸ್ಸನ್ನು ಜಗ್ಗಿ ರಾವಣನಮೇಲೆ

ಮುಮೋಚ ಚ ಮಹಾತೇಜಾಶ್ಚಾಪಮಾಯಮ್ಯ ವೀರ್ಯವಾನ್ ।
ತೇ ಮಹಾಮೇಘಸಂಕಾಶೇ ಕವಚೇ ಪತಿತಾಃ ಶರಾಃ ॥ ೩೭

ಅವಧ್ಯೇ ರಾಕ್ಷಸೇಂದ್ರಸ್ಯ ನ ವ್ಯಥಾಂ ಜನಯಂಸ್ತದಾ ।
ಪುನರೇವಾಥ ತಂ ರಾಮೋ ರಥಸ್ಥಂ ರಾಕ್ಷಸಾಧಿಪಮ್ ॥ ೩೮

ಲಲಾಟೇ ಪರಮಾಸ್ತ್ರೇಣ ಸರ್ವಾಸ್ತ್ರಕುಶಲೋಽಭಿನತ್ ।
ತೇ ಭಿತ್ವಾ* ಬಾಣರೂಪಾಣಿ ಪಂಚಶೀರ್ಷಾ ಇವೋರಗಾಃ ॥ ೩೯

ಶ್ವಸಂತೋ ವಿವಿಶುರ್ಭೂಮಿಂ ರಾವಣಪ್ರತಿಕೂಲಿತಾಃ ।
ನಿಹತ್ಯ ರಾಘವಸ್ಯಾಸ್ತ್ರಂ ರಾವಣಃ ಕ್ರೋಧಮೂರ್ಛಿತಃ ॥ ೪೦

ಆಸುರಂ ಸುಮಹಾಘೋರಮಸ್ತ್ರಂ ಪ್ರಾದುಶ್ಚಕಾರ ಹ ।
ಸಿಂಹವ್ಯಾಘ್ರಮುಖಾಂಶ್ಚಾನ್ಯಾನ್ ಕಂಕಕಾಕಮುಖಾನಪಿ ॥ ೪೧

ಗೃಧ್ರಶ್ಯೇನಮುಖಾಂಶ್ಚಾಪಿ ಶೃಗಾಲವದನಾಂಸ್ತಥಾ ।
ಈಹಾಮೃಗಮುಖಾಂಶ್ಚಾನ್ಯಾನ್ ವ್ಯಾದಿತಾಸ್ಯಾನ್ ಭಯಾನಕಾನ್

ಪ್ರಯೋಗಿಸಿದನು. ಆ ಶರಗಳು ಮಹಾಮೇಘದಂತಿದ್ದ ರಾವಣನ ಅಭೇದ್ಯ ಕವಚಕ್ಕೆ ಬಡಿದವು. ಆ ಕವಚದ ಪ್ರಭಾವದಿಂದ ರಾವಣನಿಗೆ ನೋವನ್ನು ಉಂಟುಮಾಡಲಾರದೆ, ಅವು ವಿಫಲವಾಗಿ ಬಿದ್ದವು (೩೬-೩೭). ಅದನ್ನು ನೋಡಿ ಸರ್ವಾಸ್ತ್ರಕುಶಲನಾದ ಶ್ರೀರಾಮನು ಒಂದು ಕ್ರೂರಾಸ್ತ್ರವನ್ನು ರಥದಲ್ಲಿ ಮಂಡಿಸಿದ್ದ ರಾಕ್ಷಸೇಶ್ವರನ ಹಣೆಗೆ ಬಿಗಿದನು. ಮತ್ತೆ ಶ್ರೀರಾಮನು ನಿಶಿತಾಸ್ತ್ರಗಳನ್ನು ಬಿಡಲು, ಅವು ಐದು ಹೆಡೆಯ ಸರ್ಪಗಳಂತೆ ಭೋರ್ಗರೆಯುತ್ತ ರಾವಣನ ಕಡೆಗೆ ನುಗ್ಗಿದವು (೩೮-೩೯). ರಾವಣನು ಅವುಗಳನ್ನು ಕತ್ತರಿಸಲು, ಆ ಬಾಣಗಳು ನೆಲದಮೇಲೆ ಬಿದ್ದವು. ಈ ರೀತಿಯಲ್ಲಿ ರಾವಣನು ರಾಘವನ ಅಸ್ತ್ರಗಳನ್ನು ಭಗ್ನಗೊಳಿಸಿ, ಕ್ರೋಧಾವೇಶದಿಂದ ಘೋರವಾದ ಆಸುರಾಸ್ತ್ರವನ್ನು ಪ್ರಯೋಗಿಸಿದನು (೪೦-೪೧). (ಆ ಮಂತ್ರಾಸ್ತ್ರದಿಂದ ಅದ್ಭುತಶರಗಳು ತೆರೆತೆರೆಯಾಗಿ ಹೊರಟವು.) ಸಿಂಹ, ಹುಲಿ, ರಣಹದ್ದು, ಕಾಗೆ, ಹದ್ದು, ಗಿಡಗ, ನರಿ, ತೋಳ ಮುಂತಾದ

* ಇಲ್ಲಿ ಪದಗಳ ಲಿಂಗವಚನಗಳು ವ್ಯತ್ಯಸ್ತವಾಗಿವೆ. ಕೆಲವು ಗ್ರಂಥಭಾಗವು ನಷ್ಟವಾಗಿದೆಯೆಂದು ಶ್ರೀ ಗೋವಿಂದರಾಜರು ಹೇಳಿದ್ದಾರೆ.

ಪಂಚಾಸ್ಯಾನ್ ಲೇಲಿಹಾನಾಂಶ್ಚ ಸಸರ್ಜ ನಿಶಿತಾನ್ ಶರಾನ್ ।
ಶರಾನ್ ಖರಮುಖಾಂಶ್ಚಾನ್ಯಾನ್ ವರಾಹಮುಖಸಂಸ್ಥಿತಾನ್ ॥ ೪೩

ಶ್ವಾನಕುಕ್ಕುಟವಕ್ತ್ರಾಂಶ್ಚ ಮಕರಾಶೀವಿಷಾನನಾನ್ ।
ಏತಾನನ್ಯಾಂಶ್ಚ ಮಾಯಾವೀ ಸಸರ್ಜ ನಿಶಿತಾನ್ ಶರಾನ್ ॥ ೪೪

ರಾಮಂ ಪ್ರತಿ ಮಹಾತೇಜಾಃ ಕ್ರುದ್ಧಃ ಸರ್ಪ ಇವ ಶ್ವಸನ್ ।
ಆಸುರೇಣ ಸಮಾವಿಷ್ಟಃ ಸೋಽಸ್ತ್ರೇಣ ರಘುನಂದನಃ ॥ ೪೫

ಸಸರ್ಜಾಸ್ತ್ರಂ ಮಹೋತ್ಸಾಹಃ ಪಾವಕಂ ಪಾವಕೋಪಮಃ ।
ಅಗ್ನಿದೀಪ್ತಮುಖಾನ್ ಬಾಣಾಂಸ್ತಥಾ ಸೂರ್ಯಮುಖಾನಪಿ ॥ ೪೬

ಚಂದ್ರಾರ್ಧಚಂದ್ರವಕ್ತ್ರಾಂಶ್ಚ ಧೂಮಕೇತುಮುಖಾನಪಿ ।
ಗ್ರಹನಕ್ಷತ್ರವಕ್ತ್ರಾಂಶ್ಚ ಮಹೋಲ್ಕಾಮುಖಸಂಸ್ಥಿತಾನ್ ॥ ೪೭

ವಿದ್ಯುಜ್ಜಿಹ್ವೋಪಮಾಂಶ್ಚಾನ್ಯಾನ್ ಸಸರ್ಜ ನಿಶಿತಾನ್ ಶರಾನ್ ।
ತೇ ರಾವಣಶರಾ ಘೋರಾ ರಾಘವಾಸ್ತ್ರಸಮಾಹತಾಃ ॥ ೪೮

---

ಕ್ರೂರಜಂತುಗಳ ಮುಖಗಳಂತೆ ಬಾಯ್ದೆರೆದ ಭಯಾನಕವಾದ ಅಗ್ರಭಾಗಗಳುಳ್ಳ ಶರಗಳು ಹೊರಹೊಮ್ಮಿದವು (೪೨). ಅಲ್ಲದೆ ನಾಲಗೆಯನ್ನು ಸವರಿಕೊಳ್ಳುತ್ತಿದ್ದ ಐದು ಹೆಡೆಯ ಸರ್ಪಗಳಂತೆ ಇದ್ದ ನಿಶಿತ ಶರಗಳು ಆವಿರ್ಭವಿಸಿದವು. ಕತ್ತೆ, ಹಂದಿ, ನಾಯಿ, ಕೋಳಿ, ಮೊಸಳೆ, ಸರ್ಪಗಳ ಮುಖದಂತೆ ಅಗ್ರಭಾಗವುಳ್ಳ ವಿವಿಧಾಸ್ತ್ರಗಳು ಸಿಡಿದವು. ಮಾಯಾವಿಯಾದ ರಾವಣನು ಆಸುರಾಸ್ತ್ರದಿಂದ ಜನಿಸಿದ ಈ ಬಗೆಯ ವಿವಿಧಾಸ್ತ್ರಗಳನ್ನು ಶ್ರೀರಾಮನಮೇಲೆ ಪ್ರಯೋಗಿಸಿದನು (೪೩-೪೪). ಕೆರಳಿದ ಸರ್ಪದಂತೆ ಭೋರ್ಗರೆಯುತ್ತಿದ್ದ ರಾವಣನು ಆಸುರಾಸ್ತ್ರವನ್ನು ಈ ರೀತಿಯಲ್ಲಿ ಪ್ರಯೋಗಿಸಲು, ಅವು ಶ್ರೀರಾಮನ ಕಡೆಗೆ ಧಾವಿಸಿದವು. ಆಗ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದ ರಘುನಂದನನು ದ್ವಿಗುಣಿತವಾದ ಯುದ್ಧೋತ್ಸಾಹವುಳ್ಳವನಾಗಿ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು (೪೫-೪೬). ಆ ಮಂತ್ರಾಸ್ತ್ರದ ಮಹಿಮೆಯಿಂದ ವಿವಿಧಾಸ್ತ್ರಗಳು ಪ್ರಕಟವಾದವು: ಅಗ್ನಿಯಂತೆ ಧಗಧಗಿಸುವ ಬಾಣಗಳು ಕೆಲವು; ಸೂರ್ಯ, ಚಂದ್ರ, ಅರ್ಧಚಂದ್ರ, ಧೂಮಕೇತು, ಗ್ರಹ, ನಕ್ಷತ್ರ, ಉಲ್ಕೆಗಳಂತೆ ವಿರಾಜಿಸುವ

ವಿಲಯಂ ಜಗ್ಮುರಾಕಾಶೇ ಜಗ್ಮುಶ್ಚೈವ ಸಹಸ್ರಶಃ ।
ತದಸ್ತ್ರಂ ನಿಹತಂ ದೃಷ್ಟ್ವಾ ರಾಮೇಣಾಕ್ಲಿಷ್ಟಕರ್ಮಣಾ ॥ ೪೯

ಹೃಷ್ಟಾ ನೇದುಸ್ತತಃ ಸರ್ವೇ ಕಪಯಃ ಕಾಮರೂಪಿಣಃ ।
ಸುಗ್ರೀವಪ್ರಮುಖಾ ವೀರಾಃ ಪರಿವಾರ್ಯ ತು ರಾಘವಮ್ ॥ ೫೦

ತತಸ್ತದಸ್ತ್ರಂ ವಿನಿಹತ್ಯ ರಾಘವಃ
ಪ್ರಸಹ್ಯ ತದ್ರಾವಣಬಾಹುನಿಃಸೃತಮ್ ।
ಮುದಾನ್ವಿತೋ ದಾಶರಥಿರ್ಮಹಾಹವೇ
ವಿನೇದುರುಚ್ಚೈರ್ಮುದಿತಾಃ ಕಪೀಶ್ವರಾಃ ॥ ೫೧

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಶತತಮಃ ಸರ್ಗಃ



ಅಗ್ರಭಾಗವುಳ್ಳವು ಕೆಲವು; ಮಿಂಚಿನಂತೆ ಮಿಂಚುವ ನಾಲಗೆಯುಳ್ಳವು ಕೆಲವು. ಈ ಬಗೆಯ ನಿಶಿತಾಸ್ತ್ರಗಳನ್ನು ನಿರ್ಮಿಸಿ ಶ್ರೀರಾಮನು ಪ್ರಯೋಗಿಸಲಾಗಿ, ರಾವಣನ ಘೋರಾಸ್ತ್ರಗಳು ಆಕಾಶದಲ್ಲಿಯೇ ಸಾವಿರಾರು ಚೂರುಗಳಾಗಿ ನಿರ್ನಾಮವಾದವು (೪೭-೪೯). ಈ ಪರಿಯಲ್ಲಿ ಶ್ರೀರಾಮನು ರಾವಣನ ಆಸುರಾಸ್ತ್ರವನ್ನು ಕ್ಲೇಶವಿಲ್ಲದೆಯೇ ವಿನಾಶಗೊಳಿಸಲು, ಕಾಮರೂಪಿಗಳಾದ ಸುಗ್ರೀವಾದಿ ವಾನರರು ಶ್ರೀರಾಮನ ಸುತ್ತಲೂ ಬಂದು ನೆರೆದು ಹರ್ಷಘೋಷ ಮಾಡಿದರು (೫೦). ಮಾಯಾವಿಯಾದ ರಾವಣನ ಮಂತ್ರಾಸ್ತ್ರವು ವಿಧ್ವಸ್ತವಾದುದನ್ನು ಕಂಡು, ದಶರಥಾತ್ಮಜನಾದ ರಾಘವನು ಸಂತುಷ್ಟನಾದನು. ಆ ರಣರಂಗದಲ್ಲಿದ್ದ ಕಪಿಯೂಥಪರು ಹರ್ಷದಿಂದ ಗಟ್ಟಿಯಾಗಿ ಸಿಂಹನಾದಮಾಡಿದರು (೫೧).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರನೆಯ ಸರ್ಗ



## ಏಕೋತ್ತರಶತತಮಃ ಸರ್ಗಃ

### ಲಕ್ಷ್ಮಣಶಕ್ತಿಕ್ಷೇಪಃ

ತಸ್ಮಿನ್ ಪ್ರತಿಹತೇಽಸ್ತ್ರೇ ತು ರಾವಣೋ ರಾಕ್ಷಸಾಧಿಪಃ ।
ಕ್ರೋಧಂ ಚ ದ್ವಿಗುಣಂ ಚಕ್ರೇ ಕ್ರೋಧಾಚ್ಚಾಸ್ತ್ರಮನಂತರಮ್ ॥ ೧
ಮಯೇನ ವಿಹಿತಂ ರೌದ್ರಮನ್ಯದಸ್ತ್ರಂ ಮಹಾದ್ಯುತಿಃ ।
ಉತ್ಸ್ರಷ್ಟುಂ ರಾವಣೋ ಘೋರಂ ರಾಘವಾಯ ಪ್ರಚಕ್ರಮೇ ॥ ೨
ತತಃ ಶೂಲಾನಿ ನಿಶ್ಚೇರುರ್ಗದಾಶ್ಚ ಮುಸಲಾನಿ ಚ ।
ಕಾರ್ಮುಕಾದ್ದೀಪ್ಯಮಾನಾನಿ ವಜ್ರಸಾರಾಣಿ ಸರ್ವಶಃ ॥ ೩
ಮುದ್ಗರಾಃ ಕೂಟಪಾಶಾಶ್ಚ ದೀಪ್ತಾಶ್ಚಾಶನಯಸ್ತಥಾ ।
ನಿಷ್ಪೇತುರ್ವಿವಿಧಾಸ್ತೀಕ್ಷ್ಣಾ ವಾತಾ ಇವ ಯುಗಕ್ಷಯೇ ॥ ೪
ತದಸ್ತ್ರಂ ರಾಘವಃ ಶ್ರೀಮಾನುತ್ತಮಾಸ್ತ್ರವಿದಾಂ ವರಃ ।
ಜಘಾನ ಪರಮಾಸ್ತ್ರೇಣ ಗಾಂಧರ್ವೇಣ ಮಹಾದ್ಯುತಿಃ ॥ ೫

### ಸರ್ಗ ೧೦೧

ರಾವಣನಿಂದ ರೌದ್ರಸೌರಾಸ್ತ್ರಗಳ ಪ್ರಯೋಗ. ಶ್ರೀರಾಮನಿಂದ ಅವುಗಳ ಖಂಡನೆ. ರಾವಣನ ಅಮೋಘಶಕ್ತಿಪ್ರಯೋಗದಿಂದ ಲಕ್ಷ್ಮಣನ ಮೂರ್ಛೆ. ಶ್ರೀರಾಮನ ಶೌರ್ಯಾತಿರೇಕವನ್ನು ಎದುರಿಸಲಾರದೆ ರಾವಣನ ಪಲಾಯನ.

ಹೀಗೆ ರಾವಣನು ಪ್ರಯೋಗಿಸಿದ ಆಸುರಾಸ್ತ್ರವು ವಿಫಲವಾಗಲು ಆ ರಾಕ್ಷಸೇಂದ್ರನ ರೋಷವು ಇಮ್ಮಡಿಸಿತು. ಆ ತೇಜಸ್ವಿಯು ಮಯ ನಿರ್ಮಿತವಾದ ಇನ್ನೊಂದು ರೌದ್ರಾಸ್ತ್ರವನ್ನು ರಾಘವನಮೇಲೆ ಪ್ರಯೋಗಿಸುವುದಕ್ಕಾಗಿ ಧನುಸ್ಸಿಗೆ ಅಳವಡಿಸಿದನು (೧-೨). ಒಡನೆಯೇ ಆ ಧನುಸ್ಸಿನಿಂದ ವಜ್ರಾಯುಧದಂತೆ ದೃಢವಾಗಿಯೂ ದೇದೀಪ್ಯಮಾನಗಳಾಗಿಯೂ ಇದ್ದ ಶೂಲ, ಗದೆ, ಮುಸಲ, ಮುದ್ಗರ, ಕೂಟಪಾಶ, ಅಶನಿ ಮುಂತಾದ ವಿವಿಧ ತೀಕ್ಷ್ಣಾಯುಧಗಳು ಪ್ರಳಯಕಾಲದ ಚಂಡಮಾರುತಗಳಂತೆ ಸಿಡಿಯತೊಡಗಿದವು (೩-೪). ಅಸ್ತ್ರವಿದ್ಯಾವಿಶಾರದನೂ ಮಹಾದ್ಯುತಿಯೂ ಆದ ಶ್ರೀರಾಮನು ಗಾಂಧರ್ವವೆಂಬ ದಿವ್ಯಾಸ್ತ್ರವನ್ನು ಪ್ರಯೋಗಿಸಿ ಅವುಗಳನ್ನು

ತಸ್ಮಿನ್ ಪ್ರತಿಹತೇಽಸ್ತ್ರೇ ತು ರಾಘವೇಣ ಮಹಾತ್ಮನಾ ।
ರಾವಣಃ ಕ್ರೋಧತಾಮ್ರಾಕ್ಷಃ ಸೌರಮಸ್ತ್ರಮುದೈರಯತ್ ॥ ೬

ತತಶ್ಚಕ್ರಾಣಿ ನಿಷ್ಪೇತುರ್ಭಾಸ್ವರಾಣಿ ಮಹಾಂತಿ ಚ ।
ಕಾರ್ಮುಕಾದ್ಭೀಮವೇಗಸ್ಯ ದಶಗ್ರೀವಸ್ಯ ಧೀಮತಃ ॥ ೭

ತೈರಾಸೀದ್ಗಗನಂ ದೀಪ್ತಂ ಸಂಪತದ್ಭಿರಿತಸ್ತತಃ ।
ಪತದ್ಭಿಶ್ಚ ದಿಶೋ ದೀಪ್ತಾಶ್ಚಂದ್ರಸೂರ್ಯಗ್ರಹೈರಿವ ॥ ೮

ತಾನಿ ಚಿಚ್ಛೇದ ಬಾಣೌಘೈಶ್ಚಕ್ರಾಣಿ ಸ ತು ರಾಘವಃ ।
ಆಯುಧಾನಿ ಚ ಚಿತ್ರಾಣಿ ರಾವಣಸ್ಯ ಚಮೂಮುಖೇ ॥ ೯

ತದಸ್ತ್ರಂ ತು ಹತಂ ದೃಷ್ಟ್ವಾ ರಾವಣೋ ರಾಕ್ಷಸಾಧಿಪಃ ।
ವಿವ್ಯಾಧ ದಶಭಿರ್ಬಾಣೈ ರಾಮಂ ಸರ್ವೇಷು ಮರ್ಮಸು ॥ ೧೦

ಸ ವಿದ್ಧೋ ದಶಭಿರ್ಬಾಣೈರ್ಮಹಾಕಾರ್ಮುಕನಿಃಸೃತೈಃ ।
ರಾವಣೇನ ಮಹಾತೇಜಾ ನ ಪ್ರಾಕಂಪತ ರಾಘವಃ ॥ ೧೧

---

ನಾಶಮಾಡಿದನು. ರೌದ್ರಾಸ್ತ್ರವು ಪ್ರತಿಹತವಾದುದನ್ನು ನೋಡಿ ಸಿಡಿದೆದ್ದ ರಾವಣನು ಕೆಂಗಣ್ಣುಗಳಿಂದ ದುರದುರನೆ ನೋಡುತ್ತ, ಸೌರಾಸ್ತ್ರವನ್ನು ಹೂಡಿದನು (೫-೬). ಒಡನೆಯೇ ಭೀಮಪರಾಕ್ರಮಿಯಾದ ದಶಕಂಠನ ಕಾರ್ಮುಕದಿಂದ ಧಗಧಗಿಸುವ ಚಕ್ರಾಯುಧಗಳು ಹೊರಗೆ ಎರಗಿದವು. ಅವು ಎಲ್ಲೆಲ್ಲಿಯೂ ವ್ಯಾಪಿಸಲು ಗಗನವು ಪ್ರಜ್ವಲಿಸಿತು. ಸೂರ್ಯಚಂದ್ರಾದಿ ಗ್ರಹಗಳು ದಶದಿಕ್ಕುಗಳಲ್ಲಿಯೂ ಉರಿದು ಬೆಳಗುವಂತೆ ತೋರಿತು (೭-೮). ಆಗ ಶ್ರೀರಾಮನು ರಣಾಂಗಣದಲ್ಲಿ ವ್ಯಾಪಿಸಿದ ಚಿತ್ರಾಕಾರದ ಆ ಚಕ್ರಾಯುಧಗಳನ್ನು, ಬಾಣರಾಶಿಗಳನ್ನು ಹೊಡೆದು ಕಡಿದು ಕೆಡಹಿದನು. ತನ್ನ ಸೌರಾಸ್ತ್ರವು ಭಗ್ನವಾದ್ದನ್ನು ವೀಕ್ಷಿಸಿ, ರಾಕ್ಷಸಾಧಿಪನು ಹತ್ತು ಬಾಣಗಳನ್ನು ಶ್ರೀರಾಮನ ಮರ್ಮಸ್ಥಳಗಳಿಗೆ ಗುರಿಯಿಟ್ಟು ಹೊಡೆದನು (೯-೧೦). ರಾವಣನ ಮಹಾಕಾರ್ಮುಕದಿಂದ ಸಿಡಿದುಬಂದ ಹತ್ತು ಬಾಣಗಳು ನಾಟಿದರೂ ತೇಜಸ್ವಿಯಾದ ರಾಘವನು ಅಳುಕದೆ ಸಂಕ್ರುದ್ಧನಾಗಿ, ರಾವಣನ ಸರ್ವಾಂಗಗಳನ್ನೂ ಶರರಾಶಿಗಳಿಂದ ಕೆತ್ತಿದನು (೧೧).

ತತೋ ವಿವ್ಯಾಧ ಗಾತ್ರೇಷು ಸರ್ವೇಷು ಸಮಿತಿಂಜಯಃ ।
ರಾಘವಸ್ತು ಸುಸಂಕ್ರುದ್ಧೋ ರಾವಣಂ ಬಹುಭಿಃ ಶರೈಃ ॥ ೧೨

ಏತಸ್ಮಿನ್ನಂತರೇ ಕ್ರುದ್ಧೋ ರಾಘವಸ್ಯಾನುಜೋ ಬಲೀ ।
ಲಕ್ಷ್ಮಣಃ ಸಾಯಕಾನ್ ಸಪ್ತ ಜಗ್ರಾಹ ಪರವೀರಹಾ ॥ ೧೩

ತೈಃ ಸಾಯಕೈರ್ಮಹಾವೇಗೈಃ ರಾವಣಸ್ಯ ಮಹಾದ್ಯುತಿಃ ।
ಧ್ವಜಂ ಮನುಷ್ಯಶೀರ್ಷಂ ತು ತಸ್ಯ ಚಿಚ್ಛೇದ ನೈಕಧಾ ॥ ೧೪

ಸಾರಥೇಶ್ಚಾಪಿ ಬಾಣೇನ ಶಿರೋ ಜ್ವಲಿತಕುಂಡಲಮ್ ।
ಜಹಾರ ಲಕ್ಷ್ಮಣಃ ಶ್ರೀಮಾನ್ನೈರ್ಋತಸ್ಯ ಮಹಾಬಲಃ ॥ ೧೫

ತಸ್ಯ ಬಾಣೈಶ್ಚ ಚಿಚ್ಛೇದ ಧನುರ್ಗಜಕರೋಪಮಮ್ ।
ಲಕ್ಷ್ಮಣೋ ರಾಕ್ಷಸೇಂದ್ರಸ್ಯ ಪಂಚಭಿರ್ನಿಶಿತೈಃ ಶರೈಃ ॥ ೧೬

ನೀಲಮೇಘನಿಭಾಂಶ್ಚಾಸ್ಯ ಸದಶ್ವಾನ್ ಪರ್ವತೋಪಮಾನ್ ।
ಜಘಾನಾಪ್ಲುತ್ಯ ಗದಯಾ ರಾವಣಸ್ಯ ವಿಭೀಷಣಃ ॥ ೧೭

---

ಆ ಸಮಯದಲ್ಲಿ ರಾಘವನು ಸ್ವಲ್ಪಕಾಲ ಯುದ್ಧದಿಂದ ವಿರತನಾಗಲು, ಅವನ ಅನುಜನಾದ ಲಕ್ಷ್ಮಣನಿಗೆ ಮತ್ತೆ ಯುದ್ಧಾವಕಾಶ ಒದಗಿತು. ಆ ವೀರನು ಮಹಾವೇಗವುಳ್ಳ ಏಳು ಸಾಯಕಗಳನ್ನು ಹೊಡೆದು, ಮನುಷ್ಯ ಶೀರ್ಷದ ಚಿಹ್ನೆಯುಳ್ಳ ರಾವಣನ ಧ್ವಜವನ್ನು ಚೂರುಚೂರಾಗಿ ಕತ್ತರಿಸಿದನು (೧೨-೧೪). ಅಲ್ಲದೆ ಒಂದು ಬಾಣವನ್ನು ಅವನ ಸಾರಥಿಗೆ ಗುರಿಯಿಟ್ಟು, ಕುಂಡಲಾಲಂಕೃತವಾದ ಸಾರಥಿಯ ತಲೆಯನ್ನು ಕಡಿದನು. ಮತ್ತೆ ಲಕ್ಷ್ಮಣನು ಐದು ನಿಶಿತಾಸ್ತ್ರಗಳನ್ನು* ಪ್ರಯೋಗಿಸಿ, ಆನೆಯ ಶುಂಡಾದಂಡದಂತಿದ್ದ ರಾವಣನ ಚಾಪವನ್ನು ತುಂಡರಿಸಿದನು (೧೫-೧೬). ಅಷ್ಟುಹೊತ್ತಿಗೆ ವಿಭೀಷಣನು ಮುನ್ನುಗ್ಗಿ, ನೀಲಮೇಘಗಳಂತೆ ಕಪ್ಪಾಗಿಯೂ ಪರ್ವತಾಕಾರವಾಗಿಯೂ ಇದ್ದ ರಾವಣನ ರಥಾಶ್ವಗಳನ್ನು

---

* ೧೬ನೆಯ ಶ್ಲೋಕದಲ್ಲಿ 'ಬಾಣೈಃ ಶರೈಃ' ಎಂದಿರುವುದರಿಂದ ಪುನರುಕ್ತಿಯಂತೆ ಕಾಣುತ್ತದೆ. ಇಲ್ಲಿ 'ಶರ' ಎಂದರೆ 'ಹಿಂಸೆಮಾಡತಕ್ಕ' ಎಂದು ಯೌಗಿಕಾರ್ಥವನ್ನು ಮಾತ್ರ ತೆಗೆದುಕೊಳ್ಳಬೇಕು. ಶರರೂಪವಾದ ಬಾಣಗಳು – ಹಿಂಸೆಮಾಡತಕ್ಕ ಬಾಣಗಳು. ಹೀಗೆ ಅಲ್ಲಲ್ಲಿ ಪುನರುಕ್ತಿದೋಷವನ್ನು ಪರಿಹರಿಸಿಕೊಳ್ಳಬೇಕಾಗುತ್ತದೆ.

**ಹತಾಶ್ವಾದ್ವೇಗವಾನ್ ವೇಗಾದವಪ್ಲುತ್ಯ ಮಹಾರಥಾತ್ ।**
**ಕ್ರೋಧಮಾಹಾರಯತ್ತೀವ್ರಂ ಭ್ರಾತರಂ ಪ್ರತಿ ರಾವಣಃ ॥ ೧೮**

**ತತಃ ಶಕ್ತಿಂ ಮಹಾಶಕ್ತಿರ್ದೀಪ್ತಾಂ ದೀಪ್ತಾಶನೀಮಿವ ।**
**ವಿಭೀಷಣಾಯ ಚಿಕ್ಷೇಪ ರಾಕ್ಷಸೇಂದ್ರಃ ಪ್ರತಾಪವಾನ್ ॥ ೧೯**

**ಅಪ್ರಾಪ್ತಾಮೇವ ತಾಂ ಬಾಣೈಸ್ತ್ರಿಭಿಶ್ಚಿಚ್ಛೇದ ಲಕ್ಷ್ಮಣಃ ।**
**ಅಥೋದತಿಷ್ಠತ್ ಸಂನಾದೋ ವಾನರಾಣಾಂ ತದಾ ರಣೇ ॥ ೨೦**

**ಸಾ ಪಪಾತ ತ್ರಿಧಾ ಛಿನ್ನಾ ಶಕ್ತಿಃ ಕಾಂಚನಮಾಲಿನೀ ।**
**ಸವಿಸ್ಫುಲಿಂಗಾ ಜ್ವಲಿತಾ ಮಹೋಲ್ಕೇವ ದಿವಶ್ಚ್ಯುತಾ ॥ ೨೧**

**ತತಃ ಸಂಭಾವಿತತರಾಂ ಕಾಲೇನಾಪಿ ದುರಾಸದಾಮ್ ।**
**ಜಗ್ರಾಹ ವಿಪುಲಾಂ ಶಕ್ತಿಂ ದೀಪ್ಯಮಾನಾಂ ಸ್ವತೇಜಸಾ ॥ ೨೨**

**ಸಾ ವೇಗಿತಾ ಬಲವತಾ ರಾವಣೇನ ದುರಾಸದಾ ।**
**ಜಜ್ವಾಲ ಸುಮಹಾಘೋರಾ ಶಕ್ರಾಶನಿಸಮಪ್ರಭಾ ॥ ೨೩**

---

ಗದೆಯಿಂದ ಬಡಿದು ಕೊಂದನು! ಮಹಾವೇಗಶಾಲಿಯಾದ ರಾವಣನು ಥಟ್ಟನೆ ರಥದಿಂದ ಕೆಳಗೆ ಧುಮುಕಿದನು. ತಮ್ಮನಾದ ವಿಭೀಷಣನಮೇಲೆ ಅವನ ಕೋಪವು ಉಕ್ಕಿಬಂದಿತು (೧೭-೧೮). ಪ್ರತಾಪಶಾಲಿಯಾದ ಆ ರಾಕ್ಷಸೇಂದ್ರನು ಸಿಡಿಲಿನಂತೆ ದೇದೀಪ್ಯಮಾನವಾದ ಶಕ್ತ್ಯಾಯುಧವನ್ನು ಹಿರಿದು ವಿಭೀಷಣನಮೇಲೆ ಪ್ರಯೋಗಿಸಿದನು. ಆ ಮಹಾಶಕ್ತಿಯು ವಿಭೀಷಣನನ್ನು ಸಮೀಪಿಸುವಷ್ಟರಲ್ಲಿ, ಲಕ್ಷ್ಮಣನು ಮೂರು ನರಳುಗಳಿಂದ ಅದನ್ನು ಭೇದಿಸಿದನು. ವಾನರರು ಹರ್ಷದಿಂದ 'ಹೋ' ಎಂದು ಕೋಲಾಹಲಮಾಡಿದರು (೧೯-೨೦). ಆ ಶಕ್ತಿಯು ಮೂರು ತುಂಡಾಗಿ ಕಿಡಿಯುಗುಳುತ್ತ, ಆಕಾಶದಿಂದ ಪ್ರಜ್ವಲಿಸುತ್ತ ಬೀಳುವ ಮಹೋಲ್ಕೆಯಂತೆ ಧರೆಗುರುಳಿತು. ಅದು ವಿಫಲವಾದುದನ್ನು ಕಂಡು ರಾವಣನು ಬೇರೊಂದು ಮಹಾಶಕ್ತಿಯನ್ನು ಹಿರಿದನು. ಆ ಶಕ್ತಿಯು ಅಮೋಘವಾದುದೆಂದು ವಿಶ್ವವಿಖ್ಯಾತವಾಗಿತ್ತು. ಯಮನಿಂದಲೂ ಎದುರಿಸಲು ಅಶಕ್ಯವಾಗಿತ್ತು. ತೇಜಸ್ಸಿನಿಂದ ಧಗಧಗಿಸುತ್ತಿತ್ತು (೨೧-೨೨). ದುರ್ಧರ್ಷವಾದ ಆ ಶಕ್ತಿಯನ್ನು ಬಲಾಢ್ಯನಾದ ರಾವಣನು ವೇಗದಿಂದ

ಏತಸ್ಮಿನ್ನಂತರೇ ವೀರೋ ಲಕ್ಷ್ಮಣಸ್ತಂ ವಿಭೀಷಣಮ್ ।
ಪ್ರಾಣಸಂಶಯಮಾಪನ್ನಂ ತೂರ್ಣಮಭ್ಯವಪದ್ಯತ ॥ ೨೪

ತಂ ವಿಮೋಕ್ಷಯಿತುಂ ವೀರಶ್ಚಾಪಮಾಯಮ್ಯ ಲಕ್ಷ್ಮಣಃ ।
ರಾವಣಂ ಶಕ್ತಿಹಸ್ತಂ ವೈ ಶರವರ್ಷೈರವಾಕಿರತ್ ॥ ೨೫

ಕೀರ್ಯಮಾಣಃ ಶರೌಘೇಣ ವಿಸೃಷ್ಟೇನ ಮಹಾತ್ಮನಾ ।
ನ ಪ್ರಹರ್ತುಂ ಮನಶ್ಚಕ್ರೇ ವಿಮುಖೀಕೃತವಿಕ್ರಮಃ ॥ ೨೬

ಮೋಕ್ಷಿತಂ ಭ್ರಾತರಂ ದೃಷ್ಟ್ವಾ ಲಕ್ಷ್ಮಣೇನ ಸ ರಾವಣಃ ।
ಲಕ್ಷ್ಮಣಾಭಿಮುಖಸ್ತಿಷ್ಠನ್ನಿದಂ ವಚನಮಬ್ರವೀತ್ ॥ ೨೭

ಮೋಕ್ಷಿತಸ್ತೇ ಬಲಶ್ಲಾಘಿನ್ ಯಸ್ಮಾದೇವಂ ವಿಭೀಷಣಃ ।
ವಿಮುಚ್ಯ ರಾಕ್ಷಸಂ ಶಕ್ತಿಸ್ತ್ವಯೀಯಂ ವಿನಿಪಾತ್ಯತೇ ॥ ೨೮

ಏಷಾ ತೇ ಹೃದಯಂ ಭಿತ್ತ್ವಾ ಶಕ್ತಿರ್ಲೋಹಿತಲಕ್ಷಣಾ ।
ಮದ್ಬಾಹುಪರಿಘೋತ್ಸೃಷ್ಟಾ ಪ್ರಾಣಾನಾದಾಯ ಯಾಸ್ಯತಿ ॥ ೨೯

---

ತಿರುಗಿಸಲು, ಇಂದ್ರನ ವಜ್ರಾಯುಧದಂತೆ ಅತಿಘೋರವಾಗಿ ಅದು ಪ್ರಜ್ವಲಿಸಿತು. ವಿಭೀಷಣನ ಗತಿ ಮುಗಿಯಿತೆಂದು ಲಕ್ಷ್ಮಣನು ಶಂಕಿಸಿದನು. ಕೂಡಲೆ ಆ ವೀರಾಗ್ರಣಿಯು ಮುನ್ನುಗ್ಗಿ ವಿಭೀಷಣನಿಗೆ ಅಡ್ಡಲಾಗಿ ನಿಂತನು! (೨೩–೨೪). ವಿಭೀಷಣನನ್ನುಳಿಸಬೇಕೆಂದು ಲಕ್ಷ್ಮಣನು ತನ್ನ ಧನುಸ್ಸನ್ನು ಆಕರ್ಣಾಂತವಾಗಿ ಎಳೆದೆಳೆದು, ಶಕ್ತಿಹಸ್ತನಾದ ರಾವಣನ ಮೇಲೆ ಶರಗಳ ಮಳೆಗರೆದನು. ಲಕ್ಷ್ಮಣನ ಶರಜಾಲದ ಜಡಿಮಳೆಯಲ್ಲಿ ಸಿಕ್ಕಿದ ರಾವಣನ ಯತ್ನವು ಭಗ್ನವಾಯಿತು. ವಿಭೀಷಣನನ್ನು ಪ್ರಹರಿಸಬೇಕೆಂಬ ಉದ್ದೇಶವನ್ನು ಅಲ್ಲಿಗೆ ನಿಲ್ಲಿಸಿದನು (೨೫–೨೬). 'ತನ್ನ ತಮ್ಮನನ್ನು ಲಕ್ಷ್ಮಣನು ಉಳಿಸಿದನಲ್ಲವೆ?' ಎಂಬ ಆಗ್ರಹದಿಂದ ರಾವಣನು ಲಕ್ಷ್ಮಣಾಭಿಮುಖನಾಗಿ ನಿಂತು, "ಶಹಭಾಸ್! ಲಕ್ಷ್ಮಣ, ಶೂರನೆಂದರೆ ನೀನು! ವಿಭೀಷಣನನ್ನು ಉಳಿಸಿದೆಯಲ್ಲವೆ? ವಹವ್ವಾ! ಅವನಿಗೆ ಬದಲಾಗಿ ಈ ಶಕ್ತಿಯು ನಿನ್ನಮೇಲೆ ಎರಗುವುದು! (೨೭–೨೮). ನನ್ನ ಬಾಹುಗಳೆಂಬ ಪರಿಘಗಳಿಂದ ಸಿಡಿದೆರಗುವ ಈ ಶಕ್ತಿಯು ನಿನ್ನ ಎದೆಯನ್ನು ಸೀಳಿ, ರಕ್ತರಂಜಿತವಾಗಿ, ನಿನ್ನ ಪ್ರಾಣವನ್ನು ಸೆಳೆದೊಯ್ಯುವುದು!"

ಇತ್ಯೇವಮುಕ್ತ್ವಾ ತಾಂ ಶಕ್ತಿಮಷ್ಟಘಂಟಾಂ ಮಹಾಸ್ವನಾಮ್ ।
ಮಯೇನ ಮಾಯಾವಿಹಿತಾಮಮೋಘಾಂ ಶತ್ರುಘಾತಿನೀಮ್ ॥

ಲಕ್ಷ್ಮಣಾಯ ಸಮುದ್ದಿಶ್ಯ ಜ್ವಲಂತೀಮಿವ ತೇಜಸಾ ।
ರಾವಣಃ ಪರಮಕ್ರುದ್ಧಶ್ಚಿಕ್ಷೇಪ ಚ ನನಾದ ಚ ॥ ೩೦

ಸಾ ಕ್ಷಿಪ್ತಾ ಭೀಮವೇಗೇನ ಶಕ್ರಾಶನಿಸಮಸ್ವನಾ ।
ಶಕ್ತಿರಭ್ಯಪತದ್ವೇಗಾಲ್ಲಕ್ಷ್ಮಣಂ ರಣಮೂರ್ಧನಿ ॥ ೩೨

ತಾಮನುವ್ಯಾಹರಚ್ಛಕ್ತಿಮಾಪತಂತೀಂ ಸ ರಾಘವಃ ।
ಸ್ವಸ್ತ್ಯಸ್ತು ಲಕ್ಷ್ಮಣಾಯೇತಿ ಮೋಘಾ ಭವ ಹತೋದ್ಯಮಾ ॥ ೩೩

ರಾವಣೇನ ರಣೇ ಶಕ್ತಿಃ ಕ್ರುದ್ಧೇನಾಶೀವಿಷೋಪಮಾ ।
ಮುಕ್ತಾಶೂರಸ್ಯಭೀತಸ್ಯ* ಲಕ್ಷ್ಮಣಸ್ಯ ಮಮಜ್ಜ ಸಾ ॥ ೩೪

ನ್ಯಪತತ್ ಸಾ ಮಹಾವೇಗಾ ಲಕ್ಷ್ಮಣಸ್ಯ ಮಹೋರಸಿ ।
ಜಿಹ್ವೇವೋರಗರಾಜಸ್ಯ ದೀಪ್ಯಮಾನಾ ಮಹಾದ್ಯುತಿಃ ॥ ೩೫

---

ಎಂದು ಹೇಳಿ ಆ ಘೋರಶಕ್ತಿಯನ್ನು ಬೀಸಿ ಬೊಬ್ಬಿರಿದನು (೨೯). ಅಷ್ಟಘಂಟೆಗಳಿಂದ ಭೂಷಿತವಾದ ಆ ಶಕ್ತ್ಯಾಯುಧವು ಅಬ್ಬರಿಸುತ್ತ ನುಗ್ಗಿತು. ಅದೇನು ಸಾಮಾನ್ಯವಾದುದೆ? ಮಯನು ತನ್ನ ಮಾಯಾಶಕ್ತಿಯಿಂದ ನಿರ್ಮಿಸಿದ್ದು. ಅಮೋಘವೂ ಶತ್ರುವಿಧ್ವಂಸಕವೂ ಆದದ್ದು. ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಆ ಶಕ್ತಿಯನ್ನು ಭೀಮಪರಾಕ್ರಮಿಯಾದ ರಾವಣನು ಸಿಟ್ಟಿನಿಂದ ಬೀಸಿ ಹೊಡೆಯಲು, ಅದು ಸಿಡಿಲಿನಂತೆ ಮೊರೆಯುತ್ತ ಲಕ್ಷ್ಮಣನೆಡೆಗೆ ರಭಸದಿಂದ ಸಿಡಿಯಿತು (೩೦-೩೨). ಆರ್ಭಟಿಸುತ್ತ ನುಗ್ಗಿದ ಆ ಶಕ್ತಿಯನ್ನು ನೋಡಿ ಶ್ರೀರಾಮನು "ಸ್ವಸ್ತ್ಯಸ್ತು ಲಕ್ಷ್ಮಣಾಯ†" ಎಂದು ನುಡಿದು, ಆಯುಧವನ್ನುದ್ದೇಶಿಸಿ "ನಿನ್ನ ಯತ್ನ ವಿಫಲವಾಗಲಿ; ವ್ಯರ್ಥವಾಗು ನೀನು!" ಎಂದು ಉದ್ಗರಿಸಿದನು (೩೩). ಕ್ರುದ್ಧನಾದ ರಾವಣನು ಬೀಸಿ ಹೊಡೆದ ವಿಷಸರ್ಪದಂತಿದ್ದ ಆ ಶಕ್ತ್ಯಾಯುಧವು, ನಿರ್ಭೀತಿಯಿಂದ ನಿಂತಿದ್ದ ಶೂರಾಗ್ರೇಸರನಾದ ಲಕ್ಷ್ಮಣನ ಎದೆಯಲ್ಲಿ ನಾಟಿತು. ಸರ್ಪರಾಜನ ನಾಲಗೆಯಂತೆ ಉರಿಯುತ್ತಿದ್ದ ಆ ಮಹಾಶಕ್ತಿಯು

---

* ಮುಕ್ತಾ ಆಶು ಉರಸಿ ಅಭೀತಸ್ಯ. † 'ಲಕ್ಷ್ಮಣನಿಗೆ ಶುಭವಾಗಲಿ'.

ತತೋ ರಾವಣವೇಗೇನ ಸುದೂರಮವಗಾಢಯಾ ।
ಶಕ್ತ್ಯಾ ನಿರ್ಭಿನ್ನಹೃದಯಃ ಪಪಾತ ಭುವಿ ಲಕ್ಷ್ಮಣಃ ॥ ೩೬
ತದವಸ್ಥಂ ಸಮೀಪಸ್ಥೋ ಲಕ್ಷ್ಮಣಂ ಪ್ರೇಕ್ಷ್ಯ ರಾಘವಃ ।
ಭ್ರಾತೃಸ್ನೇಹಾನ್ಮಹಾತೇಜಾ ವಿಷಣ್ಣಹೃದಯೋಽಭವತ್ ॥ ೩೭
ಸ ಮುಹೂರ್ತಮನುಧ್ಯಾಯ ಬಾಷ್ಪವ್ಯಾಕುಲಲೋಚನಃ ।
ಬಭೂವ ಸಂರಬ್ಧತರೋ ಯುಗಾಂತ ಇವ ಪಾವಕಃ ॥ ೩೮
ನ ವಿಷಾದಸ್ಯ ಕಾಲೋಽಯಮಿತಿ ಸಂಚಿಂತ್ಯ ರಾಘವಃ ।
ಚಕ್ರೇ ಸುತುಮುಲಂ ಯುದ್ಧಂ ರಾವಣಸ್ಯ ವಧೇ ಧೃತಃ ॥ ೩೯
ಸರ್ವಯತ್ನೇನ ಮಹತಾ ಲಕ್ಷ್ಮಣಂ ಸಂನಿರೀಕ್ಷ್ಯ ಚ ।
ಸ ದದರ್ಶ ತತೋ ರಾಮಃ ಶಕ್ತ್ಯಾ ಭಿನ್ನಂ ಮಹಾಹವೇ ॥ ೪೦
ಲಕ್ಷ್ಮಣಂ ರುಧಿರಾದಿಗ್ಧಂ ಸಪನ್ನಗಮಿವಾಚಲಮ್ ।
ತಾಮಪಿ ಪ್ರಹಿತಾಂ ಶಕ್ತಿಂ ರಾವಣೇನ ಬಲೀಯಸಾ ॥ ೪೧

---

ಪ್ರಜ್ವಲಿಸುತ್ತ ಮಹಾವೇಗದಿಂದ ಬಂದು, ಲಕ್ಷ್ಮಣನ ವಿಶಾಲ ವಕ್ಷಸ್ಥಳದಲ್ಲಿ ನೆಟ್ಟಿತು (೩೪-೩೫). ರಾವಣನ ಬಾಹುವೇಗದಿಂದ ಕ್ಷಿಪ್ತವಾದ ಆ ಶಕ್ತಿಯು ಲಕ್ಷ್ಮಣನ ಎದೆಯನ್ನು ಭೇದಿಸಿ ಆಳವಾಗಿ ನುಗ್ಗಲು, ಲಕ್ಷ್ಮಣನು ಭೂಮಿಯಲ್ಲಿ ಬಿದ್ದನು. ಸಮೀಪದಲ್ಲಿದ್ದ ಶ್ರೀರಾಮನು ತಮ್ಮನಿಗೊದಗಿದ ಆ ಅವಸ್ಥೆಯನ್ನು ನೋಡಿ, ಭ್ರಾತೃವಾತ್ಸಲ್ಯದಿಂದ ಖಿನ್ನನಾದನು (೩೬-೩೭). ಸ್ವಲ್ಪಕಾಲ ಏನೂ ತೋರದಂತಾಗಿ ಅವನು ಚಿಂತಾಕ್ರಾಂತನಾದನು. ಕಣ್ಣೀರು ತುಂಬಿತು. ಅನಂತರ ಪ್ರಳಯಕಾಲಾಗ್ನಿಯಂತೆ ಶ್ರೀರಾಮನು ಕೋಪಾವಿಷ್ಟನಾದನು. 'ಇದು ಶೋಕಿಸುವ ಸಮಯವಲ್ಲ' ಎಂದು ಆಲೋಚಿಸಿ, ರಾವಣನನ್ನು ವಧಿಸಲೇಬೇಕೆಂದು ಸಂಕಲ್ಪಿಸಿ, ರಾಘವನು ಘೋರವಾದ ತುಮುಲಯುದ್ಧವನ್ನಾರಂಭಿಸಲು ನಿಶ್ಚಯಿಸಿದನು (೩೮-೩೯). ಲಕ್ಷ್ಮಣನ ಪರಿಸ್ಥಿತಿಯನ್ನು ಕಂಡಮೇಲೆ, ಸರ್ವಯತ್ನದಿಂದಲೂ ರಾವಣನನ್ನು ಸಂಹರಿಸಬೇಕೆಂಬ ನಿರ್ಧಾರವು ದೃಢವಾಯಿತು. ಶಕ್ತಿನಿರ್ಭಿನ್ನನಾದ ಲಕ್ಷ್ಮಣನು ರಕ್ತದಲ್ಲಿ ನೆನೆದು, ಸರ್ಪಸಹಿತವಾದ ಶೈಲದಂತೆ ರಣರಂಗದಲ್ಲಿ ಮಲಗಿರುವುದನ್ನು ಶ್ರೀರಾಮನು ಮತ್ತೆ ಮತ್ತೆ

ಯತ್ನತಸ್ತೇ ಹರಿಶ್ರೇಷ್ಠಾ ನ ಶೇಕುರವಮರ್ದಿತುಮ್ ।
ಅರ್ದಿತಾಶ್ಚೈವ ಬಾಣೌಘೈಃ ಕ್ಷಿಪ್ರಹಸ್ತೇನ ರಕ್ಷಸಾ ॥ ೪೨
ಸೌಮಿತ್ರಿಂ ಸಾ ವಿನಿರ್ಭಿದ್ಯ ಪ್ರವಿಷ್ಟಾ ಧರಣೀತಲಮ್ ।
ತಾಂ ಕರಾಭ್ಯಾಂ ಪರಾಮೃಶ್ಯ ರಾಮಃ ಶಕ್ತಿಂ ಭಯಾವಹಾಮ್ ॥
ಬಭಂಜ ಸಮರೇ ಕ್ರುದ್ಧೋ ಬಲವಾನ್ ವಿಚಕರ್ಷ ಚ ।
ತಸ್ಯ ನಿಷ್ಕರ್ಷತಃ ಶಕ್ತಿಂ ರಾವಣೇನ ಬಲೀಯಸಾ ॥ ೪೪
ಶರಾಃ ಸರ್ವೇಷು ಗಾತ್ರೇಷು ಪಾತಿತಾ ಮರ್ಮಭೇದಿನಃ ।
ಅಚಿಂತಯಿತ್ವಾ ತಾನ್ ಬಾಣಾನ್ ಸಮಾಶ್ಲಿಷ್ಯ ಚ ಲಕ್ಷ್ಮಣಮ್ ॥
ಅಬ್ರವೀಚ್ಚ ಹನೂಮಂತಂ ಸುಗ್ರೀವಂ ಚೈವ ರಾಘವಃ ।
ಲಕ್ಷ್ಮಣಂ ಪರಿವಾರ್ಯೇಹ ತಿಷ್ಠಧ್ವಂ ವಾನರೋತ್ತಮಾಃ ॥ ೪೬

---

ಮರುಕದಿಂದ ನೋಡಿದನು (೪೦-೪೧). ಬಲಾಢ್ಯನಾದ ರಾವಣನು ಪ್ರಯೋಗಿಸಿದ ಆ ಶಕ್ತಿಯನ್ನು ಕೀಳಲು ವಾನರೋತ್ತಮರು ಯತ್ನಿಸಿದರೂ ಸಾಧ್ಯವಾಗಲಿಲ್ಲ. ಅಲ್ಲದೆ ಲಘುಹಸ್ತನಾದ ರಾವಣನು ಒಂದೇ ಸಮನಾಗಿ ಬಾಣಗಳಿಂದ ಅವರನ್ನು ಪೀಡಿಸುತ್ತಿದ್ದನು (೪೨). ಆ ಶಕ್ತಿಯು ಲಕ್ಷ್ಮಣನ ಎದೆಯಲ್ಲಿ ತೂರಿ ಭೂಮಿಯನ್ನು ಸ್ಪರ್ಶಿಸುತ್ತಿದ್ದಿತು. ಅಷ್ಟರಲ್ಲಿ ಶ್ರೀರಾಮನು ಬಂದು ಎರಡು ಕೈಗಳಿಂದಲೂ ಹಿಡಿದು ಆ ಶಕ್ತಿಯನ್ನು ಕಿತ್ತು, ಕೋಪದಿಂದ ಅದನ್ನು ಮುರಿದುಬಿಟ್ಟನು* (೪೩-೪೪). ಬಲಶಾಲಿಯಾದ ರಾಘವನು ಅದನ್ನು ಕೀಳುತ್ತಿರುವಾಗ, ಮರ್ಮಭೇದಿಗಳಾದ ರಾವಣನ ಶರಗಳು ತೆರಪಿಲ್ಲದೆ ಬಂದು ಪೀಡಿಸುತ್ತಿದ್ದವು. ಶ್ರೀರಾಮನು ಅವುಗಳನ್ನು ಲಕ್ಷ್ಯಕ್ಕೆ ತಾರದೆ ಲಕ್ಷ್ಮಣನನ್ನು ಆಲಿಂಗಿಸಿಕೊಂಡು, ಹನುಮಂತನನ್ನೂ ಸುಗ್ರೀವನನ್ನೂ ನೋಡುತ್ತ ಹೀಗೆಂದನು: "ವಾನರೋತ್ತಮರೆ, ನೀವೆಲ್ಲರೂ ಲಕ್ಷ್ಮಣನ ಸುತ್ತಲೂ ನಿಂತು ಕಾವಲಾಗಿರಿ (೪೫-೪೬).

---

* ಪುನಃ ರಾವಣನ ಬಳಿಗೆ ಹೋಗುವ ಸಾಮರ್ಥ್ಯ ಆ ಶಕ್ತಿಗೆ ಇದ್ದಿತು. ಸತ್ಯಸಂಕಲ್ಪನಾದ ಶ್ರೀರಾಮನು 'ಮೋಘಾ ಭವ ಹತೋದ್ಯಮಾ' ಎಂದು ಹೇಳಿದ್ದರಿಂದ, ಮತ್ತೆ ರಾವಣನ ಬಳಿಗೆ ಹೋಗುವ ಸಾಮರ್ಥ್ಯ ಅದರಲ್ಲುಳಿಯಲಿಲ್ಲ. ಅಲ್ಲದೆ ಲಕ್ಷ್ಮಣನನ್ನು ಸಂಹರಿಸಲೂ ಅದಕ್ಕೆ ಸಾಧ್ಯವಾಗಲಿಲ್ಲ.

**ಪರಾಕ್ರಮಸ್ಯ ಕಾಲೋಽಯಂ ಸಂಪ್ರಾಪ್ತೋ ಮೇ ಚಿರೇಪ್ಸಿತಃ ।**
**ಪಾಪಾತ್ಮಾಯಂ ದಶಗ್ರೀವೋ ವಧ್ಯತಾಂ ಪಾಪನಿಶ್ಚಯಃ ॥ ೪೭**

**ಕಾಂಕ್ಷತಃ ಸ್ತೋಕಕಸ್ಯೇವ ಘರ್ಮಾಂತೇ ಮೇಘದರ್ಶನಮ್ ।**
**ಅಸ್ಮಿನ್ ಮುಹೂರ್ತೇ ನ ಚಿರಾತ್ ಸತ್ಯಂ ಪ್ರತಿಶೃಣೋಮಿ ವಃ ॥**

**ಅರಾವಣಮರಾಮಂ ವಾ ಜಗದ್ದ್ರಕ್ಷ್ಯಥ ವಾನರಾಃ ।**
**ರಾಜ್ಯನಾಶಂ ವನೇ ವಾಸಂ ದಂಡಕೇ ಪರಿಧಾವನಮ್ ॥ ೪೯**

**ವೈದೇಹ್ಯಾಶ್ಚ ಪರಾಮರ್ಶಂ ರಕ್ಷೋಭಿಶ್ಚ ಸಮಾಗಮಮ್ ।**
**ಪ್ರಾಪ್ತಂ ದುಃಖಂ ಮಹದ್ಘೋರಂ ಕ್ಲೇಶಂ ಚ ನಿರಯೋಪಮಮ್ ॥**

**ಅದ್ಯ ಸರ್ವಮಹಂ ತ್ಯಕ್ಷ್ಯೇ ನಿಹತ್ವಾ ರಾವಣಂ ರಣೇ ।**
**ಯದರ್ಥಂ ವಾನರಂ ಸೈನ್ಯಂ ಸಮಾನೀತಮಿದಂ ಮಯಾ ॥ ೫೧**

---

ನನ್ನ ಪರಾಕ್ರಮವನ್ನು ಮೆರೆಸಲು ಬಹುಕಾಲದಿಂದಲೂ ನಾನು ನಿರೀಕ್ಷಿಸುತ್ತಿದ್ದ ಸಮಯವು ಈಗ ಬಂದಿದೆ! ದುರುದ್ದೇಶವನ್ನಿಟ್ಟಿರುವ ದುರುಳನಾದ ದಶಗ್ರೀವನನ್ನು ದಂಡಿಸಲು ಯುಕ್ತವಾದ ಕಾಲ ಈಗ ಪ್ರಾಪ್ತವಾಗಿದೆ (೪೭). 'ಯಾವಾಗ ಬೇಸಿಗೆ ಕಳೆದೀತು, ಮೇಘದರ್ಶನವಾದೀತು' ಎಂದು ಹಾತೊರೆಯುವ ಚಾತಕಪಕ್ಷಿಯಂತೆ, ಈ ಅವಕಾಶಕ್ಕಾಗಿ ನಾನು ಕಾದಿದ್ದೆನು. ಪ್ರತಿಜ್ಞೆಮಾಡಿ ಹೇಳುವೆನು ಕೇಳಿರಿ : ಎಲೈ ವಾನರೋತ್ತಮರೆ, ಇನ್ನು ಹೆಚ್ಚು ಕಾಲವಿಲ್ಲ, ಸ್ವಲ್ಪಕಾಲದಲ್ಲಿಯೇ ಈ ಜಗತ್ತಿನಲ್ಲಿ ರಾವಣನಿರುವುದಿಲ್ಲ—ಇಲ್ಲವೆ ರಾಮನಿರುವುದಿಲ್ಲ ಎಂಬುದನ್ನು ಕಣ್ಣಾರೆ ಕಾಣುವಿರಿ! (೪೮–೪೯). ರಾಜ್ಯನಾಶ, ವನದಲ್ಲಿ ವಾಸ, ದಂಡಕಾರಣ್ಯದಲ್ಲಿ ಅಲೆದಾಟ, ವೈದೇಹಿಯ ಅಪಹಾರ, ರಾಕ್ಷಸರ ಕಾಟ—ಇಂತಹ ಘೋರವಾದ ಕ್ಲೇಶಗಳನ್ನು ಸಹಿಸಿದೆನು. ಈಗ ಲಕ್ಷ್ಮಣನನ್ನು ಕಳೆದುಕೊಂಡು ನರಕಯಾತನೆಯನ್ನು ಅನುಭವಿಸಬೇಕಾಗಿ ಬಂದಿತು (೫೦). ರಣರಂಗದಲ್ಲಿ ಈಗ ರಾವಣನನ್ನು ಸಂಹರಿಸಿ, ಈ ದುಃಖಪರಂಪರೆಯನ್ನು ದಾಟುವೆನು! ಈ ಖೂಳನಿಗೋಸ್ಕರವೇ ಅಲ್ಲವೆ ನಾನು ವಾನರಸೇನೆಯನ್ನು ಇಲ್ಲಿಗೆ

ಸುಗ್ರೀವಶ್ಚ ಕೃತೋ ರಾಜ್ಯೇ ನಿಹತ್ವಾ ವಾಲಿನಂ ರಣೇ ।
ಯದರ್ಥಂ ಸಾಗರಃ ಕ್ರಾಂತಃ ಸೇತುರ್ಬದ್ಧಶ್ಚ ಸಾಗರೇ ॥ ೫೨

ಸೋಽಯಮದ್ಯ ರಣೇ ಪಾಪಶ್ಚಕ್ಷುರ್ವಿಷಯಮಾಗತಃ ।
ಚಕ್ಷುರ್ವಿಷಯಮಾಗಮ್ಯ ನಾಯಂ ಜೀವಿತುಮರ್ಹತಿ ॥ ೫೩

ದೃಷ್ಟಿಂ ದೃಷ್ಟಿವಿಷಸ್ಯೇವ ಸರ್ಪಸ್ಯ ಮಮ ರಾವಣಃ ।
ಸ್ವಸ್ಥಾಃ ಪಶ್ಯತ ದುರ್ಧರ್ಷಾ ಯುದ್ಧಂ ವಾನರಪುಂಗವಾಃ ॥ ೫೪

ಆಸೀನಾಃ ಪರ್ವತಾಗ್ರೇಷು ಮಮೇದಂ ರಾವಣಸ್ಯ ಚ ।
ಅದ್ಯ ರಾಮಸ್ಯ ರಾಮತ್ವಂ ಪಶ್ಯಂತು ಮಮ ಸಂಯುಗೇ ॥ ೫೫

ತ್ರಯೋ ಲೋಕಾಃ ಸಗಂಧರ್ವಾಃ ಸದೇವಾಃ ಸರ್ಷಿಚಾರಣಾಃ ।
ಅದ್ಯ ಕರ್ಮ ಕರಿಷ್ಯಾಮಿ ಯಲ್ಲೋಕಾಃ ಸಚರಾಚರಾಃ ॥ ೫೬

ಸದೇವಾಃ ಕಥಯಿಷ್ಯಂತಿ ಯಾವದ್ಭೂಮಿರ್ಧರಿಷ್ಯತಿ ।
ಸಮಾಗಮ್ಯ ಸದಾ ಲೋಕೇ ಯಥಾ ಯುದ್ಧಂ ಪ್ರವರ್ತಿತಮ್ ॥

---

ಕರೆತಂದುದು? ವಾಲಿಯನ್ನು ಕೊಂದು ಸುಗ್ರೀವನನ್ನು ಕಪಿರಾಜ್ಯದಲ್ಲಿ ಸ್ಥಾಪಿಸಿದ್ದು ಈತನಿಗೋಸ್ಕರವೇ ಅಲ್ಲವೆ? ಕಡಲಲ್ಲಿ ಸೇತುವನ್ನು ಕಟ್ಟಿ ಕಡಲನ್ನು ದಾಟಿ ಇಷ್ಟು ದೂರ ಬಂದದ್ದು ಈತನಿಗಾಗಿಯೇ (೫೧-೫೨). ಪಾಪಿಯಾದ ಈ ರಾವಣನು ಈಗ ನನ್ನ ಕಣ್ಣಿಗೆ ಗೋಚರಿಸಿದ್ದಾನೆ. ನನ್ನ ಕಣ್ಣಿಗೆ ಬಿದ್ದಮೇಲೆ ಈತನು ಬದುಕಿರಲು ಸಾಧ್ಯವಿಲ್ಲ! ದೃಷ್ಟಿವಿಷವುಳ್ಳ* ಸರ್ಪದ ದೃಷ್ಟಿಗೆ ಬೀಳುವಂತೆ, ನನ್ನ ದೃಷ್ಟಿಗೆ ಸಿಕ್ಕಿದ್ದಾನೆ (೫೩-೫೪). ಎಲೈ ವಾನರವೀರರೆ, ಕೇಳಿರಿ: ನೀವೆಲ್ಲರೂ ಪರ್ವತಾಗ್ರಗಳಲ್ಲಿ ಸ್ವಸ್ಥರಾಗಿ ಕುಳಿತು ನನಗೂ ರಾವಣನಿಗೂ ನಡೆಯುವ ಯುದ್ಧವನ್ನು ನೋಡುತ್ತಿರಿ! ಈ ರಾಮನಲ್ಲಿರುವ ರಾಮತ್ವವೆಂದರೇನೆಂಬುದನ್ನು ಇಂದು ಸಂಗ್ರಾಮದಲ್ಲಿ ಕಾಣಿರಿ! ಮೂರು ಲೋಕಗಳೂ ದೇವಗಂಧರ್ವರೂ ಋಷಿಚಾರಣರೂ ಇದನ್ನು ಕಣ್ಣಾರೆ ನೋಡಲಿ! ಈ ಜಗತ್ತು ಇರುವವರೆಗೆ ದೇವತೆಗಳೂ ಸಮಸ್ತ ಸ್ಥಾವರಜಂಗಮಗಳೂ ಹೇಳಿ ಹಾಡಿಕೊಳ್ಳುವಂತಹ

---

* ಕೆಲವು ಜಾತಿಯ ಸರ್ಪಗಳು ನೋಟದಿಂದಲೇ ಪ್ರಾಣಿಗಳನ್ನು ಕೊಲ್ಲುತ್ತವೆಯೆಂದು ಹೇಳುತ್ತಾರೆ.

ಏವಮುಕ್ತ್ವಾ ಶಿತೈರ್ಬಾಣೈಸ್ತಪ್ತಕಾಂಚನಭೂಷಣೈಃ ।
ಆಜಘಾನ ದಶಗ್ರೀವಂ ರಣೇ ರಾಮಃ ಸಮಾಹಿತಃ ॥ ೫೮

ಅಥ ಪ್ರದೀಪ್ತೈರ್ನಾರಾಚೈರ್ಮುಸಲೈಶ್ಚಾಪಿ ರಾವಣಃ ।
ಅಭ್ಯವರ್ಷತ್ತದಾ ರಾಮಂ ಧಾರಾಭಿರಿವ ತೋಯದಃ ॥ ೫೯

ರಾಮರಾವಣಮುಕ್ತಾನಾಮನ್ಯೋನ್ಯಮಭಿನಿಘ್ನತಾಮ್ ।
ಶರಾಣಾಂ ಚ ಶರಾಣಾಂ ಚ ಬಭೂವ ತುಮುಲಃ ಸ್ವನಃ ॥ ೬೦

ತೇ ಭಿನ್ನಾಶ್ಚ ವಿಕೀರ್ಣಾಶ್ಚ ರಾಮರಾವಣಯೋಃ ಶರಾಃ ।
ಅಂತರಿಕ್ಷಾತ್ ಪ್ರದೀಪ್ತಾಗ್ರಾ ನಿಪೇತುರ್ಧರಣೀತಲೇ ॥ ೬೧

ತಯೋರ್ಜ್ಯಾತಲನಿರ್ಘೋಷೋ ರಾಮರಾವಣಯೋರ್ಮಹಾನ್ ।
ತ್ರಾಸನಃ ಸರ್ವಭೂತಾನಾಂ ಸಂಬಭೂವಾದ್ಭುತೋಪಮಃ ॥ ೬೨

ಸ ಕೀರ್ಯಮಾಣಃ ಶರಜಾಲವೃಷ್ಟಿಭಿ-
ರ್ಮಹಾತ್ಮನಾ ದೀಪ್ತಧನುಷ್ಮತಾರ್ದಿತಃ ।

---

ಅದ್ಭುತಕೃತ್ಯವನ್ನು ಇಂದು ಮಾಡುವೆನು! ಯುದ್ಧವು ಹೇಗೆ ನಡೆಯುವುದೆಂಬುದನ್ನು ಎಲ್ಲರೂ ಬಂದು ವೀಕ್ಷಿಸಲಿ!" (೫೫-೫೭). ಹೀಗೆ ಹೇಳಿ ಶ್ರೀರಾಮನು ಯುದ್ಧಾಭಿಮುಖನಾಗಿ ಸುವರ್ಣಭೂಷಿತ ನಿಶಿತಾಸ್ತ್ರಗಳಿಂದ ರಾವಣನನ್ನು ಹೊಡೆದನು. ಆಗ ರಾವಣನು ದೀಪ್ತನಾರಾಚಗಳನ್ನೂ ಮುಸಲಗಳನ್ನೂ, ಮೇಘವು ಧಾರಾಕಾರವಾಗಿ ವೃಷ್ಟಿಯನ್ನು ಸುರಿಸುವಂತೆ ಶ್ರೀರಾಮನಮೇಲೆ ಸುರಿದನು (೫೮-೫೯). ಶ್ರೀರಾಮನೂ ರಾವಣನೂ ಅನ್ಯೋನ್ಯವಾಗಿ ಶರಗಳನ್ನು ಸೆಳೆಸೆಳೆದು ಬಿಡುತ್ತಿರಲು, ಅವು ಆಕಾಶಮಾರ್ಗದಲ್ಲಿ ಸಂಘರ್ಷಿಸಿ, ಠಣಠಣಿಲ್ ಧಡಧಡಿಲ್ ಎಂಬ ತುಮುಲಧ್ವನಿಯನ್ನುಂಟುಮಾಡಿದವು (೬೦). ಅವರೀರ್ವರ ಶರಗಳೂ ಒಂದಕ್ಕೊಂದು ತಾಗಿ ವಿಚ್ಛಿನ್ನವಾಗಿ ತೂರಾಡಿ, ತುದಿಯಲ್ಲಿ ಥಳಥಳಿಸುತ್ತ ಅಂತರಿಕ್ಷದಿಂದ ಭೂಮಿಗೆ ಬೀಳುತ್ತಿದ್ದವು. ಅವರೀರ್ವರ ಜ್ಯಾಘೋಷತಲಘೋಷಗಳು ಸಮಸ್ತರಿಗೂ ಅಂಜಿಕೆಯನ್ನುಂಟುಮಾಡುವಂತೆ ಅತ್ಯದ್ಭುತವಾದವು (೬೧-೬೨). ಮಹಾಧೀರನಾದ ಶ್ರೀರಾಮನು ದೀಪ್ತವಾದ ಕೋದಂಡವನ್ನು ಹಿಡಿದು ಸತತವಾದ ಶರಜಾಲಗಳಿಂದ

ಭಯಾತ್ ಪ್ರದುದ್ರಾವ ಸಮೇತ್ಯ ರಾವಣೋ
ಯಥಾನಿಲೇನಾಭಿಹತೋ ಬಲಾಹಕಃ ॥ ೬೩

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋತ್ತರಶತತಮಃ ಸರ್ಗಃ

---

## ದ್ವ್ಯುತ್ತರಶತತಮಃ ಸರ್ಗಃ

### ಲಕ್ಷ್ಮಣಸಂಜೀವನಮ್

ಶಕ್ತ್ಯಾ ವಿನಿಹತಂ ದೃಷ್ಟ್ವಾ ರಾವಣೇನ ಬಲೀಯಸಾ ।
ಲಕ್ಷ್ಮಣಂ ಸಮರೇ ಶೂರಂ ರುಧಿರೌಘಪರಿಪ್ಲುತಮ್ ॥ ೧

ಸ ದತ್ತ್ವಾ ತುಮುಲಂ ಯುದ್ಧಂ ರಾವಣಸ್ಯ ದುರಾತ್ಮನಃ ।
ವಿಸೃಜನ್ನೇವ ಬಾಣೌಘಾನ್ ಸುಷೇಣಂ ವಾಕ್ಯಮಬ್ರವೀತ್॥ ೨

---

ಆಚ್ಛಾದಿಸಲು, ರಾವಣನು ಅಂಜಿದನು. ಚಂಡಮಾರುತದ ಧಾಳಿಗೆ ಒಳಗಾದ ಮಹಾಮೇಘದಂತೆ, ಯುದ್ಧರಂಗದಿಂದ ಬೇಗಬೇಗನೆ ಹೊರಟು ಹೋದನು (೬೩).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರೊಂದನೆಯ ಸರ್ಗ

---

## ಸರ್ಗ ೧೦೨

### ಲಕ್ಷ್ಮಣನ ಸ್ಥಿತಿಯನ್ನು ನೋಡಿ ಶ್ರೀರಾಮನ ಶೋಕ. ಸುಷೇಣನ ಸಮಾಧಾನ. ಹನುಮಂತನು ತಂದ ದಿವ್ಯೌಷಧಿಯಿಂದ ಲಕ್ಷ್ಮಣನು ಮೂರ್ಛೆಯಿಂದೇಳುವುದು.

ಬಲಶಾಲಿಯಾದ ರಾವಣನ ಶಕ್ತ್ಯಾಯುಧದಿಂದ ಅಭಿಹತನಾ, ಶೂರನಾದ ಲಕ್ಷ್ಮಣನು ರಕ್ತದಲ್ಲಿ ನೆನೆದು ರಣಭೂಮಿಯಲ್ಲಿ ಮಲಗಿದ್ದನು. ಆದರೂ ಶ್ರೀರಾಮನು ಬಾಣರಾಶಿಗಳನ್ನು ಪ್ರಯೋಗಿಸಿ ದುರಾತ್ಮನಾದ ರಾವಣನೊಡನೆ ತುಮುಲಯುದ್ಧವನ್ನಾಚರಿಸಿ ಬಂದು, ಸುಷೇಣನನ್ನು

ಏಷ ರಾವಣವೀರ್ಯೇಣ ಲಕ್ಷ್ಮಣಃ ಪತಿತಃ ಕ್ಷಿತೌ ।
ಸರ್ಪವದ್ವೇಷ್ಟತೇ ವೀರೋ ಮಮ ಶೋಕಮುದೀರಯನ್ ॥ ೩

ಶೋಣಿತಾರ್ದ್ರಮಿಮಂ ವೀರಂ ಪ್ರಾಣೈರಿಷ್ಟತಮಂ ಮಮ ।
ಪಶ್ಯತೋ ಮಮ ಕಾ ಶಕ್ತಿರ್ಯೋದ್ಧುಂ ಪರ್ಯಾಕುಲಾತ್ಮನಃ ॥ ೪

ಅಯಂ ಸ ಸಮರಶ್ಲಾಘೀ ಭ್ರಾತಾ ಮೇ ಶುಭಲಕ್ಷಣಃ ।
ಯದಿ ಪಂಚತ್ವಮಾಪನ್ನಃ ಪ್ರಾಣೈರ್ಮೇ ಕಿಂ ಸುಖೇನ ಚ ॥ ೫

ಲಜ್ಜತೀವ ಹಿ ಮೇ ವೀರ್ಯಂ ಭ್ರಶ್ಯತೀವ ಕರಾದ್ಧನುಃ ।
ಸಾಯಕಾ ವ್ಯವಸೀದಂತಿ ದೃಷ್ಟಿರ್ಬಾಷ್ಪವಶಂ ಗತಾ ॥ ೬

ಅವಸೀದಂತಿ ಗಾತ್ರಾಣಿ ಸ್ವಪ್ನಯಾನೇ ನೃಣಾಮಿವ ।
ಚಿಂತಾ ಮೇ ವರ್ಧತೇ ತೀವ್ರಾ ಮುಮೂರ್ಷಾ ಚೋಪಜಾಯತೇ ॥

ನೋಡಿ ಹೀಗೆಂದನು (೧-೨): "ಸುಷೇಣ, ಇಲ್ಲಿ ನೋಡು. ರಾವಣನ ಶೌರ್ಯೋದ್ರೇಕಕ್ಕೆ ಸಿಲುಕಿ ಲಕ್ಷ್ಮಣನು ನೆಲದಲ್ಲಿ ಬಿದ್ದಿರುವನು. ಈ ವೀರನು ಸರ್ಪದಂತೆ ಹೊರಳಾಡುವನಲ್ಲ! ಇದನ್ನು ನೋಡಿದಷ್ಟೂ ನನ್ನ ಶೋಕವು ಉಲ್ಬಣಿಸುತ್ತಿದೆ. ನನ್ನ ಪ್ರಾಣಕ್ಕಿಂತಲೂ ಪ್ರಿಯನಾದ ತಮ್ಮನು ನೆತ್ತರಲ್ಲಿ ನೆನೆದಿರುವುದನ್ನು ನೋಡಿ, ನನ್ನ ಮನಸ್ಸು ಶೋಕದಿಂದ ಕಲಕಿಹೋಗಿದೆ. ಇವನನ್ನು ಕಣ್ಣೆದುರಿಗೆ ನೋಡುತ್ತ ಯುದ್ಧಮಾಡಲು ನನಗೆ ಶಕ್ತಿಯಾದರೂ ಹೇಗೆ ಬಂದೀತು? (೩-೪). ಶೂರಾಗ್ರಣಿಯೂ ಶುಭಲಕ್ಷಣನೂ ಆದ ನನ್ನ ತಮ್ಮನು ಒಂದು ವೇಳೆ ಮೃತನಾದರೆ, ಅಯ್ಯೋ, ಈ ಪ್ರಾಣದಿಂದ ನನಗೇನಾಗಬೇಕು? ಸುಖಸಾಮಗ್ರಿಯಿಂದೇನಾಗಬೇಕು? (೫). ನನ್ನ ಪರಾಕ್ರಮಕ್ಕೆ ಅವಹೇಳನವಾದಂತಾಗಿದೆ. ನನ್ನ ಕೈಯಿಂದ ಈ ಚಾಪವು ಜಾರಿಬೀಳುವಂತಾಗಿದೆ. ಬಾಣಗಳು ಹಿಡಿತಕ್ಕೆ ಸಿಗುವುದಿಲ್ಲ. ಕಣ್ಣಲ್ಲಿ ನೀರು ತುಂಬಿ ದೃಷ್ಟಿ ಮಸುಕಾಗುತ್ತಿದೆ. ಅಡಿಯಿಡಲಾರದೆ ಕಾಲುಗಳು ಕುಸಿಯುತ್ತಿವೆ. ಸ್ವಪ್ನದಲ್ಲಿ ನಡೆಯುವ ಜನರ ಕಾಲುಗಳಂತಾಗಿದೆ*! ಸುಷೇಣ, ದುಃಖವು ದಾರುಣವಾಗಿ ಬೆಳೆಯುತ್ತಿದೆ.

* ಸ್ವಪ್ನದಲ್ಲಿ ಓಡುವ ಪ್ರಸಂಗ ಬಂದಲ್ಲಿ ಕಾಲುಗಳು ಹಿಂಜರಿಯುವುದು ಅನುಭವಸಿದ್ಧವಾಗಿದೆ.

ಭ್ರಾತರಂ ನಿಹತಂ ದೃಷ್ಟ್ವಾ ರಾವಣೇನ ದುರಾತ್ಮನಾ ।
ವಿನಿಷ್ಟನಂತಂ ದುಃಖಾರ್ತಂ ಮರ್ಮಣ್ಯಭಿಹತಂ ಭೃಶಮ್ ॥ ೮

ರಾಘವೋ ಭ್ರಾತರಂ ದೃಷ್ಟ್ವಾ ಪ್ರಿಯಂ ಪ್ರಾಣಂ ಬಹಿಶ್ಚರಮ್ ।
ದುಃಖೇನ ಮಹತಾವಿಷ್ಟೋ ಧ್ಯಾನಶೋಕಪರಾಯಣಃ ॥ ೯

ಪರಂ ವಿಷಾದಮಾಪನ್ನೋ ವಿಲಲಾಪಾಕುಲೇಂದ್ರಿಯಃ ।
ನ ಹಿ ಯುದ್ಧೇನ ಮೇ ಕಾರ್ಯಂ ನೈವ ಪ್ರಾಣೈರ್ನ ಸೀತಯಾ ॥

ಭ್ರಾತರಂ ನಿಹತಂ ದೃಷ್ಟ್ವಾ ಲಕ್ಷ್ಮಣಂ ರಣಪಾಂಸುಷು ।
ಕಿಂ ಮೇ ರಾಜ್ಯೇನ ಕಿಂ ಪ್ರಾಣೈರ್ಯುದ್ಧೇ ಕಾರ್ಯಂ ನ ವಿದ್ಯತೇ ॥

ಯತ್ರಾಯಂ ನಿಹತಃ ಶೇತೇ ರಣಮೂರ್ಧನಿ ಲಕ್ಷ್ಮಣಃ ।
ದೇಶೇ ದೇಶೇ ಕಲತ್ರಾಣಿ ದೇಶೇ ದೇಶೇ ಚ ಬಾಂಧವಾಃ ॥ ೧೨

ತಂ ತು ದೇಶಂ ನ ಪಶ್ಯಾಮಿ ಯತ್ರ ಭ್ರಾತಾ ಸಹೋದರಃ ।
ಕಿನ್ನು ರಾಜ್ಯೇನ ದುರ್ಧರ್ಷ ಲಕ್ಷ್ಮಣೇನ ವಿನಾ ಮಮ ॥ ೧೩

---

ಎಚ್ಚರದಪ್ಪಿದಂತಾಗುತ್ತದೆ” ಎಂದನು (೬-೭). ದುರಾತ್ಮನಾದ ರಾವಣನಿಂದ ಮರ್ಮಸ್ಥಾನದಲ್ಲಿ ತೀವ್ರವಾದ ಆಘಾತವನ್ನು ಹೊಂದಿ, ಯಾತನೆಯನ್ನನುಭವಿಸುತ್ತ ನರಳುತ್ತಿದ್ದ ತಮ್ಮನನ್ನು ವೀಕ್ಷಿಸಿ, ಶ್ರೀರಾಮನ ದುಃಖವು ಅಧಿಕವಾಯಿತು. ಹೊರಗೆ ಸಂಚರಿಸುವ ಪ್ರಾಣವೋ ಎಂಬಂತೆ ಪ್ರೀತಿಪಾತ್ರನಾದ ಸೋದರನನ್ನು ನೋಡಿ ನೋಡಿ, ರಾಘವನು ಶೋಕಾವಿಷ್ಟನಾದನು (೮-೯). ಶೋಕದಿಂದ ಏನನ್ನೋ ಧ್ಯಾನಿಸುತ್ತ ವಿಷಣ್ಣನಾದನು. ಇಂದ್ರಿಯಗಳು ಕಲಕಿಹೋದವು. ಶ್ರೀರಾಮನು ಅಳತೊಡಗಿದನು: “ಇನ್ನು ಯುದ್ಧವೇ ನನಗೆ ಬೇಕಿಲ್ಲ; ಜೀವಿತವೇ ಬೇಡವಾಗಿದೆ; ಸೀತೆಯಿಂದ ನನಗೇನಾಗಬೇಕು? ಧೂಳಿಯಲ್ಲಿ ಹೊರಳಾಡುವ ತಮ್ಮನಾದ ಲಕ್ಷ್ಮಣನನ್ನು ನೋಡಿದಮೇಲೆ, ನನಗೆ ರಾಜ್ಯದಿಂದೇನು? ಪ್ರಾಣದಿಂದೇನು? ಯುದ್ಧದಿಂದ ಆಗಬೇಕಾದ್ದು ಯಾವುದೂ ಉಳಿಯಲಿಲ್ಲ (೧೦-೧೧). ಈ ಯುದ್ಧದಲ್ಲಿ ಲಕ್ಷ್ಮಣನು ಹತನಾಗಿ ಮಲಗಿಬಿಟ್ಟನಲ್ಲ! ಯಾವ ದೇಶದಲ್ಲಾದರೂ ಮಡದಿಯರು ದೊರಕಬಹುದು; ಬಂಧುಗಳು ಲಭಿಸಬಹುದು. ಆದರೆ, ಒಡಹುಟ್ಟಿದ ತಮ್ಮನು ದೊರಕುವ ಯಾವ ದೇಶವನ್ನೂ ನಾನು ಕಾಣೆ! ಪರಾಕ್ರಮಿ

ಕಥಂ ವಕ್ಷ್ಯಾಮ್ಯಹಂ ತ್ವಂಬಾಂ ಸುಮಿತ್ರಾಂ ಪುತ್ರವತ್ಸಲಾಮ್ ।
ಉಪಾಲಂಭಂ ನ ಶಕ್ಷ್ಯಾಮಿ ಸೋಢುಂ ದತ್ತಂ ಸುಮಿತ್ರಯಾ ॥ ೧೪

ಕಿನ್ನು ವಕ್ಷ್ಯಾಮಿ ಕೌಸಲ್ಯಾಂ ಮಾತರಂ ಕಿನ್ನು ಕೈಕಯೀಮ್ ।
ಭರತಂ ಕಿನ್ನು ವಕ್ಷ್ಯಾಮಿ ಶತ್ರುಘ್ನಂ ಚ ಮಹಾಬಲಮ್ ॥ ೧೫

ಸಹ ತೇನ ವನಂ ಯಾತೋ ವಿನಾ ತೇನಾಗತಃ ಕಥಮ್ ।
ಇಹೈವ ಮರಣಂ ಶ್ರೇಯೋ ನ ತು ಬಂಧುವಿಗರ್ಹಣಮ್ ॥ ೧೬

ಕಿಂ ಮಯಾ ದುಷ್ಕೃತಂ ಕರ್ಮ ಕೃತಮನ್ಯತ್ರ ಜನ್ಮನಿ ।
ಯೇನ ಮೇ ಧಾರ್ಮಿಕೋ ಭ್ರಾತಾ ನಿಹತಶ್ಚಾಗ್ರತೋ ಮಮ ॥

ಹಾ ಭ್ರಾತರ್ಮನುಜಶ್ರೇಷ್ಠ ಶೂರಾಣಾಂ ಪ್ರವರ ಪ್ರಭೋ ।
ಏಕಾಕೀ ಕಿನ್ನು ಮಾಂ ತ್ಯಕ್ತ್ವಾ ಪರಲೋಕಾಯ ಗಚ್ಛಸಿ ॥ ೧೮

---

ಯಾದ ಈ ಲಕ್ಷ್ಮಣನು ನನ್ನೊಡನೆ ಇಲ್ಲದಮೇಲೆ, ರಾಜಪದವಿಯಿಂದ ನನಗೆ ಆಗಬೇಕಾದ್ದಾದರೂ ಯಾವುದು ? (೧೨-೧೩). ಅಯ್ಯೋ-ಅಕಟ ! ತನ್ನ ಮಗನಿಗಾಗಿ ಹಂಬಲಿಸುತ್ತ ಕಾದಿರುವ ಅಮ್ಮ-ಸುಮಿತ್ರೆಗೆ ನಾನು ಏನು ಹೇಳಲಿ ? ಅವಳು ಆಡಬಹುದಾದ ಚುಚ್ಚುಮಾತನ್ನು ಹೇಗೆ ಸಹಿಸಿ ಕೊಳ್ಳಲಿ ? ನನ್ನ ತಾಯಿಯಾದ ಕೌಸಲ್ಯೆಗೆ ತಾನೇ ಏನು ಹೇಳಲಿ ? ಕೈಕೇಯಿಗೆ ಯಾವ ಉತ್ತರವನ್ನು ಕೊಡಲಿ ? ಭರತನೂ ಶತ್ರುಘ್ನನೂ, ಲಕ್ಷ್ಮಣನು ಎಲ್ಲೆಂದು ಕೇಳಿದರೆ ಏನನ್ನು ನುಡಿಯಲಿ ? (೧೪-೧೫). 'ಹೋಗುವಾಗ ಲಕ್ಷ್ಮಣನನ್ನು ಕರೆದುಕೊಂಡು ವನಕ್ಕೆ ಹೋದನು ; ಈಗ ಮಾತ್ರ ಅವನನ್ನು ಬಿಟ್ಟು ಏಕೆ ಬಂದನಂತೆ !' ಎಂದು ಎಲ್ಲರೂ ನನ್ನನ್ನು ನಿಂದಿಸದೆ ಇರುವರೆ ? ಬಂಧುಗಳಿಂದ ನಿಂದಿಸಿಕೊಳ್ಳುವುದಕ್ಕಿಂತ ಇಲ್ಲಿಯೇ ನಾನು ಸಾಯುವುದು ಲೇಸು ! (೧೬). ಹಿಂದಿನ ಜನ್ಮದಲ್ಲಿ ನಾನು ಯಾವ ಪಾಪಕಾರ್ಯನನ್ನು ಮಾಡಿರಬಹುದು ? ಧರ್ಮನಿಷ್ಠನಾದ ಸೋದರನು ನನ್ನ ಕಣ್ಣೆದುರಿಗೇ ಹತನಾದನಲ್ಲ ! ಹಾ ವತ್ಸ-ತಮ್ಮ, ಹಾ ಪುರುಷೋತ್ತಮ, ಹಾ ಶೂರಾಗ್ರಣಿ, ಅಯ್ಯೋ-ನನ್ನಪ್ಪ, ಪರಲೋಕಕ್ಕೆ ಹೊರಟೆಯಾ ? ನನ್ನನ್ನು ಬಿಟ್ಟು ಒಂಟಿಯಾಗಿ ಹೊರಟುಬಿಟ್ಟೆಯಾ ?

ವಿಲಪಂತಂ ಚ ಮಾಂ ಭ್ರಾತಃ ಕಿಮರ್ಥಂ ನಾವಭಾಷಸೇ ।
ಉತ್ತಿಷ್ಠ ಬ್ರೂಹಿ ಕಿಂ ಶೇಷೇ ದೀನಂ ಮಾಂ ಪಶ್ಯ ಚಕ್ಷುಷಾ ॥ ೧೯

ಶೋಕಾರ್ತಸ್ಯ ಪ್ರಮತ್ತಸ್ಯ ಪರ್ವತೇಷು ವನೇಷು ಚ ।
ವಿಷಣ್ಣಸ್ಯ ಮಹಾಬಾಹೋ ಸಮಾಶ್ವಾಸಯಿತಾ ಚ ಕಃ ॥ ೨೦

ಇತ್ಯೇವಂ ವಿಲಪಂತಂ ತಂ ಶೋಕವಿಹ್ವಲಿತೇಂದ್ರಿಯಮ್ ।
ವಿವೇಷ್ಟಮಾನಂ ಕರುಣಮುಚ್ಛ್ವಸಂತಂ ಪುನಃ ಪುನಃ ॥ ೨೧

ರಾಮಮಾಶ್ವಾಸಯನ್ ವೀರಃ ಸುಷೇಣೋ ವಾಕ್ಯಮಬ್ರವೀತ್ ।
ನ ಮೃತೋಽಯಂ ಮಹಾಬಾಹೋ ಲಕ್ಷ್ಮಣೋ ಲಕ್ಷ್ಮಿವರ್ಧನಃ ॥

ನ ಚಾಸ್ಯ ವಿಕೃತಂ ವಕ್ತ್ರಂ ನಾಪಿ ಶ್ಯಾಮಂ ನ ನಿಷ್ಪ್ರಭಮ್ ।
ಸುಪ್ರಭಂ ಚ ಪ್ರಸನ್ನಂ ಚ ಮುಖಮಸ್ಯಾಭಿಲಕ್ಷ್ಯತೇ ॥ ೨೩

ಪದ್ಮರಕ್ತತಲೌ ಹಸ್ತೌ ಸುಪ್ರಸನ್ನೇ ಚ ಲೋಚನೇ ।
ಏವಂ ನ ವಿದ್ಯತೇ ರೂಪಂ ಗತಾಸೂನಾಂ ವಿಶಾಂಪತೇ ॥ ೨೪

---

(೧೭-೧೮). ತಮ್ಮ-ಲಕ್ಷ್ಮಣ, ದೈನ್ಯದಿಂದ ಗೋಳಾಡುತ್ತಿರುವ ನನ್ನೊಡನೆ ನೀನೇಕೆ ಮಾತಾಡುವುದಿಲ್ಲ? ವತ್ಸ, ಮೇಲೇಳು; ಮಾತಾಡು. ಹೀಗೇಕೆ ಮಲಗಿದ್ದೀಯೆ? ದೀನನಾದ ನನ್ನನ್ನು ಒಂದುಸಲ ಕಣ್ಣಿಂದ ನೋಡು (೧೯). ಓ ಮಹಾಬಾಹು, ಶೋಕಾರ್ತನಾದ ನನಗೆ ಇನ್ನುಮೇಲೆ ಸಮಾಧಾನ ಹೇಳುವವರು ಯಾರು? ಪರ್ವತಾರಣ್ಯಗಳಲ್ಲಿ ನಾನು ಪ್ರಮಾದವಶನಾದಾಗಲೂ ಖಿನ್ನನಾದಾಗಲೂ ನೀನಲ್ಲವೆ ನನ್ನನ್ನು ಸಂತೈಸತಕ್ಕವನು?" ಎಂದು ಶ್ರೀರಾಮನು ವಿಲಪಿಸಿದನು (೨೦). ಅವನ ಇಂದ್ರಿಯಗಳು ಕಲಕಿಹೋಗಿದ್ದವು. ಮತ್ತೆ ಮತ್ತೆ ನಿಟ್ಟುಸಿರೆಳೆಯುತ್ತ ಕರುಣಾಜನಕವಾಗಿ ಹೊರಳುತ್ತ ರೋದಿಸುತ್ತಿದ್ದ ಶ್ರೀರಾಮನನ್ನು ನೋಡಿ, ಸುಷೇಣನು ಸಂತೈಸುತ್ತ ಹೀಗೆಂದನು (೨೧): "ಮಹಾಬಾಹು-ಶ್ರೀರಾಮ, ವೀರಲಕ್ಷ್ಮೀಯುಕ್ತನಾದ ಲಕ್ಷ್ಮಣನು ಮೃತನಾಗಿಲ್ಲ! ಹೇಗೆಂದರೆ, ಇವನ ಮುಖವು ವಿಕಾರವಾಗಿಲ್ಲ, ಕಪ್ಪುಗಟ್ಟಿಲ್ಲ, ಕಾಂತಿಹೀನವಾಗಿಲ್ಲ. ಇವನ ಮುಖವು ಕಾಂತಿಯುಕ್ತವಾಗಿದೆ. ಪ್ರಸನ್ನವಾಗಿ ಕಂಡುಬರುತ್ತದೆ (೨೨-೨೩). ಲಕ್ಷ್ಮಣನ ಎರಡು ಅಂಗೈಗಳೂ ತಾವರೆಯಂತೆ ಕೆಂಪಾಗಿವೆ.

ದೀರ್ಘಾಯುಷಸ್ತು ಯೇ ಮರ್ತ್ಯಾಸ್ತೇಷಾಂ ತು ಮುಖಮೀದೃಶಮ್
ನಾಯಂ ಪ್ರೇತತ್ವಮಾಪನ್ನೋ ಲಕ್ಷ್ಮಣೋ ಲಕ್ಷ್ಮಿವರ್ಧನಃ ॥ ೨೫

ಮಾ ವಿಷಾದಂ ಕೃಥಾ ವೀರ ಸಪ್ರಾಣೋಽಯಮರಿಂದಮಃ ।
ಆಖ್ಯಾಸ್ಯತೇ ಪ್ರಸುಪ್ತಸ್ಯ ಸ್ರಸ್ತಗಾತ್ರಸ್ಯ ಭೂತಲೇ ॥ ೨೬

ಸೋಚ್ಛ್ವಾಸಂ ಹೃದಯಂ ವೀರ ಕಂಪಮಾನಂ ಮುಹುರ್ಮುಹುಃ ।
ಏವಮುಕ್ತ್ವಾ ತು ವಾಕ್ಯಜ್ಞಃ ಸುಷೇಣೋ ರಾಘವಂ ವಚಃ ॥ ೨೭

ಸಮೀಪಸ್ಥಮುವಾಚೇದಂ ಹನುಮಂತಮಭಿತ್ವರನ್ ।
ಸೌಮ್ಯ ಶೀಘ್ರಮಿತೋ ಗತ್ವಾ ಶೈಲಮೋಷಧಿಪರ್ವತಮ್ ॥ ೨೮

ಪೂರ್ವಂ ತೇ ಕಥಿತೋ ಯೋಽಸೌ ವೀರ ಜಾಂಬವತಾ ಶುಭಃ ।
ದಕ್ಷಿಣೇ ಶಿಖರೇ ತಸ್ಯ ಜಾತಾಮೋಷಧಿಮಾನಯ ॥ ೨೯

ವಿಶಲ್ಯಕರಣೀಂ ನಾಮ ವಿಶಲ್ಯಕರಣೀಂ ಶುಭಾಮ್ ।
ಸವರ್ಣಕರಣೀಂ ಚಾಪಿ ತಥಾ ಸಂಜೀವನೀಮಪಿ ॥ ೩೦

---

ನೇತ್ರಗಳು ತೇಜೋಯುಕ್ತವಾಗಿವೆ. ರಾಜಪುತ್ರ, ಮೃತರಾದವರ ಆಕೃತಿ ಈ ರೀತಿಯಲ್ಲಿರುವುದಿಲ್ಲ! ದೀರ್ಘಾಯುಗಳಾದ ಜನರ ಮುಖಲಕ್ಷಣವು ಈ ರೀತಿ ಇರುತ್ತದೆ. ಆದ್ದರಿಂದ ಲಕ್ಷ್ಮಣನು ಸರ್ವಥಾ ಮೃತನಾಗಿಲ್ಲ (೨೪-೨೫). ವೀರಾಗ್ರಣಿ, ದುಃಖಿಸಬೇಡ. ಲಕ್ಷ್ಮಣನು ಜೀವಂತನಾಗಿದ್ದಾನೆ. ಕೈಕಾಲುಗಳನ್ನು ಚಾಚಿ ಇವನು ನೆಲದಲ್ಲಿ ಮೂರ್ಛಿತನಾಗಿ ಮಲಗಿದ್ದರೂ, ಉಸಿರಾಡುವುದರಿಂದ ಹೃದಯವು ಮೇಲಿಂದಮೇಲೆ ಹೊಡೆದುಕೊಳ್ಳುವುದನ್ನು ನೋಡು" ಎಂದು ನುಡಿದು, ಸಮೀಪದಲ್ಲಿ ನಿಂತಿದ್ದ ಹನುಮಂತನಿಗೆ ತ್ವರೆಯಿಂದ ಸುಷೇಣನು ಹೇಳಿದನು (೨೬-೨೭): "ಸೌಮ್ಯ-ಹನುಮಂತ, ಓಷಧಿಪರ್ವತಕ್ಕೆ ಧಾವಿಸು! ಹಿಂದೆ ಜಾಂಬವಂತನು ಅದು ಎಲ್ಲಿದೆಯೆಂಬುದನ್ನು ನಿನಗೆ ಹೇಳಿದ್ದಾನೆ. ಅದರ ದಕ್ಷಿಣ ಶಿಖರದಲ್ಲಿ ದಿವ್ಯೌಷಧಿಗಳು ಬೆಳೆದಿವೆ. ಶಲ್ಯಬಾಧೆಯನ್ನು ನಿವಾರಿಸುವ ವಿಶಲ್ಯಕರಣಿ, ಸವರ್ಣಕರಣಿ, ಸಂಜೀವನಿ ಮತ್ತು ಸಂಧಾನಕರಣಿಯೆಂಬ ಮೂಲಿಕೆಗಳನ್ನು

ಸಂಧಾನಕರಣೀಂ ಚಾಪಿ ಗತ್ವಾ ಶೀಘ್ರಮಿಹಾನಯ ।
ಸಂಜೀವನಾರ್ಥಂ ವೀರಸ್ಯ ಲಕ್ಷ್ಮಣಸ್ಯ ಮಹಾತ್ಮನಃ ॥ ೩೧

ಇತ್ಯೇವಮುಕ್ತೋ ಹನುಮಾನ್ ಗತ್ವಾ ಚೌಷಧಿಪರ್ವತಮ್ ।
ಚಿಂತಾಮಭ್ಯಗಮಚ್ಛ್ರೀಮಾನಜಾನಂಸ್ತಾಂ ಮಹೌಷಧಿಮ್ ॥ ೩೨

ತಸ್ಯ ಬುದ್ಧಿಃ ಸಮುತ್ಪನ್ನಾ ಮಾರುತೇರಮಿತೌಜಸಃ ।
ಇದಮೇವ ಗಮಿಷ್ಯಾಮಿ ಗೃಹೀತ್ವಾ ಶಿಖರಂ ಗಿರೇಃ ॥ ೩೩

ಅಸ್ಮಿನ್ ಹಿ ಶಿಖರೇ ಜಾತಾಮೋಷಧೀಂ ತಾಂ ಸುಖಾವಹಾಮ್ ।
ಪ್ರತರ್ಕೇಣಾವಗಚ್ಛಾಮಿ ಸುಷೇಣೋಽಪ್ಯೇವಮಬ್ರವೀತ್ ॥ ೩೪

ಅಗೃಹ್ಯ ಯದಿ ಗಚ್ಛಾಮಿ ವಿಶಲ್ಯಕರಣೀಮಹಮ್ ।
ಕಾಲಾತ್ಯಯೇನ ದೋಷಃ ಸ್ಯಾದ್ವೈಕ್ಲವ್ಯಂ ಚ ಮಹದ್ಭವೇತ್ ॥ ೩೫

ಇತಿ ಸಂಚಿಂತ್ಯ ಹನುಮಾನ್ ಗತ್ವಾ ಕ್ಷಿಪ್ರಂ ಮಹಾಬಲಃ ।
ಆಸಾದ್ಯ ಪರ್ವತಶ್ರೇಷ್ಠಂ ತ್ರಿಃ ಪ್ರಕಂಪ್ಯ ಗಿರೇಃ ಶಿರಃ ॥ ೩೬

---

ಬೇಗನೆ ತೆಗೆದುಕೊಂಡುಬಾ (೨೮-೩೦). ಮಹಾತ್ಮನಾದ ಲಕ್ಷ್ಮಣನ ಪ್ರಾಣವನ್ನುಳಿಸುವುದಕ್ಕೆ ಈ ಮೂಲಿಕೆಗಳು ಅವಶ್ಯವಾಗಿ ಬೇಕು" ಎಂದನು. ಒಡನೆಯೇ ಆಂಜನೇಯನು ಧೀಂಕಿಟ್ಟು ನೆಗೆದು ಓಷಧಿಪರ್ವತವನ್ನು ಸೇರಿದನು. ಅಲ್ಲಿ ಹುಡುಕಿದರೂ ಮಹೌಷಧಿಗಳು ಗೋಚರಿಸದೆ, ಅವನು ಚಿಂತಾಕ್ರಾಂತನಾದನು (೩೧-೩೨). ಅನಂತರ ಅಸದೃಶಪರಾಕ್ರಮಿಯಾದ ಆ ಮಾರುತಾತ್ಮಜನಿಗೆ ಹೀಗೆನ್ನಿಸಿತು: 'ಓಷಧಿಪರ್ವತದ ಈ ಶಿಖರವನ್ನೇ ಹೊತ್ತೊಯ್ಯುವೆನು! ಲಕ್ಷ್ಮಣನಿಗೆ ಆರೋಗ್ಯವನ್ನೀಯುವ ಮೂಲಿಕೆಯು ಈ ಶಿಖರದಲ್ಲಿಯೇ ಇರಬೇಕೆಂದು ನನ್ನ ಊಹೆ. ಸುಷೇಣನೂ ಹಾಗೆಯೇ ಹೇಳಿದ್ದಾನೆ (೩೩-೩೪). ವಿಶಲ್ಯಕರಣಿ ಮೊದಲಾದ ಮೂಲಿಕೆಗಳನ್ನು ನಾನು ಒಯ್ಯದೆ ಹೋದರೆ, ಕಾಲವಿಳಂಬವಾಗಿ ಬಹಳ ಅನರ್ಥವಾಗಬಹುದು.' ಹೀಗೆಂದು ಆಲೋಚಿಸಿ ಬಲಾಢ್ಯನಾದ ಹನುಮಂತನು ಆ ಪರ್ವತದ ಶಿಖರವನ್ನು ಮೂರುಸಲ ಅಲ್ಲಾಡಿಸಿ

ಫುಲ್ಲನಾನಾತರುಗಣಂ ಸಮುತ್ಪಾಟ್ಯ ಮಹಾಬಲಃ ।
ಗೃಹೀತ್ವಾ ಹರಿಶಾರ್ದೂಲೋ ಹಸ್ತಾಭ್ಯಾಂ ಸಮತೋಲಯತ್ ॥

ಸ ನೀಲಮಿವ ಜೀಮೂತಂ ತೋಯಪೂರ್ಣಂ ನಭಸ್ಥಲಾತ್ ।
ಆಪಪಾತ ಗೃಹೀತ್ವಾ ತು ಹನುಮಾನ್ ಶಿಖರಂ ಗಿರೇಃ ॥ ೩೮

ಸಮಾಗಮ್ಯ ಮಹಾವೇಗಃ ಸಂನ್ಯಸ್ಯ ಶಿಖರಂ ಗಿರೇಃ ।
ವಿಶ್ರಮ್ಯ ಕಿಂಚಿದ್ಧನುಮಾನ್ ಸುಷೇಣಮಿದಮಬ್ರವೀತ್ ॥ ೩೯

ಓಷಧಿಂ ನಾವಗಚ್ಛಾಮಿ ತಾಮಹಂ ಹರಿಪುಂಗವ ।
ತದಿದಂ ಶಿಖರಂ ಕೃತ್ಸ್ನಂ ಗಿರೇಸ್ತಸ್ಯಾಹೃತಂ ಮಯಾ ॥ ೪೦

ಏವಂ ಕಥಯಮಾನಂ ತಂ ಪ್ರಶಸ್ಯ ಪವನಾತ್ಮಜಮ್ ।
ಸುಷೇಣೋ ವಾನರಶ್ರೇಷ್ಠೋ ಜಗ್ರಾಹೋತ್ಪಾಟ್ಯ ಚೌಷಧೀಮ್ ॥

ವಿಸ್ಮಿತಾಸ್ತು ಬಭೂವುಸ್ತೇ ರಣೇ ವಾನರರಾಕ್ಷಸಾಃ ।
ದೃಷ್ಟ್ವಾ ಹನುಮತಃ ಕರ್ಮ ಸುರೈರಪಿ ಸುದುಷ್ಕರಮ್ ॥ ೪೨

---

ದನು! (೩೫-೩೬). ಅರಳಿದ ವಿವಿಧ ವೃಕ್ಷಗಳಿಂದ ವಿರಾಜಿಸುತ್ತಿದ್ದ ಆ ಶಿಖರವನ್ನು ಕಪಿಶಾರ್ದೂಲನು ಕಿತ್ತೆತ್ತಿ ಎರಡು ಕೈಗಳಿಂದಲೂ ಒಮ್ಮೆ ತೂಗಾಡಿಸಿ, ಗಗನಮಾರ್ಗದಲ್ಲಿ ನೆಗೆದನು. ನೀರ್ದುಂಬಿದ ಕಾಲಮೇಘದಂತಿದ್ದ ಆ ಗಿರಿಶಿಖರವನ್ನು ಕೈಯಲ್ಲಿ ಹಿಡಿದು ಮಹಾವೇಗದಿಂದ ಹಾರಿ ಬಂದು ರಣರಂಗದಲ್ಲಿ ತಂದಿಟ್ಟನು! (೩೭-೩೮). ಆ ಮೇಲೆ ಸ್ವಲ್ಪ ವಿಶ್ರಮಿಸಿಕೊಂಡು ಹನುಮಂತನು ಸುಷೇಣನನ್ನು ನೋಡಿ "ವಾನರೋತ್ತಮ–ಸುಷೇಣ, ನೀನು ಹೇಳಿದ ಓಷಧಿ ಯಾವುದೋ ನನಗೆ ತಿಳಿಯಲಿಲ್ಲ. ಆದ್ದರಿಂದ ಆ ಬೆಟ್ಟದ ಶಿಖರವನ್ನೇ ಕಿತ್ತು ತಂದಿದ್ದೇನೆ!" ಎಂದನು (೩೯–೪೦). ಸುಷೇಣನು ಹನುಮಂತನನ್ನು ಹೊಗಳುತ್ತ ಕೂಡಲೆ ಹೋಗಿ, ತನಗೆ ಬೇಕಾದ ಮೂಲಿಕೆಗಳನ್ನು ಹುಡುಕಿ ಕಿತ್ತು ತಂದನು. ದೇವತೆಗಳಿಗೂ ಅಶಕ್ಯವಾದ ಹನುಮಂತನ ಸಾಹಸಕಾರ್ಯವನ್ನು ಕಂಡು, ವಾನರರೂ ರಣರಂಗದಲ್ಲಿದ್ದ ರಾಕ್ಷಸರೂ ವಿಸ್ಮಿತರಾದರು (೪೧–೪೨).

ತತಃ ಸಂಕ್ಷೋದಯಿತ್ವಾ ತಾಮೋಷಧೀಂ ವಾನರೋತ್ತಮಃ ।
ಲಕ್ಷ್ಮಣಸ್ಯ ದದೌ ನಸ್ತಃ ಸುಷೇಣಃ ಸುಮಹಾದ್ಯುತೇಃ ॥ ೪೩

ಸಶಲ್ಯಸ್ತಾಂ ಸಮಾಘ್ರಾಯ ಲಕ್ಷ್ಮಣಃ ಪರವೀರಹಾ ।
ವಿಶಲ್ಯೋ ನಿರುಜಃ ಶೀಘ್ರಮುದತಿಷ್ಠನ್ಮಹೀತಲಾತ್ ॥ ೪೪

ತಮುತ್ಥಿತಂ ತೇ ಹರಯೋ ಭೂತಲಾತ್ ಪ್ರೇಕ್ಷ್ಯ ಲಕ್ಷ್ಮಣಮ್ ।
ಸಾಧು ಸಾಧ್ವಿತಿ ಸುಪ್ರೀತಾಃ ಸುಷೇಣಂ ಪ್ರತ್ಯಪೂಜಯನ್ ॥ ೪೫

ಏಹ್ಯೇಹೀತ್ಯಬ್ರವೀದ್ರಾಮೋ ಲಕ್ಷ್ಮಣಂ ಪರವೀರಹಾ ।
ಸಸ್ವಜೇ ಸ್ನೇಹಗಾಢಂ ಚ ಬಾಷ್ಪಪರ್ಯಾಕುಲೇಕ್ಷಣಃ ॥ ೪೬

ಅಬ್ರವೀಚ್ಚ ಪರಿಷ್ವಜ್ಯ ಸೌಮಿತ್ರಿಂ ರಾಘವಸ್ತದಾ ।
ದಿಷ್ಟ್ಯಾ ತ್ವಾಂ ವೀರ ಪಶ್ಯಾಮಿ ಮರಣಾತ್ ಪುನರಾಗತಮ್ ॥ ೪೭

ನ ಹಿ ಮೇ ಜೀವಿತೇನಾರ್ಥಃ ಸೀತಯಾ ಚಾಪಿ ಲಕ್ಷ್ಮಣ ।
ಕೋ ಹಿ ಮೇ ವಿಜಯೇನಾರ್ಥಸ್ತ್ವಯಿ ಪಂಚತ್ವಮಾಗತೇ ॥ ೪೮

---

ಅನಂತರ ಸುಷೇಣನು ಆ ಮೂಲಿಕೆಯನ್ನು ಅರೆದು, ಅದರ ರಸವನ್ನು ಲಕ್ಷ್ಮಣನ ಮೂಗಿನಲ್ಲಿ ಹಿಂಡಿದನು. ಆಗ ಶಲ್ಯಬಾಧೆಯಿಂದ ನರಳುತ್ತಿದ್ದ ಲಕ್ಷ್ಮಣನು ವಿಶಲ್ಯನಾದನು. ಯಾತನೆಯೆಲ್ಲವೂ ನೀಗಿತು. ಶೀಘ್ರದಲ್ಲಿ ಅವನು ಮೇಲೆದ್ದು ಕುಳಿತನು (೪೩-೪೪). ಲಕ್ಷ್ಮಣನು ನೆಲದಿಂದ ಮೇಲೆದ್ದುದನ್ನು ನೋಡಿ, ವಾನರರು ಆನಂದದಿಂದ 'ಭಲಾ! ಸುಷೇಣ, ಭಲಾ!' ಎಂದು ಸುಷೇಣನನ್ನು ಕೊಂಡಾಡಿದರು. ಶ್ರೀರಾಮನು 'ಬಾ, ವತ್ಸ, ಬಾ' ಎನ್ನುತ್ತ ಪ್ರೀತಿಯಿಂದ ಲಕ್ಷ್ಮಣನನ್ನು ಬಿಗಿದಪ್ಪಿಕೊಂಡನು. ಅವನ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದವು (೪೫-೪೬). ಶ್ರೀರಾಮನು ಸೌಮಿತ್ರಿಯನ್ನು ಅಪ್ಪಿಕೊಂಡು "ತಮ್ಮ, ನನ್ನ ಭಾಗ್ಯದಿಂದ ನಿನ್ನನ್ನು ನೋಡುತ್ತಿದ್ದೇನೆ. ಸಾವಿನ ದವಡೆಯಿಂದ ಉಳಿದುಬಂದಿರುವೆ. ಲಕ್ಷ್ಮಣ, ನೀನು ಮೃತನಾಗಿದ್ದರೆ ನಾನು ಬದುಕಿ ಫಲವೇನು? ಸೀತೆಯಿಂದ ನನಗೇನು? ನಾನು ಜಯಗಳಿಸಿದರೂ ಯಾವ

ಇತ್ಯೇವಂ ವದತಸ್ತಸ್ಯ ರಾಘವಸ್ಯ ಮಹಾತ್ಮನಃ ।
ಖಿನ್ನಃ ಶಿಥಿಲಯಾ ವಾಚಾ ಲಕ್ಷ್ಮಣೋ ವಾಕ್ಯಮಬ್ರವೀತ್ ॥ ೪೯

ತಾಂ ಪ್ರತಿಜ್ಞಾಂ ಪ್ರತಿಜ್ಞಾಯ ಪುರಾ ಸತ್ಯಪರಾಕ್ರಮ ।
ಲಘುಃ ಕಶ್ಚಿದಿವಾಸತ್ತ್ವೋ ನೈವಂ ವಕ್ತುಮಿಹಾರ್ಹಸಿ ॥ ೫೦

ನ ಹಿ ಪ್ರತಿಜ್ಞಾಂ ಕುರ್ವಂತಿ ವಿತಥಾಂ ಸಾಧವೋಽನಘ ।
ಲಕ್ಷಣಂ ಹಿ ಮಹತ್ತ್ವಸ್ಯ ಪ್ರತಿಜ್ಞಾಪರಿಪಾಲನಮ್ ॥ ೫೧

ನೈರಾಶ್ಯಮುಪಗಂತುಂ ತೇ ತದಲಂ ಮತ್ಕೃತೇಽನಘ ।
ವಧೇನ ರಾವಣಸ್ಯಾದ್ಯ ಪ್ರತಿಜ್ಞಾಮನುಪಾಲಯ ॥ ೫೨

ನ ಜೀವನ್ ಯಾಸ್ಯತೇ ಶತ್ರುಸ್ತವ ಬಾಣಪಥಂ ಗತಃ ।
ನರ್ದತಸ್ತೀಕ್ಷ್ಣದಂಷ್ಟ್ರಸ್ಯ ಸಿಂಹಸ್ಯೇವ ಮಹಾಗಜಃ ॥ ೫೩

---

ಪ್ರಯೋಜನ?" ಎಂದು ಉದ್ಗರಿಸಿದನು (೪೭–೪೮). ಮಹಾತ್ಮನಾದ ರಾಘವನು ಹೀಗೆ ನುಡಿಯುತ್ತಿರಲಾಗಿ, ಅವನ ವ್ಯಥೆಯನ್ನು ಕಂಡು ಲಕ್ಷ್ಮಣನು ಖಿನ್ನನಾದನು. ಅವನು ತೊದಲುತ್ತ "ಅಣ್ಣ, ನಿನ್ನ ಪ್ರತಿಜ್ಞೆ* ಯನ್ನು ಸ್ಮರಿಸಿಕೊ. ಸತ್ಯಪರಾಕ್ರಮನಲ್ಲವೆ ನೀನು? ನಿಸ್ಸತ್ತ್ವನಾದ ಸಾಮಾನ್ಯಮನುಷ್ಯನಂತೆ ಈ ಮಾತನ್ನಾಡುವುದು ಯುಕ್ತವಲ್ಲ (೪೯–೫೦). ಸತ್ಪುರುಷರು ತಮ್ಮ ಪ್ರತಿಜ್ಞೆಯನ್ನು ಎಂದಿಗೂ ಸುಳ್ಳುಮಾಡುವುದಿಲ್ಲ. ಕೊಟ್ಟ ಮಾತನ್ನು ಪಾಲಿಸುವುದೇ ಮಹಾತ್ಮರ ಲಕ್ಷಣ. ನನ್ನೊಬ್ಬನಿಗೋಸ್ಕರ ನಿರಾಸೆಯನ್ನು ತಳೆಯುವುದು ಸರಿಯಲ್ಲ. ಈಗ ರಾವಣನನ್ನು ವಧಿಸಿ ನಿನ್ನ ಪ್ರತಿಜ್ಞೆಯನ್ನು ನೆರವೇರಿಸು (೫೧–೫೨). ನಿನ್ನ ಶರಮಾರ್ಗಕ್ಕೆ ಸಿಲುಕಿದಮೇಲೆ, ವೈರಿಯು ಎಂದಿಗೂ ಬದುಕಿ ಹೋಗಲಾರ. ಕೋರೆ ದಾಡೆಯ ಕಂಠೀರವನು ಗರ್ಜಿಸುತ್ತ ಆಕ್ರಮಿಸಿದಾಗ, ಆನೆಯು ಜೀವಸಹಿತ

* ರಾವಣನನ್ನು ಕೊಂದು ವಿಭೀಷಣನಿಗೆ ಲಂಕಾರಾಜ್ಯವನ್ನು ಕೊಡಿಸುತ್ತೇನೆ ಎಂಬುದು ಶ್ರೀರಾಮನ ಪ್ರತಿಜ್ಞೆ.

ಅಹಂ ತು ವಧಮಿಚ್ಛಾಮಿ ಶೀಘ್ರಮಸ್ಯ ದುರಾತ್ಮನಃ ।
ಯಾವದಸ್ತಂ ನ ಯಾತ್ಯೇಷ ಕೃತಕರ್ಮಾ ದಿವಾಕರಃ ॥ ೫೪

ಯದಿ ವಧಮಿಚ್ಛಸಿ ರಾವಣಸ್ಯ ಸಂಖ್ಯೇ
ಯದಿ ಚ ಕೃತಾಂ ತ್ವಮಿಹೇಚ್ಛಸಿ ಪ್ರತಿಜ್ಞಾಮ್ ।
ಯದಿ ತವ ರಾಜವರಾತ್ಮಜಾಭಿಲಾಷಃ
ಕುರು ಚ ವಚೋ ಮಮ ಶೀಘ್ರಮದ್ಯ ವೀರ ॥ ೫೫

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವ್ಯುತ್ತರಶತತಮಃ ಸರ್ಗಃ



ಉಳಿದೀತೆ? ಅಣ್ಣ, ಅದೋ, ಆ ಸೂರ್ಯನು ತನ್ನ ಸಂಚಾರಕಾರ್ಯವನ್ನು ಮುಗಿಸಿ ಅಸ್ತಂಗತನಾಗುವುದರೊಳಗೆ, ಆದಷ್ಟು ಬೇಗನೆ ದುರಾತ್ಮನಾದ ರಾವಣನ ವಧೆಯಾಗಬೇಕೆಂದು ನನ್ನ ಇಷ್ಟ! (೫೩-೫೪). ಯುದ್ಧದಲ್ಲಿ ರಾವಣನನ್ನು ವಧಿಸಬೇಕೆಂದು ನಿನಗೆ ಇಚ್ಛೆಯಿದ್ದರೆ, ವಿಭೀಷಣನಿಗೆ ಮಾಡಿಕೊಟ್ಟ ಪ್ರತಿಜ್ಞೆಯನ್ನು ಸಲ್ಲಿಸಬೇಕೆಂದು ಇಚ್ಛೆಯಿದ್ದರೆ, ಜನಕರಾಜಸುತೆಯಲ್ಲಿ ಅಭಿಲಾಷೆಯಿದ್ದರೆ, ವೀರಾಗ್ರೇಸರ, ನನ್ನ ಮಾತಿನಂತೆ ಉತ್ಸಾಹದಿಂದ ಕಾರ್ಯಸನ್ನದ್ಧನಾಗು" ಎಂದು ಹೇಳಿದನು (೫೫).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರೆರಡನೆಯ ಸರ್ಗ



## ತ್ರ್ಯುತ್ತರಶತತಮಃ ಸರ್ಗಃ

### ಐಂದ್ರರಥಕೇತುಪಾತನಮ್

**ಲಕ್ಷ್ಮಣೇನ ತು ತದ್ವಾಕ್ಯಮುಕ್ತಂ ಶ್ರುತ್ವಾ ಸ ರಾಘವಃ ।**
**ಸಂದಧೇ ಪರವೀರಘ್ನೋ ಧನುರಾದಾಯ ವೀರ್ಯವಾನ್ ॥ ೧**

**ರಾವಣಾಯ ಶರಾನ್ ಘೋರಾನ್ ವಿಸಸರ್ಜ ಚಮೂಮುಖೇ ।**
**ಅಥಾನ್ಯಂ ರಥಮಾರುಹ್ಯ ರಾವಣೋ ರಾಕ್ಷಸಾಧಿಪಃ ॥ ೨**

**ಅಭ್ಯದ್ರವತ ಕಾಕುತ್ಸ್ಥಂ ಸ್ವರ್ಭಾನುರಿವ ಭಾಸ್ಕರಮ್ ।**
**ದಶಗ್ರೀವೋ ರಥಸ್ಥಸ್ತು ರಾಮಂ ವಜ್ರೋಪಮೈಃ ಶರೈಃ ॥ ೩**

**ಆಜಘಾನ ಮಹಾಘೋರೈರ್ಧಾರಾಭಿರಿವ ತೋಯದಃ ।**
**ದೀಪ್ತಪಾವಕಸಂಕಾಶೈಃ ಶರೈಃ ಕಾಂಚನಭೂಷಣೈಃ ॥ ೪**

### ಸರ್ಗ ೧೦೩

ಬೇರೊಂದು ರಥವನ್ನೇರಿ ಬಂದ ರಾವಣನೊಡನೆ ಶ್ರೀರಾಮನ ಯುದ್ಧ ಇಂದ್ರನು ತನ್ನ ರಥವನ್ನು ಮಾತಲಿಯೊಡನೆ ಶ್ರೀರಾಮನಿಗಾಗಿ ಕಳಿಸುವುದು. ರಾವಣನು ಇಂದ್ರರಥದ ಧ್ವಜವನ್ನು ಕತ್ತರಿಸುವುದು.

ಲಕ್ಷ್ಮಣನು ಈ ರೀತಿಯಲ್ಲಿ ಹೇಳಿದೊಡನ್ನೆ, ವೀರಾಗ್ರೇಸರನಾದ ರಾಘವನು ತನ್ನ ಕೋದಂಡಕ್ಕೆ ಹೆದೆಯೇರಿಸಿದನು. ಅಷ್ಟರಲ್ಲಿ ರಾಕ್ಷಸೇಂದ್ರನಾದ ರಾವಣನು ಬೇರೊಂದು ರಥವನ್ನೇರಿ, ಸೂರ್ಯನನ್ನು ರಾಹು ಎದುರಿಸುವಂತೆ ಕಾಕುತ್ಸ್ಥನನ್ನು ಎದುರಿಸಿ ಬಂದನು. ರಾಘವನು ಘೋರ ಶರಗಳನ್ನು ಪ್ರಯೋಗಿಸತೊಡಗಿದನು (೧–೨). ದಶಕಂಠನು ರಥದಲ್ಲಿ ಮಂಡಿಸಿ, ಮೇಘವು ಧಾರಾಕಾರವಾಗಿ ಮಳೆಗರೆಯುವಂತೆ, ಸಿಡಿಲಿನಂತಹ ಭೀಷಣವಾದ ಕೂರ್ಗಣೆಗಳಿಂದ ಬಿಗಿಯಲಾರಂಭಿಸಿದನು. ಶ್ರೀರಾಮನೂ ಸಹ ಬೆಂಕಿಯಂತೆ ಬೆಳಗುವ ಕಾಂಚನಭೂಷಿತ ಶರಜಾಲಗಳಿಂದ, ಎಚ್ಚರಿಕೆಯಿಂದ ಯುದ್ಧೋದ್ಯುಕ್ತನಾದ ದಶಗ್ರೀವನನ್ನು ಕೆತ್ತಿದನು (೩–೪).

ನಿರ್ಬಿಭೇದ ರಣೇ ರಾಮೋ ದಶಗ್ರೀವಂ ಸಮಾಹಿತಮ್ ।
ಭೂಮೌ ಸ್ಥಿತಸ್ಯ ರಾಮಸ್ಯ ರಥಸ್ಥಸ್ಯ ಚ ರಕ್ಷಸಃ ॥ ೫

ನ ಸಮಂ ಯುದ್ಧಮಿತ್ಯಾಹುರ್ದೇವಗಂಧರ್ವದಾನವಾಃ ।
ತತೋ ದೇವವರಃ ಶ್ರೀಮಾನ್ ಶ್ರುತ್ವಾ ತೇಷಾಂ ವಚೋಽಮೃತಮ್

ಆಹೂಯ ಮಾತಲಿಂ ಶಕ್ರೋ ವಚನಂ ಚೇದಮಬ್ರವೀತ್ ।
ರಥೇನ ಮಮ ಭೂಮಿಷ್ಠಂ ಶೀಘ್ರಂ ಯಾಹಿ ರಘೂತ್ತಮಮ್ ॥ ೭

ಮಾತಲೇ ಭೂತಲಂ ಯಾತಃ ಕುರು ದೇವಹಿತಂ ಮಹತ್ ।
ಇತ್ಯುಕ್ತೋ ದೇವರಾಜೇನ ಮಾತಲಿರ್ದೇವಸಾರಥಿಃ ॥ ೮

ಪ್ರಣಮ್ಯ ಶಿರಸಾ ದೇವಂ ತತೋ ವಚನಮಬ್ರವೀತ್ ।
ಶೀಘ್ರಂ ಯಾಸ್ಯಾಮಿ ದೇವೇಂದ್ರ ಸಾರಥ್ಯಂ ಚ ಕರೋಮ್ಯಹಮ್

ತತೋ ಹಯೈಶ್ಚ ಸಂಯೋಜ್ಯ ಹರಿತೈಃ ಸ್ಯಂದನೋತ್ತಮಮ್ ।
ತತಃ ಕಾಂಚನಚಿತ್ರಾಂಗಃ ಕಿಂಕಿಣೀಶತಭೂಷಿತಃ ॥ ೧೦

---

"ಆಹಾ! ನೆಲದಲ್ಲಿ ನಿಂತಿರುವ ಶ್ರೀರಾಮನಿಗೂ ರಥದಲ್ಲಿ ಕುಳಿತಿರುವ ರಾಕ್ಷಸನಿಗೂ ನಡೆಯುವ ಈ ಯುದ್ಧವು ಅಕ್ರಮವಾದುದು; ಇದು ಸರಿಯಲ್ಲ!" ಎಂದು ದೇವ ದಾನವ ಗಂಧರ್ವರು ಮಾತನಾಡಿಕೊಳ್ಳುತ್ತಿದ್ದರು (೫–೬). ದೇವೇಂದ್ರನು ಅವರಾಡಿಕೊಳ್ಳುವ ಮಾತನ್ನು ಕೇಳಿ, ಸಂತೋಷದಿಂದ ತನ್ನ ಸಾರಥಿಯಾದ ಮಾತಲಿಯನ್ನು ಕರೆದು "ಮಾತಲಿ, ಭೂಮಿಯಲ್ಲಿ ನಿಂತಿರುವ ರಘುಕುಲೋತ್ತಮನ ಬಳಿಗೆ ನನ್ನ ರಥವನ್ನು ತೆಗೆದುಕೊಂಡು ತ್ವರೆಯಿಂದ ಹೋಗು! ಭೂಮಿಗೆ ಹೋಗಿ ಮಹತ್ತರವಾದ ದೇವಕಾರ್ಯವನ್ನು ಸಾಧಿಸಲು ನೆರವಾಗು" ಎಂದು ತಿಳಿಸಿದನು (೭–೮). ದೇವರಾಜನ ಆಜ್ಞೆಯನ್ನು ಕೇಳಿ ಮಾತಲಿಯು ಆತನಿಗೆ ನಮಸ್ಕರಿಸಿ "ದೇವೇಂದ್ರ, ನಿನ್ನ ಆಜ್ಞೆಯಂತೆ ಕೂಡಲೆ ಹೊರಡುವೆನು. ಶ್ರೀರಾಮನ ಸಾರಥ್ಯವನ್ನು ನಾನೇ ನಡೆಸುವೆನು" ಎಂದು ಹೇಳಿ ಹಸಿರು ಬಣ್ಣದ ದಿವ್ಯಾಶ್ವಗಳನ್ನು ರಥಕ್ಕೆ ಹೂಡಿದನು. ಆ ದೇವರಥದ ಸಕಲ ಭಾಗಗಳೂ ಸುವರ್ಣಭೂಷಿತವಾಗಿದ್ದವು. ನೂರಾರು ಕಿರುಗೆಜ್ಜೆಗಳಿಂದ

ತರುಣಾದಿತ್ಯಸಂಕಾಶೋ ವೈಡೂರ್ಯಮಯಕೂಬರಃ ।
ಸದಶ್ವೈಃ ಕಾಂಚನಾಪೀಡೈರ್ಯುಕ್ತಃ ಶ್ವೇತಪ್ರಕೀರ್ಣಕೈಃ ॥ ೧೦
ಹರಿಭಿಃ ಸೂರ್ಯಸಂಕಾಶೈರ್ಹೇಮಜಾಲವಿಭೂಷಿತೈಃ ।
ರುಕ್ಮವೇಣುಧ್ವಜಃ ಶ್ರೀಮಾನ್ ದೇವರಾಜರಥೋ ವರಃ ॥ ೧೨
ದೇವರಾಜೇನ ಸಂದಿಷ್ಟೋ ರಥಮಾರುಹ್ಯ ಮಾತಲಿಃ ।
ಅಭ್ಯವರ್ತತ ಕಾಕುತ್ಸ್ಥಮವತೀರ್ಯ ತ್ರಿವಿಷ್ಟಪಾತ್ ॥ ೧೩
ಅಬ್ರವೀಚ್ಚ ತದಾ ರಾಮಂ ಸಪ್ರತೋದೋ ರಥೇ ಸ್ಥಿತಃ ।
ಪ್ರಾಂಜಲಿರ್ಮಾತಲಿರ್ವಾಕ್ಯಂ ಸಹಸ್ರಾಕ್ಷಸ್ಯ ಸಾರಥಿಃ ॥ ೧೪
ಸಹಸ್ರಾಕ್ಷೇಣ ಕಾಕುತ್ಸ್ಥ ರಥೋಽಯಂ ವಿಜಯಾಯ ತೇ ।
ದತ್ತಸ್ತವ ಮಹಾಸತ್ತ್ವ ಶ್ರೀಮನ್ ಶತ್ರುನಿಬರ್ಹಣ ॥ ೧೫
ಇದಮೈಂದ್ರಂ ಮಹಚ್ಚಾಪಂ ಕವಚಂ ಚಾಗ್ನಿಸಂನಿಭಮ್ ।
ಶರಾಶ್ಚಾದಿತ್ಯಸಂಕಾಶಾಃ ಶಕ್ತಿಶ್ಚ ವಿಮಲಾ ಶಿತಾ ॥ ೧೬

---

ರಥವು ಅಲಂಕೃತವಾಗಿತ್ತು (೯-೧೦). ಬಾಲಸೂರ್ಯನಂತೆ ಬೆಳಗುತ್ತಿದ್ದ ಆ ರಥದ ಕೂಬರವು * ವೈಡೂರ್ಯಖಚಿತವಾಗಿತ್ತು. ಚಿನ್ನದ ಶಿರೋಭೂಷಣಗಳಿಂದಲೂ ಬಿಳಿಯ ಚಾಮರಗಳಿಂದಲೂ ಭೂಷಿಸಲ್ಪಟ್ಟ ದಿವ್ಯಾಶ್ವಗಳನ್ನು ಅದಕ್ಕೆ ಹೂಡಲಾಗಿತ್ತು. ಸುವರ್ಣಾಭರಣಗಳಿಂದ ಅಲಂಕರಿಸಲ್ಪಟ್ಟ ಅಶ್ವಗಳು ಸೂರ್ಯನಂತೆ ಬೆಳಗುತ್ತಿದ್ದವು. ದೇವೇಂದ್ರನ ಉಜ್ವಲವಾದ ಆ ರಥವು ಕಾಂಚನಮಯವಾದ ವೇಣುಧ್ವಜದಿಂದ ಶೋಭಿಸುತ್ತಿತ್ತು (೧೧-೧೨). ದೇವರಾಜನ ಆದೇಶದಂತೆ ಮಾತಲಿಯು ಆ ರಥವನ್ನೇರಿ ಸ್ವರ್ಗಲೋಕದಿಂದ ಕಾಕುತ್ಸ್ಥನ ಬಳಿಗೆ ಇಳಿದುಬಂದನು. ಚಾಟಿಯನ್ನು ಹಿಡಿದಿದ್ದ ಆ ಇಂದ್ರಸಾರಥಿಯು ರಥದಲ್ಲಿ ನಿಂತು ಶ್ರೀರಾಮನನ್ನು ನೋಡಿ ಕೈಮುಗಿದು, "ಕಾಕುತ್ಸ್ಥ, ನಿನಗೆ ವಿಜಯವಾಗಲೆಂದು ದೇವೇಂದ್ರನು ಈ ರಥವನ್ನು ಕಳಿಸಿದ್ದಾನೆ. ಮಹಾಸತ್ತ್ವಶಾಲಿಯೂ ತೇಜಸ್ವಿಯೂ ಶತ್ರುವಿಧ್ವಂಸಕನೂ ಆದ ನಿನ್ನ ಸೇವೆಗೆ ಇದನ್ನು ಅರ್ಪಿಸಿದ್ದಾನೆ (೧೩-೧೫). ಅಲ್ಲದೆ ತನ್ನ ಮಹಾಚಾಪವನ್ನೂ, ಅಗ್ನಿಗೆಣೆಯಾದ ಕವಚವನ್ನೂ, ಸೂರ್ಯ

---

* ಕೂಬರ = ಮೂಕಿಮರ (The pole of a car to which the yoke is fixed).

ಆರುಹ್ಯೇಮಂ ರಥಂ ವೀರ ರಾಕ್ಷಸಂ ಜಹಿ ರಾವಣಮ್ ।
ಮಯಾ ಸಾರಥಿನಾ ರಾಜನ್ ಮಹೇಂದ್ರ ಇವ ದಾನವಾನ್ ॥ ೧೭

ಇತ್ಯುಕ್ತಃ ಸಂಪರಿಕ್ರಮ್ಯ ರಥಂ ಸಮಭಿವಾದ್ಯ ಚ ।
ಆರುರೋಹ ತದಾ ರಾಮೋ ಲೋಕಾನ್ ಲಕ್ಷ್ಮ್ಯಾ ವಿರಾಜಯನ್॥

ತದ್ಬಭೂವಾದ್ಭುತಂ ಯುದ್ಧಂ ತುಮುಲಂ ರೋಮಹರ್ಷಣಮ್ ।
ರಾಮಸ್ಯ ಚ ಮಹಾಬಾಹೋ ರಾವಣಸ್ಯ ಚ ರಕ್ಷಸಃ ॥ ೧೯

ಸ ಗಾಂಧರ್ವೇಣ ಗಾಂಧರ್ವಂ ದೈವಂ ದೈವೇನ ರಾಘವಃ ।
ಅಸ್ತ್ರಂ ರಾಕ್ಷಸರಾಜಸ್ಯ ಜಘಾನ ಪರಮಾಸ್ತ್ರವಿತ್ ॥ ೨೦

ಅಸ್ತ್ರಂ ತು ಪರಮಂ ಘೋರಂ ರಾಕ್ಷಸಂ ರಾಕ್ಷಸಾಧಿಪಃ ।
ಸಸರ್ಜ ಪರಮಕ್ರುದ್ಧಃ ಪುನರೇವ ನಿಶಾಚರಃ ॥ ೨೧

ತೇ ರಾವಣಧನುರ್ಮುಕ್ತಾಃ ಶರಾಃ ಕಾಂಚನಭೂಷಣಾಃ ।
ಅಭ್ಯವರ್ತಂತ ಕಾಕುತ್ಸ್ಥಂ ಸರ್ಪಾ ಭೂತ್ವಾ ಮಹಾವಿಷಾಃ ॥ ೨೨

---

ನಂತೆ ಜ್ವಲಿಸುವ ಶರಗಳನ್ನೂ, ಸ್ವಚ್ಛವೂ ತೀಕ್ಷ್ಣವೂ ಆದ ಶಕ್ತ್ಯಾಯುಧವನ್ನೂ ನಿನಗಾಗಿ ಕಳಿಸಿದ್ದಾನೆ. ವೀರಾಗ್ರಣಿ, ಈ ರಥವನ್ನೇರಿ ರಾವಣನನ್ನು ಸಂಹರಿಸು. ನಾನು ಸಾರಥಿಯಾಗಿರುವೆನು. ದೇವೇಂದ್ರನು ದಾನವರನ್ನು ವಧಿಸಿದಂತೆ, ರಾಜಪುತ್ರ, ಈ ರಾಕ್ಷಸನನ್ನು ವಧಿಸು" ಎಂದು ನಿವೇದಿಸಿದನು (೧೬-೧೭). ಆಗ ಶ್ರೀರಾಮನು ಆ ದಿವ್ಯರಥಕ್ಕೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ, ತನ್ನ ವೀರಲಕ್ಷ್ಮಿಯಿಂದ ಲೋಕವನ್ನು ಬೆಳಗುತ್ತ ರಥವನ್ನೇರಿದನು. ಮುಂದಿನ ಯುದ್ಧವು ಅದ್ಭುತವಾಗಿ ನಡೆಯಿತು. ಕಡುಗಲಿಗಳಾದ ಶ್ರೀರಾಮರಾವಣರ ಸಂಗ್ರಾಮವು ರೋಮಾಂಚಕರವಾಯಿತು (೧೮-೧೯). ಅಸ್ತ್ರಕೋವಿದನಾದ ರಾಘವನು ರಾವಣನ ಗಂಧರ್ವಾಸ್ತ್ರವನ್ನು ಗಂಧರ್ವಾಸ್ತ್ರದಿಂದಲೂ ದೈವಾಸ್ತ್ರವನ್ನು ದೈವಾಸ್ತ್ರದಿಂದಲೂ ಕಡಿದನು. ರೋಷಾವಿಷ್ಟನಾದ ರಾಕ್ಷಸಾಧಿಪನು ಅತಿಘೋರವಾದ ರಾಕ್ಷಸಾಸ್ತ್ರವನ್ನು ಪ್ರಯೋಗಿಸಿದನು (೨೦-೨೧). ಆಗ ರಾವಣನ ಧನುಸ್ಸಿನಿಂದ ಜಿಗಿದ ಕಾಂಚನಭೂಷಿತ ಶರಗಳು ಭೀಷಣವಿಷಪೂರಿತವಾದ ಮಹಾಸರ್ಪಗಳಾಗಿ

ತೇ ದೀಪ್ತವದನಾ ದೀಪ್ತಂ ವಮಂತೋ ಜ್ವಲನಂ ಮುಖೈಃ ।
ರಾಮಮೇವಾಭ್ಯವರ್ತಂತ ವ್ಯಾದಿತಾಸ್ಯಾ ಭಯಾನಕಾಃ ॥ ೨೩

ತೈರ್ವಾಸುಕಿಸಮಸ್ಪರ್ಶೈರ್ದೀಪ್ತಭೋಗೈರ್ಮಹಾವಿಷೈಃ ।
ದಿಶಶ್ಚ ಸಂತತಾಃ ಸರ್ವಾಃ ಪ್ರದಿಶಶ್ಚ ಸಮಾವೃತಾಃ ॥ ೨೪

ತಾನ್ ದೃಷ್ಟ್ವಾ ಪನ್ನಗಾನ್ ರಾಮಃ ಸಮಾಪತತ ಆಹವೇ ।
ಅಸ್ತ್ರಂ ಗಾರುತ್ಮತಂ ಘೋರಂ ಪ್ರಾದುಶ್ಚಕ್ರೇ ಭಯಾವಹಮ್ ॥ ೨೫

ತೇ ರಾಘವಶರಾ ಮುಕ್ತಾ ರುಕ್ಮಪುಂಖಾಃ ಶಿಖಿಪ್ರಭಾಃ ।
ಸುಪರ್ಣಾಃ ಕಾಂಚನಾ ಭೂತ್ವಾ ವಿಚೇರುಃ ಸರ್ಪಶತ್ರವಃ ॥ ೨೬

ತೇ ತಾನ್ಸರ್ವಾನ್ ಶರಾನ್ ಜಘ್ನುಃ ಸರ್ಪರೂಪಾನ್ಮಹಾಜವಾನ್ ।
ಸುಪರ್ಣರೂಪಾ ರಾಮಸ್ಯ ವಿಶಿಖಾಃ ಕಾಮರೂಪಿಣಃ ॥ ೨೭

ಅಸ್ತ್ರೇ ಪ್ರತಿಹತೇ ಕ್ರುದ್ಧೋ ರಾವಣೋ ರಾಕ್ಷಸಾಧಿಪಃ ।
ಅಭ್ಯವರ್ಷತ್ತದಾ ರಾಮಂ ಘೋರಾಭಿಃ ಶರವೃಷ್ಟಿಭಿಃ ॥ ೨೮

---

ಕಾಕುತ್ಸ್ಥನಮೇಲೆ ಎರಗಿದವು. ಉರಿಮೊಗದ ಬಾಯ್ದೆರೆದ ಭಯಾನಕ ಭುಜಂಗಮಗಳಾಗಿ, ಬಾಯಿಂದ ಬೆಂಕಿಯನ್ನುಗುಳುತ್ತ ಭುಸ್ಸೆಂದು ಶ್ರೀರಾಮನ ಕಡೆಗೆ ನುಗ್ಗಿದವು (೨೨-೨೩). ಸರ್ಪರಾಜನಾದ ವಾಸುಕಿಯಂತೆ ಕಠೋರವಾದವೂ ಕಿಡಿಯುಗುಳುವ ಹೆಡೆಯುಳ್ಳವೂ ಘೋರ ವಿಷಧಾರಿಗಳೂ ಆದ ಆ ಸರ್ಪಗಳಿಂದ ದಿಗ್ದಿಗಂತರಗಳು ವ್ಯಾಪಿಸಿಹೋದವು. ರಣಭೂಮಿಯಲ್ಲಿ ಎರಗಿಬರುವ ಆ ಸರ್ಪಗಳನ್ನು ನೋಡಿ, ಶ್ರೀರಾಮನು ಭಯಂಕರವಾದ ಗರುಡಾಸ್ತ್ರವನ್ನು ಹೂಡಿದನು (೨೪-೨೫). ಒಡನೆಯೇ ರಾಘವನ ಕೋದಂಡದಿಂದ ಹಾರಿದ ಶರಗಳು ವಹ್ನಿಯಂತೆ ವಿರಾಜಿಸುವ ಚಿನ್ನದ ಗರಿಗಳುಳ್ಳ ಕಾಂಚನಮಯ ಗರುಡಪಕ್ಷಿಗಳಾಗಿ, ಆ ಸರ್ಪಗಳನ್ನು ಮರ್ದಿಸುತ್ತ ಹಾರಾಡಿದವು (೨೬). ಶ್ರೀರಾಮನ ಕಾಮರೂಪಿಗಳಾದ ಅಸ್ತ್ರಗಳು ಗರುಡರೂಪವನ್ನು ಧರಿಸಿ, ಮಹಾವೇಗದಿಂದ ಹಾರಾಡುತ್ತಿದ್ದ ರಾವಣನ ಸಮಸ್ತ ಸರ್ಪಾಸ್ತ್ರಗಳನ್ನೂ ನಾಶಪಡಿಸಿದವು. ತನ್ನ ರಾಕ್ಷಸಾಸ್ತ್ರವು ನಾಶವಾದ್ದನ್ನು ನೋಡಿ ರಾಕ್ಷಸೇಶ್ವರನು ಸಂಕ್ರುದ್ಧನಾದನು. ಅಷ್ಟು ಸುಲಭವಾಗಿ ತನ್ನ ಅಸ್ತ್ರಗಳನ್ನು ಶ್ರೀರಾಮನು ನಾಶಪಡಿಸಿದನೆಂದು ರೇಗಿದ

ತತಃ ಶರಸಹಸ್ರೇಣ ರಾಮಮಕ್ಲಿಷ್ಟಕಾರಿಣಮ್ ।
ಅರ್ದಯಿತ್ವಾ ಶರೌಘೇಣ ಮಾತಲಿಂ ಪ್ರತ್ಯವಿಧ್ಯತ ॥ ೨೯

ಚಿಚ್ಛೇದ ಕೇತುಮುದ್ದಿಶ್ಯ ಶರೇಣೈಕೇನ ರಾವಣಃ ।
ಪಾತಯಿತ್ವಾ ರಥೋಪಸ್ಥೇ ರಥಾತ್ ಕೇತುಂ ಚ ಕಾಂಚನಮ್ ॥

ಐಂದ್ರಾನಪಿ ಜಘಾನಾಶ್ವಾನ್ ಶರಜಾಲೇನ ರಾವಣಃ ।
ತದ್ದೃಷ್ಟ್ವಾ ಸುಮಹತ್ ಕರ್ಮ ರಾವಣಸ್ಯ ದುರಾತ್ಮನಃ ॥ ೩೦

ವಿಷೇದುರ್ದೇವಗಂಧರ್ವಾ ದಾನವಾಶ್ಚಾರಣೈಃ ಸಹ ।
ರಾಮಮಾರ್ತಂ ತದಾ ದೃಷ್ಟ್ವಾ ಸಿದ್ಧಾಶ್ಚ ಪರಮರ್ಷಯಃ ॥ ೩೨

ವ್ಯಥಿತಾ ವಾನರೇಂದ್ರಾಶ್ಚ ಬಭೂವುಃ ಸವಿಭೀಷಣಾಃ ।
ರಾಮಚಂದ್ರಮಸಂ ದೃಷ್ಟ್ವಾ ಗ್ರಸ್ತಂ ರಾವಣರಾಹುಣಾ ॥ ೩೩

ಪ್ರಾಜಾಪತ್ಯಂ ಚ ನಕ್ಷತ್ರಂ ರೋಹಿಣೀಂ ಶಶಿನಃ ಪ್ರಿಯಾಮ್ ।
ಸಮಾಕ್ರಮ್ಯ ಬುಧಸ್ತಸ್ಥೌ ಪ್ರಜಾನಾಮಶುಭಾವಹಃ ॥ ೩೪

---

ರಾವಣನು, ಘೋರ ಶರವೃಷ್ಟಿಗಳನ್ನು ಸುರಿಸಲಾರಂಭಿಸಿದನು (೨೭-೨೮). ಅವನು ಒಂದು ಸಾವಿರ ಕೂರಂಬುಗಳಿಂದ ಶ್ರೀರಾಮನನ್ನು ನೋಯಿಸಿ, ಶರರಾಶಿಯಿಂದ ಮಾತಲಿಯನ್ನು ಪೀಡಿಸಿ, ಒಂದು ಬಾಣದಿಂದ ಇಂದ್ರರಥದ ಕಾಂಚನಧ್ವಜವನ್ನು ಕತ್ತರಿಸಿ ರಥದಲ್ಲಿ ಬೀಳಿಸಿ, ಅಸ್ತ್ರಜಾಲಗಳಿಂದ ಇಂದ್ರನ ದಿವ್ಯಾಶ್ವಗಳನ್ನು ಹೊಡೆದು ಕಂಗೆಡಿಸಿದನು (೨೯-೩೦). ದುರಾತ್ಮನಾದ ರಾವಣನು ಎಸಗಿದ ಆಶ್ಚರ್ಯಕರವಾದ ಆ ಸಾಹಸವನ್ನು ಕಂಡು, ದೇವಗಂಧರ್ವರೂ ದಾನವಚಾರಣರೂ ವಿಷಣ್ಣರಾದರು. ಶ್ರೀರಾಮನು ಶರಪೀಡಿತನಾಗಿ ನೊಂದುದನ್ನು ನೋಡಿ, ಸಿದ್ಧರೂ ಮಹರ್ಷಿಗಳೂ ಖಿನ್ನರಾದರು. ವಾನರಯೂಥಪರೂ ವಿಭೀಷಣನೂ ವ್ಯಥೆಪಟ್ಟರು (೩೧-೩೨). ಶ್ರೀರಾಮನೆಂಬ ಚಂದ್ರನನ್ನು ರಾವಣನೆಂಬ ರಾಹು ಆಕ್ರಮಿಸಲಾಗಿ, ಪ್ರಜಾಪತಿದೇವತಾಕವಾದ ರೋಹಿಣೀನಕ್ಷತ್ರವನ್ನು ಬುಧನು ಆಕ್ರಮಿಸಿದನು. ರೋಹಣೀನಕ್ಷತ್ರದಲ್ಲಿ ಬುಧನಿದ್ದರೆ ಪ್ರಜೆ

ಸಧೂಮಪರಿವೃತ್ತೋರ್ಮಿಃ ಪ್ರಜ್ವಲನ್ನಿವ ಸಾಗರಃ ।
ಉತ್ಪಪಾತ ತದಾ ಕ್ರುದ್ಧಃ ಸ್ಪೃಶನ್ನಿವ ದಿವಾಕರಮ್ ॥ ೩೫

ಶಸ್ತ್ರವರ್ಣಃ ಸುಪರುಷೋ ಮಂದರಶ್ಮಿರ್ದಿವಾಕರಃ ।
ಅದೃಶ್ಯತ ಕಬಂಧಾಂಕಃ ಸಂಸಕ್ತೋ ಧೂಮಕೇತುನಾ ॥ ೩೬

ಕೋಸಲಾನಾಂ ಚ ನಕ್ಷತ್ರಂ ವ್ಯಕ್ತಮಿಂದ್ರಾಗ್ನಿದೈವತಮ್ ।
ಆಕ್ರಮ್ಯಾಂಗಾರಕಸ್ತಸ್ಥೌ ವಿಶಾಖಮಪಿ ಚಾಂಬರೇ ॥ ೩೭

ದಶಾಸ್ಯೋ ವಿಂಶತಿಭುಜಃ ಪ್ರಗೃಹೀತಶರಾಸನಃ ।
ಅದೃಶ್ಯತ ದಶಗ್ರೀವೋ ಮೈನಾಕ ಇವ ಪರ್ವತಃ ॥ ೩೮

ನಿರಸ್ಯಮಾನೋ ರಾಮಸ್ತು ದಶಗ್ರೀವೇಣ ರಕ್ಷಸಾ ।
ನಾಶಕ್ನೋದಭಿಸಂಧಾತುಂ ಸಾಯಕಾನ್ ರಣಮೂರ್ಧನಿ ॥ ೩೯

---

ಗಳಿಗೆ ಅಶುಭಕಾರಕನಾಗುವನು (೩೩–೩೪). ಸಮುದ್ರಕ್ಕೆ ಬೆಂಕಿ ಬಿದ್ದಂತಾಗಿ ಹೊಗೆಯುಗುಳುತ್ತ ಅಲೆಗಳನ್ನು ಹಾರಿಸುತ್ತ ಕ್ಷುಬ್ಧನಾದ ಸಮುದ್ರರಾಜನು ಸೂರ್ಯನನ್ನು ಮುಟ್ಟುವನೋ ಎಂಬಂತೆ ಮೇಲಕ್ಕೆ ನೆಗೆದನು. ಮಂದಕಿರಣನಾದ ದಿನಕರನು ಶಸ್ತ್ರದಂತೆ ಶ್ಯಾಮವರ್ಣನಾಗಿ ರೂಕ್ಷನಾದನು. ಧೂಮಕೇತುವು ಬಂದು ತಾಗಲು, ಸೂರ್ಯಮಂಡಲ ದಲ್ಲಿ ರುಂಡಾಕೃತಿಯು ಕಂಡಿತು (೩೫–೩೬). ಕೋಸಲರಾಜರ ನಕ್ಷತ್ರವೂ* ಇಂದ್ರಾಗ್ನಿದೇವತಾಕವೂ ಆದ ವಿಶಾಖೆಯನ್ನು ಆಕ್ರಮಿಸಿ ಅಂಗಾರಕನು ಅಂಬರದಲ್ಲಿ ನಿಂತನು. ಹತ್ತು ತಲೆಗಳಿಂದಲೂ ಇಪ್ಪತ್ತು ಭುಜಗಳಿಂದಲೂ ಯುಕ್ತನಾದ ರಾವಣನು ಧನುರ್ಧಾರಿಯಾಗಿ, ಮೈನಾಕಪರ್ವತದಂತೆ ಎದುರಿಗೆ ನಿಂತಿದ್ದನು ! (೩೭–೩೮). ದಶಗ್ರೀವನ ಶರಪರಂಪರೆಗಳ ಆರ್ಭಟಕ್ಕೆ ಸಿಕ್ಕಿದ ಶ್ರೀರಾಮನಿಗೆ ಸಾಯಕಗಳನ್ನು ಹೂಡಿ ಗುರಿಯಿಡಲು

---

* ಕೋಸಲರಾಜರಾದ ಇಕ್ಷ್ವಾಕುವಂಶದವರಿಗೆ ವಿಶಾಖಾ ನಕ್ಷತ್ರವು ಮುಖ ವೆಂದು ಯುದ್ಧಕಾಂಡದ ೪ನೆಯ ಸರ್ಗದ ೫೨ನೆಯ ಶ್ಲೋಕದಲ್ಲಿ ಹೇಳಿದೆ.

ಸ ಕೃತ್ವಾ ಭ್ರುಕುಟಿಂ ಕ್ರುದ್ಧಃ ಕಿಂಚಿತ್ ಸಂರಕ್ತಲೋಚನಃ ।
ಜಗಾಮ ಸುಮಹಾಕ್ರೋಧಂ ನಿರ್ದಹನ್ನಿವ ಚಕ್ಷುಷಾ ॥ ೪೦

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರ್ಯುತ್ತರಶತತಮಃ ಸರ್ಗಃ

---

## ಚತುರುತ್ತರಶತತಮಃ ಸರ್ಗಃ

### ರಾವಣಶೂಲಭಂಗಃ

ತಸ್ಯ ಕ್ರುದ್ಧಸ್ಯ ವದನಂ ದೃಷ್ಟ್ವಾ ರಾಮಸ್ಯ ಧೀಮತಃ ।
ಸರ್ವಭೂತಾನಿ ವಿತ್ರೇಸುಃ ಪ್ರಾಕಂಪತ ಚ ಮೇದಿನೀ ॥ ೧

ಸಿಂಹಶಾರ್ದೂಲವಾನ್ ಶೈಲಃ ಸಂಚಚಾಲ ಚಲದ್ರುಮಃ ।
ಬಭೂವ ಚಾತಿಕ್ಷುಭಿತಃ ಸಮುದ್ರಃ ಸರಿತಾಂ ಪತಿಃ ॥ ೨

---

ಸಾಧ್ಯವಾಗಲಿಲ್ಲ. ಆ ಪರಿಸ್ಥಿತಿಯನ್ನು ಕಂಡು ಶ್ರೀರಾಮನ ಹುಬ್ಬುಗಳು ಗಂಟಿಕ್ಕಿದವು. ಕಣ್ಣುಗಳು ಕೆಂಪಡರಿದವು. ಕ್ರೋಧವು ಉಕ್ಕಿತು. ಶತ್ರುವನ್ನು ಸುಡುವನೋ ಎಂಬಂತೆ ಶ್ರೀರಾಮನು ನೋಡಿದನು (೩೯-೪೦).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಮೂರನೆಯ ಸರ್ಗ*

---

## ಸರ್ಗ ೧೦೪

### ರಾವಣನು ಪ್ರಯೋಗಿಸಿದ ಶೂಲವನ್ನು ಶ್ರೀರಾಮನು ಇಂದ್ರದತ್ತವಾದ ಶಕ್ತಿಯಿಂದ ಭಗ್ನಗೊಳಿಸುವುದು.

ಯುದ್ಧವಿದ್ಯಾಪರಿಣತನಾದ ಶ್ರೀರಾಮನು ಈ ಪರಿಯಲ್ಲಿ ಕ್ರೋಧೋದ್ದೀಪಿತನಾಗಲು, ಅವನ ಮುಖವನ್ನು ನೋಡಿ ಸಕಲರೂ ಭೀತರಾದರು. ಭೂಮಿಯು ನಡುಗಿತು. ಸಿಂಹಶಾರ್ದೂಲಾದಿ ಮೃಗಗಳಿಂದ ಸಮೇತವಾದ ಪರ್ವತವು ಕಂಪಿಸಿತು. ಅದರಲ್ಲಿ ಬೆಳೆದಿದ್ದ ವೃಕ್ಷಗಳು ಅಲ್ಲಾಡಿದವು.

---

* ಇಲ್ಲಿಗೆ ಸರ್ಗವು ಮುಗಿಯುವುದಿಲ್ಲವೆಂದು ತಿಲಕವ್ಯಾಖ್ಯಾನದ ಆಶಯ.

ಖಗಾಶ್ಚ ಖರನಿರ್ಘೋಷಾ ಗಗನೇ ಪರುಷಾ ಘನಾಃ ।
ಔತ್ಪಾತಿಕಾನಿ ನರ್ದಂತಃ ಸಮಂತಾತ್ ಪರಿಚಕ್ರಮುಃ ॥ ೩

ರಾಮಂ ದೃಷ್ಟ್ವಾ ಸುಸಂಕ್ರುದ್ಧಮುತ್ಪಾತಾಂಶ್ಚ ಸುದಾರುಣಾನ್ ।
ವಿತ್ರೇಸುಃ ಸರ್ವಭೂತಾನಿ ರಾವಣಸ್ಯಾಭವದ್ಭಯಮ್ ॥ ೪

ವಿಮಾನಸ್ಥಾಸ್ತದಾ ದೇವಾ ಗಂಧರ್ವಾಶ್ಚ ಮಹೋರಗಾಃ ।
ಋಷಿದಾನವದೈತ್ಯಾಶ್ಚ ಗರುತ್ಮಂತಶ್ಚ ಖೇಚರಾಃ ॥ ೫

ದದೃಶುಸ್ತೇ ಮಹಾಯುದ್ಧಂ ಲೋಕಸಂವರ್ತಸಂಸ್ಥಿತಮ್ ।
ನಾನಾಪ್ರಹರಣೈರ್ಭೀಮೈಃ ಶೂರಯೋಃ ಸಂಪ್ರಯುಧ್ಯತೋಃ ॥ ೬

ಊಚುಃ ಸುರಾಸುರಾಃ ಸರ್ವೇ ತದಾ ವಿಗ್ರಹಮಾಗತಾಃ ।
ಪ್ರೇಕ್ಷಮಾಣಾ ಮಹದ್ಯುದ್ಧಂ ವಾಕ್ಯಂ ಭಕ್ತ್ಯಾ ಪ್ರಹೃಷ್ಟವತ್ ॥ ೭

ದಶಗ್ರೀವಂ ಜಯೇತ್ಯಾಹುರಸುರಾಃ ಸಮವಸ್ಥಿತಾಃ ।
ದೇವಾ ರಾಮಮಥೋಚುಸ್ತೇ ತ್ವಂ ಜಯೇತಿ ಪುನಃ ಪುನಃ ॥ ೮

---

ಸಮುದ್ರವು ಪ್ರಕ್ಷುಬ್ಧವಾಯಿತು (೧-೨). ಹಕ್ಕಿಗಳು ಕರ್ಣಕಠೋರವಾಗಿ ಕೂಗಿದವು. ಮೋಡಗಳು ಉತ್ಪಾತಸೂಚಕವಾದ ಧ್ವನಿಯಿಂದ ಗರ್ಜಿಸುತ್ತ ಆಕಾಶದಲ್ಲಿ ಅಲೆದಾಡಿದವು. ರೋಷಾವಿಷ್ಟನಾದ ರಾಘವನನ್ನೂ ದಾರುಣ ವಾದ ಉತ್ಪಾತಗಳನ್ನೂ ವೀಕ್ಷಿಸಿ, ಸಮಸ್ತ ಭೂತಗಳೂ ಹೆದರಿದವು. ರಾವಣನ ಮನಸ್ಸಿನಲ್ಲಿ ಅಂಜಿಕೆ ಅಂಕುರಿಸಿತು (೩-೪). ವಿಮಾನಗಳಲ್ಲಿದ್ದ ದೇವಗಂಧರ್ವರೂ ಮಹೋರಗರೂ ಋಷಿಗಳೂ ದೈತ್ಯದಾನವರೂ ಗರುಡರೂ ಸಹ, ಭೀಕರವಾದ ವಿವಿಧಾಯುಧಗಳಿಂದ ಹೋರಾಡುತ್ತಿದ್ದ ಆ ಶೂರರೀರ್ವರ ಮಹಾಯುದ್ಧವನ್ನು ವೀಕ್ಷಿಸುತ್ತಿದ್ದರು. ಆ ಯುದ್ಧ ವಾದರೋ ಪ್ರಳಯಕಾಲದ ಸನ್ನಿವೇಶದಂತೆ ಘೋರವಾಗಿತ್ತು (೫-೬). ರಣಭೂಮಿಗೆ ಬಂದು ನೆರೆದಿದ್ದ ನಿಖಿಲ ಸುರಾಸುರರೂ ಆ ಮಹಾಯುದ್ಧ ವನ್ನು ಸಮೀಕ್ಷಿಸುತ್ತ, ಭಕ್ತಿಯಿಂದ ಉತ್ಸಾಹಪೂರ್ಣರಾಗಿ ಇಷ್ಟಬಂದಂತೆ ಜಯಘೋಷಮಾಡುತ್ತಿದ್ದರು. ಅಲ್ಲಿ ನೆರೆದಿದ್ದ ಅಸುರರು 'ರಾವಣನಿಗೆ ಜಯವಾಗಲಿ!' ಎಂದೂ, ದೇವತೆಗಳು 'ಶ್ರೀರಾಮನಿಗೆ ಜಯವಾಗಲಿ!'

ಏತಸ್ಮಿನ್ನಂತರೇ ಕ್ರೋಧಾದ್ರಾಘವಸ್ಯ ಸ ರಾವಣಃ ।
ಪ್ರಹರ್ತುಕಾಮೋ ದುಷ್ಟಾತ್ಮಾ ಸ್ಪೃಶನ್ ಪ್ರಹರಣಂ ಮಹತ್ ॥ ೯

ವಜ್ರಸಾರಂ ಮಹಾನಾದಂ ಸರ್ವಶತ್ರುನಿಬರ್ಹಣಮ್ ।
ಶೈಲಶೃಂಗನಿಭೈಃ ಕೂಟೈಶ್ಚಿತಂ ದೃಷ್ಟಿಭಯಾವಹಮ್ ॥ ೧೦

ಸಧೂಮಮಿವ ತೀಕ್ಷ್ಣಾಗ್ರಂ ಯುಗಾಂತಾಗ್ನಿಚಯೋಪಮಮ್ ।
ಅತಿರೌದ್ರಮನಾಸಾದ್ಯಂ ಕಾಲೇನಾಪಿ ದುರಾಸದಮ್ ॥ ೧೧

ತ್ರಾಸನಂ ಸರ್ವಭೂತಾನಾಂ ದಾರಣಂ ಭೇದನಂ ತದಾ ।
ಪ್ರದೀಪ್ತಮಿವ ರೋಷೇಣ ಶೂಲಂ ಜಗ್ರಾಹ ರಾವಣಃ ॥ ೧೨

ತಚ್ಛೂಲಂ ಪರಮಕ್ರುದ್ಧೋ ಮಧ್ಯೇ ಜಗ್ರಾಹ ವೀರ್ಯವಾನ್ ।
ಅನೇಕೈಃ ಸಮರೇ ಶೂರೈ ರಾಕ್ಷಸೈಃ ಪರಿವಾರಿತಃ ॥ ೧೩

---

ಎಂದೂ ಮತ್ತೆ ಮತ್ತೆ ಘೋಷಿಸುತ್ತಿದ್ದರು (೭-೮). ಆ ಸಮಯದಲ್ಲಿ ದುರಾತ್ಮನಾದ ರಾವಣನು ರಾಘವನನ್ನು ಪ್ರಹರಿಸಬೇಕೆಂದು ಮಹತ್ತರವಾದ ಶೂಲಾಯುಧವನ್ನು ತುಡುಕಿದನು. ಅದು ಸಿಡಿಲಿನಂತೆ ಮಹಾಧ್ವನಿಯಿಂದ ಬಡಿಯುವ ಅದ್ಭುತಸಾಮರ್ಥ್ಯವುಳ್ಳದ್ದೂ ಸರ್ವಶತ್ರುಗಳನ್ನೂ ವಿಧ್ವಂಸಗೊಳಿಸುವ ಶಕ್ತಿಯುಳ್ಳದ್ದೂ ಆಗಿತ್ತು. ಶೈಲಶೃಂಗಗಳಂತಿರುವ ಉಕ್ಕಿನ ಮುಳ್ಳುಗಳಿಂದ ವ್ಯಾಪ್ತವಾಗಿತ್ತು. ನೋಡಿದರೆ ನಡುಕವನ್ನುಂಟುಮಾಡುವ ಘೋರಾಕೃತಿಯುಳ್ಳದಾಗಿತ್ತು (೯-೧೦). ಹೊಗೆಯನ್ನುಗುಳುವ ಪ್ರಳಯಕಾಲಾಗ್ನಿಪುಂಜವೋ ಎಂಬಂತೆ ಉಜ್ವಲವಾಗಿ ಬೆಳಗುತ್ತ ಅತ್ಯಂತ ನಿಶಿತವಾಗಿತ್ತು. ರುದ್ರಭೀಷಣವಾಗಿ ದುರ್ಧರ್ಷವಾಗಿತ್ತು. ಕಾಲಮೃತ್ಯುವಿಗೂ ಎದುರಿಸಲು ಅಶಕ್ಯವಾಗಿತ್ತು. ಸಮಸ್ತಭೂತಜಾತಗಳನ್ನೂ ನಡುಗಿಸಿ ಕೊಂದು ಕೊಚ್ಚಿ ಸೀಳಿ ಬಿಸುಡುವಷ್ಟು ಉಗ್ರವಾಗಿತ್ತು. ರೋಷದಿಂದ ಪ್ರಜ್ವಲಿಸುವುದೋ ಎಂಬಂತಿದ್ದ ದಾರುಣವಾದ ಆ ಶೂಲವನ್ನು ರಾವಣನು ತುಡುಕಿದನು! (೧೧-೧೨). ಸಿಟ್ಟಿನಿಂದ ಸಿಡಿದೆದ್ದ ವೀರಾಗ್ರೇಸರನೂ ಮಹಾಶರೀರನೂ ಆದ ರಾವಣನು ಶೂಲವನ್ನು

**ಸಮುದ್ಯಮ್ಯ ಮಹಾಕಾಯೋ ನನಾದ ಯುಧಿ ಭೈರವಮ್ ।**
**ಸಂರಕ್ತನಯನೋ ರೋಷಾತ್ ಸ್ವಸೈನ್ಯಮಭಿಹರ್ಷಯನ್ ॥ ೧೪**

**ಪೃಥಿವೀಂ ಚಾಂತರಿಕ್ಷಂ ಚ ದಿಶಶ್ಚ ಪ್ರದಿಶಸ್ತಥಾ ।**
**ಪ್ರಾಕಂಪಯತ್ತದಾ ಶಬ್ದೋ ರಾಕ್ಷಸೇಂದ್ರಸ್ಯ ದಾರುಣಃ ॥ ೧೫**

**ಅತಿನಾದಸ್ಯ ನಾದೇನ ತೇನ ತಸ್ಯ ದುರಾತ್ಮನಃ ।**
**ಸರ್ವಭೂತಾನಿ ವಿತ್ರೇಸುಃ ಸಾಗರಶ್ಚ ಪ್ರಚುಕ್ಷುಭೇ ॥ ೧೬**

**ಸ ಗೃಹೀತ್ವಾ ಮಹಾವೀರ್ಯಃ ಶೂಲಂ ತದ್ರಾವಣೋ ಮಹತ್ ।**
**ವಿನದ್ಯ ಸುಮಹಾನಾದಂ ರಾಮಂ ಪರುಷಮಬ್ರವೀತ್ ॥ ೧೭**

**ಶೂಲೋಽಯಂ ವಜ್ರಸಾರಸ್ತೇ ರಾಮ ರೋಷಾನ್ಮಯೋದ್ಯತಃ ।**
**ತವ ಭ್ರಾತೃಸಹಾಯಸ್ಯ ಸದ್ಯಃ ಪ್ರಾಣಾನ್ ಹರಿಷ್ಯತಿ ॥ ೧೮**

**ರಕ್ಷಸಾಮದ್ಯ ಶೂರಾಣಾಂ ನಿಹತಾನಾಂ ಚಮೂಮುಖೇ ।**
**ತ್ವಾಂ ನಿಹತ್ಯ ರಣಶ್ಲಾಘಿನ್ ಕರೋಮಿ ತರಸಾ ಸಮಮ್ ॥ ೧೯**

---

ಮಧ್ಯದಲ್ಲಿ ಹಿಡಿದು ಮೇಲೆತ್ತಿ ಭೈರವನಾದದಿಂದ ಬೊಬ್ಬಿರಿದನು. ಶೂರರಾದ ರಾಕ್ಷಸರ ಪರಿವಾರವು ಅವನ ಸುತ್ತಲೂ ನೆರೆದಿತ್ತು. ರೋಷತಾಮ್ರಾಕ್ಷನಾದ ಅವನ ಅಬ್ಬರವನ್ನು ನೋಡಿ ರಾಕ್ಷಸಪರಿವಾರವು ಸಂತೋಷದಿಂದ ಉಬ್ಬಿತು (೧೩-೧೪). ರಾಕ್ಷಸೇಂದ್ರನ ಭೀಕರವಾದ ಅಬ್ಬರದ ಗರ್ಜನೆಯಿಂದ ದ್ಯಾವಾಪೃಥಿವಿಗಳು ನಡುಗಿದವು. ದಿಗ್ದಿಗಂತರಗಳು ತಲ್ಲಣಿಸಿದವು. ಅತಿಘೋರವಾಗಿ ಬೊಬ್ಬಿರಿದ ಆ ದುರಾತ್ಮನ ಸಿಂಹನಾದವನ್ನು ಕೇಳಿ, ಸರ್ವಭೂತಗಳೂ ಹೆದರಿ ಕಂಗಾಲಾದವು. ಸಮುದ್ರವು ಉಲ್ಲೋಲಕಲ್ಲೋಲವಾಯಿತು (೧೫-೧೬). ಚಂಡಪರಾಕ್ರಮಿಯಾದ ರಾವಣನು ಆ ಮಹಾಶೂಲವನ್ನು ಹಿಡಿದು ಉಗ್ರನಾದದಿಂದ ಗರ್ಜಿಸಿ, ಶ್ರೀರಾಮನನ್ನು ಕುರಿತು ಕಠೋರಸ್ವರದಿಂದ "ಎಲೈ ರಾಮ, ರೋಷದಿಂದ ನಾನು ಹಿಡಿದೆತ್ತಿರುವ ಈ ಶೂಲವು ನಿನ್ನನ್ನೂ ನಿನ್ನ ತಮ್ಮನನ್ನೂ ನಿರ್ಭೇದಿಸಿ, ಈ ಕ್ಷಣದಲ್ಲಿಯೇ ನಿಮ್ಮೀರ್ವರ ಪ್ರಾಣಗಳನ್ನು ಕೊಚ್ಚಿಕೊಂಡುಹೋಗುವುದು. ಈ ರಣರಂಗದಲ್ಲಿ ಶೂರರಾದ ರಾಕ್ಷಸರನ್ನು ನೀನು ಘಾತಿಸಿರುವೆಯಲ್ಲವೆ? ಭಪ್ಪರೇ, ರಣಮಲ್ಲ! ನಿನಗೆ ತಕ್ಕುದನ್ನು ಮಾಡಿ ಸೇಡುತೀರಿಸಿ

ತಿಷ್ಠೇದಾನೀಂ ನಿಹನ್ಮಿ ತ್ವಾಮೇಷ ಶೂಲೇನ ರಾಘವ ।
ಏವಮುಕ್ತ್ವಾ ಸ ಚಿಕ್ಷೇಪ ತಚ್ಛೂಲಂ ರಾಕ್ಷಸಾಧಿಪಃ ॥ ೨೦

ತದ್ರಾವಣಕರಾನ್ಮುಕ್ತಂ ವಿದ್ಯುಜ್ಜ್ವಾಲಾಸಮಾಕುಲಮ್ ।
ಅಷ್ಟಘಂಟಂ ಮಹಾನಾದಂ ವಿಯದ್ಗತಮಶೋಭತ ॥ ೨೧

ತಚ್ಛೂಲಂ ರಾಘವೋ ದೃಷ್ಟ್ವಾ ಜ್ವಲಂತಂ ಘೋರದರ್ಶನಮ್ ।
ಸಸರ್ಜ ವಿಶಿಖಾನ್ ರಾಮಶ್ಚಾಪಮಾಯಮ್ಯ ವೀರ್ಯವಾನ್ ॥ ೨೨

ಆಪತಂತಂ ಶರೌಘೇಣ ವಾರಯಾಮಾಸ ರಾಘವಃ ।
ಉತ್ಪತಂತಂ ಯುಗಾಂತಾಗ್ನಿಂ ಜಲೌಘೈರಿವ ವಾಸವಃ ॥ ೨೩

ನಿರ್ದದಾಹ ಸ ತಾನ್ ಬಾಣಾನ್ ರಾಮಕಾರ್ಮುಕನಿಃಸೃತಾನ್ ।
ರಾವಣಸ್ಯ ಮಹಾಶೂಲಃ ಪತಂಗಾನಿವ ಪಾವಕಃ ॥ ೨೪

ತಾನ್ ದೃಷ್ಟ್ವಾ ಭಸ್ಮಸಾದ್ಭೂತಾನ್ ಶೂಲಸಂಸ್ಪರ್ಶಚೂರ್ಣಿತಾನ್।
ಸಾಯಕಾನಂತರಿಕ್ಷಸ್ಥಾನ್ ರಾಘವಃ ಕ್ರೋಧಮಾಹರತ್ ॥ ೨೫

---

ಕೊಳ್ಳುವೆನು (೧೭–೧೯). ನಿಲ್ಲು, ನಿಲ್ಲು; ಎಲೈ ರಾಘವ, ಈ ಶೂಲದಿಂದ ನಿನ್ನನ್ನು ಮುಗಿಸುವೆನು!" ಎಂದು ಹೇಳಿ, ಆ ರಾಕ್ಷಸಾಧಿಪನು ಶೂಲವನ್ನು ಶ್ರೀರಾಮನಮೇಲೆ ರಭಸದಿಂದ ಬೀಸಿದನು. ರಾವಣನ ಕರದಿಂದ ಹೊರಬಿದ್ದ ಅಷ್ಟಘಂಟಾಯುಕ್ತವಾದ ಆ ಶೂಲವು ಮಿಂಚುಗಳ ಗೊಂಚಲಿಂದ ವಿದ್ಯೋತಿಸುತ್ತ ಗಗನಮಾರ್ಗದಲ್ಲಿ ಭೋರ್ಗರೆಯಿತು (೨೦–೨೧). ಘೋರವಾಗಿ ಧಗಧಗಿಸುತ್ತಿದ್ದ ಆ ಶೂಲವನ್ನು ನೋಡಿ, ಅದನ್ನು ನಿಗ್ರಹಿಸುವುದಕ್ಕಾಗಿ ಶ್ರೀರಾಮನು ಹೆದೆಯೆಳೆದು ಶರರಾಶಿಗಳನ್ನು ಪ್ರಯೋಗಿಸಿದನು. ಒಡಮೂಡುವ ಪ್ರಳಯಕಾಲಾಗ್ನಿಯನ್ನು ದೇವೇಂದ್ರನು ಮಳೆಸುರಿಸಿ ನಂದಿಸಲು ಯತ್ನಿಸಿದಂತಾಯಿತು (೨೨–೨೩). ಶ್ರೀರಾಮನ ಕಾರ್ಮುಕದಿಂದ ಸಿಡಿದುಬಂದ ಬಾಣರಾಶಿಗಳೆಲ್ಲವನ್ನೂ ರಾವಣನ ಮಹಾಶೂಲವು, ಮಿಡತೆಗಳನ್ನು ಬೆಂಕಿಯು ಸುಡುವಂತೆ ಸುಟ್ಟು ಹಾಕಿತು. ಹೀಗೆ ತನ್ನ ಸಾಯಕಗಳೆಲ್ಲವೂ ಶೂಲಕ್ಕೆ ತಾಗಿ ಪುಡಿಯಾಗಿ ಗಗನದಲ್ಲಿ ಸುಟ್ಟು ಬೂದಿಯಾಗುವುದನ್ನು ನೋಡಿ, ಶ್ರೀರಾಮನ ಕ್ರೋಧವು

**ಸ ತಾಂ ಮಾತಲಿನಾನೀತಾಂ ಶಕ್ತಿಂ ವಾಸವನಿರ್ಮಿತಾಮ್ ।**
**ಜಗ್ರಾಹ ಪರಮಕ್ರುದ್ಧೋ ರಾಘವೋ ರಘುನಂದನಃ ॥** ೨೬

**ಸಾ ತೋಲಿತಾ ಬಲವತಾ ಶಕ್ತಿರ್ಘಂಟಾಕೃತಸ್ವನಾ ।**
**ನಭಃ ಪ್ರಜ್ವಾಲಯಾಮಾಸ ಯುಗಾಂತೋಲ್ಕೇವ ಸಪ್ರಭಾ ॥** ೨೭

**ಸಾ ಕ್ಷಿಪ್ತಾ ರಾಕ್ಷಸೇಂದ್ರಸ್ಯ ತಸ್ಮಿನ್ ಶೂಲೇ ಪಪಾತ ಹ ।**
**ಭಿನ್ನಃ ಶಕ್ತ್ಯಾ ಮಹಾನ್ ಶೂಲೋ ನಿಪಪಾತ ಹತದ್ಯುತಿಃ ॥** ೨೮

**ನಿರ್ಬಿಭೇದ ತತೋ ಬಾಣೈರ್ಹಯಾನಸ್ಯ ಮಹಾಜವಾನ್ ।**
**ರಾಮಸ್ತೀಕ್ಷ್ಣೈರ್ಮಹಾವೇಗೈರ್ವಜ್ರಕಲ್ಪೈಃ ಶಿತೈಃ ಶರೈಃ ॥** ೨೯

**ನಿರ್ಬಿಭೇದೋರಸಿ ತತೋ ರಾವಣಂ ನಿಶಿತೈಃ ಶರೈಃ ।**
**ರಾಘವಃ ಪರಮಾಯತ್ತೋ ಲಲಾಟೇ ಪತ್ರಿಭಿಸ್ತ್ರಿಭಿಃ ॥** ೩೦

**ಸ ಶರೈರ್ಭಿನ್ನಸರ್ವಾಂಗೋ ಗಾತ್ರಪ್ರಸ್ರುತಶೋಣಿತಃ ।**
**ರಾಕ್ಷಸೇಂದ್ರಃ ಸಮೂಹಸ್ಥಃ ಫುಲ್ಲಾಶೋಕ ಇವಾಬಭೌ ॥** ೩೧

---

ತೀವ್ರವಾಯಿತು (೨೪–೨೫). ಮಾತಲಿಯು ತಂದುಕೊಟ್ಟ ಇಂದ್ರನಿರ್ಮಿತವಾದ ಶಕ್ತಿಯನ್ನು ಕ್ರುದ್ಧನಾದ ರಾಘವನು ಕೈಗೆತ್ತಿಕೊಂಡನು. ಬಲಾಢ್ಯನಾದ ರಘುನಂದನನು ಆ ಶಕ್ತಿಯನ್ನು ಹಿಡಿದು ತೂಗಿ ತಿರುಗಿಸಲಾಗಿ, ಆ ಶಕ್ತಿಯು ಘಂಟೆಗಳ ಘಣಘಣರವದೊಡನೆ ಪ್ರಭೆಯನ್ನು ಬೀರುತ್ತ, ಯುಗಾಂತದಲ್ಲಿ ಸಿಡಿಯುವ ಉಲ್ಕೆಯಂತೆ ದಿಕ್ಕುಗಳನ್ನು ಪ್ರಜ್ವಲಗೊಳಿಸಿತು (೨೬–೨೭). ಅನಂತರ ಶ್ರೀರಾಮನು ಅದನ್ನು ಪ್ರಯೋಗಿಸಲು, ಆ ಶಕ್ತಿಯು ರಭಸದಿಂದ ಸಿಡಿದು ರಾಕ್ಷಸೇಂದ್ರನ ಶೂಲವನ್ನು ಸಂಘಟ್ಟಿಸಿತು. ರಾವಣನ ಮಹಾಶೂಲವು ಮುರಿದು ತುಂಡಾಗಿ ಕಾಂತಿಗುಂದಿ ಕೆಳಗೆ ಬಿದ್ದಿತು (೨೮). ಆಮೇಲೆ ಶ್ರೀರಾಮನು ವಜ್ರಕಲ್ಪಗಳೂ ತೀಕ್ಷ್ಣವೇಗವುಳ್ಳವೂ ಆದ ಶಿತಶರಗಳಿಂದ ರಾವಣನ ವೇಗಶಾಲಿಗಳಾದ ಅಶ್ವಗಳನ್ನು ಗಾಯಗೊಳಿಸಿ, ಬಾಣಜಾಲಗಳನ್ನು ರಾವಣನ ಎದೆಯಲ್ಲಿ ತೂರಿಸಿ, ಮೂರು ನಾರಾಚಗಳನ್ನು ಅವನ ಹಣೆಗೆ ಗುರಿಯಿಟ್ಟು ಹೊಡೆದನು (೨೯–೩೦). ರಾವಣನ ಸರ್ವಾಂಗಗಳೂ ಶರನಿರ್ಭಿನ್ನವಾದವು. ಸರ್ವಾಂಗಗಳಿಂದಲೂ ರಕ್ತವು ಸುರಿಯಿತು. ಸೇನಾಮಧ್ಯದಲ್ಲಿದ್ದ ಆ ರಾಕ್ಷಸೇಂದ್ರನು

ಸ ರಾಮಬಾಣೈರಭಿವಿದ್ಧಗಾತ್ರೋ
ನಿಶಾಚರೇಂದ್ರಃ ಕ್ಷತಜಾರ್ದ್ರಗಾತ್ರಃ ।
ಜಗಾಮ ಖೇದಂ ಚ ಸಮಾಜಮಧ್ಯೇ
ಕ್ರೋಧಂ ಚ ಚಕ್ರೇ ಸುಭೃಶಂ ತದಾನೀಮ್ ॥ ೩೨

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರುತ್ತರಶತತಮಃ ಸರ್ಗಃ



ಅರಳಿದ ಅಶೋಕವೃಕ್ಷದಂತೆ ಕಂಗೊಳಿಸಿದನು (೩೧). ರಾಘವನ ಕೂರ್ಗಣೆಗಳಿಂದ ರಾಕ್ಷಸೇಶ್ವರನ ಸಕಲಾವಯವಗಳೂ ಗಾಯಗೊಂಡವು. ಅವನ ದೇಹವು ರಕ್ತದಲ್ಲಿ ನೆನೆಯಿತು. ಸಂಗ್ರಾಮಭೂಮಿಯಲ್ಲಿ ಅವನು ಕ್ಷಣಕಾಲ ಖಿನ್ನನಾದನು. ಮಾರನೆಯ ಕ್ಷಣದಲ್ಲಿ ಮತ್ತೆ ಕ್ರೋಧೋದ್ದೀಪಿತನಾದನು (೩೨).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರನಾಲ್ಕನೆಯ ಸರ್ಗ



## ಪಂಚೋತ್ತರಶತತಮಃ ಸರ್ಗಃ

### ದಶಗ್ರೀವವಿಘೂರ್ಣನಮ್

ಸ ತೇನ ತು ತಥಾ ಕ್ರೋಧಾತ್ ಕಾಕುತ್ಸ್ಥೇನಾರ್ದಿತೋ ರಣೇ ।
ರಾವಣಃ ಸಮರಶ್ಲಾಘೀ ಮಹಾಕ್ರೋಧಮುಪಾಗಮತ್ ॥ ೧

ಸ ದೀಪ್ತನಯನೋ ರೋಷಾಚ್ಚಾಪಮಾಯಮ್ಯ ವೀರ್ಯವಾನ್ ।
ಅಭ್ಯರ್ದಯತ್ ಸುಸಂಕ್ರುದ್ಧೋ ರಾಘವಂ ಪರಮಾಹವೇ ॥ ೨

ಬಾಣಧಾರಾಸಹಸ್ರೈಸ್ತೈಃ ಸ ತೋಯದ ಇವಾಂಬರಾತ್ ।
ರಾಘವಂ ರಾವಣೋ ಬಾಣೈಸ್ತಟಾಕಮಿವ ಪೂರಯತ್ ॥ ೩

ಪೂರಿತಃ ಶರಜಾಲೇನ ಧನುರ್ಮುಕ್ತೇನ ಸಂಯುಗೇ ।
ಮಹಾಗಿರಿರಿವಾಕಂಪ್ಯಃ ಕಾಕುತ್ಸ್ಥೋ ನ ಪ್ರಕಂಪತೇ ॥ ೪

ಸ ಶರೈಃ ಶರಜಾಲಾನಿ ವಾರಯನ್ ಸಮರೇ ಸ್ಥಿತಃ ।
ಗಭಸ್ತೀನಿವ ಸೂರ್ಯಸ್ಯ ಪ್ರತಿಜಗ್ರಾಹ ವೀರ್ಯವಾನ್ ॥ ೫

### ಸರ್ಗ ೧೦೫

**ಶ್ರೀರಾಮನ ಬಾಣಗಳಿಂದ ರಾವಣನು ವ್ಯಮರೆಯುಲು, ಅವನ ಸಾರಥಿಯು ರಥವನ್ನು ಬೇರೆ ಕಡೆಗೆ ಸಾಗಿಸುವುದು.**

ರಣಗರ್ವಿತನಾದ ರಾವಣನು ಕಾಕುತ್ಸ್ಥನ ಬಾಣಗಳ ಜಡಿತದಿಂದ ಪೀಡಿತನಾಗಿ ಕ್ರೋಧೋದ್ರಿಕ್ತನಾದನು. ಅವನ ಕಣ್ಣುಗಳು ಕಿಡಿಗೆದರಿದವು. ಆ ವೀರನು ರೋಷದಿಂದ ಚಾಪವನ್ನು ಆಕರ್ಣಾಂತವಾಗಿ ಸೆಳೆದು ಕೂರ್ಗಣೆಗಳಿಂದ ರಾಘವನನ್ನು ಮರ್ದಿಸತೊಡಗಿದನು (೧–೨). ಅಂಬರದಲ್ಲಿ ತುಂಬಿರುವ ಅಂಬುದವು ಜಡಿಮಳೆಯಿಂದ ಕೆರೆಯನ್ನು ತುಂಬುವಂತೆ, ಸಾವಿರಾರು ಕೂರಂಬುಗಳ ಧಾರೆಗಳಿಂದ ರಾವಣನು ರಾಘವನನ್ನು ಮುಚ್ಚಿದನು. ಆದರೇನು ? ಕಾಕುತ್ಸ್ಥನು ಶರಜಾಲದಿಂದ ಆಚ್ಛಾದಿತನಾದರೂ, ಅಕಂಪ್ಯವಾದ ಮಹಾಪರ್ವತದಂತೆ ಜಗ್ಗಲಿಲ್ಲ, ಜಳುಕಲಿಲ್ಲ (೩–೪). ಸೂರ್ಯನ ಖರಕಿರಣಗಳನ್ನು ಪರ್ವತವು ತಡೆದುಕೊಳ್ಳುವಂತೆ ರಾವಣನ

ತತಃ ಶರಸಹಸ್ರಾಣಿ ಕ್ಷಿಪ್ರಹಸ್ತೋ ನಿಶಾಚರಃ ।
ನಿಜಘಾನೋರಸಿ ಕ್ರುದ್ಧೋ ರಾಘವಸ್ಯ ಮಹಾತ್ಮನಃ ॥ ೬

ಸ ಶೋಣಿತಸಮಾದಿಗ್ಧಃ ಸಮರೇ ಲಕ್ಷ್ಮಣಾಗ್ರಜಃ ।
ದೃಷ್ಟಃ ಫುಲ್ಲ ಇವಾರಣ್ಯೇ ಸುಮಹಾನ್ ಕಿಂಶುಕದ್ರುಮಃ ॥ ೭

ಶರಾಭಿಘಾತಸಂರಬ್ಧಃ ಸೋಽಪಿ ಜಗ್ರಾಹ ಸಾಯಕಾನ್ ।
ಕಾಕುತ್ಸ್ಥಃ ಸುಮಹಾತೇಜಾ ಯುಗಾಂತಾದಿತ್ಯತೇಜಸಃ ॥ ೮

ತತೋಽನ್ಯೋನ್ಯಂ ಸುಸಂರಬ್ಧಾವುಭೌ ತೌ ರಾಮರಾವಣೌ ।
ಶರಾಂಧಕಾರೇ ಸಮರೇ ನೋಪಾಲಕ್ಷಯತಾಂ ತದಾ ॥ ೯

ತತಃ ಕ್ರೋಧಸಮಾವಿಷ್ಟೋ ರಾಮೋ ದಶರಥಾತ್ಮಜಃ ।
ಉವಾಚ ರಾವಣಂ ವೀರಃ ಪ್ರಹಸ್ಯ ಪರುಷಂ ವಚಃ ॥ ೧೦

ಮಮ ಭಾರ್ಯಾ ಜನಸ್ಥಾನಾದಜ್ಞಾನಾದ್ರಾಕ್ಷಸಾಧಮ ।
ಹೃತಾ ತೇ ವಿವಶಾ ಯಸ್ಮಾತ್ತಸ್ಮಾತ್ತ್ವಂ ನಾಸಿ ವೀರ್ಯವಾನ್ ॥ ೧೧

---

ಕೂರ್ಗಣೆಗಳನ್ನು ಎದುರಿಸಿ, ಶರಜಾಲಗಳನ್ನು ಶರಜಾಲಗಳಿಂದ ತರಿದೊಟ್ಟಿದನು. ಅನಂತರ ಲಘುಹಸ್ತನಾದ ಆ ರಾಕ್ಷಸನು ಮಹಾಧೀರನಾದ ಶ್ರೀರಾಮನ ಎದೆಗೆ ಸಾವಿರ ಬಾಣಗಳನ್ನು ಗುರಿಯಿಟ್ಟು ತ್ವರೆಯಿಂದ ಹೊಡೆದನು (೫-೬). ಲಕ್ಷ್ಮಣಾಗ್ರಜನು ರಕ್ತದಲ್ಲಿ ನೆನೆದನು. ವನದಲ್ಲಿರುವ ದೊಡ್ಡ ಮುತ್ತುಗದ ಮರವು ಅರಳಿರುವಂತೆ ಶ್ರೀರಾಮನು ಗೋಚರಿಸಿದನು. ರಾವಣನ ಶರಘಾತದಿಂದ ಉದ್ವಿಗ್ನನಾದ ಕಾಕುತ್ಸ್ಥನು, ಯುಗಾಂತದ ಆದಿತ್ಯನಂತೆ ಹೊಳೆಹೊಳೆಯುವ ಸಾಯಕಗಳನ್ನು ಸೆಳೆಸೆಳೆದು ರಾವಣನನ್ನು ಥಳಿಸತೊಡಗಿದನು (೭-೮). ಅನ್ಯೋನ್ಯವಾಗಿ ಛಲದಿಂದ ಸಂಘರ್ಷಿಸಿ ಹೋರಾಡುತ್ತಿದ್ದ ಅವರೀರ್ವರೂ ಶರಪರಂಪರೆಗಳಿಂದಾದ ಅಂಧಕಾರದಲ್ಲಿ ಒಬ್ಬರನ್ನೊಬ್ಬರು ಕಾಣಲಾರದೆಹೋದರು! ಆಗ ರೋಷಾವಿಷ್ಟನಾದ ಶ್ರೀರಾಮನು ರಾವಣನನ್ನು ಧಿಕ್ಕರಿಸಿ ನಕ್ಕು "ಎಲೈ ರಾಕ್ಷಸಾಧಮ, ಗೊತ್ತಾಗದಂತೆ ಬಂದು ನನ್ನ ಪತ್ನಿಯನ್ನು ಜನಸ್ಥಾನದಿಂದ ಅಪಹರಿಸಿ ತಂದೆಯಾ? ಯಾರೂ ಇಲ್ಲದಾಗ ಅನಾಥೆಯಾದ ಸ್ತ್ರೀಯನ್ನು ಕದ್ದು ತಂದಮೇಲೆ, ನೀನು ವೀರನೆನಿಸಲಾರೆ! (೯-೧೧).

**ಮಯಾ ವಿರಹಿತಾಂ ದೀನಾಂ ವರ್ತಮಾನಾಂ ಮಹಾವನೇ ।**
**ವೈದೇಹೀಂ ಪ್ರಸಭಂ ಹೃತ್ವಾ ಶೂರೋಽಹಮಿತಿ ಮನ್ಯಸೇ ॥** ೧೨
**ಸ್ತ್ರೀಷು ಶೂರ ವಿನಾಥಾಸು ಪರದಾರಾಭಿಮರ್ಶಕ ।**
**ಕೃತ್ವಾ ಕಾಪುರುಷಂ ಕರ್ಮ ಶೂರೋಽಹಮಿತಿ ಮನ್ಯಸೇ ॥** ೧೩
**ಭಿನ್ನಮರ್ಯಾದ ನಿರ್ಲಜ್ಜ ಚಾರಿತ್ರೇಷ್ವನವಸ್ಥಿತ ।**
**ದರ್ಪಾನ್ಮೃತ್ಯುಮುಪಾದಾಯ ಶೂರೋಽಹಮಿತಿ ಮನ್ಯಸೇ ॥** ೧೪
**ಶೂರೇಣ ಧನದಭ್ರಾತ್ರಾ ಬಲೈಃ ಸಮುದಿತೇನ ಚ ।**
**ಶ್ಲಾಘನೀಯಂ ಯಶಸ್ಯಂ ಚ ಕೃತಂ ಕರ್ಮ ಮಹತ್ತ್ವಯಾ ॥** ೧೫
**ಉತ್ಸೇಕೇನಾಭಿಪನ್ನಸ್ಯ ಗರ್ಹಿತಸ್ಯಾಹಿತಸ್ಯ ಚ ।**
**ಕರ್ಮಣಃ ಪ್ರಾಪ್ನುಹೀದಾನೀಂ ತಸ್ಯಾದ್ಯ ಸುಮಹತ್ ಫಲಮ್ ॥**
**ಶೂರೋಽಹಮಿತಿ ಚಾತ್ಮಾನಮವಗಚ್ಛಸಿ ದುರ್ಮತೇ ।**
**ನೈವ ಲಜ್ಜಾಸ್ತಿ ತೇ ಸೀತಾಂ ಚೋರವದ್ವ್ಯಪಕರ್ಷತಃ ॥** ೧೬

---

ಮಹಾರಣ್ಯದಲ್ಲಿ ನಾನಿಲ್ಲದಾಗ ದೀನಳಾಗಿದ್ದ ವೈದೇಹಿಯನ್ನು ಬಲಾತ್ಕರಿಸಿ ತಂದು, 'ಆಃ ನಾನು ಶೂರ!' ಎಂದುಕೊಳ್ಳುವೆಯಾ? ರಕ್ಷಕರಿಲ್ಲದ ಹೆಂಗಸರ ಮುಂದಲ್ಲವೆ ನಿನ್ನ ಶೌರ್ಯ? ಎಲೈ ಪರದಾರಲಂಪಟ, ಹೇಡಿತನದ ಕೆಟ್ಟಕೆಲಸವನ್ನು ಮಾಡಿ ಶೂರನೆಂದು ತಿಳಿದುಕೊಳ್ಳುವೆಯಾ? (೧೨-೧೩). ಮರ್ಯಾದೆಯನ್ನು ಮೀರಿ ನಡೆಯುವ ನಾಚಿಕೆಗೇಡಿ ನೀನು! ಸದಾಚಾರವನ್ನು ಬದಿಗೊತ್ತಿರುವ ದುಶ್ಶೀಲ ನೀನು! ಸೊಕ್ಕಿನಿಂದ ಮೃತ್ಯುವನ್ನು ಬರಮಾಡಿಕೊಂಡು 'ನಾನೇ ಶೂರ!' ಎಂದು ತಿಳಿದುಕೊಂಡಿದ್ದೀಯೆ (೧೪). ಆಹಾ! ಶೂರಾಗ್ರೇಸರನೂ ಕುಬೇರಸೋದರನೂ ವಿವಿಧಬಲಸಂಪನ್ನನೂ ಆದ ನೀನು ಶ್ಲಾಘನೀಯವಾದ ಕಾರ್ಯವನ್ನು ನೆರವೇರಿಸಿದಂತಾಯಿತು! (ಒಬ್ಬ ಸ್ತ್ರೀಯನ್ನು ಅಪಹರಿಸಿ) ಕೀರ್ತಿಕರವಾದ ಕಾರ್ಯವನ್ನು ಸಾಧಿಸಿದಂತಾಯಿತು! (೧೫). ಎಲೈ ರಾಕ್ಷಸ, ದರ್ಪದಿಂದ ಬೀಗಿ ನಡೆಸಿದ ನಿಂದನೀಯವಾದ ನಿನ್ನ ದುಷ್ಕರ್ಮಕ್ಕೆ ತಕ್ಕುದಾದ ಪುಷ್ಕಳ ಫಲವನ್ನೀಗ ಅನುಭವಿಸು. ಎಲೈ ಅವಿವೇಕಿ, ನೀನು ಶೂರನೆಂದು ಹೇಳಿಕೊಳ್ಳುವೆಯಲ್ಲ, ಕಳ್ಳನಂತೆ ಸೀತೆಯನ್ನಪಹರಿಸಿದ ನಿನಗೆ ಲಜ್ಜೆ

ಯದಿ ಮತ್ಸನ್ನಿಧೌ ಸೀತಾ ಧರ್ಷಿತಾ ಸ್ಯಾತ್ತ್ವಯಾ ಬಲಾತ್ ।
ಭ್ರಾತರಂ ತು ಖರಂ ಪಶ್ಯೇಸ್ತದಾ ಮತ್ಸಾಯಕೈರ್ಹತಃ ॥ ೧೮

ದಿಷ್ಟ್ಯಾಸಿ ಮಮ ದುಷ್ಟಾತ್ಮಂಶ್ಚಕ್ಷುರ್ವಿಷಯಮಾಗತಃ ।
ಅದ್ಯ ತ್ವಾಂ ಸಾಯಕೈಸ್ತೀಕ್ಷ್ಣೈರ್ನಯಾಮಿ ಯಮಸಾದನಮ್ ॥

ಅದ್ಯ ತೇ ಮಚ್ಛರೈಶ್ಛಿನ್ನಂ ಶಿರೋ ಜ್ವಲಿತಕುಂಡಲಮ್ ।
ಕ್ರವ್ಯಾದಾ ವ್ಯಪಕರ್ಷಂತು ವಿಕೀರ್ಣಂ ರಣಪಾಂಸುಷು ॥ ೨೦

ನಿಪತ್ಯೋರಸಿ ಗೃಧ್ರಾಸ್ತೇ ಕ್ಷಿತೌ ಕ್ಷಿಪ್ತಸ್ಯ ರಾವಣ ।
ಪಿಬಂತು ರುಧಿರಂ ತರ್ಷಾಚ್ಛರಶಲ್ಯಾಂತರೋತ್ಥಿತಮ್ ॥ ೨೧

ಅದ್ಯ ಮದ್ಬಾಣಭಿನ್ನಸ್ಯ ಗತಾಸೋಃ ಪತಿತಸ್ಯ ತೇ ।
ಕರ್ಷಂತ್ವಂತ್ರಾಣಿ ಪತಗಾ ಗರುತ್ಮಂತ ಇವೋರಗಾನ್ ॥ ೨೨

ಇತ್ಯೇವಂ ಸಂವದನ್ ವೀರೋ ರಾಮಃ ಶತ್ರುನಿಬರ್ಹಣಃ ।
ರಾಕ್ಷಸೇಂದ್ರಂ ಸಮೀಪಸ್ಥಂ ಶರವರ್ಷೈರವಾಕಿರತ್ ॥ ೨೩

---

ಯಾಗದೆ? (೧೬-೧೭). ನನ್ನೆದುರಿಗೆ ನೀನು ಸೀತೆಯನ್ನು ಕೆಣಕಿದ್ದರೆ, ಆಗಲೇ ನನ್ನ ಸಾಯಕಗಳಿಂದ ಹತನಾಗಿ ನಿನ್ನ ತಮ್ಮನಾದ ಖರನನ್ನು ನೋಡಲು ನೀನು ಹೋಗುತ್ತಿದ್ದೆ! ಇರಲಿ; ಈಗಲಾದರೂ, ಎಲೈ ದುರಾತ್ಮ, ದೈವವಶದಿಂದ ನನ್ನ ಕಣ್ಣಿಗೆ ಗೋಚರಿಸಿದೆ. ಕೂರ್ಗಣೆಗಳಿಂದ ಈಗ, ನಿನ್ನನ್ನು ಯಮಸದನಕ್ಕೆ ದಬ್ಬುವೆನು! (೧೮-೧೯). ನನ್ನ ಶರಗಳಿಂದ ತರಿದುರುಳಿದ ಕುಂಡಲಾಲಂಕೃತವಾದ ನಿನ್ನ ಶಿರವು ಮಣ್ಣಲ್ಲಿ ಹೊರಳಾಡುವುದು. ಮಾಂಸಾಶಿಗಳಾದ ಮೃಗಪಕ್ಷಿಗಳು ಅದನ್ನು ರಣರಂಗದಲ್ಲಿ ಎಳೆದಾಡುವುವು! ಎಲೈ ರಾವಣ, ಹತನಾದ ನೀನು ನೆಲದ ಮೇಲೊರಗಿದಾಗ, ಶರವಿದ್ಧವಾದ ನಿನ್ನ ಎದೆಯಿಂದ ಹೊರಹೊಮ್ಮುವ ನೆತ್ತರನ್ನು ಬಾಯಾರಿದ ಹದ್ದುಗಳು ಎರಗಿಬಂದು ಕುಡಿಯಲಿ! (೨೦-೨೧). ಈ ದಿನ ನನ್ನ ಬಾಣಗಳಿಂದ ನಿರ್ಭಿನ್ನನಾದ ನೀನು ಸತ್ತುಬಿದ್ದಿರಲು, ಗರುಡಪಕ್ಷಿಗಳು ಹಾವುಗಳನ್ನೆಳೆಯುವಂತೆ, ನಿನ್ನ ಕರುಳುಗಳನ್ನು ಗೃಧ್ರಾದಿಪಕ್ಷಿಗಳು ಎಳೆದಾಡುವ ಸಮಯ ಬರುವುದು" ಎಂದನು (೨೨). ಹೀಗೆನ್ನುತ್ತಲೇ ಶತ್ರುನಿಬರ್ಹಣನಾದ ಶ್ರೀರಾಮನು ಎದುರಿಗಿದ್ದ

ಬಭೂವ ದ್ವಿಗುಣಂ ವೀರ್ಯಂ ಬಲಂ ಹರ್ಷಶ್ಚ ಸಂಯುಗೇ ।
ರಾಮಸ್ಯಾಸ್ತ್ರಬಲಂ ಚೈವ ಶತ್ರೋರ್ನಿಧನಕಾಂಕ್ಷಿಣಃ ॥ ೨೪

ಪ್ರಾದುರ್ಬಭೂವುರಸ್ತ್ರಾಣಿ ಸರ್ವಾಣಿ ವಿದಿತಾತ್ಮನಃ ।
ಪ್ರಹರ್ಷಾಚ್ಚ ಮಹಾತೇಜಾಃ ಶೀಘ್ರಹಸ್ತತರೋಽಭವತ್ ॥ ೨೫

ಶುಭಾನ್ಯೇತಾನಿ ಚಿಹ್ನಾನಿ ವಿಜ್ಞಾಯಾತ್ಮಗತಾನಿ ಸಃ ।
ಭೂಯ ಏವಾರ್ದಯದ್ರಾಮೋ ರಾವಣಂ ರಾಕ್ಷಸಾಂತಕೃತ್ ॥ ೨೬

ಹರೀಣಾಂ ಚಾಶ್ಮನಿಕರೈಃ ಶರವರ್ಷೈಶ್ಚ ರಾಘವಾತ್ ।
ಹನ್ಯಮಾನೋ ದಶಗ್ರೀವೋ ವಿಘೂರ್ಣಹೃದಯೋಽಭವತ್ ॥ ೨೭

ಯದಾ ಚ ಶಸ್ತ್ರಂ ನಾರೇಭೇ ನ ವ್ಯಕರ್ಷಚ್ಛರಾಸನಮ್ ।
ನಾಸ್ಯ ಪ್ರತ್ಯಕರೋದ್ವೀರ್ಯಂ ವಿಕ್ಲವೇನಾಂತರಾತ್ಮನಾ ॥ ೨೮

ಕ್ಷಿಪ್ತಾಶ್ಚಾಪಿ ಶರಾಸ್ತೇನ ಶಸ್ತ್ರಾಣಿ ವಿವಿಧಾನಿ ಚ ।
ನ ರಣಾರ್ಥಾಯ ವರ್ತಂತೇ ಮೃತ್ಯುಕಾಲೇಽಭಿವರ್ತತಃ ॥ ೨೯

---

ರಾಕ್ಷಸೇಂದ್ರನನ್ನು ಶರವರ್ಷಗಳಿಂದ ಆಚ್ಛಾದಿಸಿದನು. ವೈರಿಯನ್ನು ವಧಿಸಬೇಕೆಂಬ ನಿರ್ಧಾರದಿಂದ ನಿಂತಿದ್ದ ಶ್ರೀರಾಮನಿಗೆ, ಆ ಸಮಯದಲ್ಲಿ ಬಲಪರಾಕ್ರಮಗಳೂ ಅಸ್ತ್ರಬಲವೂ ರಣೋತ್ಸಾಹವೂ ಇಮ್ಮಡಿಸಿದವು (೨೩-೨೪). ಮಹಾಪ್ರಾಜ್ಞನಾದ ಶ್ರೀರಾಮನಿಗೆ ಆ ಕಾಲದಲ್ಲಿ ಸಮಸ್ತ ಮಂತ್ರಾಸ್ತ್ರಗಳೂ ಸ್ಫುರಿಸಿದವು. ಉತ್ಸಾಹಾತಿಶಯದಿಂದ ಆ ತೇಜಸ್ವಿಯ ಹಸ್ತಲಾಘವವು ವರ್ಧಿಸಿತು. ಈ ಶುಭಚಿಹ್ನೆಗಳು ತನ್ನಲ್ಲಿ ಕಂಡುಬಂದುದನ್ನು ತಾನೇ ಗಮನಿಸಿ, ರಾಕ್ಷಸಾಂತಕನಾದ ಶ್ರೀರಾಮನು ಮತ್ತೆ ಮತ್ತೆ ಶರರಾಶಿಗಳನ್ನು ಹೊಡೆದು ರಾವಣನನ್ನು ಮರ್ದಿಸಿದನು (೨೫-೨೬). ಇತ್ತ ಒಂದೇ ಸಮನಾಗಿ ವಾನರಯೋಧರು ಬಂಡೆಗಳನ್ನೆತ್ತಿ ರಾವಣನ ಮೇಲೆ ಬೀಸುತ್ತಿದ್ದರು. ರಾಘವನು ಶರಗಳ ಮಳೆಗರೆಯುತ್ತಿದ್ದನು. ಏಕಪ್ರಕಾರವಾಗಿ ಅವುಗಳ ಹೊಡೆತಕ್ಕೆ ಸಿಕ್ಕಿದ ರಾವಣನಿಗೆ ಏನುಮಾಡಬೇಕೆಂದು ತೋರದೆ ದಿಗ್ಭ್ರಮೆಹಿಡಿದಂತಾಯಿತು (೨೭). ರಾವಣನ ಅಂತರಾತ್ಮವು ಅಂಜಿತು. ಅವನು ಯಾವ ಪ್ರಬಲವಾದ ಶಸ್ತ್ರವನ್ನೂ ಹಿರಿಯಲಿಲ್ಲ; ಧನುಸ್ಸನ್ನೂ ಬಲವಾಗಿ ಜಗ್ಗಲಿಲ್ಲ. ಶ್ರೀರಾಮನ ಶೌರ್ಯಕ್ಕೆ ತಕ್ಕ ಪ್ರತೀಕಾರವನ್ನು ಕೈಗೊಳ್ಳಲಿಲ್ಲ. ರಾವಣನು ಪ್ರಯೋಗಿಸಿದ

ಸೂತಸ್ತು ರಥನೇತಾಸ್ಯ ತದವಸ್ಥಂ ಸಮೀಕ್ಷ್ಯ ತಮ್ ।
ಶನೈರ್ಯುದ್ಧಾದಸಂಭ್ರಾಂತೋ ರಥಂ ತಸ್ಯಾಪವಾಹಯತ್ ॥ ೩೦

ರಾಮಬಾಣವಿಭಿನ್ನಾಂಗೋ ರಾವಣೋ ರಾಕ್ಷಸೇಶ್ವರಃ ।
ನಿರಸ್ತವಿಕ್ರಮಃ ಸಂಖ್ಯೇ ರಣೇ ಶ್ರಾಂತಃ ಪಪಾತ ಸಃ ॥ ೩೧

ಸೂತಸ್ತು ವ್ಯಥಿತಂ ಬಾಣೈಃ ಸ್ಯಂದನಸ್ಥಂ ನಿರೀಕ್ಷ್ಯ ತಮ್ ।
ತಸ್ಮಾದ್ರಣಾದಪೋವಾಹ ರಾವಣಂ ಹತಪೌರುಷಮ್ ॥ ೩೨

ರಥಂ ಚ ತಸ್ಯಾಥ ಜವೇನ ಸಾರಥಿ-
ರ್ನಿವಾರ್ಯ ಭೀಮಂ ಜಲದಸ್ವನಂ ತದಾ ।
ಜಗಾಮ ಭೀತ್ಯಾ ಸಮರಾನ್ಮಹೀಪತಿಂ
ನಿರಸ್ತವೀರ್ಯಂ ಪತಿತಂ ಸಮೀಕ್ಷ್ಯ ॥ ೩೩

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚೋತ್ತರಶತತಮಃ ಸರ್ಗಃ

---

ಶರಗಳೂ ವಿವಿಧಾಯುಧಗಳೂ ಸಹ, ಅವನಿಗೆ ಮೃತ್ಯುಕಾಲವು ಒದಗಿದ್ದರಿಂದ, ಯುದ್ಧದಲ್ಲಿ ಯಾವ ಫಲವನ್ನೂ ಕೊಡದೆ ವ್ಯರ್ಥವಾದವು (೨೮-೨೯). ಹೀಗೆ ಏನೂ ತೋರದೆ ಮೈಮರೆತಂತಿದ್ದ ರಾವಣನ ಅವಸ್ಥೆಯನ್ನು ಕಂಡು, ಸಾರಥಿಯು ಎದೆಗುಂದದಿದ್ದರೂ ಮೆಲ್ಲಗೆ ಅವನ ರಥವನ್ನು ರಣಭೂಮಿಯಿಂದ ಬೇರೆ ಕಡೆಗೆ ಸಾಗಿಸಿದನು (೩೦). ರಾಕ್ಷಸೇಶ್ವರನ ಸರ್ವಾಂಗಗಳೂ ರಾಘವನ ಬಾಣಗಳಿಂದ ಕತ್ತರಿಸಲ್ಪಟ್ಟಿದ್ದವು. ಅವನ ವಿಕ್ರಮವು ಭಗ್ನವಾಗಿತ್ತು. ರಾವಣನು ಯುದ್ಧದಿಂದ ಅತಿಯಾಗಿ ಬಳಲಿ ಹಾಗೆಯೇ ರಥದಲ್ಲೊರಗಿದನು. ಹೀಗೆ ಬಾಣಪೀಡಿತನಾದ ರಾವಣನು ರಥದಲ್ಲಿ ಹತಪೌರುಷನಾಗಿ ಕಂಗೆಟ್ಟಿರುವುದನ್ನು ನೋಡಿ, ಸಾರಥಿಯು ಅವನನ್ನು ರಣಭೂಮಿಯಿಂದ ಹೊರಗೆ ಕರೆದೊಯ್ದನು (೩೧-೩೨). ರಾಕ್ಷಸರಾಜನು ಭಗ್ನವೀರ್ಯನಾಗಿ ಮೈಮರೆತು ಒರಗಿರುವುದನ್ನು ವೀಕ್ಷಿಸಿ, ಭೀತನಾದ ಸಾರಥಿಯು ಭೀಕರವಾದ ರಾವಣನ ರಥವನ್ನು ಮೇಘದಂತೆ ಗುಡುಗಿಸುತ್ತ ಶೀಘ್ರವಾಗಿ ಬೇರೊಂದುಕಡೆಗೆ ಓಡಿಸಿಕೊಂಡುಹೋದನು (೩೩).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರೈದನೆಯ ಸರ್ಗ

## ಷಡುತ್ತರಶತತಮಃ ಸರ್ಗಃ

### ಸಾರಥಿವಿಜ್ಞೇಯಮ್

ಸ ತು ಮೋಹಾತ್ ಸುಸಂಕ್ರುದ್ಧಃ ಕೃತಾಂತಬಲಚೋದಿತಃ ।
ಕ್ರೋಧಸಂರಕ್ತನಯನೋ ರಾವಣಃ ಸೂತಮಬ್ರವೀತ್ ॥ ೧
ಹೀನವೀರ್ಯಮಿವಾಶಕ್ತಂ ಪೌರುಷೇಣ ವಿವರ್ಜಿತಮ್ ।
ಭೀರುಂ ಲಘುಮಿವಾಸತ್ತ್ವಂ ವಿಹೀನಮಿವ ತೇಜಸಾ ॥ ೨
ವಿಮುಕ್ತಮಿವ ಮಾಯಾಭಿರಸ್ತ್ರೈರಿವ ಬಹಿಷ್ಕೃತಮ್ ।
ಮಾಮವಜ್ಞಾಯ ದುರ್ಬುದ್ಧೇ ಸ್ವಯಾ ಬುದ್ಧ್ಯಾ ವಿಚೇಷ್ಟಸೇ ॥ ೩
ಕಿಮರ್ಥಂ ಮಾಮವಜ್ಞಾಯ ಮಚ್ಛಂದಮನವೇಕ್ಷ್ಯ ಚ ।
ತ್ವಯಾ ಶತ್ರೋಃ ಸಮಕ್ಷಂ ಮೇ ರಥೋಽಯಮುಪವಾಹಿತಃ ॥ ೪
ತ್ವಯಾದ್ಯ ಹಿ ಮಮಾನಾರ್ಯ ಚಿರಕಾಲಸಮಾರ್ಜಿತಮ್ ।
ಯಶೋ ವೀರ್ಯಂ ಚ ತೇಜಶ್ಚ ಪ್ರತ್ಯಯಶ್ಚ ವಿನಾಶಿತಃ ॥ ೫

### ಸರ್ಗ ೧೦೬

ರಥವನ್ನು ಹಿಂದಿರುಗಿಸಿ ತಂದುದಕ್ಕಾಗಿ ರಾವಣನು ಸಾರಥಿಯನ್ನು ಗದರಿಸುವುದು.
ಸಾರಥಿಯು ಕಾರಣವನ್ನು ತಿಳಿಸಿ, ಪುನಃ ರಥವನ್ನು ರಣರಂಗಕ್ಕೆ ತರುವುದು.

ತುಸುಹೊತ್ತಿನಲ್ಲಿಯೇ ರಾವಣನು ಚೇತರಿಸಿಕೊಂಡು, ರಣರಂಗದಿಂದ ರಥವು ದೂರ ಬಂದಿರುವುದನ್ನು ಕಂಡು ಕ್ರುದ್ಧನಾದನು. ಕಾಲಚೋದಿತನಾದ ರಾವಣನು ಕೆಂಗಣ್ಣಿನಿಂದ ಸಾರಥಿಯನ್ನು ನೋಡುತ್ತ "ಎಲಾ ದುಷ್ಟ! ನನ್ನ ರಥವನ್ನು ಹಿಂದಕ್ಕೆ ತಂದೆಯಾ? ನಾನೊಬ್ಬ ವೀರ್ಯಹೀನ, ಅಶಕ್ತ, ಪೌರುಷವಿಲ್ಲದವನು, ಹೇಡಿ, ಅಲ್ಪ, ಸತ್ತ್ವಶೂನ್ಯ, ತೇಜೋರಹಿತ ಎಂಬಂತೆ ವ್ಯವಹರಿಸಿದೆಯಾ? (೧-೨). ಮಾಯಾಶಕ್ತಿಗಳು ನನ್ನಲ್ಲಿ ಮುಗಿದವು, ಮಂತ್ರಾಸ್ತ್ರಗಳು ಗತಿಸಿದವು – ಎಂದು ತಿಳಿದೆಯಾ? ಎಲಾ ಅಯೋಗ್ಯ, ನನ್ನನ್ನು ಲೆಕ್ಕಿಸದೆ ನಿನಗೆ ತೋರಿದಂತೆ ಚೇಷ್ಟೆಮಾಡುವೆಯಾ? ನನ್ನನ್ನು ಗಣಿಸದೆ-ನನ್ನ ಇಷ್ಟವನ್ನರಿಯದೆ, ಶತ್ರುವಿನೆದುರಿಗೇ ನನ್ನ ರಥವನ್ನು ನೀನು ಹಿಂದಕ್ಕೆ ತಂದುದೇಕೆ? (೩-೪). ಚಿರಕಾಲದಿಂದ ನಾನು ಗಳಿಸಿದ ಕೀರ್ತಿಯನ್ನು, ಬಲವನ್ನು, ತೇಜಸ್ಸನ್ನು, ರಣಮಲ್ಲನೆಂಬ

ಶತ್ರೋಃ ಪ್ರಖ್ಯಾತವೀರ್ಯಸ್ಯ ರಂಜನೀಯಸ್ಯ ವಿಕ್ರಮೈಃ ।
ಪಶ್ಯತೋ ಯುದ್ಧಲುಬ್ಧೋಽಹಂ ಕೃತಃ ಕಾಪುರುಷಸ್ತ್ವಯಾ ॥ ೬

ಯಸ್ತ್ವಂ ರಥಮಿಮಂ ಮೋಹಾನ್ನ ಚೋದ್ವಹಸಿ ದುರ್ಮತೇ ।
ಸತ್ಯೋಽಯಂ ಪ್ರತಿತರ್ಕೋ ಮೇ ಪರೇಣ ತ್ವಮುಪಸ್ಕೃತಃ ॥ ೭

ನ ಹಿ ತದ್ವಿದ್ಯತೇ ಕರ್ಮ ಸುಹೃದೋ ಹಿತಕಾಂಕ್ಷಿಣಃ ।
ರಿಪೂಣಾಂ ಸದೃಶಂ ಚೈತನ್ನ ತ್ವಯ್ಯೈತತ್ ಸ್ವನುಷ್ಠಿತಮ್ ॥ ೮

ನಿವರ್ತಯ ರಥಂ ಶೀಘ್ರಂ ಯಾವನ್ನಾಪೈತಿ ಮೇ ರಿಪುಃ ।
ಯದಿ ವಾಧ್ಯುಷಿತೋಽಸಿ ತ್ವಂ ಸ್ಮರ್ಯಂತೇ ಯದಿ ವಾ ಗುಣಾಃ ॥ ೯

ಏವಂ ಪರುಷಮುಕ್ತಸ್ತು ಹಿತಬುದ್ಧಿರಬುದ್ಧಿನಾ ।
ಅಬ್ರವೀದ್ರಾವಣಂ ಸೂತೋ ಹಿತಂ ಸಾನುನಯಂ ವಚಃ ॥ ೧೦

---

ಜನವಿಶ್ವಾಸವನ್ನು–ಥೂ, ಅನಾರ್ಯ! ಒಮ್ಮೆಗೇ ನೀನು ನಾಶಗೊಳಿಸಿಬಿಟ್ಟೆ! ವಿಖ್ಯಾತ ವೀರನಾದ ವೈರಿಯು ಎದುರಿಗೆ ಬಂದು ನಿಂತಿದ್ದಾನೆ; ನನ್ನ ಪರಾಕ್ರಮಗಳಿಂದ ಮೆಚ್ಚಿಸಲು ಅವನು ತಕ್ಕ ಪಾತ್ರನಾಗಿದ್ದಾನೆ! ಅವನೊಡನೆ ಹಣಾಹಣಿಯಾಗಿ ಹೋರಾಡಲು ನಾನು ಆಶಿಸಿದ್ದೆ. ಆತನು ನೋಡುವಾಗಲೇ–ಆತನೆದುರಿಗೇ ನನ್ನನ್ನು ಕಾಪುರುಷನನ್ನಾಗಿ ಮಾಡಿದೆಯಲ್ಲ! (೫–೬). ಎಲಾ ದುರ್ಬುದ್ಧಿಯವನೆ, ಈ ರಥವನ್ನು ರಣಾಭಿಮುಖವಾಗಿ ನೀನು ನಡೆಸದಿರುವುದನ್ನು ನೋಡಿದರೆ, ನನ್ನ ಊಹೆ ದಿಟವಾಗುತ್ತಿದೆ – ವೈರಿಯ ಲಂಚವನ್ನು ನೀನು ತಿಂದಿರಬೇಕು! ನೀನು ಮಾಡಿದ ಕೃತ್ಯವು ಹಿತೈಷಿಗಳಾದ ಮಿತ್ರರು ಮಾಡತಕ್ಕದ್ದಲ್ಲ; ಇದು ವೈರಿಗಳು ಎಸಗುವ ಕೃತ್ಯ. ಈ ಹಗೆತನವನ್ನು ನೀನು ಬಹು ಚೆನ್ನಾಗಿ ನೆರವೇರಿಸಿದೆ! (೭–೮). ಕೂಡಲೇ ನಡೆಸು ನನ್ನ ರಥವನ್ನು ರಣರಂಗಕ್ಕೆ! ಹಗೆಯು ಹೊರಟುಹೋದಾನು! ಸಾರಥಿ, ನನ್ನೊಡನೆ ನೀನು ತೃಪ್ತಿಯಿಂದ ಬಹುಕಾಲ ಬಾಳಿರುವುದು ದಿಟವಾದರೆ–ನಾನು ಮಾಡಿರುವ ಸತ್ಕಾರಗಳ ಸ್ಮರಣೆ ನಿನಗಿದ್ದರೆ, ರಣಾಭಿಮುಖವಾಗಿ ರಥವನ್ನು ದೌಡಾಯಿಸು!" ಎಂದು ಗಜರಿದನು (೯). ಹೀಗೆ ಬುದ್ಧಿಹೀನನಾದ ರಾವಣನು ಕಠೋರವಾಗಿ ಗದರಿಸಿ ಮಾತನಾಡಲು, ಮನಃಪೂರ್ವಕವಾಗಿ ಅವನಿಗೆ ಹಿತವನ್ನು ಕೋರುತ್ತಿದ್ದ

ನ ಭೀತೋಽಸ್ಮಿ ನ ಮೂಢೋಽಸ್ಮಿ ನೋಪಜಪ್ತೋಽಸ್ಮಿ ಶತ್ರುಭಿಃ ।
ನ ಪ್ರಮತ್ತೋ ನ ನಿಃಸ್ನೇಹೋ ವಿಸ್ಮೃತಾ ನ ಚ ಸತ್ಕ್ರಿಯಾ ॥ ೧೧

ಮಯಾ ತು ಹಿತಕಾಮೇನ ಯಶಶ್ಚ ಪರಿರಕ್ಷತಾ ।
ಸ್ನೇಹಪ್ರಸ್ಕನ್ನಮನಸಾ ಪ್ರಿಯಮಿತ್ಯಪ್ರಿಯಂ ಕೃತಮ್ ॥ ೧೨

ನಾಸ್ಮಿನ್ನರ್ಥೇ ಮಹಾರಾಜ ತ್ವಂ ಮಾಂ ಪ್ರಿಯಹಿತೇ ರತಮ್ ।
ಕಶ್ಚಿಲ್ಲಘುರಿವಾನಾರ್ಯೋ ದೋಷತೋ ಗಂತುಮರ್ಹಸಿ ॥ ೧೩

ಶ್ರೂಯತಾಂ ತ್ವಭಿಧಾಸ್ಯಾಮಿ ಯನ್ನಿಮಿತ್ತಂ ಮಯಾ ರಥಃ ।
ನದೀವೇಗ ಇವಾಂಭೋಭಿಃ ಸಂಯುಗೇ ವಿನಿವರ್ತಿತಃ ॥ ೧೪

ಶ್ರಮಂ ತವಾವಗಚ್ಛಾಮಿ ಮಹತಾ ರಣಕರ್ಮಣಾ ।
ನ ಹಿ ತೇ ವೀರ ಸೌಮುಖ್ಯಂ ಪ್ರಹರ್ಷಂ ವೋಪಧಾರಯೇ ॥ ೧೫

---

ಸಾರಥಿಯು ವಿನಯದಿಂದಲೇ ಯುಕ್ತವಾದ ಮಾತನ್ನಾಡಿದನು: "ಮಹಾರಾಜ, ನಾನು ಯುದ್ಧಭೀತನೂ ಅಲ್ಲ, ಬುದ್ಧಿಹೀನನೂ ಅಲ್ಲ, ಶತ್ರುಗಳ ಲಂಚಕ್ಕೆ ಒಳಗಾದವನೂ ಅಲ್ಲ. ನಾನು ದುಡುಕಿನಿಂದಲೂ ನಡೆಯಲಿಲ್ಲ, ರಾಜಭಕ್ತಿಯನ್ನೂ ತೊರೆದಿಲ್ಲ. ನಿನ್ನ ಸತ್ಕಾರಗಳನ್ನು ನಾನು ಮರೆತಿಲ್ಲ (೧೦–೧೧). ನಿನ್ನ ಹಿತೈಷಿಯಾಗಿ, ನಿನ್ನ ಕೀರ್ತಿಯನ್ನು ಉಳಿಸಬೇಕೆಂದು, ನಿನ್ನಲ್ಲಿರುವ ಭಕ್ತ್ಯತಿಶಯದಿಂದ–ಮಹಾರಾಜ, ನಿನಗೆ ಪ್ರಿಯವಾಗಬಹುದೆಂದು ಈ ಅಪ್ರಿಯಕಾರ್ಯವನ್ನು ಮಾಡಿಬಿಟ್ಟೆನು. ಇದಕ್ಕೋಸ್ಕರ, ಮಹಾಪ್ರಭು, ನಿನಗೆ ಪ್ರಿಯವಾದ ಹಿತಕಾರ್ಯದಲ್ಲಿ ನಿರತನಾದ ನನ್ನನ್ನು, ಒಬ್ಬ ಸಾಮಾನ್ಯನಾದ ಅನಾರ್ಯಪುರುಷನಂತೆ ದುಷ್ಟನೆಂದು ತಿಳಿಯಬೇಡ (೧೨–೧೩). ನಾನು ರಥವನ್ನು ಏಕೆ ಹಿಂದಿರುಗಿಸಿ ತಂದೆನೆಂಬುದನ್ನು ಹೇಳುವೆನು, ಕೇಳೋಣವಾಗಲಿ: ಸಮುದ್ರದಲ್ಲಿ ಜಲಪ್ರವಾಹವು ಉಕ್ಕಿದಾಗ ನದೀವೇಗವು ಹಿಮ್ಮುಖವಾಗುವುದಷ್ಟೆ. ಹಾಗೆ ರಣರಂಗದಿಂದ ರಥವನ್ನು ನಾನು ಹಿಂದಿರುಗಿಸಿದೆನು! (೧೪). ಸಂಗ್ರಾಮದಲ್ಲಿ ಹೋರಾಡಿ ಹೋರಾಡಿ ನಿನಗೆ ಆಯಾಸವಾಗಿದೆಯೆಂದು ನನಗೆ ತೋರಿತು. ವೀರಾಗ್ರೇಸರ, ನಿನ್ನ ಮುಖದಲ್ಲಿ ಪ್ರಸನ್ನತೆ

ರಥೋದ್ವಹನಖಿನ್ನಾಶ್ಚ ತ ಇಮೇ ರಥವಾಜಿನಃ ।
ದೀನಾ ಘರ್ಮಪರಿಶ್ರಾಂತಾ ಗಾವೋ ವರ್ಷಹತಾ ಇವ ॥ ೧೬

ನಿಮಿತ್ತಾನಿ ಚ ಭೂಯಿಷ್ಠಂ ಯಾನಿ ಪ್ರಾದುರ್ಭವಂತಿ ನಃ ।
ತೇಷು ತೇಷ್ವಭಿಪನ್ನೇಷು ಲಕ್ಷಯಾಮ್ಯಪ್ರದಕ್ಷಿಣಮ್ ॥ ೧೭

ದೇಶಕಾಲೌ ಚ ವಿಜ್ಞೇಯೌ ಲಕ್ಷ್ಮಣಾನೀಂಗಿತಾನಿ ಚ ।
ದೈನ್ಯಂ ಖೇದಶ್ಚ ಹರ್ಷಶ್ಚ ರಥಿನಶ್ಚ ಬಲಾಬಲಮ್ ॥ ೧೮

ಸ್ಥಲನಿಮ್ನಾನಿ ಭೂಮೇಶ್ಚ ಸಮಾನಿ ವಿಷಮಾಣಿ ಚ ।
ಯುದ್ಧಕಾಲಶ್ಚ ವಿಜ್ಞೇಯಃ ಪರಸ್ಯಾಂತರದರ್ಶನಮ್ ॥ ೧೯

ಉಪಯಾನಾಪಯಾನೇ ಚ ಸ್ಥಾನಂ ಪ್ರತ್ಯಪಸರ್ಪಣಮ್ ॥
ಸರ್ವಮೇತದ್ರಥಸ್ಥೇನ ಜ್ಞೇಯಂ ರಥಕುಟುಂಬಿನಾ ॥ ೨೦

---

ಯಾಗಲಿ ಉತ್ಸಾಹವಾಗಲಿ ನನಗೆ ಕಾಣಲಿಲ್ಲ. ಅಲ್ಲದೆ ನಿನ್ನ ಈ ರಥಾಶ್ವಗಳು ರಥವನ್ನೆಳೆದೆಳೆದು ದಣಿದಿದ್ದವು. ಬಿಸಿಲಲ್ಲಿ ಬಳಲಿ ಬತ್ತಿ, ಜಡಿಮಳೆಗೆ ಸಿಕ್ಕಿದ ಗೋವುಗಳಂತೆ ಮುಂಗಾಣದಿದ್ದವು (೧೫-೧೬). ಇದರಮೇಲೆ, ಪದೇ ಪದೇ ಒದಗುತ್ತಿದ್ದ ಶಕುನಗಳೆಲ್ಲವೂ ನಮಗೆ ಪ್ರತಿಕೂಲವಾಗಿಯೇ ಗೋಚರಿಸಿದವು. ಮಹಾರಾಜ, ಸಾರಥಿಯಾದವನು ದೇಶಕಾಲಗಳನ್ನೂ, ಶುಭಾಶುಭ ನಿಮಿತ್ತಗಳನ್ನೂ, ಸ್ವಾಮಿಯ ಇಂಗಿತಗಳನ್ನೂ ಗಮನಿಸಬೇಕು. ಆತನ ಅನುತ್ಸಾಹ, ಖೇದ, ಹರ್ಷ, ಬಲ, ದೌರ್ಬಲ್ಯಗಳನ್ನು ಲಕ್ಷ್ಯದಲ್ಲಿ ಇಟ್ಟಿರಬೇಕು (೧೭-೧೮). ಅಲ್ಲದೆ ರಥವನ್ನು ನಡೆಸುವ ಸ್ಥಳವು ಹಳ್ಳವಾಗಿದೆಯೆ, ಸಮವಾಗಿದೆಯೆ, ಅಲ್ಲಿ ಏರುತಗ್ಗುಗಳಿವೆಯೆ, ಯುದ್ಧಕಾಲವಾವುದು-ಎಂಬುದನ್ನು ನೆನಪಿನಲ್ಲಿಟ್ಟಿರಬೇಕು. ಶತ್ರುವಿನಲ್ಲಿರುವ ನ್ಯೂನತೆ ಯಾವುದು ಎಂಬುದನ್ನು ನೋಡುತ್ತಿರಬೇಕು (೧೯). ಮತ್ತು ಯಾವಾಗ ಎದುರಾಳಿಯ ಬಳಿಗೆ ರಥವನ್ನು ನುಗ್ಗಿಸಬೇಕು, ಯಾವಾಗ ಹಿಂದಿರುಗಿಸಬೇಕು, ಧೈರ್ಯದಿಂದ ಯಾವಾಗ ಎದುರು ನಿಲ್ಲಬೇಕು, ಯಾವಾಗ ಹಿಂದಕ್ಕೆ ಸರಿಯುತ್ತ ಹೋಗಬೇಕು – ಎಂಬುದೆಲ್ಲವನ್ನೂ ರಥದಲ್ಲಿ ಕುಳಿತಿರುವ ಸಾರಥಿಯು ಚೆನ್ನಾಗಿ ಅರಿತಿರಬೇಕಾಗುತ್ತದೆ (೨೦).

ತವ ವಿಶ್ರಮಹೇತೋಶ್ಚ ತಥೈಷಾಂ ರಥವಾಜಿನಾಮ್ ।
ರೌದ್ರಂ ವರ್ಜಯತಾ ಖೇದಂ ಕ್ಷಮಂ ಕೃತಮಿದಂ ಮಯಾ ॥ ೨೧

ನ ಮಯಾ ಸ್ವೇಚ್ಛಯಾ ವೀರ ರಥೋಽಯಮಪವಾಹಿತಃ ।
ಭರ್ತೃಸ್ನೇಹಪರೀತೇನ ಮಯೇದಂ ಯತ್ಕೃತಂ ವಿಭೋ ॥ ೨೨

ಆಜ್ಞಾಪಯ ಯಥಾ ತತ್ತ್ವಂ ವಕ್ಷ್ಯಸ್ಯರಿನಿಷೂದನ ।
ತತ್ಕರಿಷ್ಯಾಮ್ಯಹಂ ವೀರ ಗತಾನೃಣ್ಯೇನ ಚೇತಸಾ ॥ ೨೩

ಸಂತುಷ್ಟಸ್ತೇನ ವಾಕ್ಯೇನ ರಾವಣಸ್ತಸ್ಯ ಸಾರಥೇಃ ।
ಪ್ರಶಸ್ಯೈನಂ ಬಹುವಿಧಂ ಯುದ್ಧಲುಬ್ಧೋಽಬ್ರವೀದಿದಮ್ ॥ ೨೪

ರಥಂ ಶೀಘ್ರಮಿಮಂ ಸೂತ ರಾಘವಾಭಿಮುಖಂ ಕುರು ।
ನಾಹತ್ವಾ ಸಮರೇ ಶತ್ರೂನ್ನಿವರ್ತಿಷ್ಯತಿ ರಾವಣಃ ॥ ೨೫

ಏವಮುಕ್ತ್ವಾ ತತಸ್ತುಷ್ಟೋ ರಾವಣೋ ರಾಕ್ಷಸೇಶ್ವರಃ ।
ದದೌ ತಸ್ಮೈ ಶುಭಂ ಹ್ಯೇಕಂ ಹಸ್ತಾಭರಣಮುತ್ತಮಮ್ ॥ ೨೬

ಶ್ರುತ್ವಾ ರಾವಣವಾಕ್ಯಂ ತು ಸಾರಥಿಃ ಸಂನ್ಯವರ್ತತ ॥

---

ಮಹಾಪ್ರಭು, ನಿನಗೂ ರಥಾಶ್ವಗಳಿಗೂ ವಿಶ್ರಾಂತಿ ದೊರೆಯಲೆಂದೂ ನಿಮ್ಮ ದುಸ್ಸಹವಾದ ಆಯಾಸವನ್ನು ಪರಿಹರಿಸಬೇಕೆಂದೂ ಆಲೋಚಿಸಿ, ಇದೇ ಸರಿಯಾದುದೆಂದು ತಿಳಿದು, ನಾನು ಹೀಗೆ ಮಾಡಿದೆನು (೨೧). ಸ್ವೇಚ್ಛೆಯಾಗಿ ದುಡುಕಿ ನಾನು ರಥವನ್ನು ಹಿಂದಕ್ಕೆ ತರಲಿಲ್ಲ. ಪ್ರಭು, ನಾನು ಮಾಡಿದ್ದು ಸ್ವಾಮಿಭಕ್ತಿಯಿಂದಲೇ ಹೊರತು ಬೇರೆಯಲ್ಲ. ಶತ್ರುಸೂದನ-ವೀರಾಗ್ರೇಸರ, ನೀನು ಯಾವುದನ್ನು ಆಜ್ಞಾಪಿಸುವೆಯೋ ಅದನ್ನು ಮಾಡುವೆನು. ನಾನು ತಿಂದ ಉಪ್ಪಿನ ಋಣವನ್ನು ತೀರಿಸಬೇಕೆಂಬ ಶ್ರದ್ಧೆಯಿಂದ ನಿನ್ನ ಆಜ್ಞೆಯನ್ನು ಪಾಲಿಸುವೆನು" ಎಂದು ಅರಿಕೆಮಾಡಿದನು (೨೨-೨೩). ಸಾರಥಿಯ ಹೇಳಿಕೆಯಿಂದ ರಾವಣನು ಸಂತುಷ್ಟನಾದನು. ಅವನನ್ನು ಬಹುವಿಧದಲ್ಲಿ ಹೊಗಳಿ, ರಣೋತ್ಸುಕನಾದ ರಾವಣನು "ಸಾರಥಿ, ರಾಮನಿಗೆ ಅಭಿಮುಖವಾಗಿ ನಮ್ಮ ರಥವನ್ನು ಓಡಿಸು. ಯುದ್ಧರಂಗಕ್ಕೆ ಇಳಿದಮೇಲೆ, ಶತ್ರುಗಳನ್ನು ಕೊಲ್ಲದೆ ರಾವಣನು ಹಿಂದಿರುಗತಕ್ಕವನಲ್ಲ!" ಎಂದನು (೨೪-೨೫). ಅಲ್ಲದೆ ಸಂಪ್ರೀತನಾದ ಆ ರಾಕ್ಷಸೇಶ್ವರನು

ತತೋ ದ್ರುತಂ ರಾವಣವಾಕ್ಯಚೋದಿತಃ
ಪ್ರಚೋದಯಾಮಾಸ ಹಯಾನ್ ಸ ಸಾರಥಿಃ ।
ಸ ರಾಕ್ಷಸೇಂದ್ರಸ್ಯ ತತೋ ಮಹಾರಥಃ
ಕ್ಷಣೇನ ರಾಮಸ್ಯ ರಣಾಗ್ರತೋಽಭವತ್ ॥ ೨೭

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಡುತ್ತರಶತತಮಃ ಸರ್ಗಃ



ಸುಂದರವೂ ಅಮೂಲ್ಯವೂ ಆದ ಒಂದು ಹಸ್ತಾಭರಣವನ್ನು ತೆಗೆದು, ಸಾರಥಿಗೆ ಬಹುಮಾನವಾಗಿ ಕೊಟ್ಟನು. ರಾವಣಾಜ್ಞೆಯಂತೆ ಸಾರಥಿಯು ರಣಭೂಮಿಯ ಕಡೆಗೆ ತಿರುಗಿದನು (೨೬). ರಾವಣನ ಆದೇಶದಂತೆ ಆ ಸಾರಥಿಯು ಅಶ್ವಗಳನ್ನು ಯುದ್ಧಭೂಮಿಗೆ ದೌಡಾಯಿಸಿದನು. ಕ್ಷಣಮಾತ್ರದಲ್ಲಿ ರಾಕ್ಷಸೇಂದ್ರನ ಮಹಾರಥವು ಶ್ರೀರಾಮನಿಗೆ ಅಭಿಮುಖವಾಗಿ ಬಂದು ನಿಂತಿತು ! (೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಾರನೆಯ ಸರ್ಗ



## ಸಪ್ತೋತ್ತರಶತತಮಃ ಸರ್ಗಃ

### ಆದಿತ್ಯಹೃದಯಮ್

ತತೋ ಯುದ್ಧಪರಿಶ್ರಾಂತಂ ಸಮರೇ ಚಿಂತಯಾ ಸ್ಥಿತಮ್ ।
ರಾವಣಂ ಚಾಗ್ರತೋ ದೃಷ್ಟ್ವಾ ಯುದ್ಧಾಯ ಸಮುಪಸ್ಥಿತಮ್ ॥ ೧

ದೈವತೈಶ್ಚ ಸಮಾಗಮ್ಯ ದ್ರಷ್ಟುಮಭ್ಯಾಗತೋ ರಣಮ್ ।
ಉಪಾಗಮ್ಯಾಬ್ರವೀದ್ರಾಮಮಗಸ್ತ್ಯೋ ಭಗವಾನೃಷಿಃ ॥ ೨

ರಾಮ ರಾಮ ಮಹಾಬಾಹೋ ಶೃಣು ಗುಹ್ಯಂ ಸನಾತನಮ್ ।
ಯೇನ ಸರ್ವಾನರೀನ್ ವತ್ಸ ಸಮರೇ ವಿಜಯಿಷ್ಯಸಿ ॥ ೩

ಆದಿತ್ಯಹೃದಯಂ ಪುಣ್ಯಂ ಸರ್ವಶತ್ರುವಿನಾಶನಮ್ ।
ಜಯಾವಹಂ ಜಪೇನ್ನಿತ್ಯಮಕ್ಷಯ್ಯಂ ಪರಮಂ ಶಿವಮ್ ॥ ೪

### ಸರ್ಗ ೧೦೭

ಅಗಸ್ತ್ಯಮುನಿಗಳು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಿಸುವುದು.
ಅದನ್ನು ಜಪಿಸಿದುದರಿಂದ ಸೂರ್ಯನು ಪ್ರಸನ್ನನಾಗುವುದು.

ಯುದ್ಧಮಾಡಿ ಬಳಲಿದ ಶ್ರೀರಾಮನು ರಾವಣನನ್ನು ಜಯಿಸುವ ಬಗೆ ಯಾವುದೆಂದು ಆಲೋಚಿಸುತ್ತ ರಣಭೂಮಿಯಲ್ಲಿ ನಿಂತಿದ್ದನು. ಅಷ್ಟರಲ್ಲಿ ರಾವಣನು ಯುದ್ಧಾಭಿಮುಖನಾಗಿ ಎದುರಿಗೆ ಬರುತ್ತಿದ್ದನು. ಆ ಮಹಾಯುದ್ಧವನ್ನು ನೋಡಲು ಬಂದು ದೇವತೆಗಳೊಡನೆ ನಿಂತಿದ್ದ ಭಗವಾನ್ ಅಗಸ್ತ್ಯಮುನಿಗಳು ಅದೆಲ್ಲವನ್ನೂ ಸಮೀಕ್ಷಿಸಿ ಶ್ರೀರಾಮನ ಬಳಿಗೆ ಬಂದರು (೧–೨). ಅವರು ಶ್ರೀರಾಮನನ್ನು ನೋಡಿ ಹೀಗೆಂದರು: "ರಾಮ, ರಾಮ, ಮಹಾಬಾಹು, ಸನಾತನವಾದ ಒಂದು ರಹಸ್ಯಮಂತ್ರವನ್ನು ಉಪದೇಶಿಸುವೆನು, ಕೇಳು. ವತ್ಸ, ಅದನ್ನು ಜಪಿಸುವುದರಿಂದ ನೀನು ಸಮಸ್ತ ಶತ್ರುಗಳನ್ನೂ ಗೆಲ್ಲಬಹುದು (೩). ಸರ್ವಶತ್ರುವಿನಾಶಕವೂ ಪುಣ್ಯಕರವೂ ಆದ ಈ ಮಂತ್ರಕ್ಕೆ ಆದಿತ್ಯಹೃದಯವೆಂದು ಹೆಸರು. ಇದು ಕಾರ್ಯಸಿದ್ಧಿಪ್ರದವೂ ಅಕ್ಷಯಫಲವನ್ನು ಕೊಡತಕ್ಕದ್ದೂ ಪರಮಪಾವನವೂ

ಸರ್ವಮಂಗಲಮಾಂಗಲ್ಯಂ ಸರ್ವಪಾಪಪ್ರಣಾಶನಮ್ ।
ಚಿಂತಾಶೋಕಪ್ರಶಮನಮಾಯುರ್ವರ್ಧನಮುತ್ತಮಮ್ ॥ ೫

ರಶ್ಮಿಮಂತಂ ಸಮುದ್ಯಂತಂ ದೇವಾಸುರನಮಸ್ಕೃತಮ್ ।
ಪೂಜಯಸ್ವ ವಿವಸ್ವಂತಂ ಭಾಸ್ಕರಂ ಭುವನೇಶ್ವರಮ್ ॥ ೬

ಸರ್ವದೇವಾತ್ಮಕೋ ಹ್ಯೇಷ ತೇಜಸ್ವೀ ರಶ್ಮಿಭಾವನಃ ।
ಏಷ ದೇವಾಸುರಗಣಾನ್ ಲೋಕಾನ್ ಪಾತಿ ಗಭಸ್ತಿಭಿಃ ॥ ೭

ಏಷ ಬ್ರಹ್ಮಾ ಚ ವಿಷ್ಣುಶ್ಚ ಶಿವಃ ಸ್ಕಂದಃ ಪ್ರಜಾಪತಿಃ ।
ಮಹೇಂದ್ರೋ ಧನದಃ ಕಾಲೋ ಯಮಃ ಸೋಮೋ ಹ್ಯಪಾಂಪತಿಃ

ಪಿತರೋ ವಸವಃ ಸಾಧ್ಯಾ ಹ್ಯಶ್ವಿನೌ ಮರುತೋ ಮನುಃ ।
ವಾಯುರ್ವಹ್ನಿಃ ಪ್ರಜಾಪ್ರಾಣ ಋತುಕರ್ತಾ ಪ್ರಭಾಕರಃ ॥ ೯

---

ಆಗಿದೆ. ಇದನ್ನು ನಿತ್ಯವೂ ಜಪಿಸಬೇಕು (೪). ಈ ಆದಿತ್ಯಹೃದಯವು ಸರ್ವಮಂಗಲಮಾಂಗಲ್ಯವೂ ಸರ್ವಪಾಪಪ್ರಣಾಶನವೂ ಆಗಿದೆ. ಚಿಂತಾ ಶೋಕಗಳನ್ನು ನೀಗಿಸುತ್ತದೆ. ಆಯುರ್ವೃದ್ಧಿಕರವಾದ ಉತ್ತಮ ಮಂತ್ರ ವಿದು (೫). ರಶ್ಮಿಯುಕ್ತನಾಗಿ ಪ್ರತಿದಿನವೂ ಉದಯಿಸುವ ದೇವಾಸುರ ವಂದಿತನೂ ಭಾಸ್ಕರನೂ ಭುವನೇಶ್ವರನೂ ಆದ ಸೂರ್ಯದೇವನನ್ನು ನೀನು ಪೂಜಿಸು. (ಆದಿತ್ಯಹೃದಯದ ಮಂತ್ರದೇವತೆಯಾದ ಸೂರ್ಯನು) ಸರ್ವದೇವಾತ್ಮಕನೂ ತೇಜಸ್ವಿಯೂ ಆಗಿ ತನ್ನ ರಶ್ಮಿಗಳಿಂದ ಜನರಿಗೆ ಶ್ರೇಯಸ್ಸನ್ನುಂಟುಮಾಡುತ್ತಾನೆ. ತನ್ನ ಕಿರಣಗಳಿಂದ ಭಕ್ತರಾದ ದೇವಾಸುರರನ್ನೂ ಸಮಸ್ತಲೋಕಗಳನ್ನೂ ರಕ್ಷಿಸುತ್ತಾನೆ (೬-೭). ಬ್ರಹ್ಮ, ವಿಷ್ಣು, ಶಿವ, ಸ್ಕಂದ, ಪ್ರಜಾಪತಿಗಳು, ಇಂದ್ರ, ಕುಬೇರ, ಕಾಲ, ಯಮ, ಚಂದ್ರ, ವರುಣ, ಪಿತೃದೇವತೆಗಳು, ವಸುಗಳು, ಸಾಧ್ಯರು, ಅಶ್ವಿನೀದೇವತೆಗಳು, ಮರುತ್ತುಗಳು, ಮನು, ವಾಯು, ವಹ್ನಿ, ಪ್ರಜೆಗಳ ಪ್ರಾಣವಾಯು, ಋತುನಿಯಾಮಕನಾದ ಸೂರ್ಯ—ಎಲ್ಲರೂ

**ಆದಿತ್ಯಃ ಸವಿತಾ ಸೂರ್ಯಃ ಖಗಃ ಪೂಷಾ ಗಭಸ್ತಿಮಾನ್ ।**
**ಸುವರ್ಣಸದೃಶೋ ಭಾನುಃ ಸ್ವರ್ಣರೇತಾ ದಿವಾಕರಃ ॥ ೧೦**
**ಹರಿದಶ್ವಃ ಸಹಸ್ರಾರ್ಚಿಃ ಸಪ್ತಸಪ್ತಿರ್ಮರೀಚಿಮಾನ್ ।**
**ತಿಮಿರೋನ್ಮಥನಃ ಶಂಭುಸ್ತ್ವಷ್ಟಾ ಮಾರ್ತಂಡ ಅಂಶುಮಾನ್ ॥ ೧೧**

---

ಈತನೇ* (೮-೯). ದೇವ, ನೀನು ಸರ್ವ ವಿಷಯಗಳನ್ನು ಭೋಗಿಸತಕ್ಕವನು (ಆದತ್ತೇ ಸರ್ವಂ), ಅದಿತಿಯ ಪುತ್ರನಾಗಿ ಅವತರಿಸಿದವನು, ಭೂಮಿಗೆ ಒಡೆಯನು (ಅದಿತೇಃ ಭೂಮೇಃ ಈಶ್ವರಃ). ಜಗತ್ತನ್ನು ಸೃಷ್ಟಿಸಿದವನು. ಜನರನ್ನು ಕರ್ತವ್ಯದಲ್ಲಿ ಪ್ರೇರಿಸುವವನು. ಆಕಾಶದಲ್ಲಿ ಸಂಚರಿಸತಕ್ಕವನು. ವೃಷ್ಟಿಯಿಂದ ಲೋಕವನ್ನು ಪೋಷಿಸತಕ್ಕವನು. ಪ್ರಶಸ್ತವಾದ ಕಿರಣವುಳ್ಳವನು. ಚಿನ್ನದಂತೆ ಹೊಳೆಯುವವನು. ಸರ್ವ ಪ್ರಕಾಶಕನು. ಹಿರಣ್ಮಯವಾದ ಬ್ರಹ್ಮಾಂಡವನ್ನು ಸೃಜಿಸಿದವನು. ಪ್ರಕಾಶಮಯವಾದ ಹಗಲನ್ನು ಉಂಟುಮಾಡತಕ್ಕವನು. ನಿನಗೆ ನಮಸ್ಕಾರ (೧೦). ಹಸುರುಬಣ್ಣದ ಅಶ್ವಗಳನ್ನುಳ್ಳವನು, ದಿಕ್ಕುಗಳನ್ನು ವ್ಯಾಪಿಸುವವನು (ಹರಿತಃ ದಿಶಃ ಅಶ್ನೋತಿ ವ್ಯಾಪ್ನೋತಿ). ಸಾವಿರಾರು ಕಿರಣಗಳುಳ್ಳವನು. ಏಳು ಅಶ್ವಗಳುಳ್ಳವನು, ಏಳು ಬಗೆಯ ಕಿರಣಗಳುಳ್ಳವನು (ಸಪ್ತಿಃ=ಅಶ್ವಃ), 'ಸಪ್ತ' ಎಂಬ ಅಶ್ವವುಳ್ಳವನು, ಏಳು ಬಗೆಯಾದ ಒಂದೇ ಕಿರಣವುಳ್ಳವನು (ಏಕೋ ಅಶ್ವೋ ವಹತಿ ಸಪ್ತನಾಮಾ). ಪ್ರಕಾಶಮಯವಾದ ಕಿರಣವುಳ್ಳವನು. ಕತ್ತಲೆಯನ್ನು ನಾಶಮಾಡತಕ್ಕವನು. ಸುಖಕ್ಕೆ ಕಾರಣನಾದವನು. ದುಃಖನಾಶಕನು. ಬ್ರಹ್ಮಾಂಡವು

---

* 'ಸರ್ವದೇವಾತ್ಮಕಃ' (ಶ್ಲೋ. ೭) ಎಂಬುದರಿಂದ 'ಲೋಕಸಾಕ್ಷಿಣೇ' (ಶ್ಲೋ. ೨೧) ಎಂಬಲ್ಲಿಯವರೆಗೆ ಮಾತ್ರವೇ 'ಆದಿತ್ಯಹೃದಯ'ವೆಂದು ಶ್ರೀ ಮಹೇಶ್ವರತೀರ್ಥರು ಹೇಳುತ್ತಾರೆ. ಅಲ್ಲಿಗೆ ಒಟ್ಟು ೧೦೮ ನಾಮಗಳಾಗುತ್ತವೆ. 'ಆದಿತ್ಯಃ ಸವಿತಾ' (ಶ್ಲೋ. ೧೦) ಎಂಬುದರಿಂದ 'ಲೋಕಸಾಕ್ಷಿಣೇ' ಎಂದು ಮುಗಿಯುವ ೧೨ ಶ್ಲೋಕಗಳು ಮಾತ್ರವೆಂದು ಶ್ರೀ ಗೋವಿಂದರಾಜರು ಬರೆಯುತ್ತಾರೆ. ನಮ್ಮಂಥವರಿಗೆ ಈ ಸರ್ಗವು ಪೂರ್ತಿಯಾಗಿ ಪಠಿಸುವ ಸ್ತೋತ್ರವಾಗುತ್ತದೆ. 'ರಶ್ಮಿಮಂತಂ' (ಶ್ಲೋ. ೬) ಎಂಬ ಶಬ್ದದಿಂದ 'ರವಿಃ, ಪ್ರಭುಃ' ಎಂಬಲ್ಲಿಯವರೆಗೆ 'ನಮಃ' ಎಂಬ ಶಬ್ದವನ್ನು ಸೇರಿಸಿ ಸೂರ್ಯನ ನಮಸ್ಕಾರ ಮತ್ತು ಅರ್ಚನೆಗೆ ಉಪಯೋಗಿಸುತ್ತಾರೆ: 'ರಶ್ಮಿಮತೇ ನಮಃ', 'ಸಮುದ್ಯತೇ ನಮಃ' ಇತ್ಯಾದಿ.

**ಹಿರಣ್ಯಗರ್ಭಃ ಶಿಶಿರಸ್ತಪನೋ ಭಾಸ್ಕರೋ ರವಿಃ ।**
**ಅಗ್ನಿಗರ್ಭೋಽದಿತೇಃ ಪುತ್ರಃ ಶಂಖಃ ಶಿಶಿರನಾಶನಃ ॥** ೧೨
**ವ್ಯೋಮನಾಥಸ್ತಮೋಭೇದೀ ಋಗ್ಯಜುಃಸಾಮಪಾರಗಃ ।**
**ಘನವೃಷ್ಟಿರಪಾಂ ಮಿತ್ರೋ ವಿಂಧ್ಯವೀಥೀಪ್ಲವಂಗಮಃ ॥** ೧೩

ಲಯವಾದಾಗ ಅದನ್ನು ಸೃಜಿಸುವುದಕ್ಕಾಗಿ ಉದ್ಭವಿಸಿದವನು (ಮೃತೇ ಅಂಡೇ ಜಾತಃ). ಸರ್ವವ್ಯಾಪಿಯಾದ ಕಿರಣಗಳುಳ್ಳವನು. ನಿನಗೆ ನಮಸ್ಕಾರ (೧೧). ಹಿರಣ್ಮಯವಾದ ಬ್ರಹ್ಮಾಂಡಕ್ಕೆ ಗರ್ಭಭೂತನಾದವನು*. ಹಿತರಮಣೀಯವಾದ ಅಂತಃಕರಣವುಳ್ಳವನು (ಹಿತರಮಣೀಯ=ಹಿರಣ್ಮಯ, ಗರ್ಭ=ಅಂತಃಕರಣ). ಶೀತಲವಾಗಿರುವವನು-ಸುಖಸ್ವರೂಪ. ಬಿಸಿಲಿನಿಂದ ತಾಪಗೊಳಿಸುವವನು (ತಪ=ಸಂತಾಪೇ). ಸರ್ವೈಶ್ವರ್ಯಸಂಪನ್ನ (ತಪ=ಐಶ್ವರ್ಯೇ). ಪ್ರಕಾಶವನ್ನು ಕೊಡತಕ್ಕವನು. ಸ್ತುತಿಸಲ್ಪಡತಕ್ಕವನು (ರೂಯತೇ ಇತಿ ರವಿಃ, ರು=ಶಬ್ದೇ). ಹಿರಣ್ಯಗರ್ಭಾದಿಗಳಿಗೆ ಉಪದೇಶಕ (ರೌತಿ=ಉಪದಿಶತಿ). ಅಗ್ನಿಯನ್ನು ಗರ್ಭದಲ್ಲಿ ಧರಿಸಿದವನು (ಉದ್ಯಂತಂ ವಾವಾದಿತ್ಯಮಗ್ನಿರನುಸಮಾರೋಹತಿ). ಅದಿತಿಯ ಪುತ್ರ, ಬ್ರಹ್ಮವಿದ್ಯೆಯಿಂದ ಲಭ್ಯನಾದ್ದರಿಂದ ಅದಿತಿಪುತ್ರ (ಅದಿತಿ=ಬ್ರಹ್ಮವಿದ್ಯೆ). ಸಾಯಂಕಾಲದಲ್ಲಿ ತಾನಾಗಿ ಶಾಂತನಾಗುವವನು (ಶಮೋಃ ಖಃ). ಆನಂದ ಮತ್ತು ಆಕಾಶಸ್ವರೂಪ (ಶಂ ಚ ಖಂ ಚ). ಹಿಮವನ್ನು ಮತ್ತು ಜಾಡ್ಯವನ್ನು ನಾಶಮಾಡತಕ್ಕವನು. ನಿನಗೆ ನಮಸ್ಕಾರ (೧೨). ಹೇ ದೇವ, ನೀನು ಗಗನದ ಒಡೆಯ. ಕತ್ತಲೆಯನ್ನು ನಾಶಮಾಡುವವನು. ಋಗ್ಯಜುಃಸಾಮವೇದಗಳ ಪಾರವನ್ನು ಕಂಡವನು (ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ). ದೊಡ್ಡ ಮಳೆಯನ್ನು ಸುರಿಸಲು ಕಾರಣನು (ಆದಿತ್ಯಾಜ್ಜಾಯತೇ ವೃಷ್ಟಿಃ). ನೀರಿಗೆ ಮಿತ್ರನಾದವನು—ನೀರನ್ನು ಉತ್ಪಾದಿಸುವವನು. ವಿಂಧ್ಯವೀಥಿಯೆಂಬ ಸೂರ್ಯಮಾರ್ಗದಲ್ಲಿ ಶೀಘ್ರವಾಗಿ ಸಂಚರಿಸುವವನು. ವಿಂಧ್ಯ=ಗಹನವಾದ, ವೀಥೀ=ಸುಷುಮ್ನಾನಾಡೀಮಾರ್ಗದಲ್ಲಿ ಶೀಘ್ರವಾಗಿ ಸಂಚರಿಸುವವನು. ನಿನಗೆ ನಮಸ್ಕಾರ (೧೩).

*** 'ಭಗವತೇ ಹಿರಣ್ಯಗರ್ಭಾಯ ನಮಃ' ಎಂಬ ದ್ವಾದಶಾಕ್ಷರೀ ಮಂತ್ರವು ಆದಿತ್ಯಹೃದಯದ ರಹಸ್ಯವೆಂದು ಕತಕವ್ಯಾಖ್ಯಾನದಲ್ಲಿ ಬರೆದಿದೆ.**

**ಆತಪೀ ಮಂಡಲೀ ಮೃತ್ಯುಃ ಪಿಂಗಲಃ ಸರ್ವತಾಪನಃ ।**
**ಕವಿರ್ವಿಶ್ವೋ ಮಹಾತೇಜಾ ರಕ್ತಃ ಸರ್ವಭವೋದ್ಭವಃ ॥** ೧೪

**ನಕ್ಷತ್ರಗ್ರಹತಾರಾಣಾಮಧಿಪೋ ವಿಶ್ವಭಾವನಃ ।**
**ತೇಜಸಾಮಪಿ ತೇಜಸ್ವೀ ದ್ವಾದಶಾತ್ಮನ್ನಮೋಽಸ್ತು ತೇ ॥** ೧೫

**ನಮಃ ಪೂರ್ವಾಯ ಗಿರಯೇ ಪಶ್ಚಿಮಾಯಾದ್ರಯೇ ನಮಃ ।**
**ಜ್ಯೋತಿರ್ಗಣಾನಾಂ ಪತಯೇ ದಿನಾಧಿಪತಯೇ ನಮಃ ॥** ೧೬

**ಜಯಾಯ ಜಯಭದ್ರಾಯ ಹರ್ಯಶ್ವಾಯ ನಮೋ ನಮಃ ।**
**ನಮೋ ನಮಃ ಸಹಸ್ರಾಂಶೋ ಆದಿತ್ಯಾಯ ನಮೋ ನಮಃ ॥** ೧೭

**ನಮ ಉಗ್ರಾಯ ವೀರಾಯ ಸಾರಂಗಾಯ ನಮೋ ನಮಃ ।**
**ನಮಃ ಪದ್ಮಪ್ರಬೋಧಾಯ ಮಾರ್ತಂಡಾಯ ನಮೋ ನಮಃ ॥**

---

ನೀನು ಆತಪವುಳ್ಳವನು. ವೃತ್ತಾಕಾರವಾದ ಬಿಂಬವುಳ್ಳವನು. ಸರ್ವ ಸಂಹಾರಕರ್ತ. ಪಿಂಗಳವರ್ಣನಾದವನು, ಪಿಂಗಳನಾಡೀ ಪ್ರವರ್ತಕ. ಸರ್ವರನ್ನೂ ತಾಪಗೊಳಿಸುವವನು. ಸರ್ವಜ್ಞ. ವಿಶ್ವರೂಪ. ವಿಶ್ವ ನಿರ್ವಾಹಕ. ತೇಜೋರೂಪ. ಸರ್ವರಲ್ಲಿಯೂ ಅನುರಕ್ತ, ರಕ್ತವರ್ಣ. ಸರ್ವವಸ್ತುಗಳ ನಿರ್ಮಾತ. ನಿನಗೆ ನಮಸ್ಕಾರ (೧೪). ದೇವ, ನೀನು ನಕ್ಷತ್ರ ತಾರಾಗ್ರಹಗಳಿಗೆ ಅಧಿಪತಿ. ವಿಶ್ವಸ್ಥಾಪಕ. ಅಗ್ನ್ಯಾದಿ ತೇಜಸ್ಸುಗಳಿಗೂ ತೇಜಸ್ಸನ್ನು ಕೊಡತಕ್ಕವನು (ಯೇನ ಸೂರ್ಯಸ್ತಪತಿ ತೇಜಸೇದ್ಧಃ). ದ್ವಾದಶಮಾಸಗಳಿಂದ ದ್ವಾದಶಮೂರ್ತಿಸ್ವರೂಪ.* ನಿನಗೆ ನಮಸ್ಕಾರ (೧೫). ಪೂರ್ವದಿಕ್ಕಿನ ಉದಯಗಿರಿಸ್ವರೂಪನಾದ ನಿನಗೆ ನಮಸ್ಕಾರ. ಪಶ್ಚಿಮದ ಅಸ್ತಗಿರಿಸ್ವರೂಪನಾದ ನಿನಗೆ ನಮಸ್ಕಾರ. ಜ್ಯೋತಿಶ್ಚಕ್ರದ ಸ್ವಾಮಿಯಾದ ನಿನಗೆ ನಮಸ್ಕಾರ. ದಿನಾಧಿಪತಿಯಾದ ನಿನಗೆ ನಮಸ್ಕಾರ (೧೬). ಜಯದಾತನೂ ಜಯಕ್ಷೇಮಪ್ರದಾತನೂ ಹರಿದಶ್ವನೂ ಆದ ನಿನಗೆ ನಮೋ ನಮಃ. ಸಹಸ್ರಾಂಶುವೇ, ಆದಿತ್ಯನಾದ ನಿನಗೆ ನಮೋ ನಮಃ (೧೭). ಉಗ್ರನೂ ವೀರನೂ ಸಾರಂಗನೂ ಆದ ನಿನಗೆ ನಮೋ ನಮಃ

---

* ಇಂದ್ರೋ ಧಾತಾ ಭಗಃ ಪೂಷಾ ಮಿತ್ರೋಽಥ ವರುಣೋಽರ್ಯಮಾ ।
ಅರ್ಚಿರ್ವಿವಸಾನ್ ತ್ವಷ್ಟಾ ಚ ಸವಿತಾ ವಿಷ್ಣುರೇವ ಚ ॥

ಬ್ರಹ್ಮೇಶಾನಾಚ್ಯುತೇಶಾಯ ಸೂರ್ಯಾಯಾದಿತ್ಯವರ್ಚಸೇ ।
ಭಾಸ್ವತೇ ಸರ್ವಭಕ್ಷಾಯ ರೌದ್ರಾಯ ವಪುಷೇ ನಮಃ ॥ ೧೯

ತಮೋಘ್ನಾಯ ಹಿಮಘ್ನಾಯ ಶತ್ರುಘ್ನಾಯಾಮಿತಾತ್ಮನೇ ।
ಕೃತಘ್ನಘ್ನಾಯ ದೇವಾಯ ಜ್ಯೋತಿಷಾಂ ಪತಯೇ ನಮಃ ॥ ೨೦

ತಪ್ತಚಾಮೀಕರಾಭಾಯ ವಹ್ನಯೇ ವಿಶ್ವಕರ್ಮಣೇ ।
ನಮಸ್ತಮೋಽಭಿನಿಘ್ನಾಯ ರವಯೇ ಲೋಕಸಾಕ್ಷಿಣೇ ॥ ೨೧

ನಾಶಯತ್ಯೇಷ ವೈ ಭೂತಂ ತದೇವ ಸೃಜತಿ ಪ್ರಭುಃ ।
ಪಾಯತ್ಯೇಷ ತಪತ್ಯೇಷ ವರ್ಷತ್ಯೇಷ ಗಭಸ್ತಿಭಿಃ ॥ ೨೨

---

(ಸಾರಂಗ=ಸಾರವಾದ ಪ್ರಣವಪ್ರತಿಪಾದ್ಯ). ಪದ್ಮವನ್ನರಳಿಸುವವನೂ ಮಾರ್ತಂಡನೂ ಆದ ನಿನಗೆ ನಮೋ ನಮಃ (ಪದ್ಮಪ್ರಬೋಧ=ಕಮಲವನ್ನು ಮತ್ತು ಹೃದಯಕಮಲವನ್ನು ಅರಳಿಸುವವನು) (೧೮). ಬ್ರಹ್ಮಾದಿ ತ್ರಿಮೂರ್ತಿಗಳಿಗೆ ಸ್ವಾಮಿಯೂ* ಸೂರನೂ (ಸೂರ್ಯನೂ) ಆದಿತ್ಯಸ್ವರೂಪನೂ ಆದ ನಿನಗೆ ನಮಸ್ಕಾರ. ಭಾಸ್ವಂತನೂ ಸರ್ವಸಂಹಾರಕನೂ ರುದ್ರದೇಹನೂ ಆದ ನಿನಗೆ ನಮಸ್ಕಾರ (೧೯). ತಮೋಹಂತೃವೂ ಹಿಮಹಂತೃವೂ ಶತ್ರುಹಂತೃವೂ ಅಜ್ಞೇಯಸ್ವರೂಪನೂ ಕೃತಘ್ನಸಂಹಾರಕನೂ ದೇವನೂ ಜ್ಯೋತಿಗಳಿಗೆ ಅಧಿಪತಿಯೂ ಆದ ನಿನಗೆ ನಮಸ್ಕಾರ (೨೦). ಕಾಯಿಸಿದ ಬಂಗಾರದ ಬಣ್ಣದವನೂ ವಹ್ನಿಯೂ ವಿಶ್ವಕರ್ಮನೂ ತಮೋನಿವರ್ತಕನೂ ರವಿಯೂ ಲೋಕಸಾಕ್ಷಿಯೂ ಆದ ನಿನಗೆ ನಮಸ್ಕಾರ (ಇಲ್ಲಿಗೆ ಆದಿತ್ಯಹೃದಯವು ಮುಗಿಯಿತು. ಇದನ್ನು ಉಪದೇಶಿಸಿ ಅಗಸ್ತ್ಯಮುನಿಗಳು ದೇವತಾಮಹಿಮೆಯನ್ನು ಮುಂದೆ ಹೇಳುತ್ತಾರೆ) (೨೧). ಶ್ರೀರಾಮ, ಸರ್ವಶಕ್ತನಾದ ಆದಿತ್ಯನು ಪಂಚಭೂತಗಳನ್ನೂ ನಾಶಮಾಡಿ ಮತ್ತೆ ಸೃಜಿಸುವನು. ಈತನು ತನ್ನ ಕಿರಣಗಳಿಂದ ಜಗತ್ತನ್ನು ಶೋಷಿಸುವನು; ತಾಪಗೊಳಿಸುವನು; ಮಳೆ ಸುರಿಸುವನು

---

* ಸೃಷ್ಟಿಸ್ಥಿತ್ಯಂತಕರಣೀಂ ಬ್ರಹ್ಮವಿಷ್ಣುಶಿವಾತ್ಮಿಕಾಮ್ ।
ಸ ಸಂಜ್ಞಾಂ ಯಾತಿ ಭಗವಾನೇಕ ಏವ ಜನಾರ್ದನಃ ॥

**ಏಷ ಸುಪ್ತೇಷು ಜಾಗರ್ತಿ ಭೂತೇಷು ಪರಿನಿಷ್ಠಿತಃ ।**
**ಏಷ ಏವಾಗ್ನಿಹೋತ್ರಂ ಚ ಫಲಂ ಚೈವಾಗ್ನಿಹೋತ್ರಿಣಾಮ್ ॥ ೨೩**

**ವೇದಾಶ್ಚ ಕ್ರತವಶ್ಚೈವ ಕ್ರತೂನಾಂ ಫಲಮೇವ ಚ ।**
**ಯಾನಿ ಕೃತ್ಯಾನಿ ಲೋಕೇಷು ಸರ್ವ ಏಷ ರವಿಃ ಪ್ರಭುಃ ॥ ೨೪**

**ಏನಮಾಪತ್ಸು ಕೃಚ್ಛ್ರೇಷು ಕಾಂತಾರೇಷು ಭಯೇಷು ಚ ।**
**ಕೀರ್ತಯನ್ ಪುರುಷಃ ಕಶ್ಚಿನ್ನಾವಸೀದತಿ ರಾಘವ ॥ ೨೫**

**ಪೂಜಯಸ್ವೈನಮೇಕಾಗ್ರೋ ದೇವದೇವಂ ಜಗತ್ಪತಿಮ್ ।**
**ಏತತ್ತ್ರಿಗುಣಿತಂ ಜಪ್ತ್ವಾ ಯುದ್ಧೇಷು ವಿಜಯಿಷ್ಯಸಿ ॥ ೨೬**

**ಅಸ್ಮಿನ್ ಕ್ಷಣೇ ಮಹಾಬಾಹೋ ರಾವಣಂ ತ್ವಂ ವಧಿಷ್ಯಸಿ ।**
**ಏವಮುಕ್ತ್ವಾ ತದಾಗಸ್ತ್ಯೋ ಜಗಾಮ ಚ ಯಥಾಗತಮ್ ॥ ೨೭**

---

(೨೨). ಪ್ರಾಣಿಗಳು ನಿದ್ರಿಸುವಾಗಲೂ ಈತನು ಎಚ್ಚರಗೊಂಡಿರುತ್ತಾನೆ. ಸಕಲ ಜೀವಿಗಳಲ್ಲಿಯೂ ಅಂತರ್ಯಾಮಿಯಾಗಿದ್ದಾನೆ. ಈತನೇ ಅಗ್ನಿಹೋತ್ರ (ಅಗ್ನಿಗಳಲ್ಲಿ ಹೋಮಮಾಡಿದಾಗ ಹವಿಸ್ಸನ್ನು ಸ್ವೀಕರಿಸುತ್ತಾನೆ. ಇದು ಬಾಹ್ಯವಾದ ಹೋಮ. ಅಂತರ್ಯಾಮಿಯಾಗಿ ಪಂಚಜ್ಞಾನೇಂದ್ರಿಯಗಳಿಂದ ವಿಷಯವನ್ನು ಅನುಭವಿಸುತ್ತಾನೆ. ಇದು ಆಂತರಹೋಮ). ಹೋಮಮಾಡತಕ್ಕವರಿಗೆ ಫಲವನ್ನು ಕೊಡತಕ್ಕವನು ಈತನೇ (ಬಾಹ್ಯಹೋಮಕ್ಕೆ ಸ್ವರ್ಗವೂ ಆಂತರಹೋಮಕ್ಕೆ ಮುಕ್ತಿಯೂ ಫಲ) (೨೩). ವೇದ, ಕ್ರತು, ಕ್ರತುಫಲ, ಅಲ್ಲದೆ ಜಗತ್ತಿನಲ್ಲಿ ಜನರು ಮಾಡುವ ಸಕಲ ಕರ್ಮಗಳು—ಇವೆಲ್ಲವುಗಳಿಗೂ ಆದಿತ್ಯನೇ ಪ್ರಭು (೨೪). ಶ್ರೀರಾಮ, ಸಕಲ ವಿಪತ್ತುಗಳಲ್ಲಿಯೂ ಕಷ್ಟಕಾಲದಲ್ಲಿಯೂ ದುರ್ಗಮಸ್ಥಳಗಳಲ್ಲಿಯೂ ಭಯ ಸಂದರ್ಭಗಳಲ್ಲಿಯೂ ಈ ಆದಿತ್ಯಹೃದಯವನ್ನು ಪಠಿಸುವ ಮನುಷ್ಯನು ವಿಪತ್ತಿನಿಂದ ಪಾರಾಗುತ್ತಾನೆ (೨೫). ರಾಘವ, ದೇವದೇವನೂ ಜಗತ್ಪತಿಯೂ ಆದ ಆದಿತ್ಯನನ್ನು ಏಕಾಗ್ರತೆಯಿಂದ ಅರ್ಚಿಸು. ಈ ಆದಿತ್ಯಹೃದಯವನ್ನು ಮೂರುಸಲ ಜಪಿಸಿದರೆ, ನಿನಗೆ ಯುದ್ಧದಲ್ಲಿ ಜಯ ಲಭಿಸುವುದು (೨೬). ಮಹಾಬಾಹು—ಶ್ರೀರಾಮ, ಈಗಲೇ ಇದನ್ನು ಜಪಿಸು. ರಾವಣನನ್ನು ನೀನು ಸಂಹರಿಸುತ್ತೀಯೆ" ಎಂದು ಹೇಳಿ ಅಗಸ್ತ್ಯ

ಏತಚ್ಛ್ರುತ್ವಾ ಮಹಾತೇಜಾ ನಷ್ಟಶೋಕೋಽಭವತ್ತದಾ ।
ಧಾರಯಾಮಾಸ ಸುಪ್ರೀತೋ ರಾಘವಃ ಪ್ರಯತಾತ್ಮವಾನ್ ॥ ೨೮

ಆದಿತ್ಯಂ ಪ್ರೇಕ್ಷ್ಯ ಜಪ್ತ್ವಾ ತು ಪರಂ ಹರ್ಷಮವಾಪ್ತವಾನ್ ।
ತ್ರಿರಾಚಮ್ಯ ಶುಚಿರ್ಭೂತ್ವಾ ಧನುರಾದಾಯ ವೀರ್ಯವಾನ್ ॥ ೨೯

ರಾವಣಂ ಪ್ರೇಕ್ಷ್ಯ ಹೃಷ್ಟಾತ್ಮಾ ಯುದ್ಧಾಯ ಸಮುಪಾಗಮತ್ ।
ಸರ್ವಯತ್ನೇನ ಮಹತಾ ವಧೇ ತಸ್ಯ ಧೃತೋಽಭವತ್ ॥ ೩೦

ಅಥ ರವಿರವದನ್ನಿರೀಕ್ಷ್ಯ ರಾಮಂ
ಮುದಿತಮನಾಃ ಪರಮಂ ಪ್ರಹೃಷ್ಯಮಾಣಃ ।
ನಿಶಿಚರಪತಿಸಂಕ್ಷಯಂ ವಿದಿತ್ವಾ
ಸುರಗಣಮಧ್ಯಗತೋ ವಚಸ್ತ್ವರೇತಿ ॥ ೩೧

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತೋತ್ತರಶತತಮಃ ಸರ್ಗಃ

---

ಮಹರ್ಷಿಗಳು ಹೊರಟುಹೋದರು (೨೭). ಆಗ ತೇಜೋರಾಶಿಯಾದ ಶ್ರೀರಾಮನ ಚಿಂತೆಯು ದೂರವಾಯಿತು. ಅವನು ಸಂತುಷ್ಟನಾಗಿ (ಆಚಮನಮಾಡಿ) ಪರಿಶುದ್ಧಚಿತ್ತದಿಂದ ಅಗಸ್ತ್ಯರ ಉಪದೇಶವನ್ನು ಸ್ವೀಕರಿಸಿದನು. ಅನಂತರ ಸೂರ್ಯನನ್ನು ನೋಡುತ್ತ ಮೂರುಸಲ ಆದಿತ್ಯಹೃದಯುವನ್ನು ಪಠಿಸಿ ಉತ್ಸಾಹಗೊಂಡನು. ಮತ್ತೆ ಶುಚಿಯಾಗಿಯೇ ಮೂರುಸಲ ಆಚಮನಮಾಡಿ ಕೋದಂಡವನ್ನು ಕೈಯಲ್ಲಿ ಹಿಡಿದನು (೨೮-೨೯). ಅಷ್ಟರಲ್ಲಿ ರಾವಣನು ಎದುರಾಗಿ ಬರಲು, ಶ್ರೀರಾಮನು ಹರ್ಷದಿಂದ ಯುದ್ಧಸನ್ನದ್ಧನಾದನು. ಸರ್ವಪ್ರಯತ್ನದಿಂದಲೂ ರಾವಣನನ್ನು ವಧಿಸಬೇಕೆಂದು ನಿರ್ಧರಿಸಿದನು (೩೦). ಆಗ ಸೂರ್ಯದೇವನು ಶ್ರೀರಾಮನ ಜಪದಿಂದ ಸಂಪ್ರೀತನಾಗಿ, ರಾಕ್ಷಸೇಂದ್ರನ ಸಂಹಾರವು ಸಮೀಪಿಸಿತೆಂದು ತಿಳಿದು, ದೇವತೆಗಳ ಮಧ್ಯದಲ್ಲಿ ಕಾಣಿಸಿಕೊಂಡು ಹರ್ಷದಿಂದ "ರಾಘವ, ತ್ವರೆಮಾಡು" ಎಂದು ಹೇಳಿದನು (೩೧).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರೇಳನೆಯ ಸರ್ಗ

## ಅಷ್ಟೋತ್ತರಶತತಮಃ॥ಸರ್ಗಃ

### ಶುಭಾಶುಭನಿಮಿತ್ತದರ್ಶನಮ್

ಸ ರಥಂ ಸಾರಥಿರ್ಹೃಷ್ಟಃ ಪರಸೈನ್ಯಪ್ರಧರ್ಷಣಮ್ ।
ಗಂಧರ್ವನಗರಾಕಾರಂ ಸಮುಚ್ಛ್ರಿತಪತಾಕಿನಮ್ ॥ ೧

ಯುಕ್ತಂ ಪರಮಸಂಪನ್ನೈರ್ವಾಜಿಭಿರ್ಹೇಮಮಾಲಿಭಿಃ ।
ಯುದ್ಧೋಪಕರಣೈಃ ಪೂರ್ಣಂ ಪತಾಕಾಧ್ವಜಮಾಲಿನಮ್ ॥ ೨

ಗ್ರಸಂತಮಿವ ಚಾಕಾಶಂ ನಾದಯಂತಂ ವಸುಂಧರಾಮ್ ।
ಪ್ರಣಾಶಂ ಪರಸೈನ್ಯಾನಾಂ ಸ್ವಸೈನ್ಯಾನಾಂ ಪ್ರಹರ್ಷಣಮ್ ॥ ೩

ರಾವಣಸ್ಯ ರಥಂ ಕ್ಷಿಪ್ರಂ ಚೋದಯಾಮಾಸ ಸಾರಥಿಃ ।
ತಮಾಪತಂತಂ ಸಹಸಾ ಸ್ವನವಂತಂ ಮಹಾಸ್ವನಮ್ ॥ ೪

### ಸರ್ಗ ೧೦೮

ರಾವಣನು ದರ್ಪದಿಂದ ರಥವನ್ನು ಸಂಗ್ರಾಮಭೂಮಿಗೆ ಓಡಿಸುತ್ತ ತರುವುದು. ಆತನಿಗೆ ಅಶುಭನಿಮಿತ್ತಗಳೂ ಶ್ರೀರಾಮನಿಗೆ ಶುಭನಿಮಿತ್ತಗಳೂ ಗೋಚರಿಸುವುದು.

ಅತ್ತಲಾಗಿ ರಾವಣಸಾರಥಿಯು ಶತ್ರುಸೈನ್ಯವಿಮರ್ದಕವಾದ ಮಹಾ ರಥವನ್ನು ಉತ್ಸಾಹದಿಂದ ಓಡಿಸುತ್ತ ರಣರಂಗಕ್ಕೆ ತಂದನು. ಆ ಮಹಾ ರಥವಾದರೋ ಗಂಧರ್ವನಗರದಂತೆ ಆಶ್ಚರ್ಯರೂಪವಾಗಿತ್ತು. ಉನ್ನತ ವಾದ ಪತಾಕೆಯನ್ನು ಎತ್ತಿ ಕಟ್ಟಿ ಹಾರಿಸಲಾಗಿತ್ತು (೧). ಹೇಮಭೂಷಿತ ಗಳಾದ ಉತ್ತಮಾಶ್ವಗಳನ್ನು ಹೂಡಲಾಗಿತ್ತು. ಸಕಲಯುದ್ಧೋಪಕರಣ ಗಳನ್ನೂ ರಥದಲ್ಲಿ ತುಂಬಲಾಗಿತ್ತು. ಅನೇಕ ಧ್ವಜಪತಾಕೆಗಳಿಂದ ಶೋಭಿತ ವಾಗಿತ್ತು (೨). ಆಕಾಶವನ್ನು ನುಂಗುವುದೋ ಭೂಮಂಡಲವನ್ನು ಮೊಳಗಿಸುವುದೋ – ಎಂಬಂತೆ ರಭಸದಿಂದ ರಥವು ಬರುತ್ತಿತ್ತು. ಶತ್ರುಸೇನೆ ಯನ್ನು ಧ್ವಂಸಗೊಳಿಸಬೇಕೆಂದೂ ರಾಕ್ಷಸಸೇನೆಯನ್ನು ಆನಂದಗೊಳಿಸ ಬೇಕೆಂದೂ ಬರುತ್ತಿದ್ದ ಆ ರಾವಣರಥವನ್ನು ಸಾರಥಿಯು ದೌಡಾಯಿಸಿ ದನು (೩). ಅದ್ಭುತಧ್ವನಿಯಿಂದ ಅಬ್ಬರಿಸುತ್ತ ನುಗ್ಗಿಬರುವ ರಾಕ್ಷಸ

ರಥಂ ರಾಕ್ಷಸರಾಜಸ್ಯ ನರರಾಜೋ ದದರ್ಶ ಹ ।
ಕೃಷ್ಣವಾಜಿಸಮಾಯುಕ್ತಂ ಯುಕ್ತಂ ರೌದ್ರೇಣ ವರ್ಚಸಾ ॥ ೫
ತಡಿತ್ಪತಾಕಾಗಹನಂ ದರ್ಶಿತೇಂದ್ರಾಯುಧಾಯುಧಮ್ ।
ಶರಧಾರಾ ವಿಮುಂಚಂತಂ ಧಾರಾಸಾರಮಿವಾಂಬುದಮ್ ॥ ೬
ತಂ ದೃಷ್ಟ್ವಾ ಮೇಘಸಂಕಾಶಮಾಪತಂತಂ ರಥಂ ರಿಪೋಃ ।
ಗಿರೇರ್ವಜ್ರಾಭಿಮೃಷ್ಟಸ್ಯ ದೀರ್ಯತಃ ಸದೃಶಸ್ವನಮ್ ॥ ೭
ವಿಸ್ಫಾರಯನ್ ವೈ ವೇಗೇನ ಬಾಲಚಂದ್ರನತಂ ಧನುಃ ।
ಉವಾಚ ಮಾತಲಿಂ ರಾಮಃ ಸಹಸ್ರಾಕ್ಷಸ್ಯ ಸಾರಥಿಮ್ ॥ ೮
ಮಾತಲೇ ಪಶ್ಯ ಸಂರಬ್ಧಮಾಪತಂತಂ ರಥಂ ರಿಪೋಃ ।
ಯಥಾಪಸವ್ಯಂ ಪತತಾ ವೇಗೇನ ಮಹತಾ ಪುನಃ ॥ ೯
ಸಮರೇ ಹಂತುಮಾತ್ಮಾನಂ ತಥಾ ತೇನ ಕೃತಾ ಮತಿಃ ।
ತದಪ್ರಮಾದಮಾತಿಷ್ಠನ್ ಪ್ರತ್ಯುದ್ಗಚ್ಛ ರಥಂ ರಿಪೋಃ ॥ ೧೦

---

ರಾಜನ ರಥವನ್ನು ನರರಾಜನಾದ ಶ್ರೀರಾಮನು ವೀಕ್ಷಿಸಿದನು. ಕೃಷ್ಣವರ್ಣದ ವಾಜಿಗಳಿಂದ ಯುಕ್ತವಾಗಿ, ರೌದ್ರವರ್ಚಸ್ಸಿನಿಂದ ಸಹಿತವಾಗಿ, ಮಿಂಚಿನ ಗೊಂಚಲುಗಳಂತಿರುವ ಬಾವುಟಗಳಿಂದ ಸಮೇತವಾಗಿ, ಕಾಮನಬಿಲ್ಲುಗಳಂತೆ ಹೊಳೆಯುವ ಆಯುಧಗಳಿಂದ ರಾರಾಜಿಸುತ್ತ, ಶರಧಾರೆಗಳನ್ನು ಸುತ್ತಲೂ ಚಿಮ್ಮುತ್ತ ಬರುತ್ತಿದ್ದ ಆ ಮಹಾರಥವು, ಜಡಿಮಳೆಯನ್ನು ಸುರಿಸುವ ಮಹಾಮೇಘವೋ ಎಂಬಂತೆ ಕಂಡಿತು! (೫-೬). ವಜ್ರಾಯುಧದ ಸಂಘಟ್ಟದಿಂದ ಬಿರಿಯುತ್ತಿರುವ ಗಿರಿಯೋ ಎಂಬಂತೆ ಘರಘರನೆ ಭೋರ್ಗರೆಯುತ್ತ ಬರುವ ಮೇಘಸಂಕಾಶವಾದ ಹಗೆಯ ರಥವನ್ನು ನೋಡಿ, ಶ್ರೀರಾಮನು ಬಾಲಚಂದ್ರನಂತೆ ಅರ್ಧಮಂಡಲಾಕೃತಿಯ ಕೋದಂಡವನ್ನು ಮಿಡಿಯುತ್ತ ಸಹಸ್ರಾಕ್ಷನ ಸಾರಥಿಯಾದ ಮಾತಲಿಯನ್ನು ಕುರಿತು ಹೀಗೆಂದನು (೭-೮): "ಮಾತಲಿ, ವೇಗದಿಂದ ನುಗ್ಗಿಬರುತ್ತಿರುವ ರಿಪುವಿನ ರಥವನ್ನು ನೋಡು! ಮಹಾವೇಗದಿಂದ ಅಪಸವ್ಯವಾಗಿ ಬರುತ್ತಿದ್ದಾನೆ! ಯುದ್ಧದಲ್ಲಿ ತನ್ನನ್ನು ಕೊಲ್ಲಿಸಿಕೊಳ್ಳಬೇಕೆಂದು ಅವನು ಉದ್ದೇಶಿಸಿದಂತಿದೆ!* ಆದ್ದರಿಂದ, ಮಾತಲಿ,

---

* ರಥವನ್ನು ಅಪ್ರದಕ್ಷಿಣವಾಗಿ ನಡೆಸುವುದು ಅಶುಭಕರವೆಂದು ಅಭಿಪ್ರಾಯ.

ವಿಧ್ವಂಸಯಿತುಮಿಚ್ಛಾಮಿ ವಾಯುರ್ಮೇಘಮಿವೋತ್ಥಿತಮ್ ।
ಅವಿಕ್ಲವಮಸಂಭ್ರಾಂತಮವ್ಯಗ್ರಹೃದಯೇಕ್ಷಣಮ್ ॥ ೧೧

ರಶ್ಮಿಸಂಚಾರನಿಯತಂ ಪ್ರಚೋದಯ ರಥಂ ದ್ರುತಮ್ ।
ಕಾಮಂ ನ ತ್ವಂ ಸಮಾಧೇಯಃ ಪುರಂದರರಥೋಚಿತಃ ॥ ೧೨

ಯುಯುತ್ಸುರಹಮೇಕಾಗ್ರಃ ಸ್ಮಾರಯೇ ತ್ವಾಂ ನ ಶಿಕ್ಷಯೇ ।
ಪರಿತುಷ್ಟಃ ಸ ರಾಮಸ್ಯ ತೇನ ವಾಕ್ಯೇನ ಮಾತಲಿಃ ॥ ೧೩

ಪ್ರಚೋದಯಾಮಾಸ ರಥಂ ಸುರಸಾರಥಿಸತ್ತಮಃ ।
ಅಪಸವ್ಯಂ ತತಃ ಕುರ್ವನ್ ರಾವಣಸ್ಯ ಮಹಾರಥಮ್ ॥ ೧೪

ಚಕ್ರೋತ್ಕ್ಷಿಪ್ತೇನ ರಜಸಾ ರಾವಣಂ ವ್ಯವಧಾನಯತ್ ।
ತತಃ ಕ್ರುದ್ಧೋ ದಶಗ್ರೀವಸ್ತಾಮ್ರವಿಸ್ಫಾರಿತೇಕ್ಷಣಃ ॥ ೧೫

---

ಅವನಂತೆ ಪ್ರಮಾದವನ್ನೆಸಗದೆ ವೈರಿಯ ರಥವನ್ನೆದುರಿಸು (೯-೧೦). ಮೇಲೇಳುವ ಮೇಘಮಂಡಲವನ್ನು ಚಂಡಮಾರುತವು ವಿಧ್ವಂಸಗೊಳಿಸುವಂತೆ, ಆತನನ್ನು ನಾಶಮಾಡುವೆನು. ನೀನು ಮಾತ್ರ ಹೆದರದೆ, ಕಂಗೆಡದೆ, ಮನಸ್ಸಿನಲ್ಲಿ ಕಳವಳಿಸದೆ, ಅತ್ತಿತ್ತ ದೃಷ್ಟಿಯಿಡದೆ, ಅಶ್ವರಶ್ಮಿ*ಗಳನ್ನು ಸರಿಯಾಗಿ ಹಿಡಿದು ಶೀಘ್ರಗತಿಯಿಂದ ರಥವನ್ನು ನಡೆಸು. ದೇವೇಂದ್ರನ ರಥವನ್ನು ನಡೆಸಿ ಪಳಗಿರುವ ನಿನಗೆ ನಾನು ಹೇಳಬೇಕಾದ್ದೇ ಇಲ್ಲ! (೧೧-೧೨). ಆದರೂ, ಮಾತಲಿ, ನಾನು ಏಕಾಗ್ರತೆಯಿಂದ ಹೋರಾಡಬೇಕಾದ್ದರಿಂದ, ಸಾರಥಿಯ ಕರ್ತವ್ಯವನ್ನು ಕೇವಲ ಜ್ಞಾಪಿಸುತ್ತಿದ್ದೇನೆ; ನಿನಗೆ ಕಲಿಸಬೇಕಾದ್ದೇನೂ ಇಲ್ಲ" ಎಂದನು. ನಿಪುಣನಾದ ದೇವಸಾರಥಿಯು ಶ್ರೀರಾಮನ ನುಡಿಯಿಂದ ಸಂತುಷ್ಟನಾಗಿ, ರಾವಣನ ಮಹಾರಥವು ಅಪಸವ್ಯವಾಗಿಯೇ ಉಳಿಯುವಂತೆ, ಪ್ರದಕ್ಷಿಣಾಕಾರವಾಗಿ ತನ್ನ ರಥವನ್ನೋಡಿಸಿದನು (೧೩-೧೪). ರಥಚಕ್ರದಿಂದೆದ್ದ ಧೂಳಿ ರಾವಣನನ್ನು ಮುಸುಕಿತು†. ಅದರಿಂದ ಭುಗಿಲೆದ್ದ ರಾವಣನು ರಕ್ತನೇತ್ರನಾಗಿ, ರಥಕ್ಕೆ

---

* ರಶ್ಮಿ = ಮೂಗುದಾಣ, ಲಗಾಮ್.

† ಇಂದ್ರರಥವು ನೆಲವನ್ನು ಮುಟ್ಟುವುದಿಲ್ಲವಾದರೂ ರಥದ ಓಟದ ರಭಸಕ್ಕೆ ಹುಟ್ಟಿದ ಗಾಳಿಯಿಂದ ಧೂಳಿ ಎದ್ದಿತೆಂದು ತಿಳಿಯಬೇಕು. ರಾವಣನಿಗೆ ಪ್ರತಿಕೂಲವಾಗಿ ಎದುರುಗಾಳಿ ಬೀಸುತ್ತಿತ್ತೆಂಬ ಸೂಚನೆ ಇಲ್ಲಿದೆ.

ರಥಪ್ರತಿಮುಖಂ ರಾಮಂ ಸಾಯಕೈರವಧೂನಯತ್ ।
ಧರ್ಷಣಾಮರ್ಷಿತೋ ರಾಮೋ ಧೈರ್ಯಂ ರೋಷೇಣ ಲಂಭಯನ್

ಜಗ್ರಾಹ ಸುಮಹಾವೇಗಮೈಂದ್ರಂ ಯುಧಿ ಶರಾಸನಮ್ ।
ಶರಾಂಶ್ಚ ಸುಮಹಾತೇಜಾಃ ಸೂರ್ಯರಶ್ಮಿಸಮಪ್ರಭಾನ್ ॥ ೧೭

ತದೋಪೋಢಂ ಮಹದ್ಯುದ್ಧಮನ್ಯೋನ್ಯವಧಕಾಂಕ್ಷಿಣೋಃ ।
ಪರಸ್ಪರಾಭಿಮುಖಯೋರ್ದೃಪ್ತಯೋರಿವ ಸಿಂಹಯೋಃ ॥ ೧೮

ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಸಮೇಯುರ್ದ್ವೈರಥಂ ದ್ರಷ್ಟುಂ ರಾವಣಕ್ಷಯಕಾಂಕ್ಷಿಣಃ ॥ ೧೯

ಸಮುತ್ಪೇತುರಥೋತ್ಪಾತಾ ದಾರುಣಾ ರೋಮಹರ್ಷಣಾಃ ।
ರಾವಣಸ್ಯ ವಿನಾಶಾಯ ರಾಘವಸ್ಯ ಜಯಾಯ ಚ ॥ ೨೦

ವವರ್ಷ ರುಧಿರಂ ದೇವೋ ರಾವಣಸ್ಯ ರಥೋಪರಿ ।
ವಾತಾ ಮಂಡಲಿನಸ್ತೀಕ್ಷ್ಣಾ ಹ್ಯಪಸವ್ಯಂ ಪ್ರಚಕ್ರಮುಃ ॥ ೨೧

---

ಎದುರಾಗಿ ಬಂದ ರಾಘವನನ್ನು ಶರಗಳಿಂದ ಬಿಗಿದನು. ಶರಾಘಾತದಿಂದ ಕೆರಳಿದ ಶ್ರೀರಾಮನು ತನ್ನ ಧೀರತೆಗೆ ರೋಷವನ್ನು ಬೆರೆಸಿ, ಇಂದ್ರದತ್ತವಾದ ಮಹಾಚಾಪವನ್ನು ಕೈಗೆತ್ತಿಕೊಂಡು, ಸೂರ್ಯರಶ್ಮಿಗಳಂತೆ ಹೊಳೆಯುವ ಸರಳುಗಳನ್ನು ಸೆಳೆಸೆಳೆದು ಹೊಡೆದನು (೧೫-೧೭). ಎದರುಬದರಾಗಿ ಹೋರಾಡುವ ಚಂಡಕೇಸರಿಗಳಂತೆ, ಒಬ್ಬರನ್ನೊಬ್ಬರು ವಧಿಸಬೇಕೆಂಬ ಛಲದಿಂದ ಕೂಡಿದ ಅವರೀರ್ವರಿಗೂ ಖಾಡಾಖಾಡಿಯಾದ ಮಹಾಯುದ್ಧವು ವಿಃಲಾಯಿಸಿತು. ರಾವಣನ ವಧೆಯನ್ನು ಕೋರುತ್ತಿದ್ದ ದೇವಗಂಧರ್ವರೂ ಸಿದ್ಧರೂ ಮಹರ್ಷಿಗಳೂ ಆ ಈರ್ವರು ರಥಿಕರಲ್ಲಿ ಮಾತ್ರ ನಡೆಯುವ ನಿರ್ಣಾಯಕವಾದ ಯುದ್ಧವನ್ನು ನೋಡಲು ಬಂದು ನೆರೆದರು (೧೮-೧೯). ಆ ಸಮಯದಲ್ಲಿ ರಾವಣನ ವಿನಾಶವನ್ನೂ ರಾಘವನ ವಿಜಯವನ್ನೂ ಸೂಚಿಸುವ ದಾರುಣವೂ ರೋಮಾಂಚಕರವೂ ಆದ ಉತ್ಪಾತಗಳು ಸಂಭವಿಸಿದವು. ರಾವಣನ ರಥದಮೇಲೆ ರಕ್ತದ ಮಳೆ ಸುರಿಯಿತು. ಸುಂಟರಗಾಳಿಯೆದ್ದು ಅವನ ರಥವನ್ನು ಅಪಸವ್ಯವಾಗಿ ಸುತ್ತಿತು

ಮಹದ್ಗೃಧ್ರಕುಲಂ ಚಾಸ್ಯ ಭ್ರಮಮಾಣಂ ನಭಃಸ್ಥಲೇ ।
ಯೇನ ಯೇನ ರಥೋ ಯಾತಿ ತೇನ ತೇನ ಪ್ರಧಾವತಿ ॥ ೨೨

ಸಂಧ್ಯಯಾ ಚಾವೃತಾ ಲಂಕಾ ಜಪಾಪುಷ್ಪನಿಕಾಶಯಾ ।
ದೃಶ್ಯತೇ ಸಂಪ್ರದೀಪ್ತೇವ ದಿವಸೇಽಪಿ ವಸುಂಧರಾ ॥ ೨೩

ಸನಿರ್ಘಾತಾ ಮಹೋಲ್ಕಾಶ್ಚ ಸಂಪ್ರಚೇರುರ್ಮಹಾಸ್ವನಾಃ ।
ವಿಷಾದಯಂಸ್ತೇ ರಕ್ಷಾಂಸಿ ರಾವಣಸ್ಯ ತದಾಹಿತಾಃ ॥ ೨೪

ರಾವಣಶ್ಚ ಯತಸ್ತತ್ರ ಸಂಚಚಾಲ ವಸುಂಧರಾ ।
ರಕ್ಷಸಾಂ ಚ ಪ್ರಹರತಾಂ ಗೃಹೀತಾ ಇವ ಬಾಹವಃ ॥ ೨೫

ತಾಮ್ರಾಃ ಪೀತಾಃ ಸಿತಾಃಶ್ವೇತಾಃ ಪತಿತಾಃ ಸೂರ್ಯರಶ್ಮಯಃ ।
ದೃಶ್ಯಂತೇ ರಾವಣಸ್ಯಾಂಗೇ ಪರ್ವತಸ್ಯೇವ ಧಾತವಃ ॥ ೨೬

ಗೃಧ್ರೈರನುಗತಾಶ್ಚಾಸ್ಯ ವಮಂತ್ಯೋ ಜ್ವಲನಂ ಮುಖೈಃ ।
ಪ್ರಣೇದುರ್ಮುಖಮೀಕ್ಷಂತ್ಯಃ ಸಂರಬ್ಧಮಶಿವಂ ಶಿವಾಃ ॥ ೨೭

---

(೨೦-೨೧). ಗಗನದಲ್ಲಿ ನೆರೆದ ಗೃಧ್ರಗಳ ಗುಂಪು, ಆತನ ರಥವು ಯಾವ ಯಾವ ಕಡೆಗೆ ಓಡುತ್ತಿತ್ತೋ ಆ ಕಡೆಗೆ ರಥವನ್ನನುಸರಿಸಿ ಹಾರಿ ಬರುತ್ತಿತ್ತು. ಹಗಲಲ್ಲಿಯೇ ದಾಸವಾಳದ ಹೂವಿನಂತೆ ಕೆಂಪಾದ ಸಂಧ್ಯಾ ರಾಗವು ಲಂಕೆಯಲ್ಲಿ ಕವಿದು, ಆ ಪ್ರದೇಶಕ್ಕೆ ಬೆಂಕಿ ಬಿದ್ದಿದೆಯೋ ಎಂಬಂತೆ ಗೋಚರಿಸಿತು (೨೨-೨೩). ಸಿಡಿಲಿನಿಂದ ಕೂಡಿದ ಮಹೋಲ್ಕೆಗಳು ಭೋರ್ಗರೆಯುತ್ತ ರಾವಣನೆದುರಿಗೆ ಬಿದ್ದವು. ಅವು ರಾವಣನಿಗೆ ಅಶುಭ ಸೂಚಕಗಳೆಂದು ರಾಕ್ಷಸರು ವಿಷಣ್ಣರಾದರು. ರಾವಣನಿದ್ದ ಭೂಪ್ರದೇಶವು ಕಂಪಿಸಿತು. ಹೊಡೆದಾಡಲು ಕೈಯೆತ್ತಿದ ರಾಕ್ಷಸಯೋಧರ ತೋಳುಗಳನ್ನು ಯಾರೋ ಹಿಡಿದಂತಾಗಿ ಸ್ತಬ್ಧವಾಗುತ್ತಿದ್ದವು (೨೪-೨೫). ಕೆಂಪು, ಹಳದಿ, ಬಿಳುಪು ಮತ್ತು ಕಪ್ಪುಬಣ್ಣದ ಸೂರ್ಯರಶ್ಮಿಗಳು ರಾವಣನ ದೇಹದಮೇಲೆ ಬಿದ್ದು, ಪರ್ವತದಲ್ಲಿನ ವಿವಿಧವರ್ಣದ ಧಾತುಗಳಂತೆ ಗೋಚರಿಸಿದವು. ಹದ್ದುಗಳೊಡನೆ ನರಿಗಳೂ ಸೇರಿ ರಾವಣನ ಮುಖವನ್ನು ನೋಡುತ್ತ, ಬೆಂಕಿಯನ್ನುಗುಳುತ್ತ, ಅಮಂಗಳಕರವಾಗಿ ಊಳಿದವು (೨೬-೨೭).

ಪ್ರತಿಕೂಲಂ ವವೌ ವಾಯುೂ ರಣೇ ಪಾಂಸೂನ್ ಸಮಾಕಿರನ್ ।
ತಸ್ಯ ರಾಕ್ಷಸರಾಜಸ್ಯ ಕುರ್ವನ್ ದೃಷ್ಟಿವಿಲೋಪನಮ್ ॥ ೨೮
ನಿಪೇತುರಿಂದ್ರಾಶನಯಃ ಸೈನ್ಯೇ ಚಾಸ್ಯ ಸಮಂತತಃ ।
ದುರ್ವಿಷಹ್ಯಸ್ವನಾ ಘೋರಾ ವಿನಾ ಜಲಧರಸ್ವನಮ್ ॥ ೨೯
ದಿಶಶ್ಚ ಪ್ರದಿಶಃ ಸರ್ವಾ ಬಭೂವುಸ್ತಿಮಿರಾವೃತಾಃ ।
ಪಾಂಸುವರ್ಷೇಣ ಮಹತಾ ದುರ್ದರ್ಶಂ ಚ ನಭೋಽಭವತ್ ॥ ೩೦
ಕುರ್ವತ್ಯಃ ಕಲಹಂ ಘೋರಂ ಶಾರಿಕಾಸ್ತದ್ರಥಂ ಪ್ರತಿ ।
ನಿಪೇತುಃ ಶತಶಸ್ತತ್ರ ದಾರುಣಂ ದಾರುಣಾರುತಾಃ ॥ ೩೧
ಜಘನೇಭ್ಯಃ ಸ್ಫುಲಿಂಗಾಶ್ಚ ನೇತ್ರೇಭ್ಯೋಽಶ್ರೂಣಿ ಸಂತತಮ್ ।
ಮುಮುಚುಸ್ತಸ್ಯ ತುರಗಾಸ್ತುಲ್ಯಮಗ್ನಿಂ ಚ ವಾರಿ ಚ ॥ ೩೨
ಏವಂಪ್ರಕಾರಾ ಬಹವಃ ಸಮುತ್ಪಾತಾ ಭಯಾವಹಾಃ ।
ರಾವಣಸ್ಯ ವಿನಾಶಾಯ ದಾರುಣಾಃ ಸಂಪ್ರಜಜ್ಞಿರೇ ॥ ೩೩
ರಾಮಸ್ಯಾಪಿ ನಿಮಿತ್ತಾನಿ ಸೌಮ್ಯಾನಿ ಚ ಶುಭಾನಿ ಚ ।
ಬಭೂವುರ್ಜಯಶಂಸೀನಿ ಪ್ರಾದುರ್ಭೂತಾನಿ ಸರ್ವಶಃ ॥ ೩೪

---

ಗಾಳಿಯು ಧೂಳೆಬ್ಬಿಸಿ ಎದುರಾಗಿ ಬೀಸಿ, ರಾಕ್ಷಸರಾಜನ ಕಣ್ಣಿಗೆ ನೋಡಲು ಅಡ್ಡಿಯನ್ನುಂಟುಮಾಡಿತು. ಗುಡುಗಿಲ್ಲದೆಯೇ ಸಿಡಿಲುಗಳು ತಾಳಲಾರದ ಭೀಕರಶಬ್ದವನ್ನು ಮಾಡುತ್ತ ರಾಕ್ಷಸಸೇನೆಯಲ್ಲಿ ಬಿದ್ದವು (೨೮-೨೯). ದಿಗ್ದಿಗಂತರಗಳಲ್ಲಿ ಕತ್ತಲೆ ಕವಿಯಿತು. ದಾರುಣವಾದ ಧೂಳಿಯ ರಾಶಿ ಎದ್ದು ಗಗನವು ದುರ್ದರ್ಶವಾಯಿತು. ಶಾರಿಕೆಗಳೆಂಬ ಪಕ್ಷಿಗಳು ಜಗಳವಾಡುತ್ತ, 'ಕೂ ಚೀ' ಎಂದು ಕಠೋರವಾಗಿ ಕೂಗುತ್ತ, ರಾವಣನ ರಥದಮೇಲೆ ಹಾರಿಬಂದವು (೩೦-೩೧). ಅವನ ರಥಾಶ್ವಗಳು ಮಲದ್ವಾರಗಳಿಂದ ಅಗ್ನಿಕಣಗಳನ್ನೂ ಕಣ್ಣುಗಳಿಂದ ಬಾಷ್ಪಗಳನ್ನೂ ಹೊರಸೂಸುತ್ತ, ಬೆಂಕಿಯನ್ನೂ ಜಲವನ್ನೂ ಸಮವಾಗಿ ಸುರಿಸಿದವು. ಈ ಪ್ರಕಾರವಾಗಿ ಭಯಂಕರವಾದ ಬಹಳ ಉತ್ಪಾತಗಳು ಕಾಣಿಸಿಕೊಂಡು ರಾವಣನ ವಿನಾಶವನ್ನು ಸೂಚಿಸಿದವು (೩೨-೩೩). ಇತ್ತ ಶ್ರೀರಾಮನಿಗಾದರೋ ಸೌಮ್ಯವೂ ಶುಭಕರವೂ ವಿಜಯಸೂಚಕವೂ ಆದ ಒಳ್ಳೆಯ

ನಿಮಿತ್ತಾನಿ ಚ ಸೌಮ್ಯಾನಿ ರಾಘವಃ ಸ್ವಜಯಾಯ ಚ ।
ದೃಷ್ಟ್ವಾ ಪರಮಸಂಹೃಷ್ಟೋ ಹತಂ ಮೇನೇ ಚ ರಾವಣಮ್ ॥ ೩೫

ತತೋ ನಿರೀಕ್ಷ್ಯಾತ್ಮಗತಾನಿ ರಾಘವೋ
ರಣೇ ನಿಮಿತ್ತಾನಿ ನಿಮಿತ್ತಕೋವಿದಃ ।
ಜಗಾಮ ಹರ್ಷಂ ಚ ಪರಾಂ ಚ ನಿರ್ವೃತಿಂ
ಚಕಾರ ಯುದ್ಧೇ ಹ್ಯಧಿಕಂ ಚ ವಿಕ್ರಮಮ್ ॥ ೩೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟೋತ್ತರಶತತಮಃ ಸರ್ಗಃ



ಶಕುನಗಳು ಸುತ್ತಲೂ ತಲೆದೋರಿದವು. ತನಗೆ ಜಯವನ್ನು ಸೂಚಿಸುವ ಶುಭನಿಮಿತ್ತಗಳನ್ನು ಕಂಡು ಶ್ರೀರಾಮನು ಸಂತುಷ್ಟನಾಗಿ, ರಾವಣನು ಹತನಾದನೆಂದೇ ತಿಳಿದನು (೩೪-೩೫). ನಿಮಿತ್ತಶಾಸ್ತ್ರದಲ್ಲಿ ನಿಪುಣನಾದ ರಾಘವನು ರಣರಂಗದಲ್ಲಿ ತನಗೆ ವಿಜಯಸೂಚಕವಾದ ಶುಭಶಕುನಗಳನ್ನು ಕಂಡು ಸಂತೋಷದಿಂದ ಪುಳಕಿತಗಾತ್ರನಾದನು. ಯುದ್ಧದಲ್ಲಿ ಮೊದಲಿಗಿಂತ ಅಧಿಕಪರಾಕ್ರಮವನ್ನು ಮೆರೆಸತೊಡಗಿದನು (೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರೆಂಟನೆಯ ಸರ್ಗ



## ನವೋತ್ತರಶತತಮಃ ಸರ್ಗಃ

### ರಾವಣಧ್ವಜೋನ್ಮಥನಮ್

ತತಃ ಪ್ರವೃತ್ತಂ ಸುಕ್ರೂರಂ ರಾಮರಾವಣಯೋಸ್ತದಾ ।
ಸುಮಹದ್ದ್ವೈರಥಂ ಯುದ್ಧಂ ಸರ್ವಲೋಕಭಯಾವಹಮ್ ॥ ೧

ತತೋ ರಾಕ್ಷಸಸೈನ್ಯಂ ಚ ಹರೀಣಾಂ ಚ ಮಹದ್ಬಲಮ್ ।
ಪ್ರಗೃಹೀತಪ್ರಹರಣಂ ನಿಶ್ಚೇಷ್ಟಂ ಸಮತಿಷ್ಠತ ॥ ೨

ಸಂಪ್ರಯುದ್ಧೌ ತತೋ ದೃಷ್ಟ್ವಾ ಬಲವನ್ನರರಾಕ್ಷಸೌ ।
ವ್ಯಾಕ್ಷಿಪ್ತಹೃದಯಾಃ ಸರ್ವೇ ಪರಂ ವಿಸ್ಮಯಮಾಗತಾಃ ॥ ೩

ನಾನಾಪ್ರಹರಣೈರ್ವ್ಯಗ್ರೈರ್ಭುಜೈರ್ವಿಸ್ಮಿತಬುದ್ಧಯಃ ।
ತಸ್ಥುಃ ಪ್ರೇಕ್ಷ್ಯ ಚ ಸಂಗ್ರಾಮಂ ನಾಭಿಜಘ್ನುಃ ಪರಸ್ಪರಮ್ ॥ ೪

## ಸರ್ಗ ೧೦೯

### ರಾವಣನ ಘೋರವಾದ ಯುದ್ಧ. ಅವನ ಧ್ವಜವನ್ನು ಶ್ರೀರಾಮನು ಛೇದಿಸುವುದು.

ಶ್ರೀರಾಮನಿಗೂ ರಾವಣನಿಗೂ ಅತಿಕ್ರೂರವಾದ ಯುದ್ಧವು ನಡೆಯಿತು. ರಥಿಕರೀರ್ವರಿಗೆ ನಡೆದ ಆ ಮಹಾಯುದ್ಧವು ಸರ್ವಲೋಕಗಳನ್ನೂ ಭಯದಿಂದ ತತ್ತರಿಸುವಂತೆ ಮಾಡಿತು. ರಾಕ್ಷಸಸೇನೆಯೂ ಕಪಿಸೇನೆಯೂ ಅನ್ಯೋನ್ಯವಾಗಿ ಹೊಡೆದಾಡಲು ಆಯುಧಗಳನ್ನು ಹಿಡಿದಿದ್ದರೂ ಹೊಡೆದಾಡದೆ, ಆವರೀರ್ವರ ಮಹಾಯುದ್ಧವನ್ನು ನೋಡುತ್ತ ಕಕ್ಕಾಬಿಕ್ಕಿಯಾಗಿ ಸುಮ್ಮನೆ ನಿಂತವು! (೧-೨). ಬಲಾಢ್ಯರಾದ ಮಾನವರಾಕ್ಷಸರಿಬ್ಬರು ಹಣಾಹಣಿಯಾಗಿ ಯುದ್ಧದಲ್ಲಿ ಮುಳುಗಿರುವುದನ್ನು ಕಂಡು, ಸರ್ವರ ಹೃದಯಗಳೂ ಅದರಲ್ಲಿಯೇ ನೆಟ್ಟುಹೋದವು. ಸರ್ವರೂ ಬೆಕ್ಕಸಬೆರಗಾದರು (೩). ಆಶ್ಚರ್ಯಚಕಿತರಾದ ವಾನರರೂ ರಾಕ್ಷಸರೂ ವಿವಿಧಾಯುಧಗಳನ್ನು ಕೈಗಳಲ್ಲಿ ಹಿಡಿದು, ಆ ಸಂಗ್ರಾಮವನ್ನು ನೋಡುತ್ತ

ರಕ್ಷಸಾಂ ರಾವಣಂ ಚಾಪಿ ವಾನರಾಣಾಂ ಚ ರಾಘವಮ್ ।
ಪಶ್ಯತಾಂ ವಿಸ್ಮಿತಾಕ್ಷಾಣಾಂ ಸೈನ್ಯಂ ಚಿತ್ರಮಿವಾಬಭೌ ॥ ೫

ತೌ ತು ತತ್ರ ನಿಮಿತ್ತಾನಿ ದೃಷ್ಟ್ವಾ ರಾವಣರಾಘವೌ ।
ಕೃತಬುದ್ಧೀ ಸ್ಥಿರಾಮರ್ಷೌ ಯುಯುಧಾತೇ ಹ್ಯಭೀತವತ್ ॥ ೬

ಜೇತವ್ಯಮಿತಿ ಕಾಕುತ್ಸ್ಥೋ ಮರ್ತವ್ಯಮಿತಿ ರಾವಣಃ ।
ಧೃತೌ ಸ್ವವೀರ್ಯಸರ್ವಸ್ವಂ ಯುದ್ಧೇಽದರ್ಶಯತಾಂ ತದಾ ॥ ೭

ತತಃ ಕ್ರೋಧಾದ್ದಶಗ್ರೀವಃ ಶರಾನ್ ಸಂಧಾಯ ವೀರ್ಯವಾನ್ ।
ಮುಮೋಚ ಧ್ವಜಮುದ್ದಿಶ್ಯ ರಾಘವಸ್ಯ ರಥೇ ಸ್ಥಿತಮ್ ॥ ೮

ತೇ ಶರಾಸ್ತಮನಾಸಾದ್ಯ ಪುರಂದರರಥಧ್ವಜಮ್ ।
ರಥಶಕ್ತಿಂ ಪರಾಮೃಶ್ಯ ನಿಪೇತುರ್ಧರಣೀತಲೇ ॥ ೯

ತತೋ ರಾಮೋಽಭಿಸಂಕ್ರುದ್ಧಶ್ಚಾಪಮಾಯಮ್ಯ ವೀರ್ಯವಾನ್ ।
ಕೃತಪ್ರತಿಕೃತಂ ಕರ್ತುಂ ಮನಸಾ ಸಂಪ್ರಚಕ್ರಮೇ ॥ ೧೦

---

ನಿಂತರು. ತಾವು ಹೊಡೆದಾಡಲೇ ಇಲ್ಲ! ರಾಕ್ಷಸರು ರಾವಣನನ್ನೂ ವಾನರರು ರಾಘವನನ್ನೂ ವಿಸ್ಮಿತರಾಗಿ ನೆಟ್ಟಕಣ್ಣಿಂದ ನೋಡುತ್ತ ಅಲ್ಲಾಡದೆ ನಿಂತಿರಲು, ಉಭಯಸೈನ್ಯವೂ ಚಿತ್ರದಂತೆ ಕಂಗೊಳಿಸಿತು! (೪-೫). ಶ್ರೀರಾಮನೂ ರಾವಣನೂ ಆ ಸಮಯದಲ್ಲಿ ತಲೆದೋರಿದ ಶುಭಾಶುಭ ನಿಮಿತ್ತಗಳನ್ನು ವೀಕ್ಷಿಸಿ, ಫಲಿತಾಂಶವನ್ನು ಮನಸ್ಸಿನಲ್ಲಿ ನಿರ್ಧರಿಸಿ, ಸ್ಥಿರವಾದ ಅಮರ್ಷದಿಂದ ನಿರ್ಭಯವಾಗಿ ಹೋರಾಡಿದರು. 'ನನಗೆ ಜಯವಾಗುವುದು' ಎಂದು ಕಾಕುತ್ಸ್ಥನೂ 'ನನಗೆ ಮರಣವಾಗುವುದು' ಎಂದು ರಾವಣನೂ ನಿಶ್ಚಯಿಸಿಕೊಂಡರು. ಆದ್ದರಿಂದ ತಮ್ಮ ಶೌರ್ಯಸರ್ವಸ್ವವನ್ನೂ ಯುದ್ಧದಲ್ಲಿ ಪ್ರದರ್ಶಿಸಿದರು (೬-೭). ದಶಗ್ರೀವನು ಸಂಕ್ರುದ್ಧನಾಗಿ ರಾಘವನ ರಥದಲ್ಲಿದ್ದ ಧ್ವಜಕ್ಕೆ ಗುರಿಯಿಟ್ಟು ನಿಶಿತಶರಗಳನ್ನು ಬಿಗಿದನು. ಆ ಶರಗಳು ದೇವೇಂದ್ರನ ರಥಧ್ವಜಕ್ಕೆ ತಾಗದೆ, ರಥಶಕ್ತಿಯೆಂಬ ಭಾಗಕ್ಕೆ ಘರ್ಷಿಸಿ ಪ್ರತಿಹತವಾಗಿ ಕೆಳಗೆ ಬಿದ್ದವು (೮-೯). ಆಗ ಶ್ರೀರಾಮನು ರಾವಣನ ಕೃತ್ಯಕ್ಕೆ ತಕ್ಕ ಪ್ರತೀಕಾರವನ್ನೆಸಗಬೇಕೆಂದು ಉದ್ದೇಶಿಸಿ, ಅವನ

ರಾವಣಧ್ವಜಮುದ್ದಿಶ್ಯ ಮುಮೋಚ ನಿಶಿತಂ ಶರಮ್ ।
ಮಹಾಸರ್ಪಮಿವಾಸಹ್ಯಂ ಜ್ವಲಂತಂ ಸ್ವೇನ ತೇಜಸಾ ॥ ೧೧

ಜಗಾಮ ಸ ಮಹೀಂ ಛಿತ್ತ್ವಾ ದಶಗ್ರೀವಧ್ವಜಂ ಶರಃ ।
ಸ ನಿಕೃತ್ತೋಽಪತದ್ಭೂಮೌ ರಾವಣಸ್ಯ ರಥಧ್ವಜಃ ॥ ೧೨

ಧ್ವಜಸ್ಯೋನ್ಮಥನಂ ದೃಷ್ಟ್ವಾ ರಾವಣಃ ಸುಮಹಾಬಲಃ ।
ಸಂಪ್ರದೀಪ್ತೋಽಭವತ್ ಕ್ರೋಧಾದಮರ್ಷಾತ್ ಪ್ರದಹನ್ನಿವ ॥ ೧೩

ಸ ರೋಷವಶಮಾಪನ್ನಃ ಶರವರ್ಷಂ ಮಹದ್ವಮನ್ ।
ರಾಮಸ್ಯ ತುರಗಾನ್ ದೀಪ್ತೈಃ ಶರೈರ್ವಿವ್ಯಾಧ ರಾವಣಃ ॥ ೧೪

ತೇ ವಿದ್ಧಾ ಹರಯಸ್ತತ್ರ ನಾಸ್ಖಲನ್ನಾಪಿ ಬಭ್ರಮುಃ ।
ಬಭೂವುಃ ಸ್ವಸ್ಥಹೃದಯಾಃ ಪದ್ಮನಾಲೈರಿವಾಹತಾಃ ॥ ೧೫

ತೇಷಾಮಸಂಭ್ರಮಂ ದೃಷ್ಟ್ವಾ ವಾಜಿನಾಂ ರಾವಣಸ್ತದಾ ।
ಭೂಯ ಏವ ಸುಸಂಕ್ರುದ್ಧಃ ಶರವರ್ಷಂ ಮುಮೋಚ ಹ ॥ ೧೬

---

ಧ್ವಜಕ್ಕೆ ಗುರಿಯಿಟ್ಟು ಒಂದು ನಿಶಿತಾಸ್ತ್ರವನ್ನು ಹೊಡೆದನು. ತೇಜಸ್ಸಿನಿಂದ ಪ್ರಜ್ವಲಿಸುತ್ತ ಮಹಾಸರ್ಪದಂತೆ ದುರಾಸದವಾದ ಆ ಅಸ್ತ್ರವು ದಶಗ್ರೀವನ ಧ್ವಜವನ್ನು ಕತ್ತರಿಸಿ ವೇಗದಿಂದ ನುಗ್ಗಿ ನೆಲದಲ್ಲಿ ನಾಟಿತು. ರಾವಣನ ಧ್ವಜವು ತುಂಡಾಗಿ ನೆಲದಲ್ಲಿ ಬಿದ್ದಿತು (೧೧-೧೨). ತನ್ನ ಧ್ವಜವು ಕತ್ತರಿಸಿ ಬಿದ್ದುದನ್ನು ಕಂಡು, ಬಲಾಢ್ಯನಾದ ರಾವಣನು ಸಿಟ್ಟಿನಿಂದ ಬೆಂಕಿಯಾದನು. ಕ್ರೋಧಾವೇಶದಿಂದ ಅವನು ದುರದುರನೆ ನೋಡುತ್ತ ಶ್ರೀರಾಮನಮೇಲೆ ಬಾಣಗಳ ಮಳೆಗರೆದು, ದೀಪ್ತಾಸ್ತ್ರಗಳಿಂದ ಅವನ ತುರಗಗಳನ್ನು ಹೊಡೆದನು (೧೩-೧೪). ರಾವಣನ ದೀಪ್ತಾಸ್ತ್ರಗಳು ಬಂದು ನಾಟಿದರೂ ಆ ದಿವ್ಯಾಶ್ವಗಳು ಮುಗ್ಗರಿಸಲಿಲ್ಲ, ಅತ್ತಿತ್ತ ಹಾರಾಡಲಿಲ್ಲ. ತಾವರೆಯ ದಂಟುಗಳು ತಾಗಿದವೋ ಎಂಬಂತೆ ನೆಮ್ಮದಿಯಿಂದ ಇದ್ದವು! ದಿಗಿಲಿಲ್ಲದೆ ನೆಮ್ಮದಿಯಿಂದಿದ್ದ ಅಶ್ವಗಳನ್ನು ಕಂಡು, ರಾವಣನ ರೋಷವು ಮೇರೆದಪ್ಪಿತು! ಅವನು ಮತ್ತೆ ಶರಜಾಲಗಳನ್ನು ಬಿಗಿದನು

ಗದಾಶ್ಚ ಪರಿಘಾಶ್ಚೈವ ಚಕ್ರಾಣಿ ಮುಸಲಾನಿ ಚ ।
ಗಿರಿಶೃಂಗಾಣಿ ವೃಕ್ಷಾಂಶ್ಚ ತಥಾ ಶೂಲಪರಶ್ವಧಾನ್ ॥ ೧೭

ಮಾಯಾವಿಹಿತಮೇತತ್ತು ಶಸ್ತ್ರವರ್ಷಮಪಾತಯತ್ ।
ತುಮುಲಂ ತ್ರಾಸಜನನಂ ಭೀಮಂ ಭೀಮಪ್ರತಿಸ್ವನಮ್ ॥ ೧೮

ತದ್ವರ್ಷಮಭವದ್ಯುದ್ಧೇ ನೈಕಶಸ್ತ್ರಮಯಂ ಮಹತ್ ।
ವಿಮುಚ್ಯ ರಾಘವರಥಂ ಸಮಂತಾದ್ವಾನರೇ ಬಲೇ ॥ ೧೯

ಸಾಯಕೈರಂತರಿಕ್ಷಂ ಚ ಚಕಾರಾಶು ನಿರಂತರಮ್ ।
ಸಹಸ್ರಶಸ್ತತೋ ಬಾಣಾನಶಾಂತಹೃದಯೋದ್ಯಮಃ ॥ ೨೦

ಮುಮೋಚ ಚ ದಶಗ್ರೀವೋ ನಿಃಸಂಗೇನಾಂತರಾತ್ಮನಾ ।
ವ್ಯಾಯಚ್ಛಮಾನಂ ತಂ ದೃಷ್ಟ್ವಾ ತತ್ಪರಂ ರಾವಣಂ ರಣೇ ॥ ೨೧

ಪ್ರಹಸನ್ನಿವ ಕಾಕುತ್ಸ್ಥಃ ಸಂದಧೇ ಸಾಯಕಾನ್ ಶಿತಾನ್ ।
ಸ ಮುಮೋಚ ತತೋ ಬಾಣಾನ್ ರಣೇ ಶತಸಹಸ್ರಶಃ ॥ ೨೨

---

(೧೫–೧೭). ಅನಂತರ ಗದೆ, ಪರಿಘ, ಚಕ್ರ, ಮುಸಲ, ಗಿರಿಶೃಂಗ, ವೃಕ್ಷ, ಶೂಲ, ಪರಶು—ಮುಂತಾದ ಶಸ್ತ್ರಜಾಲಗಳನ್ನು ಮಾಯಾಬಲದಿಂದ ನಿರ್ಮಿಸಿ ಸುರಿಮಳೆಗರೆದನು. ಭೀಮಧ್ವನಿಗೈಯುವ ಭೀಮಾಕೃತಿಯ ನಾನಾವಿಧ ಭೀಕರಾಯುಧಗಳು, ಶ್ರೀರಾಮನ ರಥವನ್ನು ತ್ಯಜಿಸಿ, ಸುತ್ತಲೂ ಇದ್ದ ವಾನರಸೇನೆಯಮೇಲೆ ರಭಸದಿಂದ ಸಿಡಿಯತೊಡಗಿದವು! (೧೮–೧೯). ಅಲ್ಲದೆ ರಾವಣನು ಸಾಯಕಗಳನ್ನು ಸಂತತವಾಗಿ ಹೊಡೆದು ಅಂತರಿಕ್ಷವನ್ನು ಆಚ್ಛಾದಿಸಿದನು. ಅವನ ಉತ್ಸಾಹವು ಕುಗ್ಗಲಿಲ್ಲ; ಉದ್ಯಮವು ಕುಸಿಯಲಿಲ್ಲ. ಯುದ್ಧತಲ್ಲೀನನಾದ ದಶಗ್ರೀವನು ಬಾಹ್ಯದ ಪರಿವೆಯಿಲ್ಲದೆ ಸತತವಾಗಿ ಸಾವಿರಾರು ಬಾಣಗಳನ್ನು ಜೋಡಿಸಿ ಹೊಡೆಯುತ್ತಲೇ ಹೋದನು (೨೦–೨೧). ಹೀಗೆ ಶರಸಂಧಾನನಿರತನಾದ ರಾವಣನನ್ನು ನೋಡಿ ಕಾಕುತ್ಸ್ಥನು ಮುಗುಳ್ನಗೆ ಬೀರಿ, ತಾನೂ ನೂರಾರು ಸಾವಿರಾರು ಬಾಣಗಳನ್ನು ಜೋಡಿಸಿ ಬಿಡತೊಡಗಿದನು! ಶ್ರೀರಾಮನ ಶರಸಂಪಾತವನ್ನು ವೀಕ್ಷಿಸಿ, ಆ ಶರಗಳನ್ನು ತುಂಡರಿಸುವುದಕ್ಕಾಗಿ ರಾವಣನು ಮತ್ತೆ ಶರಪರಂಪರೆಗಳಿಂದ ಆಕಾಶವನ್ನು ನಿರಂತರವಾಗಿ

ತಾನ್ ದೃಷ್ಟ್ವಾ ರಾವಣಶ್ಚಕ್ರೇ ಸ್ವಶರೈಃ ಖಂ ನಿರಂತರಮ್ ।
ತತಸ್ತಾಭ್ಯಾಂ ಪ್ರಮುಕ್ತೇನ ಶರವರ್ಷೇಣ ಭಾಸ್ವತಾ ॥ ೨೩

ಶರಬದ್ಧಮಿವಾಭಾತಿ ದ್ವಿತೀಯಂ ಭಾಸ್ವದಂಬರಮ್ ।
ನಾನಿಮಿತ್ತೋಽಭವದ್ಬಾಣೋ ನಾತಿಭೇತ್ತಾ ನ ನಿಷ್ಫಲಃ ॥ ೨೪

ಅನ್ಯೋಽನ್ಯಮಭಿಸಂಹತ್ಯ ನಿಪೇತುರ್ಧರಣೀತಲೇ ।
ತಥಾ ವಿಸೃಜತೋರ್ಬಾಣಾನ್ ರಾಮರಾವಣಯೋರ್ಮೃಧೇ ॥ ೨೫

ಪ್ರಾಯುಧ್ಯತಾಮವಿಚ್ಛಿನ್ನಮಸ್ಯಂತೌ ಸವ್ಯದಕ್ಷಿಣಮ್ ।
ಚಕ್ರತುಶ್ಚ ಶರೌಘೈಸ್ತೌ ನಿರುಚ್ಛ್ವಾಸಮಿವಾಂಬರಮ್ ॥ ೨೬

ರಾವಣಸ್ಯ ಹಯಾನ್ ರಾಮೋ ಹಯಾನ್ ರಾಮಸ್ಯ ರಾವಣಃ ।
ಜಘ್ನತುಸ್ತೌ ತಥಾನ್ಯೋಽನ್ಯಂ ಕೃತಾನುಕೃತಕಾರಿಣೌ ॥ ೨೭

ಏವಂ ತು ತೌ ಸುಸಂಕ್ರುದ್ಧೌ ಚಕ್ರತುರ್ಯುದ್ಧಮುದ್ಭುತಮ್ ।
ಮುಹೂರ್ತಮಭವದ್ಯುದ್ಧಂ ತುಮುಲಂ ರೋಮಹರ್ಷಣಮ್ ॥ ೨೮

---

ಮುಚ್ಚಿದನು (೨೨). ಅವರೀರ್ವರ ಜಾಜ್ವಲ್ಯಮಾನವಾದ ಶರವರ್ಷದಿಂದ ವ್ಯಾಪ್ತವಾದ ಆಕಾಶವು, ಶರನಿರ್ಮಿತವಾಗಿ ಹೊಳೆಯುವ ಮತ್ತೊಂದು ಆಕಾಶವೋ ಎಂಬಂತೆ ಕಂಗೊಳಿಸಿತು. ಆದರೆ, ಅವರು ಪ್ರಯೋಗಿಸಿದ ಬಾಣಗಳಲ್ಲಿ ಯಾವುದೊಂದು ಬಾಣವೂ ಗುರಿಯಿಲ್ಲದೆ ಹೊಡೆದುದಲ್ಲ; ಆವಶ್ಯಕತೆಗಿಂತ ಹೆಚ್ಚು ವೇಗದಿಂದ ತಾಗತಕ್ಕದ್ದಲ್ಲ; ಗುರಿತಾಗದೆ ನಿಷ್ಫಲವಾದುದೂ ಅಲ್ಲ (೨೩–೨೪). ಆ ಬಾಣಗಳು ಅನ್ಯೋನ್ಯವಾಗಿ ಸಂಘಟ್ಟಿಸಿ ಧರೆಗೆ ಉರುಳುತ್ತಿದ್ದವು. ಶ್ರೀರಾಮನೂ ರಾವಣನೂ ಆ ರೀತಿಯಲ್ಲಿ ಬಾಣಗಳನ್ನು ಹೊಡೆಯುತ್ತ, ಎಡಗೈಯಿಂದ ಬಲಗೈಗೆ ಬಲಗೈಯಿಂದ ಎಡಗೈಗೆ ಧನುಸ್ಸುಗಳನ್ನು ಬದಲಾಯಿಸುತ್ತ, ನಿರಂತರವಾಗಿ ಕಾದಾಡಿದರು. ಗಾಳಿ ಸುಳಿಯದಂತೆ ಶರರಾಶಿಗಳನ್ನು ಅಂಬರದಲ್ಲಿ ತುಂಬಿದರು (೨೫–೨೬). ರಾವಣನ ಅಶ್ವಗಳನ್ನು ಶ್ರೀರಾಮನೂ, ಶ್ರೀರಾಮನ ಅಶ್ವಗಳನ್ನು ರಾವಣನೂ ಸೇಡಿಗೆ ಸೇಡೆಂದು ಬಗೆದು ಬಾಣಗಳಿಂದ ಬಾರಿಸಿದರು. ಈ ಪ್ರಕಾರದಲ್ಲಿ ರೋಷಾವಿಷ್ಟರಾದ ಅವರಿಬ್ಬರೂ ಅದ್ಭುತವಾದ ಸಂಗ್ರಾಮವನ್ನು ಹೂಡಿದರು. ಒಂದು ಮುಹೂರ್ತದಲ್ಲಿ ಆ ಸಂಗ್ರಾಮವು

ಪ್ರಯುಧ್ಯಮಾನೌ ಸಮರೇ ಮಹಾಬಲೌ
ಶಿತೈಃ ಶರೈ ರಾವಣಲಕ್ಷ್ಮಣಾಗ್ರಜೌ ।
ಧ್ವಜಾವಪಾತೇನ ಸ ರಾಕ್ಷಸಾಧಿಪೋ
ಭೃಶಂ ಪ್ರಚುಕ್ರೋಧ ತದಾ ರಘೂತ್ತಮೇ ॥ ೨೯

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ನವೋತ್ತರಶತತಮಃ ಸರ್ಗಃ



ಅತಿಘೋರವಾಗಿ ರೋಮಾಂಚಕರವಾಗಿ ಬೆಳೆಯಿತು (೨೭-೨೮). ಕಡುಗಲಿಗಳಾದ ಶ್ರೀರಾಮನೂ ರಾವಣನೂ ಸಮರಭೂಮಿಯಲ್ಲಿ ನಿಶಿತಶರಗಳಿಂದ ಕಾದಾಡಿದರು. ತನ್ನ ಧ್ವಜವನ್ನು ಮುರಿದುದರಿಂದ ರಾಕ್ಷಸೇಶ್ವರನು ರಘೂತ್ತಮನಲ್ಲಿ ಚಂಡಕೋಪವನ್ನು ತಳೆದಿದ್ದನು (೨೯).*

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರೊಂಬತ್ತನೆಯ ಸರ್ಗ



* ೨೯ನೆಯ ಶ್ಲೋಕವು ಪ್ರಕ್ಷಿಪ್ತವೆಂದೂ ಇಲ್ಲಿಗೆ ಸರ್ಗವು ಮುಗಿಯುವುದಿಲ್ಲವೆಂದೂ ಕತಕವ್ಯಾಖ್ಯಾನಕಾರರು ಹೇಳುತ್ತಾರೆ.

## ದಶೋತ್ತರಶತತಮಃ ಸರ್ಗಃ

### ರಾವಣಸ್ಯೈಕಶತಶಿರಶ್ಛೇದನಮ್

ತೌ ತದಾ ಯುಧ್ಯಮಾನೌ ತು ಸಮರೇ ರಾಮರಾವಣೌ ।
ದದೃಶುಃ ಸರ್ವಭೂತಾನಿ ವಿಸ್ಮಿತೇನಾಂತರಾತ್ಮನಾ ॥ ೧

ಅರ್ದಯಂತೌ ತು ಸಮರೇ ತಯೋಸ್ತೌ ಸ್ಯಂದನೋತ್ತಮೌ ।
ಪರಸ್ಪರಮಭಿಕ್ರುದ್ಧೌ ಪರಸ್ಪರಮಭಿದ್ರುತೌ ॥ ೨

ಪರಸ್ಪರವಧೇ ಯುಕ್ತೌ ಘೋರರೂಪೌ ಬಭೂವತುಃ ।
ಮಂಡಲಾನಿ ಚ ವೀಥೀಶ್ಚ ಗತಪ್ರತ್ಯಾಗತಾನಿ ಚ ॥ ೩

ದರ್ಶಯಂತೌ ಬಹುವಿಧಾಂ ಸೂತಸಾರಥ್ಯಜಾಂ ಗತಿಮ್ ।
ಅರ್ದಯನ್ ರಾವಣಂ ರಾಮೋ ರಾಘವಂ ಚಾಪಿ ರಾವಣಃ ॥ ೪

### ಸರ್ಗ ೧೧೦

ಶ್ರೀರಾಮ ರಾವಣರ ಘೋರಯುದ್ಧ. ಶ್ರೀರಾಮನಿಂದ ರಾವಣನ ಶಿರಶ್ಛೇದನ. ಮತ್ತೆ ಹೊಸ ಶಿರಸ್ಸುಗಳು ಬೆಳೆಯುವುದನ್ನು ಕಂಡು ಶ್ರೀರಾಮನ ಚಿಂತೆ.

ಹೀಗೆ ಶ್ರೀರಾಮನೂ ರಾವಣನೂ ಸಮರಭೂಮಿಯಲ್ಲಿ ಹೋರಾಡುವುದನ್ನು ಸಕಲಭೂತಜಾತಗಳೂ ವಿಸ್ಮಯದಿಂದ ನೋಡುತ್ತಿದ್ದವು. ಆ ಮಹಾರಥಿಕರಿಬ್ಬರೂ ಒಬ್ಬರನ್ನೊಬ್ಬರು ಕ್ರೋಧದಿಂದ ನೋಡುತ್ತ, ಒಬ್ಬರಮೇಲೊಬ್ಬರು ಏರಿಹೋಗುತ್ತ, ಒಬ್ಬರನ್ನೊಬ್ಬರು ಶರಜಾಲಗಳಿಂದ ಮರ್ದಿಸುತ್ತ ಕಾದಾಡಿದರು (೧–೨). ಒಬ್ಬರನ್ನೊಬ್ಬರು ವಧಿಸಬೇಕೆಂಬ ಛಲದಿಂದ ಭೀಕರಸ್ವರೂಪರಾದರು. ತಮ್ಮ ಸಾರಥಿಗಳ ನೈಪುಣ್ಯದಿಂದ ಮಂಡಲ, ವೀಥಿ, ಗತಪ್ರತ್ಯಾಗತ ಮುಂತಾದ ನಾನಾಬಗೆಯ ಗತಿವಿಶೇಷಗಳನ್ನು ಪ್ರದರ್ಶಿಸುತ್ತ ಯುದ್ಧಮಾಡಿದರು. ರಾಘವನು ರಾವಣನನ್ನೂ ರಾವಣನು ರಾಘವನನ್ನೂ ಕೂರ್ಗಣೆಗಳಿಂದ ಥಳಿಸುತ್ತ, ಒಮ್ಮೆಯೇ ಮೇಲೇರಿಹೋಗುತ್ತ, ಹಾಗೆಯೇ ಹಿಂದೆ ಸರಿಯುತ್ತ ಹೋರಾಡಿದರು

ಗತಿವೇಗಂ ಸಮಾಪನ್ನೌ ಪ್ರವರ್ತನನಿವರ್ತನೇ ।
ಕ್ಷಿಪತೋಃ ಶರಜಾಲಾನಿ ತಯೋಸ್ತೌ ಸ್ಯಂದನೋತ್ತಮೌ ॥ ೫

ಚೇರತುಃ ಸಂಯುಗಮಹೀಂ ಸಾಸಾರೌ ಜಲದೌ ಯಥಾ ।
ದರ್ಶಯಿತ್ವಾ ತಥಾ ತೌ ತು ಗತಿಂ ಬಹುವಿಧಾಂ ರಣೇ ॥ ೬

ಪರಸ್ಪರಸ್ಯಾಭಿಮುಖೌ ಪುನರೇವಾವತಸ್ಥತುಃ ।
ಧುರಂ ಧುರೇಣ ರಥಯೋರ್ವಕ್ತ್ರಂ ವಕ್ತ್ರೇಣ ವಾಜಿನಾಮ್ ॥ ೭

ಪತಾಕಾಶ್ಚ ಪತಾಕಾಭಿಃ ಸಮೇಯುಃ ಸ್ಥಿತಯೋಸ್ತದಾ ।
ರಾವಣಸ್ಯ ತತೋ ರಾಮೋ ಧನುರ್ಮುಕ್ತೈಃ ಶಿತೈಃ ಶರೈಃ ॥ ೮

ಚತುರ್ಭಿಶ್ಚತುರೋ ದೀಪ್ತೈರ್ಹಯಾನ್ ಪ್ರತ್ಯಪಸರ್ಪಯತ್ ।
ಸ ಕ್ರೋಧವಶಮಾಪನ್ನೋ ಹಯಾನಾಮಪಸರ್ಪಣೇ ॥ ೯

ಮುಮೋಚ ನಿಶಿತಾನ್ ಬಾಣಾನ್ ರಾಘವಾಯ ನಿಶಾಚರಃ ।
ಸೋಽತಿವಿದ್ಧೋ ಬಲವತಾ ದಶಗ್ರೀವೇಣ ರಾಘವಃ ॥ ೧೦

---

(೩-೪). ಧಾರಾಕಾರವಾಗಿ ಮಳೆಗರೆಯುವ ಎರಡು ಮೇಘಗಳಂತೆ ನಿರಂತರವಾಗಿ ಶರಜಾಲಗಳನ್ನು ತೂರುತ್ತ, ಅವರಿಬ್ಬರ ಮಹಾರಥಗಳು ಸಂಗ್ರಾಮಭೂಮಿಯಲ್ಲಿ ಭರದಿಂದ ಸುತ್ತಾಡಿದವು. ಹೀಗೆ ಬಹುಬಗೆಯ ರಥಗತಿಗಳನ್ನು ಪ್ರದರ್ಶಿಸಿ, ಮತ್ತೆ ನೇರವಾಗಿ ಸಮ್ಮುಖದಲ್ಲಿ ನಿಂತು ಹಣಾಹಣಿಯಾಗಿ ಹೆಣಗಿದರು (೫-೬). ಈರ್ವರೂ ಅಭಿಮುಖವಾಗಿ ನುಗ್ಗಲು, ರಥದ ಮೂಕಿಯು ಎದುರಾದ ರಥದ ಮೂಕಿಯನ್ನೂ ಅಶ್ವಗಳ ಮುಖಗಳು ಅಶ್ವಗಳ ಮುಖಗಳನ್ನೂ ಪತಾಕೆಗಳು ಪತಾಕೆಗಳನ್ನೂ ತಾಗಿ ನಿಂತವು! ಆಗ ರಾಘವನು ನಾಲ್ಕು ಶಿತಶರಗಳನ್ನು ಬಿಗಿದು, ರಾವಣನ ನಾಲ್ಕು ಕುದುರೆಗಳನ್ನೂ ಹಿಂದಕ್ಕೆ ಅಟ್ಟಿದನು (೭-೮). ತನ್ನ ರಥಾಶ್ವಗಳನ್ನು ಹಿಂದಟ್ಟಿದನೆಂದು ಕ್ರೋಧೋದ್ರಿಕ್ತನಾದ ರಾಕ್ಷಸೇಂದ್ರನು ಕೂರ್ಗಣೆಗಳನ್ನು ಸೆಳೆದು ರಾಘವನಿಗೆ ಗುರಿಯಿಟ್ಟು ಬಿಗಿದನು. ಆದರೆ ಅದರಿಂದ ಶ್ರೀರಾಮನಿಗೆ ವೇದನೆಯಾಗಲೂ ಇಲ್ಲ, ವೇದನೆಯನ್ನು

ಜಗಾಮ ನ ವಿಕಾರಂ ಚ ನ ಚಾಪಿ ವ್ಯಥಿತೋಽಭವತ್ ।
ಚಿಕ್ಷೇಪ ಚ ಪುನರ್ಬಾಣಾನ್ ವಜ್ರಪಾತಸಮಸ್ವನಾನ್ ॥ ೧೧

ಸಾರಥಿಂ ವಜ್ರಹಸ್ತಸ್ಯ ಸಮುದ್ದಿಶ್ಯ ನಿಶಾಚರಃ ।
ಮಾತಲೇಸ್ತು ಮಹಾವೇಗಾಃ ಶರೀರೇ ಪತಿತಾಃ ಶರಾಃ ॥ ೧೨

ನ ಸೂಕ್ಷ್ಮಮಪಿ ಸಂಮೋಹಂ ವ್ಯಥಾಂ ವಾ ಪ್ರದದುರ್ಯುಧಿ ।
ತಯಾ ಧರ್ಷಣಯಾ ಕ್ರುದ್ಧೋ ಮಾತಲೇರ್ನ ತಥಾತ್ಮನಃ ॥ ೧೩

ಚಕಾರ ಶರಜಾಲೇನ ರಾಘವೋ ವಿಮುಖಂ ರಿಪುಮ್ ।
ವಿಂಶತಂ ತ್ರಿಂಶತಂ ಷಷ್ಟಿಂ ಶತಶೋಽಥ ಸಹಸ್ರಶಃ ॥ ೧೪

ಮುಮೋಚ ರಾಘವೋ ವೀರಃ ಸಾಯಕಾನ್ ಸ್ಯಂದನೇ ರಿಪೋಃ ।
ರಾವಣೋಽಪಿ ತತಃ ಕ್ರುದ್ಧೋ ರಥಸ್ಥೋ ರಾಕ್ಷಸೇಶ್ವರಃ ॥ ೧೫

ಗದಾಮುಸಲವರ್ಷೇಣ ರಾಮಂ ಪ್ರತ್ಯರ್ದಯದ್ರಣೇ ।
ತತ್ಪ್ರವೃತ್ತಂ ಮಹದ್ಯುದ್ಧಂ ತುಮುಲಂ ರೋಮಹರ್ಷಣಮ್ ॥ ೧೬

ಗದಾನಾಂ ಮುಸಲಾನಾಂ ಚ ಪರಿಘಾಣಾಂ ಚ ನಿಃಸ್ವನೈಃ ।
ಶರಾಣಾಂ ಪುಂಖಪಾತೈಶ್ಚ ಕ್ಷುಭಿತಾಃ ಸಪ್ತ ಸಾಗರಾಃ ॥ ೧೭

---

ಸೂಚಿಸುವ ಮುಖವಿಕಾರವೂ ಕಾಣಲಿಲ್ಲ (೯-೧೧). ರಾವಣನು ಮತ್ತೆ ಕೂರಂಬುಗಳನ್ನು ಹೂಡಿ ಇಂದ್ರಸಾರಥಿಯಾದ ಮಾತಲಿಗೆ ಗುರಿಯಿಟ್ಟು ಹೊಡೆದನು. ಆ ಬಾಣಗಳು ಸಿಡಿಲಿನಂತೆ ಘೋರ್ಗರೆಯುತ್ತ ಬಂದು ಮಾತಲಿಯ ದೇಹದಲ್ಲಿ ನೆಟ್ಟವು. ಆದರೆ ಮಾತಲಿಗೆ ಸ್ವಲ್ಪವೂ ದಿಗ್ಭ್ರಮೆ ಯಾಗಲಿಲ್ಲ; ವ್ಯಥೆಯೂ ಆಗಲಿಲ್ಲ. ಆಗ ತನ್ನನ್ನು ಹೊಡೆದುದಕ್ಕಾಗಿ ಅಷ್ಟು ಕೋಪಗೊಳ್ಳದಿದ್ದರೂ ಮಾತಲಿಯನ್ನು ಹೊಡೆದುದಕ್ಕಾಗಿ ಶ್ರೀರಾಮನು ಅತ್ಯಂತ ಕುಪಿತನಾದನು (೧೧-೧೩). ಆ ವೀರಾಗ್ರಣಿಯು ಇಪ್ಪತ್ತು, ಮೂವತ್ತು, ಅರುವತ್ತು, ನೂರು, ಸಾವಿರಗಟ್ಟಲೆ ಶರಜಾಲ ಗಳನ್ನು ಸತತವಾಗಿ ರಾವಣನ ರಥಕ್ಕೆ ಬಿಗಿದು, ವೈರಿಯು ವಿಮುಖನಾಗಿ ಸರಿಯುವಂತೆ ಮಾಡಿದನು. ರೋಷಾವಿಷ್ಟನಾದ ರಾಕ್ಷಸೇಶ್ವರನು ಗದೆ ಗಳನ್ನೂ ಮುಸಲಗಳನ್ನೂ ಶ್ರೀರಾಮನಮೇಲೆ ವರ್ಷಿಸಿದನು. ಹೀಗೆ ಮೈನವಿರೇಳಿಸುವ ಘೋರವಾದ ದ್ವಂದ್ವಯುದ್ಧವು ನಡೆಯಿತು (೧೪-೧೬). ಗದೆಗಳ, ಮುಸಲಗಳ, ಪರಿಘಗಳ ವೇಗಜನ್ಯವಾದ ಝಂಕಾರಗಳಿಂದಲೂ

ಕ್ಷುಬ್ಧಾನಾಂ ಸಾಗರಾಣಾಂ ಚ ಪಾತಾಲತಲವಾಸಿನಃ ।
ವ್ಯಥಿತಾಃ ಪನ್ನಗಾಃ ಸರ್ವೇ ದಾನವಾಶ್ಚ ಸಹಸ್ರಶಃ ॥ ೧೮

ಚಕಂಪೇ ಮೇದಿನೀ ಕೃತ್ಸ್ನಾ ಸಶೈಲವನಕಾನನಾ ।
ಭಾಸ್ಕರೋ ನಿಷ್ಪ್ರಭಶ್ಚಾಸೀನ್ನ ವವೌ ಚಾಪಿ ಮಾರುತಃ ॥ ೧೯

ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಚಿಂತಾಮಾಪೇದಿರೇ ಸರ್ವೇ ಸಕಿಂನರಮಹೋರಗಾಃ ॥ ೨೦

ಸ್ವಸ್ತಿ ಗೋಬ್ರಾಹ್ಮಣೇಭ್ಯೋಽಸ್ತು ಲೋಕಾಸ್ತಿಷ್ಠಂತು ಶಾಶ್ವತಾಃ ।
ಜಯತಾಂ ರಾಘವಃ ಸಂಖ್ಯೇ ರಾವಣಂ ರಾಕ್ಷಸೇಶ್ವರಮ್ ॥ ೨೧

ಏವಂ ಜಪಂತೋಽಪಶ್ಯಂಸ್ತೇ ದೇವಾಃ ಸರ್ಷಿಗಣಾಸ್ತದಾ ।
ರಾಮರಾವಣಯೋರ್ಯುದ್ಧಂ ಸುಘೋರಂ ರೋಮಹರ್ಷಣಮ್ ॥

ಗಂಧರ್ವಾಪ್ಸರಸಾಂ ಸಂಘಾ ದೃಷ್ಟ್ವಾ ಯುದ್ಧಮನೂಪಮಮ್ ।
ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ ॥ ೨೩

---

ಶರಪುಂಖಗಳ ಬಿರುಸಿನಿಂದೆದ್ದ ಗಾಳಿಯಿಂದಲೂ ಸಪ್ತಸಾಗರಗಳು ಪ್ರಕ್ಷುಬ್ಧವಾದವು. ಹಾಗೆ ಸಾಗರಗಳು ಉಲ್ಲೋಲಕಲ್ಲೋಲವಾಗಲು ಪಾತಾಳವಾಸಿಗಳಾದ ಪನ್ನಗದಾನವಾದಿಗಳೆಲ್ಲರೂ ವ್ಯಥೆಗೊಂಡರು (೧೭-೧೮). ಪರ್ವತಾರಣ್ಯಸಹಿತವಾಗಿ ಇಡೀ ಪೃಥ್ವಿಯೇ ಕಂಪಿಸಿತು. ಸೂರ್ಯನು ಮಾಸಿದನು. ವಾಯುಚಲನೆಯೇ ನಿಂತಿತು. ದೇವಗಂಧರ್ವರೂ ಸಿದ್ಧಪರಮರ್ಷಿಗಳೂ ಕಿನ್ನರಮಹೋರಗರೂ ಜಗತ್ತಿಗೆ ಯಾವ ವಿಪತ್ತು ಸಂಭವಿಸುವುದೋ ಎಂದು ಚಿಂತೆಗೊಳಗಾದರು (೧೯-೨೦). ರೋಮಾಂಚಕರವಾದ ಆ ಘೋರಯುದ್ಧವನ್ನು ನೋಡುತ್ತಿದ್ದ ದೇವತೆಗಳೂ ಋಷಿಗಳೂ "ಗೋಬ್ರಾಹ್ಮಣರಿಗೆ ಶುಭವಾಗಲಿ! ಪ್ರಜೆಗಳು ಶಾಶ್ವತವಾಗಿ ಕ್ಷೇಮದಿಂದ ಜೀವಿಸಲಿ! ಶ್ರೀರಾಮನು ರಾಕ್ಷಸೇಶ್ವರನಾದ ರಾವಣನನ್ನು ಯುದ್ಧದಲ್ಲಿ ಜಯಿಸಲಿ!" ಎಂದು ಜಪಿಸುತ್ತಿದ್ದರು! (೨೧-೨೨). ಜಗತ್ತಿನಲ್ಲಿ ಅಂತಹ ಯುದ್ಧವನ್ನೇ ಕಂಡರಿಯದ ಗಂಧರ್ವರೂ ಅಪ್ಸರೆಯರೂ ಅಸದೃಶವಾದ

ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ।
ಏವಂ ಬ್ರುವಂತೋ ದದೃಶುಸ್ತದ್ಯುದ್ಧಂ ರಾಮರಾವಣಮ್ ॥ ೨೪

ತತಃ ಕ್ರುದ್ಧೋ ಮಹಾಬಾಹೂ ರಘೂಣಾಂ ಕೀರ್ತಿವರ್ಧನಮ್ ।
ಸಂಧಾಯ ಧನುಷಾ ರಾಮಃ ಕ್ಷುರಮಾಶೀವಿಷೋಪಮಮ್ ॥ ೨೫

ರಾವಣಸ್ಯ ಶಿರೋಽಚ್ಛಿಂದಚ್ಛ್ರೀಮಜ್ಜ್ವಲಿತಕುಂಡಲಮ್ ।
ತಚ್ಛಿರಃ ಪತಿತಂ ಭೂಮೌ ದೃಷ್ಟಂ ಲೋಕೈಸ್ತ್ರಿಭಿಸ್ತದಾ ॥ ೨೬

ತಸ್ಯೈವ ಸದೃಶಂ ಚಾನ್ಯದ್ರಾವಣಸ್ಯೋತ್ಥಿತಂ ಶಿರಃ ।
ತತ್ಕ್ಷಿಪ್ರಂ ಕ್ಷಿಪ್ರಹಸ್ತೇನ ರಾಮೇಣ ಕ್ಷಿಪ್ರಕಾರಿಣಾ ॥ ೨೭

ದ್ವಿತೀಯಂ ರಾವಣಶಿರಶ್ಛಿನ್ನಂ ಸಂಯತಿ ಸಾಯಕೈಃ ।
ಛಿನ್ನಮಾತ್ರಂ ತು ತಚ್ಛೀರ್ಷಂ ಪುನರನ್ಯತ್ ಸ್ಮ ದೃಶ್ಯತೇ ॥ ೨೮

ತದಪ್ಯಶನಿಸಂಕಾಶೈಶ್ಛಿನ್ನಂ ರಾಮೇಣ ಸಾಯಕೈಃ ।
ಏವಮೇಕಶತಂ ಛಿನ್ನಂ ಶಿರಸಾಂ ತುಲ್ಯವರ್ಚಸಾಮ್ ॥ ೨೯

---

ಆ ಭೀಕರ ಸಂಗ್ರಾಮವನ್ನು ನೋಡಿ "ಗಗನಕ್ಕೆ ಗಗನವೇ ಸಾಟಿ, ಸಮುದ್ರಕ್ಕೆ ಸಮುದ್ರವೇ ಸಾಟಿ, ರಾಮರಾವಣರ ಯುದ್ಧಕ್ಕೆ ರಾಮ ರಾವಣರ ಯುದ್ಧವೇ ಸಾಟಿ!" ಎಂದು ಉದ್ಗರಿಸಿದರು! (೨೩-೨೪). ಹೀಗಿರುವಾಗ, ಮಹಾಬಾಹುವೂ ರಘುಕುಲಕೀರ್ತಿವರ್ಧನನೂ ಆದ ಶ್ರೀರಾಮನು ಸರ್ಪವಿಷಕ್ಕೆ ಸಮಾನವಾದ ನಿಶಿತಾಸ್ತ್ರವೊಂದನ್ನು ಧನುಸ್ಸಿಗೆ ಹೂಡಿ ಪ್ರಯೋಗಿಸಿ, ರಾವಣನ ಶಿರಸ್ಸನ್ನು ಕತ್ತರಿಸಿದನು! ಹೊಳೆಯುವ ಕುಂಡಲಗಳಿಂದ ಯುಕ್ತವಾಗಿ ತೇಜಸ್ವಿಯಾಗಿದ್ದ ಆ ಶಿರಸ್ಸು ಭೂಮಿಯಲ್ಲಿ ಬೀಳುವುದನ್ನು ಮೂರು ಲೋಕಗಳೂ ನೋಡಿದವು (೨೫-೨೬). ಆದರೇನು? ಅದೇ ರೀತಿಯಲ್ಲಿದ್ದ ಮತ್ತೊಂದು ಶಿರಸ್ಸು ರಾವಣನಿಗೆ ಉದ್ಭವಿಸಿತು! ಒಡನೆಯೇ ತಡಮಾಡದೆ ಶ್ರೀರಾಮನು ಮತ್ತೆ ಸಾಯಕಗಳನ್ನು ಹೊಡೆದು ಎರಡನೆಯ ಆ ಶಿರಸ್ಸನ್ನು ಕಡಿದನು. ಕಡಿದೊಡನೆಯೇ ಮತ್ತೆ ಆ ಸ್ಥಳದಲ್ಲಿ ಮತ್ತೊಂದು ಶಿರಸ್ಸು ಕಾಣಿಸಿತು! (೨೭-೨೮). ವಜ್ರಸಂಕಾಶಗಳಾದ ಸಾಯಕಗಳಿಂದ ರಾಘವನು ಅದನ್ನೂ ಛೇದಿಸಿದನು. ಹೀಗೆ ನೂರೊಂದುಸಲ ಬಾಣಗಳನ್ನು ಹೊಡೆದು, ಒಂದೇ ಆಕೃತಿಯ

ನ ಚೈವ ರಾವಣಸ್ಯಾಂತೋ ದೃಶ್ಯತೇ ಜೀವಿತಕ್ಷಯೇ ।
ತತಃ ಸರ್ವಾಸ್ತ್ರವಿದ್ವೀರಃ ಕೌಸಲ್ಯಾನಂದವರ್ಧನಃ ॥ ೩೦

ಮಾರ್ಗಣೈರ್ಬಹುಭಿರ್ಯುಕ್ತಶ್ಚಿಂತಯಾಮಾಸ ರಾಘವಃ ।
ಮಾರೀಚೋ ನಿಹತೋ ಯೈಸ್ತು ಖರೋ ಯೈಸ್ತು ಸದೂಷಣಃ ॥

ಕ್ರೌಂಚಾರಣ್ಯೇ ವಿರಾಧಸ್ತು ಕಬಂಧೋ ದಂಡಕಾವನೇ ।
ಯೈಃ ಸಾಲಾ ಗಿರಯೋ ಭಗ್ನಾ ವಾಲೀ ಚ ಕ್ಷುಭಿತೋಽಂಬುಧಿಃ ॥

ತ ಇಮೇ ಸಾಯಕಾಃ ಸರ್ವೇ ಯುದ್ಧೇ ಪ್ರಾತ್ಯಯಿಕಾ ಮಮ ।
ಕಿಂ ನು ತತ್ಕಾರಣಂ ಯೇನ ರಾವಣೇ ಮಂದತೇಜಸಃ ॥ ೩೩

---

ನೂರೊಂದು ಶಿರಸ್ಸುಗಳನ್ನು ಕತ್ತರಿಸಿದನು*(೨೯). ರಾವಣನ ಜೀವಿತಕ್ಕೆ ಅಂತ್ಯವೇ ಕಾಣಿಸಲಿಲ್ಲ. ಆಗ ನಿಖಿಲ ಮಂತ್ರಾಸ್ತ್ರಕೋವಿದನೂ, ನಾನಾ ಬಗೆಯ ಮಾರ್ಗಣಗಳಿಂದ ಯುಕ್ತನೂ, ಕೌಸಲ್ಯಾನಂದವರ್ಧನನೂ ಆದ ಶ್ರೀರಾಮನು "ಎಲಾ! ಏನಿದು? ಯಾವ ಬಾಣಗಳಿಂದ ಮಾರೀಚನು ಹತನಾದನೋ, ಖರದೂಷಣರು ನಿರ್ನಾಮವಾದರೋ ಅವೇ ಈ ಬಾಣಗಳು! (೩೦-೩೧). ಯಾವ ಶರಗಳಿಂದ ಕ್ರೌಂಚಾರಣ್ಯದಲ್ಲಿ ಕಬಂಧನೂ ದಂಡಕಾರಣ್ಯದಲ್ಲಿ ವಿರಾಧನೂ ವಿಧ್ವಸ್ತರಾದರೋ, ಯಾವ ಶರಗಳು ಸಪ್ತಸಾಲಗಳನ್ನು ಭೇದಿಸಿ ಆಚೆಗಿದ್ದ ಪರ್ವತಗಳಲ್ಲಿ ತೂರಿ ಹೋದವೋ, ವಾಲಿಯನ್ನು ಸಂಹರಿಸಿ ಸಮುದ್ರವನ್ನು ನಡುಗಿಸಿದವೋ ಆ ಶರಗಳೇ ಇವು! (೩೨). ಈ ಸಮಸ್ತ ಸಾಯಕಗಳೂ ಯುದ್ಧದಲ್ಲಿ ಸಂಪೂರ್ಣವಾಗಿ ನನ್ನ ವಿಶ್ವಾಸಕ್ಕೆ ಪಾತ್ರವಾದವು. ಇಂತಹ ಅಪ್ರತಿ ದ್ವಂದ್ವ ಬಾಣಗಳು ರಾವಣನಲ್ಲಿ ತೇಜೋಹೀನವಾಗಿ ವರ್ತಿಸುತ್ತಿವೆಯಲ್ಲ,

---

* 'ಏವಮೇವ ಶತಂ ಛಿನ್ನಂ' ಎಂದು ಮೂಲದಲ್ಲಿ ಪಾಠಾಂತರವಿದೆ. ತಿಲಕ ಮತ್ತು ಕತಕವ್ಯಾಖ್ಯಾನಗಳಿಗೆ ಅದೇ ಸಮ್ಮತವಾದ ಪಾಠ. ನೂರುಸಲ ಶಿರಸ್ಸುಗಳನ್ನು ಕತ್ತರಿಸಲಾಯಿತೆಂದು ಆ ಪಕ್ಷದಲ್ಲಿ ಅರ್ಥವಾಗುತ್ತದೆ. ಶ್ರೀರಾಮನ ಸರ್ವತೋಭದ್ರ ಚಕ್ರದ ನೂರು ಮನೆಗಳಿಗೆ ನೂರು ಶಿರಃಕಮಲಗಳಿಂದ ರಾವಣನು ಪೂಜಿಸಿದಂತಾಯಿತೆಂದು ಕತಕವ್ಯಾಖ್ಯಾನದಲ್ಲಿ ಹೇಳಿದೆ. ಆ ಸಮಯದಲ್ಲಿ ರಾವಣನು ಏಕಶಿರಸ್ಕನಾಗಿದ್ದನೆಂದು ಶ್ರೀ ಗೋವಿಂದರಾಜರು ಬರೆದಿದ್ದಾರೆ.

ಇತಿ ಚಿಂತಾಪರಶ್ಚಾಸೀದಪ್ರಮತ್ತಶ್ಚ ಸಂಯುಗೇ ।
ವವರ್ಷ ಶರವರ್ಷಾಣಿ ರಾಘವೋ ರಾವಣೋರಸಿ ॥ ೩೪

ರಾವಣೋಽಪಿ ತತಃ ಕ್ರುದ್ಧೋ ರಥಸ್ಥೋ ರಾಕ್ಷಸೇಶ್ವರಃ ।
ಗದಾಮುಸಲವರ್ಷೇಣ ರಾಮಂ ಪ್ರತ್ಯರ್ದಯದ್ರಣೇ ॥ ೩೫

ತತ್ಪ್ರವೃತ್ತಂ ಮಹದ್ಯುದ್ಧಂ ತುಮುಲಂ ರೋಮಹರ್ಷಣಮ್ ।
ಅಂತರಿಕ್ಷೇ ಚ ಭೂಮೌ ಚ ಪುನಶ್ಚ ಗಿರಿಮೂರ್ಧನಿ ॥ ೩೬

ದೇವದಾನವಯಕ್ಷಾಣಾಂ ಪಿಶಾಚೋರಗರಕ್ಷಸಾಮ್ ।
ಪಶ್ಯತಾಂ ತನ್ಮಹದ್ಯುದ್ಧಂ ಸರ್ವರಾತ್ರಮವರ್ತತ ॥ ೩೭

ನೈವ ರಾತ್ರಂ ನ ದಿವಸಂ ನ ಮುಹೂರ್ತಂ ನ ಚ ಕ್ಷಣಮ್ ।
ರಾಮರಾವಣಯೋರ್ಯುದ್ಧಂ ವಿರಾಮಮುಪಗಚ್ಛತಿ ॥ ೩೮

ದಶರಥಸುತರಾಕ್ಷಸೇಂದ್ರಯೋ-
ರ್ಜಯಮನವೇಕ್ಷ್ಯ ರಣೇ ಸ ರಾಘವಸ್ಯ ।

---

ಏನು ಕಾರಣವಿರಬಹುದು ?" ಎಂದು ಚಿಂತಾಕ್ರಾಂತನಾದನು (೩೩). ಆದರೂ ಎಚ್ಚರಿಕೆಯಿಂದಲೇ ಹೋರಾಡುತ್ತ ರಾವಣನ ಎದೆಗೆ ಗುರಿಯಿಟ್ಟು ಶರವರ್ಷಗಳನ್ನು ಸುರಿಸಿದನು. ರಥದಲ್ಲಿ ಮಂಡಿಸಿದ್ದ ರಾಕ್ಷಸೇಶ್ವರನು ರೋಷದಿಂದ ಗದಾಮುಸಲಗಳನ್ನು ಶ್ರೀರಾಮನಿಗೆ ಹೊಡೆಯುತ್ತಲೇ ಇದ್ದನು (೩೪-೩೫). ಮತ್ತೆ ಯುದ್ಧವು ವೈನವಿರೇಳಿಸುವಂತೆ ಅತಿಘೋರವಾಯಿತು. ಅವರೀರ್ವರೂ ರಥಗಳಲ್ಲಿ ಅಂತರಿಕ್ಷವನ್ನೇರುತ್ತ, ಭೂಮಿಗಿಳಿಯುತ್ತ, ಮತ್ತೆ ತ್ರಿಕೂಟಶಿಖರವನ್ನಡರುತ್ತ ಹೋರಾಡಿದರು (೩೬). ದೇವದಾನವ ಯಕ್ಷರಿಗೂ ಪಿಶಾಚೋರಗ ರಾಕ್ಷಸರಿಗೂ ಆ ಮಹಾ ಯುದ್ಧವನ್ನು ನೋಡುತ್ತಿರುವಾಗಲೇ ಅನೇಕ ರಾತ್ರಿಗಳು ಕಳೆದವು! * ರಾಮರಾವಣರ ಆ ಯುದ್ಧಕ್ಕೆ ರಾತ್ರಿಯೂ ವಿರಾಮವಿಲ್ಲ, ಹಗಲೂ ಇಲ್ಲ; ಒಂದು ಮುಹೂರ್ತವೂ ಒಂದು ಕ್ಷಣವೂ ವಿಚ್ಛಿತ್ತಿಯಿಲ್ಲದೆ ಅದು ನಡೆಯಿತು (೩೭-೩೮). ದಶರಥಾತ್ಮಜನಿಗೂ ರಾಕ್ಷಸೇಂದ್ರನಿಗೂ

---

* ಮೂಲದಲ್ಲಿ 'ಸಪ್ತರಾತ್ರಮವರ್ತತ' ಎಂದು ಪಾಠಾಂತರವಿದೆ. ಏಳು ರಾತ್ರಿಗಳು ಕಳೆದವು ಎಂದರ್ಥ. ಪಾದ್ಮ ಮತ್ತು ಕಾಲಿಕಾಪುರಾಣಗಳಿಗೆ ಈ ಪಾಠವು ಸಮ್ಮತ.

ಸುರವರರಥಸಾರಥಿರ್ಮಹಾನ್
ರಣಗತಮೇನಮುವಾಚ ವಾಕ್ಯಮಾಶು ॥ ೩೯

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದಶೋತ್ತರಶತತಮಃ ಸರ್ಗಃ

---

## ಏಕಾದಶೋತ್ತರಶತತಮಃ ಸರ್ಗಃ

### ಪೌಲಸ್ತ್ಯವಧಃ

ಅಥ ಸಂಸ್ಮಾರಯಾಮಾಸ ರಾಘವಂ ಮಾತಲಿಸ್ತದಾ ।
ಅಜಾನನ್ನಿವ ಕಿಂ ವೀರ ತ್ವಮೇನಮನುವರ್ತಸೇ ॥ ೧

ವಿಸೃಜಾಸ್ಮೈ ವಧಾಯ ತ್ವಮಸ್ತ್ರಂ ಪೈತಾಮಹಂ ಪ್ರಭೋ ।
ವಿನಾಶಕಾಲಃ ಕಥಿತೋ ಯಃ ಸುರೈಃ ಸೋಽದ್ಯ ವರ್ತತೇ ॥ ೨

---

ಸತತವಾಗಿ ನಡೆದ ಆ ಯುದ್ಧದಲ್ಲಿ ರಾಘವನಿಗೆ ಜಯಲಕ್ಷ್ಮಿ ಕೈಗೂಡದಿರುವುದನ್ನು ನೋಡಿ, ಬುದ್ಧಿಶಾಲಿಯೂ ದೇವೇಂದ್ರಸಾರಥಿಯೂ ಆದ ಮಾತಲಿಯು ಶ್ರೀರಾಮನಿಗೆ ಒಂದು ಮಾತನ್ನು ಹೇಳಿದನು (೩೯).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹತ್ತನೆಯ ಸರ್ಗ

---

## ಸರ್ಗ ೧೧೧

ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವಂತೆ ಮಾತಲಿಯು ಶ್ರೀರಾಮನನ್ನು ಜ್ಞಾಪಿಸುವುದು. ಬ್ರಹ್ಮಾಸ್ತ್ರಪ್ರಯೋಗ, ರಾವಣನ ಸಂಹಾರ. ದೇವತೆಗಳಿಂದ ಪುಷ್ಪವೃಷ್ಟಿ.

ಮಾತಲಿಯು ಶ್ರೀರಾಮನನ್ನು ನೋಡಿ "ಪ್ರಭು-ಶ್ರೀರಾಮ, ನೀನೂ ತಿಳಿಯದವನಂತೆ ಅಸ್ತ್ರಕ್ಕೆ ಪ್ರತ್ಯಸ್ತ್ರವನ್ನು ಮಾತ್ರ ಹೂಡುತ್ತ ಈತನನ್ನೇಕೆ ಅನುವರ್ತಿಸುವೆ? ಇವನ ವಧೆಗಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸು. ದೇವತೆಗಳು ಹೇಳಿದಂತೆ ರಾವಣನ ಮರಣಕಾಲವು ಈಗ

ತತಃ ಸಂಸ್ಮಾರಿತೋ ರಾಮಸ್ತೇನ ವಾಕ್ಯೇನ ಮಾತಲೇಃ ।
ಜಗ್ರಾಹ ಸ ಶರಂ ದೀಪ್ತಂ ನಿಃಶ್ವಸಂತಮಿವೋರಗವಮ್ ॥ ೩

ಯಮಸ್ಮೈ ಪ್ರಥಮಂ ಪ್ರಾದಾದಗಸ್ತ್ಯೋ ಭಗವಾನೃಷಿಃ ।
ಬ್ರಹ್ಮದತ್ತಂ ಮಹಾಬಾಣಮಮೋಘಂ ಯುಧಿ ವೀರ್ಯವಾನ್ ॥ ೪

ಬ್ರಹ್ಮಣಾ ನಿರ್ಮಿತಂ ಪೂರ್ವಮಿಂದ್ರಾರ್ಥಮಮಿತೌಜಸಾ ।
ದತ್ತಂ ಸುರಪತೇಃ ಪೂರ್ವಂ ತ್ರಿಲೋಕಜಯಕಾಂಕ್ಷಿಣಃ ॥ ೫

ಯಸ್ಯ ವಾಜೇಷು ಪವನಃ ಫಲೇ ಪಾವಕಭಾಸ್ಕರೌ ।
ಶರೀರಮಾಕಾಶಮಯಂ ಗೌರವೇ ಮೇರುಮಂದರೌ ॥ ೬

ಜಾಜ್ವಲ್ಯಮಾನಂ ವಪುಷಾ ಸುಪುಂಖಂ ಹೇಮಭೂಷಿತಮ್ ।
ತೇಜಸಾ ಸರ್ವಭೂತಾನಾಂ ಕೃತಂ ಭಾಸ್ಕರವರ್ಚಸಮ್ ॥ ೭

ಸಧೂಮಮಿವ ಕಾಲಾಗ್ನಿಂ ದೀಪ್ತಮಾಶೀವಿಷಂ ಯಥಾ ।
ಪರನಾಗಾಶ್ವವೃಂದಾನಾಂ ಭೇದನಂ ಕ್ಷಿಪ್ರಕಾರಿಣಮ್ ॥ ೮

---

ಸನ್ನಿಹಿತವಾಗಿದೆ" ಎಂದನು (೧-೨). ಆಗ ಬ್ರಹ್ಮಾಸ್ತ್ರದ ಸ್ಮರಣೆಯಾಗಿ, ಬುಸುಗುಟ್ಟುವ ಸರ್ಪದಂತಿದ್ದ ಆ ದೀಪ್ತಾಸ್ತ್ರವನ್ನು ಶ್ರೀರಾಮನು ಹಿರಿದನು. ಅದು ತಪೋಮಹಿಮಾನ್ವಿತರಾದ ಅಗಸ್ತ್ಯ ಮಹರ್ಷಿಗಳಿಂದ ಶ್ರೀರಾಮನಿಗೆ ಕೊಡಲ್ಪಟ್ಟುದು. ಬ್ರಹ್ಮದೇವನಿಂದ ಬಂದ ಅಮೋಘವಾದ ಮಹಾ ಬಾಣ (೩-೪). ಹಿಂದೆ ತ್ರಿಲೋಕವನ್ನು ಜಯಿಸಲಿಚ್ಛಿಸಿದ ದೇವೇಂದ್ರನಿಗೆ ಅಮಿತ ತೇಜೋರಾಶಿಯಾದ ಬ್ರಹ್ಮನೇ ಅದನ್ನು ನಿರ್ಮಿಸಿಕೊಟ್ಟಿದ್ದನು. ಆ ಬ್ರಹ್ಮಾಸ್ತ್ರದ ಪುಂಖಗಳಲ್ಲಿ ವಾಯುದೇವನೂ ಅಲಗಿನಲ್ಲಿ ಸೂರ್ಯಾಗ್ನಿಗಳೂ ಅಧಿದೇವತೆಗಳಾಗಿ ನೆಲೆಸಿದ್ದರು. ಅದರ ಶರೀರವು ಆಕಾಶಮಯವಾಗಿ ಸರ್ವವ್ಯಾಪಕವಾಗಿತ್ತು. ಗುರುತ್ವದಲ್ಲಿ ಆ ಶರವು ಮೇರುಮಂದರಗಳಿಗೆ ಸಮವಾಗಿತ್ತು (೫-೬). ಪುಂಖಾಂಕಿತವೂ ಹೇಮಭೂಷಿತವೂ ಆದ ಆ ಮಹಾಸ್ತ್ರವು ಸರ್ವಭೂತಗಳ ತೇಜಸ್ಸಿನಿಂದ ಯುಕ್ತವಾಗಿ, ಸೂರ್ಯನಂತೆ ದೇದೀಪ್ಯಮಾನವಾಗಿತ್ತು. ಹೊಗೆಯುಗುಳುವ ಕಾಲಾಗ್ನಿಯಂತೆಯೂ ಕಿಡಿಯುಗುಳುವ ಮಹಾಸರ್ಪದಂತೆಯೂ ಇತ್ತು. ಶತ್ರುಗಳ ಗಜಾಶ್ವ ವೃಂದಗಳನ್ನು ಒಂದೇ ಪ್ರಹಾರಕ್ಕೆ ನಿರ್ನಾಮಗೊಳಿಸಬಲ್ಲ ತೀಕ್ಷ್ಣವೇಗ

ದ್ವಾರಾಣಾಂ ಪರಿಘಾಣಾಂ ಚ ಗಿರೀಣಾಮಪಿ ಭೇದನಮ್ ।
ನಾನಾರುಧಿರಸಿಕ್ತಾಂಗಂ ಮೇದೋದಿಗ್ಧಂ ಸುದಾರುಣಮ್ ॥ ೯

ವಜ್ರಸಾರಂ ಮಹಾನಾದಂ ನಾನಾಸಮಿತಿದಾರಣಮ್ ।
ಸರ್ವವಿತ್ರಾಸನಂ ಭೀಮಂ ಶ್ವಸಂತಮಿವ ಪನ್ನಗಮ್ ॥ ೧೦

ಕಂಕಗೃಧ್ರಬಲಾನಾಂ ಚ ಗೋಮಾಯುಗಣರಕ್ಷಸಾಮ್ ।
ನಿತ್ಯಂ ಭಕ್ಷ್ಯಪ್ರದಂ ಯುದ್ಧೇ ಯಮರೂಪಂ ಭಯಾವಹಮ್ ॥ ೧೧

ನಂದನಂ ವಾನರೇಂದ್ರಾಣಾಂ ರಕ್ಷಸಾಮವಸಾದನಮ್ ।
ವಾಜಿತಂ ವಿವಿಧೈರ್ವಾಜೈಶ್ಚಾರುಚಿತ್ರೈರ್ಗರುತ್ಮತಃ ॥ ೧೨

ತಮುತ್ತಮೇಷುಂ ಲೋಕಾನಾಮಿಕ್ಷ್ವಾಕುಭಯನಾಶನಮ್ ।
ದ್ವಿಷತಾಂ ಕೀರ್ತಿಹರಣಂ ಪ್ರಹರ್ಷಕರಮಾತ್ಮನಃ ॥ ೧೩

---

ವುಳ್ಳದ್ದಾಗಿತ್ತು (೭–೮). ಸಕಲ ಗೋಪುರದ್ವಾರಗಳನ್ನೂ ಪರಿಘಗಳನ್ನೂ ಗಿರಿಗಳನ್ನೂ ಕುಟ್ಟಿ ವಿಧ್ವಂಸಗೊಳಿಸುವ ಸಾಮರ್ಥ್ಯವು ಅದಕ್ಕಿತ್ತು. ಇದುವರೆಗೆ ನಾನಾ ರಾಕ್ಷಸರ ರಕ್ತದಲ್ಲಿ ನೆನೆದು ಮೇದಸ್ಸಿನಿಂದ ಲಿಪ್ತವಾಗಿ ಎದ್ದುಬಂದ ದಾರುಣಾಸ್ತ್ರವಾಗಿತ್ತು (೯). ವಜ್ರಾಯುಧದಂತೆ ಸಾರವತ್ತಾಗಿ, ಮಹಾನಾದದಿಂದ ಅಬ್ಬರಿಸಿ, ವಿವಿಧ ಕೂಟಯುದ್ಧಗಳನ್ನೂ ನಿರ್ಭೇದಿಸುವ ಸಾಮರ್ಥ್ಯವುಳ್ಳದಾಗಿತ್ತು. ಸಮಸ್ತ ಜಗತ್ತನ್ನೂ ನಡುಗಿಸುವ ಭೀಷಣಾಕೃತಿಯನ್ನು ಧರಿಸಿ ಭೋರ್ಗರೆಯುವ ಸರ್ಪದಂತಿತ್ತು (೧೦). ಹದ್ದು, ರಣಹದ್ದು, ಕಾಗೆ, ನರಿ, ರಕ್ಷೋಗಣಗಳಿಗೆ ರಣರಂಗದಲ್ಲಿ ವಿಪುಲಾಹಾರವನ್ನಿತ್ತು ನಿತ್ಯಸಂತರ್ಪಣೆ ಮಾಡಿಸುವ ಯಮರೂಪದ ಭೀಕರಾಸ್ತ್ರವಾಗಿತ್ತು! (೧೧). ಆ ಬ್ರಹ್ಮಾಸ್ತ್ರವು ಇತ್ತ ವಾನರೇಂದ್ರರಿಗೆ ಆನಂದವನ್ನೂ ಅತ್ತ ರಾಕ್ಷಸರಿಗೆ ವಿನಾಶವನ್ನೂ ತಂದುಕೊಡುವ ಸಾಮರ್ಥ್ಯವನ್ನು ಪಡೆದಿತ್ತು. ಗರುತ್ಮಂತನ ವಿವಿಧವರ್ಣದ ಗರಿಗಳಿಂದ ಶೋಭಿತವಾಗಿತ್ತು (೧೨). ಅದು ಲೋಕದಲ್ಲಿರುವ ಅಸ್ತ್ರಗಳಲ್ಲಿ ಅತ್ಯುತ್ತಮವಾದದ್ದು. ಇಕ್ಷ್ವಾಕುವಂಶೀಯರ ಭಯವನ್ನು ಪರಿಹರಿಸುವಂತಹದು. ವೈರಿಗಳ ಕೀರ್ತಿಯನ್ನು ಅಪಹರಿಸುವಂತಹದು. ಶ್ರೀರಾಮ

ಅಭಿಮಂತ್ರ್ಯ ತತೋ ರಾಮಸ್ತಂ ಮಹೇಷುಂ ಮಹಾಬಲಃ ।
ವೇದಪ್ರೋಕ್ತೇನ ವಿಧಿನಾ ಸಂದಧೇ ಕಾರ್ಮುಕೇ ಬಲೀ ॥ ೧೪

ತಸ್ಮಿನ್ ಸಂಧೀಯಮಾನೇ ತು ರಾಘವೇಣ ಶರೋತ್ತಮೇ ।
ಸರ್ವಭೂತಾನಿ ವಿತ್ರೇಸುಶ್ಚಚಾಲ ಚ ವಸುಂಧರಾ ॥ ೧೫

ಸ ರಾವಣಾಯ ಸಂಕ್ರುದ್ಧೋ ಭೃಶಮಾಯಮ್ಯ ಕಾರ್ಮುಕಮ್ ।
ಚಿಕ್ಷೇಪ ಪರಮಾಯತ್ತಸ್ತಂ ಶರಂ ಮರ್ಮಘಾತಿನಮ್ ॥ ೧೬

ಸ ವಜ್ರ ಇವ ದುರ್ಧರ್ಷೋ ವಜ್ರಬಾಹುವಿಸರ್ಜಿತಃ ।
ಕೃತಾಂತ ಇವ ಚಾವಾರ್ಯೋ ನ್ಯಪತದ್ರಾವಣೋರಸಿ ॥ ೧೭

ಸ ವಿಸೃಷ್ಟೋ ಮಹಾವೇಗಃ ಶರೀರಾಂತಕರಃ ಶರಃ ।
ಬಿಭೇದ ಹೃದಯಂ ತಸ್ಯ ರಾವಣಸ್ಯ ದುರಾತ್ಮನಃ ॥ ೧೮

ರುಧಿರಾಕ್ತಃ ಸ ವೇಗೇನ ಜೀವಿತಾಂತಕರಃ ಶರಃ ।
ರಾವಣಸ್ಯ ಹರನ್ ಪ್ರಾಣಾನ್ ವಿವೇಶ ಧರಣೀತಲಮ್ ॥ ೧೯

---

ನಿಗೆ ಆನಂದಕರವಾದುದು (೧೩). ವೀರಾಗ್ರಗಣ್ಯನಾದ ಶ್ರೀರಾಮನು ಆ ಬ್ರಹ್ಮಾಸ್ತ್ರವನ್ನು ಹಿರಿದು, ಧನುರ್ವೇದೋಕ್ತವಾದ ವಿಧಿಯಂತೆ ಬ್ರಹ್ಮಾಸ್ತ್ರಮಂತ್ರದಿಂದ ಅಭಿಮಂತ್ರಿಸಿ ಧನುಸ್ಸಿಗೆ ಅಳವಡಿಸಿದನು! ರಾಘವನು ಆ ಮಹಾಸ್ತ್ರವನ್ನು ಧನುಸ್ಸಿಗೆ ಅಳವಡಿಸಲಾಗಿ, ಸಮಸ್ತ ಭೂತಜಾತಗಳೂ ಭಯದಿಂದ ನಡುಗಿದವು. ಭೂಮಿಯೂ ಕಂಪಿಸಿತು (೧೪-೧೫). ಅನಂತರ ಶ್ರೀರಾಮನು ಕ್ರೋಧದಿಂದ ಕಾರ್ಮುಕದ ಹೆದೆಯನ್ನು ಆಕರ್ಣಾಂತವಾಗಿ ಜಗ್ಗಿ, ಸರ್ವಶಕ್ತಿಯನ್ನೂ ವಿನಿಯೋಗಿಸಿ, ಮರ್ಮಘಾತಿಯಾದ ಆ ಶರವನ್ನು ರಾವಣನಮೇಲೆ ಪ್ರಯೋಗಿಸಿದನು (೧೬). ವಜ್ರಧರನಾದ ಇಂದ್ರನ ಬಾಹುವಿನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧದಂತೆ ದುರ್ಧರ್ಷವೂ ಕಾಲಮೃತ್ಯುವಿನಂತೆ ದುರ್ನಿವಾರವೂ ಆದ ಆ ಬ್ರಹ್ಮಾಸ್ತ್ರವು ರಾವಣನ ಎದೆಗೆ ಬಡಿಯಿತು (೧೭). ಪ್ರಾಣಾಂತಕರವಾದ ಆ ಶರವು ಮಹಾವೇಗದಿಂದ ಹೋಗಿ ದುರಾತ್ಮನಾದ ರಾವಣನ ಎದೆಯನ್ನು ಸೀಳಿತು. ಎದೆಯನ್ನು ಸೀಳಿ ರಕ್ತದಲ್ಲಿ ನೆನೆದು ರಾವಣನ ಪ್ರಾಣವನ್ನು ಹಾರಿಸಿ ಭೂತಳದಲ್ಲಿ ನುಗ್ಗಿತು. ಆ ಮಹಾಸ್ತ್ರವು ರಾವಣ

ಸ ಶರೋ ರಾವಣಂ ಹತ್ವಾ ರುಧಿರಾರ್ದ್ರೀಕೃತಚ್ಛವಿಃ ।
ಕೃತಕರ್ಮಾ ನಿಭೃತವತ್ ಸ್ವತೂಣೀಂ ಪುನರಾಗಮತ್ ॥ ೨೦

ತಸ್ಯ ಹಸ್ತಾದ್ಧತಸ್ಯಾಶು ಕಾರ್ಮುಕಂ ತತ್ಸಸಾಯಕಮ್ ।
ನಿಪಪಾತ ಸಹ ಪ್ರಾಣೈರ್ಭ್ರಶ್ಯಮಾನಸ್ಯ ಜೀವಿತಾತ್ ॥ ೨೧

ಗತಾಸುರ್ಭೀಮವೇಗಸ್ತು ನೈರ್ಋತೇಂದ್ರೋ ಮಹಾದ್ಯುತಿಃ ।
ಪಪಾತ ಸ್ಯಂದನಾದ್ಭೂಮೌ ವೃತ್ರೋ ವಜ್ರಹತೋ ಯಥಾ ॥ ೨೨

ತಂ ದೃಷ್ಟ್ವಾ ಪತಿತಂ ಭೂಮೌ ಹತಶೇಷಾ ನಿಶಾಚರಾಃ ।
ಹತನಾಥಾ ಭಯತ್ರಸ್ತಾಃ ಸರ್ವತಃ ಸಂಪ್ರದುದ್ರುವುಃ ॥ ೨೩

ನರ್ದಂತಶ್ಚಾಭಿಪೇತುಸ್ತಾನ್ ವಾನರಾ ದ್ರುಮಯೋಧಿನಃ ।
ದಶಗ್ರೀವವಧಂ ದೃಷ್ಟ್ವಾ ವಿಜಯಂ ರಾಘವಸ್ಯ ಚ ॥ ೨೪

ಅರ್ದಿತಾ ವಾನರೈರ್ಹೃಷ್ಟೈರ್ಲಂಕಾಮಭ್ಯಪತನ್ ಭಯಾತ್ ।
ಗತಾಶ್ರಯತ್ವಾತ್ ಕರುಣೈರ್ಬಾಷ್ಪಪ್ರಸ್ರವಣೈರ್ಮುಖೈಃ ॥ ೨೫

---

ನನ್ನು ಸಂಹರಿಸಿ ರಕ್ತಸಿಕ್ತವಾಗಿ ಹೊಳೆಯುತ್ತ, ತನ್ನ ಕಾರ್ಯವನ್ನು ಮುಗಿಸಿ ನೆಮ್ಮದಿಯಿಂದ ನೇರವಾಗಿ ಬಂದು ಶ್ರೀರಾಮನ ಬತ್ತಳಿಕೆಯನ್ನು ಮತ್ತೆ ಸೇರಿಕೊಂಡಿತು! (೧೮–೨೦). ರಾವಣನು ಹತನಾಗಿ ಜೀವಿತವನ್ನು ತೊರೆಯುತ್ತಿರುವಾಗಲೇ, ಸಾಯಕಸಹಿತವಾದ ಧನುಸ್ಸು ಅವನ ಕೈಯಿಂದ ಜಾರಿ ಕೆಳಗೆ ಬಿದ್ದಿತು. ಭೀಮಪರಾಕ್ರಮಿಯೂ ಮಹಾತೇಜಸ್ವಿಯೂ ಆದ ರಾಕ್ಷಸೇಂದ್ರನು, ವಜ್ರಾಯುಧದಿಂದ ಹತನಾದ ವೃತ್ರಾಸುರನಂತೆ ಗತಪ್ರಾಣನಾಗಿ ರಥದಿಂದ ನೆಲಕ್ಕೆ ಬಿದ್ದನು (೨೧–೨೨). ರಾವಣನು ಹತನಾಗಿ ಭೂಮಿಯಲ್ಲಿ ಬಿದ್ದುದನ್ನು ಕಂಡು, ರಣರಂಗದಲ್ಲಿ ಹತಶೇಷರಾದ ರಾಕ್ಷಸರೆಲ್ಲರೂ ತಮ್ಮ ಒಡೆಯನು ಮೃತನಾದನೆಂದು ಭೀತರಾಗಿ, ದಿಕ್ಕುದಿಕ್ಕಿಗೆ ಓಡಿಹೋದರು. ವಾನರರು ಮರಗಳನ್ನೆತ್ತಿ ಹಿಡಿದು ಆ ರಾಕ್ಷಸರನ್ನು ಅಟ್ಟಿಸಿಕೊಂಡು ಹೋದರು! (೨೩–೨೪). ದಶಗ್ರೀವನ ವಧೆಯನ್ನೂ ರಾಘವನ ವಿಜಯವನ್ನೂ ಕಂಡು ಸಂತುಷ್ಟರಾದ ವಾನರರ ಧಾಳಿಗೆ ಸಿಕ್ಕಿದ ರಾಕ್ಷಸರು, ದಿಕ್ಕಿಲ್ಲದೆ ಗತಿಗೆಟ್ಟು ಕರುಣಾಜನಕ

ತತೋ ವಿನೇದುಃ ಸಂಹೃಷ್ಟಾ ವಾನರಾ ಜಿತಕಾಶಿನಃ ।
ವದಂತೋ ರಾಘವಜಯಂ ರಾವಣಸ್ಯ ಚ ತದ್ವಧಮ್ ॥ ೨೬

ಅಥಾಂತರಿಕ್ಷೇ ವ್ಯನದತ್ ಸೌಮ್ಯಸ್ತ್ರಿದಶದುಂದುಭಿಃ ।
ದಿವ್ಯಗಂಧವಹಸ್ತತ್ರ ಮಾರುತಃ ಸುಸುಖಂ ವವೌ ॥ ೨೭

ನಿಪಪಾತಾಂತರಿಕ್ಷಾಚ್ಚ ಪುಷ್ಪವೃಷ್ಟಿಸ್ತದಾ ಭುವಿ ।
ಕಿರಂತೀ ರಾಘವರಥಂ ದುರವಾಪಾ ಮನೋರಮಾ ॥ ೨೮

ರಾಘವಸ್ತವಸಂಯುಕ್ತಾ ಗಗನೇಽಪಿ ಚ ಶುಶ್ರುವೇ ।
ಸಾಧು ಸಾಧ್ವಿತಿ ವಾಗಗ್ರ್ಯಾ ದೈವತಾನಾಂ ಮಹಾತ್ಮನಾಮ್ ॥ ೨೯

ಆವಿವೇಶ ಮಹಾಹರ್ಷೋ ದೇವಾನಾಂ ಚಾರಣೈಃ ಸಹ ।
ರಾವಣೇ ನಿಹತೇ ರೌದ್ರೇ ಸರ್ವಲೋಕಭಯಂಕರೇ ॥ ೩೦

ತತಃ ಸಕಾಮಂ ಸುಗ್ರೀವಮಂಗದಂ ಚ ಮಹಾಬಲಮ್ ।
ಚಕಾರ ರಾಘವಃ ಪ್ರೀತೋ ಹತ್ವಾ ರಾಕ್ಷಸಪುಂಗವಮ್ ॥ ೩೧

---

ವಾಗಿ ಕಣ್ಣೀರು ಹರಿಸುತ್ತ ಲಂಕಾನಗರದೊಳಗೆ ಧಾವಿಸಿದರು (೨೫). ಇತ್ತಲಾಗಿ ಜಯ ಲಭಿಸಿತೆಂದು ಪರಮಾನಂದಭರಿತರಾದ ವಾನರಯೋಧರು ಶ್ರೀರಾಮನ ವಿಜಯವನ್ನೂ ರಾವಣನು ಹತನಾದನೆಂಬುದನ್ನೂ ಘೋಷಿಸುತ್ತ ಸಿಂಹನಾದಮಾಡಿದರು (೨೬). ಅಂತರಿಕ್ಷದಲ್ಲಿ ದೇವದುಂದುಭಿಯು ಸೌಮ್ಯಸ್ವರದಿಂದ ಮೊಳಗಿತು. ದಿವ್ಯಗಂಧವನ್ನು ಹೊತ್ತ ವಾಯುವು ಸುಖಸ್ಪರ್ಶನಾಗಿ ಬೀಸಿದನು. ಅನ್ಯದುರ್ಲಭವೂ ಮನೋಹರವೂ ಆದ ಪುಷ್ಪರಾಶಿಯು ಆಕಾಶದಿಂದ ಶ್ರೀರಾಮನ ರಥದಮೇಲೆ ವರ್ಷಿಸಿತು (೨೭–೨೮). ಭೂಮಿಯಲ್ಲಿ ವಾನರರು ಮಾತ್ರವಲ್ಲ, ಗಗನದಲ್ಲಿ ಮಹಾತ್ಮರಾದ ದೇವತೆಗಳೂ ಶ್ರೀರಾಮನನ್ನು ಸ್ತುತಿಸುತ್ತಿರಲು, 'ಸಾಧು-ಸಾಧು' ಎಂಬ ಪ್ರಶಂಸಾವಚನವು ಎಲ್ಲೆಲ್ಲಿಯೂ ಕೇಳಿಸಿತು (೨೯). ಸರ್ವಲೋಕಭಯಂಕರನಾದ ಉಗ್ರಸ್ವಭಾವದ ರಾವಣನು ಹತನಾಗಲಾಗಿ, ದೇವತೆಗಳಿಗೂ ಚಾರಣರಿಗೂ ಅತ್ಯಾನಂದವಾಯಿತು. ರಾಕ್ಷಸೇಂದ್ರನನ್ನು ಸಂಹರಿಸಿ ಸುಪ್ರೀತನಾದ ಶ್ರೀರಾಮನು, ಬಲಾಢ್ಯರಾದ ಸುಗ್ರೀವನೂ ಅಂಗದನೂ ಹಾರೈಸುತ್ತಿದ್ದ ರಾವಣವಧೆಯೆಂಬ ಕೋರಿಕೆಯನ್ನು ಈಡೇರಿಸಿ,

ತತಃ ಪ್ರಜಗ್ಮುಃ ಪ್ರಶಮಂ ಮರುದ್ಗಣಾ
ದಿಶಃ ಪ್ರಸೇದುರ್ವಿಮಲಂ ನಭೋಽಭವತ್ ।
ಮಹೀ ಚಕಂಪೇ ನ ಹಿ ಮಾರುತೋ ವವೌ
ಸ್ಥಿರಪ್ರಭಶ್ಚಾಪ್ಯಭವದ್ದಿವಾಕರಃ ॥ ೩೨

ತತಸ್ತು ಸುಗ್ರೀವವಿಭೀಷಣಾದಯಃ
ಸುಹೃದ್ವಿಶೇಷಾಃ ಸಹಲಕ್ಷ್ಮಣಾಸ್ತದಾ ।
ಸಮೇತ್ಯ ಹೃಷ್ಟಾ ವಿಜಯೇನ ರಾಘವಂ
ರಣೇಽಭಿರಾಮಂ ವಿಧಿನಾ ಹ್ಯಪೂಜಯನ್ ॥ ೩೩

ಸ ತು ನಿಹತರಿಪುಃ ಸ್ಥಿರಪ್ರತಿಜ್ಞಃ
ಸ್ವಜನಬಲಾಭಿವೃತೋ ರಣೇ ರರಾಜ ।
ರಘುಕುಲನೃಪನಂದನೋ ಮಹೌಜಾ-
ಸ್ತ್ರಿದಶಗಣೈರಭಿಸಂವೃತೋ ಯಥೇಂದ್ರಃ ॥ ೩೪

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಾದಶೋತ್ತರಶತತಮಃ ಸರ್ಗಃ

---

ಅವರನ್ನು ಹರ್ಷಗೊಳಿಸಿದನು (೩೦-೩೧). ದೇವತೆಗಳು ಭಯರಹಿತರಾಗಿ ನೆಮ್ಮದಿಯನ್ನು ಪಡೆದರು. ದಿಕ್ಕುಗಳು ಪ್ರಸನ್ನವಾದವು. ಅಂತರಿಕ್ಷವು ನಿರ್ಮಲವಾಯಿತು. ಭೂಮಿಯ ನಡುಕವು ದೂರವಾಯಿತು. ಮಾರುತನು ನಿಶ್ಶಂಕೆಯಿಂದ ಬೀಸತೊಡಗಿದನು. ಸೂರ್ಯನು ನಿಶ್ಚಲಪ್ರಭೆಯಿಂದ ಬೆಳಗಿದನು (೩೨). ಆಮೇಲೆ ಶ್ರೀರಾಮನ ಆಪ್ತಮಿತ್ರರಾದ ಸುಗ್ರೀವ ವಿಭೀಷಣಾದಿಗಳೂ ಲಕ್ಷ್ಮಣನೂ ಸಂತೋಷಸಂಭ್ರಮಗಳಿಂದ ಬಂದು, ಜಯಲಕ್ಷ್ಮೀವಿರಾಜಿತನಾದ ಶ್ರೀರಾಮನನ್ನು ಕ್ರಮವರಿತು ಸಮ್ಮಾನಿಸಿ ಅಭಿನಂದಿಸಿದರು (೩೩). ಈ ಪ್ರಕಾರದಲ್ಲಿ ಮಹಾಪ್ರತಾಪಶಾಲಿಯಾದ ರಘುಕುಲನಂದನನು ರಣರಂಗದಲ್ಲಿ ಶತ್ರುವನ್ನು ವಧಿಸಿ ತನ್ನ ಪ್ರತಿಜ್ಞೆಯನ್ನು ನೆರವೇರಿಸಿ, ಆಪ್ತಜನರಿಂದಲೂ ವಾನರಸೇನೆಯಿಂದಲೂ ಪರಿವೃತನಾಗಿ, ದೇವತೆಗಳಿಂದ ಪರಿವೃತನಾದ ದೇವೇಂದ್ರನಂತೆ ವಿರಾಜಮಾನನಾಗಿದ್ದನು (೩೪).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹನ್ನೊಂದನೆಯ ಸರ್ಗ...

## ದ್ವಾದಶೋತ್ತರಶತತಮಃ ಸರ್ಗಃ

### ವಿಭೀಷಣವಿಲಾಪಃ

ಭ್ರಾತರಂ ನಿಹತಂ ದೃಷ್ಟ್ವಾ ಶಯಾನಂ ರಾಮನಿರ್ಜಿತಮ್ ।
ಶೋಕವೇಗಪರೀತಾತ್ಮಾ ವಿಲಲಾಪ ವಿಭೀಷಣಃ ॥ ೧

ವೀರ ವಿಕ್ರಾಂತ ವಿಖ್ಯಾತ ವಿನೀತ ನಯಕೋವಿದ ।
ಮಹಾರ್ಹಶಯನೋಪೇತ ಕಿಂ ಶೇಷೇಽದ್ಯ ಹತೋ ಭುವಿ ॥ ೨

ವಿಕ್ಷಿಪ್ಯ ದೀರ್ಘೌ ನಿಶ್ಚೇಷ್ಟೌ ಭುಜಾವಂಗದಭೂಷಿತೌ ।
ಮಕುಟೇನಾಪವೃತ್ತೇನ ಭಾಸ್ಕರಾಕಾರವರ್ಚಸಾ ॥ ೩

ತದಿದಂ ವೀರ ಸಂಪ್ರಾಪ್ತಂ ಮಯಾ ಪೂರ್ವಂ ಸಮೀರಿತಮ್ ।
ಕಾಮಮೋಹಪರೀತಸ್ಯ ಯತ್ತೇ ನ ರುಚಿತಂ ವಚಃ ॥ ೪

ಯನ್ನ ದರ್ಪಾತ್ ಪ್ರಹಸ್ತೋ ವಾ ನೇಂದ್ರಜಿನ್ನಾಪರೇ ಜನಾಃ ।
ನ ಕುಂಭಕರ್ಣೋಽತಿರಥೋ ನಾತಿಕಾಯೋ ನರಾಂತಕಃ ॥ ೫

### ಸರ್ಗ ೧೧೨

ರಾವಣನ ಮರಣಕ್ಕಾಗಿ ವಿಭೀಷಣನ ದುಃಖ. ಶ್ರೀರಾಮನ ಸಮಾಧಾನ.

ಶ್ರೀರಾಮನಿಂದ ಹತನಾಗಿ ತನ್ನ ಅಣ್ಣನು ಮಲಗಿರುವುದನ್ನು ನೋಡಿ, ವಿಭೀಷಣನು ಶೋಕವೇಗವನ್ನು ತಡೆಯಲಾರದೆ ಅಳತೊಡಗಿದನು. "ಅಣ್ಣ, ವೀರಾಗ್ರೇಸರ, ಓ ಪರಾಕ್ರಮಿ, ಲೋಕವಿಖ್ಯಾತ, ಹಾ ವಿದ್ಯಾವಿನೀತ, ನೀತಿಕೋವಿದ! ರಾಜಯೋಗ್ಯವಾದ ಉತ್ತಮ ಶಯ್ಯೆಯಲ್ಲಿ ಪವಡಿಸಬೇಕಾದ ನೀನು ಹತನಾಗಿ ನೆಲದಮೇಲೆ ಮಲಗಿದೆಯಾ ? (೧-೨). ಕೇಯೂರಭೂಷಿತಗಳಾದ ಈ ದೀರ್ಘಬಾಹುಗಳನ್ನು ಅಲ್ಲಾಡಿಸದೆ ಚಾಚಿಕೊಂಡಿರುವೆಯಲ್ಲ. ಸೂರ್ಯನಂತೆ ಬೆಳಗುವ ಕಿರೀಟವು ಜಾರಿಹೋಗಿದೆಯಲ್ಲ. ಓ ವೀರಾಗ್ರಣಿ, ನಾನು ಹೇಳಿದಂತೆಯೇ ಆಗಿಹೋಯಿತೆ! ಕಾಮಮೋಹಗಳಿಂದ ಮೈಮರೆತಿದ್ದ ನಿನಗೆ ನನ್ನ ಮಾತು ರುಚಿಸದೆ ಹೋಯಿತು (೩-೪). ಪ್ರಹಸ್ತನಾಗಲಿ ಇಂದ್ರಜಿತುವಾಗಲಿ ನನ್ನ

ನ ಸ್ವಯಂ ತ್ವಮನುನ್ಯೇಥಾಸ್ತಸ್ಯೋದರ್ಕೋಽಯಮಾಗತಃ ।
ಗತಃ ಸೇತುಃ ಸುನೀತಾನಾಂ ಗತೋ ಧರ್ಮಸ್ಯ ವಿಗ್ರಹಃ ॥ ೬

ಗತಃ ಸತ್ತ್ವಸ್ಯ ಸಂಕ್ಷೇಪಃ ಪ್ರಸ್ತಾವಾನಾಂ ಗತಿರ್ಗತಾ ।
ಆದಿತ್ಯಃ ಪತಿತೋ ಭೂಮೌ ಮಗ್ನಸ್ತಮಸಿ ಚಂದ್ರಮಾಃ ॥ ೭

ಚಿತ್ರಭಾನುಃ ಪ್ರಶಾಂತಾರ್ಚಿರ್ವ್ಯವಸಾಯೋ ನಿರುದ್ಯಮಃ ।
ಅಸ್ಮಿನ್ನಿಪತಿತೇ ಭೂಮೌ ವೀರೇ ಶಸ್ತ್ರಭೃತಾಂ ವರೇ ॥ ೮

ಕಿಂ ಶೇಷಮಿವ ಲೋಕಸ್ಯ ಹತವೀರಸ್ಯ ಸಾಂಪ್ರತಮ್ ।
ರಣೇ ರಾಕ್ಷಸಶಾರ್ದೂಲೇ ಪ್ರಸುಪ್ತ ಇವ ಪಾಂಸುಷು ॥ ೯

ಧೃತಿಪ್ರವಾಲಃ ಪ್ರಸಹಾಗ್ರ್ಯಪುಷ್ಪ-
ಸ್ತಪೋಬಲಃ ಶೌರ್ಯನಿಬದ್ಧಮೂಲಃ ।
ರಣೇ ಮಹಾನ್ ರಾಕ್ಷಸರಾಜವೃಕ್ಷಃ
ಸಂಮರ್ದಿತೋ ರಾಘವಮಾರುತೇನ ॥ ೧೦

ಹಿತವಾದವನ್ನು ದರ್ಪದಿಂದ ಕೇಳದೆಹೋದರು. ಇತರ ಮಂತ್ರಿಗಳೂ ಕಿವಿಗೆ ಹಾಕಿಕೊಳ್ಳಲಿಲ್ಲ. ಕುಂಭಕರ್ಣನೂ ಗಮನಿಸಲಿಲ್ಲ. ಅತಿರಥನಾದ ಅತಿಕಾಯನಿಗೂ ನರಾಂತಕನಿಗೂ ಹಿಡಿಸಲಿಲ್ಲ. ನೀನೂ ಸಹ ನನ್ನ ನುಡಿಯನ್ನು ಕೇಳದೆಹೋದೆ. ಅದರ ಫಲ ಈ ರೀತಿಯಾಗಿ ಒದಗಿತು. ಹಾ ಅಕಟ! ವಿದ್ವಾಂಸರಿಗೆ ಸೇತುಪ್ರಾಯನಾದವನು ಗತಿಸಿದನು. ಧರ್ಮದ* ಮೂರ್ತಿಯೇ ಉರುಳಿತು (೫–೬). ಶೌರ್ಯದ ಸಾರವೇ ಹೊರಟು ಹೋಯಿತು. ಸ್ತೋತ್ರಗಳಿಗೆ ಮುಖ್ಯಪಾತ್ರನಾದವನೇ ತೀರಿಹೋದನು. ಅಯ್ಯೋ–ಅಣ್ಣ, ಮೃತನಾದೆಯಾ? ಸೂರ್ಯನು ಭೂಮಿಗೆ ಬಿದ್ದನೆ? ಚಂದ್ರನು ಕತ್ತಲೆಯಲ್ಲಿ ಮುಳುಗಿಹೋದನೆ? (೭). ಅಗ್ನಿಯ ಉಷ್ಣತೆ ಅಳಿದುಹೋಯಿತೆ? ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನಾದ ಈ ವೀರನು ನೆಲಕ್ಕೆ ಬಿದ್ದಮೇಲೆ, ಉತ್ಸಾಹಶಕ್ತಿಗೆ ಆಶ್ರಯವೇ ತಪ್ಪಿತು. ಈ ವೀರನು ಹತನಾದ ಮೇಲೆ–ಈ ರಾಕ್ಷಸ ಶಾರ್ದೂಲನು ಮಣ್ಣಲ್ಲಿ ಮಲಗಿದಮೇಲೆ ಈ ಲೋಕದಲ್ಲಿ ಇನ್ನೇನು ಉಳಿಯಿತು? (೮–೯). ರಾಕ್ಷಸರಾಜನೆಂಬ ಮಹಾವೃಕ್ಷವನ್ನು

* ಅಗ್ನಿಹೋತ್ರಾದಿ ಧರ್ಮಕಾರ್ಯಗಳಲ್ಲಿ ರಾವಣನು ನಿಷ್ಠೆಯಿಂದಿದ್ದನು.

ತೇಜೋವಿಷಾಣಃ ಕುಲವಂಶವಂಶಃ
ಕೋಪಪ್ರಸಾದಾಪರಗಾತ್ರಹಸ್ತಃ ।
ಇಕ್ಷ್ವಾಕುಸಿಂಹಾವಗೃಹೀತದೇಹಃ
ಸುಪ್ತಃ ಕ್ಷಿತೌ ರಾವಣಗಂಧಹಸ್ತೀ ॥ ೧೧

ಪರಾಕ್ರಮೋತ್ಸಾಹವಿಜೃಂಭಿತಾರ್ಚಿ-
ರ್ನಿಶ್ವಾಸಧೂಮಃ ಸ್ವಬಲಪ್ರತಾಪಃ ।
ಪ್ರತಾಪವಾನ್ ಸಂಯತಿ ರಾಕ್ಷಸಾಗ್ನಿ
ರ್ನಿರ್ವಾಪಿತೋ ರಾಮಪಯೋಧರೇಣ ॥ ೧೨

ಸಿಂಹರ್ಕ್ಷಲಾಂಗೂಲಕಕುದ್ವಿಷಾಣಃ
ಪರಾಭಿಜಿದ್ಗಂಧನಗಂಧಹಸ್ತೀ ।
ರಕ್ಷೋವೃಷಶ್ಚಾಪಲಕರ್ಣಚಕ್ಷುಃ
ಕ್ಷಿತೀಶ್ವರವ್ಯಾಘ್ರಹತೋಽವಸನ್ನಃ ॥ ೧೩

ರಾಘವನೆಂಬ ಚಂಡಮಾರುತವು ಉರುಳಿಸಿಬಿಟ್ಟಿತೆ? ಧೈರ್ಯವೆಂಬ ಚಿಗುರಿನಿಂದ, ಛಲವೆಂಬ ಉತ್ತಮ ಪುಷ್ಪದಿಂದ, ತಪಸ್ಸೆಂಬ ದೃಢತೆಯಿಂದ, ಶೌರ್ಯವೆಂಬ ಬೇರಿನಲ್ಲಿ ಬಲವಾಗಿ ಬೆಳೆದು ನಿಂತಿದ್ದ ಈ ರಾಜವೃಕ್ಷವನ್ನು ಮುರಿದುಹಾಕಿತೆ? (೧೦). ರಾವಣನೆಂಬ ಈ ಮತ್ತಮಾತಂಗವು ರಾಮಸಿಂಹದಿಂದ ಹತವಾಗಿ ಬಿದ್ದಿತು! ಈ ಆನೆಗೆ ಪರಾಕ್ರಮವೇ ದೃಢವಾದ ದಂತ. ಶ್ರೇಷ್ಠವಾದ ಬ್ರಹ್ಮವಂಶವೇ ಇದರ ಪೃಷ್ಠಾವಯವ. ಕೋಪವೇ ಅಪರಕಾಯ*. ಅನುಗ್ರಹವೇ ಶುಂಡಾದಂಡ. ರಾಘವಸಿಂಹದ ಆಕ್ರಮಣಕ್ಕೆ ಸಿಕ್ಕಿ ಈ ಮದದಾನೆಯು ನೆಲದಲ್ಲಿ ಮಲಗಿಬಿಟ್ಟಿತು! (೧೧). ಅಯ್ಯೋ, ರಾಕ್ಷಸೇಂದ್ರನೆಂಬ ಪ್ರತಾಪಶಾಲಿಯಾದ ಅಗ್ನಿಯನ್ನು ರಾಮನೆಂಬ ಕಾಲಮೇಘವು ಆರಿಸಿಬಿಟ್ಟಿತು! ಉತ್ಸಾಹಪರಾಕ್ರಮಗಳೆಂಬ ಜ್ವಾಲೆಯನ್ನು ಉಗುಳುತ್ತ, ನಿಟ್ಟುಸಿರೆಂಬ ಹೊಗೆಯನ್ನು ಹಬ್ಬಿಸುತ್ತ, ಬಲವೆಂಬ ಬೇಗೆಯಿಂದ ಧಗಧಗಿಸುತ್ತಿದ್ದ ಬೆಂಕಿಯನ್ನು ನಂದಿಸಿಬಿಟ್ಟಿತು! (೧೨). ಅಕಟ, ಈ ರಾಕ್ಷಸವೃಷಭವು ರಾಮನೆಂಬ ಹುಲಿಯಿಂದ ಹತವಾಗಿ ಬಿದ್ದಿತು!

* ಅಪರಕಾಯ = ನಾಭಿಯಿಂದ ಹಿಡಿದು ಮಸ್ತಕಾಂತವಾದ ಶರೀರಭಾಗಕ್ಕೆ ಪೂರ್ವಕಾಯವೆಂದೂ ಉಳಿದ ಭಾಗಕ್ಕೆ ಅಪರಕಾಯವೆಂದೂ ಹೆಸರು.

ವದಂತಂ ಹೇತುಮದ್ವಾಕ್ಯಂ ಪರಿಮೃಷ್ಟಾರ್ಥನಿಶ್ಚಯಮ್ ।
ರಾಮಃ ಶೋಕಸಮಾವಿಷ್ಟಮಿತ್ಯುವಾಚ ವಿಭೀಷಣಮ್ ॥ ೧೪

ನಾಯಂ ವಿನಷ್ಟೋ ನಿಶ್ಚೇಷ್ಟಃ ಸಮರೇ ಚಂಡವಿಕ್ರಮಃ ।
ಅತ್ಯುನ್ನತಮಹೋತ್ಸಾಹಃ ಪತಿತೋಽಯಮಶಂಕಿತಃ ॥ ೧೫

ನೈವಂ ವಿನಷ್ಟಾಃ ಶೋಚ್ಯಂತೇ ಕ್ಷತ್ರಧರ್ಮಮವಸ್ಥಿತಾಃ ।
ವೃದ್ಧಿಮಾಶಂಸಮಾನಾ ಯೇ ನಿಪತಂತಿ ರಣಾಜಿರೇ ॥ ೧೬

ಯೇನ ಸೇಂದ್ರಾಸ್ತ್ರಯೋ ಲೋಕಾಸ್ತ್ರಾಸಿತಾ ಯುಧಿ ಧೀಮತಾ ।
ತಸ್ಮಿನ್ ಕಾಲಸಮಾಯುಕ್ತೇ ನ ಕಾಲಃ ಪರಿಶೋಚಿತುಮ್ ॥ ೧೭

---

ರಾಕ್ಷಸಸೇನೆಗಳೇ* ಇದರ ಬಾಲ, ಹಿಣಿಲು, ಕೊಂಬುಗಳು. ವೈರಿಗಳನ್ನು ತಿವಿದು ಬೀಳಿಸುವುದರಲ್ಲಿ ಅಗ್ರಗಣ್ಯವಾದ ವೃಷಭವಿದು. ಚಾಪಲ್ಯವೇ ಇದರ ಕಿವಿ, ಕಣ್ಣು. ಈ ಮಹೋಕ್ಷವನ್ನು ರಾಮವ್ಯಾಘ್ರವು ಸಂಹರಿಸಿತು!" (೧೩). ಈ ರೀತಿಯಲ್ಲಿ ಅರ್ಥತತ್ತ್ವವನ್ನು ವಿವೇಚಿಸಿ ಯುಕ್ತವಾದ ಮಾತಿನಿಂದ ಹಲುಬುತ್ತ ಶೋಕಾರ್ತನಾದ ವಿಭೀಷಣನನ್ನು ನೋಡಿ ಶ್ರೀರಾಮನು ಹೀಗೆಂದನು (೧೪): "ವಿಭೀಷಣ, ಶೋಕಿಸಬೇಡ. ಈತನು ಶೌರ್ಯವನ್ನು ಮೆರೆಸದೆ ಕೈಲಾಗದವನಂತೆ ಸಾಯಲಿಲ್ಲ. ಸಂಗ್ರಾಮದಲ್ಲಿ ಚಂಡಪರಾಕ್ರಮಿ ಇವನು. ಅದ್ಭುತವಾದ ಉತ್ಸಾಹಶಕ್ತಿಯಿಂದ ಬೆಳಗುತ್ತಿದ್ದವನು. ಮರಣಕ್ಕೆ ಅಂಜದೆ ಹೋರಾಡಿ ಅಸುವನ್ನು ನೀಗಿದ್ದಾನೆ (೧೫). ಕ್ಷತ್ರಿಯಧರ್ಮದಲ್ಲಿ ನಿರತರಾದ ಇಂತಹ ವೀರರು ಹತರಾದರೆಂದು ಶೋಕಿಸಬಾರದು. ತಮ್ಮ ಅಭ್ಯುದಯಕ್ಕಾಗಿ ಹೋರಾಡಿ, ರಣರಂಗದಲ್ಲಿ ಹತರಾಗಿ ಉರುಳುವ ಶೂರರಿಗಾಗಿ ಅಳಬಾರದು (೧೬). ವಿಭೀಷಣ, ನಿನ್ನ ಅಣ್ಣನು ಸಾಮಾನ್ಯನೆ? ದೇವೇಂದ್ರಸಹಿತವಾಗಿ ಮೂರು ಲೋಕಗಳನ್ನೂ ನಡುಗಿಸಿದ ಧೀರನಿವನು. ಇಂತಹವನು ಕಾಲವಶವನ್ನೈದಿದ

---

* ಸಿಂಹರ್ಕ್ಷವೆಂದು ಮೂಲದಲ್ಲಿದೆ. ಸಿಂಹರ್ಕ್ಷ = ಮೂಲನಕ್ಷತ್ರ. ಇದು ರಾಕ್ಷಸನಕ್ಷತ್ರವಾದ್ದರಿಂದ ರಾಕ್ಷಸರು ಸಿಂಹರ್ಕ್ಷರು. ಹಿಣಿಲು = ಎತ್ತಿನ ಬೆನ್ನುಹುಬ್ಬ. ಮಹೋಕ್ಷ = ಎತ್ತು.

ನೈಕಾಂತವಿಜಯೋ ಯುದ್ಧೇ ಭೂತಪೂರ್ವಃ ಕದಾಚನ ।
ಪರೈರ್ವಾ ಹನ್ಯತೇ ವೀರಃ ಪರಾನ್ ವಾ ಹಂತಿ ಸಂಯುಗೇ ॥ ೧೮

ಇಯಂ ಹಿ ಪೂರ್ವೈಃ ಸಂದಿಷ್ಟಾ ಗತಿಃ ಕ್ಷತ್ರಿಯಸಂಮತಾ ।
ಕ್ಷತ್ರಿಯೋ ನಿಹತಃ ಸಂಖ್ಯೇ ನ ಶೋಚ್ಯ ಇತಿ ನಿಶ್ಚಯಃ ॥ ೧೯

ತದೇವಂ ನಿಶ್ಚಯಂ ದೃಷ್ಟ್ವಾ ತತ್ತ್ವಮಾಸ್ಥಾಯ ವಿಜ್ವರಃ ।
ಯದಿಹಾನಂತರಂ ಕಾರ್ಯಂ ಕಲ್ಪ್ಯಂ ತದನುಚಿಂತಯ ॥ ೨೦

ತಮುಕ್ತವಾಕ್ಯಂ ವಿಕ್ರಾಂತಂ ರಾಜಪುತ್ರಂ ವಿಭೀಷಣಃ ।
ಉವಾಚ ಶೋಕಸಂತಪ್ತೋ ಭ್ರಾತುರ್ಹಿತಮನಂತರಮ್ ॥ ೨೧

ಯೋಽಯಂ ವಿಮರ್ದೇಷು ನ ಭಗ್ನಪೂರ್ವಃ
ಸುರೈಃ ಸಮೇತೈಃ ಸಹ ವಾಸವೇನ ।
ಭವಂತಮಾಸಾದ್ಯ ರಣೇ ವಿಭಗ್ನೋ
ವೇಲಾಮಿವಾಸಾದ್ಯ ಯಥಾ ಸಮುದ್ರಃ ॥ ೨೨

---

ನೆಂದು, ಇದು ಶೋಕಿಸುವ ಸಂದರ್ಭವಲ್ಲ. ಯುದ್ಧದಲ್ಲಿ ಜಯವೇ ಲಭಿಸುವುದೆಂಬ ನಿಶ್ಚಯವಿಲ್ಲ. ಯಾವಾಗಲೂ ಹಾಗೆ ನಡೆದಿಲ್ಲ. ವೀರನಾದವನು ಸಮರದಲ್ಲಿ ಶತ್ರುಗಳಿಂದ ಹತನಾಗಬೇಕು; ಇಲ್ಲವೆ, ಶತ್ರುಗಳನ್ನು ಕೊಲ್ಲಬೇಕು (೧೭-೧೮). ಕ್ಷತ್ರಿಯನಾದವನು ಯುದ್ಧದಲ್ಲಿ ಸತ್ತರೆ ಸದ್ಗತಿಯನ್ನು ಹೊಂದುವನೆಂದು ಪೂರ್ವಜರಾದ ಹಿರಿಯರು ಒಪ್ಪಿಕೊಂಡಿದ್ದಾರೆ. ಯುದ್ಧದಲ್ಲಿ ಹತನಾದ ವೀರನನ್ನು ಕುರಿತು ಶೋಕಿಸಬಾರದೆಂಬುದೇ ಶಾಸ್ತ್ರನಿರ್ಣಯ (೧೯). ಆದ್ದರಿಂದ, ವಿಭೀಷಣ, ನಿನ್ನ ಅಣ್ಣನಿಗಾಗಿ ಅಳಬೇಡ. ಈ ಶಾಸ್ತ್ರನಿರ್ಣಯವನ್ನು ನೀನು ಪರ್ಯಾಲೋಚಿಸು. ಲೋಕವ್ಯವಸ್ಥೆಯೇ ಹೀಗಿದೆಯೆಂಬುದನ್ನು ತಿಳಿದು ಸಮಾಧಾನವನ್ನು ಹೊಂದು. ವಿಭೀಷಣ, ಮುಂದೆ ನಡೆಸಬೇಕಾದ ಕಾರ್ಯವೇನೆಂಬುದನ್ನು ಚಿಂತಿಸು" ಎಂದು ಸಂತೈಸಿದನು (೨೦). ಶೋಕಸಂತಪ್ತನಾದ ವಿಭೀಷಣನು ತನ್ನ ಅಣ್ಣನ ಶ್ರೇಯಸ್ಸಿಗಾಗಿ ಮುಂದಿನ ಕರ್ತವ್ಯವನ್ನು ನಿರ್ಧರಿಸಿ, ಶ್ರೀರಾಮನನ್ನು ಕುರಿತು "ರಾಘವ, ದೇವತೆಗಳು ಇಂದ್ರನೊಡಗೂಡಿಬಂದರೂ ನನ್ನ ಅಣ್ಣನು ಯುದ್ಧದಲ್ಲಿ ಮಣಿದವನಲ್ಲ. ಇಂತಹ

ಅನೇನ ದತ್ತಾನಿ ಸುಪೂಜಿತಾನಿ
ಭುಕ್ತಾಶ್ಚ ಭೋಗಾ ನಿಭೃತಾಶ್ಚ ಭೃತ್ಯಾಃ ।
ಧನಾನಿ ಮಿತ್ರೇಷು ಸಮರ್ಪಿತಾನಿ
ವೈರಾಣ್ಯಮಿತ್ರೇಷು ಚ ಯಾಪಿತಾನಿ ॥ ೨೩

ಏಷೋಽಽಹಿತಾಗ್ನಿಶ್ಚ ಮಹಾತಪಾಶ್ಚ
ವೇದಾಂತಗಃ ಕರ್ಮಸು ಚಾಗ್ರ್ಯವೀರ್ಯಃ ।
ಏತಸ್ಯ ಯತ್ ಪ್ರೇತಗತಸ್ಯ ಕೃತ್ಯಂ
ತತ್ಕರ್ತುಮಿಚ್ಛಾಮಿ ತವ ಪ್ರಸಾದಾತ್ ॥ ೨೪

ಸ ತಸ್ಯ ವಾಕ್ಯೈಃ ಕರುಣೈರ್ಮಹಾತ್ಮಾ
ಸಂಬೋಧಿತಃ ಸಾಧು ವಿಭೀಷಣೇನ ।
ಆಜ್ಞಾಪಯಾಮಾಸ ನರೇಂದ್ರಸೂನುಃ
ಸ್ವರ್ಗೀಯಮಾಧಾನಮದೀನಸತ್ತ್ವಃ ॥ ೨೫

---

ವೀರನು ನಿನ್ನನ್ನೆದುರಿಸಿ ಹತನಾಗಿಬಿಟ್ಟನು. ಸಮುದ್ರವು ವೇಲೆಯನ್ನೆದುರಿಸಿದಂತಾಗಿ ಭಗ್ನನಾದನು (೨೧-೨೨). ರಾಜಪುತ್ರ, ನನ್ನ ಅಣ್ಣನು ಬೇಕಾದಷ್ಟು ದಾನಧರ್ಮಗಳನ್ನು ಮಾಡಿದ್ದಾನೆ. ಗುರುಹಿರಿಯರನ್ನು ಪೂಜಿಸಿದ್ದಾನೆ. ರಾಜಭೋಗಗಳನ್ನು ಸಮೃದ್ಧವಾಗಿ ಅನುಭವಿಸಿದ್ದಾನೆ. ಭೃತ್ಯರನ್ನು ತೃಪ್ತಿಯಾಗುವಂತೆ ಪೋಷಿಸಿದ್ದಾನೆ. ಮಿತ್ರರಿಗೆ ಪುಷ್ಕಳವಾಗಿ ಧನವನ್ನು ನೀಡಿದ್ದಾನೆ. ಹಾಗೆಯೇ ವೈರಿಗಳಲ್ಲಿ ಸರಿಯಾಗಿ ಸೇಡನ್ನು ತೀರಿಸಿಕೊಂಡಿದ್ದಾನೆ! (೨೩). ರಾಘವ, ಈತನು ಆಹಿತಾಗ್ನಿಯಾಗಿ ಅಗ್ನಿಹೋತ್ರಾದಿಕಾರ್ಯಗಳನ್ನು ನಡೆಸುತ್ತಿದ್ದನು. ಮಹಾತಪಸ್ವಿ. ವೇದಾಂತದಲ್ಲಿ ನಿಷ್ಣಾತ. ಶ್ರೇಷ್ಠನಾದ ಕರ್ಮನಿಷ್ಠ. ಇಂತಹ ಮಹಾಪುರುಷನಿಗೆ ಯೋಗ್ಯವಾದ ರೀತಿಯಲ್ಲಿ ಪ್ರೇತಕಾರ್ಯವನ್ನು ನಿನ್ನ ಅನುಗ್ರಹದಿಂದ ಮಾಡಬೇಕೆಂದಿದ್ದೇನೆ" ಎಂದು ಹೇಳಿದನು (೨೪). ಈ ಪ್ರಕಾರವಾಗಿ ವಿಭೀಷಣನು ಕರುಣಾದ್ರ್ರವಾದ ವಾಕ್ಯಗಳಿಂದ ಪ್ರಾರ್ಥಿಸಲು, ಮಹಾತ್ಮನೂ ಧೀರನೂ ಆದ ದಶರಥರಾಜತನಯನು ಅನುಮೋದಿಸಿ, ಸ್ವರ್ಗಪ್ರಾಪ್ತಿಕರವಾದ ಅಂತ್ಯೇಷ್ಟಿಯನ್ನು ನಡೆಸುವಂತೆ ಆಜ್ಞಾಪಿಸಿದನು (೨೫).

**ಮರಣಾಂತಾನಿ ವೈರಾಣಿ ನಿರ್ವೃತ್ತಂ ನಃ ಪ್ರಯೋಜನಮ್ ।**
**ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾ ತವ ॥** ೨೬

**ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಾದಶೋತ್ತರಶತತಮಃ ಸರ್ಗಃ**



ಶ್ರೀರಾಮನು "ವಿಭೀಷಣ, ಇದೇಕೆ ಹೀಗೆ ಹೇಳುವೆ? ವೈರಕ್ಕೆ ಮರಣವೇ ಗಡಿ (ಸತ್ತವನ ವಿಷಯದಲ್ಲಿ ವೈರಬುದ್ಧಿ ಇರಬಾರದು). ನಮ್ಮ ಕಾರ್ಯ ನೆರವೇರಿತು (ಇನ್ನು ರಾವಣನಮೇಲೆ ದ್ವೇಷವೇಕೆ?). ಇವನ ಉತ್ತರಕ್ರಿಯೆಯನ್ನು ನೆರವೇರಿಸು. ವಿಭೀಷಣ, ಇವನು ನಿನಗೆ ಹೇಗೋ ಹಾಗೆ ನನಗೂ ಇನ್ನುಮೇಲೆ ಸೋದರನೇ!" ಎಂದು ನುಡಿದನು (೨೬).

**ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹನ್ನೆರಡನೆಯ ಸರ್ಗ**



# ತ್ರಯೋದಶೋತ್ತರಶತತಮಃ ಸರ್ಗಃ

## ರಾವಣಾಂತಃಪುರಪರಿದೇವನಮ್

ರಾವಣಂ ನಿಹತಂ ಶ್ರುತ್ವಾ ರಾಘವೇಣ ಮಹಾತ್ಮನಾ ।
ಅಂತಃಪುರಾದ್ವಿನಿಷ್ಪೇತುೂ ರಾಕ್ಷಸ್ಯಃ ಶೋಕಕರ್ಶಿತಾಃ ॥ ೧

ನಾರ್ಯೋವಾರ್ಯಮಾಣಾಃ ಸುಬಹುಶೋ ವೇಷ್ಟಂತ್ಯಃ ಕ್ಷಿತಿಪಾಂಸುಷು ।
ವಿಮುಕ್ತಕೇಶ್ಯೋ ದುಃಖಾರ್ತಾ ಗಾವೋ ವತ್ಸಹತಾ ಇವ ॥ ೨

ಉತ್ತರೇಣ ವಿನಿಷ್ಕ್ರಮ್ಯ ದ್ವಾರೇಣ ಸಹ ರಾಕ್ಷಸೈಃ ।
ಪ್ರವಿಶ್ಯಾಯೋಧನಂ ಘೋರಂ ವಿಚಿನ್ವತ್ಯೋ ಹತಂ ಪತಿಮ್ ॥ ೩

ಆರ್ಯಪುತ್ರೇತಿವಾದಿನ್ಯೋ ಹಾ ನಾಥೇತಿ ಚ ಸರ್ವಶಃ ।
ಪರಿಪೇತುಃ ಕಬಂಧಾಂಕಾಂ ಮಹೀಂ ಶೋಣಿತಕರ್ದಮಾಮ್ ॥ ೪

ತಾ ಬಾಷ್ಪಪರಿಪೂರ್ಣಾಕ್ಷ್ಯೋ ಭರ್ತೃಶೋಕಪರಾಜಿತಾಃ ।
ಕರೇಣ್ವ ಇವ ನರ್ದಂತ್ಯೋ ವಿನೇದುರ್ಹತಯೂಥಪಾಃ ॥ ೫

### ಸರ್ಗ ೧೧೩

#### ರಾವಣಪತ್ನಿಯರ ವಿಲಾಪ.

ಮಹಾತ್ಮನಾದ ರಾಘವನಿಂದ ರಾವಣನು ಹತನಾದನೆಂಬ ಸುದ್ದಿಯನ್ನು ಕೇಳಿ, ರಾವಣಾಂತಃಪುರದಿಂದ ರಾಕ್ಷಸಸ್ತ್ರೀಯರು ಅಳುತ್ತ ಹೊರಟರು. ಯಾರು ಎಷ್ಟೆಷ್ಟು ತಡೆದರೂ ನಿಲ್ಲದೆ, ಅವರೆಲ್ಲರೂ ತಲೆಕೂದಲನ್ನು ಕೆದರಿಕೊಂಡು ಮಣ್ಣಲ್ಲಿ ಹೊರಳುತ್ತ, ಕರುಗಳನ್ನು ಕಳೆದುಕೊಂಡ ಗೋವುಗಳಂತೆ ಆರ್ತಸ್ವರದಿಂದ ಕೂಗುತ್ತ ಹೊರಟರು (೧-೨). ಆ ಸ್ತ್ರೀಯರು ತಮ್ಮ ಬಂಧುಗಳಾದ ರಾಕ್ಷಸರೊಡಗೂಡಿ ಲಂಕೆಯ ಉತ್ತರದ್ವಾರದ ಮೂಲಕ ಘೋರವಾದ ರಣರಂಗಕ್ಕೆ ಬಂದು, ಹತನಾದ ತಮ್ಮ ಪತಿಯನ್ನು ಅರಸುತ್ತ, "ಆರ್ಯಪುತ್ರ, ಹಾ ನಾಥ!" ಎಂದು ಗೋಳಾಡುತ್ತ, ತಲೆಯಿಲ್ಲದ ಕಬಂಧಗಳಿಂದ ಕೂಡಿ ರಕ್ತದಿಂದ ಕೊಚ್ಚೆಯಾದ ನೆಲದಲ್ಲಿ ತಿರುಗಾಡಿದರು (೩-೪). ಆ ಸ್ತ್ರೀಯರ ಕಣ್ಣುಗಳಲ್ಲಿ ನೀರು ತುಂಬಿತ್ತು.

ದದೃಶುಸ್ತಂ ಮಹಾವೀರ್ಯಂ ಮಹಾಕಾಯಂ ಮಹಾದ್ಯುತಿಮ್ ।
ರಾವಣಂ ನಿಹತಂ ಭೂಮೌ ನೀಲಾಂಜನಚಯೋಪಮಮ್ ॥ ೬

ತಾಃ ಪತಿಂ ಸಹಸಾ ದೃಷ್ಟ್ವಾ ಶಯಾನಂ ರಣಪಾಂಸುಷು ।
ನಿಪೇತುಸ್ತಸ್ಯ ಗಾತ್ರೇಷು ಛಿನ್ನಾ ವನಲತಾ ಇವ ॥ ೭

ಬಹುಮಾನಾತ್ ಪರಿಷ್ವಜ್ಯ ಕಾಚಿದೇನಂ ರುರೋದ ಹ ।
ಚರಣೌ ಕಾಚಿದಾಲಿಂಗ್ಯ ಕಾಚಿತ್ ಕಂಠೇಽವಲಂಬ್ಯ ಚ ॥ ೮

ಉದ್ಧೃತ್ಯ ಚ ಭುಜೌ ಕಾಚಿದ್ಭೂಮೌ ಸ್ಮ ಪರಿವರ್ತತೇ ।
ಹತಸ್ಯ ವದನಂ ದೃಷ್ಟ್ವಾ ಕಾಚಿನ್ಮೋಹಮುಪಾಗಮತ್ ॥ ೯

ಕಾಚಿದಂಕೇ ಶಿರಃ ಕೃತ್ವಾ ರುರೋದ ಮುಖಮೀಕ್ಷತೀ ।
ಸ್ನಾಪಯಂತೀ ಮುಖಂ ಬಾಷ್ಪೈಸ್ತುಷಾರೈರಿವ ಪಂಕಜಮ್ ॥ ೧೦

---

ಪತಿಯು ಮೃತನಾದನೆಂಬ ದುಃಖವು ಕೊರೆಯುತ್ತಿತ್ತು. ಸಲಗನನ್ನು ಕಳೆದುಕೊಂಡ ಹೆಣ್ಣಾನೆಗಳಂತೆ ಆರ್ತಸ್ವರದಿಂದ ಅವರು ಚೀರುತ್ತಿದ್ದರು. ಪತಿಯನ್ನು ಹುಡುಕುತ್ತ ಬಂದು, ಕಡೆಗೆ ಮಹಾವೀರ್ಯನೂ ಮಹಾಕಾಯನೂ ಮಹಾದ್ಯುತಿಯೂ ಆದ ರಾವಣನು ಕಪ್ಪುಕಾಡಿಗೆಯ ರಾಶಿಯಂತೆ ನೆಲದಲ್ಲಿ ಹತನಾಗಿ ಬಿದ್ದಿರುವುದನ್ನು ಅವನ ಪತ್ನಿಯರು ನೋಡಿದರು (೫-೬). ರಣಭೂಮಿಯ ಧೂಳಿಯಲ್ಲಿ ಮಲಗಿದ್ದ ಪತಿಯನ್ನು ಕಂಡೊಡನೆ, ಕಡಿದುಹಾಕಿದ ವನಲತೆಗಳಂತೆ ಆ ಸ್ತ್ರೀಯರು ಶೋಕಾವೇಶದಿಂದ ರಾವಣನ ಮೈಮೇಲೆ ಬಿದ್ದು ಹೊರಳತೊಡಗಿದರು(೭). ಒಬ್ಬಳು ಪ್ರೇಮಾತಿಶಯದಿಂದ ರಾವಣನನ್ನು ಅಪ್ಪಿಕೊಂಡು ಗಳಗಳನೆ ಅತ್ತಳು. ಇನ್ನೊಬ್ಬಳು ಅವನ ಕಾಲುಗಳನ್ನೂ ಮತ್ತೊಬ್ಬಳು ಕಂಠವನ್ನೂ ಆಲಿಂಗಿಸಿಕೊಂಡು ರೋದಿಸಿದರು. ಮಗದೊಬ್ಬಳು ರಾವಣನ ಭುಜಗಳನ್ನು ತನ್ನ ಮೈಮೇಲಿರಿಸಿಕೊಂಡು ನೆಲದಲ್ಲಿ ಹೊರಳಾಡಿದಳು. ಇನ್ನೊಬ್ಬ ರಮಣಿಗೆ ಹತನಾದ ರಾವಣನ ಮುಖವನ್ನು ನೋಡಿದೊಡನೆ ಎಚ್ಚರದಪ್ಪಿತು (೮-೯). ಒಬ್ಬ ತರುಣಿಯು ಆತನ ಶಿರಸ್ಸನ್ನು ತನ್ನ ತೊಡೆಯಮೇಲಿಟ್ಟುಕೊಂಡು, ಮುಖವನ್ನು ನೋಡಿ ನೋಡಿ ರೋದಿಸುತ್ತಿದ್ದಳು. ತಾವರೆಹೂವಿನಮೇಲೆ ಹಿಮವನ್ನು ಸುರಿಸುವಂತೆ, ಕಣ್ಣೀರು ಹರಿಸಿ ಅವನ ಮುಖವನ್ನು ನೆನೆಸಿದಳು

ಏವಮಾರ್ತಾಃ ಪತಿಂ ದೃಷ್ಟ್ವಾ ರಾವಣಂ ನಿಹತಂ ಭುವಿ ।
ಚುಕ್ರುಶುರ್ಬಹುಧಾ ಶೋಕಾದ್ಭೂಯಸ್ತಾಃ ಪರ್ಯದೇವಯನ್ ॥
ಯೇನ ವಿತ್ರಾಸಿತಃ ಶಕ್ರೋ ಯೇನ ವಿತ್ರಾಸಿತೋ ಯಮಃ ।
ಯೇನ ವೈಶ್ರವಣೋ ರಾಜಾ ಪುಷ್ಪಕೇಣ ವಿಯೋಜಿತಃ ॥ ೧೨
ಗಂಧರ್ವಾಣಾಮೃಷೀಣಾಂ ಚ ಸುರಾಣಾಂ ಚ ಮಹಾತ್ಮನಾಮ್ ।
ಭಯಂ ಯೇನ ಮಹದ್ದತ್ತಂ ಸೋಽಯಂ ಶೇತೇ ರಣೇ ಹತಃ ॥ ೧೩
ಅಸುರೇಭ್ಯಃ ಸುರೇಭ್ಯೋ ವಾ ಪನ್ನಗೇಭ್ಯೋಽಪಿ ವಾ ತಥಾ ।
ನ ಭಯಂ ಯೋ ವಿಜಾನಾತಿ ತಸ್ಯೇದಂ ಮಾನುಷಾದ್ಭಯಮ್ ॥ ೧೪
ಅವಧ್ಯೋ ದೇವತಾನಾಂ ಯಸ್ತಥಾ ದಾನವರಕ್ಷಸಾಮ್ ।
ಹತಃ ಸೋಽಯಂ ರಣೇ ಶೇತೇ ಮಾನುಷೇಣ ಪದಾತಿನಾ ॥ ೧೫
ಯೋ ನ ಶಕ್ಯಃ ಸುರೈರ್ಹಂತುಂ ನ ಯಕ್ಷೈರ್ನಾಸುರೈಸ್ತಥಾ ।
ಸೋಽಯಂ ಕಶ್ಚಿದಿವಾಸತ್ತ್ವೋ ಮೃತ್ಯುಂ ಮರ್ತ್ಯೇನ ಲಂಭಿತಃ ॥

---

(೧೦). ಹೀಗೆ ರಾವಣಪತ್ನಿಯರು ಹತನಾದ ರಾವಣನನ್ನು ನೋಡಿ ದುಃಖಾವೇಶದಿಂದ ಅತ್ತು ಗೋಳಾಡಿದರು. ಬಗೆಬಗೆಯಲ್ಲಿ ಹಲುಬಿದರು. "ಅಯ್ಯೋ ಅಕಟ! ರಾವಣನು ಹತನಾದನೆ? ಇಂದ್ರನು ಯಾರಿಗೆ ಅಂಜುತ್ತಿದ್ದನೋ, ಯಮನು ಯಾರಿಗೆ ನಡುಗುತ್ತಿದ್ದನೋ, ಯಕ್ಷರಾಜನಾದ ವೈಶ್ರವಣನು ಯಾರಿಂದ ಪುಷ್ಪಕವಿಮಾನವನ್ನು ಕಳೆದುಕೊಂಡನೋ ಅಂತಹ ರಾವಣನು ಹತನಾದನಲ್ಲ! (೧೧-೧೨). ಗಂಧರ್ವರೂ ಋಷಿಗಳೂ ದೇವತೆಗಳೂ ಯಾರ ಹೆಸರನ್ನು ಕೇಳಿದರೆ ತತ್ತರಿಸಿ ನಡುಗುತ್ತಿದ್ದರೋ ಅಂಥ ರಾವಣನು ಯುದ್ಧದಲ್ಲಿ ಹತನಾಗಿ ಮಲಗಿದನೆ! ಸುರಾಸುರರಿಂದಲೂ ಪನ್ನಗರಿಂದಲೂ ಭಯವೆಂಬುದನ್ನೇ ಯಾವನು ಕಂಡರಿಯನೋ, ಅಂಥವನಿಗೆ ಒಬ್ಬ ಮನುಷ್ಯನಿಂದ ಈ ರೀತಿಯ ವಿಪತ್ತು ಬಂದಿತೆ! (೧೩-೧೪). ಅಬ್ಬ! ದೇವದಾನವರಿಗೂ ರಾಕ್ಷಸರಿಗೂ ಯಾರನ್ನು ಸಂಹರಿಸಲು ಸಾಧ್ಯವೇ ಆಗಲಿಲ್ಲವೋ ಅಂಥ ವೀರಾಗ್ರೇಸರನನ್ನು ಪದಾತಿಯಾದ ಒಬ್ಬ ಮನುಷ್ಯನು ಕೊಂದುಬಿಟ್ಟನಲ್ಲ! (೧೫). ಅಕಟ! ದೇವತೆಗಳಿಗಾಗಲಿ ಯಕ್ಷರಿಗಾಗಲಿ ಅಸುರರಿಗಾಗಲಿ ಸಂಹರಿಸಲು ಅಶಕ್ಯನಾದ ಈ ಪರಾಕ್ರಮಿಯು, ನಿಸ್ಸತ್ವ

ಏವಂ ವದಂತ್ಯೋ ಬಹುಧಾ ರುರುದುಸ್ತಸ್ಯ ತಾಃ ಸ್ತ್ರಿಯಃ ।
ಭೂಯ ಏವ ಚ ದುಃಖಾರ್ತಾ ವಿಲೇಪುಶ್ಚ ಪುನಃ ಪುನಃ ॥ ೧೭

ಅಶೃಣ್ವತಾ ಚ ಸುಹೃದಾಂ ಸತತಂ ಹಿತವಾದಿನಾಮ್ ।
ಮರಣಾಯಾಹೃತಾ ಸೀತಾ ಘಾತಿತಾಶ್ಚ ನಿಶಾಚರಾಃ ॥ ೧೮

ಏತಾಃ ಸಮಮಿದಾನೀಂ ತೇ ವಯಮಾತ್ಮಾ ಚ ಪಾತಿತಾಃ ।
ಬ್ರುವಾಣೋಽಪಿ ಹಿತಂ ವಾಕ್ಯಮಿಷ್ಟೋ ಭ್ರಾತಾ ವಿಭೀಷಣಃ ॥ ೧೯

ಧೃಷ್ಟಂ ಪರುಷಿತೋ ಮೋಹಾತ್ತ್ವಯಾತ್ಮವಧಕಾಂಕ್ಷಿಣಾ ।
ಯದಿ ನಿರ್ಯಾತಿತಾ ತೇ ಸ್ಯಾತ್ಸೀತಾ ರಾಮಾಯ ಮೈಥಿಲೀ ॥ ೨೦

ನ ನಃ ಸ್ಯಾದ್ವ್ಯಸನಂ ಘೋರಮಿದಂ ಮೂಲಹರಂ ಮಹತ್ ।
ವೃತ್ತಕಾಮೋ ಭವೇದ್ಭ್ರಾತಾ ರಾಮೋ ಮಿತ್ರಕುಲಂ ಭವೇತ್ ॥

ವಯಂ ಚಾವಿಧವಾಃ ಸರ್ವಾಃ ಸಕಾಮಾ ನ ಚ ಶತ್ರವಃ ।
ತ್ವಯಾ ಪುನರ್ನೃಶಂಸೇನ ಸೀತಾಂ ಸಂರುಂಧತಾ ಬಲಾತ್ ॥ ೨೨

---

ನಾದ ಒಬ್ಬ ಸಾಮಾನ್ಯನಂತೆ ಮಾನವನಿಂದ ಮೃತನಾಗಿಬಿಟ್ಟನಲ್ಲ!" (೧೬). ಈ ರೀತಿಯಲ್ಲಿ ಹಲುಬುತ್ತ ಆ ರಾಕ್ಷಸ ಸ್ತ್ರೀಯರು ಗೋಳಾಡಿದರು. ದುಃಖಾರ್ತರಾಗಿ ಮತ್ತೆ ಮತ್ತೆ ಅತ್ತರು. ರೋದಿಸುತ್ತ ಮತ್ತೆ ವಿಲಪಿಸಿದರು : " ಹಾ ನಾಥ! ಹಿತವಾದಿಗಳಾದ ಮಿತ್ರರ ಮಾತನ್ನು ನೀನು ಕೇಳಲಿಲ್ಲ. ಸಾವಿಗಾಗಿಯೇ ಸೀತೆಯನ್ನು ತಂದಂತಾಯಿತು. ಬಹುಮಂದಿ ರಾಕ್ಷಸರನ್ನೂ ಕೊಲ್ಲಿಸಿದೆ (೧೭-೧೮). ನೀನೂ ನಿನ್ನವರಾದ ನಾವೆಲ್ಲರೂ ಹತರಾದೆವು. ನಿನ್ನ ಪ್ರಿಯಸೋದರನಾದ ವಿಭೀಷಣನು ಹಿತನುಡಿಯನ್ನಾಡಿದರೂ ನೀನು ಕೇಳದೆಹೋದೆ. ಅವಿವೇಕದಿಂದ ಕಠಿಣವಾಗಿ ಅವನನ್ನು ನಿಂದಿಸಿದೆ. ಇದೆಲ್ಲವೂ ನಿನ್ನ ಮರಣವನ್ನು ಕೋರಿ ನೀನೇ ನಡೆಸಿದ ಕಾರ್ಯ (೧೯-೨೦). ಸೀತೆಯನ್ನು ರಾಮನಿಗೆ ಒಪ್ಪಿಸಿಬಿಟ್ಟಿದ್ದರೆ ಇಂತಹ ಘೋರವಾದ ವಿಪತ್ತು ನಮಗೆ ಬರುತ್ತಿರಲಿಲ್ಲ. ಬುಡವನ್ನೇ ಕಡಿದು ಚೆಲ್ಲುವ ಈ ಕಷ್ಟ ಸಂಭವಿಸುತ್ತಿರಲಿಲ್ಲ. ತಮ್ಮನಾದ ವಿಭೀಷಣನ ಇಷ್ಟವನ್ನೂ ನಡೆಸಿದಂತಾಗುತ್ತಿತ್ತು. ರಾಮನೂ ನಮಗೆ ಮಿತ್ರನಾಗುತ್ತಿದ್ದನು. ನಾವೂ ವಿಧವೆಯರಾಗುತ್ತಿರಲಿಲ್ಲ! ನಮ್ಮ ಶತ್ರುಗಳಾದ ಇಂದ್ರಾದಿಗಳ ಇಷ್ಟವೂ

ರಾಕ್ಷಸಾ ವಯಮಾತ್ಮಾ ಚ ತ್ರಯಂ ತುಲ್ಯಂ ನಿಪಾತಿತಮ್ ।
ನ ಕಾಮಕಾರಃ ಕಾಮಂ ವಾ ತವ ರಾಕ್ಷಸಪುಂಗವ ॥ ೨೩

ದೈವಂ ಚೇಷ್ಟಯತೇ ಸರ್ವಂ ಹತಂ ದೈವೇನ ಹನ್ಯತೇ ।
ವಾನರಾಣಾಂ ವಿನಾಶೋಽಯಂ ರಕ್ಷಸಾಂ ಚ ಮಹಾಹವೇ ॥ ೨೪

ತವ ಚೈವ ಮಹಾಬಾಹೋ ದೈವಯೋಗಾದುಪಾಗತಃ ।
ನೈವಾರ್ಥೇನ ನ ಕಾಮೇನ ವಿಕ್ರಮೇಣ ನ ಚಾಜ್ಞಯಾ ॥ ೨೫

ಶಕ್ಯಾ ದೈವಗತಿರ್ಲೋಕೇ ನಿವರ್ತಯಿತುಮುದ್ಯತಾ ।
ವಿಲೇಪುರೇವಂ ದೀನಾಸ್ತಾ ರಾಕ್ಷಸಾಧಿಪಯೋಷಿತಃ ॥ ೨೬

ಕುರರ್ಯ ಇವ ದುಃಖಾರ್ತಾ ಬಾಷ್ಪಪರ್ಯಾಕುಲೇಕ್ಷಣಾಃ ॥

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಯೋದಶೋತ್ತರಶತತಮಃ ಸರ್ಗಃ



ನಡೆಯುತ್ತಿರಲಿಲ್ಲ (೨೧-೨೨). ನೀನಾದರೋ ಕ್ರೂರಸ್ವಭಾವದಿಂದ ಸೀತೆಯನ್ನು ಬಲಾತ್ಕಾರವಾಗಿ ಸೆರೆಯಲ್ಲಿಟ್ಟೆ. ಅದರ ಫಲವಾಗಿ ಸಮಸ್ತ ರಾಕ್ಷಸರೂ ನೀನೂ ನಾವೂ-ಮೂವರೂ ಏಕಕಾಲದಲ್ಲಿ ನಾಶವಾದೆವು! ಓ ರಾಕ್ಷಸಶ್ರೇಷ್ಠ ! ಇದೆಲ್ಲಕ್ಕೂ ನಿನ್ನ ಸ್ವೇಚ್ಛಾಪ್ರವರ್ತನೆಯೇ ಕಾರಣವೆಂದೂ ಹೇಳುವಂತಿಲ್ಲ (೨೩). ಎಲ್ಲವೂ ದೈವದ ಆಟ! ದೈವವೇ ಜೀವಿಯನ್ನು ಮೊದಲು ಕೊಂದಿರುತ್ತದೆ. ಆಮೇಲೆ ನೆವಕ್ಕೆ ಇನ್ನೊಬ್ಬನು ಕೊಲ್ಲುತ್ತಾನೆ. ಈ ರೀತಿಯಲ್ಲಿ ಯುದ್ಧ ನಡೆದು, ಇದರಲ್ಲಿ ವಾನರರಿಗೂ ರಾಕ್ಷಸರಿಗೂ ನಿನಗೂ ವಿನಾಶವು ದೈವಯೋಗದಿಂದ ಆದುದೇ ಸರಿ (೨೪). ಹಾ ನಾಥ! ಕಾರ್ಯೋನ್ಮುಖವಾದ ದೈವಗತಿಯನ್ನು ಧನದಿಂದಾಗಲಿ ಇಚ್ಛೆಯಿಂದಾಗಲಿ ಪರಾಕ್ರಮದಿಂದಾಗಲಿ ಆಜ್ಞಾಮಾತ್ರದಿಂದಾಗಲಿ-ನಿಲ್ಲಿಸಲು ಶಕ್ಯವಿಲ್ಲ. ಒಟ್ಟಿನಲ್ಲಿ ನಾವು ಕೆಟ್ಟೆವು" ಎಂದು ರಾಕ್ಷಸರಾಜನ ಪತ್ನಿಯರು ದೈನ್ಯದಿಂದ ವಿಲಪಿಸಿದರು. ದುಃಖದಿಂದ ಕಣ್ಣೀರುಬಿಡುತ್ತ ಕುರರಪಕ್ಷಿಗಳಂತೆ ಆರ್ತಧ್ವನಿಯಿಂದ ಅತ್ತರು (೨೫-೨೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹದಿಮೂರನೆಯ ಸರ್ಗ



## ಚತುರ್ದಶೋತ್ತರಶತತಮಃ ಸರ್ಗಃ

### ಮಂದೋದರೀವಿಲಾಪಃ

ತಾಸಾಂ ವಿಲಪಮಾನಾನಾಂ ತಥಾ ರಾಕ್ಷಸಯೋಷಿತಾಮ್ ।
ಜ್ಯೇಷ್ಠಾ ಪತ್ನೀ ಪ್ರಿಯಾ ದೀನಾ ಭರ್ತಾರಂ ಸಮುದೈಕ್ಷತ ॥ ೧

ದಶಗ್ರೀವಂ ಹತಂ ದೃಷ್ಟ್ವಾ ರಾಮೇಣಾಚಿಂತ್ಯಕರ್ಮಣಾ ।
ಪತಿಂ ಮಂದೋದರೀ ತತ್ರ ಕೃಪಣಾ ಪರ್ಯದೇವಯತ್ ॥ ೨

ನನು ನಾಮ ಮಹಾಭಾಗ ತವ ವೈಶ್ರವಣಾನುಜ ।
ಕ್ರುದ್ಧಸ್ಯ ಪ್ರಮುಖೇ ಸ್ಥಾತುಂ ತ್ರಸ್ಯತ್ಯಪಿ ಪುರಂದರಃ ॥ ೩

ಋಷಯಶ್ಚ ಮಹೀದೇವಾ ಗಂಧರ್ವಾಶ್ಚ ಯಶಸ್ವಿನಃ ।
ನನು ನಾಮ ತವೋದ್ವೇಗಾಚ್ಚಾರಣಾಶ್ಚ ದಿಶೋ ಗತಾಃ ॥ ೪

### ಸರ್ಗ ೧೧೪

ಮಂಡೋದರಿಯ ವಿಲಾಪ. ವಿಭೀಷಣನಿಂದ ರಾವಣನ ಉತ್ತರಕ್ರಿಯೆ.

ಹೀಗೆ ರಾಕ್ಷಸಸ್ತ್ರೀಯರು ವಿಲಪಿಸುತ್ತಿರುವಾಗ, ರಾವಣನ ಪ್ರಿಯತಮೆಯೂ ಜ್ಯೇಷ್ಠಪತ್ನಿಯೂ ಆದ ಮಂಡೋದರಿಯು* ಬಂದು ದೈನ್ಯದಿಂದ ತನ್ನ ಪತಿಯನ್ನು ನೋಡಿದಳು. ಅಚಿಂತ್ಯಮಹಿಮನಾದ ಶ್ರೀರಾಮನಿಂದ ದಶಗ್ರೀವನು ಹತನಾಗಿರುವುದನ್ನು ವೀಕ್ಷಿಸಿ, ಮಂಡೋದರಿಯು ದುಃಖಾರ್ತಳಾಗಿ ವಿಲಪಿಸತೊಡಗಿದಳು (೧–೨): “ಓ ಮಹಾಭಾಗ, ಕುಬೇರಾನುಜ! ನಿನ್ನೆದುರಿಗೆ ನಿಲ್ಲುವುದಕ್ಕೆ ಸಹ ದೇವೇಂದ್ರನು ಹೆದರುತ್ತಿದ್ದನಲ್ಲವೆ? ಕೀರ್ತಿಶಾಲಿಗಳಾದ ಋಷಿಗಳೂ ಬ್ರಾಹ್ಮಣರೂ ಗಂಧರ್ವರೂ ಚಾರಣರೂ ನಿನಗೆ ಅಂಜಿ ದಿಕ್ಕುದಿಕ್ಕಿಗೆ ಓಡುತ್ತಿದ್ದರಲ್ಲವೆ? (೩–೪).

---

* ಮೂಲದಲ್ಲಿ ಮಂದೋದರೀ–ಮಂಡೋದರೀ ಎಂದು ಎರಡು ಪಾಠಗಳೂ ಇವೆ. ಮಂದ = ಕೃಶವಾದ, ಉದರೀ = ಉದರವುಳ್ಳವಳು; ಕೃಶೋದರಿ. ಮಂಡ = ಮಂಡನಭೂತವಾದ–ಸುಂದರವಾದ, ಉದರೀ = ಉದರವುಳ್ಳವಳು. ‘ಮಡಿ–ಭೂಷಾಯಾಂ ಹರ್ಷೇ ಚ.’

ಸ ತ್ವಂ ಮಾನುಷಮಾತ್ರೇಣ ರಾಮೇಣ ಯುಧಿ ನಿರ್ಜಿತಃ ।
ನ ವ್ಯಪತ್ರಪಸೇ ರಾಜನ್ ಕಿಮಿದಂ ರಾಕ್ಷಸರ್ಷಭ ॥ ೫

ಕಥಂ ತ್ರೈಲೋಕ್ಯಮಾಕ್ರಮ್ಯ ಶ್ರಿಯಾ ವೀರ್ಯೇಣ ಚಾನ್ವಿತಮ್ ।
ಅವಿಷಹ್ಯಂ ಜಘಾನ ತ್ವಾಂ ಮಾನುಷೋ ವನಗೋಚರಃ ॥ ೬

ಮಾನುಷಾಣಾಮವಿಷಯೇ ಚರತಃ ಕಾಮರೂಪಿಣಃ ।
ವಿನಾಶಸ್ತವ ರಾಮೇಣ ಸಂಯುಗೇ ನೋಪಪದ್ಯತೇ ॥ ೭

ನ ಚೈತತ್ ಕರ್ಮ ರಾಮಸ್ಯ ಶ್ರದ್ದಧಾಮಿ ಚಮೂಮುಖೇ ।
ಸರ್ವತಃ ಸಮುಪೇತಸ್ಯ ತವ ತೇನಾಭಿಮರ್ಶನಮ್ ॥ ೮

ಯದೈವ ಚ ಜನಸ್ಥಾನೇ ರಾಕ್ಷಸೈರ್ಬಹುಭಿರ್ವೃತಃ ।
ಖರಸ್ತವ ಹತೋ ಭ್ರಾತಾ ತದೈವಾಸೌ ನ ಮಾನುಷಃ ॥ ೯

---

ಹಾ ನಾಥ, ಅಂಥ ವೀರಾಗ್ರೇಸರನಾದ ನೀನು ಒಬ್ಬ ಮನುಷ್ಯಮಾತ್ರನಾದ ರಾಮನಿಂದ ಯುದ್ಧದಲ್ಲಿ ಪರಾಜಿತನಾದೆಯಾ ? ಓ ಮಹಾರಾಜ-ರಾಕ್ಷಸೋತ್ತಮ, ಇದರಿಂದ ನಿನಗೆ ಲಜ್ಜೆಯಾಗದೆ ? (೫). ಮೂರು ಲೋಕಗಳನ್ನೂ ತುಳಿದು ನಿಂತ ನಿನ್ನನ್ನು-ಐಶ್ವರ್ಯದಿಂದಲೂ ವೀರ್ಯದಿಂದಲೂ ಮೆರೆಯುತ್ತಿದ್ದ ನಿನ್ನನ್ನು-ಅಜೇಯನಾಗಿದ್ದ ನಿನ್ನನ್ನು, ಕಾಡಿನಲ್ಲಿ ಅಲೆದಾಡುತ್ತಿದ್ದ ಒಬ್ಬ ಮಾನವನು ಹೇಗೆ ಕೊಂದಿರಬಹುದು ? (೬). ಮಾನವರಿಗೆ ಅಗಮ್ಯವಾದ ಲಂಕಾದಿ ಪ್ರದೇಶಗಳಲ್ಲಿ ಕಾಮರೂಪಿಯಾಗಿ ಸಂಚರಿಸಬಲ್ಲ ನಿನಗೆ, ರಾಮನೊಡನೆ ಯುದ್ಧವಾಗಿ ಅವನಿಂದ ಸಾವು ಬಂದಿತೆಂದರೆ ಎಂದಿಗೂ ಒಪ್ಪತಕ್ಕದ್ದಲ್ಲ ! ರಾಮನು ರಣರಂಗದಲ್ಲಿ ಇಂತಹ ಆಶ್ಚರ್ಯ ಕಾರ್ಯವನ್ನು ನಡೆಸಿದನೆಂದರೆ, ನನಗೆ ನಂಬಿಕೆಯಾಗದು ! ಸಕಲ ಯುದ್ಧೋಪಕರಣಗಳಿಂದ ಸನ್ನದ್ಧನಾದ ನಿನ್ನನ್ನು ರಾಮನು ಮುತ್ತಿದನೆಂಬುದನ್ನು ನಾನು ನಂಬಲಾರೆ ! (೭-೮). ನಿನ್ನ ತಮ್ಮನಾದ ಖರನು ಸಾಮಾನ್ಯನೆ ? ಅವನಿಗೆ ಬಹುಮಂದಿ ರಾಕ್ಷಸಭಟರ ಪರಿವಾರವಿತ್ತು. ಅವರೆಲ್ಲರನ್ನೂ ಜನಸ್ಥಾನದಲ್ಲಿ ಯಾವಾಗ ರಾಮನು ಕೊಂದನೋ ಆಗಲೇ ಅವನು ಮನುಷ್ಯಮಾತ್ರನಲ್ಲವೆಂದು ಸ್ಪಷ್ಟವಾಯಿತು ! ಲಂಕಾ

ಯದೈವ ನಗರೀಂ ಲಂಕಾಂ ದುಷ್ಪ್ರವೇಶಾಂ ಸುರೈರಪಿ ।
ಪ್ರವಿಷ್ಟೋ ಹನುಮಾನ್ ವೀರ್ಯಾತ್ತದೈವ ವ್ಯಥಿತಾ ವಯಮ್ ॥

ಯದೈವ ವಾನರೈರ್ಘೋರೈರ್ಬದ್ಧಃ ಸೇತುರ್ಮಹಾರ್ಣವೇ ।
ತದೈವ ಹೃದಯೇನಾಹಂ ಶಂಕೇ ರಾಮಮಮಾನುಷಮ್ ॥ ೧೧

ಅಥವಾ ರಾಮರೂಪೇಣ ಕೃತಾಂತಃ ಸ್ವಯಮಾಗತಃ ।
ಮಾಯಾಂ ತವ ವಿನಾಶಾಯ ವಿಧಾಯಾಪ್ರತಿತರ್ಕಿತಾಮ್ ॥ ೧೨

ಅಥವಾ ವಾಸವೇನ ತ್ವಂ ಧರ್ಷಿತೋಽಸಿ ಮಹಾಬಲ ।
ವಾಸವಸ್ಯ ಕುತಃ ಶಕ್ತಿಸ್ತ್ವಾಂ ದ್ರಷ್ಟುಮಪಿ ಸಂಯುಗೇ ॥ ೧೩

ವ್ಯಕ್ತಮೇಷ ಮಹಾಯೋಗೀ ಪರಮಾತ್ಮಾ ಸನಾತನಃ ।
ಅನಾದಿಮಧ್ಯನಿಧನೋ ಮಹತಃ ಪರಮೋ ಮಹಾನ್ । ೧೪

---

ನಗರಿಯು ದೇವತೆಗಳಿಗೂ ಪ್ರವೇಶಿಸಲು ಅಶಕ್ಯವಾದದ್ದು. ಹನುಮಂತನೆಂಬ ಕಪಿಯೊಬ್ಬನು ಯಾವಾಗ ಇದರೊಳಗೆ ಶೌರ್ಯದಿಂದ ನುಗ್ಗಿ ಬಂದನೋ, ಆಗಲೇ ನಮಗೆ ಭಯವಾಗಿತ್ತು (೯-೧೦). ಘೋರರಾದ ವಾನರರನ್ನು ಕರೆತಂದು ಮಹಾಸಾಗರಕ್ಕೆ ಯಾವಾಗ ಸೇತುವನ್ನು ಕಟ್ಟಿದನೋ, ಆಗಲೇ ರಾಮನು ಮಾನವನಲ್ಲವೆಂದು ನನ್ನ ಮನಸ್ಸಿಗೆ ಹೊಳೆದಿತ್ತು. ಸ್ವಯಂ ಕೃತಾಂತನೇ ರಾಮರೂಪದಿಂದ ಬಂದನೋ ಏನೋ! ನಿನ್ನ ಸಂಹಾರಕ್ಕಾಗಿ ಊಹಾತೀತವಾದ ಮಾಯಾಬಲದಿಂದ* ಅವನೇ ಬಂದಿರಬಹುದು (೧೧-೧೨). ಹಾ ವೀರಾಗ್ರಣಿ, ಇಂದ್ರನೇ ರಾಮನಾಗಿ ಬಂದು, ನಿನ್ನನ್ನು ಆಕ್ರಮಿಸಿರಬೇಕು. ಇಲ್ಲ, ಇಲ್ಲ! ರಣರಂಗದಲ್ಲಿ ನಿನ್ನನ್ನು ಕಣ್ಣೆತ್ತಿ ನೋಡಲು ಸಹ ಇಂದ್ರನಿಗೆ ಸಾಮರ್ಥ್ಯ ಉಂಟೆ? (೧೩). ಆದ್ದರಿಂದ, ಓ ನನ್ನ ಸ್ವಾಮಿಯೆ, ರಾಮನು ಸಾಕ್ಷಾತ್ ಮಹಾವಿಷ್ಣುವೇ ಸರಿ! ಸರ್ವಯೋಗೇಶ್ವರನೂ ನಿತ್ಯನೂ ಆದ ಪರಮಾತ್ಮನೇ ಹೌದು. ಆದಿಮಧ್ಯಾಂತಶೂನ್ಯನೂ ಪ್ರಕೃತಿಯ ಆಚೆಗಿರುವ ಪರಮಶ್ರೇಷ್ಠನೂ

* 'ಅಪ್ರತಿತರ್ಕಿತಾಂ = ಊಹಾತೀತವಾದ ರೂಪಲಾವಣ್ಯವುಳ್ಳ, ಮಾಯಾಂ = ಸೀತಾರೂಪವಾದ ಮಾಯೆಯನ್ನು ನಿರ್ಮಿಸಿ' ಎಂದು ಕೆಲವರು ಅರ್ಥಮಾಡುತ್ತಾರೆ.

ತಮಸಃ ಪರಮೋ ಧಾತಾ ಶಂಖಚಕ್ರಗದಾಧರಃ ।
ಶ್ರೀವತ್ಸವಕ್ಷಾ ನಿತ್ಯಶ್ರೀರಜಯ್ಯಃ ಶಾಶ್ವತೋ ಧ್ರುವಃ ॥ ೧೫

ಮಾನುಷಂ ವಪುರಾಸ್ಥಾಯ ವಿಷ್ಣುಃ ಸತ್ಯಪರಾಕ್ರಮಃ ।
ಸರ್ವೈಃ ಪರಿವೃತೋ ದೇವೈರ್ವಾನರತ್ವಮುಪಾಗತೈಃ ॥ ೧೬

ಸರ್ವಲೋಕೇಶ್ವರಃ ಸಾಕ್ಷಾಲ್ಲೋಕಾನಾಂ ಹಿತಕಾಮ್ಯಯಾ ।
ಸರಾಕ್ಷಸಪರೀವಾರಂ ಹತವಾಂಸ್ತ್ವಾಂ ಮಹಾದ್ಯುತಿಃ ॥ ೧೭

ಇಂದ್ರಿಯಾಣಿ ಪುರಾ ಜಿತ್ವಾ ಜಿತಂ ತ್ರಿಭುವನಂ ತ್ವಯಾ ।
ಸ್ಮರದ್ಭಿರಿವ ತದ್ವೈರಮಿಂದ್ರಿಯೈರೇವ ನಿರ್ಜಿತಃ ॥ ೧೮

ಕ್ರಿಯತಾಮವಿರೋಧಶ್ಚ ರಾಘವೇಣೇತಿ ಯನ್ಮಯಾ ।
ಉಚ್ಯಮಾನೋ ನ ಗೃಹ್ಣಾಸಿ ತಸ್ಯೇಯಂ ವ್ಯುಷ್ಟಿರಾಗತಾ ॥ ೧೯

---

ಪ್ರಕೃತಿಯ ಪ್ರವರ್ತಕನೂ ಸೃಷ್ಟಿಕರ್ತನೂ ಶಂಖಚಕ್ರಗದಾಧರನೂ ಆದ ಶ್ರೀಮನ್ನಾರಾಯಣನೇ ಸರಿ. ಶ್ರೀವತ್ಸಶೋಭಿತವಕ್ಷಸ್ಥಳನೂ ನಿತ್ಯೈಶ್ವರ್ಯ ಸಂಪನ್ನನೂ ಅಜೇಯನೂ ಶಾಶ್ವತನೂ ನಾಶರಹಿತನೂ ಆದ ವಿಷ್ಣುವೇ ರಾಮನಾಗಿ ಬಂದಿದ್ದಾನೆ (೧೪-೧೫). ಸತ್ಯಪರಾಕ್ರಮನಾದ ಭಗವಂತನೇ ಮನುಷ್ಯದೇಹವನ್ನು ಧರಿಸಿ ಬಂದಿದ್ದಾನೆ. ವಾನರರೂಪದಿಂದ ಅವತರಿಸಿದ ದೇವತೆಗಳಿಂದ ಪರಿವೃತನಾಗಿದ್ದಾನೆ. ಸರ್ವಲೋಕೇಶ್ವರನೂ ಮಹಾದ್ಯುತಿಯೂ ಆದ ಪರಮಾತ್ಮನು ಲೋಕಹಿತವನ್ನು ಬಯಸಿ ರಾಕ್ಷಸ ಪರಿವಾರವನ್ನೂ ನಿನ್ನನ್ನೂ ಕೊಂದಿರುವನೆಂಬುದು ಸ್ಪಷ್ಟವಾಗಿದೆ! * (೧೬-೧೭). ಮಹಾರಾಜ, ಹಿಂದೆ ನೀನು ಇಂದ್ರಿಯಗಳನ್ನು ಗೆದ್ದು ಅದರ ಬಲದಿಂದ ಮೂರುಲೋಕಗಳನ್ನೂ ಜಯಿಸಿದೆ. ಪೂರ್ವವೈರವನ್ನು ಸ್ಮರಿಸಿಕೊಂಡವೋ ಎಂಬಂತೆ ಆ ಇಂದ್ರಿಯಗಳೇ ನಿನ್ನನ್ನೀಗ ಜಯಿಸಿಬಿಟ್ಟವು! (೧೮). 'ರಾಘವನೊಡನೆ ಹಗೆತನ ಬೇಡ' ಎಂದು ನಾನು ಹೇಳಿದರೂ ನನ್ನ ಮಾತನ್ನು ಕೇಳದೆಹೋದೆ. ಅದರ ಫಲ ಹೀಗಾಯಿತು.

---

* ಇಂದ್ರಾದಿಗಳಿಗೂ ಅಜೇಯನಾದ ರಾವಣನನ್ನು ಸಂಹರಿಸಿದ್ದರಿಂದ, ಶ್ರೀರಾಮನು ಪರಮಾತ್ಮನೇ ಆಗಿರಬೇಕೆಂದು ಮಂಡೋದರಿಯ ಊಹೆ. ಭಗವತ್ಕೃಪೆಯಿಂದ ಸತ್ಯವೇ ಅವಳಿಗೆ ಸ್ಫುರಿಸಿತೆಂಬುದು ಇಲ್ಲಿ ವಿಶೇಷ.

ಅಕಸ್ಮಾಚ್ಚಾಭಿಕಾಮೋಽಸಿ ಸೀತಾಂ ರಾಕ್ಷಸಪುಂಗವ ।
ಐಶ್ವರ್ಯಸ್ಯ ವಿನಾಶಾಯ ದೇಹಸ್ಯ ಸ್ವಜನಸ್ಯ ಚ ॥ ೨೦

ಅರುಂಧತ್ಯಾ ವಿಶಿಷ್ಟಾಂ ತಾಂ ರೋಹಿಣ್ಯಾಶ್ಚಾಪಿ ದುರ್ಮತೇ ।
ಸೀತಾಂ ಧರ್ಷಯತಾ ಮಾನ್ಯಾಂ ತ್ವಯಾ ಹ್ಯಸದೃಶಂ ಕೃತಮ್ ॥

ವಸುಧಾಯಾಶ್ಚ ವಸುಧಾಂ ಶ್ರಿಯಃ ಶ್ರೀಂ ಭರ್ತೃವತ್ಸಲಾಮ್ ।
ಸೀತಾಂ ಸರ್ವಾನವದ್ಯಾಂಗೀಮರಣ್ಯೇ ವಿಜನೇ ಶುಭಾಮ್ ॥ ೨೨

ಆನಯಿತ್ವಾ ತು ತಾಂ ದೀನಾಂ ಛದ್ಮನಾತ್ಮಸ್ವದೂಷಣ ।
ಅಪ್ರಾಪ್ಯ ಚೈವ ತಂ ಕಾಮಂ ಮೈಥಿಲೀಸಂಗಮೇ ಕೃತಮ್ ॥ ೨೩

ಪತಿವ್ರತಾಯಾಸ್ತಪಸಾ ನೂನಂ ದಗ್ಧೋಽಸಿ ಮೇ ಪ್ರಭೋ ।
ತದೈವ ಯನ್ನ ದಗ್ಧಸ್ತ್ವಂ ಧರ್ಷಯಂಸ್ತನುಮಧ್ಯಮಾಮ್ ॥ ೨೪

---

ಓ ರಾಕ್ಷಸೇಶ್ವರ, ನಿಷ್ಕಾರಣವಾಗಿ ಸೀತೆಯನ್ನು ಕಾಮಿಸಿದೆಯಲ್ಲ! ನಿಖಿಲೈಶ್ವರ್ಯ, ನೆಂಟರಿಷ್ಟರು, ಕಡೆಗೆ ನಿನ್ನ ದೇಹ–ಎಲ್ಲವುಗಳ ವಿನಾಶಕ್ಕಾಗಿ ನಿನಗೆ ಅವಳಲ್ಲಿ ಅಭಿಲಾಷೆ ಹುಟ್ಟಿತು (೧೯–೨೦). ಶೀಲದಲ್ಲಿ ಅರುಂಧತಿಯನ್ನೂ ರೋಹಿಣಿಯನ್ನೂ ಮೀರಿಸಿದ ಸಮ್ಮಾನ್ಯಳಾದ ಸೀತೆಯಮೇಲೆ ಕೈಮಾಡಿದೆಯಲ್ಲ, ಎಂತಹ ಬುದ್ಧಿಗೇಡಿ ನೀನು! ಎಷ್ಟು ಅನುಚಿತವಾದ ಕಾರ್ಯಕ್ಕೆ ಕೈಹಾಕಿದೆ! (೨೧). ತಾಳ್ಮೆಯಲ್ಲಿ ಭೂದೇವಿಗೂ ಭೂದೇವಿಯೆನಿಸಿದ, ಸೌಭಾಗ್ಯದಲ್ಲಿ ಲಕ್ಷ್ಮಿಗೂ ಲಕ್ಷ್ಮಿಯೆನಿಸಿದ ಆ ಪತಿವ್ರತೆಯನ್ನು ನೀನು ಕೆಣಕಬಹುದೆ? ನಿರ್ದೋಷಳೂ ಶುಭಾಂಗಿಯೂ ಆದ ಅವಳು ಪರಮಸುಂದರಿಯೆಂಬ ಒಂದೇ ದೃಷ್ಟಿಯಿಂದ ನಿರ್ಜನವಾದ ಕಾಡಿಗೆ ಹೋಗಿ ಅಪಹರಿಸಬಹುದೆ? (೨೨). ಏಕಾಕಿನಿಯಾಗಿ ಅನಾಥೆಯಾಗಿದ್ದ ಸೀತೆಯನ್ನು ಮೋಸದಿಂದ ತರಬಹುದೆ? ನಿನಗೂ ನಿನ್ನವರಿಗೂ ಕೆಟ್ಟ ಹೆಸರನ್ನು ತಂದೆಯಲ್ಲ! ಮೈಥಿಲಿಯನ್ನು ಪಡೆಯಬೇಕೆಂಬ ನಿನ್ನ ಆಸೆ ಕಡೆಗೂ ಕೈಗೂಡಲಿಲ್ಲ (೨೩). ಹಾ ನನ್ನ ಪ್ರಭುವೆ, ಆ ಪತಿವ್ರತೆಯ ತಪೋಮಹಿಮೆಯಿಂದಲೇ ನೀನು ಸುಟ್ಟುಹೋದೆ! ಆ ಸಾಧ್ವಿಯನ್ನು ಕೆಣಕಿದಾಗಲೇ ನೀನು ಸುಟ್ಟುಹೋಗದೆ ಉಳಿದದ್ದು,

ದೇವಾ ಬಿಭ್ಯತಿ ತೇ ಸರ್ವೇ ಸೇಂದ್ರಾಃ ಸಾಗ್ನಿಪುರೋಗಮಾಃ ।
ಅವಶ್ಯಮೇವ ಲಭತೇ ಫಲಂ ಪಾಪಸ್ಯ ಕರ್ಮಣಃ ॥ ೨೫

ಘೋರಂ ಪರ್ಯಾಗತೇ ಕಾಲೇ ಕರ್ತಾ ನಾಸ್ತ್ಯತ್ರ ಸಂಶಯಃ ।
ಶುಭಕೃಚ್ಛುಭಮಾಪ್ನೋತಿ ಪಾಪಕೃತ್ ಪಾಪಮಶ್ನುತೇ ॥ ೨೬

ವಿಭೀಷಣಃ ಸುಖಂ ಪ್ರಾಪ್ತಸ್ತ್ವಂ ಪ್ರಾಪ್ತಃ ಪಾಪಮೀದೃಶಮ್ ।
ಸಂತ್ಯನ್ಯಾಃ ಪ್ರಮದಾಸ್ತುಭ್ಯಂ ರೂಪೇಣಾಭ್ಯಧಿಕಾಸ್ತತಃ ॥ ೨೭

ಅನಂಗವಶಮಾಪನ್ನಸ್ತ್ವಂ ತು ಮೋಹಾನ್ನ ಬುಧ್ಯಸೇ ।
ನ ಕುಲೇನ ನ ರೂಪೇಣ ನ ದಾಕ್ಷಿಣ್ಯೇನ ಮೈಥಿಲೀ ॥ ೨೮

ಮಯಾಧಿಕಾ ವಾ ತುಲ್ಯಾ ವಾ ತ್ವಂ ತು ಮೋಹಾನ್ನ ಬುಧ್ಯಸೇ ।
ಸರ್ವಥಾ ಸರ್ವಭೂತಾನಾಂ ನಾಸ್ತಿ ಮೃತ್ಯುರಲಕ್ಷಣಃ ॥ ೨೯

ತವ ತಾವದಯಂ ಮೃತ್ಯುರ್ಮೈಥಿಲೀಕೃತಲಕ್ಷಣಃ ।
ಸೀತಾನಿಮಿತ್ತಜೋ ಮೃತ್ಯುಸ್ತ್ವಯಾ ದೂರಾದುಪಾಹೃತಃ ॥ ೩೦

---

ನಿನ್ನ ಶೌರ್ಯದ ಪ್ರಭಾವದಿಂದಲೇ ಸರಿ! (೨೪). ಅಗ್ನಿಯು ನಿನ್ನನ್ನು ದಹಿಸಲು ಅಂಜಿರಬೇಕು! ಇಂದ್ರಾದಿ ದೇವತೆಗಳೆಲ್ಲರೂ ನಿನಗೆ ಹೆದರುತ್ತಿದ್ದರಲ್ಲವೆ? ಒಂದಲ್ಲ ಒಂದು ದಿನ ಪಾಪಕರ್ಮದ ಫಲವನ್ನು ಅನುಭವಿಸಲೇಬೇಕು. ಕಾಲವು ಪಕ್ವವಾದಾಗ, ಪಾಪಕರ್ಮಿಯು ಘೋರವಾದ ಫಲವನ್ನು ಉಣ್ಣಲೇಬೇಕು. ಪುಣ್ಯವಂತನಿಗೆ ಒಳ್ಳೆಯ ಫಲ, ಪಾಪಕರ್ಮಿಗೆ ಕೆಟ್ಟ ಫಲ ಕಟ್ಟಿಟ್ಟ ಬುತ್ತಿ (೨೫-೨೬). ವಿಭೀಷಣನಿಗೆ ಸೌಖ್ಯವಾಯಿತು; ನಿನಗೆ ಈ ವಿಪತ್ತು ಒದಗಿತು. ಹಾ ಪ್ರಾಣನಾಥ, ಸೀತೆಗಿಂತ ರೂಪವತಿಯರಾದ ಯುವತಿಯರು ನಿನ್ನ ಬಳಿಯಲ್ಲಿರಲಿಲ್ಲವೆ? ಮೋಹದಿಂದ ಕಾಮವಶನಾದ ನಿನಗೆ ಇದು ತಿಳಿಯದು! (೨೭). ಕಾಂತ, ಸೀತೆ ನನಗಿಂತ ಮೇಲಾದವಳೆ? ಕುಲದಲ್ಲಾಗಲಿ ರೂಪಿನಲ್ಲಾಗಲಿ ವಿದ್ಯಾನೈಪುಣ್ಯದಲ್ಲಾಗಲಿ—ಅವಳು ನನ್ನನ್ನು ಮೀರಿಸಿದವಳೂ ಅಲ್ಲ, ನನಗೆ ಸಾಟಿಯೂ ಅಲ್ಲ! ಮೋಹಾಂಧನಾದ ನಿನಗೆ ಇದು ತಿಳಿಯಲಿಲ್ಲ. ಒಟ್ಟಿನಲ್ಲಿ ಸಕಲ ಜೀವಿಗಳಿಗೂ ಏನಾದರೊಂದು ನಿಮಿತ್ತವಿಲ್ಲದೆ ಸಾವು ಬರುವುದಿಲ್ಲ (೨೮-೨೯). ನಿನ್ನ ಸಾವಿಗೆ ಸೀತೆ ನಿಮಿತ್ತವಾದಳು. ಸೀತೆಯು ನೆವದಿಂದ

ಮೈಥಿಲೀ ಸಹ ರಾಮೇಣ ವಿಶೋಕಾ ವಿಹರಿಷ್ಯತಿ ।
ಅಲ್ಪಪುಣ್ಯಾ ತ್ವಹಂ ಘೋರೇ ಪತಿತಾ ಶೋಕಸಾಗರೇ ॥ ೩೧
ಕೈಲಾಸೇ ಮಂದರೇ ಮೇರೌ ತಥಾ ಚೈತ್ರರಥೇ ವನೇ ।
ದೇವೋದ್ಯಾನೇಷು ಸರ್ವೇಷು ವಿಹೃತ್ಯ ಸಹಿತಾ ತ್ವಯಾ ॥ ೩೨
ವಿಮಾನೇನಾನುರೂಪೇಣ ಯಾ ಯಾಮ್ಯತುಲಯಾ ಶ್ರಿಯಾ ।
ಪಶ್ಯಂತೀ ವಿವಿಧಾನ್ ದೇಶಾಂಸ್ತಾಂಸ್ತಾಂಶ್ಚಿತ್ರಸ್ರಗಂಬರಾ ॥ ೩೩
ಭ್ರಂಶಿತಾ ಕಾಮಭೋಗೇಭ್ಯಃ ಸಾಸ್ಮಿ ವೀರ ವಧಾತ್ತವ ।
ಸೈವಾನ್ಯೇವಾಸ್ಮಿ ಸಂವೃತ್ತಾ ಧಿಗ್ರಾಜ್ಞಾಂ ಚಂಚಲಾಃ ಶ್ರಿಯಃ ॥ ೩೪
ಹಾ ರಾಜನ್ ಸುಕುಮಾರಂ ತೇ ಸುಭ್ರು ಸುತ್ವಕ್ ಸಮುನ್ನಸಮ್ ।
ಕಾಂತಿಶ್ರೀದ್ಯುತಿಭಿಸ್ತುಲ್ಯಮಿಂದುಪದ್ಮದಿವಾಕರೈಃ ॥ ೩೫

---

ಮೃತ್ಯುವನ್ನು ನೀನು ದೂರದಿಂದ ಮನೆಗೆ ಕರೆತಂದೆ! ಇನ್ನು ಮೈಥಿಲಿಯು ರಾಮನೊಡನೆ ಆನಂದದಿಂದ ವಿಹರಿಸುವಳು! ನಾನು ಭಾಗ್ಯಹೀನೆ. ಘೋರವಾದ ಶೋಕಸಾಗರದಲ್ಲಿ ಮುಳುಗಿದೆನು (೩೦-೩೧). ಅಯ್ಯೋ-ನನ್ನ ಸ್ವಾಮಿಯೆ, ನಿನ್ನೊಡನೆ ಯಥೇಚ್ಛವಾಗಿ ವಿಹರಿಸುತ್ತಿದ್ದೆನು. ಕೈಲಾಸ ಗಿರಿಯಲ್ಲಿಯೂ ಮೇರುಮಂದರಶೈಲಗಳಲ್ಲಿಯೂ ಚೈತ್ರರಥವೇ ಮೊದಲಾದ ಸಕಲ ದೇವೋದ್ಯಾನಗಳಲ್ಲಿಯೂ ವಿಹರಿಸಿದೆನು. ನಾನಾ ಬಗೆಯ ಉಡಿಗೆ ತೊಡಿಗೆಗಳನ್ನು ಧರಿಸಿದೆನು. ಅನುರೂಪವಾದ ಪುಷ್ಪಕವಿಮಾನವನ್ನೇರಿ ವಿವಿಧ ದೇಶಗಳನ್ನು ನೋಡುತ್ತ, ಎಣೆಯಿಲ್ಲದ ವೈಭವದಿಂದ ನಿನ್ನೊಡನೆ ಮೆರೆದೆನು (೩೨-೩೩). ಅಂತಹ ನಾನು, ಓ ವೀರಾಗ್ರಣಿ, ಸರ್ವಭೋಗಗಳಿಂದಲೂ ವಂಚಿತಳಾದೆನು. ನೀನು ಮೃತನಾದ್ದರಿಂದ, ಏನನ್ನೂ ಕಾಣದ ಒಬ್ಬ ಬಡಹೆಂಗಸೋ ಎಂಬಂತಾದೆನು. ಛೀ! ಅತಿಚಂಚಲವಾದ ರಾಜಭೋಗಗಳಿಗೆ ಧಿಕ್ಕಾರ! (೩೪). ಹಾ ಮಹಾರಾಜ, ಪಾನಭೂಮಿಯಲ್ಲಿ-ವಿಹಾರಕಾಲದಲ್ಲಿ ನಿನ್ನ ಮುಖವು ಎಷ್ಟು ಮನೋಜ್ಞವಾಗಿ ಕಾಣುತ್ತಿತ್ತು! ಅಂದವಾದ ಹುಬ್ಬುಗಳಿಂದ, ನುಣುಪಾದ ಚರ್ಮದಿಂದ, ಉನ್ನತವಾದ ಮೂಗಿನಿಂದ ಎಷ್ಟು ಸುಕುಮಾರವಾಗಿ ರಾಜಿಸುತ್ತಿತ್ತು! ಕಾಂತಿಯಲ್ಲಿ ಚಂದ್ರನಿಗೂ ಸೌಂದರ್ಯದಲ್ಲಿ ತಾವರೆಗೂ ತೇಜಸ್ಸಿನಲ್ಲಿ ಸೂರ್ಯನಿಗೂ

ಕಿರೀಟಕೂಟೋಜ್ಜ್ವಲಿತಂ ತಾಮ್ರಾಸ್ಯಂ ದೀಪ್ತಕುಂಡಲಮ್ ।
ಮದವ್ಯಾಕುಲಲೋಲಾಕ್ಷಂ ಭೂತ್ವಾ ಯತ್ಪಾನಭೂಮಿಷು ॥ ೩೬

ವಿವಿಧಸ್ರಗ್ಧರಂ ಚಾರು ವಲ್ಗುಸ್ಮಿತಕಥಂ ಶುಭಮ್ ।
ತದೇವಾದ್ಯ ತವೇದಂ ಹಿ ವಕ್ತ್ರಂ ನ ಭ್ರಾಜತೇ ಪ್ರಭೋ ॥ ೩೭

ರಾಮಸಾಯಕನಿರ್ಭಿನ್ನಂ ಸಿಕ್ತಂ ರುಧಿರವಿಸ್ರವೈಃ ।
ವಿಶೀರ್ಣಮೇದೋಮಸ್ತಿಷ್ಕಂ ರೂಕ್ಷಂ ಸ್ಯಂದನರೇಣುಭಿಃ ॥ ೩೮

ಹಾ ಪಶ್ಚಿಮಾ ಮೇ ಸಂಪ್ರಾಪ್ತಾ ದಶಾ ವೈಧವ್ಯಕಾರಿಣೀ ।
ಯಾ ಮಯಾಸೀನ್ನ ಸಂಬುದ್ಧಾ ಕದಾಚಿದಪಿ ಮಂದಯಾ ॥ ೩೯

ಪಿತಾ ದಾನವರಾಜೋ ಮೇ ಭರ್ತಾ ಮೇ ರಾಕ್ಷಸೇಶ್ವರಃ ।
ಪುತ್ರೋ ಮೇ ಶಕ್ರನಿರ್ಜೇತಾ ಇತ್ಯೇವಂ ಗರ್ವಿತಾ ಭೃಶಮ್ ॥ ೪೦

---

ಸಮಾನವಾಗಿತ್ತು (೩೫). ಉನ್ನತವಾದ ಕಿರೀಟದಿಂದಲೂ ಹೊಳೆಹೊಳೆಯುವ ಕುಂಡಲಗಳಿಂದಲೂ ಕೆಂಪನೆಯ ಚೆಂದುಟಿಯಿಂದಲೂ ನಿನ್ನ ವದನವು ಎಷ್ಟು ಮನೋಹರವಾಗಿ ತೋರುತ್ತಿತ್ತು! ಮದ್ಯಪಾನದಿಂದ ಹೊಯ್ದಾಡುವ ಕಣ್ಣುಗಳು ಎಷ್ಟು ರಮಣೀಯವಾಗಿದ್ದವು! (೩೬). ವಿವಿಧಮಾಲೆಗಳನ್ನು ಧರಿಸಿ ಕಿರುನಗೆ ಬೀರುತ್ತ ಮಧುರವಾಗಿ ಮಾತಾಡುವಾಗ, ಓ ಕಾಂತ, ನಿನ್ನ ಮುಖವು ಎಷ್ಟು ರಮ್ಯವಾಗಿತ್ತು! ಆದೇ ಮುಖವು ಈಗ, ಓ ನನ್ನ ಸ್ವಾಮಿ, ಶೋಭಿಸುತ್ತಿಲ್ಲವೇಕೆ? (೩೭). ರಾಮಬಾಣಗಳಿಂದ ವಿಚ್ಛಿನ್ನವಾಗಿ ರುಧಿರಧಾರೆಗಳಿಂದ ನೆನೆದುಹೋಗಿದೆಯಲ್ಲ! ಮೇದೋಮಾಂಸಗಳು ಕಿತ್ತು ಹೊರಗೆ ಬಂದಿವೆಯಲ್ಲ! ರಥದಿಂದೆದ್ದ ಧೂಳಿ ಮುಖದಮೇಲೆ ಮುಸುಕಿ ಮಲಿನವಾಗಿದೆಯಲ್ಲ! (೩೮). ಅಯ್ಯೋ-ಅಕಟ, ನನಗೆ ವೈಧವ್ಯ ಬಂದಿತು. ನಿನಗೆ ಈ ದುರವಸ್ಥೆ ಬಂದಿತು. ಮೂಢಾತ್ಮಳಾದ ನಾನು ಈ ದುರ್ದೆಶೆ ಬರುವುದೆಂದು ಎಂದೂ ಎಣಿಸಲಿಲ್ಲ. 'ನನ್ನ ತಂದೆ ದಾನವೇಶ್ವರ*. ನನ್ನ ಪತಿ ರಾಕ್ಷಸೇಶ್ವರ. ನನ್ನ ಮಗ

---

* ಮಂಡೋದರಿಯ ತಂದೆಯ ಹೆಸರು ಮಯ.

ದೃಷ್ಟಾರಿಮರ್ದನಾಃ ಶೂರಾಃ ಪ್ರಖ್ಯಾತಬಲಪೌರುಷಾಃ ।
ಅಕುತಶ್ಚಿದ್ಭಯಾ ನಾಥಾ ಮಮೇತ್ಯಾಸೀನ್ಮತಿರ್ದೃಢಾ ॥ ೪೧

ತೇಷಾಮೇವಂಪ್ರಭಾವಾಣಾಂ ಯುಷ್ಮಾಕಂ ರಾಕ್ಷಸರ್ಷಭ ।
ಕಥಂ ಭಯಮಸಂಬುದ್ಧಂ ಮಾನುಷಾದಿದಮಾಗತಮ್ ॥ ೪೨

ಸ್ನಿಗ್ಧೇಂದ್ರನೀಲನೀಲಂ ತು ಪ್ರಾಂಶುಶೈಲೋಪಮಂ ಮಹತ್ ।
ಕೇಯೂರಾಂಗದವೈಡೂರ್ಯಮುಕ್ತಾದಾಮಸ್ರಗುಜ್ಜ್ವಲಮ್ ॥

ಕಾಂತಂ ವಿಹಾರೇಷ್ವಧಿಕಂ ದೀಪ್ತಂ ಸಂಗ್ರಾಮಭೂಮಿಷು ।
ಭಾತ್ಯಾಭರಣಭಾಭಿರ್ಯದ್ವಿದ್ಯುದ್ಭಿರಿವ ತೋಯದಃ ॥ ೪೪

ತದೇವಾದ್ಯ ಶರೀರಂ ತೇ ತೀಕ್ಷ್ಣೈರ್ನೈಕೈಃ ಶರೈಶ್ಚಿತಮ್ ।
ಪುನರ್ದುರ್ಲಭಸಂಸ್ಪರ್ಶಂ ಪರಿಷ್ವಕ್ತುಂ ನ ಶಕ್ಯತೇ ॥ ೪೫

---

ದೇವೇಂದ್ರನನ್ನು ಜಯಿಸಿದ ವೀರಾಗ್ರಗಣ್ಯ' ಎಂದು ಗರ್ವಿಷ್ಠಳಾಗಿದ್ದೆನು (೩೯-೪೦). 'ನನ್ನ ರಕ್ಷಣೆಗೆ ಇಂತಹ ಶೂರರಿದ್ದಾರೆ. ಸೊಕ್ಕಿದ ಅರಿಗಳನ್ನು ಮರ್ದಿಸಬಲ್ಲ ವಿಖ್ಯಾತ ಪರಾಕ್ರಮಿಗಳು ಇವರು. ಇವರಿಗೆ ಯಾರಿಂದಲೂ ಭೀತಿ ಇಲ್ಲ' ಎಂದು ನಾನು ದೃಢವಾಗಿ ನಂಬಿದ್ದೆನು. ಓ ರಾಕ್ಷಸೇಂದ್ರ, ಅಂತಹ ತೇಜಸ್ವಿಗಳಾದ ನಿಮಗೆ ಒಬ್ಬ ಮಾನವನಿಂದ ಈ ವಿಪತ್ತು ಹೇಗೆ ಬಂದಿರಬಹುದು? ಏನೂ ಗೊತ್ತಾಗದು! (೪೧-೪೨). ಹಾ ನಾಥ, ನುಣುಪಾದ ಇಂದ್ರನೀಲಮಣಿಯಂತೆ ಹೊಳೆಯುತ್ತ ಉನ್ನತಶೈಲದಂತಿದ್ದ ನಿನ್ನ ದೃಢಕಾಯವು ಈ ಅವಸ್ಥೆಗೊಳಗಾಯಿತೆ? ಕೇಯೂರಾಂಗದಗಳಿಂದಲೂ ವೈಡೂರ್ಯಖಚಿತವಾದ ಮುಕ್ತಾಹಾರಗಳಿಂದಲೂ ಹೂಮಾಲೆಗಳಿಂದಲೂ ವಿರಾಜಿಸುತ್ತಿದ್ದ ನಿನ್ನ ದೇಹಕ್ಕೆ ಈ ಪರಿಸ್ಥಿತಿ ಒದಗಿತೆ? (೪೩). ವಿಹಾರಸಮಯದಲ್ಲಿ ಕಮನೀಯವಾಗಿಯೂ ಸಂಗ್ರಾಮಸಮಯದಲ್ಲಿ ಅತ್ಯುಗ್ರವಾಗಿಯೂ ಬೆಳಗುತ್ತಿದ್ದ ನಿನಗೆ ಈ ಸ್ಥಿತಿ ಬಂದಿತೆ? ಮಿಂಚುಗಳಿಂದ ಕೂಡಿದ ಮೇಘರಾಜನಂತೆ, ದಿವ್ಯಾಭರಣಗಳ ಪ್ರಭೆಯಿಂದ ದೀಪ್ತನಾಗಿ ಕಂಗೊಳಿಸುತ್ತಿದ್ದ ನಿನ್ನ ಶರೀರದಲ್ಲಿ ಹರಿತವಾದ ಶರರಾಶಿಗಳು ಚುಚ್ಚಿಕೊಂಡಿವೆಯಲ್ಲ! (೪೪). ಇನ್ನು ಎಂದೆಂದಿಗೂ ಮುಟ್ಟಲೂ ಸಹ ದುರ್ಲಭನಾದ ನಿನ್ನನ್ನು, ಒಮ್ಮೆ ದೃಢವಾಗಿ ಅಪ್ಪಿಕೊಳ್ಳಲೂ ಸಾಧ್ಯವಿಲ್ಲ

ಶ್ಚಾವಿದಃ ಶಲ್ಯೈರ್ಯುದ್ವದ್ಬಾಣೈರ್ಲಗ್ನೈರ್ನಿರಂತರಮ್ ।
ಸ್ವರ್ಷಿತೈರ್ನರ್ಮಸು ಭೃಶಂ ಸಂಛಿನ್ನಸ್ನಾಯುಬಂಧನಮ್ ॥ ೪೬

ಕ್ಷಿತೌ ನಿಪತಿತಂ ರಾಜನ್ ಶ್ಯಾವಂ ರುಧಿರಸಚ್ಛವಿ ।
ವಜ್ರಪ್ರಹಾರಾಭಿಹತೋ ವಿಕೀರ್ಣ ಇವ ಪರ್ವತಃ ॥ ೪೭

ಹಾ ಸ್ವಪ್ನಃ ಸತ್ಯಮೇವೇದಂ ತ್ವಂ ರಾಮೇಣ ಕಥಂ ಹತಃ ।
ತ್ವಂ ಮೃತ್ಯೋರಪಿ ಮೃತ್ಯುಃ ಸ್ಯಾಃ ಕಥಂ ಮೃತ್ಯುವಶಂ ಗತಃ ॥ ೪೮

ತ್ರೈಲೋಕ್ಯವಸುಭೋಕ್ತಾರಂ ತ್ರೈಲೋಕ್ಯೋದ್ವೇಗದಂ ಮಹತ್ ।
ಜೇತಾರಂ ಲೋಕಪಾಲಾನಾಂ ಕ್ಷೇಪ್ತಾರಂ ಶಂಕರಸ್ಯ ಚ ॥ ೪೯

ದೃಪ್ತಾನಾಂ ನಿಗ್ರಹೀತಾರಮಾವಿಷ್ಕೃತಪರಾಕ್ರಮಮ್ ।
ಲೋಕಕ್ಷೋಭಯಿತಾರಂ ಚ ನಾದೈರ್ಭೂತವಿರಾವಿಣಮ್ ॥ ೫೦

ಓಜಸಾ ದೃಪ್ತವಾಕ್ಯಾನಾಂ ವಕ್ತಾರಂ ರಿಪುಸಂನಿಧೌ ।
ಸ್ವಯೂಥಭೃತ್ಯವರ್ಗಾಣಾಂ ಗೋಪ್ತಾರಂ ಭೀಮವಿಕ್ರಮಮ್ ॥

---

ವಾಯಿತೆ ? ಅಯ್ಯೋ–ಅಕಟ, ಮುಳ್ಳುಹಂದಿಯ ದೇಹದಲ್ಲಿರುವ ಮುಳ್ಳುಗಳಂತೆ, ನಿರಂತರವಾಗಿ ಬಾಣಗಳು ಸರ್ವಾಂಗದಲ್ಲಿಯೂ ನೆಟ್ಟುಹೋಗಿವೆ. ನರನಾಡಿಗಳು ಕತ್ತರಿಸಿಹೋಗಿವೆ (೪೫–೪೬). ಹಾ ಮಹಾರಾಜ, ರಕ್ತದಲ್ಲಿ ನೆನೆದು ರಕ್ತವರ್ಣವಾಗಿ ಮಲಿನವಾಗಿದೆಯಲ್ಲ ನಿನ್ನ ದೇಹ. ವಜ್ರಾಯುಧದಿಂದ ಸೀಳಲ್ಪಟ್ಟ ಪರ್ವತದಂತೆ ಆಗಿರುವೆಯಲ್ಲ! ಅಯ್ಯೋ, ಇದೆಲ್ಲವೂ ಕನಸಾಗಿರಬೇಕು. ಹೌದು, ಇದು ಕನಸೇ ಸರಿ! ರಾಮನು ನಿನ್ನನ್ನು ವಧಿಸಬಲ್ಲನೆ? ಮೃತ್ಯುವಿಗೂ ಕಾಲಮೃತ್ಯುವಾಗಿದ್ದ ನೀನು ಮೃತ್ಯುವಿಗೆ ವಶನಾಗುವುದುಂಟೆ ? (೪೭–೪೮). ಹಾ ನನ್ನ ಪ್ರಭುವೆ, ಮೂರು ಲೋಕಗಳನ್ನೂ ಅತಿಯಾಗಿ ನಡುಗಿಸಿ, ಮೂರು ಲೋಕಗಳ ಭಾಗ್ಯವನ್ನೂ ಅನುಭವಿಸಿದವನು ನೀನು. ದಿಕ್ಪಾಲರನ್ನು ಜಯಿಸಿ, ಪರಮೇಶ್ವರನಿರುವ ಕೈಲಾಸವನ್ನು ಅಲ್ಲಾಡಿಸಿದವನು ನೀನು. ಸೊಕ್ಕಿದವರನ್ನು ದಂಡಿಸಿ, ಪರಾಕ್ರಮವನ್ನು ಮೆರೆಸಿದವನು ನೀನು. ಸರ್ವಲೋಕಗಳನ್ನೂ ದಂಗುಬಡಿಸಿ, ಗರ್ಜನೆಗಳಿಂದಲೇ ಸಕಲ ಭೂತಗಳನ್ನೂ ಕಂಗೆಡಿಸಿದವನು ನೀನು (೪೯–೫೦). ಹಗೆಗಳಿಗೆ ದರ್ಪದ ಉತ್ತರಗಳನ್ನಿತ್ತು ಓಜಸ್ವಿಯಾಗಿ ಬಾಳಿದವನು ನೀನು.

ಹಂತಾರಂ ದಾನವೇಂದ್ರಾಣಾಂ ಯಕ್ಷಾಣಾಂ ಚ ಸಹಸ್ರಶಃ ।
ನಿವಾತಕವಚಾನಾಂ ಚ ನಿಗ್ರಹೀತಾರಮೀಶ್ವರಮ್ ॥ ೫೨

ನೈಕಯಜ್ಞವಿಲೋಪ್ತಾರಂ ತ್ರಾತಾರಂ ಸ್ವಜನಸ್ಯ ಚ ।
ಧರ್ಮವ್ಯವಸ್ಥಾಭೇತ್ತಾರಂ ಮಾಯಾಸ್ರಷ್ಟಾರಮಾಹವೇ ॥ ೫೩

ದೇವಾಸುರನೃಕನ್ಯಾನಾಮಾಹರ್ತಾರಂ ತತಸ್ತತಃ ।
ಶತ್ರುಸ್ತ್ರೀಶೋಕದಾತಾರಂ ನೇತಾರಂ ಸ್ವಜನಸ್ಯ ಚ ॥ ೫೪

ಲಂಕಾದ್ವೀಪಸ್ಯ ಗೋಪ್ತಾರಂ ಕರ್ತಾರಂ ಭೀಮಕರ್ಮಣಾಮ್ ।
ಅಸ್ಮಾಕಂ ಕಾಮಭೋಗಾನಾಂ ದಾತಾರಂ ರಥಿನಾಂ ವರಮ್ ॥ ೫೫

ಏವಂಪ್ರಭಾವಂ ಭರ್ತಾರಂ ದೃಷ್ಟ್ವಾ ರಾಮೇಣ ಪಾತಿತಮ್ ।
ಸ್ಥಿರಾಸ್ಮಿ ಯಾ ದೇಹಮಿಮಂ ಧಾರಯಾಮಿ ಹತಪ್ರಿಯಾ ॥ ೫೬

---

ಬಂಧುಗಳನ್ನೂ ಭೃತ್ಯರನ್ನೂ ನೆಮ್ಮದಿಯಿಂದ ಪಾಲಿಸುತ್ತಿದ್ದ ಚಂಡ ಪರಾಕ್ರಮಿ. ದಾನವರನ್ನೂ ಯಕ್ಷರನ್ನೂ ಗುಂಪುಗುಂಪಾಗಿ ವಿಧ್ವಂಸ ಗೊಳಿಸಿದವನು. ನಿವಾತಕವಚರನ್ನೂ ಸಹ ದಂಡಿಸಿದ ಸಾಮರ್ಥ್ಯಶಾಲಿ (೫೧-೫೨). ವೈರಿಗಳ ಯಜ್ಞಕಾರ್ಯಗಳನ್ನು ನಾಶಪಡಿಸಿ ಆಶ್ರಿತರನ್ನು ಪೊರೆದವನು. ಧರ್ಮದ ಕಟ್ಟುಪಾಡುಗಳನ್ನು ಉಲ್ಲಂಘಿಸಿ ಸ್ವೇಚ್ಛೆಯಾಗಿ ನಡೆದವನು. ರಣಭೂಮಿಯಲ್ಲಿ ಮಾಯಾಬಲವನ್ನು ಸೃಜಿಸಿ ಹೋರಾಡ ತಕ್ಕವನು (೫೩). ದೇವಾಸುರಮಾನವ ಕನ್ಯೆಯರನ್ನು ನಿರ್ಭಯದಿಂದ ತಂದವನು. ಶತ್ರುಗಳ ಸ್ತ್ರೀಯರನ್ನು ಅಳಿಸಿದವನು! ಬಂಧುಜನರಿಗೆ ಆಶ್ರಯವನ್ನಿತ್ತು ನಾಯಕನಾಗಿದ್ದವನು. ಲಂಕಾದ್ವೀಪವನ್ನು ಆಳುತ್ತ ಭೀಮಕಾರ್ಯಗಳನ್ನೆಸಗಿದವನು. ಅಂತಃಪುರದಲ್ಲಿದ್ದ ನಮ್ಮೆಲ್ಲರಿಗೂ ಬಯಸಿದ ಭೋಗಗಳನ್ನಿತ್ತು ಸಲಹಿದವನು. ಮಹಾರಥನೆಂದು ವಿಖ್ಯಾತ ನಾದವನು (೫೪-೫೫). ಅಕಟ, ಇಂತಹ ಮಹಾಮಹಿಮನಾದ ಪತಿಯು ರಾಮನಿಂದ ಹತನಾಗಿರುವುದನ್ನು ಕಣ್ಣಾರೆ ನೋಡಿಯೂ ನಾನು ಬದುಕಿರು ವೆನಲ್ಲ! ಈ ಕಾಂತನನ್ನು ಕಳೆದುಕೊಂಡೂ ಈ ದೇಹವನ್ನು ಧರಿಸಿರುವೆನಲ್ಲ!

ಶಯನೇಷು ಮಹಾರ್ಹೇಷು ಶಯಿತ್ವಾ ರಾಕ್ಷಸೇಶ್ವರ ।
ಇಹ ಕಸ್ಮಾತ್ ಪ್ರಸುಪ್ತೋಽಸಿ ಧರಣ್ಯಾಂ ರೇಣುಪಾಟಲಃ ॥ ೫೭

ಯದಾ ಮೇ ತನಯಃ ಶಸ್ತೋ ಲಕ್ಷ್ಮಣೇನೇಂದ್ರಜಿದ್ಯುಧಿ ।
ತದಾಸ್ಮ್ಯಭಿಹತಾ ತೀವ್ರಮದ್ಯ ತ್ವಸ್ಮಿನ್ನಿಪಾತಿತಾ ॥ ೫೮

ನಾಹಂ ಬಂಧುಜನೈರ್ಹೀನಾ ಹೀನಾ ನಾಥೇನ ತು ತ್ವಯಾ ।
ವಿಹೀನಾ ಕಾಮಭೋಗೈಶ್ಚ ಶೋಚಿಷ್ಯೇ ಶಾಶ್ವತೀಃ ಸಮಾಃ ॥ ೫೯

ಪ್ರಪನ್ನೋ ದೀರ್ಘಮಧ್ವಾನಂ ರಾಜನ್ನದ್ಯ ಸುದುರ್ಗಮಮ್ ।
ನಯ ಮಾಮಪಿ ದುಃಖಾರ್ತಾಂ ನ ಜೀವಿಷ್ಯೇ ತ್ವಯಾ ವಿನಾ ॥ ೬೦

ಕಸ್ಮಾತ್ತ್ವಂ ಮಾಂ ವಿಹಾಯೇಹ ಕೃಪಣಾಂ ಗಂತುಮಿಚ್ಛಸಿ ।
ದೀನಾಂ ವಿಲಪಿತೈರ್ಮಂದಾಂ ಕಿಂ ವಾ ಮಾಂ ನಾಭಿಭಾಷಸೇ ॥ ೬೧

ದೃಷ್ಟ್ವಾ ನ ಖಲ್ವಸಿ ಕ್ರುದ್ಧೋ ಮಾಮಿಹಾನವಕುಂಠಿತಾಮ್ ।
ನಿರ್ಗತಾಂ ನಗರದ್ವಾರಾತ್ ಪದ್ಭ್ಯಾಮೇವಾಗತಾಂ ಪ್ರಭೋ ॥ ೬೨

---

ನಾನು ಎಷ್ಟು ಕಠಿನಹೃದಯಳು! (೫೬). ಹಾ ರಾಕ್ಷಸೇಂದ್ರ, ರಾಜಯೋಗ್ಯವಾದ ಉತ್ತಮ ಶಯ್ಯೆಗಳಲ್ಲಿ ಪವಡಿಸುತ್ತಿದ್ದ ನೀನು, ಧೂಳಿಯಿಂದ ಮಲಿನವಾಗಿ ಮಣ್ಣಿನಲ್ಲಿ ಮಲಗಿರುವುದೇಕೆ? ನನ್ನ ಮಗನಾದ ಇಂದ್ರಜಿತುವನ್ನು ಲಕ್ಷ್ಮಣನು ಸಂಹರಿಸಿದಾಗಲೇ ನಾನು ತೀವ್ರವಾದ ಪೆಟ್ಟನ್ನು ತಿಂದೆನು. ಈಗ ಉರುಳಿಬಿದ್ದೆನು! (೫೭-೫೮). ಒಂದುವೇಳೆ ಬಂಧುಗಳಿಲ್ಲದಿದ್ದರೂ ನಾನು ಶೂನ್ಯಳಾಗುತ್ತಿರಲಿಲ್ಲ. ನಾಥ, ನೀನೊಬ್ಬನಿಲ್ಲದೆ ನಾನು ಸರ್ವಶೂನ್ಯಳಾದೆನು. ಸಕಲ ಭೋಗಗಳೂ ಗತಿಸಿದವು. ಶಾಶ್ವತವಾಗಿ ನಾನು ನರಳಬೇಕಾಯಿತು. ಓ ಮಹಾರಾಜ, ದುರ್ಗಮವಾದ ದೂರದ ದಾರಿಯನ್ನು ಹಿಡಿದು ಹೊರಟಿರುವೆ. ದುಃಖಾರ್ತಳಾದ ನನ್ನನ್ನೂ ಜೊತೆಗೆ ಕರೆದುಕೊಂಡುಹೋಗು. ನೀನಿಲ್ಲದೆ ನಾನು ಬದುಕಲಾರೆ (೫೯-೬೦). ದುರ್ಭಾಗ್ಯಳಾದ ನನ್ನನ್ನು ಇಲ್ಲಿಯೇ ಬಿಟ್ಟು ಏಕೆ ಹೋಗುವೆ? ದೀನಳಾಗಿ ಅತ್ತತ್ತು ಬಳಲಿರುವ ನನ್ನೊಡನೆ ಏಕೆ ಮಾತನಾಡೆ? ಓ ರಾಜೇಂದ್ರ, ನನ್ನ ಸ್ವಾಮಿಯೆ, ಅವಕುಂಠನವಿಲ್ಲದೆ ಪುರದ್ವಾರದಿಂದ ಕಾಲ್ನಡಿಗೆಯಲ್ಲಿ ನಡೆಯುತ್ತಲೇ ಇಲ್ಲಿಗೆ ಬಂದಿರುವೆನೆಂದು ನನ್ನಮೇಲೆ

ಪಶ್ಯೇಷ್ಟದಾರ ದಾರಾಂಸ್ತೇ ಭ್ರಷ್ಟಲಜ್ಜಾವಕುಂಠಿತಾನ್ |
ಬಹಿರ್ನಿಷ್ಪತಿತಾನ್ ಸರ್ವಾನ್ ಕಥಂ ದೃಷ್ಟ್ವಾ ನ ಕುಪ್ಯಸಿ || ೬೩

ಅಯಂ ಕ್ರೀಡಾಸಹಾಯಸ್ತೇಽನಾಥೋ ಲಾಲಪ್ಯತೇ ಜನಃ |
ನ ಚೈನಮಾಶ್ವಾಸಯಸೇ ಕಿಂ ವಾ ನ ಬಹು ಮನ್ಯಸೇ || ೬೪

ಯಾಸ್ತ್ವಯಾ ವಿಧವಾ ರಾಜನ್ ಕೃತಾ ನೈಕಾಃ ಕುಲಸ್ತ್ರಿಯಃ |
ಪತಿವ್ರತಾ ಧರ್ಮಪರಾ ಗುರುಶುಶ್ರೂಷಣೇ ರತಾಃ || ೬೫

ತಾಭಿಃ ಶೋಕಾಭಿತಪ್ತಾಭಿಃ ಶಪ್ತಃ ಪರವಶಂ ಗತಃ |
ತ್ವಯಾ ವಿಪ್ರಕೃತಾಭಿರ್ಯತ್ತದಾ ಶಪ್ತಂ ತದಾಗತಮ್ || ೬೬

ಪ್ರವಾದಃ ಸತ್ಯ ಏವಾಯಂ ತ್ವಾಂ ಪ್ರತಿ ಪ್ರಾಯಶೋ ನೃಪ |
ಪತಿವ್ರತಾನಾಂ ನಾಕಸ್ಮಾತ್ ಪತಂತ್ಯಶ್ರೂಣಿ ಭೂತಲೇ || ೬೭

ಕಥಂ ಚ ನಾಮ ತೇ ರಾಜನ್ ಲೋಕಾನಾಕ್ರಮ್ಯ ತೇಜಸಾ |
ನಾರೀಚೌರ್ಯಮಿದಂ ಕ್ಷುದ್ರಂ ಕೃತಂ ಶೌಂಡೀರ್ಯಮಾನಿನಾ || ೬೮

---

ಕೋಪವೆ? (೬೧-೬೨). ಪತ್ನಿಯರಲ್ಲಿ ನಿನಗೆ ಬಹಳ ಪ್ರೇಮವಲ್ಲವೆ? ಇಲ್ಲಿ ನೆರೆದಿರುವ ನಿನ್ನ ಪತ್ನಿಯರನ್ನು ನೋಡು. ಲಜ್ಜೆಯನ್ನು ಬಿಟ್ಟು ಅವಕುಂಠನವನ್ನು ತೊರೆದು, ಎಲ್ಲರೂ ಅಂತಃಪುರದಿಂದ ಹೊರಗೆ ಬಂದಿದ್ದಾರೆ! ಇವರನ್ನು ನೋಡಿ ನಿನಗೆ ಕೋಪವೇಕೆ ಬಾರದು? (೬೩). ಇತ್ತ ನೋಡು. ನಿನ್ನ ವಿಲಾಸಕ್ಕೆ ಸಹಾಯಕರಾಗಿದ್ದ ಅಂತಃಪುರಜನರೆಲ್ಲರೂ ದಿಕ್ಕಿಲ್ಲದೆ ಗೋಳಾಡುತ್ತಿದ್ದಾರೆ. ಇವರನ್ನೇಕೆ ನೀನು ಸಂತೈಸುವುದಿಲ್ಲ? ಏಕೆ ಮನ್ನಿಸುವುದಿಲ್ಲ? (೬೪). ಓ ರಾಕ್ಷಸೇಂದ್ರ, ಪತಿವ್ರತೆಯರೂ ಧರ್ಮನಿಷ್ಠರೂ ಗುರುಹಿರಿಯರ ಸೇವೆಯಲ್ಲಿ ನಿರತರೂ ಆದ ಬಹುಮಂದಿ ಕುಲಸ್ತ್ರೀಯರನ್ನು ನೀನು ವಿಧವೆಯರನ್ನಾಗಿ ಮಾಡಿದೆಯಲ್ಲವೆ? ಶೋಕಾರ್ತರಾದ ಆ ಸಾಧ್ವಿಯರ ಶಾಪವು ನಿನಗೆ ತಟ್ಟಿತು. ಆದ್ದರಿಂದಲೇ ಈಗ ಪರಾಜಿತನಾದೆ. ನಿನ್ನಿಂದ ಅಪಕೃತರಾದ ಕುಲಾಂಗನೆಯರ ಶಾಪ ಈಗ ಫಲಿಸಿತು (೬೫-೬೬). ಮಹಾರಾಜ, 'ಪತಿವ್ರತೆಯರ ಕಣ್ಣೀರು ನಿಷ್ಫಲವಾಗಿ ನೆಲದಲ್ಲಿ ಸುರಿಯದು'. ಲೋಕದ ಈ ಹೇಳಿಕೆ ನಿನ್ನ ವಿಷಯದಲ್ಲಿ ಸತ್ಯವಾಯಿತು. ಮೂರು ಲೋಕಗಳನ್ನೂ ಜಯಿಸಿ ತೇಜೋಬಲದಿಂದ ರಾಜಿಸುತ್ತಿದ್ದ ನೀನು ಒಬ್ಬ ಹೆಂಗಸನ್ನು ಕಳ್ಳತನದಿಂದ ತಂದೆ ಏಕೆ?

ಅಪನೀಯಾಶ್ರಮಾದ್ರಾಮಂ ಯನ್ಮೃಗಚ್ಛದ್ಮನಾ ತ್ವಯಾ ।
ಆನೀತಾ ರಾಮಪತ್ನೀ ಸಾ ತತ್ತೇ ಕಾತರ್ಯಲಕ್ಷಣಮ್ ॥ ೬೯

ಕಾತರ್ಯಂ ಚ ನ ತೇ ಯುದ್ಧೇ ಕದಾಚಿತ್ ಸಂಸ್ಮರಾಮ್ಯಹಮ್ ।
ತತ್ತು ಭಾಗ್ಯವಿಪರ್ಯಾಸಾನ್ನೂನಂ ತೇ ಪಕ್ವಲಕ್ಷಣಮ್ ॥ ೭೦

ಅತೀತಾನಾಗತಾರ್ಥಜ್ಞೋ ವರ್ತಮಾನವಿಚಕ್ಷಣಃ ।
ಮೈಥಿಲೀಮಾಹೃತಾಂ ದೃಷ್ಟ್ವಾ ಧ್ಯಾತ್ವಾ ನಿಃಶ್ವಸ್ಯ ಚಾಯತಮ್ ॥

ಸತ್ಯವಾಕ್ ಸ ಮಹಾಬಾಹೋ ದೇವರೋ ಮೇ ಯದಬ್ರವೀತ್ ।
ಸೋಽಯಂ ರಾಕ್ಷಸಮುಖ್ಯಾನಾಂ ವಿನಾಶಃ ಪರ್ಯುಪಸ್ಥಿತಃ ॥ ೭೨

ಕಾಮಕ್ರೋಧಸಮುತ್ಥೇನ ವ್ಯಸನೇನ ಪ್ರಸಂಗಿನಾ ।
ನಿರ್ವೃತ್ತಸ್ತ್ವತ್ಕೃತೇಽನರ್ಥಃ ಸೋಽಯಂ ಮೂಲಹರೋ ಮಹಾನ್ ॥

---

ಶೂರಾಗ್ರೇಸರನೆಂದು ಹೆಮ್ಮೆಪಡುತ್ತಿದ್ದ ನೀನು ಈ ಕ್ಷುದ್ರಕಾರ್ಯವನ್ನು ಹೇಗೆತಾನೆ ಮಾಡಿದೆ? (೬೭-೬೮). ಮಾಯಾಮೃಗದ ಕಪಟೋಪಾಯದಿಂದ ರಾಮನನ್ನು ಆಶ್ರಮದಿಂದ ಹೊರಗೆ ಹೋಗುವಂತೆ ಮಾಡಿ, ಅವನ ಮಡದಿಯನ್ನು ಅಪಹರಿಸಿದೆಯಲ್ಲ, ಅದೇ ನಿನ್ನ ಹೇಡಿತನಕ್ಕೆ ಗುರುತು! ಯುದ್ಧದಲ್ಲಿ ನೀನು ಹೇಡಿತನವನ್ನು ಯಾವಾಗಲಾದರೂ ತೋರಿಸಿದ್ದು ನನಗೆ ನೆನಪಿಲ್ಲ. ದುರ್ಭಾಗ್ಯದಿಂದಲೇ ಈಗ ಈ ಬುದ್ಧಿಯುಂಟಾಯಿತು. ಕರ್ಮವು ಪಕ್ವವಾಯಿತೆಂಬುದರ ಚಿಹ್ನೆ ಇದು (೬೯-೭೦). ನನ್ನ ಮೈದುನನಾದ ವಿಭೀಷಣನು ದಿಟವಾಗಿಯೂ ಭೂತಭವಿಷ್ಯದ್ವರ್ತಮಾನಗಳನ್ನು ಬಲ್ಲವನು. ಓ ಮಹಾಬಾಹು, ನೀನು ಮೈಥಿಲಿಯನ್ನು ಅಪಹರಿಸಿ ತಂದಾಗಲೇ ಆತನು ಚಿಂತೆಯಿಂದ ಧ್ಯಾನಸ್ಥನಾಗಿ ನಿಡುಸುಯ್ಯುತ್ತ ಒಂದು ಮಾತನ್ನು ಹೇಳಿದ್ದನು. ಅವನ ನುಡಿ ಸತ್ಯವಾಯಿತು. ಅವನು ಹೇಳಿದಂತೆ ರಾಕ್ಷಸನಾಯಕರೆಲ್ಲರಿಗೂ ಈ ಪರಿಯಲ್ಲಿ ವಿನಾಶವು ಪ್ರಾಪ್ತವಾಯಿತು (೭೧-೭೨). ಕಾಮಕ್ರೋಧಗಳಿಂದ ಸಂಭವಿಸಿದ ಸ್ತ್ರೀವ್ಯಸನದಿಂದ ಈ ಅನರ್ಥ ಉಂಟಾಯಿತು. ರಾಕ್ಷಸಕುಲವನ್ನೇ ನಿರ್ಮೂಲಗೊಳಿಸಿದ ಮಹತ್ತರವಾದ ಈ ವಿಪತ್ತು ನಿನ್ನಿಂದಲೇ ಉದ್ಭವಿಸಿತು. ನೀನೇ ರಾಕ್ಷಸ

ತ್ವಯಾ ಕೃತಮಿದಂ ಸರ್ವಮನಾಥಂ ರಕ್ಷಸಾಂ ಕುಲಮ್ ।
ನ ಹಿ ತ್ವಂ ಶೋಚಿತವ್ಯೋ ಮೇ ಪ್ರಖ್ಯಾತಬಲಪೌರುಷಃ ॥ ೭೪

ಸ್ತ್ರೀಸ್ವಭಾವಾತ್ತು ಮೇ ಬುದ್ಧಿಃ ಕಾರುಣ್ಯೇ ಪರಿವರ್ತತೇ ।
ಸುಕೃತಂ ದುಷ್ಕೃತಂ ಚ ತ್ವಂ ಗೃಹೀತ್ವಾ ಸ್ವಾಂ ಗತಿಂ ಗತಃ ॥ ೭೫

ಆತ್ಮಾನಮನುಶೋಚಾಮಿ ತ್ವದ್ವಿಯೋಗೇನ ದುಃಖಿತಾ ।
ಸುಹೃದಾಂ ಹಿತಕಾಮಾನಾಂ ನ ಶ್ರುತಂ ವಚನಂ ತ್ವಯಾ ॥ ೭೬

ಭ್ರಾತೄಣಾಂ ಚಾಪಿ ಕಾರ್ತ್ಸ್ನ್ಯೇನ ಹಿತಮುಕ್ತಂ ತ್ವಯಾನಘ ।
ಹೇತ್ವರ್ಥಯುಕ್ತಂ ವಿಧಿವಚ್ಛ್ರೇಯಸ್ಕರಮದಾರುಣಮ್ ॥ ೭೭

ವಿಭೀಷಣೇನಾಭಿಹಿತಂ ನ ಕೃತಂ ಹೇತುಮತ್ತ್ವಯಾ ।
ಮಾರೀಚಕುಂಭಕರ್ಣಾಭ್ಯಾಂ ವಾಕ್ಯಂ ಮಮ ಪಿತುಸ್ತದಾ ॥ ೭೮

---

ಜಾತಿಯನ್ನು ದಿಕ್ಕಿಲ್ಲದಂತೆ ಮಾಡಿದೆ! ಹಾ ನಾಥ, ಬಲಪೌರುಷಗಳಲ್ಲಿ ವಿಖ್ಯಾತನಾದ ನೀನು ವೀರೋಚಿತವಾಗಿ ಮೃತನಾದ್ದರಿಂದ ನಾನು ದುಃಖಿಸಬಾರದು (೭೩–೭೪). ಆದರೆ ಸ್ತ್ರೀಸ್ವಭಾವದಿಂದ ನನ್ನ ಮನಸ್ಸು ದುಃಖದಲ್ಲಿ ಮುಳುಗಿದೆ. ಪುಣ್ಯವನ್ನೂ ಪಾಪವನ್ನೂ ಕಟ್ಟಿಕೊಂಡು ನಿನ್ನ ಗತಿಯನ್ನು ನೀನು ಸೇರಿದೆ. ನಾನಾದರೋ ನಿನ್ನ ವಿಯೋಗದಿಂದ ಶೋಕಾರ್ತಳಾಗಿ ನನ್ನ ಪರಿಸ್ಥಿತಿಯನ್ನು ಚಿಂತಿಸಿ ಅಳುತ್ತಿದ್ದೇನೆ. ಓ ಕಾಂತ, ಹಿತವನ್ನು ಬಯಸಿದ ಮಿತ್ರರ ಮಾತನ್ನು ನೀನು ಕೇಳದೆಹೋದೆ (೭೫–೭೬). ನಿನ್ನ ತಮ್ಮಂದಿರೂ ಸಹ ನಿನಗೆ ಸರ್ವವಿಧದಲ್ಲಿಯೂ ಹಿತಕರವಾದ ಮಾತನ್ನೇ ಹೇಳಿದರು. ಅದನ್ನೂ ನೀನು ಕೇಳಲಿಲ್ಲ. ವಿಭೀಷಣನ ನುಡಿ ಸಕಾರಣವೂ ಸಪ್ರಯೋಜನವೂ ಆಗಿತ್ತು. ನೀತಿಶಾಸ್ತ್ರಸಮ್ಮತವಾಗಿ ಶ್ರೇಯಸ್ಕರವಾಗಿತ್ತು. ಸೌಮ್ಯವಾಗಿ ವಿನಯದಿಂದಲೇ ಅವನು ಹೇಳಿದನು. ಅದನ್ನು ನೀನು ನಡೆಸಲಿಲ್ಲ (೭೭). ಮಾರೀಚಕುಂಭಕರ್ಣರೂ ನನ್ನ ತಂದೆಯೂ* ಹೇಳಿದರೂ ಅವರ ಹಿತವಾದವನ್ನು ನೀನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಬಲದರ್ಪದಿಂದ ಅದನ್ನು ಗಮನಿಸಲಿಲ್ಲ. ಅದರ ಪರಿಣಾಮ

---

* ಮಂಡೋದರಿಯ ಮಾತಿನಿಂದ ಅವಳ ತಂದೆಯಾದ ಮಯನು ರಾವಣನಿಗೆ ಬುದ್ಧಿವಾದವನ್ನು ಹೇಳಿದ್ದನೆಂದು ಊಹಿಸಬೇಕಾಗಿದೆ. ಈ ಪ್ರಸ್ತಾವ ಹಿಂದೆ ಬಂದಿಲ್ಲ.

ನ ಶ್ರುತಂ ವೀರ್ಯಮತ್ತೇನ ತಸ್ಯೇದಂ ಫಲಮೀದೃಶಮ್ ।
ನೀಲಜೀಮೂತಸಂಕಾಶ ಪೀತಾಂಬರ ಶುಭಾಂಗದ ॥ ೭೯

ಸ್ವಗಾತ್ರಾಣಿ ವಿನಿಕ್ಷಿಪ್ಯ ಕಿಂ ಶೇಷೇ ರುಧಿರಾಪ್ಲುತಃ ।
ಪ್ರಸುಪ್ತ ಇವ ಶೋಕಾರ್ತಾಂ ಕಿಂ ಮಾಂ ನ ಪ್ರತಿಭಾಷಸೇ ॥ ೮೦

ಮಹಾವೀರ್ಯಸ್ಯ ದಕ್ಷಸ್ಯ ಸಂಯುಗೇಷ್ವಪಲಾಯಿನಃ ।
ಯಾತುಧಾನಸ್ಯ ದೌಹಿತ್ರ ಕಿಂ ಚ ಮಾಂ ನಾಭ್ಯುದೀಕ್ಷಸೇ ॥ ೮೧

ಉತ್ತಿಷ್ಠೋತ್ತಿಷ್ಠ ಕಿಂ ಶೇಷೇ ಪ್ರಾಪ್ತೇ ಪರಿಭವೇ ನವೇ ।
ಅದ್ಯ ವೈ ನಿರ್ಭಯಾ ಲಂಕಾಂ ಪ್ರವಿಷ್ಟಾಃ ಸೂರ್ಯರಶ್ಮಯಃ ॥ ೮೨

ಯೇನ ಸೂದಯಸೇ ಶತ್ರೂನ್ ಸಮರೇ ಸೂರ್ಯವರ್ಚಸಾ ।
ವಜ್ರೋ ವಜ್ರಧರಸ್ಯೇವ ಸೋಽಯಂ ತೇ ಸತತಾರ್ಚಿತಃ ॥ ೮೩

---

ಈ ರೀತಿಯಾಯಿತು. ಹಾ ಪ್ರಾಣಕಾಂತ, ನೀಲಮೇಘದಂತೆ ಶೋಭಿಸುವ ನೀನು ಪೀತಾಂಬರವನ್ನುಟ್ಟು ಅಂದವಾದ ಅಂಗದಗಳನ್ನು ತೊಟ್ಟು ಎಷ್ಟು ವೈಭವದಿಂದ ಕಂಗೊಳಿಸುತ್ತಿದ್ದೆ! (೭೮-೭೯). ಈಗ ರಕ್ತದಲ್ಲಿ ನೆನೆದು ಕೈಕಾಲುಗಳನ್ನು ಚಾಚಿಕೊಂಡು ಹೀಗೇಕೆ ಮಲಗಿರುವೆ? ಗಾಢನಿದ್ರೆಯಲ್ಲಿರುವಂತೆ ಪವಡಿಸಿದೆಯಲ್ಲ, ಶೋಕಾರ್ತಳಾದ ನನ್ನೊಡನೆ ಏಕೆ ಮಾತನಾಡೆ? ಮಹಾಪರಾಕ್ರಮಿಯೂ ಸಮರ್ಥನೂ ಯುದ್ಧದಲ್ಲಿ ಎಂದೂ ಸೋತು ಹಿಂದಿರುಗದವನೂ ಆದ ಸುಮಾಲಿಯ * ದೌಹಿತ್ರನಲ್ಲವೆ ನೀನು? ನನ್ನನ್ನು ಕಣ್ಣೆತ್ತಿಯೂ ನೋಡುವುದಿಲ್ಲವೇಕೆ? (೮೦-೮೧). ನಾಥ, ಎದ್ದೇಳು, ಏಳು! ಇನ್ನೂ ಮಲಗಿರುವೆಯಾ? ನಮಗೆ ಅಭೂತಪೂರ್ವವಾದ ಅವಮಾನವಾಗಿದೆ. ಅದೋ, ಸೂರ್ಯರಶ್ಮಿಗಳು ನಿರ್ಭಯವಾಗಿ ಈಗ ಲಂಕೆಯೊಳಗೆ ನುಗ್ಗಿವೆ! ಸಮರದಲ್ಲಿ ಶತ್ರುಗಳನ್ನು ವಿಧ್ವಂಸಗೊಳಿಸುತ್ತಿದ್ದ ಸೂರ್ಯವರ್ಚಸ್ಸಿನ ಈ ಪರಿಘಾಯುಧವು ಒಡೆದು ಚೂರಾಗಿದೆಯಲ್ಲ! ಇಂದ್ರನ ಕೈಯಲ್ಲಿ ವಜ್ರಾಯುಧವಿದ್ದಂತೆ, ನಿನ್ನ ಕೈಯಲ್ಲಿ

---

* ಮಾಲ್ಯವಂತನೆಂದೂ ಹೇಳಬಹುದು. ಶೂರವಂಶದಲ್ಲಿ ಜನಿಸಿದವನೆಂದು ತಾತ್ಪರ್ಯ.

ರಣೇ ಶತ್ರುಪ್ರಹರಣೋ ಹೇಮಜಾಲಪರಿಷ್ಕೃತಃ ।
ಪರಿಘೋ ವ್ಯವಕೀರ್ಣಸ್ತೇ ಬಾಣೈಶ್ಛಿನ್ನಃ ಸಹಸ್ರಧಾ ॥ ೮೪

ಪ್ರಿಯಾಮಿವೋಪಗುಹ್ಯ ತ್ವಂ ಶೇಷೇ ಸಮರಮೇದಿನೀಮ್ ।
ಅಪ್ರಿಯಾಮಿವ ಕಸ್ಮಾಚ್ಚ ಮಾಂ ನೇಚ್ಛಸ್ಯಭಿಭಾಷಿತುಮ್ ॥ ೮೫

ಧಿಗಸ್ತು ಹೃದಯಂ ಯಸ್ಯಾ ಮಮೇದಂ ನ ಸಹಸ್ರಧಾ ।
ತ್ವಯಿ ಪಂಚತ್ವಮಾಪನ್ನೇ ಫಲತೇ ಶೋಕಪೀಡಿತಮ್ ॥ ೮೬

ಇತ್ಯೇವಂ ವಿಲಪಂತ್ಯೇವ ಬಾಷ್ಪವ್ಯಾಕುಲಲೋಚನಾ ।
ಸ್ನೇಹಾವಸ್ಕನ್ನಹೃದಯಾ ದೇವೀ ಮೋಹಮುಪಾಗಮತ್ ॥ ೮೭

ಕಶ್ಮಲಾಭಿಹತಾ ಸನ್ನಾ ಬಭೌ ಸಾ ರಾವಣೋರಸಿ ।
ಸಂಧ್ಯಾನುರಕ್ತೇ ಜಲದೇ ದೀಪ್ತಾ ವಿದ್ಯುದಿವಾಸಿತೇ ॥ ೮೮

ತಥಾಗತಾಂ ಸಮುತ್ಪತ್ಯ ಸಪತ್ನ್ಯಸ್ತಾ ಭೃಶಾತುರಾಃ ।
ಪರ್ಯವಸ್ಥಾಪಯಾಮಾಸೂ ರುದತ್ಯೋ ರುದತೀಂ ಭೃಶಮ್ ॥

---

ಈ ಆಯುಧವು ಶೋಭಿಸುತ್ತಿತ್ತು. ನಿನಗೆ ಇದರಲ್ಲಿ ಬಹಳ ಅಭಿಮಾನವಲ್ಲವೆ? ಸುವರ್ಣಭೂಷಿತವಾದ ಈ ಪರಿಘವು ಶರಾಘಾತದಿಂದ ಒಡೆದು ಸಾವಿರಾರು ಚೂರಾಗಿದ್ದರೂ ಸುಮ್ಮನಿರುವೆಯಲ್ಲ! (೮೨–೮೪). ಹಾ ಕಾಂತ, ನಿನ್ನ ಇನಿಯಳನ್ನಪ್ಪಿಕೊಳ್ಳುವಂತೆ ಈ ರಣಭೂಮಿಯನ್ನು ಬಿಗಿದಪ್ಪಿ ಮಲಗಿರುವೆಯಲ್ಲ! ನಾನು ನಿನಗೆ ಅಪ್ರಿಯಳಾದೆನೆ? ನನ್ನೊಡನೆ ಮಾತನಾಡಲೂ ನಿನಗೇಕೆ ಮನಸ್ಸು ಬಾರದು? ಅಯ್ಯೋ, ನನ್ನ ಕಠೋರ ಹೃದಯಕ್ಕೆ ಧಿಕ್ಕಾರ! ನೀನು ಮೃತನಾದರೂ ಈ ಹೃದಯವು ಶೋಕಭಾರದಿಂದ ಸಾವಿರಾರು ತುಂಡುಗಳಾಗಿ ಸೀಳಿಹೋಗದು!" ಎಂದು ರೋದಿಸಿದಳು (೮೫–೮೬). ಈ ಪ್ರಕಾರವಾಗಿ ರಾವಣನ ರಾಣಿಯು ಅತ್ತು ಅತ್ತು ಕಣ್ಣೀರು ಹರಿಸಿ, ಪತಿಪ್ರೇಮಾತಿಶಯದಿಂದ ಹೃದಯವು ಕರಗಲು, ಎಚ್ಚರದಪ್ಪಿದಳು. ದುಃಖಭಾರದಿಂದ ಬಸವಳಿದು ರಾವಣನ ಎದೆಯಮೇಲೊರಗಿದಳು. ಎದೆಯಮೇಲೊರಗಿದಾಗ, ಸಂಜೆಗೆಂಪಿನಿಂದ ಕೂಡಿದ ನೀಲಮೇಘದ ಮಧ್ಯದಲ್ಲಿರುವ ಮಿಂಚಿನಂತೆ ಕಾಣಿಸಿದಳು (೮೭–೮೮). ಹೀಗೆ ಬಸವಳಿದ ಮಂಡೋದರಿಯನ್ನು ನೋಡಿ ಅವಳ

ನ ತೇ ಸುವಿದಿತಾ ದೇವಿ ಲೋಕಾನಾಂ ಸ್ಥಿತಿರಧ್ರುವಾ ।
ದಶಾವಿಭಾಗಪರ್ಯಾಯೇ ರಾಜ್ಞಾಂ ಚಂಚಲಯಾ ಶ್ರಿಯಾ ॥ ೯೦

ಇತ್ಯೇವಮುಚ್ಯಮಾನಾ ಸಾ ಸಶಬ್ದಂ ಪ್ರರುರೋದ ಹ ।
ಸ್ನಾಪಯಂತೀ ತ್ವಭಿಮುಖೌ ಸ್ತನಾವಸ್ರಾಂಬುವಿಸ್ರವೈಃ ॥ ೯೧

ಏತಸ್ಮಿನ್ನಂತರೇ ರಾಮೋ ವಿಭೀಷಣಮುವಾಚ ಹ ।
ಸಂಸ್ಕಾರಃ ಕ್ರಿಯತಾಂ ಭ್ರಾತುಃ ಸ್ತ್ರಿಯಶ್ಚೈತಾ ನಿವರ್ತಯ ॥ ೯೨

ತಂ ಪ್ರಶ್ರಿತಸ್ತತೋ ರಾಮಂ ಶ್ರುತವಾಕ್ಯೋ ವಿಭೀಷಣಃ ।
ವಿಮೃಶ್ಯ ಬುದ್ಧ್ಯಾ ಧರ್ಮಜ್ಞೋ ಧರ್ಮಾರ್ಥಸಹಿತಂ ವಚಃ ॥ ೯೩

ರಾಮಸ್ಯೈವಾನುವೃತ್ತ್ಯರ್ಥಮುತ್ತರಂ ಪ್ರತ್ಯಭಾಷತ ।
ತ್ಯಕ್ತಧರ್ಮವ್ರತಂ ಕ್ರೂರಂ ನೃಶಂಸಮನೃತಂ ತಥಾ ॥ ೯೪

---

ಸವತಿಯರಾದ ರಾವಣಪತ್ನಿಯರು ಆತುರದಿಂದ ಬಂದು ಎತ್ತಿ ಕುಳ್ಳಿರಿಸಿ ಉಪಚರಿಸಿದರು. ಅಳುವವಳನ್ನು ಅಳುತ್ತಲೇ ಸಂತೈಸತೊಡಗಿದರು : "ದೇವಿ, ಲೋಕಸ್ಥಿತಿ ಯಾವುದೂ ಶಾಶ್ವತವಲ್ಲವೆಂದು ನಿನಗೆ ತಿಳಿಯದೆ? ಪಾಪಪುಣ್ಯಗಳ ಪರಿಪಾಕವು ಬದಲಾಯಿಸಿದಂತೆ, ಚಂಚಲವಾದ ರಾಜಲಕ್ಷ್ಮಿಯೂ ವ್ಯತ್ಯಸ್ತವಾಗುತ್ತದೆ" ಎಂದರು (೮೯-೯೦). ಹೀಗೆ ಸವತಿಯರು ಸಂತೈಸಿದಷ್ಟೂ ಮಂಡೋದರಿಯು 'ಹೋ' ಎಂದು ಗಟ್ಟಿಯಾಗಿ ಅತ್ತಳು. ಧಾರಾಕಾರವಾಗಿ ಸುರಿಯುವ ಕಂಬನಿಗಳಿಂದ ಸ್ತನಾಗ್ರಗಳನ್ನು ತೋಯಿಸುತ್ತ ರೋದಿಸಿದಳು (೯೧). ಹೀಗೆ ಅವರೆಲ್ಲರೂ ಆಕ್ರಂದಿಸುತ್ತಿರಲು, ಶ್ರೀರಾಮನು ವಿಭೀಷಣನನ್ನು ಕರೆದು "ವಿಭೀಷಣ, ಇನ್ನು ನಿನ್ನ ಅಣ್ಣನ ಉತ್ತರಕ್ರಿಯೆಯನ್ನು ನಡೆಸು. ಈ ಸ್ತ್ರೀಯರನ್ನು ಸಮಾಧಾನಪಡಿಸಿ ಮನೆಗೆ ಕಳಿಸು" ಎಂದನು (೯೨). ಶ್ರೀರಾಮನ ವಚನವು ಧರ್ಮಾರ್ಥಯುಕ್ತವಾಗಿತ್ತು. ಧರ್ಮಜ್ಞನಾದ ವಿಭೀಷಣನು ಅದನ್ನಾಕರ್ಣಿಸಿ, ಶ್ರೀರಾಮನ ಮನೋಗತವನ್ನರಿಯಬೇಕೆಂದು ತನ್ನಲ್ಲಿಯೇ ಆಲೋಚಿಸಿ, ವಿನಯದಿಂದ "ರಾಘವ, ರಾವಣನು ಧರ್ಮನಿಯಮವನ್ನುಲ್ಲಂಘಿಸಿದವನು. ಕ್ರೂರಸ್ವಭಾವದ ಘಾತುಕ. ಅನೃತವಾದಿ

ನಾಹಮರ್ಹೋಽಸ್ಮಿ ಸಂಸ್ಕರ್ತುಂ ಪರದಾರಾಭಿಮರ್ಶಿನಮ್ ।
ಭ್ರಾತೃರೂಪೋ ಹಿ ಮೇ ಶತ್ರುರೇಷ ಸರ್ವಾಹಿತೇ ರತಃ ॥ ೯೫
ರಾವಣೋ ನಾರ್ಹತೇ ಪೂಜಾಂ ಪೂಜ್ಯೋಽಪಿ ಗುರುಗೌರವಾತ್ ।
ನೃಶಂಸ ಇತಿ ಮಾಂ ಕಾಮಂ ವಕ್ಷ್ಯಂತಿ ಮನುಜಾ ಭುವಿ ॥ ೯೬
ಶ್ರುತ್ವಾ ತಸ್ಯಾಗುಣಾನ್ ಸರ್ವೇ ವಕ್ಷ್ಯಂತಿ ಸುಕೃತಂ ಪುನಃ ।
ತಚ್ಛ್ರುತ್ವಾ ಪರಮಪ್ರೀತೋ ರಾಮೋ ಧರ್ಮಭೃತಾಂ ವರಃ ॥ ೯೭
ವಿಭೀಷಣಮುವಾಚೇದಂ ವಾಕ್ಯಜ್ಞೋ ವಾಕ್ಯಕೋವಿದಮ್ ।
ತವಾಪಿ ಮೇ ಪ್ರಿಯಂ ಕಾರ್ಯಂ ತ್ವತ್ಪ್ರಭಾವಾಚ್ಚ ಮೇ ಜಿತಮ್ ॥
ಅವಶ್ಯಂ ತು ಕ್ಷಮಂ ವಾಚ್ಯೋ ಮಯಾ ತ್ವಂ ರಾಕ್ಷಸೇಶ್ವರ ।
ಅಧರ್ಮಾನೃತಸಂಯುಕ್ತಃ ಕಾಮಂ ತ್ವೇಷ ನಿಶಾಚರಃ ॥ ೯೯

---

(೯೩-೯೪). ಅವನಿಗೆ ನಾನು ಪ್ರೇತಸಂಸ್ಕಾರವನ್ನು ಮಾಡುವುದು ಯುಕ್ತವಲ್ಲ. ಪರಸ್ತ್ರೀಯರನ್ನು ಬಲಾತ್ಕರಿಸಿದ ಪಾಪಿ ಅವನು. ನನಗೆ ಅಣ್ಣನೆನಿಸಿದ ಶತ್ರು. ಸರ್ವರಿಗೂ ಕೇಡು ಬಗೆಯುವುದರಲ್ಲಿ ನಿರತನಾಗಿದ್ದವನು (೯೫). ಜ್ಯೇಷ್ಠನಾದ್ದರಿಂದ ಅವನನ್ನು ನಾನು ಗೌರವಿಸಬೇಕಾಗಿದ್ದರೂ ಅವನ ಕೃತ್ಯವನ್ನು ನೋಡಿದರೆ ಸರ್ವಥಾ ಪೂಜಾರ್ಹನಲ್ಲ. 'ಅಣ್ಣನಿಗೂ ಸಂಸ್ಕಾರವನ್ನು ಮಾಡದ ನೃಶಂಸ!' ಎಂದು ಲೋಕದಲ್ಲಿ ಜನರು ನನ್ನನ್ನು ಆಡಿಕೊಳ್ಳುವುದಾದರೆ ಆಡಿಕೊಳ್ಳಲಿ! (೯೬). ರಾವಣನ ದುರ್ಗುಣಗಳನ್ನು ಅವರು ಕೇಳಿದಾಗ, 'ಅವನಿಗೆ ಸಂಸ್ಕಾರವನ್ನು ಮಾಡದಿದ್ದುದು ಒಳ್ಳೆಯದೇ ಆಯಿತು' ಎಂದು ಎಲ್ಲರೂ ಹೇಳುತ್ತಾರೆ!" ಎಂದನು. ವಿಭೀಷಣನ ಉತ್ತರವನ್ನು ಕೇಳಿ ಶ್ರೀರಾಮನಿಗೆ ಬಹಳ ಸಂತೋಷವಾಯಿತು*. ಧರ್ಮನಿಷ್ಠರಲ್ಲಿ ಅಗ್ರಗಣ್ಯನಾದ ಆತನು ವಿಭೀಷಣನನ್ನು ನೋಡಿ "ವಿಭೀಷಣ, ನನಗೆ ಪ್ರಿಯವಾದುದನ್ನು ನೀನು ಆಚರಿಸು (೯೭-೯೮). ನಿನ್ನ ಸಾಹಸದಿಂದ ನನಗೆ ಜಯವು ಲಭಿಸಿದೆ. ಆದ್ದರಿಂದ ನಿನಗೆ ಹಿತವಾದುದನ್ನು ನಾನು ಹೇಳಲೇಬೇಕು. ಎಲೈ ರಾಕ್ಷಸೇಶ್ವರ! ರಾವಣನಲ್ಲಿ ಅಧರ್ಮವೂ ಅನೃತವೂ

---

* 'ಪರಮಪ್ರೀತಃ' ಎಂದು ಮೂಲ. 'ಪರಂ ಅಪ್ರೀತಃ' ಎಂದು ಪದವಿಭಾಗ ಮಾಡಿ 'ಬಹಳ ಅಸಮಾಧಾನವಾಯಿತು' ಎಂದು ಕೆಲವರು ಅರ್ಥಮಾಡುತ್ತಾರೆ.

ತೇಜಸ್ವೀ ಬಲವಾನ್ ಶೂರಃ ಸಂಯುಗೇಷು ಚ ನಿತ್ಯಶಃ ।
ಶತಕ್ರತುಮುಖೈರ್ದೇವೈಃ ಶ್ರೂಯತೇ ನ ಪರಾಜಿತಃ ॥ ೧೦೦

ಮಹಾತ್ಮಾ ಬಲಸಂಪನ್ನೋ ರಾವಣೋ ಲೋಕರಾವಣಃ ।
ಮರಣಾಂತಾನಿ ವೈರಾಣಿ ನಿರ್ವೃತ್ತಂ ನಃ ಪ್ರಯೋಜನಮ್ ॥ ೧೦೧

ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾ ತವ ।
ತ್ವತ್ಸಕಾಶಾದ್ದಶಗ್ರೀವಃ ಸಂಸ್ಕಾರಂ ವಿಧಿಪೂರ್ವಕಮ್ ॥ ೧೦೨

ಪ್ರಾಪ್ತುಮರ್ಹತಿ ಧರ್ಮಜ್ಞ ತ್ವಂ ಯಶೋಭಾಗ್ಭವಿಷ್ಯಸಿ ।
ರಾಘವಸ್ಯ ವಚಃ ಶ್ರುತ್ವಾ ತ್ವರಮಾಣೋ ವಿಭೀಷಣಃ ॥ ೧೦೩

ಸಂಸ್ಕಾರೇಣಾನುರೂಪೇಣ ಯೋಜಯಾಮಾಸ ರಾವಣಮ್ ।
ಚಿತಾಂ ಚಂದನಕಾಷ್ಠಾನಾಂ ಪದ್ಮಕೋಶೀರಸಂವೃತಾಮ್ ॥ ೧೦೪

ಬ್ರಾಹ್ಮ್ಯಾ ಸಂವೇಶಯಾಂಚಕ್ರೂ ರಾಂಕವಾಸ್ತರಣಾವೃತಾಮ್ ।
ವರ್ತತೇ ವೇದವಿಹಿತೋ ರಾಜ್ಞೋ ವೈ ಪಶ್ಚಿಮಃ ಕ್ರತುಃ ॥ ೧೦೫

---

ತುಂಬಿದ್ದವೆಂಬುದು ವಾಸ್ತವ. ಆದರೆ ಈತನು ಮಹಾತೇಜಸ್ವಿ, ಬಲಾಢ್ಯ, ಶೂರ. ಸಂಗ್ರಾಮದಲ್ಲಿ ಇಂದ್ರಾದಿ ದೇವತೆಗಳಿಂದಲೂ ಪರಾಜಯವನ್ನು ಹೊಂದದ ಪರಾಕ್ರಮಿಯೆಂದು ಕೀರ್ತಿಶಾಲಿಯಾಗಿದ್ದಾನೆ (೯೯-೧೦೦). ಬಲಶಾಲಿಯಾಗಿ ಲೋಕರಾವಣನೆನಿಸಿದ ಮಹಿಮಾನ್ವಿತನಾಗಿದ್ದಾನೆ. ವಿಭೀಷಣ, ಸಕಲ ವೈರಗಳಿಗೂ ಮರಣವೇ ಗಡಿ. ನಮ್ಮ ಕಾರ್ಯವು ಸಿದ್ಧಿಸಿತು. ಅವನ ಉತ್ತರಕ್ರಿಯೆಯನ್ನು ನಡೆಸು. ಇನ್ನುಮೇಲೆ ರಾವಣನು ನಿನಗೆ ಹೇಗೋ ಹಾಗೆ ನನಗೂ ಸೋದರನೇ ! ನಿನ್ನಿಂದ ಶಾಸ್ತ್ರೋಕ್ತವಾದ ಸಂಸ್ಕಾರವನ್ನು ಪಡೆಯಲು ರಾವಣನು ಅರ್ಹನಾಗಿದ್ದಾನೆ! (೧೦೧-೧೦೨). ಧರ್ಮಜ್ಞ-ವಿಭೀಷಣ, ಸಂಸ್ಕಾರವನ್ನು ನಡೆಸು. ನಿನಗೆ ಶಾಶ್ವತವಾದ ಕೀರ್ತಿ ಲಭಿಸುವುದು" ಎಂದು ಹೇಳಿದನು. ರಾಘವನ ಅಭಿಪ್ರಾಯವನ್ನು ತಿಳಿದು ವಿಭೀಷಣನು ತ್ವರೆಯಿಂದ ಮುಂದಿನ ಕಾರ್ಯದಲ್ಲಿ ಉದ್ಯುಕ್ತನಾಗಿ, ರಾವಣನಿಗೆ ಅನುರೂಪವಾದ ಉತ್ತರಕ್ರಿಯೆಯನ್ನು ಏರ್ಪಡಿಸಿದನು (೧೦೩). ಋತ್ವಿಜರು ಪದ್ಮಕ, ಲಾವಂಚ ಮೊದಲಾದ ಸುಗಂಧದ್ರವ್ಯಗಳೊಡನೆ, ಶ್ರೀಗಂಧದ ಕಾಷ್ಠಗಳಿಂದ ಚಿತೆಯನ್ನು ಸಿದ್ಧಪಡಿಸಿದರು. ಅದರಮೇಲೆ ಕೃಷ್ಣಾಜಿನವನ್ನು ಹಾಸಿ ವೇದೋಕ್ತವಿಧಾನದಿಂದ ರಾವಣನ

ಪ್ರಚಕ್ರು ರಾಕ್ಷಸೇಂದ್ರಸ್ಯ ಪಿತೃಮೇಧಮನುಕ್ರಮಮ್ ।
ವೇದಿಂ ಚ ದಕ್ಷಿಣಪ್ರಾಚ್ಯಾಂ ಯಥಾಸ್ಥಾನಂ ಚ ಪಾವಕಮ್ ॥ ೧೦೬

ಪೃಷದಾಜ್ಯೇನ ಸಂಪೂರ್ಣಂ ಸ್ರುವಂ ಸ್ಕಂಧೇ ಪ್ರಚಿಕ್ಷಿಪುಃ ।
ಪಾದಯೋಃ ಶಕಟಂ ಪ್ರಾದುರಂತರೂರ್ವೋರುಲೂಖಲಮ್ ॥

ದಾರುಪಾತ್ರಾಣಿ ಸರ್ವಾಣಿ ಅರಣಿಂ ಚೋತ್ತರಾರಣಿಮ್ ।
ದತ್ತ್ವಾ ತು ಮುಸಲಂ ಚಾನ್ಯದ್ಯಥಾಸ್ಥಾನಂ ವಿಚಕ್ಷಣಾಃ ॥ ೧೦೮

ಶಾಸ್ತ್ರದೃಷ್ಟೇನ ವಿಧಿನಾ ಮಹರ್ಷಿವಿಹಿತೇನ ಚ ।
ತತ್ರ ಮೇಧ್ಯಂ ಪಶುಂ ಹತ್ವಾ ರಾಕ್ಷಸೇಂದ್ರಸ್ಯ ರಾಕ್ಷಸಾಃ ॥ ೧೦೯

---

ದೇಹವನ್ನು ತಂದು ಅದರಲ್ಲಿ ಮಲಗಿಸಿದರು. ರಾಕ್ಷಸರಾಜನ ಅಂತ್ಯೇಷ್ಟಿಯು ಶಾಸ್ತ್ರವಿಧಿಯಂತೆ ನಡೆಯಿತು (೧೦೪-೧೦೫). ಋತ್ವಿಜರು ಪಿತೃಮೇಧವಿಹಿತವಾದ ಕರ್ಮವನ್ನಾರಂಭಿಸಿದರು. ಚಿತೆಯ ಆಗ್ನೇಯಭಾಗದಲ್ಲಿ ವೇದಿಕೆಯನ್ನು ನಿರ್ಮಿಸಿ ಯಥಾಸ್ಥಾನದಲ್ಲಿ ತ್ರೇತಾಗ್ನಿಯನ್ನು ಸ್ಥಾಪಿಸಿದರು (ವೇದಿಕೆಯ ಪೂರ್ವದಲ್ಲಿ ಆಹವನೀಯಾಗ್ನಿಯನ್ನೂ, ಪಶ್ಚಿಮದಲ್ಲಿ ಗಾರ್ಹಪತ್ಯಾಗ್ನಿಯನ್ನೂ, ದಕ್ಷಿಣದಲ್ಲಿ ದಕ್ಷಿಣಾಗ್ನಿಯನ್ನೂ ಸ್ಥಾಪಿಸಿದರು) (೧೦೬). ದಧಿಮಿಶ್ರವಾದ ಘೃತದಿಂದ ತುಂಬಿದ ಸ್ರುವವೆಂಬ ಹೋಮಪಾತ್ರೆಯನ್ನು ಶವದ ಸ್ಕಂಧಪ್ರದೇಶದಲ್ಲಿ ಚಿತೆಗೆ ಹಾಕಿದರು. ಸೋಮಲತೆಯನ್ನು ತರುವ ಶಕಟವನ್ನು ಪಾದಗಳ ಬಳಿಯಲ್ಲಿಯೂ, ಯಜ್ಞಸಾಧನವಾದ ಒರಳನ್ನು ತೊಡೆಗಳ ಮಧ್ಯದಲ್ಲಿಯೂ ಇಟ್ಟರು (೧೦೭). ಹಾಗೆಯೇ ಯಜ್ಞೋಪಕರಣಗಳಾದ ದಾರುಪಾತ್ರೆಗಳು, ಅರಣಿ, ಉತ್ತರಾರಣಿ, ಮುಸಲ ಮುಂತಾದ ವಸ್ತುಗಳನ್ನು ಶಾಸ್ತ್ರೋಕ್ತ ವಿಧಾನದಿಂದ ಆಯಾ ಸ್ಥಳಗಳಲ್ಲಿಟ್ಟರು*. ಶ್ರುತಿಯಲ್ಲಿ ಮತ್ತು ಋಷಿಪ್ರಣೀತವಾದ ಕಲ್ಪಶಾಸ್ತ್ರದಲ್ಲಿ ಹೇಳಿದ ವಿಧಿಯಂತೆ, ರಾಕ್ಷಸರಾದ ಆ ಋತ್ವಿಜರು ಶುದ್ಧವಾದ ಒಂದು ಮೇಕೆಯನ್ನು ಕೊಂದು ಹೋಮಮಾಡಿ, ಅದರ ವಪೆಯನ್ನು

---

* ಆಹಿತಾಗ್ನಿಯು ಮೃತನಾದಾಗ, ಅವನು ಉಪಯೋಗಿಸುತ್ತಿದ್ದ ಯಜ್ಞೋಪಕರಣಗಳನ್ನು ಅವನೊಡನೆ ದಹಿಸಬೇಕೆಂದು ಶಾಸ್ತ್ರವಿಧಿಯುಂಟು.

**ಪರಿಸ್ತರಣಿಕಾಂ ರಾಜ್ಞೋ ಘೃತಾಕ್ತಾಂ ಸಮವೇಶಯನ್ ।**
**ಗಂಧೈರ್ಮಾಲ್ಯೈರಲಂಕೃತ್ಯ ರಾವಣಂ ದೀನಮಾನಸಾಃ ॥** ೧೧೦

**ವಿಭೀಷಣಸಹಾಯಾಸ್ತೇ ವಸ್ತ್ರೈಶ್ಚ ವಿವಿಧೈರಪಿ ।**
**ಲಾಜೈಶ್ಚಾವಕಿರಂತಿ ಸ್ಮ ಬಾಷ್ಪಪೂರ್ಣಮುಖಾಸ್ತದಾ ॥** ೧೧೧

**ದದೌ ಚ ಪಾವಕಂ ತಸ್ಯ ವಿಧಿಯುಕ್ತಂ ವಿಭೀಷಣಃ ।**
**ಸ್ನಾತ್ವಾ ಚೈವಾರ್ದ್ರವಸ್ತ್ರೇಣ ತಿಲಾನ್ ದೂರ್ವಾಭಿಮಿಶ್ರಿತಾನ್ ॥**

**ಉದಕೇನ ಚ ಸಂಮಿಶ್ರಾನ್ ಪ್ರದಾಯ ವಿಧಿಪೂರ್ವಕಮ್ ।**
**ಪ್ರದಾಯ ಚೋದಕಂ ತಸ್ಮೈ ಮೂರ್ಧ್ನಾ ಚೈನಂ ನಮಸ್ಯ ಚ ॥**

**ತಾಃ ಸ್ತ್ರಿಯೋಽನುನಯಾಮಾಸ ಸಾಂತ್ವಮುಕ್ತ್ವಾ ಪುನಃ ಪುನಃ ।**
**ಗಮ್ಯತಾಮಿತಿ ತಾಃ ಸರ್ವಾ ವಿವಿಶುರ್ನಗರಂ ತದಾ ॥** ೧೧೪

**ಪ್ರವಿಷ್ಟಾಸು ಚ ಸರ್ವಾಸು ರಾಕ್ಷಸೀಷು ವಿಭೀಷಣಃ ।**
**ರಾಮಪಾರ್ಶ್ವಮುಪಾಗಮ್ಯ ತದಾತಿಷ್ಠದ್ವಿನೀತವತ್ ॥** ೧೧೫

---

ತುಪ್ಪದಲ್ಲಿ ನೆನೆಸಿ ರಾಕ್ಷಸೇಂದ್ರನ ಬಾಯಲ್ಲಿಟ್ಟರು (೧೦೮-೧೦೯). ಆಗ ದುಃಖಾರ್ತರಾದ ರಾಕ್ಷಸರೂ ವಿಭೀಷಣನೂ ಮುಂದೆ ಬಂದು, ವಸ್ತ್ರಗಳಿಂದಲೂ ಗಂಧಮಾಲ್ಯಗಳಿಂದಲೂ ರಾವಣನನ್ನು ಅಲಂಕರಿಸಿ, ಕಣ್ಣೀರು ಸುರಿಸುತ್ತ ಚಿತೆಯಮೇಲೆ ಅರಳನ್ನು ಬೀರಿದರು (೧೧೦-೧೧೧). ಅನಂತರ ವಿಭೀಷಣನು ವಿಧಿಪೂರ್ವಕವಾಗಿ ಚಿತೆಗೆ ಬೆಂಕಿಯನ್ನಿಟ್ಟನು. ಆಮೇಲೆ ಸ್ನಾನಮಾಡಿ ಒದ್ದೆಯ ಬಟ್ಟೆಯನ್ನುಟ್ಟು ದೂರ್ವೋದಕಮಿಶ್ರವಾದ ತಿಲವನ್ನು ನೆಲದಲ್ಲಿ ಹರಡಿ, ಪ್ರೇತಕ್ಕೆ ಜಲದಿಂದ ತರ್ಪಣವನ್ನಿತ್ತನು. ತರುವಾಯ ವಿಭೀಷಣನು ತಲೆಬಾಗಿ ರಾವಣನಿಗೆ ನಮಸ್ಕರಿಸಿ, ರಾವಣಸ್ತ್ರೀಯರಿಗೆ ಮತ್ತೆ ಮತ್ತೆ ಒಳ್ಳೆಯ ಮಾತುಗಳನ್ನಾಡಿ ಸಂತೈಸಿ, ಲಂಕಾನಗರದೊಳಗೆ ಹೋಗುವಂತೆ ತಿಳಿಸಿದನು. ಅವರೆಲ್ಲರೂ ನಗರಿಗೆ ಹಿಂದಿರುಗಿದರು (೧೧೨-೧೧೪). ಹೀಗೆ ರಾಕ್ಷಸಸ್ತ್ರೀಯರು ಲಂಕೆಗೆ ಹೋದಮೇಲೆ, ವಿಭೀಷಣನು ಶ್ರೀರಾಮನ ಬಳಿಗೆ ಬಂದು ವಿನಯದಿಂದ ನಿಂತುಕೊಂಡನು.

ರಾಮೋಽಪಿ ಸಹ ಸೈನ್ಯೇನ ಸಸುಗ್ರೀವಃ ಸಲಕ್ಷ್ಮಣಃ ।
ಹರ್ಷಂ ಲೇಭೇ ರಿಪುಂ ಹತ್ವಾ ಯಥಾ ವೃತ್ರಂ ಶತಕ್ರತುಃ ॥ ೧೧೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ದಶೋತ್ತರಶತತಮಃ ಸರ್ಗಃ

---

## ಪಂಚದಶೋತ್ತರಶತತಮಃ ಸರ್ಗಃ

### ವಿಭೀಷಣಾಭಿಷೇಕಃ

ತೇ ರಾವಣವಧಂ ದೃಷ್ಟ್ವಾ ದೇವಗಂಧರ್ವದಾನವಾಃ ।
ಜಗ್ಮುಃ ಸ್ವೈಃ ಸ್ವೈರ್ವಿಮಾನೈಸ್ತೇ ಕಥಯಂತಃ ಶುಭಾಃ ಕಥಾಃ ॥ ೧

ರಾವಣಸ್ಯ ವಧಂ ಘೋರಂ ರಾಘವಸ್ಯ ಪರಾಕ್ರಮಮ್ ।
ಸುಯುದ್ಧಂ ವಾನರಾಣಾಂ ಚ ಸುಗ್ರೀವಸ್ಯ ಚ ಮಂತ್ರಿತಮ್ ॥ ೨

---

ದೇವೇಂದ್ರನು ವೃತ್ರಾಸುರನನ್ನು ಸಂಹರಿಸಿದಂತೆ, ವೈರಿಯನ್ನು ವಿಧ್ವಂಸಗೊಳಿಸಿದ ಶ್ರೀರಾಮಚಂದ್ರನು ಲಕ್ಷ್ಮಣಸುಗ್ರೀವರಿಂದಲೂ ವಾನರಸೇನೆಯಿಂದಲೂ ಪರಿವೃತನಾಗಿ ಹರ್ಷದಲ್ಲಿದ್ದನು (೧೧೫-೧೧೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹದಿನಾಲ್ಕನೆಯ ಸರ್ಗ

---

## ಸರ್ಗ ೧೧೫

**ವಿಭೀಷಣನ ಪಟ್ಟಾಭಿಷೇಕ. ತನಗೆ ಜಯವಾಯಿತೆಂಬ ವಾರ್ತೆಯನ್ನು ವೈದೇಹಿಗೆ ತಿಳಿಸುವಂತೆ ಶ್ರೀರಾಮನು ಹನುಮಂತನನ್ನು ಕಳಿಸುವುದು.**

ಆಗ ಯುದ್ಧವನ್ನು ನೋಡುವುದಕ್ಕಾಗಿ ಬಂದಿದ್ದ ದೇವಗಂಧರ್ವದಾನವಾದಿಗಳು ರಾವಣವಧೆಯನ್ನು ವೀಕ್ಷಿಸಿದಮೇಲೆ, ಸಂತೋಷದಿಂದ ಸಂಭಾಷಿಸುತ್ತ ತಮ್ಮ ತಮ್ಮ ವಿಮಾನಗಳನ್ನೇರಿ ಹೊರಟರು (೧). ರಾವಣನ ಘೋರವಾದ ವಧಪ್ರಕಾರ, ಶ್ರೀರಾಮನ ಪರಾಕ್ರಮ, ಕಪಿಯೋಧರ ಭೀಕರ

ಅನುರಾಗಂ ಚ ವೀರ್ಯಂ ಚ ರಾಮಸ್ಯ ಲಕ್ಷ್ಮಣಸ್ಯ ಚ ।
ಕಥಯಂತೋ ಮಹಾಭಾಗಾ ಜಗ್ಮುರ್ಹೃಷ್ಟಾ ಯಥಾಗತಮ್ ॥ ೩

ರಾಘವಸ್ತು ರಥಂ ದಿವ್ಯಮಿಂದ್ರದತ್ತಂ ಶಿಖಿಪ್ರಭಮ್ ।
ಅನುಜ್ಞಾಯ ಮಹಾಭಾಗೋ ಮಾತಲಿಂ ಪ್ರತ್ಯಪೂಜಯತ್ ॥ ೪

ರಾಘವೇಣಾಭ್ಯನುಜ್ಞಾತೋ ಮಾತಲಿಃ ಶಕ್ರಸಾರಥಿಃ ।
ದಿವ್ಯಂ ತಂ ರಥಮಾಸ್ಥಾಯ ದಿವಮೇವಾರುರೋಹ ಸಃ ॥ ೫

ತಸ್ಮಿಂಸ್ತು ದಿವಮಾರೂಢೇ ಸುರಸಾರಥಿಸತ್ತಮೇ ।
ರಾಘವಃ ಪರಮಪ್ರೀತಃ ಸುಗ್ರೀವಂ ಪರಿಷಸ್ವಜೇ ॥ ೬

ಪರಿಷ್ವಜ್ಯ ಚ ಸುಗ್ರೀವಂ ಲಕ್ಷ್ಮಣೇನ ಪ್ರಚೋದಿತಃ ।
ಪೂಜ್ಯಮಾನೋ ಹರಿಶ್ರೇಷ್ಠೈರಾಜಗಾಮ ಬಲಾಲಯಮ್ ॥ ೭

ಅಬ್ರವೀಚ್ಚ ತದಾ ರಾಮಃ ಸಮೀಪಪರಿವರ್ತಿನಮ್ ।
ಸೌಮಿತ್ರಿಂ ಸತ್ತ್ವಸಂಪನ್ನಂ ಲಕ್ಷ್ಮಣಂ ದೀಪ್ತತೇಜಸಮ್ ॥ ೮

---

ವಾದ ಸಂಗ್ರಾಮ, ಸುಗ್ರೀವನ ಮಂತ್ರಾಲೋಚನಾದಕ್ಷತೆ, ಹನುಮಂತನಿಗೂ ಲಕ್ಷ್ಮಣನಿಗೂ ಶ್ರೀರಾಮನಲ್ಲಿದ್ದ ಪ್ರೇಮಾತಿಶಯ ಮತ್ತು ಅವರಿಬ್ಬರೂ ಪ್ರದರ್ಶಿಸಿದ ಶೌರ್ಯ—ಈ ವಿಷಯಗಳನ್ನು ಕುರಿತು ಮಾತನಾಡುತ್ತ ಅವರೆಲ್ಲರೂ ಹರ್ಷದಿಂದ ತಮ್ಮ ಸ್ಥಳಗಳಿಗೆ ಹೊರಟುಹೋದರು (೨-೩). ಮಹಾಭಾಗನಾದ ರಾಘವನು ತನಗಾಗಿ ಇಂದ್ರನು ಕಳಿಸಿದ್ದ ಅಗ್ನಿಸಂಕಾಶವಾದ ದಿವ್ಯರಥವನ್ನು ಹಿಂದಕ್ಕೆ ತೆಗೆದುಕೊಂಡು ಹೋಗುವಂತೆ ತಿಳಿಸಿದನಲ್ಲದೆ, ಮಾತಲಿಯನ್ನು ಆತನಿತ್ತ ನೆರವಿಗಾಗಿ ಕೊಂಡಾಡಿ ಆದರದಿಂದ ಸತ್ಕರಿಸಿದನು (೪). ಇಂದ್ರಸಾರಥಿಯಾದ ಮಾತಲಿಯು ಶ್ರೀರಾಮನ ಅನುಜ್ಞೆಯನ್ನು ಪಡೆದು, ಆ ದಿವ್ಯರಥವನ್ನೇರಿ ದೇವಲೋಕವನ್ನಡರಿದನು. ಇಂದ್ರಸಾರಥಿಯು ಹೊರಟುಹೋದಮೇಲೆ ಶ್ರೀರಾಮನು ಸಂತೋಷದಿಂದ ಸುಗ್ರೀವನನ್ನು ಆಲಿಂಗಿಸಿಕೊಂಡನು(೫-೬). ಶ್ರೀರಾಮನು ಸುಗ್ರೀವನನ್ನು ಆಲಿಂಗಿಸಿಕೊಂಡು ವಾನರೋತ್ತಮರಿಂದ ಆದರಿಸಲ್ಪಡುತ್ತ, ಲಕ್ಷ್ಮಣನ ಸೂಚನೆಯಂತೆ ತನ್ನ ಸೇನಾನಿವೇಶಕ್ಕೆ ಆಗಮಿಸಿದನು (೭). ಅನಂತರ ತನ್ನ ಸಮೀಪದಲ್ಲಿದ್ದ ತೇಜಸ್ವಿಯೂ

ವಿಭೀಷಣಮಿಮಂ ಸೌಮ್ಯ ಲಂಕಾಯಾಮಭಿಷೇಚಯ ।
ಅನುರಕ್ತಂ ಚ ಭಕ್ತಂ ಚ ಮಮ ಚೈವೋಪಕಾರಿಣಮ್ ॥ ೯

ಏಷ ಮೇ ಪರಮಃ ಕಾಮೋ ಯದೀಮಂ ರಾವಣಾನುಜಮ್ ।
ಲಂಕಾಯಾಂ ಸೌಮ್ಯ ಪಶ್ಯೇಯಮಭಿಷಿಕ್ತಂ ವಿಭೀಷಣಮ್ ॥ ೧೦

ಏವಮುಕ್ತಸ್ತು ಸೌಮಿತ್ರೀ ರಾಘವೇಣ ಮಹಾತ್ಮನಾ ।
ತಥೇತ್ಯುಕ್ತ್ವಾ ತು ಸಂಹೃಷ್ಟಃ ಸೌವರ್ಣಂ ಘಟಮಾದದೇ ॥ ೧೧

ತಂ ಘಟಂ ವಾನರೇಂದ್ರಾಣಾಂ ಹಸ್ತೇ ದತ್ತ್ವಾ ಮನೋಜವಾನ್ ।
ಆದಿದೇಶ ಮಹಾಸತ್ತ್ವಾನ್ ಸಮುದ್ರಸಲಿಲಾನಯೇ ॥ ೧೨

ಅತಿಶೀಘ್ರಂ ತತೋ ಗತ್ವಾ ವಾನರಾಸ್ತು ಮಹಾಬಲಾಃ ।
ಆಗತಾಸ್ತಜ್ಜಲಂ ಗೃಹ್ಯ ಸಮುದ್ರಾದ್ವಾನರೋತ್ತಮಾಃ ॥ ೧೩

ತತಸ್ತ್ವೇಕಂ ಘಟಂ ಗೃಹ್ಯ ಸಂಸ್ಥಾಪ್ಯ ಪರಮಾಸನೇ ।
ಘಟೇನ ತೇನ ಸೌಮಿತ್ರಿರಭ್ಯಷಿಂಚದ್ವಿಭೀಷಣಮ್ ॥ ೧೪

---

ಸತ್ತ್ವಸಂಪನ್ನನೂ ಆದ ಸೌಮಿತ್ರಿಯನ್ನು ನೋಡಿ ರಾಘವನು "ವತ್ಸ-ಲಕ್ಷ್ಮಣ, ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಪಟ್ಟಾಭಿಷೇಕವನ್ನು ನಡೆಸಿ ಬಾ! ಈತನು ನನ್ನಲ್ಲಿ ಅನುರಕ್ತನೂ ಭಕ್ತನೂ ಆಗಿದ್ದಾನೆ. ನನಗೆ ಬಹಳ ಉಪಕಾರಗಳನ್ನು ಮಾಡಿದ್ದಾನೆ(೮-೯). ಸೌಮ್ಯ-ಲಕ್ಷ್ಮಣ, ರಾವಣಾನುಜನಾದ ವಿಭೀಷಣನು ಲಂಕಾರಾಜ್ಯಾಭಿಷಿಕ್ತನಾಗುವುದನ್ನು ನೋಡಬೇಕೆಂಬುದೇ ನನ್ನ ತೀವ್ರವಾದ ಅಭಿಲಾಷೆ" ಎಂದು ಹೇಳಿದನು. ಮಹಾತ್ಮನಾದ ರಾಘವನು ಹೀಗೆನ್ನಲು, ಸೌಮಿತ್ರಿಯು ಹರ್ಷದಿಂದ ಆ ಕಾರ್ಯವನ್ನು ನಡೆಸುವೆನೆಂದು ನುಡಿದು, ಮನೋವೇಗದಿಂದ ಧಾವಿಸಬಲ್ಲ ವಾನರೋತ್ತಮರನ್ನು ಕರೆದು, ಅವರಿಗೆ ಸುವರ್ಣಕಲಶಗಳನ್ನಿತ್ತು, ಅವುಗಳಲ್ಲಿ ಚತುಸ್ಸಮುದ್ರಗಳಿಂದಲೂ ಜಲವನ್ನು ತರುವಂತೆ ಆದೇಶವನ್ನಿತ್ತನು (೧೦-೧೨). ಬಲಾಢ್ಯರಾದ ಆ ಕಪಿನಾಯಕರು ಧಾವಿಸುತ್ತ ಹೋಗಿ ಅತಿಶೀಘ್ರದಲ್ಲಿ ಸಮುದ್ರಗಳಿಂದ ಜಲವನ್ನು ತಂದರು. ಅನಂತರ ಲಕ್ಷ್ಮಣನು ಲಂಕೆಗೆ ಹೋಗಿ, ರಾಕ್ಷಸರ ಸಭಾಮಧ್ಯದಲ್ಲಿ ವಿಭೀಷಣನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದನು. ಮಿತ್ರವರ್ಗದವರೆಲ್ಲರೂ ಸುತ್ತಲೂ

ಲಂಕಾಯಾಂ ರಕ್ಷಸಾಂ ಮಧ್ಯೇ ರಾಜಾನಂ ರಾಮಶಾಸನಾತ್ ।
ವಿಧಿನಾ ಮಂತ್ರದೃಷ್ಟೇನ ಸುಹೃದ್ಗಣಸಮಾವೃತಮ್ ॥ ೧೫

ಅಭ್ಯಷಿಂಚತ್ ಸ ಧರ್ಮಾತ್ಮಾ ಶುದ್ಧಾತ್ಮಾನಂ ವಿಭೀಷಣಮ್ ।
ತಸ್ಯಾಮಾತ್ಯಾ ಜಹೃಷಿರೇ ಭಕ್ತಾ ಯೇ ಚಾಸ್ಯ ರಾಕ್ಷಸಾಃ ॥ ೧೬

ದೃಷ್ಟ್ವಾಭಿಷಿಕ್ತಂ ಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಮ್ ।
ಸ ತದ್ರಾಜ್ಯಂ ಮಹತ್ ಪ್ರಾಪ್ಯ ರಾಮದತ್ತಂ ವಿಭೀಷಣಃ ॥ ೧೭

ಪ್ರಕೃತೀಃ ಸಾಂತ್ವಯಿತ್ವಾ ಚ ತತೋ ರಾಮಮುಪಾಗಮತ್ ।
ಅಕ್ಷತಾನ್ ಮೋದಕಾನ್ ಲಾಜಾನ್ ದಿವ್ಯಾಃ ಸುಮನಸಸ್ತದಾ ॥ ೧೮

ಆಜಹ್ರುರಥ ಸಂಹೃಷ್ಟಾಃ ಪೌರಾಸ್ತಸ್ಮೈ ನಿಶಾಚರಾಃ ।
ಸ ತಾನ್ ಗೃಹೀತ್ವಾ ದುರ್ಧರ್ಷೋ ರಾಘವಾಯ ನ್ಯವೇದಯತ್ ॥

---

ನೆರೆದಿದ್ದರು. ಆಗ ಲಕ್ಷ್ಮಣನು ಶ್ರೀರಾಮನ ಆಜ್ಞೆಯಂತೆ ತಾನೇ ಒಂದು ಕಲಶವನ್ನೆತ್ತಿ ವೇದೋಕ್ತವಿಧಿಪೂರ್ವಕವಾಗಿ ವಿಭೀಷಣನಿಗೆ ಪಟ್ಟಾಭಿಷೇಕ ಮಾಡಿದನು (೧೩-೧೫). ಧರ್ಮಾತ್ಮನಾದ ಸೌಮಿತ್ರಿಯು ಶುದ್ಧಾತ್ಮನಾದ ವಿಭೀಷಣನಿಗೆ ವಿಧಿಪೂರ್ವಕವಾಗಿ ಅಭಿಷೇಕಮಾಡಲು, ವಿಭೀಷಣನ ಅಮಾತ್ಯರೂ ಅವನಲ್ಲಿ ಅನುರಾಗವನ್ನಿಟ್ಟಿದ್ದ ಇತರ ರಾಕ್ಷಸವರ್ಗದವರೂ ಆನಂದಿಸಿದರು* (೧೬). ಲಂಕೆಯಲ್ಲಿ ವಿಭೀಷಣನು ರಾಕ್ಷಸೇಂದ್ರನಾಗಿ ಪಟ್ಟಾಭಿಷಿಕ್ತನಾದನೆಂದು ಅವರೆಲ್ಲರೂ ಹರ್ಷಿಸಿದರು. ಹೀಗೆ ವಿಭೀಷಣನು ಶ್ರೀರಾಮನ ಅನುಗ್ರಹದಿಂದ ಮಹಾರಾಜ್ಯವನ್ನು ಪಡೆದು, ಪ್ರಜೆಗಳನ್ನೂ ಅಧಿಕಾರಿವರ್ಗದವರನ್ನೂ ಕಾಲೋಚಿತವಾದ ನುಡಿಗಳಿಂದ ಸಂತೈಸಿ ಮತ್ತೆ ಶ್ರೀರಾಮನ ಬಳಿಗೆ ಹೊರಟನು (೧೭). ಆಗ ಲಂಕಾನಗರದಲ್ಲಿದ್ದ ಪೌರರು ಮಂಗಳಾಕ್ಷತೆ, ಮೋದಕ, ಅರಳು, ದಿವ್ಯಪುಷ್ಪಗಳು—ಮೊದಲಾದ ಮಂಗಳ ದ್ರವ್ಯಗಳನ್ನು ತಂದು ತಮ್ಮ ಪ್ರಭುವಾದ ವಿಭೀಷಣನಿಗೆ ಸಂತೋಷದಿಂದ ಅರ್ಪಿಸಿದರು. ಪ್ರತಾಪಶಾಲಿಯಾದ ವಿಭೀಷಣನು ಅವುಗಳನ್ನು ಸ್ವೀಕರಿಸಿ,

---

* ರಾವಣನು ಯುದ್ಧದಲ್ಲಿ ಹತನಾದ್ದರಿಂದ ವಿಭೀಷಣನಿಗೆ ಅಶೌಚದ ದೋಷವಿಲ್ಲ. 'ಉದ್ಯತೈರಾಹವೇ ಶಸ್ತ್ರೈಃ ಕ್ಷತ್ರಧರ್ಮಹತಸ್ಯ ಚ । ಸದ್ಯಃ ಸಂತಿಷ್ಠತೇ ಯಜ್ಞಸ್ತಥಾ ಶೌಚಮಿತಿ ಸ್ಥಿತಿಃ'—ಮನುಸ್ಮೃತಿ ೫-೯೮.

ಮಂಗಲ್ಯಂ ಮಂಗಲಂ ಸರ್ವಂ ಲಕ್ಷ್ಮಣಾಯ ಚ ವೀರ್ಯವಾನ್ ।
ಕೃತಕಾರ್ಯಂ ಸಮೃದ್ಧಾರ್ಥಂ ದೃಷ್ಟ್ವಾ ರಾಮೋ ವಿಭೀಷಣಮ್ ॥
ಪ್ರತಿಜಗ್ರಾಹ ತತ್ಸರ್ವಂ ತಸ್ಯೈವ ಪ್ರಿಯಕಾಮ್ಯಯಾ ।
ತತಃ ಶೈಲೋಪಮಂ ವೀರಂ ಪ್ರಾಂಜಲಿಂ ಪಾರ್ಶ್ವತಃ ಸ್ಥಿತಮ್ ॥ ೨೧
ಅಬ್ರವೀದ್ರಾಘವೋ ವಾಕ್ಯಂ ಹನುಮಂತಂ ಪ್ಲವಂಗಮಮ್ ।
ಅನುಮಾನ್ಯ ಮಹಾರಾಜಮಿಮಂ ಸೌಮ್ಯ ವಿಭೀಷಣಮ್ ॥ ೨೨
ಗಚ್ಛ ಸೌಮ್ಯ ಪುರೀಂ ಲಂಕಾಮನುಜ್ಞಾಪ್ಯ ಯಥಾವಿಧಿ ।
ಪ್ರವಿಶ್ಯ ರಾವಣಗೃಹಂ ವಿಜಯೇನಾಭಿನಂದ್ಯ ಚ ॥ ೨೩
ವೈದೇಹ್ಯೈ ಮಾಂ ಕುಶಲಿನಂ ಸಸುಗ್ರೀವಂ ಸಲಕ್ಷ್ಮಣಮ್ ।
ಆಚಕ್ಷ್ವ ಜಯತಾಂ ಶ್ರೇಷ್ಠ ರಾವಣಂ ಚ ಮಯಾ ಹತಮ್ ॥ ೨೪
ಪ್ರಿಯಮೇತದುದಾಹೃತ್ಯ ಮೈಥಿಲ್ಯಾಸ್ತ್ವಂ ಹರೀಶ್ವರ ।
ಪ್ರತಿಗೃಹ್ಯ ಚ ಸಂದೇಶಮುಪಾವರ್ತಿತುಮರ್ಹಸಿ ॥ ೨೫

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚದಶೋತ್ತರಶತತಮಃ ಸರ್ಗಃ

---

ಉತ್ತಮವಾದ ಮಂಗಳದ್ರವ್ಯಗಳನ್ನು ಶ್ರೀರಾಮನಿಗೂ ಲಕ್ಷ್ಮಣನಿಗೂ ಸಮರ್ಪಿಸಿದನು (೧೮-೧೯). ಈ ರೀತಿಯಲ್ಲಿ ಕೃತಾರ್ಥನಾಗಿ ಸಂಪತ್ಸಮೃದ್ಧನಾದ ವಿಭೀಷಣನನ್ನು ನೋಡಿ ಶ್ರೀರಾಮನಿಗೆ ಆನಂದವಾಯಿತು. ವಿಭೀಷಣನಿಗೆ ಸಂತೋಷವಾಗಲೆಂಬ ಉದ್ದೇಶದಿಂದ, ಆತನು ಸಮರ್ಪಿಸಿದ ಮಂಗಳದ್ರವ್ಯವನ್ನು ಶ್ರೀರಾಮನು ಸ್ವೀಕರಿಸಿದನು (೨೦). ಆಮೇಲೆ ತನ್ನ ಪಾರ್ಶ್ವದಲ್ಲಿ ಕೈಮುಗಿದು ನಿಂತಿದ್ದ ಶೈಲೋನ್ನತಕಾಯನೂ ವೀರಾಗ್ರಗಣ್ಯನೂ ಆದ ಹನುಮಂತನನ್ನು ನೋಡಿ ರಾಘವನು "ಸೌಮ್ಯ-ಆಂಜನೇಯ, ಮಹಾರಾಜನಾದ ವಿಭೀಷಣನ ಅನುಮತಿಯನ್ನು ಪಡೆದು ಲಂಕೆಗೆ ಹೋಗಿಬಾ! (೨೧-೨೨). ವಿಭೀಷಣನ ಅನುಜ್ಞೆಯಂತೆ ಕ್ರಮವರಿತು ರಾವಣಗೃಹಕ್ಕೆ ಹೋಗಿ, ವೈದೇಹಿಗೆ ವಿಜಯವಾರ್ತೆಯನ್ನರುಹು. ನಾನು ಸುಗ್ರೀವಲಕ್ಷ್ಮಣಸಮೇತನಾಗಿ ಕುಶಲದಿಂದ ಇರುವೆನೆಂದು ತಿಳಿಸು. ವಾನರೋತ್ತಮ, ರಾವಣನನ್ನು ನಾನು ಸಂಹರಿಸಿದ್ದೇನೆಂಬ ಪ್ರಿಯವಾರ್ತೆಯನ್ನು ಮೈಥಿಲಿಗೆ ಹೇಳಿ, ಅವಳ ಸಂದೇಶವೇನೆಂಬುದನ್ನು ತಿಳಿದುಕೊಂಡು ಬಾ" ಎಂದನು (೨೩-೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹದಿನೈದನೆಯ ಸರ್ಗ

## ಷೋಡಶೋತ್ತರಶತತಮಃ ಸರ್ಗಃ

### ಮೈಥಿಲೀಪ್ರಿಯನಿವೇದನಮ್

ಇತಿ ಪ್ರತಿಸಮಾದಿಷ್ಟೋ ಹನುಮಾನ್ ಮಾರುತಾತ್ಮಜಃ ।
ಪ್ರವಿವೇಶ ಪುರೀಂ ಲಂಕಾಂ ಪೂಜ್ಯಮಾನೋ ನಿಶಾಚರೈಃ ॥ ೧

ಪ್ರವಿಶ್ಯ ಚ ಮಹಾತೇಜಾ ರಾವಣಸ್ಯ ನಿವೇಶನಮ್ ।
ದದರ್ಶ ಮೃಜಯಾ ಹೀನಾಂ ಸಾತಂಕಾಮಿವ ರೋಹಿಣೀಮ್ ॥ ೨

ವೃಕ್ಷಮೂಲೇ ನಿರಾನಂದಾಂ ರಾಕ್ಷಸೀಭಿಃ ಸಮಾವೃತಾಮ್ ।
ನಿಭೃತಃ ಪ್ರಣತಃ ಪ್ರಹ್ವಃ ಸೋಽಭಿಗಮ್ಯಾಭಿವಾದ್ಯ ಚ ॥ ೩

ದೃಷ್ಟ್ವಾ ತಮಾಗತಂ ದೇವೀ ಹನುಮಂತಂ ಮಹಾಬಲಮ್ ।
ತೂಷ್ಣೀಮಾಸ್ತ ತದಾ ದೃಷ್ಟ್ವಾ ಸ್ಮೃತ್ವಾ ಪ್ರಮುದಿತಾಭವತ್ ॥ ೪

### ಸರ್ಗ ೧೧೬

ಹನುಮಂತನು ಅಶೋಕವನಕ್ಕೆ ಹೋಗಿ ಶ್ರೀರಾಮನ ವಿಜಯವಾರ್ತೆಯನ್ನು ಜಾನಕಿಗೆ ತಿಳಿಸುವುದು. ಅವಳ ಆನಂದ. ಹನುಮಂತನು ಹಿಂದಿರುಗಿ ಶ್ರೀರಾಮನ ಬಳಿಗೆ ಬರುವುದು.

ಹೀಗೆ ಶ್ರೀರಾಮನಿಂದ ಆಜ್ಞಪ್ತನಾದ ಮಾರುತಾತ್ಮಜನು ಲಂಕಾನಗರವನ್ನು ಪ್ರವೇಶಿಸಿದನು. ಅಲ್ಲಿದ್ದ ರಾಕ್ಷಸರು ಹನುಮಂತನನ್ನು ಆದರದಿಂದ ಕಂಡರು! ಆ ತೇಜಸ್ವಿಯು ರಾವಣನ ಉದ್ಯಾನವಾದ ಅಶೋಕವನಕ್ಕೆ ಹೋಗಿ ಸೀತಾದೇವಿಯನ್ನು ನೋಡಿದನು. ಅವಳಾದರೋ ಸ್ನಾನಾದಿ ಸಂಸ್ಕಾರವಿಲ್ಲದೆ, ಗ್ರಹಪೀಡಿತಳಾದ ರೋಹಿಣಿಯಂತೆ ಖಿನ್ನಳಾಗಿ ಒಂದು ವೃಕ್ಷದ ಬುಡದಲ್ಲಿ ಕುಳಿತಿದ್ದಳು (೧–೨). ಸುತ್ತಲೂ ರಾಕ್ಷಸಿಯರ ಪರಿವಾರವಿತ್ತು. ಹನುಮಂತನು ಸಮೀಪಕ್ಕೆ ಹೋಗಿ ತನ್ನ ಹೆಸರನ್ನು ಹೇಳಿ ಜಾನಕಿಗೆ ನಮಸ್ಕರಿಸಿ, ವಿನಯದಿಂದ ನಿಶ್ಚಲನಾಗಿ ನಿಂತುಕೊಂಡನು. ಬಲಾಢ್ಯನಾದ ಹನುಮಂತನು ಬಂದುದನ್ನು ನೋಡಿದರೂ ಸೀತಾದೇವಿಯು ಧ್ಯಾನಸ್ಥಳಾಗಿ ಸ್ವಲ್ಪಹೊತ್ತು ಸುಮ್ಮನಿದ್ದಳು. ಆಮೇಲೆ, ಹಿಂದೆ ಬಂದಿದ್ದ ಹನುಮಂತನೇ ಇವನೆಂದು ಸ್ಮರಿಸಿಕೊಂಡು ಸಂತೋಷದಿಂದ ಹಿಗ್ಗಿದಳು

ಸೌಮ್ಯಂ ದೃಷ್ಟ್ವಾ ಮುಖಂ ತಸ್ಯಾ ಹನುಮಾನ್ ಪ್ಲವಗೋತ್ತಮಃ ।
ರಾಮಸ್ಯ ವಚನಂ ಸರ್ವಮಾಖ್ಯಾತುಮುಪಚಕ್ರಮೇ ॥ ೫

ವೈದೇಹಿ ಕುಶಲೀ ರಾಮಃ ಸಹಸುಗ್ರೀವಲಕ್ಷ್ಮಣಃ ।
ವಿಭೀಷಣಸಹಾಯಶ್ಚ ಹರೀಣಾಂ ಸಹಿತೋ ಬಲೈಃ ॥ ೬

ಕುಶಲಂ ಚಾಹ ಸಿದ್ಧಾರ್ಥೋ ಹತಶತ್ರುರರಿಂದಮಃ ।
ವಿಭೀಷಣಸಹಾಯೇನ ರಾಮೇಣ ಹರಿಭಿಃ ಸಹ ॥ ೭

ನಿಹತೋ ರಾವಣೋ ದೇವಿ ಲಕ್ಷ್ಮಣಸ್ಯ ನಯೇನ ಚ ।
ಪೃಷ್ಟ್ವಾ ತು ಕುಶಲಂ ರಾಮೋ ವೀರಸ್ತ್ವಾಂ ರಘುನಂದನಃ ॥ ೮

ಅಬ್ರವೀತ್ ಪರಮಪ್ರೀತಃ ಕೃತಾರ್ಥೇನಾಂತರಾತ್ಮನಾ ।
ಪ್ರಿಯಮಾಖ್ಯಾಮಿ ತೇ ದೇವಿ ತ್ವಾಂ ತು ಭೂಯಃ ಸಭಾಜಯೇ ॥ ೯

ದಿಷ್ಟ್ಯಾ ಜೀವಸಿ ಧರ್ಮಜ್ಞೇ ಜಯೇನ ಮಮ ಸಂಯುಗೇ ।
ಲಬ್ಧೋ ನೋ ವಿಜಯಃ ಸೀತೇ ಸ್ವಸ್ಥಾ ಭವ ಗತವ್ಯಥಾ ॥ ೧೦

---

(೫-೪). ಆ ವಾನರೋತ್ತಮನು, ಹರ್ಷದಿಂದ ಅರಳಿ ಸೌಮ್ಯವಾದ ವೈಥಿಲಿಯ ಮುಖಮುದ್ರೆಯನ್ನು ಕಂಡು, ಶ್ರೀರಾಮನ ಸಂದೇಶವನ್ನು ಹೇಳಲಾರಂಭಿಸಿದನು: "ವೈದೇಹಿ, ಕುಶಲಿಯಾಗಿದ್ದಾನೆ ಶ್ರೀರಾಮ. ಸುಗ್ರೀವಲಕ್ಷ್ಮಣರೂ ಕ್ಷೇಮದಲ್ಲಿದ್ದಾರೆ. ವಿಭೀಷಣನಿಂದಲೂ ವಾನರಸೇನೆಗಳಿಂದಲೂ ಪರಿವೃತನಾದ ಶ್ರೀರಾಮನು ಉದ್ದಿಷ್ಟಕಾರ್ಯವನ್ನು ಸಾಧಿಸಿ ಕೃತಕೃತ್ಯನಾಗಿ, ತನ್ನ ಕುಶಲವನ್ನು ನಿನಗೆ ಹೇಳಿಕಳಿಸಿದ್ದಾನೆ (೫-೬). ಆ ಅರಿಂದಮನು ಶತ್ರುಗಳನ್ನು ವಿಧ್ವಂಸಗೊಳಿಸಿದ್ದಾನೆ. ದೇವಿ, ವಿಭೀಷಣನ ಸಹಾಯದಿಂದಲೂ ಕಪಿಯೋಧರ ನೆರವಿನಿಂದಲೂ ಲಕ್ಷ್ಮಣನ ಚಾಣಾಕ್ಷತೆಯಿಂದಲೂ ಶ್ರೀರಾಮನು ರಾವಣನನ್ನು ಸಂಹರಿಸಿದನು. ಅಮ್ಮ, ವೀರಾಗ್ರಣಿಯಾದ ರಘುನಂದನನು ನಿನ್ನ ಕುಶಲವನ್ನು ವಿಚಾರಿಸಿದ್ದಾನೆ (೭-೮). ತಾನು ಕೃತಾರ್ಥನಾದೆನೆಂದು ಆನಂದತುಂದಿಲನಾದ ಶ್ರೀರಾಮನು ಹೃತ್ಪೂರ್ವಕವಾಗಿ ಈ ಮಾತನ್ನು ನಿನಗೆ ಹೇಳಿಕಳಿಸಿದ್ದಾನೆ. ಏನೆಂದರೆ: 'ದೇವಿ, ನಿನಗೆ ಸಂತೋಷದ ಸುದ್ದಿಯನ್ನು ಹೇಳುತ್ತಿದ್ದೇನೆ. ಇದಕ್ಕಾಗಿ ನಿನ್ನನ್ನೇ ನಾನು ಅಭಿನಂದಿಸುವೆನು. ಎಲೌ ಧರ್ಮಜ್ಞೆ,

ರಾವಣಶ್ಚ ಹತಃ ಶತ್ರುರ್ಲಂಕಾ ಚೇಯಂ ವಶೇ ಸ್ಥಿತಾ ।
ಮಯಾ ಹ್ಯಲಬ್ಧನಿದ್ರೇಣ ದೃಢೇನ ತವ ನಿರ್ಜಯೇ ॥ ೧೧

ಪ್ರತಿಜ್ಞೈಷಾ ವಿನಿಸ್ತೀರ್ಣಾ ಬದ್ಧ್ವಾ ಸೇತುಂ ಮಹೋದಧೌ ।
ಸಂಭ್ರಮಶ್ಚ ನ ಗಂತವ್ಯೋ ವರ್ತಂತ್ಯಾ ರಾವಣಾಲಯೇ ॥ ೧೨

ವಿಭೀಷಣವಿಧೇಯಂ ಹಿ ಲಂಕೈಶ್ವರ್ಯಮಿದಂ ಕೃತಮ್ ।
ತದಾಶ್ವಸಿಹಿ ವಿಶ್ವಸ್ತಾ ಸ್ವಗೃಹೇ ಪರಿವರ್ತಸೇ ॥ ೧೩

ಅಯಂ ಚಾಭ್ಯೇತಿ ಸಂಹೃಷ್ಟಸ್ತ್ವದ್ದರ್ಶನಸಮುತ್ಸುಕಃ ।
ಏವಮುಕ್ತಾ ಸಮುತ್ಪತ್ಯ ಸೀತಾ ಶಶಿನಿಭಾನನಾ ॥ ೧೪

ಪ್ರಹರ್ಷೇಣಾವರುದ್ಧಾ ಸಾ ವ್ಯಾಜಹಾರ ನ ಕಿಂಚನ ।
ಅಬ್ರವೀಚ್ಚ ಹರಿಶ್ರೇಷ್ಠಃ ಸೀತಾಮಪ್ರತಿಜಲ್ಪತೀಮ್ ॥ ೧೫

ಕಿಂ ನು ಚಿಂತಯಸೇ ದೇವಿ ಕಿಂ ನು ಮಾಂ ನಾಭಿಭಾಷಸೇ ।
ಏವಮುಕ್ತಾ ಹನುಮತಾ ಸೀತಾ ಧರ್ಮೇ ವ್ಯವಸ್ಥಿತಾ ॥ ೧೬

---

ನನ್ನ ಭಾಗ್ಯದಿಂದ ನೀನು ಬದುಕಿರುವೆ. ಯುದ್ಧದಲ್ಲಿ ನನಗೆ ಜಯವು ಕೈಗೂಡಿತು. ಸೀತೆ, ನಮಗೆ ಜಯವಾಯಿತು! ಇನ್ನು ಚಿಂತಿಸಬೇಡ; ಸ್ವಸ್ಥಳಾಗಿರು (೯–೧೦). ವೈರಿಯಾದ ರಾವಣನು ಹತನಾದನು. ಲಂಕೆಯು ನಮ್ಮ ವಶವಾಯಿತು. ನಿನ್ನನ್ನು ಸೆರೆಯಿಂದ ಬಿಡಿಸಿಕೊಳ್ಳಬೇಕೆಂಬ ದೃಢನಿಶ್ಚಯದಿಂದ ನಾನು ನಿದ್ರೆಯನ್ನೂ ತೊರೆದು, ಶ್ರಮಿಸಿದೆನು. ಮಹಾ ಸಾಗರಕ್ಕೆ ಸೇತುವನ್ನು ಕಟ್ಟಿ ಕಡೆಗೂ ನನ್ನ ಪ್ರತಿಜ್ಞೆಯನ್ನು ನೆರವೇರಿಸಿದೆನು. ದೇವಿ, ರಾವಣನ ನಿಲಯದಲ್ಲಿದ್ದೇನೆಂದು ನೀನು ಹೆದರಬೇಡ (೧೧–೧೨). ಈಗ ಲಂಕಾರಾಜ್ಯವೆಲ್ಲವೂ ವಿಭೀಷಣನ ವಶಕ್ಕೆ ಬಂದಿದೆ. ಆದ್ದರಿಂದ ಸಮಾಧಾನ ಹೊಂದು. ನಿನ್ನ ಮನೆಯಲ್ಲಿಯೇ ನೀನು ಇದ್ದಂತಾಗಿದೆ! ಈ ವಿಭೀಷಣನು ನಿನ್ನನ್ನು ಎದುರುಗೊಳ್ಳುವ ಸಲುವಾಗಿ ಈಗ ಬರುತ್ತಾನೆ.' ಈ ರೀತಿಯಾಗಿ ಶ್ರೀರಾಮನು, ದೇವಿ, ನಿನಗೆ ಸಂದೇಶವನ್ನು ಕಳಿಸಿದ್ದಾನೆ" ಎಂದನು (೧೩–೧೪). ಹನುಮಂತನು ಹೀಗೆಂದೊಡನೆ ಚಂದ್ರಾನನೆಯಾದ ಜಾನಕಿಯು ಆನಂದಾತಿರೇಕದಿಂದ ತಟ್ಟನೆ ಎದ್ದು ನಿಂತಳು. ಹರ್ಷಾತಿಶಯದಿಂದ ಅವಳ ಕಂಠವು ಬಿಗಿಯಿತು. ಬಾಯಿಂದ ಯಾವ ಮಾತೂ ಹೊರಡದಾಯಿತು. ಒಂದು ಮಾತನ್ನೂ ಆಡಲಾರದೆ

ಅಬ್ರವೀತ್ ಪರಮಪ್ರೀತಾ ಹರ್ಷಗದ್ಗದಯಾ ಗಿರಾ ।
ಪ್ರಿಯಮೇತದುಪಶ್ರುತ್ಯ ಭರ್ತುರ್ವಿಜಯಸಂಶ್ರಿತಮ್ ॥ ೧೭

ಪ್ರಹರ್ಷವಶಮಾಪನ್ನಾ ನಿರ್ವಾಕ್ಯಾಸ್ಮಿ ಕ್ಷಣಾಂತರಮ್ ।
ನ ಹಿ ಪಶ್ಯಾಮಿ ಸದೃಶಂ ಚಿಂತಯಂತೀ ಪ್ಲವಂಗಮ ॥ ೧೮

ಮತ್ಪ್ರಿಯಾಖ್ಯಾನಕಸ್ಯೇಹ ತವ ಪ್ರತ್ಯಭಿನಂದನಮ್ ।
ನ ಹಿ ಪಶ್ಯಾಮಿ ತತ್ ಸೌಮ್ಯ ಪೃಥಿವ್ಯಾಮಪಿ ವಾನರ ॥ ೧೯

ಸದೃಶಂ ಮತ್ಪ್ರಿಯಾಖ್ಯಾನೇ ತವ ದಾತುಂ ಭವೇತ್ ಸಮಮ್ ।
ಹಿರಣ್ಯಂ ವಾ ಸುವರ್ಣಂ ವಾ ರತ್ನಾನಿ ವಿವಿಧಾನಿ ಚ ॥ ೨೦

ರಾಜ್ಯಂ ವಾ ತ್ರಿಷು ಲೋಕೇಷು ನೈತದರ್ಹತಿ ಭಾಷಿತುಮ್ ।
ಏವಮುಕ್ತಸ್ತು ವೈದೇಹ್ಯಾ ಪ್ರತ್ಯುವಾಚ ಪ್ಲವಂಗಮಃ ॥ ೨೧

---

ಆನಂದಪರವಶಳಾಗಿ ನಿಂತಿದ್ದ ಜಾನಕಿಯನ್ನು ನೋಡಿ ಆ ಕಪಿಶ್ರೇಷ್ಠನು "ದೇವಿ, ಏನನ್ನು ಆಲೋಚಿಸುತ್ತಿರುವೆ? ಏಕೆ ಒಂದು ಮಾತನ್ನೂ ನನಗೆ ಹೇಳದಿರುವೆ?" ಎಂದು ಕೇಳಿದನು (೧೫–೧೬). ಹನುಮಂತನು ಹೀಗೆ ಹೇಳಲು ಧರ್ಮನಿಷ್ಠಳಾದ ವೈದೇಹಿಯು ಹರ್ಷಾತಿಶಯದಿಂದ ಗದ್ಗದಿತ ಕಂಠಳಾಗಿ ತೊದಲುತ್ತ "ವಾನರೋತ್ತಮ, ನನ್ನ ಪತಿಗೆ ಜಯವಾಯಿ ತೆಂಬ ಪ್ರಿಯವಾರ್ತೆಯನ್ನು ಕೇಳಿ ಆನಂದದಿಂದ ಪರವಶಳಾದೆನು. ಸ್ವಲ್ಪಕಾಲ ಮಾತೇ ಹೊರಡದಾಯಿತು. ಎಷ್ಟು ಆಲೋಚಿಸಿದರೂ, ಹನುಮಂತ, ಇಂತಹ ಸಂತೋಷದ ಸುದ್ದಿಯನ್ನು ತಂದಿರುವ ನಿನಗೆ ಯಾವ ಮಾತನ್ನು ಹೇಳಿ ಅಭಿನಂದಿಸಲೆಂದು ನನಗೆ ಹೊಳೆಯದಾಗಿದೆ (೧೭–೧೮). ಸೌಮ್ಯ–ಕಪಿಶ್ರೇಷ್ಠ, ಈ ಪ್ರಿಯ ಸಂದೇಶವನ್ನು ತಂದಿರುವ ನಿನಗೆ ಪಾರಿತೋಷಿಕವಾಗಿ ಕೊಡಲು ಯೋಗ್ಯವಾದ ಯಾವ ವಸ್ತುವೂ ಈ ಜಗತ್ತಿನಲ್ಲಿಲ್ಲ! ಜಗತ್ತಿನಲ್ಲಿರುವ ಚಿನ್ನ, ಬೆಳ್ಳಿ, ವಿವಿಧ ರತ್ನರಾಶಿಗಳು– ಕಡೆಗೆ ಈ ಮೂರು ಲೋಕಗಳ ಆಧಿಪತ್ಯವೂ ಸಹ ನೀನು ಹೇಳಿದ ಆನಂದದ ಸುದ್ದಿಗೆ ಸಾಟಿಯಲ್ಲ!" ಎಂದಳು (೧೯–೨೦). ವೈದೇಹಿಯ ನುಡಿ ಯನ್ನಾಲಿಸಿದ ಹನುಮಂತನು ಆವಳೆದುರಿಗೆ ಕೈಮುಗಿದುಕೊಂಡು ನಿಂತು

ಗೃಹೀತಪ್ರಾಂಜಲಿರ್ವಾಕ್ಯಂ ಸೀತಾಯಾಃ ಪ್ರಮುಖೇ ಸ್ಥಿತಃ ।
ಭರ್ತುಃ ಪ್ರಿಯಹಿತೇ ಯುಕ್ತೇ ಭರ್ತುರ್ವಿಜಯಕಾಂಕ್ಷಿಣಿ ॥ ೨೨

ಸ್ನಿಗ್ಧಮೇವಂವಿಧಂ ವಾಕ್ಯಂ ತ್ವಮೇವಾರ್ಹಸಿ ಭಾಷಿತುಮ್ ।
ತವೈತದ್ವಚನಂ ಸೌಮ್ಯೇ ಸಾರವತ್ ಸ್ನಿಗ್ಧಮೇವ ಚ ॥ ೨೩

ರತ್ನೌಘಾದ್ವಿವಿಧಾಚ್ಚಾಪಿ ದೇವರಾಜ್ಯಾದ್ವಿಶಿಷ್ಯತೇ ।
ಅರ್ಥತಶ್ಚ ಮಯಾ ಪ್ರಾಪ್ತಾ ದೇವರಾಜ್ಯಾದಯೋ ಗುಣಾಃ ॥ ೨೪

ಹತಶತ್ರುಂ ವಿಜಯಿನಂ ರಾಮಂ ಪಶ್ಯಾಮಿ ಸುಸ್ಥಿತಮ್ ।
ತಸ್ಯ ತದ್ವಚನಂ ಶ್ರುತ್ವಾ ಮೈಥಿಲೀ ಜನಕಾತ್ಮಜಾ ॥ ೨೫

ತತಃ ಶುಭತರಂ ವಾಕ್ಯಮುವಾಚ ಪವನಾತ್ಮಜಮ್ ।
ಅತಿಲಕ್ಷಣಸಂಪನ್ನಂ ಮಾಧುರ್ಯಗುಣಭೂಷಿತಮ್ ॥ ೨೬

ಬುದ್ಧ್ಯಾ ಹ್ಯಷ್ಟಾಂಗಯಾ ಯುಕ್ತಂ ತ್ವಮೇವಾರ್ಹಸಿ ಭಾಷಿತುಮ್ ।
ಶ್ಲಾಘನೀಯೋಽನಿಲಸ್ಯ ತ್ವಂ ಪುತ್ರಃ ಪರಮಧಾರ್ಮಿಕಃ ॥ ೨೭

"ಅಮ್ಮ, ಪತಿಗೆ ಪ್ರಿಯವನ್ನೂ ಹಿತವನ್ನೂ ಸದಾ ಕೋರತಕ್ಕವಳು ನೀನು. ಪತಿಗೆ ವಿಜಯವಾಗಲೆಂದು ಹಾರೈಸುತ್ತಿದ್ದವಳು. ಇಷ್ಟು ವಾತ್ಸಲ್ಯಪೂರ್ಣವಾಗಿ ಮಾತನಾಡಲು ನಿನಗೆ ಮಾತ್ರವೇ ಸಾಧ್ಯ! ಇಷ್ಟು ಸಾರವತ್ತಾಗಿಯೂ ಸ್ನೇಹಪೂರ್ಣವಾಗಿಯೂ ಇರುವ ನಿನ್ನ ನುಡಿಯೊಂದೇ ಸಾಲದೆ? (೨೧-೨೩). ವಿವಿಧರತ್ನರಾಶಿಗಳಿಗಿಂತಲೂ ದೇವರಾಜ್ಯಕ್ಕಿಂತಲೂ ಇದು ನನ್ನ ಪಾಲಿಗೆ ಮಿಗಿಲು! ದೇವಿ, ನಿನ್ನ ನುಡಿಯೊಂದರಿಂದಲೇ ಸ್ವರ್ಗಾದಿ ಸಕಲ ಭಾಗ್ಯಗಳೂ ನನಗೆ ಲಭಿಸಿದಂತಾದವು! ಶ್ರೀರಾಮನು ಶತ್ರುವನ್ನು ಸಂಹರಿಸಿ ವಿಜಯಶಾಲಿಯಾಗಿ ಸೌಖ್ಯದಲ್ಲಿರುವುದನ್ನು ಕಣ್ಣಾರೆ ನೋಡುತ್ತಿದ್ದೇನೆ (ಇದಕ್ಕಿಂತ ಹೆಚ್ಚಿನ ಭಾಗ್ಯವೇನುಂಟು?)" ಎಂದನು (೨೪-೨೫). ಆಗ ಜನಕರಾಜತನಯಳಾದ ಮೈಥಿಲಿಯು ವಾಯುಪುತ್ರನನ್ನು ನೋಡಿ "ಸೌಮ್ಯ, ಶುದ್ಧವಾಗಿಯೂ ಮಧುರವಾಗಿಯೂ ನುಡಿಯುವುದರಲ್ಲಿ ನೀನೊಬ್ಬನೇ ನಿಪುಣ. ಅಷ್ಟಾಂಗಯುಕ್ತವಾದ* ಬುದ್ಧಿಶಕ್ತಿಯಿಂದ

* ಗ್ರಹಣಂ ಧಾರಣಂ ಚೈವ ಸ್ಮರಣಂ ಪ್ರತಿಪಾದನಮ್ ।
ಊಹಾಪೋಹೋಽರ್ಥವಿಜ್ಞಾನಂ ತತ್ತ್ವಜ್ಞಾನಂ ಚ ಧೀಗುಣಾಃ ॥
ಎಂಬುದಾಗಿ ಬುದ್ಧಿಯ ಗುಣಗಳು ಎಂಟು.

ಬಲಂ ಶೌರ್ಯಂ ಶ್ರುತಂ ಸತ್ತ್ವಂ ವಿಕ್ರಮೋ ದಾಕ್ಷ್ಯಮುತ್ತಮಮ್ ।
ತೇಜಃ ಕ್ಷಮಾ ಧೃತಿರ್ಧೈರ್ಯಂ ವಿನೀತತ್ವಂ ನ ಸಂಶಯಃ ॥ ೨೮

ಏತೇ ಚಾನ್ಯೇ ಚ ಬಹವೋ ಗುಣಾಸ್ತ್ವಯ್ಯೇವ ಶೋಭನಾಃ ।
ಅಥೋವಾಚ ಪುನಃ ಸೀತಾಮಸಂಭ್ರಾಂತೋ ವಿನೀತವತ್ ॥ ೨೯

ಪ್ರಗೃಹೀತಾಂಜಲಿರ್ಹರ್ಷಾತ್ ಸೀತಾಯಾಃ ಪ್ರಮುಖೇ ಸ್ಥಿತಃ ।
ಇಮಾಸ್ತು ಖಲು ರಾಕ್ಷಸ್ಯೋ ಯದಿ ತ್ವಮನುಮನ್ಯಸೇ ॥ ೩೦

ಹಂತುಮಿಚ್ಛಾಮ್ಯಹಂ ಸರ್ವಾ ಯಾಭಿಸ್ತ್ವಂ ತರ್ಜಿತಾ ಪುರಾ ।
ಕ್ಲಿಶ್ಯಂತೀಂ ಪತಿದೇವಾಂ ತ್ವಾಮಶೋಕವನಿಕಾಂ ಗತಾಮ್ ॥ ೩೧

ಘೋರರೂಪಸಮಾಚಾರಾಃ ಕ್ರೂರಾಃ ಕ್ರೂರತರೇಕ್ಷಣಾಃ ।
ರಾಕ್ಷಸ್ಯೋ ದಾರುಣಕಥಾ ವರಮೇತತ್ ಪ್ರಯಚ್ಛ ಮೇ ॥ ೩೨

---

ಮಾತಾಡುವುದು ನಿನಗೊಬ್ಬನಿಗೆ ಸಾಧ್ಯ. ವಾನರೋತ್ತಮ, ಪರಮ ಧಾರ್ಮಿಕನಾದ ನೀನು ವಾಯುದೇವನ ಶ್ಲಾಘನೀಯಪುತ್ರನಾಗಿದ್ದೀಯೆ (೨೬-೨೭). ಶ್ರಮಸಹಿಷ್ಣುತೆ, ಯುದ್ಧೋತ್ಸಾಹ, ವಿದ್ಯೆ, ಪರಾಕ್ರಮ, ಕಾರ್ಯದಕ್ಷತೆ, ತೇಜಸ್ಸು, ತಾಳ್ಮೆ, ಪ್ರಭಾವ, ಧೈರ್ಯ, ವಿನಯ-ಮುಂತಾದ ಮಹಾಗುಣಗಳು ನಿನ್ನಲ್ಲಿಯೇ ನೆಲೆಸಿವೆ" ಎಂದು ಹೇಳಿದಳು (೨೮). ಮೈಥಿಲಿಯ ಹೊಗಳಿಕೆಗೆ ಹನುಮಂತನು ಹಿಗ್ಗಲಿಲ್ಲ. ಅವನು ವಿನೀತನಾಗಿ ಕೈಮುಗಿದು ಉತ್ಸಾಹದಿಂದ ಹೀಗೆ ಪ್ರಾರ್ಥಿಸಿದನು: "ಅಮ್ಮ, ನೀನು ಒಪ್ಪುವುದಾದರೆ ಒಂದು ವಿಷಯವನ್ನು ಅರಿಕೆ ಮಾಡುತ್ತೇನೆ. ಈ ರಾಕ್ಷಸಿಯರು ನಿನ್ನನ್ನು ಹೆದರಿಸುತ್ತಿದ್ದರಲ್ಲವೆ? ಪತಿಯನ್ನೇ ದೇವರೆಂದು ನಂಬಿ ಈ ಅಶೋಕವನದಲ್ಲಿ ಪರಿತಪಿಸುತ್ತಿದ್ದ ನಿನ್ನನ್ನು ಇವರು ಬೆದರಿಸುತ್ತಿದ್ದರಲ್ಲವೆ? ಕ್ರೂರಾತ್ಮರಾದ ಈ ರಾಕ್ಷಸಿಯರೆಲ್ಲರನ್ನೂ ಕೊಲ್ಲಬೇಕೆಂದಿದ್ದೇನೆ! (೨೯-೩೧). ಇವರು ಘೋರರೂಪಿಗಳು; ಘೋರಕರ್ಮಿಗಳು. ಇವರ ಕಣ್ಣುಗಳು ಎಷ್ಟು ಕ್ರೂರವಾಗಿವೆ! ಈ ರಾಕ್ಷಸಿಯರು ನಿನಗೆ ಭೀಕರವಾದ ಮಾತುಗಳನ್ನಾಡುತ್ತಿದ್ದರು. ಇವರನ್ನು ಕೊಂದುಹಾಕುವೆನು! ದೇವಿ, ಇದೇ ನಾನು ಕೇಳಿಕೊಳ್ಳುವ ವರ! ಈ ವರವನ್ನು ಅನುಗ್ರಹಿಸು

ಮುಷ್ಟಿಭಿಃ ಪಾಣಿಭಿಃ ಸರ್ವಾಶ್ಚರಣೈಶ್ಚೈವ ಶೋಭನೇ ।
ಇಚ್ಛಾಮಿ ವಿವಿಧೈರ್ಘಾತೈರ್ಹಂತುಮೇತಾಃ ಸುದಾರುಣಾಃ ॥ ೩೩

ಘಾತೈರ್ಜಾನುಪ್ರಹಾರೈಶ್ಚ ದಶನಾನಾಂ ಚ ಪಾತನೈಃ ।
ಭಕ್ಷಣೈಃ ಕರ್ಣನಾಸಾನಾಂ ಕೇಶಾನಾಂ ಲುಂಚನೈಸ್ತಥಾ ॥ ೩೪

ನಖೈಃ ಶುಷ್ಕಮುಖೈಶ್ಚೈವ ದಾರಣೈರ್ಲಂಘನೈರ್ಹತೈಃ ।
ನಿಪಾತ್ಯ ಹಂತುಮಿಚ್ಛಾಮಿ ತವ ವಿಪ್ರಿಯಕಾರಿಣೀಃ ॥ ೩೫

ಏವಂಪ್ರಕಾರೈರ್ಬಹುಭಿರ್ವಿಪ್ರಕಾರೈರ್ಯಶಸ್ವಿನಿ ।
ಹಂತುಮಿಚ್ಛಾಮ್ಯಹಂ ದೇವಿ ತವೇಮಾಃ ಕೃತಕಿಲ್ಬಿಷಾಃ ॥ ೩೬

ಏವಮುಕ್ತಾ ಹನುಮತಾ ವೈದೇಹೀ ಜನಕಾತ್ಮಜಾ ।
ಉವಾಚ ಧರ್ಮಸಹಿತಂ ಹನುಮಂತಂ ಯಶಸ್ವಿನೀ ॥ ೩೭

ರಾಜಸಂಶ್ರಯವಶ್ಯಾನಾಂ ಕುರ್ವತೀನಾಂ ಪರಾಜ್ಞಯಾ ।
ವಿಧೇಯಾನಾಂ ಚ ದಾಸೀನಾಂ ಕಃ ಕುಪ್ಯೇದ್ವಾನರೋತ್ತಮ ॥ ೩೮

---

(೩೨). ಕಠೋರಸ್ವಭಾವದ ಈ ಕೆಟ್ಟ ರಾಕ್ಷಸಿಯರನ್ನು ಮುಷ್ಟಿಯಿಂದ ಗುದ್ದಿ, ಅಂಗೈಯಿಂದ ಚಚ್ಚಿ, ಕಾಲಿನಿಂದ ಒದೆದು, ಬಗೆಬಗೆಯಲ್ಲಿ ಕುಕ್ಕಿ ಸಾಯಿಸುವೆನು ! ಇವರನ್ನು ಮೊಳಕಾಲಿಂದ ತಿವಿದು, ಹಲ್ಲುಗಳನ್ನುದುರಿಸಿ, ಕಿವಿಮೂಗುಗಳನ್ನು ಕಚ್ಚಿ, ತಲೆಕೂದಲನ್ನು ಕಿತ್ತುಹಾಕುವೆನು! (೩೩-೩೪). ಇವರನ್ನು ಹರಿತವಾದ ಉಗುರುಗಳಿಂದ ಪರಚಿ, ಕೆನ್ನೆಕೆನ್ನೆಗೆ ಹೊಡೆದು, ಮೇಲಕ್ಕೆ ಹಾರಿಸಿ, ಬಡಿದು, ಬೀಳಿಸಿ ಕೊಲ್ಲಬೇಕೆಂದು ನನಗೆ ಇಚ್ಛೆಯಾಗಿದೆ! ನಿನಗೆ ಕೆಡಕುಮಾಡಿದ ಈ ಪಾಪಿಗಳನ್ನು ನಾನಾಬಗೆಯ ಚಿತ್ರಹಿಂಸೆಗಳಿಂದ ಸಾಯಿಸಬೇಕೆಂದು ಉದ್ದೇಶಿಸಿದ್ದೇನೆ. ದೇವಿ, ನನಗೆ ಅನುಮತಿಯನ್ನು ಕೊಡು ! " ಎಂದನು (೩೫-೩೬). ಹನುಮಂತನು ಹೀಗೆನ್ನಲು, ಜನಕನಂದಿನಿಯೂ ಕೀರ್ತಿಶಾಲಿನಿಯೂ ಆದ ವೈದೇಹಿಯು ಹೇಳಿದಳು : "ಅಪ್ಪಾ–ಹನುಮಂತ, ಇವರೆಲ್ಲರೂ ರಾಜನಿಗೆ ಅಧೀನರಾಗಿ ರಾಜಾಜ್ಞೆಯಂತೆ ನಡೆಯತಕ್ಕವರು. ಇನ್ನೊಬ್ಬರಿಗೆ ವಿಧೇಯರಾಗಿ ವರ್ತಿಸಬೇಕಾದ ದಾಸಿಯರು. ಇವರಮೇಲೆ ಯಾರಾದರೂ ಕೋಪಿಸಬಹುದೆ ? (೩೭-೩೮).

ಭಾಗ್ಯವೈಷಮ್ಯಯೋಗೇನ ಪುರಾ ದುಶ್ಚರಿತೇನ ಚ ।
ಮಯ್ಯೈತತ್ ಪ್ರಾಪ್ಯತೇ ಸರ್ವಂ ಸ್ವಕೃತಂ ಹ್ಯುಪಭುಜ್ಯತೇ ॥ ೩೯

ಪ್ರಾಪ್ತವ್ಯಂ ತು ದಶಾಯೋಗಾನ್ಮಯೈತದಿತಿ ನಿಶ್ಚಿತಮ್ ।
ದಾಸೀನಾಂ ರಾವಣಸ್ಯಾಹಂ ಮರ್ಷಯಾಮೀಹ ದುರ್ಬಲಾ ॥ ೪೦

ಆಜ್ಞಪ್ತಾ ರಾವಣೇನೈತಾ ರಾಕ್ಷಸ್ಯೋ ಮಾಮತರ್ಜಯನ್ ।
ಹತೇ ತಸ್ಮಿನ್ನ ಕುರ್ಯುರ್ಹಿ ತರ್ಜನಂ ವಾನರೋತ್ತಮ ॥ ೪೧

ಅಯಂ ವ್ಯಾಘ್ರಸಮೀಪೇ ತು ಪುರಾಣೋ ಧರ್ಮಸಂಹಿತಃ ।
ಋಕ್ಷೇಣ ಗೀತಃ ಶ್ಲೋಕೋ ಮೇ ತನ್ನಿಬೋಧ ಪ್ಲವಂಗಮ ॥ ೪೨

ನ ಪರಃ ಪಾಪಮಾದತ್ತೇ ಪರೇಷಾಂ ಪಾಪಕರ್ಮಣಾಮ್ ।
ಸಮಯೋ ರಕ್ಷಿತವ್ಯಸ್ತು ಸಂತಶ್ಚಾರಿತ್ರಭೂಷಣಾಃ ॥ ೪೩

---

ನನ್ನ ದುರ್ಭಾಗ್ಯದಿಂದ-ಯಾವುದೋ ನನ್ನ ಹಿಂದಿನ ದುಷ್ಕರ್ಮದಿಂದ, ನನಗೆ ಈ ಕಷ್ಟವು ಪ್ರಾಪ್ತವಾಯಿತು. ತನ್ನ ಕರ್ಮದ ಫಲವನ್ನು ತಾನು ಅನುಭವಿಸಬೇಕಲ್ಲವೆ? 'ಪ್ರಾರಬ್ಧದ ಪರಿಪಾಕದಿಂದ ಈ ಕಷ್ಟ ಬಂದಿದೆ' ಎಂದು ನಿಶ್ಚಯಿಸಿಕೊಂಡಿದ್ದೆನು. ಆದ್ದರಿಂದ ದೈವಬಲಹೀನಳಾದ ನಾನು ರಾವಣನ ದಾಸಿಯರು ಕೊಟ್ಟ ಕಿರುಕುಳವನ್ನು ಸಹಿಸಿಕೊಂಡಿದ್ದೇನೆ * (೩೯-೪೦). ರಾವಣನ ಆಜ್ಞೆಯಂತೆ ಈ ರಾಕ್ಷಸಿಯರು ನನ್ನನ್ನು ಹೆದರಿಸುತ್ತಿದ್ದರು. ಅವನು ಹತನಾದಮೇಲೆ, ವಾನರೋತ್ತಮ, ಇವರು ಎಂದಿಗೂ ನನ್ನನ್ನು ಹಿಂಸಿಸಲಾರರು. ಒಂದು ಕರಡಿಯು ಹುಲಿಗೆ ಹೇಳಿತೆಂಬ ಒಂದು ಪೌರಾಣಿಕ ಶ್ಲೋಕ ಉಂಟು. ನೀತಿಯುಕ್ತವಾದ ಆ ಸುಭಾಷಿತವನ್ನು ಕೇಳು (೪೧-೪೨): 'ತನಗೆ ಅಪಕಾರವನ್ನು ಮಾಡಿದವರಿಗೆ ಪ್ರಾಜ್ಞನಾದವನು ತಿರುಗಿ ಅಪಕಾರವನ್ನು ಮಾಡುವುದಿಲ್ಲ. ಸದಾಚಾರವನ್ನು ಅವಶ್ಯವಾಗಿ ಪಾಲಿಸಬೇಕು. ಸಜ್ಜನರಿಗೆ ಒಳ್ಳೆಯ ನಡತೆಯೇ ಭೂಷಣ †'(೪೩).

---

* 'ಕೃಪಾಪರವಶತೆಯಿಂದ ದುರ್ಬಲಳಾದ ನಾನು ಇವರ ಅಪರಾಧವನ್ನು ಮನ್ನಿಸುತ್ತೇನೆ' ಎಂದೂ ಅರ್ಥಮಾಡಬಹುದು.

† ಅನುಬಂಧವನ್ನು ನೋಡಿ.

**ಪಾಪಾನಾಂ ವಾ ಶುಭಾನಾಂ ವಾ ವಧಾರ್ಹಾಣಾಂ ಪ್ಲವಂಗಮ ।**
**ಕಾರ್ಯಂ ಕರುಣಮಾರ್ಯೇಣ ನ ಕಶ್ಚಿನ್ನಾಪರಾಧ್ಯತಿ ॥ ೪೪**

**ಲೋಕಹಿಂಸಾವಿಹಾರಾಣಾಂ ರಕ್ಷಸಾಂ ಕಾಮರೂಪಿಣಾಮ್ ।**
**ಕುರ್ವತಾಮಪಿ ಪಾಪಾನಿ ನೈವ ಕಾರ್ಯಮಶೋಭನಮ್ ॥ ೪೫**

**ಏವಮುಕ್ತಸ್ತು ಹನುಮಾನ್ ಸೀತಯಾ ವಾಕ್ಯಕೋವಿದಃ ।**
**ಪ್ರತ್ಯುವಾಚ ತತಃ ಸೀತಾಂ ರಾಮಪತ್ನೀಂ ಯಶಸ್ವಿನೀಮ್ ॥ ೪೬**

**ಯುಕ್ತಾ ರಾಮಸ್ಯ ಭವತೀ ಧರ್ಮಪತ್ನೀ ಯಶಸ್ವಿನೀ ।**
**ಪ್ರತಿಸಂದಿಶ ಮಾಂ ದೇವಿ ಗಮಿಷ್ಯೇ ಯತ್ರ ರಾಘವಃ ॥ ೪೭**

**ಏವಮುಕ್ತಾ ಹನುಮತಾ ವೈದೇಹೀ ಜನಕಾತ್ಮಜಾ ।**
**ಅಬ್ರವೀದ್ದ್ರಷ್ಟುಮಿಚ್ಛಾಮಿ ಭರ್ತಾರಂ ವಾನರೋತ್ತಮ ॥ ೪೮**

**ತಸ್ಯಾಸ್ತದ್ವಚನಂ ಶ್ರುತ್ವಾ ಹನುಮಾನ್ ಮಾರುತಾತ್ಮಜಃ ।**
**ಹರ್ಷಯನ್ ಮೈಥಿಲೀಂ ವಾಕ್ಯಮುವಾಚೇದಂ ಮಹಾದ್ಯುತಿಃ ॥ ೪೯**

---

ಹನುಮಂತ, ಜನರು ಕೆಟ್ಟವರಾಗಿರಲಿ ಒಳ್ಳೆಯವರಾಗಿರಲಿ ವಧಾರ್ಹರೇ ಆಗಿರಲಿ, ಅವರ ವಿಷಯದಲ್ಲಿ ಕರುಣೆಯನ್ನು ತೋರುವುದೇ ಸಜ್ಜನರ ಕರ್ತವ್ಯ. ಈ ಲೋಕದಲ್ಲಿ ತಪ್ಪುಮಾಡದವರು ಯಾರೂ ಇಲ್ಲ. ಕಾಮರೂಪಿಗಳಾದ ರಾಕ್ಷಸರಿಗೆ ಲೋಕಹಿಂಸೆಯು ಒಂದು ವಿನೋದವಾಗಿದೆ. ಪಾಪಕೃತ್ಯಗಳನ್ನೆಸಗಿದರೂ ಅವರಿಗೆ ಕೆಡಕುಮಾಡುವುದು ಯುಕ್ತವಲ್ಲ" ಎಂದಳು (೪೪–೪೫). ಸೀತಾದೇವಿಯು ಈ ಪರಿಯಾಗಿ ನುಡಿಯಲು ವಾಕ್ಯಕೋವಿದನಾದ ಹನುಮಂತನು ಕೀರ್ತಿಶಾಲಿನಿಯಾದ ಶ್ರೀರಾಮಪತ್ನಿಯನ್ನು ನೋಡಿ "ಅಮ್ಮ, ಶ್ರೀರಾಮಚಂದ್ರನಿಗೆ ಅನುರೂಪಳಾದ ಧರ್ಮಪತ್ನಿ ನೀನು! ನೀನೇ ಧನ್ಯಳು! ಈಗ ನಾನು ರಾಘವನಿದ್ದೆಡೆಗೆ ಹೋಗುವೆನು. ದೇವಿ, ನಿನ್ನ ಸಂದೇಶವನ್ನು ತಿಳಿಸು" ಎಂದು ನಿವೇದಿಸಿದನು (೪೬–೪೭). ಆಗ ಜಾನಕಿಯು "ವಾನರೋತ್ತಮ, ನನ ಸ್ವಾಮಿಯನ್ನು ನೋಡಲಿಚ್ಛಿಸುವೆನು" ಎಂದಿಷ್ಟೇ ಉತ್ತರಿಸಿದಳು. ಅದನ್ನು ಕೇಳಿ ಮಹಾತೇಜಸ್ವಿಯಾದ ವಾಯುಪುತ್ರನು ಮೈಥಿಲಿಗೆ ಹರ್ಷವಾಗುವಂತೆ "ಆರ್ಯೆ, ಶೀಘ್ರದಲ್ಲಿಯೇ ನಿನ್ನ ಸ್ವಾಮಿಯನ್ನು ನೋಡುವೆ!

ಪೂರ್ಣಚಂದ್ರಾನನಂ ರಾಮಂ ದ್ರಕ್ಷ್ಯಸ್ಯಾರ್ಯೇ ಸಲಕ್ಷ್ಮಣಮ್ ।
ಸ್ಥಿರಮಿತ್ರಂ ಹತಾಮಿತ್ರಂ ಶಚೀವ ತ್ರಿದಶೇಶ್ವರಮ್ ॥ ೫೦

ತಾಮೇವಮುಕ್ತ್ವಾ ರಾಜಂತೀಂ ಸೀತಾಂ ಸಾಕ್ಷಾದಿವ ಶ್ರಿಯಮ್ ।
ಆಜಗಾಮ ಮಹಾವೇಗೋ ಹನುಮಾನ್ ಯತ್ರ ರಾಘವಃ ॥ ೫೧

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷೋಡಶೋತ್ತರಶತತಮಃ ಸರ್ಗಃ



ಪೂರ್ಣಚಂದ್ರಾನನನಾದ ಶ್ರೀರಾಮನು ಲಕ್ಷ್ಮಣಸಮೇತನಾಗಿರುವುದನ್ನು ಕಾಣುವೆ! ಸ್ಥೈರ್ಯಶಾಲಿಗಳಾದ ಮಿತ್ರರಿಂದೊಡಗೂಡಿ ಶತ್ರುಗಳನ್ನು ತುಳಿದಿರುವ ಆ ವೀರಾಗ್ರಣಿಯನ್ನು, ಶಚೀದೇವಿಯು ದೇವೇಂದ್ರನ ಬಳಿಗೆ ಬಂದಂತೆ ಬಂದು ವೀಕ್ಷಿಸುವೆ!" ಎಂದನು (೪೮-೫೦). ಪ್ರತ್ಯಕ್ಷಳಾದ ಮಹಾಲಕ್ಷ್ಮಿಯೋ ಎಂಬಂತೆ ಕಂಗೊಳಿಸುತ್ತಿದ್ದ ವೈದೇಹಿಗೆ ಈ ಮಾತನ್ನು ಹೇಳಿ, ಹನುಮಂತನು ಶ್ರೀರಾಮನಿದ್ದ ಸ್ಥಳಕ್ಕೆ ತ್ವರೆಯಿಂದ ಬಂದನು (೫೧).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹದಿನಾರನೆಯ ಸರ್ಗ



## ಸಪ್ತದಶೋತ್ತರಶತತಮಃ ಸರ್ಗಃ

### ಸೀತಾಭರ್ತೃಮುಖೋದೀಕ್ಷಣಮ್

ಸ ಉವಾಚ ಮಹಾಪ್ರಾಜ್ಞಮಭಿಗಮ್ಯ ಪ್ಲವಂಗಮಃ ।
ರಾಮಂ ವಚನಮರ್ಥಜ್ಞೋ ವರಂ ಸರ್ವಧನುಷ್ಮತಾಮ್ ॥ ೧

ಯನ್ನಿಮಿತ್ತೋಽಯಮಾರಂಭಃ ಕರ್ಮಣಾಂ ಚ ಫಲೋದಯಃ ।
ತಾಂ ದೇವೀಂ ಶೋಕಸಂತಪ್ತಾಂ ಮೈಥಿಲೀಂ ದ್ರಷ್ಟುಮರ್ಹಸಿ ॥ ೨

ಸಾ ಹಿ ಶೋಕಸಮಾವಿಷ್ಟಾ ಬಾಷ್ಪಪರ್ಯಾಕುಲೇಕ್ಷಣಾ ।
ಮೈಥಿಲೀ ವಿಜಯಂ ಶ್ರುತ್ವಾ ತವ ಹರ್ಷಮುಪಾಗಮತ್ ॥ ೩

ಪೂರ್ವಕಾತ್ ಪ್ರತ್ಯಯಾಚ್ಚಾಹಮುಕ್ತೋ ವಿಶ್ವಸ್ತಯಾ ತಯಾ ।
ಭರ್ತಾರಂ ದ್ರಷ್ಟುಮಿಚ್ಛಾಮಿ ಕೃತಾರ್ಥಂ ಸಹಲಕ್ಷ್ಮಣಮ್ ॥ ೪

### ಸರ್ಗ ೧೧೭

ವಿಭೀಷಣನು ಸೀತಾದೇವಿಗೆ ಸ್ನಾನಾಲಂಕಾರಾದಿಗಳನ್ನು ಮಾಡಿಸಿ ಶ್ರೀರಾಮನ ಬಳಿಗೆ ಕರೆತರುವುದು. ಅವಳು ನಾಚುತ್ತ ಶ್ರೀರಾಮನನ್ನು ನೋಡುವುದು.

ಕಾರ್ಯಜ್ಞನಾದ ಆ ವಾನರೋತ್ತಮನು ಮಹಾಪ್ರಾಜ್ಞನೂ ಧನುರ್ಧಾರಿಗಳಲ್ಲಿ ಅಗ್ರಗಣ್ಯನೂ ಆದ ಶ್ರೀರಾಮನ ಸಮೀಪಕ್ಕೆ ಬಂದು "ಶ್ರೀರಾಮ, ಯಾರಿಗೋಸ್ಕರ ಈ ಮಹೋದ್ಯೋಗದಲ್ಲಿ ತೊಡಗಿದೆಯೋ, ಯಾರಿಗೋಸ್ಕರ ನಮ್ಮ ಕಾರ್ಯಗಳೆಲ್ಲವೂ ಫಲಿಸಿದವೋ ಆ ದೇವಿಯನ್ನು ನೀನು ನೋಡಬೇಕು! ಶೋಕದಿಂದ ಬಳಲಿ ಬೆಂಡಾಗಿರುವ ಮೈಥಿಲಿಗೆ ದರ್ಶನವನ್ನು ಕೊಡು (೧–೨). ದುಃಖದಲ್ಲಿ ಮುಳುಗಿ ಕಣ್ಣೀರು ಹರಿಸುತ್ತಿದ್ದ ಮೈಥಿಲಿಯು, ಶ್ರೀರಾಮ, ನಿನ್ನ ವಿಜಯವಾರ್ತೆಯನ್ನು ಕೇಳಿ ಆನಂದದಲ್ಲಿ ಮುಳುಗಿದಳು. ಹಿಂದೆ ನನ್ನನ್ನು ನೋಡಿ ಬಲ್ಲವಳಾದ್ದರಿಂದ ನಿನ್ನ ಧರ್ಮಪತ್ನಿಯು ನನ್ನಲ್ಲಿ ಪೂರ್ಣವಾದ ನಂಬಿಕೆಯನ್ನಿಟ್ಟು, 'ವಿಜಯಶಾಲಿಯಾಗಿ ಕೃತಕೃತ್ಯನಾದ ನನ್ನ ಸ್ವಾಮಿಯನ್ನೂ ಲಕ್ಷ್ಮಣನನ್ನೂ ನೋಡಲಿಚ್ಛಿಸುವೆನು' ಎಂದಳು" ಎಂಬುದಾಗಿ ತಿಳಿಸಿದನು (೩–೪).

ಏವಮುಕ್ತೋ ಹನುಮತಾ ರಾಮೋ ಧರ್ಮಭೃತಾಂ ವರಃ ।
ಅಗಚ್ಛತ್ ಸಹಸಾ ಧ್ಯಾನಮೀಷದ್ಬಾಷ್ಪಪರಿಪ್ಲುತಃ ॥ ೫

ದೀರ್ಘಮುಷ್ಣಂ ವಿನಿಃಶ್ವಸ್ಯ ಮೇದಿನೀಮವಲೋಕಯನ್ ।
ಉವಾಚ ಮೇಘಸಂಕಾಶಂ ವಿಭೀಷಣಮುಪಸ್ಥಿತಮ್ ॥ ೬

ದಿವ್ಯಾಂಗರಾಗಾಂ ವೈದೇಹೀಂ ದಿವ್ಯಾಭರಣಭೂಷಿತಾಮ್ ।
ಇಹ ಸೀತಾಂ ಶಿರಃಸ್ನಾತಾಮುಪಸ್ಥಾಪಯ ಮಾ ಚಿರಮ್ ॥ ೭

ಏವಮುಕ್ತಸ್ತು ರಾಮೇಣ ತ್ವರಮಾಣೋ ವಿಭೀಷಣಃ ।
ಪ್ರವಿಶ್ಯಾಂತಃಪುರಂ ಸೀತಾಂ ಸ್ವಾಭಿಃ ಸ್ತ್ರೀಭಿರಚೋದಯತ್ ॥ ೮

ದಿವ್ಯಾಂಗರಾಗಾ ವೈದೇಹಿ ದಿವ್ಯಾಭರಣಭೂಷಿತಾ ।
ಯಾನಮಾರೋಹ ಭದ್ರಂ ತೇ ಭರ್ತಾ ತ್ವಾಂ ದ್ರಷ್ಟುಮಿಚ್ಛತಿ ॥ ೯

ಏವಮುಕ್ತಾ ತು ವೈದೇಹೀ ಪ್ರತ್ಯುವಾಚ ವಿಭೀಷಣಮ್ ।
ಅಸ್ನಾತಾ ದ್ರಷ್ಟುಮಿಚ್ಛಾಮಿ ಭರ್ತಾರಂ ರಾಕ್ಷಸಾಧಿಪ ॥ ೧೦

---

ಹನುಮಂತನ ನುಡಿಯನ್ನು ಕೇಳಿದೊಡನೆ, ಧಾರ್ಮಿಕೋತ್ತಮನಾದ ಶ್ರೀರಾಮನು ಚಿಂತಾಕುಲನಾಗಿ ಧ್ಯಾನಸ್ಥನಾದನು. ಕಣ್ಣೀರು ತುಳುಕಿತು. ಆಮೇಲೆ ಶ್ರೀರಾಮನು ದೀರ್ಘವಾಗಿ ಬಿಸುಸುಯ್ದು ತಲೆಬಗ್ಗಿಸಿ ನೆಲವನ್ನು ನೋಡುತ್ತ, ತನ್ನ ಬಳಿಯಲ್ಲಿದ್ದ ಮೇಘಸಂಕಾಶನಾದ ವಿಭೀಷಣನನ್ನು ಕುರಿತು "ವಿಭೀಷಣ, ಸೀತೆಗೆ ಅಭ್ಯಂಗಸ್ನಾನವನ್ನು ಮಾಡಿಸಿ ದಿವ್ಯಾಂಗ ರಾಗವನ್ನು ಲೇಪಿಸಿ ದಿವ್ಯಾಭರಣಗಳಿಂದ ಅಲಂಕರಿಸಿ ಇಲ್ಲಿಗೆ ಕರೆದುಕೊಂಡು ಬಾ! ತಡಮಾಡಬೇಡ" ಎಂದನು (೫-೭). ಒಡನೆಯೇ ವಿಭೀಷಣನು ಲಂಕೆಗೆ ಹೋಗಿ ಅಂತಃಪುರವನ್ನು ಪ್ರವೇಶಿಸಿ, ಅಲ್ಲಿದ್ದ ತನ್ನ ಸ್ತ್ರೀಯರ ಮೂಲಕ ಸೀತಾದೇವಿಗೆ "ವೈದೇಹಿ, ನಿನಗೆ ಶುಭವಾಗಲಿ. ಈಗಲೇ ನೀನು ಸ್ನಾನವನ್ನು ಮಾಡಿ ದಿವ್ಯಾನುಲೇಪನಗಳಿಂದಲೂ ದಿವ್ಯಾಭರಣಗಳಿಂದಲೂ ಭೂಷಿತಳಾಗಿ ಪಲ್ಲಕ್ಕಿಯನ್ನೇರು. ನಿನ್ನ ಪತಿಯು ನಿನ್ನನ್ನು ನೋಡ ಬೇಕೆಂದಿರುವನು" ಎಂದು ತಿಳಿಸಿದನು (೮-೯). ಆಗ ವೈದೇಹಿಯು "ರಾಕ್ಷಸೇಂದ್ರ, ನಾನು ಸ್ನಾನಮಾಡದೆ ಈ ಸ್ಥಿತಿಯಲ್ಲಿಯೇ ನನ್ನ ಸ್ವಾಮಿ

ತಸ್ಯಾಸ್ತದ್ವಚನಂ ಶ್ರುತ್ವಾ ಪ್ರತ್ಯುವಾಚ ವಿಭೀಷಣಃ ।
ಯದಾಹ ರಾಜಾ ಭರ್ತಾ ತೇ ತತ್ತಥಾ ಕರ್ತುಮರ್ಹಸಿ ॥ ೧೧

ತಸ್ಯ ತದ್ವಚನಂ ಶ್ರುತ್ವಾ ಮೈಥಿಲೀ ಭರ್ತೃದೇವತಾ ।
ಭರ್ತೃಭಕ್ತ್ಯಾವೃತಾ ಸಾಧ್ವೀ ತಥೇತಿ ಪ್ರತ್ಯಭಾಷತ ॥ ೧೨

ತತಃ ಸೀತಾಂ ಶಿರಃಸ್ನಾತಾಂ ಯುವತೀಭಿರಲಂಕೃತಾಮ್ ।
ಮಹಾರ್ಹಾಭರಣೋಪೇತಾಂ ಮಹಾರ್ಹಾಂಬರಧಾರಿಣೀಮ್ ॥ ೧೩

ಆರೋಪ್ಯ ಶಿಬಿಕಾಂ ದೀಪ್ತಾಂ ಪರಾರ್ಧ್ಯಾಂಬರಸಂವೃತಾಮ್ ।
ರಕ್ಷೋಭಿರ್ಬಹುಭಿರ್ಗುಪ್ತಾಮಾಜಹಾರ ವಿಭೀಷಣಃ ॥ ೧೪

ಸೋಽಭಿಗಮ್ಯ ಮಹಾತ್ಮಾನಂ ಜ್ಞಾತ್ವಾಪಿ ಧ್ಯಾನಮಾಸ್ಥಿತಮ್ ।
ಪ್ರಣತಶ್ಚ ಪ್ರಹೃಷ್ಟಶ್ಚ ಪ್ರಾಪ್ತಾಂ ಸೀತಾಂ ನ್ಯವೇದಯತ್ ॥ ೧೫

---

ಯನ್ನು ನೋಡಲಿಚ್ಛಿಸುತ್ತೇನೆ" ಎಂದು ತಿಳಿಸಿದಳು. ಆಗ ವಿಭೀಷಣನು "ದೇವಿ, ನಮ್ಮೆಲ್ಲರಿಗೆ ಪ್ರಭುವೂ ನಿನ್ನ ಪತಿಯೂ ಆದ ಶ್ರೀರಾಮನ ಆಜ್ಞೆ ಆ ರೀತಿಯಲ್ಲಿದೆ. ಅದರಂತೆ ನಡೆಯುವುದು ಯುಕ್ತ" ಎಂದನು (೧೦-೧೧). ವಿಭೀಷಣನ ಆ ಮಾತನ್ನು ಕೇಳಿದಾಗ ಪತಿಯನ್ನು ದೇವತೆಯೆಂದು ತಿಳಿದಿದ್ದ ಮೈಥಿಲಿಯು ಒಪ್ಪಿದಳು. ಪತಿಭಕ್ತಿನಿರತಳಾದ ಆ ಸಾಧ್ವಿಯು 'ಆಗಲಿ' ಎಂದಳು. ಆಮೇಲೆ ವಿಭೀಷಣನು ತನ್ನ ಅಂತಃಪುರದಲ್ಲಿದ್ದ ಯುವತಿಯರ ಮೂಲಕವಾಗಿ ಮೈಥಿಲಿಗೆ ಸ್ನಾನವನ್ನು ಮಾಡಿಸಿ, ಗಂಧಪುಷ್ಪಾದಿಗಳಿಂದ ಅಲಂಕರಿಸಿ, ದಿವ್ಯದುಕೂಲವನ್ನುಡಿಸಿ, ದಿವ್ಯಾಭರಣಗಳನ್ನು ತೊಡಿಸಿ, ಶ್ರೇಷ್ಠವಾದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿದನು (೧೨-೧೩). ಆ ವಾಹನಕ್ಕೆ ದಿವ್ಯವಸ್ತ್ರವನ್ನು ಜವನಿಕೆ*ಯಾಗಿ ಬಳಸಲಾಗಿತ್ತು. ಅನಂತರ ಬಹುಮಂದಿ ಅಂಗರಕ್ಷಕರಾದ ರಾಕ್ಷಸರ ಕಾವಲಿನೊಡನೆ, ವಿಭೀಷಣನು ಆ ಪಲ್ಲಕ್ಕಿಯನ್ನು ಶ್ರೀರಾಮನ ಬಳಿಗೆ ಹೊರಿಸಿಕೊಂಡು ಬಂದನು. ವಿಭೀಷಣನು ಹತ್ತಿರ ಬಂದುದು ತಿಳಿದರೂ ಶ್ರೀರಾಮನು ಚಿಂತಾಪರನಾಗಿ ಅನ್ಯಮನಸ್ಕನಾಗಿದ್ದನು. ವಿಭೀಷಣನು ಆತನಿಗೆ ನಮಸ್ಕರಿಸಿ, ಸೀತಾದೇವಿಯು

---

* ಜವನಿಕೆ=ಪರದೆ.

ತಾಮಾಗತಾಮುಪಶ್ರುತ್ಯ ರಕ್ಷೋಗೃಹಚಿರೋಷಿತಾಮ್ ।
ಹರ್ಷೋ ದೈನ್ಯಂ ಚ ರೋಷಶ್ಚ ತ್ರಯಂ ರಾಘವಮಾವಿಶತ್ ॥ ೧೬

ತತಃ ಪಾರ್ಶ್ವಗತಂ ದೃಷ್ಟ್ವಾ ಸವಿಮರ್ಶಂ ವಿಚಾರಯನ್ ।
ವಿಭೀಷಣಮಿದಂ ವಾಕ್ಯಮಹೃಷ್ಟಂ ರಾಘವೋಽಬ್ರವೀತ್ ॥ ೧೭

ರಾಕ್ಷಸಾಧಿಪತೇ ಸೌಮ್ಯ ನಿತ್ಯಂ ಮದ್ವಿಜಯೇ ರತ ।
ವೈದೇಹೀ ಸನ್ನಿಕರ್ಷಂ ಮೇ ಶೀಘ್ರಂ ಸಮುಪಗಚ್ಛತು ॥ ೧೮

ಸ ತದ್ವಚನಮಾಜ್ಞಾಯ ರಾಘವಸ್ಯ ವಿಭೀಷಣಃ ।
ತೂರ್ಣಮುತ್ಸಾರಣೇ ಯತ್ನಂ ಕಾರಯಾಮಾಸ ಸರ್ವತಃ ॥ ೧೯

ಕಂಚುಕೋಷ್ಣೀಷಿಣಸ್ತತ್ರ ವೇತ್ರಜರ್ಜರಪಾಣಯಃ ।
ಉತ್ಸಾರಯಂತಃ ಪುರುಷಾಃ ಸಮಂತಾತ್ ಪರಿಚಕ್ರಮುಃ ॥ ೨೦

ಋಕ್ಷಾಣಾಂ ವಾನರಾಣಾಂ ಚ ರಾಕ್ಷಸಾನಾಂ ಚ ಸರ್ವಶಃ ।
ವೃಂದಾನ್ಯುತ್ಸಾರ್ಯಮಾಣಾನಿ ದೂರಮುತ್ಸಸೃಜುಸ್ತದಾ ॥ ೨೧

---

ಬಂದಿರುವಳೆಂದು ಸಂತೋಷದಿಂದ ನಿವೇದಿಸಿದನು (೧೪–೧೫). ರಾಕ್ಷಸ ನಿವಾಸದಲ್ಲಿ ದೀರ್ಘಕಾಲವಿದ್ದ ಸೀತೆಯು ಬಂದಳೆಂಬುದನ್ನು ಕೇಳಿ, ರಾಘವನಿಗೆ ಹರ್ಷ, ಮರುಕ, ರೋಷ–ಇವು ಮೂರೂ ಏಕಕಾಲದಲ್ಲುಂಟಾದವು (೧೬). ಆಗ ರಾಘವನು ಯುಕ್ತಾಯುಕ್ತಗಳೇನೆಂಬುದನ್ನು ತನ್ನಲ್ಲಿಯೇ ಪರ್ಯಾಲೋಚಿಸಿ, ಪಾರ್ಶ್ವದಲ್ಲಿ ಖಿನ್ನನಾಗಿ ನಿಂತಿದ್ದ ವಿಭೀಷಣನನ್ನು ನೋಡಿ "ಸೌಮ್ಯ–ರಾಕ್ಷಸೇಶ್ವರ, ನನಗೆ ವಿಜಯವಾಗಲೆಂದು ಸದಾ ನಿರತನಾದವನು ನೀನು. ವೈದೇಹಿಯು ನನ್ನೆದುರಿಗೆ ಕೂಡಲೆ ಬರಲಿ!" ಎಂದು ಹೇಳಿದನು (೧೭–೧೮). ಆಗ ವಿಭೀಷಣನು ವೈದೇಹಿಯ ಆಗಮನಕ್ಕೆ ಸೌಕರ್ಯವನ್ನು ಕಲ್ಪಿಸುವುದಕ್ಕಾಗಿ, ಅಲ್ಲಿ ನೆರೆದವರನ್ನು ದೂರ ಸರಿಸುವಂತೆ ಭೃತ್ಯರಿಗೆ ಆಜ್ಞೆಮಾಡಿದನು. ಕೂಡಲೆ ಕವಚಧಾರಿಗಳಾಗಿ ಕೆಂಪು ಮುಂಡಾಸನ್ನು ಸುತ್ತಿದ್ದ ರಾಜಭಟರು, ಕೈಯಲ್ಲಿದ್ದ ಬೆತ್ತಗಳನ್ನು ಬೀಸಿ, ಜರ್ಜರ ಶಬ್ದಮಾಡುತ್ತ ನೆರೆದವರನ್ನು ತಳ್ಳಿ ದಾರಿ ಬಿಡಿಸುತ್ತ ಸಂಚರಿಸಿದರು (೧೯–೨೦). ಅಲ್ಲಿ ಸೇರಿದ್ದ ಭಲ್ಲೂಕ ವಾನರ ರಾಕ್ಷಸರು ಗುಂಪು

**ತೇಷಾಮುತ್ಸಾರ್ಯಮಾಣಾನಾಂ ಸರ್ವೇಷಾಂ ಧ್ವನಿರುತ್ಥಿತಃ ।**
**ವಾಯುನೋದ್ವರ್ತಮಾನಸ್ಯ ಸಾಗರಸ್ಯೇವ ನಿಃಸ್ವನಃ ॥ ೨೨**

**ಉತ್ಸಾರ್ಯಮಾಣಾಂಸ್ತಾನ್ ದೃಷ್ಟ್ವಾ ಸಮಂತಾಜ್ಜಾತಸಂಭ್ರಮಾನ್**
**ದಾಕ್ಷಿಣ್ಯಾತ್ತದಮರ್ಷಾಚ್ಚ ವಾರಯಾಮಾಸ ರಾಘವಃ ॥ ೨೩**

**ಸಂರಬ್ಧಶ್ಚಾಬ್ರವೀದ್ರಾಮಶ್ಚಕ್ಷುಷಾ ಪ್ರದಹನ್ನಿವ ।**
**ವಿಭೀಷಣಂ ಮಹಾಪ್ರಾಜ್ಞಂ ಸೋಪಾಲಂಭಮಿದಂ ವಚಃ ॥ ೨೪**

**ಕಿಮರ್ಥಂ ಮಾಮನಾದೃತ್ಯ ಕ್ಲಿಶ್ಯತೇಽಯಂ ತ್ವಯಾ ಜನಃ ।**
**ನಿವರ್ತಯೈನಮುದ್ವೇಗಂ ಜನೋಽಯಂ ಸ್ವಜನೋ ಮಮ ॥ ೨೫**

**ನ ಗೃಹಾಣಿ ನ ವಸ್ತ್ರಾಣಿ ನ ಪ್ರಾಕಾರಾಸ್ತಿರಸ್ಕ್ರಿಯಾಃ ।**
**ನೇದೃಶಾ ರಾಜಸತ್ಕಾರಾ ವೃತ್ತಮಾವರಣಂ ಸ್ತ್ರಿಯಾಃ ॥ ೨೬**

**ವ್ಯಸನೇಷು ನ ಕೃಚ್ಛ್ರೇಷು ನ ಯುದ್ಧೇಷು ಸ್ವಯಂವರೇ ।**
**ನ ಕ್ರತೌ ನ ವಿವಾಹೇ ಚ ದರ್ಶನಂ ದುಷ್ಯತಿ ಸ್ತ್ರಿಯಾಃ ॥ ೨೭**

---

ಗುಂಪಾಗಿ ದೂರದವರೆಗೆ ತಳ್ಳಲ್ಪಟ್ಟರು. ಅವರೆಲ್ಲರೂ ದೂರ ಸರಿಯುವಾಗ, ಬಿರುಗಾಳಿಯಿಂದ ಉಜ್ಜೃಂಭಿಸುವ ಸಮುದ್ರದ ಘೋಷದಂತೆ ದೊಡ್ಡ ಗದ್ದಲ ಉಂಟಾಯಿತು (೨೧–೨೨). ಎಲ್ಲೆಲ್ಲಿಯೂ ಉದ್ವಿಗ್ನರಾದ ವಾನರಾದಿಗಳು ತಳ್ಳಲ್ಪಡುತ್ತಿರುವುದನ್ನು ಕಂಡು, ಅವರಮೇಲಿನ ಕರುಣೆಯಿಂದ ಅದನ್ನು ಸಹಿಸಲಾರದೆ ರಾಘವನು ಕುಪಿತನಾದನು. ಧೀಮಂತನಾದ ವಿಭೀಷಣನನ್ನು ಕೆಂಗಣ್ಣಿನಿಂದ ನೋಡುತ್ತ ಅವನನ್ನು ಆಕ್ಷೇಪಿಸಿದನು (೨೩–೨೪): "ವಿಭೀಷಣ, ಏನು ಕೆಲಸವಿದು? ನನ್ನನ್ನು ಕೇಳದೆ ಇವರಿಗೆ ತೊಂದರೆಯನ್ನೇಕೆ ಕೊಡುತ್ತಿದ್ದೀಯೆ? ನಿಲ್ಲಿಸು ಈ ಕಾರ್ಯವನ್ನು. ಇವರೆಲ್ಲರೂ ನನ್ನ ಬಳಗ. ಸ್ತ್ರೀಯರಿಗೆ ನಡತೆಯೇ ಆವರಣ, ಈ ಬಗೆಯ ರಾಜಮರ್ಯಾದೆಗಳಲ್ಲ! ಮನೆಗಳಾಗಲಿ, ದಿವ್ಯವಸ್ತ್ರಗಳಾಗಲಿ, ಸುತ್ತಲಿರುವ ಕೋಟೆಗಳಾಗಲಿ, ಮೇಲುಮುಸುಕುಗಳಾಗಲಿ – ಸ್ತ್ರೀಯರ ಮರ್ಯಾದೆಯನ್ನು ರಕ್ಷಿಸಲಾರವು! (೨೫–೨೬). ಅಲ್ಲದೆ ದುಃಖಕಾಲದಲ್ಲಿ, ವಿಪತ್ತಿನ ಸಂದರ್ಭದಲ್ಲಿ, ಯುದ್ಧಭೂಮಿಯಲ್ಲಿ ಮತ್ತು ಸ್ವಯಂವರ ಸಭೆಯಲ್ಲಿ ಮಹಿಳೆಯರು ಪರಪುರುಷನಿಗೆ ಕಾಣಿಸಿಕೊಂಡರೆ ತಪ್ಪಿಲ್ಲ. ಯಜ್ಞ

ಸೈಷಾ ಯುದ್ಧಗತಾ ಚೈವ ಕೃಚ್ಛ್ರೇ ಚ ಮಹತಿ ಸ್ಥಿತಾ ।
ದರ್ಶನೇಽಸ್ಯಾ ನ ದೋಷಃ ಸ್ಯಾನ್ಮತ್ಸಮೀಪೇ ವಿಶೇಷತಃ ॥ ೨೮

ತದಾನಯ ಸಮೀಪಂ ಮೇ ಶೀಘ್ರಮೇನಾಂ ವಿಭೀಷಣ ।
ಸೀತಾ ಪಶ್ಯತು ಮಾಮೇಷಾ ಸುಹೃದ್ಗಣವೃತಂ ಸ್ಥಿತಮ್ ॥ ೨೯

ಏವಮುಕ್ತಸ್ತು ರಾಮೇಣ ಸವಿಮರ್ಶೋ ವಿಭೀಷಣಃ ।
ರಾಮಸ್ಯೋಪಾನಯತ್ ಸೀತಾಂ ಸನ್ನಿಕರ್ಷಂ ವಿನೀತವತ್ ॥ ೩೦

ತತೋ ಲಕ್ಷ್ಮಣಸುಗ್ರೀವೌ ಹನುಮಾಂಶ್ಚ ಪ್ಲವಂಗಮಃ ।
ನಿಶಮ್ಯ ವಾಕ್ಯಂ ರಾಮಸ್ಯ ಬಭೂವುರ್ವ್ಯಥಿತಾ ಭೃಶಮ್ ॥ ೩೧

ಕಲತ್ರನಿರಪೇಕ್ಷೈಶ್ಚ ಇಂಗಿತೈರಸ್ಯ ದಾರುಣೈಃ ।
ಅಪ್ರೀತಮಿವ ಸೀತಾಯಾಂ ತರ್ಕಯಂತಿ ಸ್ಮ ರಾಘವಮ್ ॥ ೩೨

ಲಜ್ಜಯಾ ತ್ವವಲೀಯಂತೀ ಸ್ವೇಷು ಗಾತ್ರೇಷು ಮೈಥಿಲೀ ।
ವಿಭೀಷಣೇನಾನುಗತಾ ಭರ್ತಾರಂ ಸಾಭ್ಯವರ್ತತ ॥ ೩೩

---

ಮತ್ತು ವಿವಾಹದ ಸಂದರ್ಭಗಳಲ್ಲಿಯೂ ಅನ್ಯರ ದರ್ಶನವು ದೋಷಾವಹವಲ್ಲ (೨೭). ಸೀತೆಯು ಯುದ್ಧಭೂಮಿಯಲ್ಲಿರುವುದಲ್ಲದೆ ಮಹತ್ತರವಾದ ವಿಪತ್ತಿನಲ್ಲಿದ್ದಾಳೆ. ಅದರಲ್ಲಿಯೂ ನನ್ನೆದುರಿನಲ್ಲಿ ಅವಳನ್ನು ಜನರು ನೋಡಿದರೆ ಯಾವ ದೋಷವೂ ಇಲ್ಲ. ಆದ್ದರಿಂದ, ವಿಭೀಷಣ, ಆಕೆಯನ್ನು ಶೀಘ್ರವಾಗಿ ಕರೆದುಕೊಂಡುಬಾ. ಮಿತ್ರಪರಿವಾರದೊಡನೆ ನಿಂತಿರುವ ನನ್ನನ್ನು ಸೀತೆಯು ಯಾವ ಸಂಕೋಚವೂ ಇಲ್ಲದೆ ಸಂದರ್ಶಿಸಲಿ!" ಎಂದನು (೨೮-೨೯). ರಾಘವನ ಆಶಯವೇನಿರಬಹುದೆಂದು ತರ್ಕಿಸುತ್ತ ವಿಭೀಷಣನು ಚಿಂತಾಕುಲನಾದನು. ಆದರೂ ಅವನ ಆದೇಶದಂತೆ ವಿನೀತನಾಗಿ ವೈದೇಹಿಯನ್ನು ಕರೆತರಲು ಹೋದನು. ಶ್ರೀರಾಮನ ಮಾತಿನ ಧಾಟಿಯನ್ನು ಕೇಳಿ ಲಕ್ಷ್ಮಣಸುಗ್ರೀವರೂ ಹನುಮಂತನೂ ಬಹಳ ವ್ಯಥೆಪಟ್ಟರು (೩೦-೩೧). ಪತ್ನಿಯಲ್ಲಿ ಉಪೇಕ್ಷೆಯನ್ನು ಸೂಚಿಸುವ ದಾರುಣವಾದ ರಾಘವನ ಮುಖಭಾವಗಳಿಂದ "ಅಯ್ಯೋ, ವೈದೇಹಿಯ ವಿಷಯದಲ್ಲಿ ಇವನಿಗೆ ಅಸಮಾಧಾನವಾಗಿದೆ" ಎಂದು ಅವರು ಊಹಿಸಿದರು (೩೨). ಅನಂತರ ವಿಭೀಷಣನಿಂದ ಹಿಂಬಾಲಿಸಲ್ಪಟ್ಟವಳಾಗಿ ಮೈಥಿಲಿಯು

ಸಾ ವಸ್ತ್ರಸಂರುದ್ಧಮುಖೀ ಲಜ್ಜಯಾ ಜನಸಂಸದಿ ।
ರುರೋದಾಸಾದ್ಯ ಭರ್ತಾರಮಾರ್ಯಪುತ್ರೇತಿ ಭಾಷಿಣೀ ॥ ೩೪

ವಿಸ್ಮಯಾಚ್ಚ ಪ್ರಹರ್ಷಾಚ್ಚ ಸ್ನೇಹಾಚ್ಚ ಪತಿದೇವತಾ ।
ಉದೈಕ್ಷತ ಮುಖಂ ಭರ್ತುಃ ಸೌಮ್ಯಂ ಸೌಮ್ಯತರಾನನಾ ॥ ೩೫

ಅಥ ಸಮಪನುದನ್ಮನಃಕ್ಲಮಂ ಸಾ
ಸುಚಿರಮದೃಷ್ಟಮುದೀಕ್ಷ್ಯ ವೈ ಪ್ರಿಯಸ್ಯ ।
ವದನಮುದಿತಪೂರ್ಣಚಂದ್ರಕಾಂತಂ
ವಿಮಲಶಶಾಂಕನಿಭಾನನಾ ತದಾನೀಮ್ ॥ ೩೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತದಶೋತ್ತರಶತತಮಃ ಸರ್ಗಃ



ಬಂದಳು. ಲಜ್ಜೆಯಿಂದ ತನ್ನ ಗಾತ್ರಗಳಲ್ಲಿಯೇ ಅಡಗಿಹೋಗುವಳೋ ಎಂಬಂತೆ ನಾಚುತ್ತ ಪತಿಯ ಸನ್ನಿಧಿಗೆ ಬಂದಳು (೩೩). ನೆರೆದಿದ್ದ ಜನರೆದುರಿಗೆ ನಾಚುತ್ತ ಅವಳು ಸೆರಗಿನಿಂದ ಮುಖವನ್ನು ಮರೆಸಿಕೊಂಡು ಪತಿಯ ಸಮೀಪಕ್ಕೆ ಬಂದು, 'ಆರ್ಯಪುತ್ರ' ಎಂದು ಹೇಳಿ ಅಳತೊಡಗಿದಳು. ಪತಿಯನ್ನೇ ದೇವತೆಯೆಂದು ನಂಬಿದ್ದ ಆ ಸಾಧ್ವಿಯು ವಿಸ್ಮಯ, ಹರ್ಷ, ಪ್ರೇಮ – ಇವುಗಳ ಸಮ್ಮಿಶ್ರಣದಿಂದ ಭಾವವಶಳಾಗಿ, ಪ್ರಸನ್ನವಾಗಿ ಅರಳಿದ ಮುಖವನ್ನೆತ್ತಿ, ತನ್ನ ಸ್ವಾಮಿಯ ಸೌಮ್ಯವಾದ ಮುಖವನ್ನು ನೋಡಿದಳು (೩೪-೩೫). ವಿಮಲಚಂದ್ರಾನನೆಯಾದ ಜಾನಕಿಯು, ಬಹುಕಾಲದಿಂದ ತನಗೆ ಅಗೋಚರವಾಗಿ ಆಗತಾನೆ ಉದಯಿಸಿದ ಪೂರ್ಣಚಂದ್ರನಂತಿದ್ದ ಕಾಂತನ ಮುಖವನ್ನು ಕಂಡು, ತನ್ನ ಮಾನಸಕ್ಲೇಶವನ್ನು ನೀಗಿ ಆನಂದಭರಿತಳಾದಳು (೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹದಿನೇಳನೆಯ ಸರ್ಗ



## ಅಷ್ಟಾದಶೋತ್ತರಶತತಮಃ ಸರ್ಗಃ

### ಸೀತಾಪ್ರತ್ಯಾದೇಶಃ

ತಾಂ ತು ಪಾರ್ಶ್ವಸ್ಥಿತಾಂ ಪ್ರಹ್ವಾಂ ರಾಮಃ ಸಂಪ್ರೇಕ್ಷ್ಯ ಮೈಥಿಲೀಮ್
ಹೃದಯಾಂತರ್ಗತಂ ಭಾವಂ ವ್ಯಾಹರ್ತುಮುಪಚಕ್ರಮೇ ॥ ೧

ಏಷಾಸಿ ನಿರ್ಜಿತಾ ಭದ್ರೇ ಶತ್ರುಂ ಜಿತ್ವಾ ಮಯಾ ರಣೇ ।
ಪೌರುಷಾದ್ಯದನುಷ್ಠೇಯಂ ತದೇತದುಪಪಾದಿತಮ್ ॥ ೨

ಗತೋಽಸ್ಮ್ಯಂತಮಮರ್ಷಸ್ಯ ಧರ್ಷಣಾ ಸಂಪ್ರಮಾರ್ಜಿತಾ ।
ಅವಮಾನಶ್ಚ ಶತ್ರುಶ್ಚ ಮಯಾ ಯುಗಪದುದ್ಧೃತೌ ॥ ೩

ಅದ್ಯ ಮೇ ಪೌರುಷಂ ದೃಷ್ಟಮದ್ಯ ಮೇ ಸಫಲಃ ಶ್ರಮಃ ।
ಅದ್ಯ ತೀರ್ಣಪ್ರತಿಜ್ಞತ್ವಾತ್ ಪ್ರಭವಾಮೀಹ ಚಾತ್ಮನಃ ॥ ೪

### ಸರ್ಗ ೧೧೮

ಬಹುಕಾಲದಿಂದ ಸೀತೆಯು ರಾವಣನ ಗೃಹದಲ್ಲಿದ್ದುದರಿಂದ, ಶ್ರೀರಾಮನು ಪರುಷವಾಕ್ಯಗಳನ್ನಾಡಿ ಅವಳನ್ನು ನಿಂದಿಸುವುದು.

ಶ್ರೀರಾಮನು ಸಮೀಪದಲ್ಲಿ ನಮ್ರಳಾಗಿ ನಿಂತಿದ್ದ ಮೈಥಿಲಿಯನ್ನು ವೀಕ್ಷಿಸಿ, ತನ್ನ ಹೃದಯದಲ್ಲಿದ್ದ ಮಾನಸವಿಕಾರವನ್ನು ತೋಡಿಕೊಳ್ಳಲಾರಂಭಿಸಿದನು : “ ಭದ್ರೆ, ರಣರಂಗದಲ್ಲಿ ಶತ್ರುವನ್ನು ಮರ್ದಿಸಿ ನಿನ್ನನ್ನು ವಶಪಡಿಸಿಕೊಂಡಿರುವೆನು ! ಪೌರುಷವನ್ನು ಮೆರೆಸಿ ಏನನ್ನು ಮಾಡಬಹುದೋ ಅದನ್ನು ಸಾಧಿಸಿರುವೆನು (೧-೨). ನನ್ನ ಮೇಲೆಸೆಗಿದ ಆಕ್ರಮಣಕ್ಕೆ ತಕ್ಕ ಪ್ರತೀಕಾರವನ್ನು ಮಾಡಿ ನನ್ನ ಕ್ರೋಧವನ್ನು ತೀರಿಸಿಕೊಂಡಿರುವೆನು. ನನಗಾದ ಅವಮಾನವನ್ನೂ ನನ್ನ ವೈರಿಯನ್ನೂ ಒಟ್ಟಿಗೆ ತೊಡೆದುಹಾಕಿರುವೆನು. ನನ್ನ ಪೌರುಷವೇನೆಂಬುದನ್ನು ಜಗತ್ತು ಈಗ ಕಂಡಿತು ! ನನ್ನ ಶ್ರಮವು ಫಲಿಸಿತು. ನನ್ನ ಪ್ರತಿಜ್ಞೆಯು ಕೈಗೂಡಿರುವುದ

ಯಾ ತ್ವಂ ವಿರಹಿತಾ ನೀತಾ ಚಲಚಿತ್ತೇನ ರಕ್ಷಸಾ ।
ದೈವಸಂಪಾದಿತೋ ದೋಷೋ ಮಾನುಷೇಣ ಮಯಾ ಜಿತಃ ॥ ೫

ಸಂಪ್ರಾಪ್ತಮವಮಾನಂ ಯಸ್ತೇಜಸಾ ನ ಪ್ರಮಾರ್ಜತಿ ।
ಕಸ್ತಸ್ಯ ಪುರುಷಾರ್ಥೋಽಸ್ತಿ ಪುರುಷಸ್ಯಾಲ್ಪತೇಜಸಃ ॥ ೬

ಲಂಘನಂ ಚ ಸಮುದ್ರಸ್ಯ ಲಂಕಾಯಾಶ್ಚಾವಮರ್ದನಮ್ ।
ಸಫಲಂ ತಸ್ಯ ತಚ್ಚ್ಲಾಘ್ಯಂ ಮಹತ್ ಕರ್ಮ ಹನೂಮತಃ ॥ ೭

ಯುದ್ಧೇ ವಿಕ್ರಮತಶ್ಚೈವ ಹಿತಂ ಮಂತ್ರಯತಶ್ಚ ಮೇ ।
ಸುಗ್ರೀವಸ್ಯ ಸಸೈನ್ಯಸ್ಯ ಸಫಲೋಽದ್ಯ ಪರಿಶ್ರಮಃ ॥ ೮

ನಿರ್ಗುಣಂ ಭ್ರಾತರಂ ತ್ಯಕ್ತ್ವಾ ಯೋ ಮಾಂ ಸ್ವಯಮುಪಸ್ಥಿತಃ ।
ವಿಭೀಷಣಸ್ಯ ಭಕ್ತಸ್ಯ ಸಫಲೋಽದ್ಯ ಪರಿಶ್ರಮಃ ॥ ೯

ಇತ್ಯೇವಂ ಬ್ರುವತಸ್ತಸ್ಯ ಸೀತಾ ರಾಮಸ್ಯ ತದ್ವಚಃ ।
ಮೃಗೀವೋತ್ಫುಲ್ಲನಯನಾ ಬಭೂವಾಶ್ರುಪರಿಪ್ಲುತಾ ॥ ೧೦

---

ರಿಂದ, ಇನ್ನು ನಾನು ಸ್ವತಂತ್ರನಾಗಿದ್ದೇನೆ (೩–೪). ಚಪಲಚಿತ್ತನಾದ ಆ ರಾಕ್ಷಸನು ನನ್ನಿಂದ ಅಗಲಿಸಿ ನಿನ್ನನ್ನು ಅಪಹರಿಸಿದನಷ್ಟೆ. ದೈವದಿಂದಾದ ಅವಮಾನವನ್ನು ಪೌರುಷದಿಂದ ನಾನು ನಿರ್ಮೂಲಗೊಳಿಸಿದ್ದೇನೆ! ಸಂಪ್ರಾಪ್ತವಾದ ಅವಮಾನವನ್ನು ಯಾವನು ತನ್ನ ತೇಜಸ್ಸಿನಿಂದ ಅಳಿಸಿಹಾಕಲಾರನೋ, ಅಂತಹ ತೇಜೋಹೀನನಿಗೆ ಯಾವ ಪುರುಷಾರ್ಥವು ತಾನೇ ಕೈಗೂಡೀತು ? (೫–೬).. ಹನುಮಂತನ ಸಮುದ್ರಲಂಘನವೂ ಲಂಕಾಮರ್ದನವೂ ಇಂದು ಸಫಲವಾದವು. ಪ್ರಶಂಸನೀಯವಾದ ಆತನ ಸಾಹಸಕಾರ್ಯವು ಇಂದು ಫಲಿಸಿತು. ನನ್ನ ಹಿತವನ್ನೇ ಚಿಂತಿಸುತ್ತ ಯುದ್ಧದಲ್ಲಿ ಅದ್ಭುತ ಪರಾಕ್ರಮವನ್ನು ಮೆರೆಸಿದ ಸುಗ್ರೀವ ಮತ್ತು ಆತನ ಸೈನಿಕರ ಪರಿಶ್ರಮವು ಈಗ ಸಾರ್ಥಕವಾಯಿತು (೭–೮). ಗುಣಹೀನನಾದ ಸೋದರನನ್ನು ಕೈಬಿಟ್ಟು, ತಾನಾಗಿಯೇ ನನ್ನ ಬಳಿಗೆ ಬಂದು ಭಕ್ತನಾದ ವಿಭೀಷಣನ ಪ್ರಯಾಸವೂ ಈಗ ಸಫಲವಾಯಿತು” ಎಂದನು (೯). ರಾಘವನು ಈ ಪ್ರಕಾರವಾಗಿ ನುಡಿಯುತ್ತಿರಲು, ಅವನ ಹೇಳಿಕೆಯನ್ನು ಆಲಿಸುತ್ತ, ಕಣ್ಣರಳಿಸಿದ ಹರಿಣಿಯಂತೆ ನೋಡುತ್ತ ನಿಂತಿದ್ದ

ಪಶ್ಯತಸ್ತಾಂ ತು ರಾಮಸ್ಯ ಭೂಯಃ ಕ್ರೋಧೋ ವ್ಯವರ್ಧತ ।
ಪ್ರಭೂತಾಜ್ಯಾವಸಿಕ್ತಸ್ಯ ಪಾವಕಸ್ಯೇವ ದೀಪ್ಯತಃ ॥ ೧೧

ಸ ಬದ್ಧ್ವಾ ಭ್ರುಕುಟೀಂ ವಕ್ತ್ರೇ ತಿರ್ಯಕ್ಪ್ರೇಕ್ಷಿತಲೋಚನಃ ।
ಅಬ್ರವೀತ್ ಪರುಷಂ ಸೀತಾಂ ಮಧ್ಯೇ ವಾನರರಕ್ಷಸಾಮ್ ॥ ೧೨

ಯತ್ ಕರ್ತವ್ಯಂ ಮನುಷ್ಯೇಣ ಧರ್ಷಣಾಂ ಪರಿಮಾರ್ಜತಾ ।
ತತ್ ಕೃತಂ ಸಕಲಂ ಸೀತೇ ಶತ್ರುಹಸ್ತಾದಮರ್ಷಣಾತ್ ॥ ೧೩

ನಿರ್ಜಿತಾ ಜೀವಲೋಕಸ್ಯ ತಪಸಾ ಭಾವಿತಾತ್ಮನಾ ।
ಅಗಸ್ತ್ಯೇನ ದುರಾಧರ್ಷಾ ಮುನಿನಾ ದಕ್ಷಿಣೇವ ದಿಕ್ ॥ ೧೪

ವಿದಿತಶ್ಚಾಸ್ತು ತೇ ಭದ್ರೇ ಯೋಽಯಂ ರಣಪರಿಶ್ರಮಃ ।
ಸ ತೀರ್ಣಃ ಸುಹೃದಾಂ ವೀರ್ಯಾನ್ನ ತ್ವದರ್ಥಂ ಮಯಾ ಕೃತಃ ॥

---

ಜಾನಕಿಯು ಕಣ್ಣೀರು ಹರಿಸುತ್ತಿದ್ದಳು (೧೦). ಎದುರಿಗಿದ್ದ ಸೀತೆಯನ್ನು ನೋಡಿದಷ್ಟೂ ರಾಘವನ ತಾಳ್ಮೆಯು ತಪ್ಪುತ್ತ ಹೋಯಿತು. ಉರಿಯುವ ಬೆಂಕಿಗೆ ತುಪ್ಪವನ್ನು ಹೊಯ್ದಂತಾಗಿ, ಅವನ ಕೋಪವು ಹೆಚ್ಚಿತು. ಹುಬ್ಬು ಗಂಟಿಕ್ಕಿತು. ಓರೆಗಣ್ಣಿನಿಂದ ಜಾನಕಿಯನ್ನು ನೋಡುತ್ತ ಅವಳನ್ನು ಉದ್ದೇಶಿಸಿ, ನೆರೆದಿದ್ದ ವಾನರರಾಕ್ಷಸರೆದುರಿಗೆ ರಾಘವನು ಪರುಷವಾಕ್ಯಗಳನ್ನಾಡಿದನು (೧೧-೧೨) : " ಸೀತೆ, ತನಗೊದಗಿದ ಅವಮಾನ ಪ್ರಸಂಗವನ್ನು ಸಹಿಸಲಾರದೆ ಅದನ್ನು ತೊಡೆದುಹಾಕುವುದಕ್ಕಾಗಿ, ಮನುಷ್ಯನು ಏನು ಮಾಡಬೇಕೋ-ಏನು ಮಾಡಲು ಸಾಧ್ಯವೋ ಅದೆಲ್ಲವನ್ನೂ ಮಾಡಿ ಸಾಧಿಸಿದ್ದಾಯಿತು. ಇಲ್ವಲಾದಿ ದಾನವರ ಕಾಟದಿಂದ ಜೀವಲೋಕಕ್ಕೆ ದುರ್ಗಮವಾಗಿದ್ದ ದಕ್ಷಿಣ ದಿಕ್ಕನ್ನು ಆತ್ಮಜ್ಞಾನಿಗಳಾದ ಅಗಸ್ತ್ಯಮುನಿಗಳು ವಶಪಡಿಸಿಕೊಂಡಂತೆ, ಸೀತೆ, ವೈರಿಯನ್ನು ಜಯಿಸಿ ಅವನ ಕೈಯಿಂದ ನಿನ್ನನ್ನು ಬಿಡಿಸಿ ತಂದೆನು (೧೩-೧೪). ಈ ರಣಪರಿಶ್ರಮವೆಲ್ಲವೂ ನನ್ನ ಮಿತ್ರರ ಪರಾಕ್ರಮದಿಂದ ಫಲಿಸಿತು. ಭದ್ರೆ, ಈ ಪರಿಶ್ರಮವು ನಿನಗೋಸ್ಕರವಾಗಿ ಅಲ್ಲ ಎಂಬುದು ನಿನಗೆ ತಿಳಿದಿರಲಿ! ಸದಾಚಾರವನ್ನು ರಕ್ಷಿಸು

**ರಕ್ಷತಾ ತು ಮಯಾ ವೃತ್ತಮಪವಾದಂ ಚ ಸರ್ವಶಃ ।**
**ಪ್ರಖ್ಯಾತಸ್ಯಾತ್ಮವಂಶಸ್ಯ ನ್ಯಂಗಂ ಚ ಪರಿಮಾರ್ಜತಾ ॥ ೧೬**

**ಪ್ರಾಪ್ತಚಾರಿತ್ರಸಂದೇಹಾ ಮಮ ಪ್ರತಿಮುಖೇ ಸ್ಥಿತಾ ।**
**ದೀಪೋ ನೇತ್ರಾತುರಸ್ಯೇವ ಪ್ರತಿಕೂಲಾಸಿ ಮೇ ದೃಢಮ್ ॥ ೧೭**

**ತದ್ಗಚ್ಛ ಹ್ಯಭ್ಯನುಜ್ಞಾತಾ ಯಥೇಷ್ಟಂ ಜನಕಾತ್ಮಜೇ ।**
**ಏತಾ ದಶ ದಿಶೋ ಭದ್ರೇ ಕಾರ್ಯಮಸ್ತಿ ನ ಮೇ ತ್ವಯಾ ॥ ೧೮**

**ಕಃ ಪುಮಾನ್ ಹಿ ಕುಲೇ ಜಾತಃ ಸ್ತ್ರಿಯಂ ಪರಗೃಹೋಷಿತಾಮ್ ।**
**ತೇಜಸ್ವೀ ಪುನರಾದದ್ಯಾತ್ ಸುಹೃಲ್ಲೇಖ್ಯೇನ ಚೇತಸಾ ॥ ೧೯**

**ರಾವಣಾಂಕಪರಿಭ್ರಷ್ಟಾಂ ದೃಷ್ಟಾಂ ದುಷ್ಟೇನ ಚಕ್ಷುಷಾ ।**
**ಕಥಂ ತ್ವಾಂ ಪುನರಾದದ್ಯಾಂ ಕುಲಂ ವ್ಯಪದಿಶನ್ ಮಹತ್ ॥ ೨೦**

---

ವುದಕ್ಕಾಗಿಯೂ, ಎಲ್ಲೆಡೆಯೂ ನನಗೆ ಬರುವ ಅಪವಾದವನ್ನು ನಿರ್ಮೂಲಗೊಳಿಸುವುದಕ್ಕಾಗಿಯೂ, ವಿಶ್ವವಿಖ್ಯಾತವಾದ ನನ್ನ ವಂಶಕ್ಕೆ ಅಂಟುವ ಅಪಕೀರ್ತಿಯನ್ನು ವಿಧ್ವಂಸಗೊಳಿಸುವುದಕ್ಕಾಗಿಯೂ ಈ ಪರಿಶ್ರಮವನ್ನು ವಹಿಸಿದೆನು! (೧೫-೧೬). ಪರಗೃಹವಾಸದಿಂದ ನಿನ್ನ ಚಾರಿತ್ರದಲ್ಲಿ ನನಗೆ ಸಂದೇಹ ಉಂಟಾಗಿದೆ! ನನ್ನೆದುರಿಗೆ ನಿಂತಿರುವ ನೀನು, ನೇತ್ರರೋಗಿಯ ಎದುರಿಗಿರುವ ದೀಪದಂತೆ, ಕಣ್ಣನ್ನು ಕೊರೆಯುತ್ತಿರುವೆ! ಆದ್ದರಿಂದ, ಎಲೌ ಜನಕರಾಜತನಯೆ, ಯಥೇಷ್ಟವಾಗಿ ಎಲ್ಲಿಗಾದರೂ ಹೋಗು; ಅನುಜ್ಞೆಯನ್ನು ಕೊಟ್ಟಿದ್ದೇನೆ! ಭದ್ರೆ, ಇದೋ ಹತ್ತು ದಿಕ್ಕುಗಳೂ ಇವೆ. ನಿನ್ನಿಂದ ನನಗಾಗಬೇಕಾದ್ದು ಏನೂ ಇಲ್ಲ! (೧೭-೧೮). ಉತ್ತಮಕುಲದಲ್ಲಿ ಜನಿಸಿದ ತೇಜಸ್ವಿಯಾದ ಯಾವ ಪುರುಷನು ತಾನೇ, ಚಿರಕಾಲದವರೆಗೆ ಪರಗೃಹದಲ್ಲಿರುವ ಸ್ತ್ರೀಯನ್ನು ಒಳ್ಳೆಯ ಅಭಿಪ್ರಾಯದಿಂದ ಹೃತ್ಪೂರ್ವಕವಾಗಿ ಸ್ವೀಕರಿಸಿಯಾನು? ನೀನು ಈಗಲಷ್ಟೇ ರಾವಣನ ಮಡಿಲಿಂದ ಜಾರಿಬಂದಿರುವೆ. ಅವನ ಕೆಟ್ಟ ಕಣ್ಣಿಗೆ ಸಿಕ್ಕಿದವಳು. 'ಮಹತ್ತರವಾದ ವಂಶ ನನ್ನದು' ಎಂದು ಹೇಳಿಕೊಳ್ಳುವ ನಾನು, ಮತ್ತೆ ನಿನ್ನನ್ನು

ತದರ್ಥಂ ನಿರ್ಜಿತಾ ಮೇ ತ್ವಂ ಯಶಃ ಪ್ರತ್ಯಾಹೃತಂ ಮಯಾ ।
ನಾಸ್ತಿ ಮೇ ತ್ವಯ್ಯಭಿಷ್ವಂಗೋ ಯಥೇಷ್ಟಂ ಗಮ್ಯತಾಮಿತಃ ॥ ೨೧

ಇತಿ ಪ್ರವ್ಯಾಹೃತಂ ಭದ್ರೇ ಮಯೈತತ್ ಕೃತಬುದ್ಧಿನಾ ।
ಲಕ್ಷ್ಮಣೇ ಭರತೇ ವಾ ತ್ವಂ ಕುರು ಬುದ್ಧಿಂ ಯಥಾಸುಖಮ್ ॥ ೨೨

ಸುಗ್ರೀವೇ ವಾನರೇಂದ್ರೇ ವಾ ರಾಕ್ಷಸೇಂದ್ರೇ ವಿಭೀಷಣೇ ।
ನಿವೇಶಯ ಮನಃ ಸೀತೇ ಯಥಾ ವಾ ಸುಖಮಾತ್ಮನಃ ॥ ೨೩

ನ ಹಿ ತ್ವಾಂ ರಾವಣೋ ದೃಷ್ಟ್ವಾ ದಿವ್ಯರೂಪಾಂ ಮನೋರಮಾಮ್
ಮರ್ಷಯೇತ ಚಿರಂ ಸೀತೇ ಸ್ವಗೃಹೇ ಪರಿವರ್ತಿನೀಮ್ ॥ ೨೪

ತತಃ ಪ್ರಿಯಾರ್ಹಶ್ರವಣಾ ತದಪ್ರಿಯಂ
ಪ್ರಿಯಾದುಪಶ್ರುತ್ಯ ಚಿರಸ್ಯ ಮೈಥಿಲೀ ।

---

ಹೇಗೆ ಸ್ವೀಕರಿಸಲಿ? (೧೯-೨೦). ವಂಶದ ಹೆಸರನ್ನುಳಿಸುವುದಕ್ಕಾಗಿ ನಿನ್ನನ್ನು ಜಯಿಸಿ ತಂದು, ಕೈಬಿಟ್ಟ ಕೀರ್ತಿಯನ್ನು ಮತ್ತೆ ಗಳಿಸಿದ್ದೇನೆ. ನಿನ್ನಲ್ಲಿ ನನಗೆ ಯಾವ ಆಸಕ್ತಿಯೂ ಇಲ್ಲ. ಮನಬಂದ ಕಡೆಗೆ ಇಲ್ಲಿಂದ ಹೊರಟುಹೋಗು! (೨೧). ಈ ಮಾತನ್ನು ನಿಶ್ಚಯಿಸಿಕೊಂಡೇ ನಾನು ಹೇಳಿದ್ದೇನೆ. ಬೇಕಾದರೆ ಲಕ್ಷ್ಮಣನನ್ನೋ ಭರತನನ್ನೋ ಜೀವನಕ್ಕಾಗಿ ಆಶ್ರಯಿಸು. ವಾನರೇಂದ್ರನಾದ ಸುಗ್ರೀವನಿದ್ದಾನೆ, ರಾಕ್ಷಸೇಂದ್ರನಾದ ವಿಭೀಷಣನಿದ್ದಾನೆ—ಯಾರನ್ನಾದರೂ ಆಶ್ರಯಿಸಿ ಜೀವಿಸು. ಅಥವಾ (ನಿನ್ನ ತವರುಮನೆಗಾದರೂ ಹೋಗು) ಎಲ್ಲಿ ಸಂತೋಷವೋ ಅಲ್ಲಿರು (೨೨-೨೩). ಸೀತೆ, ರಾವಣನು ಮನೋಹರವಾದ ನಿನ್ನ ಈ ದಿವ್ಯರೂಪವನ್ನು ನೋಡಿ, ಅವನ ಗೃಹದಲ್ಲಿಯೇ ನೀನು ಸುತ್ತಾಡಿಕೊಂಡಿರುವಾಗ, ಬಹುಕಾಲದವರೆಗೆ ಸುಮ್ಮನಿದ್ದಾನೆ?" ಎಂದು ಹೇಳಿದನು (೨೪). ತನ್ನ ಪ್ರಿಯನ ಪ್ರಿಯವಾದ ನುಡಿಯನ್ನು ಕೇಳಬೇಕೆಂದು ಚಿರಕಾಲದಿಂದ ಹಾರೈಸುತ್ತಿದ್ದ ಮೈಥಿಲಿಯು, ತನ್ನ ಪ್ರಿಯನಿಂದಲೇ ಅಪ್ರಿಯವಾದ ನಿಷ್ಠುರವಚನವನ್ನು ಕೇಳಿ ಗಳಗಳನೆ ಕಣ್ಣೀರು ಹರಿಸಿದಳು. ಗಜರಾಜನ

ಮುಮೋಚ ಬಾಷ್ಪಂ ಸುಭೃಶಂ ಪ್ರವೇಪಿತಾ
ಗಜೇಂದ್ರಹಸ್ತಾಭಿಹತೇವ ಸಲ್ಲಕೀ ॥ ೨೫

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಾದಶೋತ್ತರಶತತಮಃ ಸರ್ಗಃ

---

## ಏಕೋನವಿಂಶತ್ಯುತ್ತರಶತತಮಃ ಸರ್ಗಃ

### ಹುತಾಶನಪ್ರವೇಶಃ

ಏವಮುಕ್ತಾ ತು ವೈದೇಹೀ ಪರುಷಂ ರೋಮಹರ್ಷಣಮ್ ।
ರಾಘವೇಣ ಸರೋಷೇಣ ಭೃಶಂ ಪ್ರವ್ಯಥಿತಾಭವತ್ ॥ ೧

ಸಾ ತದಶ್ರುತಪೂರ್ವಂ ಹಿ ಜನೇ ಮಹತಿ ಮೈಥಿಲೀ ।
ಶ್ರುತ್ವಾ ಭರ್ತೃವಚೋ ರೂಕ್ಷಂ ಲಜ್ಜಯಾ ವ್ರೀಡಿತಾಭವತ್ ॥ ೨

---

ಶುಂಡಾದಂಡದಿಂದ ಅಭಿಹತವಾದ ಸಲ್ಲಕೀಲತೆಯಂತೆ ಥರಥರನೆ ನಡುಗಿದಳು (೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹದಿನೆಂಟನೆಯ ಸರ್ಗ

---

## ಸರ್ಗ ೧೧೯

### ಸೀತೆಯು ಪ್ರತ್ಯುತ್ತರವನ್ನು ಹೇಳಿ ಅಗ್ನಿಪ್ರವೇಶಮಾಡುವುದು.

ಹೀಗೆ ರಾಘವನು ಕೋಪಾವೇಶದಿಂದ ಹೇಳಿದ ಮೈನವಿರೇಳಿಸುವ ಕಠೋರವಚನವನ್ನು ಕೇಳಿ, ವೈದೇಹಿಯು ಅತ್ಯಂತ ದುಃಖಿತಳಾದಳು. ಪತಿಯ ಬಾಯಿಂದ ಎಂದೆಂದೂ ಕೇಳದಿದ್ದ ಕಠೋರವಾದ ಆ ಒರಟು ಮಾತನ್ನು ನೆರೆದಿದ್ದ ಮಹಾಜನರೆದುರಿಗೆ ಕೇಳಿದಾಗ, ಮೈಥಿಲಿಯು ಲಜ್ಜೆ

ಪ್ರವಿಶಂತೀವ ಗಾತ್ರಾಣಿ ಸ್ವಾನ್ಯೇವ ಜನಕಾತ್ಮಜಾ ।
ವಾಕ್ಯೈಸ್ತೈಃ ಸಶಲ್ಯೇವ ಭೃಶಮಶ್ರೂಣ್ಯವರ್ತಯತ್ ॥ ೩

ತತೋ ಬಾಷ್ಪಪರಿಕ್ಲಿಷ್ಟಂ ಪ್ರಮಾರ್ಜಂತೀ ಸ್ವಮಾನನಮ್ ।
ಶನೈರ್ಗದ್ಗದಯಾ ವಾಚಾ ಭರ್ತಾರಮಿದಮಬ್ರವೀತ್ ॥ ೪

ಕಿಂ ಮಾಮಸದೃಶಂ ವಾಕ್ಯಮೀದೃಶಂ ಶ್ರೋತ್ರದಾರುಣಮ್ ।
ರೂಕ್ಷಂ ಶ್ರಾವಯಸೇ ವೀರ ಪ್ರಾಕೃತಃ ಪ್ರಾಕೃತಾಮಿವ ॥ ೫

ನ ತಥಾಸ್ಮಿ ಮಹಾಬಾಹೋ ಯಥಾ ತ್ವಮವಗಚ್ಛಸಿ ।
ಪ್ರತ್ಯಯಂ ಗಚ್ಛ ಮೇ ಯೇನ ಚಾರಿತ್ರೇಣೈವ ತೇ ಶಪೇ ॥ ೬

ಪೃಥಕ್‌ಸ್ತ್ರೀಣಾಂ ಪ್ರಚಾರೇಣ ಜಾತಿಂ ತಾಂ ಪರಿಶಂಕಸೇ ।
ಪರಿತ್ಯಜೇಮಾಂ ಶಂಕಾಂ ತು ಯದಿ ತೇಽಹಂ ಪರೀಕ್ಷಿತಾ ॥ ೭

---

ಯಿಂದ ಕುಸಿದುಹೋದಳು (೧-೨). ಆ ಜನಕರಾಜನಂದಿನಿಯು ನಾಚಿಕೆಯಿಂದ ತನ್ನ ಗಾತ್ರಗಳಲ್ಲಿಯೇ ತಾನು ಅಡಗಿಕೊಳ್ಳುವಳೋ ಎಂಬಂತೆ ಕಂಡಳು. ರಾಘವನ ವಾಗ್ಬಾಣಗಳು ತನ್ನ ಮೈಯಲ್ಲಿ ನೆಟ್ಟವೋ ಎಂಬಂತೆ, ತೆರಪಿಲ್ಲದೆ ಗಳಗಳನೆ ಅತ್ತು ಕಣ್ಣೀರಿನ ಕೋಡಿಯನ್ನು ಹರಿಸಿದಳು (೩). ಆಮೇಲೆ, ಕಣ್ಣೀರಿಂದ ನೆನೆದ ಮುಖವನ್ನು ಒರೆಸಿಕೊಳ್ಳುತ್ತ ಬಿಕ್ಕುತ್ತ ತೊದಲುತ್ತ, ಮೆಲ್ಲನೆಯ ಧ್ವನಿಯಿಂದ ತನ್ನ ಪತಿಯನ್ನುದ್ದೇಶಿಸಿ ಹೀಗೆಂದಳು : "ಈ ರೀತಿಯಲ್ಲಿ ನನಗೆ ಆಡಬಾರದ ಮಾತನ್ನೇಕೆ ಹೇಳುವೆ? ಕಿವಿಯನ್ನು ಸೀಳುವಂತಹ ಈ ಕಠೋರವಚನವನ್ನು ನೀನು ಹೇಳಬಹುದೆ? ವೀರಾಗ್ರಣಿ, ಅಸಂಸ್ಕೃತನಾದ ಒಬ್ಬ ಸಾಮಾನ್ಯ ಮನುಷ್ಯನು ಸಂಸ್ಕೃತಿಶೂನ್ಯಳಾದ ಒಬ್ಬ ಹೆಂಗಸಿಗೆ ನುಡಿಯುವಂತೆ ನುಡಿಯುತ್ತಿರುವೆಯಲ್ಲ? (೪-೫). ಓ ಮಹಾಬಾಹು, ನೀನು ತಿಳಿದುಕೊಂಡಿರುವಂತೆ ನಾನಿಲ್ಲ! ನನ್ನ ಚಾರಿತ್ರದಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ, ನನ್ನನ್ನು ನಂಬು. ಕೀಳು ಹೆಂಗಸರ ವ್ಯವಹಾರವನ್ನು ಕಂಡು, ಸ್ತ್ರೀಜಾತಿಯನ್ನೇ ಶಂಕಿಸುವೆಯಾ? ಈ ಶಂಕೆಯನ್ನು ದೂರಮಾಡು. ನನ್ನ ನಡತೆಯನ್ನು ನೀನು

ಯದ್ಯಹಂ ಗಾತ್ರಸಂಸ್ಪರ್ಶಂ ಗತಾಸ್ಮಿ ವಿವಶಾ ಪ್ರಭೋ ।
ಕಾಮಕಾರೋ ನ ಮೇ ತತ್ರ ದೈವಂ ತತ್ರಾಪರಾಧ್ಯತಿ ॥ ೮

ಮದಧೀನಂ ತು ಯತ್ತನ್ಮೇ ಹೃದಯಂ ತ್ವಯಿ ವರ್ತತೇ ।
ಪರಾಧೀನೇಷು ಗಾತ್ರೇಷು ಕಿಂ ಕರಿಷ್ಯಾಮ್ಯನೀಶ್ವರಾ ॥ ೯

ಸಹ ಸಂವೃದ್ಧಭಾವಾಚ್ಚ ಸಂಸರ್ಗೇಣ ಚ ಮಾನದ ।
ಯದ್ಯಹಂ ತೇ ನ ವಿಜ್ಞಾತಾ ಹತಾ ತೇನಾಸ್ಮಿ ಶಾಶ್ವತಮ್ ॥ ೧೦

ಪ್ರೇಷಿತಸ್ತೇ ಯದಾ ವೀರೋ ಹನುಮಾನವಲೋಕಕಃ ।
ಲಂಕಾಸ್ಥಾಹಂ ತ್ವಯಾ ವೀರ ಕಿಂ ತದಾ ನ ವಿಸರ್ಜಿತಾ ॥ ೧೧

ಪ್ರತ್ಯಕ್ಷಂ ವಾನರೇಂದ್ರಸ್ಯ ತ್ವದ್ವಾಕ್ಯಸಮನಂತರಮ್ ।
ತ್ವಯಾ ಸಂತ್ಯಕ್ತಯಾ ವೀರ ತ್ಯಕ್ತಂ ಸ್ಯಾಜ್ಜೀವಿತಂ ಮಯಾ ॥ ೧೨

ನ ವೃಥಾ ತೇ ಶ್ರಮೋಽಯಂ ಸ್ಯಾತ್ಸಂಶಯೇ ನ್ಯಸ್ಯ ಜೀವಿತಮ್ ।
ಸುಹೃಜ್ಜನಪರಿಕ್ಲೇಶೋ ನ ಚಾಯಂ ನಿಷ್ಫಲಸ್ತವ ॥ ೧೩

---

ಕಂಡಿಲ್ಲವೆ? (೬-೭). ಓ ನನ್ನ ಸ್ವಾಮಿಯೆ, ನಾನು ದಿಕ್ಕಿಲ್ಲದೆ ಪರಾಧೀನಳಾದಾಗ ಆತನ ದೇಹಸ್ಪರ್ಶವು ನನಗಾಗಿರಬಹುದು. ಅದರಲ್ಲಿ ನನ್ನ ಇಚ್ಛೆ ಏನಿದೆ? ಅದು ದೈವಾಯತ್ತವಾದ ಅಪರಾಧ. ನನಗೆ ಅಧೀನವಾದದ್ದು ನನ್ನ ಹೃದಯ. ಅದು ಸದಾ ನಿನ್ನಲ್ಲಿಯೇ ನೆಲೆಸಿದೆ. ಈ ದೇಹವು ಪರಾಧೀನವಾದಾಗ ನಾನೇನು ಮಾಡಲು ಸಾಧ್ಯವಿತ್ತು? ದೇಹಸ್ಪರ್ಶವಾಗದಂತೆ ತಡೆಯಲು ನನಗೆ ಸಾಮರ್ಥ್ಯವಿತ್ತೆ? (೮-೯). ಆರ್ಯಪುತ್ರ, ನಾವೀರ್ವರೂ ಜೊತೆಗೆ ಬೆಳೆದವರು; ಚಿರಕಾಲದಿಂದ ಒಡನಾಡಿಗಳು. ನನ್ನ ಮಾನರಕ್ಷಣೆ ನಿನ್ನದು. ಹೀಗಿದ್ದರೂ ನನ್ನ ಶೀಲವು ನಿನಗೆ ತಿಳಿದಿಲ್ಲವಾದರೆ, ಅಯ್ಯೋ, ನಾನು ಶಾಶ್ವತವಾಗಿ ಕೆಟ್ಟೆನು (೧೦). ನನ್ನನ್ನು ಹುಡುಕುವುದಕ್ಕಾಗಿ ಶೂರನಾದ ಹನುಮಂತನನ್ನು ಕಳಿಸಿದ್ದೆಯಲ್ಲ, ಆಗ ಲಂಕೆಯಲ್ಲಿದ್ದಾಗಲೇ ನನ್ನನ್ನು ಏಕೆ ತ್ಯಜಿಸಲಿಲ್ಲ? ಅವನು ಆ ಮಾತನ್ನು ತಿಳಿಸಿದ್ದರೆ, ಆಗಲೇ—ಆ ವಾನರೋತ್ತಮನೆದುರಿಗೇ ನಾನು ಪ್ರಾಣವನ್ನು ಬಿಡುತ್ತಿದ್ದೆ (೧೧-೧೨). ವ್ಯರ್ಥವಾಗಿ ಈ ರಣಪರಿಶ್ರಮವೂ ನಿನಗೆ ಪ್ರಾಪ್ತವಾಗುತ್ತಿರಲಿಲ್ಲ. ಪ್ರಾಣವನ್ನು ಮುಡುಪಿಟ್ಟು ಯುದ್ಧಮಾಡ

ತ್ವಯಾ ತು ನರಶಾರ್ದೂಲ ಕ್ರೋಧಮೇವಾನುವರ್ತತಾ ।
ಲಘುನೇವ ಮನುಷ್ಯೇಣ ಸ್ತ್ರೀತ್ವಮೇವ ಪುರಸ್ಕೃತಮ್ ॥ ೧೪

ಅಪದೇಶೇನ ಜನಕಾನ್ನೋತ್ಪತ್ತಿರ್ವಸುಧಾತಲಾತ್ ।
ಮಮ ವೃತ್ತಂ ಚ ವೃತ್ತಜ್ಞ ಬಹು ತೇ ನ ಪುರಸ್ಕೃತಮ್ ॥ ೧೫

ನ ಪ್ರಮಾಣೀಕೃತಃ ಪಾಣಿರ್ಬಾಲ್ಯೇ ಬಾಲೇನ ಪೀಡಿತಃ ।
ಮಮ ಭಕ್ತಿಶ್ಚ ಶೀಲಂ ಚ ಸರ್ವಂ ತೇ ಪೃಷ್ಠತಃ ಕೃತಮ್ ॥ ೧೬

ಏವಂ ಬ್ರುವಾಣಾ ರುದತೀ ಬಾಷ್ಪಗದ್ಗದಭಾಷಿಣೀ ।
ಅಬ್ರವೀಲ್ಲಕ್ಷ್ಮಣಂ ಸೀತಾ ದೀನಂ ಧ್ಯಾನಪರಂ ಸ್ಥಿತಮ್ ॥ ೧೭

ಚಿತಾಂ ಮೇ ಕುರು ಸೌಮಿತ್ರೇ ವ್ಯಸನಸ್ಯಾಸ್ಯ ಭೇಷಜಮ್ ।
ಮಿಥ್ಯೋಪಘಾತೋಪಹತಾ ನಾಹಂ ಜೀವಿತುಮುತ್ಸಹೇ ॥ ೧೮

---

ಬೇಕಾಗಿರಲಿಲ್ಲ. ನಿನ್ನ ಮಿತ್ರರಿಗೆ ನಿಷ್ಫಲವಾಗಿ ಕ್ಲೇಶವೂ ಸಂಭವಿಸುತ್ತಿರಲಿಲ್ಲ. ಪುರುಷೋತ್ತಮ, ಅಲ್ಪಮನುಷ್ಯನಂತೆ ಕೋಪವೊಂದನ್ನೇ ನೀನು ಆಶ್ರಯಿಸಿದ್ದೀಯೆ. 'ಹೆಂಗಸರು ಚಪಲರು' ಎಂದು ಸ್ತ್ರೀಸ್ವಭಾವವೊಂದನ್ನೇ ಮುಂದಿಟ್ಟು ಮಾತನಾಡಿದ್ದೀಯೆ (೧೩-೧೪). ಜನಕರಾಜನ ಮಗಳೆಂಬ ಹೆಸರಿನಿಂದ, ವಸುಧಾತಳದಿಂದಲೇ ನಾನು ಜನಿಸಿರುವೆನೆಂಬುದನ್ನು ನೀನು ಗಣಿಸಲಿಲ್ಲ. ನನ್ನ ಶೀಲಸ್ವಭಾವಗಳೆಲ್ಲವನ್ನೂ ಬಲ್ಲವನಾದರೂ, ಅದೊಂದನ್ನೂ ನೀನು ಎಣಿಸಲಿಲ್ಲ (೧೫). ಬಾಲೆಯಾಗಿದ್ದ ನನ್ನನ್ನು ಬಾಲ್ಯದಲ್ಲಿಯೇ ಕೈಹಿಡಿದು ನೋಡುತ್ತ ಬಂದಿದ್ದೀಯೆ. ಅಗ್ನಿಸಾಕ್ಷಿಕವಾಗಿ ಹಿಡಿದ ಈ ಕೈ ನಿನಗೆ ಪ್ರಮಾಣವಾಗಲಿಲ್ಲ. ನನ್ನ ಭಕ್ತಿಯನ್ನು–ನನ್ನ ಶೀಲವನ್ನು–ಒಂದನ್ನೂ ಲೆಕ್ಕಿಸದೆ ಎಲ್ಲವನ್ನೂ ಹಿಂದಕ್ಕೆ ತಳ್ಳಿಹಾಕಿದ್ದೀಯೆ" (೧೬). ಈ ರೀತಿಯಾಗಿ ಸೀತೆಯು ಬಿಕ್ಕಿಬಿಕ್ಕಿ ಅಳುತ್ತ ನುಡಿದಳು. ಕಣ್ಣೀರು ಹರಿಯುತ್ತಿತ್ತು. ಅನಂತರ ಲಕ್ಷ್ಮಣನ ಕಡೆಗೆ ತಿರುಗಿದಳು. ಆತನು ಏನನ್ನೋ ಧ್ಯಾನಿಸುತ್ತ ದೈನ್ಯದಿಂದ ಚಿಂತಾಕುಲನಾಗಿ ನಿಂತಿದ್ದನು (೧೭). ಮೈಥಿಲಿಯು "ಲಕ್ಷ್ಮಣ, ನನಗೆ ಚಿತೆಯೊಂದನ್ನು ನಿರ್ಮಿಸಿಕೊಡು. ನನ್ನ ವ್ಯಸನಕ್ಕೆ ಚಿತೆಯೇ ಔಷಧ. ಈ ಕೆಟ್ಟ ಅಪವಾದ

ಅಪ್ರೀತಸ್ಯ ಗುಣೈರ್ಭರ್ತುಸ್ತ್ಯಕ್ತಾಯಾ ಜನಸಂಸದಿ ।
ಯಾ ಕ್ಷಮಾ ಮೇ ಗತಿರ್ಗಂತುಂ ಪ್ರವೇಕ್ಷ್ಯೇ ಹವ್ಯವಾಹನಮ್ ॥

ಏವಮುಕ್ತಸ್ತು ವೈದೇಹ್ಯಾ ಲಕ್ಷ್ಮಣಃ ಪರವೀರಹಾ ।
ಅಮರ್ಷವಶಮಾಪನ್ನೋ ರಾಘವಾನನಮೈಕ್ಷತ ॥ ೨೦

ಸ ವಿಜ್ಞಾಯ ತತಶ್ಛಂದಂ ರಾಮಸ್ಯಾಕಾರಸೂಚಿತಮ್ ।
ಚಿತಾಂ ಚಕಾರ ಸೌಮಿತ್ರಿರ್ಮತೇ ರಾಮಸ್ಯ ವೀರ್ಯವಾನ್ ॥ ೨೧

ಅಧೋಮುಖಂ ತದಾ ರಾಮಂ ಶನೈಃ ಕೃತ್ವಾ ಪ್ರದಕ್ಷಿಣಮ್ ।
ಉಪಾಸರ್ಪತ ವೈದೇಹೀ ದೀಪ್ಯಮಾನಂ ಹುತಾಶನಮ್ ॥ ೨೨

ಪ್ರಣಮ್ಯ ದೇವತಾಭ್ಯಶ್ಚ ಬ್ರಾಹ್ಮಣೇಭ್ಯಶ್ಚ ಮೈಥಿಲೀ ।
ಬದ್ಧಾಂಜಲಿಪುಟಾ ಚೇದಮುವಾಚಾಗ್ನಿಸಮೀಪತಃ ॥ ೨೩

ಯಥಾ ಮೇ ಹೃದಯಂ ನಿತ್ಯಂ ನಾಪಸರ್ಪತಿ ರಾಘವಾತ್ ।
ತಥಾ ಲೋಕಸ್ಯ ಸಾಕ್ಷೀ ಮಾಂ ಸರ್ವತಃ ಪಾತು ಪಾವಕಃ ॥ ೨೪

---

ವನ್ನು ಹೊತ್ತು ನಾನು ಜೀವಿಸಲಾರೆ. ನನ್ನ ಗುಣಗಳನ್ನು ಮೆಚ್ಚದೆ ನನ್ನ ಸ್ವಾಮಿಯು ಮಹಾಜನರೆದುರಿಗೆ ನನ್ನನ್ನು ಪರಿತ್ಯಜಿಸಿದಮೇಲೆ, ನನಗಿರುವ ಗತಿ ಒಂದೇ–ಅಗ್ನಿಯಲ್ಲಿ ಬೀಳುವೆನು" ಎಂದಳು (೧೮–೧೯). ಆಗ ಧೀರನಾದ ಲಕ್ಷ್ಮಣನು ಕ್ರುದ್ಧನಾಗಿ*, ರಾಘವನ ಮುಖವನ್ನು ನೋಡಿದನು. ಶ್ರೀರಾಮನ ಭ್ರೂಸಂಜ್ಞೆ ಮುಂತಾದ ಲಕ್ಷಣದಿಂದ ಆತನ ಅಭಿಪ್ರಾಯವನ್ನು ಗ್ರಹಿಸಿ, ಸೌಮಿತ್ರಿಯು ಶ್ರೀರಾಮನ ಇಚ್ಛೆಯಂತೆ ಚಿತೆಯನ್ನು ನಿರ್ಮಿಸಿದನು (೨೦). ಶ್ರೀರಾಮನು ತಲೆತಗ್ಗಿಸಿ ನಿಂತಿದ್ದನು. ವೈದೇಹಿಯು ಆತನನ್ನು ಮೆಲ್ಲಗೆ ಪ್ರದಕ್ಷಿಣೆಮಾಡಿ ವಂದಿಸಿ, ಉರಿಯುತ್ತಿದ್ದ ಅಗ್ನಿಯ ಬಳಿಗೆ ಬಂದಳು. ಚಿತೆಯ ಬಳಿಯಲ್ಲಿ ನಿಂತು ದೇವತೆಗಳಿಗೂ ಬ್ರಾಹ್ಮಣರಿಗೂ ಮನಸ್ಸಿನಲ್ಲಿ ನಮಸ್ಕರಿಸಿದಳು (೨೧–೨೨). ಅನಂತರ ಮೈಥಿಲಿಯು ಕೈಮುಗಿದುಕೊಂಡು ಯಜ್ಞೇಶ್ವರನ ಸಮೀಪದಲ್ಲಿ ನಿಂತು "ನನ್ನ ಹೃದಯವು ಶ್ರೀರಾಮನನ್ನು ಬಿಟ್ಟು ಅರಗಳಿಗೆಯೂ ಕದಲದಿರುವುದು ಸತ್ಯವಾದರೆ, ಲೋಕಸಾಕ್ಷಿಯಾದ ಅಗ್ನಿದೇವನು ಸರ್ವವಿಧ

---

* 'ಅಮರ್ಷವಶಮಾಪನ್ನಃ' ಎಂದು ಮೂಲದಲ್ಲಿದೆ. ಅಮರ್ಷ=ದೈನ್ಯ ಎಂದು ವ್ಯಾಖ್ಯಾನಕಾರರು ಹೇಳುತ್ತಾರೆ.

ಯಥಾ ಮಾಂ ಶುದ್ಧಚಾರಿತ್ರಾಂ ದುಷ್ಟಾಂ ಜಾನಾತಿ ರಾಘವಃ ।
ತಥಾ ಲೋಕಸ್ಯ ಸಾಕ್ಷೀ ಮಾಂ ಸರ್ವತಃ ಪಾತು ಪಾವಕಃ ॥ ೨೫

ಕರ್ಮಣಾ ಮನಸಾ ವಾಚಾ ಯಥಾ ನಾತಿಚರಾಮ್ಯಹಮ್ ।
ರಾಘವಂ ಸರ್ವಧರ್ಮಜ್ಞಂ ತಥಾ ಮಾಂ ಪಾತು ಪಾವಕಃ ॥ ೨೬

ಆದಿತ್ಯೋ ಭಗವಾನ್ ವಾಯುರ್ದಿಶಶ್ಚಂದ್ರಸ್ತಥೈವ ಚ ।
ಅಹಶ್ಚಾಪಿ ತಥಾ ಸಂಧ್ಯೇ ರಾತ್ರಿಶ್ಚ ಪೃಥಿವೀ ತಥಾ ॥ ೨೭

ಯಥಾನ್ಯೇಽಪಿ ವಿಜಾನಂತಿ ತಥಾ ಚಾರಿತ್ರಸಂಯುತಾಮ್ ।
ಏವಮುಕ್ತ್ವಾ ತು ವೈದೇಹೀ ಪರಿಕ್ರಮ್ಯ ಹುತಾಶನಮ್ ॥ ೨೮

ವಿವೇಶ ಜ್ವಲನಂ ದೀಪ್ತಂ ನಿಃಸಂಗೇನಾಂತರಾತ್ಮನಾ ।
ಜನಃ ಸ ಸುಮಹಾಂಸ್ತ್ರಸ್ತೋ ಬಾಲವೃದ್ಧಸಮಾಕುಲಃ ॥ ೨೯

ದದರ್ಶ ಮೈಥಿಲೀಂ ತತ್ರ ಪ್ರವಿಶಂತೀಂ ಹುತಾಶನಮ್ ।
ಸಾ ತಪ್ತನವಹೇಮಾಭಾ ತಪ್ತಕಾಂಚನಭೂಷಣಾ ॥ ೩೦

---

ದಲ್ಲಿಯೂ ನನ್ನನ್ನು ರಕ್ಷಿಸಲಿ! (೨೩–೨೪). ದುಷ್ಟಳೆಂದು ತಿಳಿಯಲ್ಪಟ್ಟಿರುವ ನಾನು ಶುದ್ಧಚರಿತೆಯೆಂದು ಶ್ರೀರಾಮನಿಗೆ ನಂಬಿಕೆಯಾಗುವ ತೆರದಲ್ಲಿ, ಲೋಕಸಾಕ್ಷಿಯಾದ ಅಗ್ನಿದೇವನು ನನ್ನನ್ನು ಸರ್ವವಿಧದಲ್ಲಿಯೂ ರಕ್ಷಿಸಲಿ! (೨೫). ಸರ್ವಧರ್ಮಜ್ಞನಾದ ಶ್ರೀರಾಮನನ್ನು ನಾನು ಮನೋವಾಕ್ಕಾಯಗಳಿಂದಲೂ ಅತಿಕ್ರಮಿಸಿ ನಡೆದಿಲ್ಲವೆಂಬುದು ಸತ್ಯವಾದರೆ, ಯಜ್ಞೇಶ್ವರನು ನನ್ನನ್ನು ಪಾಲಿಸಲಿ! (೨೬). ಭಗವಂತನಾದ ಸೂರ್ಯನೂ ವಾಯುದೇವನೂ ದಿಕ್ಕುಗಳೂ ಚಂದ್ರನೂ ಹಗಲೂ ಪ್ರಾತಸ್ಸಂಧ್ಯೆ ಸಾಯಂಸಂಧ್ಯೆಗಳೂ ರಾತ್ರಿಯೂ ಭೂದೇವಿಯೂ ಇತರ ದೇವತೆಗಳೂ ನಾನು ಪರಿಶುದ್ಧಶೀಲಳೆಂದು ತಿಳಿದಿರುವ ಪಕ್ಷದಲ್ಲಿ, ಈ ಯಜ್ಞೇಶ್ವರನು ನನ್ನನ್ನು ಪಾಲಿಸಲಿ!" ಎಂದು ಹೇಳಿ ಅಗ್ನಿಯನ್ನು ಪ್ರದಕ್ಷಿಣೆಮಾಡಿ, ಯಾವ ಆತಂಕವೂ ಇಲ್ಲದೆ ನೆಮ್ಮದಿಯ ಹೃದಯದಿಂದ ಅಗ್ನಿಯಲ್ಲಿ ಧುಮುಕಿದಳು (೨೭–೨೮). ಅಲ್ಲಿ ನೆರೆದಿದ್ದ ಸ್ತ್ರೀ ಬಾಲವೃದ್ಧರಾದಿಯಾಗಿ ಸಕಲ ಜನರೂ ಅತ್ಯಂತ ಭೀತರಾಗಿ, ಅಗ್ನಿಯನ್ನು ಪ್ರವೇಶಿಸುತ್ತಿದ್ದ ಮೈಥಿಲಿಯನ್ನು ನೋಡಿದರು. ದಿವ್ಯಾಭರಣಭೂಷಿತಳಾಗಿ

**ಪಪಾತ ಜ್ವಲನಂ ದೀಪ್ತಂ ಸರ್ವಲೋಕಸ್ಯ ಸಂನಿಧೌ ।**
**ದದೃಶುಸ್ತಾಂ ಮಹಾಭಾಗಾಂ ಪ್ರವಿಶಂತೀಂ ಹುತಾಶನಮ್ ॥ ೩೧**

**ಸೀತಾಂ ಕೃತ್ಸ್ನಾಸ್ತ್ರಯೋ ಲೋಕಾಃ ಪುಣ್ಯಾಮಾಜ್ಯಾಹುತೀಮಿವ ।**
**ಪ್ರಚುಕ್ರುಶುಃ ಸ್ತ್ರಿಯಃ ಸರ್ವಾಸ್ತಾಂ ದೃಷ್ಟ್ವಾ ಹವ್ಯವಾಹನೇ ॥ ೩೨**

**ಪತಂತೀಂ ಸಂಸ್ಕೃತಾಂ ಮಂತ್ರೈರ್ವಸೋರ್ಧಾರಾಮಿವಾಧ್ವರೇ ।**
**ದದೃಶುಸ್ತಾಂ ತ್ರಯೋ ಲೋಕಾ ದೇವಗಂಧರ್ವದಾನವಾಃ ॥ ೩೩**

**ಶಪ್ತಾಂ ಪತಂತೀಂ ನಿರಯೇ ತ್ರಿದಿವಾದ್ದೇವತಾಮಿವ ।**
**ತಸ್ಯಾಮಗ್ನಿಂ ವಿಶಂತ್ಯಾಂ ತು ಹಾ ಹೇತಿ ವಿಪುಲಃ ಸ್ವನಃ ॥ ೩೪**

**ರಕ್ಷಸಾಂ ವಾನರಾಣಾಂ ಚ ಸಂಬಭೂವಾದ್ಭುತೋಪಮಃ ॥**

**ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನವಿಂಶತ್ಯುತ್ತರಶತತಮಃ ಸರ್ಗಃ**



ಅಪರಂಜಿಯ ಪುತ್ಥಳಿಯಂತಿದ್ದ ಜಾನಕಿಯು ಸರ್ವಲೋಕಗಳೆದುರಿಗೆ ಉರಿಯುವ ಅಗ್ನಿಜ್ವಾಲೆಯಲ್ಲಿ ಬಿದ್ದಳು (೨೯-೩೧). ಮಹಾತ್ಮಳಾದ ಸೀತೆಯು, ಪವಿತ್ರವಾದ ಆಜ್ಯಧಾರೆಯಂತೆ ಯಜ್ಞೇಶ್ವರನಲ್ಲಿ ಆಹುತಿಯಾಗಿ ಧುಮುಕುವುದನ್ನು ಮೂರು ಲೋಕಗಳಿಂದ ಬಂದಿದ್ದ ಸಮಸ್ತ ಜನರೂ ಕಂಡರು. ಯಜ್ಞಸಮಯದಲ್ಲಿ ಮಂತ್ರಸಂಸ್ಕೃತವಾದ ಘೃತಧಾರೆಯಂತೆ ಅಗ್ನಿಯನ್ನು ಪ್ರವೇಶಿಸುತ್ತಿದ್ದ ಜಾನಕಿಯನ್ನು ನೋಡಿ, ಅಲ್ಲಿದ್ದ ಸ್ತ್ರೀಯರೆಲ್ಲರೂ 'ಹಾ ಹಾ' ಎಂದು ಕೂಗಿಕೊಂಡರು (೩೨-೩೩). ಶಾಪಗ್ರಸ್ತಳಾದ ದೇವತೆಯೊಬ್ಬಳು ಸ್ವರ್ಗದಿಂದ ನರಕಕ್ಕೆ ಬೀಳುತ್ತಿರುವಳೋ ಎಂಬಂತೆ ಅಗ್ನಿಯಲ್ಲಿ ಬೀಳುತ್ತಿದ್ದ ವೈದೇಹಿಯನ್ನು, ಮೂರುಲೋಕಗಳಿಂದಲೂ ಬಂದಿದ್ದ ದೇವ ದಾನವ ಗಂಧರ್ವಾದಿಗಳು ಕಣ್ಣಾರೆ ಕಂಡರು. ಆ ಸಾಧ್ವಿಯು ಅಗ್ನಿಯನ್ನು ಪ್ರವೇಶಿಸುತ್ತಿರಲಾಗಿ, ರಾಕ್ಷಸರ ಮತ್ತು ವಾನರರ ಮಧ್ಯದಲ್ಲಿ 'ಹಾ ಹಾ' ಎಂಬ ವಿಪುಲವಾದ ಕೋಲಾಹಲಧ್ವನಿ ಎದ್ದಿತು (೩೪).

**ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಹತ್ತೊಂಬತ್ತನೆಯ ಸರ್ಗ**



## ವಿಂಶತ್ಯುತ್ತರಶತತಮಃ ಸರ್ಗಃ

### ಬ್ರಹ್ಮಕೃತರಾಮಸ್ತವಃ

ತತೋ ಹಿ ದುರ್ಮನಾ ರಾಮಃ ಶ್ರುತ್ವೈವ ವದತಾಂ ಗಿರಃ ।
ದಧ್ಯೌ ಮುಹೂರ್ತಂ ಧರ್ಮಾತ್ಮಾ ಬಾಷ್ಪವ್ಯಾಕುಲಲೋಚನಃ ॥ ೧

ತತೋ ವೈಶ್ರವಣೋ ರಾಜಾ ಯಮಶ್ಚಾಮಿತ್ರಕರ್ಶನಃ ।
ಸಹಸ್ರಾಕ್ಷೋ ಮಹೇಂದ್ರಶ್ಚ ವರುಣಶ್ಚ ಪರಂತಪಃ ॥ ೨

ಷಡರ್ಧನಯನಃ ಶ್ರೀಮಾನ್ ಮಹಾದೇವೋ ವೃಷಧ್ವಜಃ ।
ಕರ್ತಾ ಸರ್ವಸ್ಯ ಲೋಕಸ್ಯ ಬ್ರಹ್ಮಾ ಬ್ರಹ್ಮವಿದಾಂ ವರಃ ॥ ೩

ಏತೇ ಸರ್ವೇ ಸಮಾಗಮ್ಯ ವಿಮಾನೈಃ ಸೂರ್ಯಸಂನಿಭೈಃ ।
ಆಗಮ್ಯ ನಗರೀಂ ಲಂಕಾಮಭಿಜಗ್ಮುಶ್ಚ ರಾಘವಮ್ ॥ ೪

ತತಃ ಸಹಸ್ತಾಭರಣಾನ್ ಪ್ರಗೃಹ್ಯ ವಿಪುಲಾನ್ ಭುಜಾನ್ ।
ಅಬ್ರುವಂಸ್ತ್ರಿದಶಶ್ರೇಷ್ಠಾಃ ಪ್ರಾಂಜಲಿಂ ರಾಘವಂ ಸ್ಥಿತಮ್ ॥ ೫

## ಸರ್ಗ ೧೨೦

### ಬ್ರಹ್ಮಾದಿದೇವತೆಗಳು ಶ್ರೀರಾಮನ ಸನ್ನಿಧಿಗೆ ಆಗಮಿಸುವುದು. ಬ್ರಹ್ಮನು ಶ್ರೀರಾಮನನ್ನು ಸ್ತುತಿಸುವುದು.

ವಿಷಣ್ಣನಾಗಿದ್ದ ಶ್ರೀರಾಮನು ಜನರ ಕೋಲಾಹಲಧ್ವನಿಯನ್ನು ಕೇಳಿದನು. ಆ ಧರ್ಮಾತ್ಮನ ಕಣ್ಣುಗಳಿಂದ ನೀರು ತುಳುಕಿತು. ಸ್ವಲ್ಪಕಾಲ ಏನೂ ತೋರದೆ ಅವನು ಚಿಂತಾಕುಲನಾದನು (೧). ಅಷ್ಟರಲ್ಲಿ ಯಕ್ಷರಾಜನಾದ ಕುಬೇರ, ಶತ್ರುವಿನಾಶಿಯಾದ ಯಮ, ಸಹಸ್ರಾಕ್ಷನಾದ ದೇವೇಂದ್ರ, ಪರಂತಪನಾದ ವರುಣ, ತ್ರಿಣೇತ್ರನೂ ವೃಷಭಧ್ವಜನೂ ಆದ ಪರಮೇಶ್ವರ, ಸೃಷ್ಟಿಕರ್ತನೂ ಬ್ರಹ್ಮವಿದರಲ್ಲಿ ಶ್ರೇಷ್ಠನೂ ಆದ ಬ್ರಹ್ಮ–ಮುಂತಾದ ದೇವತೆಗಳು ಸೂರ್ಯಸಂಕಾಶವಾದ ವಿಮಾನಗಳನ್ನೇರಿ, ಲಂಕಾಭಿಮುಖರಾಗಿ ಬಂದು ಶ್ರೀರಾಮನ ಸನ್ನಿಧಿಗೆ ಆಗಮಿಸಿದರು (೨–೪). ಶ್ರೀರಾಮನು ಅವರನ್ನು ನೋಡಿ ಬದ್ಧಾಂಜಲಿಯಾದನು. ಆ ದೇವತೆಗಳು ದಿವ್ಯಾಭರಣ

**ಕರ್ತಾ ಸರ್ವಸ್ಯ ಲೋಕಸ್ಯ ಶ್ರೇಷ್ಠೋ ಜ್ಞಾನವತಾಂ ವರಃ |**
**ಉಪೇಕ್ಷಸೇ ಕಥಂ ಸೀತಾಂ ಪತಂತೀಂ ಹವ್ಯವಾಹನೇ || ೬**

**ಕಥಂ ದೇವಗಣಶ್ರೇಷ್ಠಮಾತ್ಮಾನಂ ನಾವಬುಧ್ಯಸೇ |**
**ಋತಧಾಮಾ ವಸುಃ ಪೂರ್ವಂ ವಸೂನಾಂ ತ್ವಂ ಪ್ರಜಾಪತಿಃ || ೭**

**ತ್ರಯಾಣಾಂ ತ್ವಂ ಹಿ ಲೋಕಾನಾಮಾದಿಕರ್ತಾ ಸ್ವಯಂಪ್ರಭುಃ |**
**ರುದ್ರಾಣಾಮಷ್ಟಮೋ ರುದ್ರಃ ಸಾಧ್ಯಾನಾಮಪಿ ಪಂಚಮಃ || ೮**

**ಅಶ್ವಿನೌ ಚಾಪಿ ತೇ ಕರ್ಣೌ ಚಂದ್ರಸೂರ್ಯೌ ಚ ಚಕ್ಷುಷೀ |**
**ಅಂತೇ ಚಾದೌ ಚ ಲೋಕಾನಾಂ ದೃಶ್ಯಸೇ ತ್ವಂ ಪರಂತಪ || ೯**

**ಉಪೇಕ್ಷಸೇ ಚ ವೈದೇಹೀಂ ಮಾನುಷಃ ಪ್ರಾಕೃತೋ ಯಥಾ |**
**ಇತ್ಯುಕ್ತೋ ಲೋಕಪಾಲೈಸ್ತೈಃ ಸ್ವಾಮೀ ಲೋಕಸ್ಯ ರಾಘವಃ ||**

---

ಗಳನ್ನು ತೊಟ್ಟಿದ್ದ ತಮ್ಮ ದೀರ್ಘಬಾಹುಗಳನ್ನು ಮೇಲೆತ್ತಿ "ಶ್ರೀರಾಮ, ಸರ್ವಲೋಕಗಳ ಸೃಷ್ಟಿಕರ್ತನೂ ಸರ್ವಶ್ರೇಷ್ಠನೂ ಜ್ಞಾನಿಗಳಲ್ಲಿ ಅಗ್ರಗಣ್ಯನೂ ಆದವನು ನೀನು. ನಿನ್ನ ಧರ್ಮಪತ್ನಿಯಾದ ಸೀತೆಯು ಅಗ್ನಿಯಲ್ಲಿ ಪ್ರವೇಶಿಸುತ್ತಿರುವಾಗಲೂ ಉಪೇಕ್ಷಿಸುವ ಈ ಪರಿ ಯಾವುದು? (೫-೬). ಇಂದ್ರಾದಿ ಸಕಲ ದೇವತೆಗಳಿಗಿಂತಲೂ ನೀನು ಶ್ರೇಷ್ಠನೆಂಬುದನ್ನು ಏಕೆ ತಿಳಿಯದಿದ್ದೀಯೆ? ಅಷ್ಟವಸುಗಳಲ್ಲಿ ಪ್ರಜಾಸ್ವಾಮಿಯಾದ ಋತಧಾಮನೆಂಬ ವಸು ನೀನೇ*. ಮೂರು ಲೋಕಗಳ ಆದಿಕರ್ತನೂ ಅನಿಯಮ್ಯನೂ ಆದ ಸ್ವಾಮಿ ನೀನೇ. ರುದ್ರರಲ್ಲಿ ಎಂಟನೆಯ ರುದ್ರನಾದ ಮಹಾದೇವನೂ ಸಾಧ್ಯರಲ್ಲಿ ಐದನೆಯ ಸಾಧ್ಯನಾದ ವೀರ್ಯವಂತನೂ ನೀನೇ (೭-೮). ಅಶ್ವಿನೀದೇವತೆಗಳು ನಿನ್ನ ಕಿವಿಗಳು. ಸೂರ್ಯಚಂದ್ರರು ನಿನ್ನ ಕಣ್ಣುಗಳು. ಲೋಕಗಳ ಸೃಷ್ಟಿಯ ಆದಿಯಲ್ಲಿಯೂ ಪ್ರಳಯದ ಕಡೆಯಲ್ಲಿಯೂ ಶಾಶ್ವತನಾಗಿ ಉಳಿದಿರುವವನು ನೀನೊಬ್ಬನೇ. ಹೀಗಿರುವಾಗ ಪ್ರಾಕೃತನಾದ ಒಬ್ಬ ಮಾನವನಂತೆ ವೈದೇಹಿಯನ್ನು ಉಪೇಕ್ಷಿಸಬಹುದೆ?" ಎಂದರು

---

* 'ಋತಧಾಮ' ಎಂಬುದರಿಂದ ಮುಂದೆ ಮೂರು ಶ್ಲೋಕಗಳನ್ನು ಕತಕ ವ್ಯಾಖ್ಯಾನಕಾರರು ಅಂಗೀಕರಿಸಿಲ್ಲ.

ಅಬ್ರವೀತ್ತ್ರಿದಶಶ್ರೇಷ್ಠಾನ್ ರಾಮೋ ಧರ್ಮಭೃತಾಂ ವರಃ ।
ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಮ್ ॥ ೧೧

ಯೋಽಹಂ ಯಸ್ಯ ಯತಶ್ಚಾಹಂ ಭಗವಾಂಸ್ತದ್ಬ್ರವೀತು ಮೇ ।
ಇತಿ ಬ್ರುವಂತಂ ಕಾಕುತ್ಸ್ಥಂ ಬ್ರಹ್ಮಾ ಬ್ರಹ್ಮವಿದಾಂ ವರಃ ॥ ೧೨

ಅಬ್ರವೀಚ್ಛೃಣು ಮೇ ರಾಮ ಸತ್ಯಂ ಸತ್ಯಪರಾಕ್ರಮ ।
ಭವಾನ್ನಾರಾಯಣೋ ದೇವಃ ಶ್ರೀಮಾಂಶ್ಚಕ್ರಾಯುಧೋ ವಿಭುಃ ॥

ಏಕಶೃಂಗೋ ವರಾಹಸ್ತ್ವಂ ಭೂತಭವ್ಯಸಪತ್ನಜಿತ್ ।
ಅಕ್ಷರಂ ಬ್ರಹ್ಮ ಸತ್ಯಂ ಚ ಮಧ್ಯೇ ಚಾಂತೇ ಚ ರಾಘವ ॥ ೧೪

ಲೋಕಾನಾಂ ತ್ವಂ ಪರೋ ಧರ್ಮೋ ವಿಷ್ವಕ್ಸೇನಶ್ಚತುರ್ಭುಜಃ ।
ಶಾರ್ಙ್ಗಧನ್ವಾ ಹೃಷೀಕೇಶಃ ಪುರುಷಃ ಪುರುಷೋತ್ತಮಃ ॥ ೧೫

(೯-೧೦). ಹೀಗೆ ಲೋಕಪಾಲರಾದ ದೇವತೆಗಳು ಹೇಳಲು, ಲೋಕೇಶ್ವರನೂ ಧರ್ಮವಿದರಲ್ಲಿ ಅಗ್ರಗಣ್ಯನೂ ಆದ ಶ್ರೀರಾಮನು "ಇದೇನು ಹೀಗೆ ಹೇಳುವಿರಿ? ನಾನೊಬ್ಬ ಮಾನವನೆಂದೂ ದಶರಥಪುತ್ರನಾದ ರಾಮನೆಂದೂ ತಿಳಿದುಕೊಂಡಿದ್ದೇನೆ" ಎಂದನು. ಅನಂತರ ಬ್ರಹ್ಮನನ್ನು ನೋಡಿ "ಭಗವನ್, ನಾನು ಯಾರು? ಯಾರ ಸಂಬಂಧಿ? ಎಲ್ಲಿಂದ ಬಂದೆನು? ಎಂಬುದನ್ನು ಕೃಪೆಯಿಂದ ತಿಳಿಸು" ಎಂದು ಕೇಳಿದನು * (೧೧-೧೨). ಆಗ ಬ್ರಹ್ಮವಿದರಲ್ಲಿ ಅಗ್ರಗಣ್ಯನಾದ ಬ್ರಹ್ಮದೇವನು ಕಾಕುತ್ಸ್ಥನನ್ನು ಕುರಿತು ಹೀಗೆಂದನು: "ಸತ್ಯಪರಾಕ್ರಮ-ಶ್ರೀರಾಮ, ಸತ್ಯವಾದ ನಿನ್ನ ಸ್ವರೂಪವನ್ನು ಹೇಳುವೆನು ಕೇಳು: ನೀನೇ ದೇವದೇವನಾದ ಶ್ರೀಮನ್ನಾರಾಯಣ. ಚಕ್ರಾಯುಧನಾದ ವಿಭು (೧೩). ಏಕದಂಷ್ಟ್ರನಾದ ವರಾಹಾವತಾರಿ. ಭೂತಭವಿಷ್ಯದ್ವರ್ತಮಾನಕಾಲಗಳ ವೈರಿಗಳನ್ನು ಜಯಿಸಿದವನು. ಆದ್ಯಂತರಹಿತವೂ ಅವಿಕಾರಿಯೂ ಆದ ಬ್ರಹ್ಮವಸ್ತು ನೀನು. ಜನರಿಗೆ ಶ್ರೇಯಸ್ಕರವಾದ ಪರಮಧರ್ಮವೇ ನೀನು. ಚತುರ್ಭುಜನಾದ ವಿಷ್ವಕ್ಸೇನನೇ ನೀನು. ನೀನೇ ಶಾರ್ಙ್ಗವೆಂಬ ಧನುಸ್ಸನ್ನು ಧರಿಸಿದವನು. ಇಂದ್ರಿಯಗಳಿಗೆ

* ಅನುಬಂಧವನ್ನು ನೋಡಿ.

ಅಜಿತಃ ಖಡ್ಗಧೃದ್ವಿಷ್ಣುಃ ಕೃಷ್ಣಶ್ಚೈವ ಬೃಹದ್ಬಲಃ ।
ಸೇನಾನೀರ್ಗ್ರಾಮಣೀಶ್ಚ ತ್ವಂ ಬುದ್ಧಿಃ ಸತ್ತ್ವಂ ಕ್ಷಮಾ ದಮಃ ॥ ೧೬

ಪ್ರಭವಶ್ಚಾಪ್ಯಯಶ್ಚ ತ್ವಮುಪೇಂದ್ರೋ ಮಧುಸೂದನಃ ।
ಇಂದ್ರಕರ್ಮಾ ಮಹೇಂದ್ರಸ್ತ್ವಂ ಪದ್ಮನಾಭೋ ರಣಾಂತಕೃತ್ ॥

ಶರಣ್ಯಂ ಶರಣಂ ಚ ತ್ವಾಮಾಹುರ್ದಿವ್ಯಾ ಮಹರ್ಷಯಃ ।
ಸಹಸ್ರಶೃಂಗೋ ವೇದಾತ್ಮಾ ಶತಜಿಹ್ವೋ ಮಹರ್ಷಭಃ ॥ ೧೮

ತ್ವಂ ತ್ರಯಾಣಾಂ ಹಿ ಲೋಕಾನಾಮಾದಿಕರ್ತಾ ಸ್ವಯಂಪ್ರಭುಃ ।
ಸಿದ್ಧಾನಾಮಪಿ ಸಾಧ್ಯಾನಾಮಾಶ್ರಯಶ್ಚಾಸಿ ಪೂರ್ವಜಃ ॥ ೧೯

ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮೋಂಕಾರಃ ಪರಂತಪಃ ।
ಪ್ರಭವಂ ನಿಧನಂ ವಾ ತೇ ನ ವಿದುಃ ಕೋ ಭವಾನಿತಿ ॥ ೨೦

---

ಅಧೀಶ್ವರ. ಆದಿಪುರುಷ. ಪುರುಷೋತ್ತಮ (೧೪-೧೫). ಪರರಿಂದ ಅಜಿತ. ನಂದಕವೆಂಬ ಖಡ್ಗವನ್ನು ಧರಿಸಿದವನು. ವಿಷ್ಣು, ಕೃಷ್ಣ, ಅಮಿತಬಲಶಾಲಿ. ದೇವಸೇನೆಯನ್ನೂ ಇಂದ್ರಿಯಗ್ರಾಮಗಳನ್ನೂ ಪ್ರೇರಿಸತಕ್ಕವನು. ಜ್ಞಾನ, ಸತ್ತ್ವ, ಕ್ಷಮೆ, ದಮೆಗಳೆಲ್ಲವೂ ನೀನೇ. ಸೃಷ್ಟಿಕರ್ತನೂ ಲಯಕರ್ತನೂ ನೀನು. ಉಪೇಂದ್ರನೂ ಮಧುಸೂದನನೂ ನೀನು. ಇಂದ್ರನನ್ನೇ ನಿರ್ಮಿಸುವ ಮಹೇಂದ್ರ ನೀನು. ಪದ್ಮನಾಭ. ಸಂಸಾರವೆಂಬ ಯುದ್ಧವನ್ನು ಸಮಾಪ್ತಿಗೊಳಿಸತಕ್ಕವನು (೧೬-೧೭). ದಿವ್ಯಜ್ಞಾನ ಸಂಪನ್ನರಾದ ಮಹರ್ಷಿಗಳು ನೀನೇ ಶರಣಾರ್ಹನೆಂದೂ ರಕ್ಷಣೋಪಾಯವೆಂದೂ ಹೇಳುತ್ತಾರೆ. ಸಾವಿರಾರು ಶಾಖೆಗಳೆಂಬ ಕೊಂಬುಗಳಿಂದಲೂ ನೂರಾರು ವಿಧಿಗಳೆಂಬ ನಾಲಗೆಗಳಿಂದಲೂ ಕೂಡಿದ ವೇದಸ್ವರೂಪನಾದ ಮಹಾವೃಷಭ ನೀನು (೧೮). ಸರ್ವಪ್ರಜೆಗಳನ್ನೂ ಸೃಜಿಸಿದ ಸ್ವಯಂಪ್ರಭು. ಮುಕ್ತರಿಗೂ ಮುಮುಕ್ಷುಗಳಿಗೂ ಪುರಾತನವಾದ ಆಶ್ರಯ. ಶ್ರೀರಾಮ, ಯಜ್ಞ, ವಷಟ್ಕಾರ ಮತ್ತು ಓಂಕಾರಗಳು ನೀನೇ. ಪ್ರಕೃತಿಯ ಆಚೆಗಿರುವ ಪರವಸ್ತು ನೀನು. ನಿನ್ನ ಆದ್ಯಂತಗಳನ್ನಾಗಲಿ ನಿನ್ನ ಸ್ವರೂಪ

ದೃಶ್ಯಸೇ ಸರ್ವಭೂತೇಷು ಬ್ರಾಹ್ಮಣೇಷು ಚ ಗೋಷು ಚ ।
ದಿಕ್ಷು ಸರ್ವಾಸು ಗಗನೇ ಪರ್ವತೇಷು ವನೇಷು ಚ ॥ ೨೧

ಸಹಸ್ರಚರಣಃ ಶ್ರೀಮಾನ್ ಶತಶೀರ್ಷಃ ಸಹಸ್ರದೃಕ್ ।
ತ್ವಂ ಧಾರಯಸಿ ಭೂತಾನಿ ವಸುಧಾಂ ಚ ಸಪರ್ವತಾಮ್ ॥ ೨೨

ಅಂತೇ ಪೃಥಿವ್ಯಾಃ ಸಲಿಲೇ ದೃಶ್ಯಸೇ ತ್ವಂ ಮಹೋರಗಃ ।
ತ್ರೀನ್ ಲೋಕಾನ್ ಧಾರಯನ್ ರಾಮ ದೇವಗಂಧರ್ವದಾನವಾನ್

ಅಹಂ ತೇ ಹೃದಯಂ ರಾಮ ಜಿಹ್ವಾ ದೇವೀ ಸರಸ್ವತೀ ।
ದೇವಾ ಗಾತ್ರೇಷು ರೋಮಾಣಿ ನಿರ್ಮಿತಾ ಬ್ರಹ್ಮಣಾ ಪ್ರಭೋ ॥

ನಿಮೇಷಸ್ತೇ ಭವೇದ್ರಾತ್ರಿರುನ್ಮೇಷಸ್ತೇ ಭವೇದ್ದಿವಾ ।
ಸಂಸ್ಕಾರಾಸ್ತೇಽಭವನ್ ವೇದಾ ನ ತದಸ್ತಿ ತ್ವಯಾ ವಿನಾ ॥ ೨೫

ಜಗತ್ ಸರ್ವಂ ಶರೀರಂ ತೇ ಸ್ಥೈರ್ಯಂ ತೇ ವಸುಧಾತಲಮ್ ।
ಅಗ್ನಿಃ ಕೋಪಃ ಪ್ರಸಾದಸ್ತೇ ಸೋಮಃ ಶ್ರೀವತ್ಸಲಕ್ಷಣಃ ॥ ೨೬

---

ವನ್ನಾಗಲಿ ಯಾರೂ ಅರಿಯರು (೧೯-೨೦). ಬ್ರಹ್ಮವಿದರು, ಗೋವುಗಳು ಮೊದಲಾದ ಸರ್ವಭೂತಗಳಲ್ಲಿಯೂ ಸಮಸ್ತದಿಕ್ಕುಗಳಲ್ಲಿಯೂ ಗಗನ ಪರ್ವತಾರಣ್ಯಗಳಲ್ಲಿಯೂ ಯೋಗಿಗಳಿಗೆ ಗೋಚರಿಸುವ ಅಂತರ್ಯಾಮಿ ನೀನು (೨೧). 'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಆಗಿರುವ ಮಹಾಮಹಿಮ. ಸಕಲಜೀವಜಾತಗಳನ್ನೂ ಪರ್ವತಸಹಿತವಾದ ವಸುಧೆಯನ್ನೂ ಧರಿಸಿದ್ದೀಯೆ. ಶ್ರೀರಾಮ, ಪೃಥಿವಿಯು ನಾಶವಾದಾಗ ಜಲರಾಶಿಯಲ್ಲಿ ಶೇಷಶಾಯಿಯಾದ ಅನಂತನಾಗಿ ಗೋಚರಿಸುವೆ. ದೇವ ದಾನವ ಗಂಧರ್ವರನ್ನೂ ತ್ರೈಲೋಕ್ಯವನ್ನೂ ಧರಿಸಿರುವ ವಿರಾಟ್‌ಪುರುಷ ನೀನು (೨೨-೨೩). ರಾಘವ, ನಿನ್ನ ಹೃದಯವೇ ನಾನು! ನಿನ್ನ ನಾಲಗೆಯೇ ಸರಸ್ವತೀದೇವಿ! ದೇವತೆಗಳು ನಿನ್ನ ದೇಹದಲ್ಲಿರುವ ರೋಮ ಗಳು! ಪ್ರಭು, ಈ ರೀತಿಯಲ್ಲಿ ಪರಬ್ರಹ್ಮದ ಸೃಷ್ಟಿಕ್ರಮ! (೨೪). ನೀನು ಕಣ್ಣುಮುಚ್ಚಿದರೆ ರಾತ್ರಿ, ಕಣ್ದೆರೆದರೆ ಹಗಲು! ಪ್ರವೃತ್ತಿನಿವೃತ್ತಿಬೋಧಕ ಗಳಾದ ವೇದಗಳು ನಿನ್ನಿಂದ ಆವಿರ್ಭವಿಸಿದವು. ನೀನಿಲ್ಲದ ವಸ್ತುವೇ ಇಲ್ಲ (೨೫). ಈ ಜಗತ್ತೆಲ್ಲವೂ ನಿನ್ನ ಶರೀರ. ಧಾರಣಸಾಮರ್ಥ್ಯವುಳ್ಳ

ತ್ವಯಾ ಲೋಕಾಸ್ತ್ರಯಃ ಕ್ರಾಂತಾಃ ಪುರಾ ಸ್ವೈರ್ವಿಕ್ರಮೈಸ್ತ್ರಿಭಿಃ ।
ಮಹೇಂದ್ರಶ್ಚ ಕೃತೋ ರಾಜಾ ಬಲಿಂ ಬದ್ಧ್ವಾ ಮಹಾಸುರಮ್ ॥

ಸೀತಾ ಲಕ್ಷ್ಮೀರ್ಭವಾನ್ ವಿಷ್ಣುರ್ದೇವಃ ಕೃಷ್ಣಃ ಪ್ರಜಾಪತಿಃ ।
ವಧಾರ್ಥಂ ರಾವಣಸ್ಯೇಹ ಪ್ರವಿಷ್ಟೋ ಮಾನುಷೀಂ ತನುಮ್ ॥ ೨೮

ತದಿದಂ ನಃ ಕೃತಂ ಕಾರ್ಯಂ ತ್ವಯಾ ಧರ್ಮಭೃತಾಂ ವರ ।
ನಿಹತೋ ರಾವಣೋ ರಾಮ ಪ್ರಹೃಷ್ಟೋ ದಿವಮಾಕ್ರಮ ॥ ೨೯

ಅಮೋಘಂ ಬಲವೀರ್ಯಂ ತೇ ಅಮೋಘಸ್ತೇ ಪರಾಕ್ರಮಃ ।
ಅಮೋಘಂ ದರ್ಶನಂ ರಾಮ ನ ಚ ಮೋಘಃ ಸ್ತವಸ್ತವ ॥ ೩೦

ಅಮೋಘಾಸ್ತೇ ಭವಿಷ್ಯಂತಿ ಭಕ್ತಿಮಂತಶ್ಚ ಯೇ ನರಾಃ ।
ಯೇ ತ್ವಾಂ ದೇವಂ ಧ್ರುವಂ ಭಕ್ತಾಃ ಪುರಾಣಂ ಪುರುಷೋತ್ತಮಮ್

---

ವಸುಧಾತಳವೇ ನೀನು. ನಿನ್ನ ಕೋಪವೇ ಅಗ್ನಿ; ನಿನ್ನ ಪ್ರಸನ್ನತೆಯೇ ಚಂದ್ರ. ಶ್ರೀವತ್ಸವನ್ನು ವಕ್ಷಸ್ಥಳದಲ್ಲಿ ಧರಿಸಿದವನು ನೀನು. ಹಿಂದೆ ವಾಮನಾವತಾರದಲ್ಲಿ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಅಳಿದಿದ್ದೀಯೆ ಮಹಾಸುರನಾದ ಬಲಿಚಕ್ರವರ್ತಿಯನ್ನು ಬಂಧಿಸಿ, ಇಂದ್ರನನ್ನು ಸ್ವರ್ಗಾಧಿಪತಿಯನ್ನಾಗಿ ಮಾಡಿದ್ದೀಯೆ (೨೬-೨೭). ಸೀತೆಯೇ ಲಕ್ಷ್ಮಿ, ನೀನೇ ಮಹಾವಿಷ್ಣು. ಕೃಷ್ಣನೂ ಪ್ರಜಾಪತಿಯೂ ಆದ ಆದಿದೇವ ನೀನು. ರಾವಣನನ್ನು ವಧಿಸುವುದಕ್ಕಾಗಿ ನಮ್ಮ ಪ್ರಾರ್ಥನೆಯಂತೆ ಮನುಷ್ಯದೇಹವನ್ನು ಧರಿಸಿ ಬಂದಿದ್ದೀಯೆ. ಓ ಧರ್ಮರಕ್ಷಕ, ಈಗ ನಮ್ಮ ಕಾರ್ಯವನ್ನು ನೆರವೇರಿಸಿಕೊಟ್ಟಿದ್ದೀಯೆ. ರಾವಣನನ್ನು ಸಂಹರಿಸಿದ್ದಾಯಿತು. ಶ್ರೀರಾಮ, ಇನ್ನು ಕೆಲವುಕಾಲ ಹರ್ಷದಿಂದಿದ್ದು ನಿನ್ನ ಸ್ಥಾನವಾದ ಸ್ವರ್ಗವನ್ನೇರು! (೨೮-೨೯). ನಿನ್ನ ಬಲವೀರ್ಯಗಳು ಅಮೋಘವಾದವು. ನಿನ್ನ ಪರಾಕ್ರಮವು ಎಣೆಯಿಲ್ಲದ್ದು. ನಿನ್ನ ದರ್ಶನವು ಅನಂತಫಲವನ್ನು ಕೊಡತಕ್ಕದ್ದು. ಶ್ರೀರಾಮ, ನಿನ್ನ ಸ್ತೋತ್ರವು ಎಂದಿಗೂ ವ್ಯರ್ಥವಾಗದು (೩೦). ನಿನ್ನ ಭಕ್ತರು ಉತ್ತಮಫಲವನ್ನು ಪಡೆಯುವರು. ಶಾಶ್ವತನೂ ಪುರಾಣಪುರುಷನೂ ಪುರುಷೋತ್ತಮನೂ ಆದ ನಿನ್ನನ್ನು ಯಾರು ದೃಢವಾಗಿ ನಂಬಿ ಭಜಿಸುವರೋ, ಅವರು ಇಹಪರಗಳಲ್ಲಿ ಸಕಲಾಭೀಷ್ಟಗಳನ್ನೂ

ಪ್ರಾಪ್ನುವಂತಿ ಸದಾ ಕಾಮಾನಿಹ ಲೋಕೇ ಪರತ್ರ ಚ |
ಇಮಮಾರ್ಷಂ ಸ್ತವಂ ನಿತ್ಯಮಿತಿಹಾಸಂ ಪುರಾತನಮ್ || ೩೨
ಯೇ ನರಾಃ ಕೀರ್ತಯಿಷ್ಯಂತಿ ನಾಸ್ತಿ ತೇಷಾಂ ಪರಾಭವಃ ||

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ವಿಂಶತ್ಯುತ್ತರಶತತಮಃ ಸರ್ಗಃ

---

## ಏಕವಿಂಶತ್ಯುತ್ತರಶತತಮಃ ಸರ್ಗಃ

### ಸೀತಾಪ್ರತಿಗ್ರಹಃ

ಏತಚ್ಛ್ರುತ್ವಾ ಶುಭಂ ವಾಕ್ಯಂ ಪಿತಾಮಹಸಮೀರಿತಮ್ |
ಅಂಕೇನಾದಾಯ ವೈದೇಹೀಮುತ್ಪಪಾತ ವಿಭಾವಸುಃ || ೧
ಸ ವಿಧೂಯ ಚಿತಾಂ ತಾಂ ತು ವೈದೇಹೀಂ ಹವ್ಯವಾಹನಃ |
ಉತ್ತಸ್ಥೌ ಮೂರ್ತಿಮಾನಾಶು ಗೃಹೀತ್ವಾ ಜನಕಾತ್ಮಜಾಮ್ || ೨

---

ಪಡೆಯುತ್ತಾರೆ. ವೇದಸಮ್ಮತವೂ ಪುರಾವೃತ್ತಪ್ರತಿಪಾದಕವೂ ಅನಾದಿ ಬ್ರಹ್ಮವಿದ್ಯಾಪರವೂ ಆದ ಈ ಸ್ತೋತ್ರವನ್ನು ಯಾವ ಜನರು ನಿತ್ಯವೂ ಪಠಿಸುವರೋ ಅವರಿಗೆ ಪರಾಜಯವೆಂಬುದಿಲ್ಲ" ಎಂದು ಬ್ರಹ್ಮನು ಸ್ತುತಿಸಿದನು (೩೧-೩೨).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತನೆಯ ಸರ್ಗ

---

## ಸರ್ಗ ೧೨೧

ಯಜ್ಞೇಶ್ವರನು ವೈದೇಹಿಯನ್ನು ಶ್ರೀರಾಮನಿಗೆ ಅರ್ಪಿಸುವುದು. ಶ್ರೀರಾಮನು ಅವಳ ಚಾರಿತ್ರವನ್ನು ಕೊಂಡಾಡಿ ಪುನಃ ಸ್ವೀಕರಿಸುವುದು. ಅವರಿಬ್ಬರಿಗೂ ನಿರತಿಶಯವಾದ ಆನಂದ.

ಬ್ರಹ್ಮನು ಶ್ರೀರಾಮನಿಗೆ ಹೇಳಿದ ಶುಭವಾಕ್ಯವನ್ನು ಕೇಳಿದೊಡನೆ, ಅತ್ತಲಾಗಿ ಯಜ್ಞೇಶ್ವರನು ವೈದೇಹಿಯನ್ನು ತನ್ನ ಮಡಿಲಲ್ಲಿ ಕುಳ್ಳಿರಿಸಿಕೊಂಡು ಚಿತೆಯಿಂದ ಮೇಲೆದ್ದನು! ಅಗ್ನಿದೇವನು ಪುರುಷಾಕೃತಿಯನ್ನು ಧರಿಸಿ ತನ್ನ ನಿಜಸ್ವರೂಪದಿಂದ ಮೇಲೆದ್ದು, ಜನಕರಾಜತನಯಳನ್ನು

ತರುಣಾದಿತ್ಯಸಂಕಾಶಾಂ ತಪ್ತಕಾಂಚನಭೂಷಣಾಮ್ ।
ರಕ್ತಾಂಬರಧರಾಂ ಬಾಲಾಂ ನೀಲಕುಂಚಿತಮೂರ್ಧಜಾಮ್ ॥ ೩

ಅಕ್ಲಿಷ್ಟಮಾಲ್ಯಾಭರಣಾಂ ತಥಾರೂಪಾಂ ಮನಸ್ವಿನೀಮ್ ।
ದದೌ ರಾಮಾಯ ವೈದೇಹೀಮಂಕೇ ಕೃತ್ವಾ ವಿಭಾವಸುಃ ॥ ೪

ಅಬ್ರವೀಚ್ಚ ತದಾ ರಾಮಂ ಸಾಕ್ಷೀ ಲೋಕಸ್ಯ ಪಾವಕಃ ।
ಏಷಾ ತೇ ರಾಮ ವೈದೇಹೀ ಪಾಪಮಸ್ಯಾಂ ನ ವಿದ್ಯತೇ ॥ ೫

ನೈವ ವಾಚಾ ನ ಮನಸಾ ನಾನುಧ್ಯಾನಾನ್ನ ಚಕ್ಷುಷಾ ।
ಸುವೃತ್ತಾ ವೃತ್ತಶೌಂಡೀರ ನ ತ್ವಾಮತಿಚಚಾರ ಹ ॥ ೬

ರಾವಣೇನಾಪನೀತೈಷಾ ವೀರ್ಯೋತ್ಸಿಕ್ತೇನ ರಕ್ಷಸಾ ।
ತ್ವಯಾ ವಿರಹಿತಾ ದೀನಾ ವಿವಶಾ ನಿರ್ಜನಾದ್ವನಾತ್ ॥ ೭

---

ಎತ್ತಿಕೊಂಡು ಚಿತೆಯಿಂದ ಹೊರಗೆ ಬಂದನು (೧-೨). ಸ್ವರ್ಣಾಭರಣ ಭೂಷಿತೆಯಾದ ಜಾನಕಿಯಾದರೋ ಬಾಲಸೂರ್ಯನಂತೆ ತೊಳಗುತ್ತಿದ್ದಳು. ಹೊಂಬಣ್ಣದ ಸೀರೆಯನ್ನುಟ್ಟಿದ್ದ ಆ ಬಾಲೆಯು ಮುಂಗುರುಳಿನ ಕೃಷ್ಣಕೇಶ ರಾಶಿಯಿಂದ ವಿರಾಜಿಸುತ್ತಿದ್ದಳು. ಮುಡಿದ ಹೂಗಳೂ ಧರಿಸಿದ ಒಡವೆ ಗಳೂ ಕಂದದೆ ಕುಂದದೆ, ಮೊದಲಿನಂತೆಯೇ ಇದ್ದವು. ಅಣುಮಾತ್ರವೂ ಕಳವಳಿಸದೆ ಧೀರೆಯಾಗಿದ್ದ ವೈದೇಹಿಯನ್ನು ಲೋಕಸಾಕ್ಷಿಯಾದ ಯಜ್ಞ ಪುರುಷನು ಅಂಕದಲ್ಲಿ ಹಿಡಿದು ಎತ್ತಿಕೊಂಡು ಬಂದು ಶ್ರೀರಾಮನಿಗೆ ಅರ್ಪಿಸಿ ಹೀಗೆಂದನು (೩-೪): "ಶ್ರೀರಾಮ, ಈ ವೈದೇಹಿಯು ನಿನ್ನವಳು. ಇವಳನ್ನು ಪರಿಗ್ರಹಿಸು. ಇವಳಲ್ಲಿ ಯಾವ ದೋಷವೂ ಇಲ್ಲ. ಮಾತಿ ನಿಂದಾಗಲಿ, ಮನಸ್ಸಿನಿಂದಾಗಲಿ, ಸಂಕಲ್ಪದಿಂದಾಗಲಿ, ಕಣ್ಣಿನ ನೋಟ ದಿಂದಾಗಲಿ—ಇವಳು ನಿನ್ನನ್ನು ಮೀರಿ ನಡೆದವಳಲ್ಲ. ಸದಾಚಾರನಿರತೆ ಯಾದ ಈ ಸುಶೀಲೆಯು, ಎಲೈ ಸದಾಚಾರನಿರತ, ನಿನ್ನನ್ನು ಎಂದೂ ಅತಿಕ್ರಮಿಸಲಿಲ್ಲ (೫-೬). ನಿರ್ಜನವಾದ ವನದಲ್ಲಿ ನೀನಿಲ್ಲದಾಗ ದಿಕ್ಕಿಲ್ಲದೆ ದೈನ್ಯದಿಂದ ಪರಾಧೀನಳಾಗಿದ್ದ ಇವಳನ್ನು, ವೀರ್ಯೋದ್ಧತನಾದ ರಾವಣನು ಬಲಾತ್ಕಾರದಿಂದ ಅಪಹರಿಸಿ ತಂದನು. ತನ್ನ ಅಂತಃಪುರಕ್ಕೆ ಸೇರಿದ

ನೇಯಮರ್ಹತಿ ಚೈಶ್ವರ್ಯಂ ರಾವಣಾಂತಃಪುರೇ ಶುಭಾ ।
ಅನನ್ಯಾ ಹಿ ಮಯಾ ಸೀತಾ ಭಾಸ್ಕರೇಣ ಪ್ರಭಾ ಯಥಾ ॥ ೧೯

ವಿಶುದ್ಧಾ ತ್ರಿಷು ಲೋಕೇಷು ಮೈಥಿಲೀ ಜನಕಾತ್ಮಜಾ ।
ನ ಹಿ ಹಾತುಮಿಯಂ ಶಕ್ಯಾ ಕೀರ್ತಿರಾತ್ಮವತಾ ಯಥಾ ॥ ೨೦

ಅವಶ್ಯಂ ತು ಮಯಾ ಕಾರ್ಯಂ ಸರ್ವೇಷಾಂ ವೋ ವಚಃ ಶುಭಮ್
ಸ್ನಿಗ್ಧಾನಾಂ ಲೋಕಮಾನ್ಯಾನಾಮೇವಂ ಚ ಬ್ರುವತಾಂ ಹಿತಮ್ ॥

ಇತೀದಮುಕ್ತ್ವಾ ವಿದಿತಂ ಮಹಾಬಲೈಃ
ಪ್ರಶಸ್ಯಮಾನಃ ಸ್ವಕೃತೇನ ಕರ್ಮಣಾ ।
ಸಮೇತ್ಯ ರಾಮಃ ಪ್ರಿಯಯಾ ಮಹಾಬಲಃ
ಸುಖಂ ಸುಖಾರ್ಹೋಽನುಬಭೂವ ರಾಘವಃ ॥ ೨೨

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕವಿಂಶತ್ಯುತ್ತರಶತತಮಃ ಸರ್ಗಃ

---

ಉರಿಯುವ ಅಗ್ನಿಜ್ವಾಲೆಯಲ್ಲವೆ ಇವಳು ? ಬಲಾತ್ಕಾರಕ್ಕೆ ಮಣಿಯತಕ್ಕವಳಲ್ಲವೆಂದು ನನಗೆ ಗೊತ್ತಿದೆ. ಈ ಶುಭಾಂಗಿಯು ರಾವಣನ ಐಶ್ವರ್ಯಕ್ಕೆ ಮರುಳಾಗತಕ್ಕವಳಲ್ಲ. ಸೂರ್ಯಪ್ರಭೆಯು ಸೂರ್ಯನನ್ನು ಹೇಗೆ ಬಿಟ್ಟು ಇರಲಾರದೋ, ಹಾಗೆ ಸೀತೆಯು ನನ್ನನ್ನು ಅಗಲಿ ಇರುವವಳಲ್ಲ. ಅವಳು ನನಗಿಂತ ಬೇರೆಯವಳೇ ಅಲ್ಲ (ಅವಳು ನನ್ನ ದೇಹದ ಒಂದು ಭಾಗ) (೧೮-೧೯). ಮೂರು ಲೋಕಗಳಲ್ಲಿಯೂ ಅತ್ಯಂತ ಪರಿಶುದ್ಧಳಾದವಳು ಈ ಜನಕರಾಜತನಯೆ. ಮೈಥಿಲಿಯನ್ನು ಪರಿತ್ಯಜಿಸುವುದು ಆಗದ ಮಾತು. ಬುದ್ಧಿಶಾಲಿಯು ತನ್ನ ಕೀರ್ತಿಯನ್ನು ತೊರೆಯಲು ಬಯಸುವನೆ? ನೀವೆಲ್ಲರೂ ನನ್ನಲ್ಲಿ ಸ್ನೇಹವನ್ನಿಟ್ಟು ಹಿತವಚನವನ್ನು ಹೇಳುತ್ತಿದ್ದೀರಿ. ಲೋಕಮಾನ್ಯರಾದ ನಿಮ್ಮ ಶುಭವಚನವನ್ನು ಪಾಲಿಸುವುದು ನನ್ನ ಕರ್ತವ್ಯ. ನಿಮ್ಮ ಮಾತಿನಂತೆ ನಡೆಯುವೆನು" ಎಂದನು (೨೦-೨೧). ಈ ಪ್ರಕಾರವಾಗಿ ಶ್ರೀರಾಮನು ತನ್ನ ಮನೋಗತವನ್ನು ವ್ಯಕ್ತಪಡಿಸಲಾಗಿ ಮಹಾಮಹಿಮರಾದ ಬ್ರಹ್ಮಾದಿದೇವತೆಗಳು ಆತನ ಮಹಾಕಾರ್ಯವನ್ನು ಕಂಡು ಸ್ತುತಿಸಿದರು. ವೀರಾಗ್ರಣಿಯಾದ ಶ್ರೀರಾಮಚಂದ್ರನು ತನ್ನ ಪ್ರಿಯಳಾದ ಜಾನಕಿಯನ್ನು ಕೈಹಿಡಿದು ಸ್ವೀಕರಿಸಿ, ಪತ್ನೀಸಮೇತನಾಗಿ ಆನಂದದಲ್ಲಿದ್ದನು (೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತೊಂದನೆಯ ಸರ್ಗ

## ದ್ವಾವಿಂಶತ್ಯುತ್ತರಶತತಮಃ ಸರ್ಗಃ

### ದಶರಥಪ್ರತಿಸಮಾದೇಶಃ

ಏತಚ್ಛ್ರುತ್ವಾ ಶುಭಂ ವಾಕ್ಯಂ ರಾಘವೇಣ ಸುಭಾಷಿತಮ್ ।
ಇದಂ ಶುಭತರಂ ವಾಕ್ಯಂ ವ್ಯಾಜಹಾರ ಮಹೇಶ್ವರಃ ॥ ೧

ಪುಷ್ಕರಾಕ್ಷ ಮಹಾಬಾಹೋ ಮಹಾವಕ್ಷಃ ಪರಂತಪ ।
ದಿಷ್ಟ್ಯಾ ಕೃತಮಿದಂ ಕರ್ಮ ತ್ವಯಾ ಶಸ್ತ್ರಭೃತಾಂ ವರ ॥ ೨

ದಿಷ್ಟ್ಯಾ ಸರ್ವಸ್ಯ ಲೋಕಸ್ಯ ಪ್ರವೃದ್ಧಂ ದಾರುಣಂ ತಮಃ ।
ಅಪಾವೃತ್ತಂ ತ್ವಯಾ ಸಂಖ್ಯೇ ರಾಮ ರಾವಣಜಂ ಭಯಮ್ ॥ ೩

ಆಶ್ವಾಸ್ಯ ಭರತಂ ದೀನಂ ಕೌಸಲ್ಯಾಂ ಚ ಯಶಸ್ವಿನೀಮ್ ।
ಕೈಕೇಯೀಂ ಚ ಸುಮಿತ್ರಾಂ ಚ ದೃಷ್ಟ್ವಾ ಲಕ್ಷ್ಮಣಮಾತರಮ್ ॥ ೪

## ಸರ್ಗ ೧೨೨

ಪರಮೇಶ್ವರನು ಶ್ರೀರಾಮನನ್ನು ಅಭಿನಂದಿಸುವುದು. ದಶರಥನು ಸ್ವರ್ಗದಿಂದ ಬಂದು ಆಶೀರ್ವದಿಸಿ ಹಿತವಚನವನ್ನಾಡುವುದು.

ಶ್ರೀರಾಮನು ಈ ರೀತಿಯಲ್ಲಿ ಮನದಟ್ಟುವಂತೆ ಶುಭವಾಕ್ಯವನ್ನಾಡಲು, ದೇವತೆಗಳೊಡನೆ ಬಂದಿದ್ದ ಪರಮೇಶ್ವರನು ಶುಭತರವಾದ ಮಾತನ್ನು ಹೇಳಿದನು : “ ಹೇ ಪುಂಡರೀಕಾಕ್ಷ, ಮಹಾಬಾಹು, ಮಹಾವಕ್ಷ , ಪರಂತಪ, ಅಸ್ತ್ರಧಾರಿಗಳಲ್ಲಿ ಅಗ್ರಗಣ್ಯನಾದ ನೀನು ಮಹತ್ತರವಾದ ಕಾರ್ಯವನ್ನು ಭಾಗ್ಯವಶದಿಂದ ಸಾಧಿಸಿದ್ದೀಯೆ (೧–೨). ಸರ್ವಲೋಕಗಳಿಗೂ ಸಂಭವಿಸಿದ್ದ ದಾರುಣವಾದ ಅಂಧಕಾರವನ್ನು ಹೋಗಲಾಡಿಸಿದೆ. ಶ್ರೀರಾಮ, ರಾವಣನಿಂದ ಒದಗಿದ್ದ ಭಯವನ್ನು ರಣರಂಗದಲ್ಲಿ ಹೋರಾಡಿ ನೀಗಿಸಿದೆ. ಇನ್ನು ಅಯೋಧ್ಯೆಗೆ ಹೋಗಿ, ನಿನಗಾಗಿ ದೈನ್ಯದಿಂದ ಕಾದಿರುವ ಭರತನನ್ನೂ ಕೀರ್ತಿಶಾಲಿನಿಯಾದ ಕೌಸಲ್ಯೆಯನ್ನೂ ಸಂತೈಸು. ಕೈಕೇಯಿಯನ್ನೂ ಲಕ್ಷ್ಮಣನ ಮಾತೆಯಾದ ಸುಮಿತ್ರೆಯನ್ನೂ ಸಮಾಧಾನಪಡಿಸು (೩–೪).

ಪ್ರಾಪ್ಯ ರಾಜ್ಯಮಯೋಧ್ಯಾಯಾಂ ನಂದಯಿತ್ವಾ ಸುಹೃಜ್ಜನಮ್ ।
ಇಕ್ಷ್ವಾಕೂಣಾಂ ಕುಲೇ ವಂಶಂ ಸ್ಥಾಪಯಿತ್ವಾ ಮಹಾಬಲ ॥ ೫

ಇಷ್ಟ್ವಾ ತುರಗಮೇಧೇನ ಪ್ರಾಪ್ಯ ಚಾನುತ್ತಮಂ ಯಶಃ ।
ಬ್ರಾಹ್ಮಣೇಭ್ಯೋ ಧನಂ ದತ್ತ್ವಾ ತ್ರಿದಿವಂ ಗಂತುಮರ್ಹಸಿ ॥ ೬

ಏಷ ರಾಜಾ ವಿಮಾನಸ್ಥಃ ಪಿತಾ ದಶರಥಸ್ತವ ।
ಕಾಕುತ್ಸ್ಥ ಮಾನುಷೇ ಲೋಕೇ ಗುರುಸ್ತವ ಮಹಾಯಶಾಃ ॥ ೭

ಇಂದ್ರಲೋಕಂ ಗತಃ ಶ್ರೀಮಾಂಸ್ತ್ವಯಾ ಪುತ್ರೇಣ ತಾರಿತಃ ।
ಲಕ್ಷ್ಮಣೇನ ಸಹ ಭ್ರಾತ್ರಾ ತ್ವಮೇನಮಭಿವಾದಯ ॥ ೮

ಮಹಾದೇವವಚಃ ಶ್ರುತ್ವಾ ಕಾಕುತ್ಸ್ಥಃ ಸಹಲಕ್ಷ್ಮಣಃ ।
ವಿಮಾನಶಿಖರಸ್ಥಸ್ಯ ಪ್ರಣಾಮಮಕರೋತ್ ಪಿತುಃ ॥ ೯

ದೀಪ್ಯಮಾನಂ ಸ್ವಯಾ ಲಕ್ಷ್ಮ್ಯಾ ವಿರಜೋಽಂಬರಧಾರಿಣಮ್ ।
ಲಕ್ಷ್ಮಣೇನ ಸಹ ಭ್ರಾತ್ರಾ ದದರ್ಶ ಪಿತರಂ ವಿಭುಃ ॥ ೧೦

---

ಅಯೋಧ್ಯೆಯಲ್ಲಿ ನಿನ್ನ ರಾಜ್ಯವನ್ನು ಸ್ವೀಕರಿಸಿ ಮಿತ್ರವರ್ಗದವರನ್ನು ಆನಂದಪಡಿಸು. ಇಕ್ಷ್ವಾಕುರಾಜರ ಕುಲವು ಉತ್ತರೋತ್ತರವಾಗಿ ವರ್ಧಿಸುವಂತೆ ಸಂತತಿಯನ್ನು ಸ್ಥಾಪಿಸಿ, ಅಶ್ವಮೇಧಯಾಗವನ್ನಾಚರಿಸಿ ಲೋಕೋತ್ತರವಾದ ಕೀರ್ತಿಯನ್ನು ಗಳಿಸು. ಬ್ರಾಹ್ಮಣರಿಗೆ ದಾನಧರ್ಮಗಳನ್ನಿತ್ತು, ಅನಂತರ ಬ್ರಹ್ಮಲೋಕವನ್ನೇರಬಹುದು (೫-೬). ಕಾಕುತ್ಸ್ಥ, ಇಲ್ಲಿ ನೋಡು. ನಿನ್ನ ತಂದೆಯಾದ ದಶರಥನು ವಿಮಾನಾರೂಢನಾಗಿ ಬಂದಿದ್ದಾನೆ! ಮನುಷ್ಯಲೋಕದಲ್ಲಿ ನಿನಗೆ ತಂದೆಯಾಗಿ ಕೀರ್ತಿಶಾಲಿಯಾಗಿದ್ದಾನೆ. ಸುಪುತ್ರನಾದ ನಿನ್ನಿಂದ ಸತ್ಯಪ್ರತಿಜ್ಞನೆನಿಸಿಕೊಂಡು ಈ ಪುಣ್ಯಾತ್ಮನು ಇಂದ್ರಲೋಕವನ್ನು ಸೇರಿದ್ದಾನೆ. ನಿನ್ನ ತಮ್ಮನಾದ ಲಕ್ಷ್ಮಣನೊಡನೆ ಆತನಿಗೆ ನಮಸ್ಕರಿಸು" ಎಂದು ಹೇಳಿದನು (೭-೮). ಮಹೇಶ್ವರನ ವಚನವನ್ನು ಕೇಳಿ ಕಾಕುತ್ಸ್ಥನೂ ಲಕ್ಷ್ಮಣನೂ ವಿಮಾನದೊಳಗೆ ಉಚ್ಚಾಸನದಲ್ಲಿ ಮಂಡಿಸಿದ್ದ ತಮ್ಮ ತಂದೆಗೆ ನಮಸ್ಕರಿಸಿದರು. ದಶರಥನಾದರೋ ತನ್ನ ದಿವ್ಯತೇಜಸ್ಸಿನಿಂದ ಶೋಭಿಸುತ್ತ ನಿರ್ಮಲವಸ್ತ್ರಗಳನ್ನು ಧರಿಸಿದ್ದನು. ಶ್ರೀರಾಮನು ತನ್ನ ತಮ್ಮನೊಂದಿಗೆ, ತಂದೆಯಾದ ದಶರಥ

ಹರ್ಷೇಣ ಮಹತಾವಿಷ್ಟೋ ವಿಮಾನಸ್ಥೋ ಮಹೀಪತಿಃ ।
ಪ್ರಾಣೈಃ ಪ್ರಿಯತರಂ ದೃಷ್ಟ್ವಾ ಪುತ್ರಂ ದಶರಥಸ್ತದಾ ॥ ೧೧

ಆರೋಪ್ಯಾಂಕಂ ಮಹಾಬಾಹುರ್ವರಾಸನಗತಃ ಪ್ರಭುಃ ।
ಬಾಹುಭ್ಯಾಂ ಸಂಪರಿಷ್ವಜ್ಯ ತತೋ ವಾಕ್ಯಂ ಸಮಾದದೇ ॥ ೧೨

ನ ಮೇ ಸ್ವರ್ಗೋ ಬಹುಮತಃ ಸಂಮಾನಶ್ಚ ಸುರರ್ಷಿಭಿಃ ।
ತ್ವಯಾ ರಾಮ ವಿಹೀನಸ್ಯ ಸತ್ಯಂ ಪ್ರತಿಶೃಣೋಮಿ ತೇ ॥ ೧೩

ಕೈಕೇಯ್ಯಾ ಯಾನಿ ಚೋಕ್ತಾನಿ ವಾಕ್ಯಾನಿ ವದತಾಂ ವರ ।
ತವ ಪ್ರವ್ರಾಜನಾರ್ಥಾನಿ ಸ್ಥಿತಾನಿ ಹೃದಯೇ ಮಮ ॥ ೧೪

ತ್ವಾಂ ತು ದೃಷ್ಟ್ವಾ ಕುಶಲಿನಂ ಪರಿಷ್ವಜ್ಯ ಸಲಕ್ಷ್ಮಣಮ್ ।
ಅದ್ಯ ದುಃಖಾದ್ವಿಮುಕ್ತೋಽಸ್ಮಿ ನೀಹಾರಾದಿವ ಭಾಸ್ಕರಃ ॥ ೧೫

ತಾರಿತೋಽಹಂ ತ್ವಯಾ ಪುತ್ರ ಸುಪುತ್ರೇಣ ಮಹಾತ್ಮನಾ ।
ಅಷ್ಟಾವಕ್ರೇಣ ಧರ್ಮಾತ್ಮಾ ಕಹೋಲೋ ಬ್ರಾಹ್ಮಣೋ ಯಥಾ ॥

---

ನನ್ನು ಕಣ್ಣಾರೆ ಕಂಡನು (೯-೧೦). ವಿಮಾನದಲ್ಲಿದ್ದ ದಶರಥಮಹಾರಾಜನು ತನ್ನ ಪ್ರಾಣಗಳಿಗಿಂತಲೂ ಪ್ರಿಯತರನಾದ ಪುತ್ರನನ್ನು ನೋಡಿ ಆನಂದ ತುಂದಿಲನಾದನು. ದಿವ್ಯಪೀಠದಲ್ಲಿ ಕುಳಿತಿದ್ದ ದಶರಥನು ಎರಡು ಕೈಗಳಿಂದಲೂ ಶ್ರೀರಾಮನನ್ನಾಲಿಂಗಿಸಿ, ತನ್ನ ತೊಡೆಯಮೇಲೆ ಕುಳ್ಳಿರಿಸಿ ಕೊಂಡು “ವತ್ಸ-ರಾಮ, ನಿನ್ನನ್ನು ಅಗಲಿದ ನನಗೆ ಸ್ವರ್ಗಭೋಗವಾಗಲಿ ದೇವರ್ಷಿಗಳು ನಡೆಸುವ ಸಮ್ಮಾನವಾಗಲಿ ಪ್ರಿಯವಾಗಲಿಲ್ಲ. ಇದು ಸತ್ಯವೆಂದು ತಿಳಿ (೧೧-೧೩). ಆಪ್ಯಾಯನಕರವಾದ ನಿನ್ನ ನುಡಿಗಳನ್ನು ಕೇಳಿ ಹಿಗ್ಗುತ್ತಿದ್ದ ನಾನು, ಕೈಕೇಯಿಯ ಕಠೋರವಾಕ್ಯಗಳನ್ನು ಕೇಳು ವಂತಾಯಿತು. ನಿನ್ನನ್ನು ಕಾಡಿಗೆ ಕಳಿಸುವುದಕ್ಕಾಗಿ ಅವಳು ಹೇಳಿದ ಮಾತುಗಳು ನನ್ನ ಹೃದಯದಲ್ಲಿ ನೆಟ್ಟುಹೋಗಿದ್ದವು. ಈ ದಿನ ಕುಶಲ ದಿಂದಿರುವ ನಿನ್ನನ್ನೂ ಲಕ್ಷ್ಮಣನನ್ನೂ ಕಣ್ಣಿಂದ ನೋಡಿ ಆಲಿಂಗಿಸಿಕೊಂಡ ಮೇಲೆ, ವತ್ಸ, ನನ್ನ ದುಃಖವು ನೀಗಿತು. ಮಂಜಿನಿಂದ ಮುಕ್ತನಾದ ಸೂರ್ಯನಂತೆ, ಆ ಸಂಕಟದಿಂದ ವಿಮುಕ್ತನಾದೆನು (೧೪-೧೫). ಮಗನೆ, ಮಹಾತ್ಮನೂ ಸುಪುತ್ರನೂ ಆದ ನೀನು ನನ್ನನ್ನು ಉದ್ಧರಿಸಿದೆ.

ಇದಾನೀಂ ತು ವಿಜಾನಾಮಿ ಯಥಾ ಸೌಮ್ಯ ಸುರೇಶ್ವರೈಃ ।
ವಧಾರ್ಥಂ ರಾವಣಸ್ಯೇದಂ ವಿಹಿತಂ ಪುರುಷೋತ್ತಮ ॥ ೧೭

ಸಿದ್ಧಾರ್ಥಾ ಖಲು ಕೌಸಲ್ಯಾ ಯಾ ತ್ವಾಂ ರಾಮ ಗೃಹಂ ಗತಮ್ ।
ವನಾನ್ನಿವೃತ್ತಂ ಸಂಹೃಷ್ಟಾ ದ್ರಕ್ಷ್ಯತ್ಯರಿನಿಷೂದನ ॥ ೧೮

ಸಿದ್ಧಾರ್ಥಾಃ ಖಲು ತೇ ರಾಮ ನರಾ ಯೇ ತ್ವಾಂ ಪುರೀಂ ಗತಮ್ ।
ಜಲಾರ್ದ್ರಮಭಿಷಿಕ್ತಂ ಚ ದ್ರಕ್ಷ್ಯಂತಿ ವಸುಧಾಧಿಪಮ್ ॥ ೧೯

ಅನುರಕ್ತೇನ ಬಲಿನಾ ಶುಚಿನಾ ಧರ್ಮಚಾರಿಣಾ ।
ಇಚ್ಛಾಮಿ ತ್ವಾಮಹಂ ದ್ರಷ್ಟುಂ ಭರತೇನ ಸಮಾಗತಮ್ ॥ ೨೦

ಚತುರ್ದಶ ಸಮಾಃ ಸೌಮ್ಯ ವನೇ ನಿರ್ಯಾಪಿತಾಸ್ತ್ವಯಾ ।
ವಸತಾ ಸೀತಯಾ ಸಾರ್ಧಂ ಲಕ್ಷ್ಮಣೇನ ಚ ಧೀಮತಾ ॥ ೨೧

---

ಧರ್ಮಾತ್ಮನಾದ ಕಹೋಲನೆಂಬ ಬ್ರಾಹ್ಮಣನನ್ನು ಅವನ ಮಗನಾದ ಅಷ್ಟಾವಕ್ರಮುನಿಯು ಉದ್ಧರಿಸಿದಂತಾಯಿತು.* ಪುರುಷೋತ್ತಮ, ನಿನ್ನ ಪಟ್ಟಾಭಿಷೇಕಕ್ಕೆ ವಿಘ್ನವನ್ನೊಡ್ಡಿದುದು, ರಾವಣನ ವಧೆಗಾಗಿ ದೇವತೆಗಳು ನಡೆಸಿದ ಒಂದು ಹಂಚಿಕೆ ಎಂಬುದು ಈಗ ನನಗೆ ಗೊತ್ತಾಯಿತು (೧೬-೧೭). ರಾಮ, ವೈರಿಯನ್ನು ಸಂಹರಿಸಿ ಕೃತಕೃತ್ಯನಾಗಿ ವನದಿಂದ ಹಿಂದಿರುಗಿದ ನಿನ್ನನ್ನು ನೋಡಿ ಹರ್ಷಿಸುವ ಭಾಗ್ಯ ಕೌಸಲ್ಯೆಗುಂಟು. ಅವಳೇ ಧನ್ಯಳು! ನೀನು ಅಯೋಧ್ಯೆಗೆ ಬಂದಿರುವುದನ್ನೂ ಅಭಿಷೇಕ ಜಲದಿಂದ ಆರ್ದ್ರಗಾತ್ರನಾಗಿ ಪೃಥ್ವೀಪತಿಯೆಂದು ಅಭಿಷಿಕ್ತನಾಗುವುದನ್ನೂ ನೋಡುವ ಭಾಗ್ಯ ಯಾರಿಗುಂಟೋ ಆ ಪ್ರಜೆಗಳೇ ಧನ್ಯರು! (೧೮-೧೯). ವೀರನೂ ಶುದ್ಧಚಿತ್ತನೂ ಧರ್ಮಚಾರಿಯೂ ಆದ ಭರತನು ನಿನ್ನಲ್ಲಿ ಪೂರ್ಣಾನುರಾಗವನ್ನಿಟ್ಟು ಕಾದಿದ್ದಾನೆ. ಆ ಭರತನೊಡನೆ ನೀನು ಕಲೆತಿರುವುದನ್ನು ನೋಡಬೇಕೆಂಬುದು ನನ್ನ ಅಭಿಲಾಷೆ. ಸೌಮ್ಯ, ಸೀತಾಲಕ್ಷ್ಮಣರೊಡನೆ ಹದಿನಾಲ್ಕು ವರ್ಷಗಳ ಕಾಲ ವನದಲ್ಲಿದ್ದು ಅರಣ್ಯ

---

* ಅನುಬಂಧವನ್ನು ನೋಡಿ.

ನಿವೃತ್ತವನವಾಸೋಽಸಿ ಪ್ರತಿಜ್ಞಾ ಸಫಲಾ ಕೃತಾ |
ರಾವಣಂ ಚ ರಣೇ ಹತ್ವಾ ದೇವಾಸ್ತೇ ಪರಿತೋಷಿತಾಃ || ೨೨

ಕೃತಂ ಕರ್ಮ ಯಶಃ ಶ್ಲಾಘ್ಯಂ ಪ್ರಾಪ್ತಂ ತೇ ಶತ್ರುಸೂದನ |
ಭ್ರಾತೃಭಿಃ ಸಹ ರಾಜ್ಯಸ್ಥೋ ದೀರ್ಘಮಾಯುರವಾಪ್ನುಹಿ || ೨೩

ಇತಿ ಬ್ರುವಾಣಂ ರಾಜಾನಂ ರಾಮಃ ಪ್ರಾಂಜಲಿರಬ್ರವೀತ್ |
ಕುರು ಪ್ರಸಾದಂ ಧರ್ಮಜ್ಞ ಕೈಕೇಯ್ಯಾ ಭರತಸ್ಯ ಚ || ೨೪

ಸಪುತ್ರಾಂ ತ್ವಾಂ ತ್ಯಜಾಮೀತಿ ಯದುಕ್ತಾ ಕೈಕಯೀ ತ್ವಯಾ |
ಸ ಶಾಪಃ ಕೈಕಯೀಂ ಘೋರಃ ಸಪುತ್ರಾಂ ನ ಸ್ಪೃಶೇತ್ ಪ್ರಭೋ ||

ಸ ತಥೇತಿ ಮಹಾರಾಜೋ ರಾಮಮುಕ್ತ್ವಾ ಕೃತಾಂಜಲಿಮ್ |
ಲಕ್ಷ್ಮಣಂ ಚ ಪರಿಷ್ವಜ್ಯ ಪುನರ್ವಾಕ್ಯಮುವಾಚ ಹ || ೨೬

ರಾಮಂ ಶುಶ್ರೂಷತಾ ಭಕ್ತ್ಯಾ ವೈದೇಹ್ಯಾ ಸಹ ಸೀತಯಾ |
ಕೃತಾ ಮಮ ಮಹಾಪ್ರೀತಿಃ ಪ್ರಾಪ್ತಂ ಧರ್ಮಫಲಂ ಚ ತೇ || ೨೭

---

ವಾಸವನ್ನು ಮುಗಿಸಿದ್ದೀಯೆ (೨೦-೨೧). ನಿನ್ನ ಪ್ರತಿಜ್ಞೆಯನ್ನು ನೆರವೇರಿಸಿದ್ದೀಯೆ. ರಾವಣನನ್ನು ಸಂಹರಿಸಿ ದೇವತೆಗಳನ್ನು ಸಂತೋಷ ಪಡಿಸಿದ್ದೀಯೆ. ಮಹತ್ತರವಾದ ಕಾರ್ಯವನ್ನು ಸಾಧಿಸಿ ಲೋಕವಿಖ್ಯಾತ ವಾದ ಕೀರ್ತಿಯನ್ನು ಗಳಿಸಿದ್ದೀಯೆ. ವತ್ಸ-ರಾಮ, ದೀರ್ಘಾಯುಸ್ಸನ್ನು ಪಡೆದು ಚಿರಂಜೀವಿಯಾಗಿ ಬಾಳು" ಎಂದು ಹೇಳಿ ಆಶೀರ್ವದಿಸಿದನು (೨೨-೨೩). ಆಗ ಶ್ರೀರಾಮನು ಬದ್ಧಾಂಜಲಿಯಾಗಿ ದಶರಥರಾಜನನ್ನು ಕುರಿತು "ತಂದೆಯೆ, ನೀನು ಧರ್ಮಸ್ವರೂಪವನ್ನು ಬಲ್ಲವನು. ಕೈಕೇಯಿ ಯನ್ನೂ ಭರತನನ್ನೂ ಅನುಗ್ರಹದೃಷ್ಟಿಯಿಂದ ನೋಡಿ ಪ್ರಸನ್ನನಾಗು. ನೀನು ಕೈಕೇಯಿಯನ್ನು ಕುರಿತು 'ನಿನ್ನನ್ನೂ ನಿನ್ನ ಮಗನನ್ನೂ ತ್ಯಜಿಸಿದ್ದೇನೆ' ಎಂದು ಹೇಳಿದೆಯಲ್ಲವೆ, ಓ ಪ್ರಭು, ಆ ಘೋರಶಾಪವು ಕೈಕೇಯಿಗೂ ಭರತನಿಗೂ ತಾಗದಂತೆ ಕೃಪೆಮಾಡು" ಎಂದು ಪ್ರಾರ್ಥಿಸಿದನು (೨೪-೨೫). ದಶರಥರಾಜನು "ನಿನ್ನ ಇಷ್ಟದಂತೆಯೇ ಆಗಲಿ" ಎಂದು ಹೇಳಿ ಶ್ರೀರಾಮನನ್ನು ಆಲಿಂಗಿಸಿಕೊಂಡನು. ಆಮೇಲೆ ಲಕ್ಷ್ಮಣ ನನ್ನು ಅಪ್ಪಿಕೊಂಡು "ವತ್ಸ-ಲಕ್ಷ್ಮಣ, ರಾಮನನ್ನೂ ಸೀತೆಯನ್ನೂ ಭಕ್ತಿ

ಧರ್ಮಂ ಪ್ರಾಪ್ಸ್ಯಸಿ ಧರ್ಮಜ್ಞ ಯಶಶ್ಚ ವಿಪುಲಂ ಭುವಿ ।
ರಾಮೇ ಪ್ರಸನ್ನೇ ಸ್ವರ್ಗಂ ಚ ಮಹಿಮಾನಂ ತಥೈವ ಚ ॥ ೨೮

ರಾಮಂ ಶುಶ್ರೂಷ ಭದ್ರಂ ತೇ ಸುಮಿತ್ರಾನಂದವರ್ಧನ ।
ರಾಮಃ ಸರ್ವಸ್ಯ ಲೋಕಸ್ಯ ಶುಭೇಷ್ವಭಿರತಃ ಸದಾ ॥ ೨೯

ಏತೇ ಸೇಂದ್ರಾಸ್ತ್ರಯೋ ಲೋಕಾಃ ಸಿದ್ಧಾಶ್ಚ ಪರಮರ್ಷಯಃ ।
ಅಭಿಗಮ್ಯ ಮಹಾತ್ಮಾನಮರ್ಚಂತಿ ಪುರುಷೋತ್ತಮಮ್ ॥ ೩೦

ಏತತ್ತದುಕ್ತಮವ್ಯಕ್ತಮಕ್ಷರಂ ಬ್ರಹ್ಮಸಂಮಿತಮ್ ।
ದೇವಾನಾಂ ಹೃದಯಂ ಸೌಮ್ಯ ಗುಹ್ಯಂ ರಾಮಃ ಪರಂತಪಃ ॥ ೩೧

ಅವಾಪ್ತಂ ಧರ್ಮಚರಣಂ ಯಶಶ್ಚ ವಿಪುಲಂ ತ್ವಯಾ ।
ರಾಮಂ ಶುಶ್ರೂಷತಾ ಭಕ್ತ್ಯಾ ವೈದೇಹ್ಯಾ ಸಹ ಸೀತಯಾ ॥ ೩೨

ಸ ತಥೋಕ್ತ್ವಾ ಮಹಾಬಾಹುರ್ಲಕ್ಷ್ಮಣಂ ಪ್ರಾಂಜಲಿಂ ಸ್ಥಿತಮ್ ।
ಉವಾಚ ರಾಜಾ ಧರ್ಮಾತ್ಮಾ ವೈದೇಹೀಂ ವಚನಂ ಶುಭಮ್ ॥ ೩೩

---

ಯಿಂದ ಶುಶ್ರೂಷೆಮಾಡಿ ನನಗೆ ಪರಮಾನಂದವನ್ನುಂಟುಮಾಡಿದ್ದೀಯೆ. ಶುಭಫಲವನ್ನು ಪಡೆದಿದ್ದೀಯೆ (೨೬-೨೭). ರಾಮನು ಪ್ರಸನ್ನನಾಗಿರಲು ಪುಣ್ಯಫಲ, ಜಗದ್ವಿಖ್ಯಾತವಾದ ಕೀರ್ತಿ, ಸ್ವರ್ಗ, ಗೌರವ-ಎಲ್ಲವೂ ನಿನಗೆ ಕೂಡಿಬರುತ್ತವೆ. ಸುಮಿತ್ರೆಯು ನಿನ್ನನ್ನು ಕಂಡು ಎಷ್ಟು ಆನಂದಿಸುವಳೋ! ಲಕ್ಷ್ಮಣ, ಹೀಗೆಯೇ ರಾಮನನ್ನು ಸೇವಿಸುತ್ತಿರು. ನಿನಗೆ ಮಂಗಳವಾಗಲಿ. ರಾಮನು ಸಮಸ್ತರ ಕಲ್ಯಾಣದಲ್ಲಿಯೂ ಸದಾ ನಿರತನಾಗಿದ್ದಾನೆ (೨೮-೨೯). ಇಂದ್ರನೇ ಮೊದಲಾಗಿ ಮೂರುಲೋಕದವರೂ ಸಿದ್ಧರೂ ಪರಮರ್ಷಿಗಳೂ ಬಂದು ಪುರುಷೋತ್ತಮನಾದ ಈ ಮಹಾತ್ಮನನ್ನು ಪೂಜಿಸುತ್ತಿದ್ದಾರೆ. ಸೌಮ್ಯ, ಇವರೆಲ್ಲರೂ ಹೇಳಿದಂತೆ ರಾಮನು ಅವ್ಯಕ್ತವೂ ಅವಿನಾಶಿಯೂ ಆದ ಪರಬ್ರಹ್ಮವಸ್ತು ; ದೇವತೆಗಳ ಹೃದಯ ; ದೇವಗುಹ್ಯ* (೩೦-೩೧). ವೈದೇಹೀಸಹಿತನಾದ ರಾಮನನ್ನು ಭಕ್ತಿಯಿಂದ ಸೇವಿಸಿ, ಲಕ್ಷ್ಮಣ, ಧರ್ಮವನ್ನೂ ವಿಪುಲವಾದ ಕೀರ್ತಿಯನ್ನೂ ಸಂಪಾದಿಸಿದ್ದೀಯೆ" ಎಂದನು. ಲಕ್ಷ್ಮಣನು ಬದ್ಧಾಂಜಲಿಯಾಗಿ ದಶರಥನ

---

*'ದೇವಾನಾಂ ಹೃದಯಂ ಬ್ರಹ್ಮಾನ್ವವಿಂದತ್ (ತೈ. ಆ.); ಏತದ್ವೈ ಮಹೋಪನಿಷದಂ ದೇವಾನಾಂ ಗುಹ್ಯಮ್' (ಮಹಾ.ನಾ.).

ಕರ್ತವ್ಯೋ ನ ತು ವೈದೇಹಿ ಮನ್ಯುಸ್ತ್ಯಾಗಮಿಮಂ ಪ್ರತಿ ।
ರಾಮೇಣ ತ್ವದ್ವಿಶುದ್ಧ್ಯರ್ಥಂ ಕೃತಮೇತದ್ಧಿತೈಷಿಣಾ ॥ ೩೪

ನ ತ್ವಂ ಸುಭ್ರು ಸಮಾಧೇಯಾ ಪತಿಶುಶ್ರೂಷಣಂ ಪ್ರತಿ ।
ಅವಶ್ಯಂ ತು ಮಯಾ ವಾಚ್ಯಮೇಷ ತೇ ದೈವತಂ ಪರಮ್ ॥ ೩೫

ಇತಿ ಪ್ರತಿಸಮಾದಿಶ್ಯ ಪುತ್ರೌ ಸೀತಾಂ ತಥಾ ಸ್ನುಷಾಮ್ ।
ಇಂದ್ರಲೋಕಂ ವಿಮಾನೇನ ಯಯೌ ದಶರಥೋ ಜ್ವಲನ್ ॥ ೩೬

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಾವಿಂಶತ್ಯುತ್ತರಶತತಮಃ ಸರ್ಗಃ



ಮಾತನ್ನು ಭಕ್ತಿಯಿಂದ ಆಲಿಸುತ್ತ ನಿಂತಿದ್ದನು (೩೨-೩೩). ಅನಂತರ ಧರ್ಮಾತ್ಮನಾದ ದಶರಥನು ವೈದೇಹಿಯ ಕಡೆಗೆ ತಿರುಗಿ “ವತ್ಸೆ-ವೈದೇಹಿ, ರಾಮನು ನಿನ್ನನ್ನು ತ್ಯಜಿಸುತ್ತೇನೆಂದು ಹೇಳಿದುದಕ್ಕಾಗಿ, ಮನಸ್ಸಿನಲ್ಲಿ ಯಾವ ಅಸಮಾಧಾನವನ್ನೂ ಇಟ್ಟುಕೊಳ್ಳಬೇಡ. ನೀನು ಪರಿಶುದ್ಧಳೆಂದು ತೋರಿಸುವುದಕ್ಕಾಗಿ, ನಿನ್ನ ಹಿತಾಪೇಕ್ಷೆಯಿಂದಲೇ ರಾಮನು ಹಾಗೆಮಾಡಿದ್ದಾನೆ (೩೪). ಸೌಮ್ಯೆ-ಸೀತೆ, ಪತಿಶುಶ್ರೂಷೆಯ ವಿಷಯದಲ್ಲಿ ನಿನಗೆ ನಾನು ಹೇಳಬೇಕಾದ್ದೇ ಇಲ್ಲ! ಮುಖ್ಯವಾಗಿ ಒಂದು ಮಾತನ್ನಾಡುವೆನು: ರಾಮನೇ ನಿನಗೆ ಪರದೇವತೆ!” ಎಂದು ಹೇಳಿದನು. ಈ ರೀತಿಯಲ್ಲಿ ದಶರಥನು ತನ್ನ ಇಬ್ಬರು ಮಕ್ಕಳಿಗೂ ಸೊಸೆಯಾದ ಸೀತೆಗೂ ಹೇಳಿ ಆಶೀರ್ವದಿಸಿ, ದಿವ್ಯಕಾಂತಿಯಿಂದ ಬೆಳಗುತ್ತ ವಿಮಾನದಲ್ಲಿ ಇಂದ್ರಲೋಕಕ್ಕೆ ಹೊರಟುಹೋದನು (೩೫-೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತೆರಡನೆಯ ಸರ್ಗ



## ತ್ರಯೋವಿಂಶತ್ಯುತ್ತರಶತತಮಃ ಸರ್ಗಃ

### ಇಂದ್ರವರದಾನಮ್

**ಪ್ರತಿಯಾತೇ ತು ಕಾಕುತ್ಸ್ಥೇ ಮಹೇಂದ್ರಃ ಪಾಕಶಾಸನಃ |**
**ಅಬ್ರವೀತ್ ಪರಮಪ್ರೀತೋ ರಾಘವಂ ಪ್ರಾಂಜಲಿಂ ಸ್ಥಿತಮ್ || ೧**

**ಅಮೋಘಂ ದರ್ಶನಂ ರಾಮ ತವಾಸ್ಮಾಕಂ ಪರಂತಪ |**
**ಪ್ರೀತಿಯುಕ್ತಾಃ ಸ್ಮ ತೇನ ತ್ವಂ ಬ್ರೂಹಿ ಯನ್ಮನಸೇಚ್ಛಸಿ || ೨**

**ಏವಮುಕ್ತಸ್ತು ಕಾಕುತ್ಸ್ಥಃ ಪ್ರತ್ಯುವಾಚ ಕೃತಾಂಜಲಿಃ |**
**ಲಕ್ಷ್ಮಣೇನ ಸಹ ಭ್ರಾತ್ರಾ ಸೀತಯಾ ಸಹ ಭಾರ್ಯಯಾ || ೩**

**ಯದಿ ಪ್ರೀತಿಃ ಸಮುತ್ಪನ್ನಾ ಮಯಿ ಸರ್ವಸುರೇಶ್ವರ |**
**ವಕ್ಷ್ಯಾಮಿ ಕುರು ತೇ ಸತ್ಯಂ ವಚನಂ ವದತಾಂ ವರ || ೪**

### ಸರ್ಗ ೧೨೩

ಯುದ್ಧದಲ್ಲಿ ಹತರಾದ ವಾನರಭಲ್ಲೂಕಾದಿ ಸೈನಿಕರು ಇಂದ್ರಾನುಗ್ರಹದಿಂದ ಪುನಃ ಜೀವಿಸುವುದು. ದೇವತೆಗಳು ಶ್ರೀರಾಮನನ್ನು ಬೀಳ್ಕೊಂಡು ಹೊರಟುಹೋಗುವುದು.

ದಶರಥರಾಜನು ದೇವಲೋಕಕ್ಕೆ ಹೋದಮೇಲೆ, ಬದ್ಧಾಂಜಲಿಯಾಗಿ ನಿಂತಿದ್ದ ಶ್ರೀರಾಮನನ್ನು ನೋಡಿ ಸಂತುಷ್ಟನಾದ ದೇವೇಂದ್ರನು “ಶ್ರೀರಾಮ, ನೀನು ನಮ್ಮೆಲ್ಲರನ್ನೂ ಸಂದರ್ಶಿಸಿರುವುದು ಪ್ರತ್ಯುಪಕಾರದಿಂದ ಚರಿತಾರ್ಥವಾಗಲಿ*. ನಾವೆಲ್ಲರೂ ಸಂತೃಪ್ತರಾಗಿದ್ದೇವೆ. ನಿನ್ನ ಮನಸ್ಸಿಗೆ ತೋರಿದ ವರವನ್ನು ಕೇಳು” ಎಂದನು (೧-೨). ಆಗ ಶ್ರೀರಾಮನು ತಮ್ಮನಾದ ಲಕ್ಷ್ಮಣನಿಂದಲೂ ಪತ್ನಿಯಾದ ಸೀತೆಯಿಂದಲೂ ಸಮೇತನಾಗಿ ಕೈಮುಗಿದುಕೊಂಡು “ದೇವೇಶ್ವರ, ನನ್ನಲ್ಲಿ ನಿನಗೆ ಪ್ರೀತಿಯುಂಟಾಗಿದ್ದರೆ, ನನ್ನ ಮನಸ್ಸಿನಲ್ಲಿರುವುದನ್ನು ಹೇಳುವೆನು. ಅದನ್ನು

---

* ‘ದಶರಥನ ಪುತ್ರಕಾಮೇಷ್ಟಿಯ ಸಂದರ್ಭದಲ್ಲಿ ನಾವು ನಿನ್ನನ್ನು ನೋಡಿ ಪ್ರಾರ್ಥಿಸಿದ್ದು ಈಗ ಸಫಲವಾಯಿತು’ ಎಂದು ಕೆಲವರು ಅರ್ಥಮಾಡುತ್ತಾರೆ.

ಮಮ ಹೇತೋಃ ಪರಾಕ್ರಾಂತಾ ಯೇ ಗತಾ ಯಮಸಾದನಮ್ ।
ತೇ ಸರ್ವೇ ಜೀವಿತಂ ಪ್ರಾಪ್ಯ ಸಮುತ್ತಿಷ್ಠಂತು ವಾನರಾಃ ॥ ೫

ಮತ್ಕೃತೇ ವಿಪ್ರಯುಕ್ತಾ ಯೇ ಪುತ್ರೈರ್ದಾರೈಶ್ಚ ವಾನರಾಃ ।
ಮತ್ಪ್ರಿಯೇಷ್ವಭಿಯುಕ್ತಾಶ್ಚ ನ ಮೃತ್ಯುಂ ಗಣಯಂತಿ ಚ ॥ ೬

ತ್ವತ್ಪ್ರಸಾದಾತ್ ಸಮೇಯುಸ್ತೇ ವರಮೇತಮಹಂ ವೃಣೇ ।
ನೀರುಜೋ ನಿರ್ವ್ರಣಾಂಶ್ಚೈವ ಸಂಪನ್ನಬಲಪೌರುಷಾನ್ ॥ ೭

ಗೋಲಾಂಗೂಲಾಂಸ್ತಥೈವರ್ಕ್ಷಾನ್ ದ್ರಷ್ಟುಮಿಚ್ಛಾಮಿ ಮಾನದ ।
ಅಕಾಲೇ ಚಾಪಿ ಪುಷ್ಪಾಣಿ ಮೂಲಾನಿ ಚ ಫಲಾನಿ ಚ ॥ ೮

ನದ್ಯಶ್ಚ ವಿಮಲಾಸ್ತತ್ರ ತಿಷ್ಠೇಯುರ್ಯತ್ರ ವಾನರಾಃ ।
ಶ್ರುತ್ವಾ ತು ವಚನಂ ತಸ್ಯ ರಾಘವಸ್ಯ ಮಹಾತ್ಮನಃ ॥ ೯

ಮಹೇಂದ್ರಃ ಪ್ರತ್ಯುವಾಚೇದಂ ವಚನಂ ಪ್ರೀತಿಲಕ್ಷಣಮ್ ।
ಮಹಾನಯಂ ವರಸ್ತಾತ ತ್ವಯೋಕ್ತೋ ರಘುನಂದನ ॥ ೧೦

---

ನಡೆಸಿ ನಿನ್ನ ವಚನವು ಸತ್ಯವಾಗುವಂತೆ ಪಾಲಿಸು (೩-೪). ಏನೆಂದರೆ: ನನಗೋಸ್ಕರ ಹೋರಾಡಿ ಯಾವ ವಾನರಾದಿಯೋಧರು ಯಮಸದನವನ್ನು ಸೇರಿದ್ದಾರೋ, ಅವರೆಲ್ಲರೂ ಮತ್ತೆ ಬದುಕಿ ಮೇಲೇಳಲಿ! ಆ ಯೋಧರು ನನಗಾಗಿ ತಮ್ಮ ಹೆಂಡತಿಮಕ್ಕಳನ್ನು ತೊರೆದು ಇಲ್ಲಿಗೆ ಬಂದು ನನ್ನ ಹಿತದಲ್ಲಿಯೇ ನಿರತರಾಗಿ, ಮೃತ್ಯುವನ್ನು ಗಣಿಸದೆ ಯುದ್ಧಮಾಡಿದರು (೫-೬). ಅವರೆಲ್ಲರೂ ನಿನ್ನ ಪ್ರಸಾದದಿಂದ ಪುನಃ ಜೀವಂತರಾಗಿ ತಮ್ಮ ಹೆಂಡತಿಮಕ್ಕಳನ್ನು ಸೇರಿಕೊಳ್ಳುವಂತಾಗಲಿ. ನಿನ್ನ ಅನುಗ್ರಹದಿಂದ ಈ ವರವನ್ನು ಕೇಳಿಕೊಳ್ಳುತ್ತಿದ್ದೇನೆ. ಹೇ ಮಹಾತ್ಮ, ವಾನರ ಗೋಲಾಂಗೂಲ ಭಲ್ಲೂಕಯೋಧರೆಲ್ಲರೂ ದೇಹದಲ್ಲಿ ಯಾವ ಬಾಧೆಯೂ ಗಾಯವೂ ಇಲ್ಲದೆ ಮೊದಲಿನ ಬಲಪರಾಕ್ರಮಗಳಿಂದ ಯುಕ್ತರಾಗಿರುವುದನ್ನು ನೋಡಬೇಕೆಂಬುದು ನನ್ನ ಅಭಿಲಾಷೆ (೭-೮). ಈ ವಾನರರು ಇರುವ ಸ್ಥಳಗಳಲ್ಲಿ ಫಲಮೂಲಪುಷ್ಪಗಳು ಅಕಾಲದಲ್ಲಿಯೂ ಸಮೃದ್ಧವಾಗಿ ತುಂಬಿರಲಿ! ನದಿಗಳಲ್ಲಿ ತಿಳಿನೀರು ಹರಿಯುತ್ತಿರಲಿ!" ಎಂದು ನಿವೇದಿಸಿದನು (೯). ಮಹಾತ್ಮನಾದ ರಾಘವನ ಪ್ರಾರ್ಥನೆಯನ್ನು ಕೇಳಿ

ದ್ವಿರ್ನಯಾ ನೋಕ್ತಪೂರ್ವಂ ಹಿ ತಸ್ಮಾದೇತದ್ಭವಿಷ್ಯತಿ ।
ಸಮುತ್ಥಾಸ್ಯಂತಿ ಹರಯೋ ಯೇ ಹತಾ ಯುಧಿ ರಾಕ್ಷಸೈಃ ॥ ೧೧

ಋಕ್ಷಾಶ್ಚ ಸಹಗೋಪುಚ್ಛಾ ನಿಕೃತ್ತಾನನಬಾಹವಃ ।
ನೀರುಜೋ ನಿರ್ವ್ರಣಾಶ್ಚೈವ ಸಂಪನ್ನಬಲಪೌರುಷಾಃ ॥ ೧೨

ಸಮುತ್ಥಾಸ್ಯಂತಿ ಹರಯಃ ಸುಪ್ತಾ ನಿದ್ರಾಕ್ಷಯೇ ಯಥಾ ।
ಸುಹೃದ್ಭಿರ್ಬಾಂಧವೈಶ್ಚೈವ ಜ್ಞಾತಿಭಿಃ ಸ್ವಜನೈರಪಿ ॥ ೧೩

ಸರ್ವ ಏವ ಸಮೇಷ್ಯಂತಿ ಸಂಯುಕ್ತಾಃ ಪರಯಾ ಮುದಾ ।
ಅಕಾಲೇ ಪುಷ್ಪಶಬಲಾಃ ಫಲವಂತಶ್ಚ ಪಾದಪಾಃ ॥ ೧೪

ಭವಿಷ್ಯಂತಿ ಮಹೇಷ್ವಾಸ ನದ್ಯಶ್ಚ ಸಲಿಲಾಯುತಾಃ ।
ಸವ್ರಣೈಃ ಪ್ರಥಮಂ ಗಾತ್ರೈಃ ಸಂವೃತ್ತೈರ್ನಿರ್ವ್ರಣೈಃ ಪುನಃ ॥ ೧೫

ತತಃ ಸಮುತ್ಥಿತಾಃ ಸರ್ವೇ ಸುಪ್ತ್ವೇವ ಹರಿಪುಂಗವಾಃ ।
ಬಭೂವುರ್ವಾನರಾಃ ಸರ್ವೇ ಕಿಮೇತದಿತಿ ವಿಸ್ಮಿತಾಃ ॥ ೧೬

---

ದೇವೇಂದ್ರನು ಪ್ರೀತಿಯಿಂದ “ ರಘುನಂದನ, ನೀನು ಕೇಳಿದ ವರವು ಬಹು ದೊಡ್ಡದು ! ಆದರೆ ನಾನು ಎರಡು ಮಾತನ್ನಾಡಿದವನಲ್ಲ ! ಒಳ್ಳೆಯದು ; ನಿನ್ನ ಇಷ್ಟವು ನೆರವೇರುವುದು. ಯುದ್ಧದಲ್ಲಿ ರಾಕ್ಷಸರಿಂದ ಹತರಾದ ವಾನರ ಗೋಲಾಂಗೂಲ ಭಲ್ಲೂಕಯೋಧರು ಜೀವಂತರಾಗಿ ಮೇಲೇಳಲಿ. ಶಿರಸ್ಸು ಕೈಕಾಲುಗಳು ಭಗ್ನವಾಗಿ ನರಳುವವರೆಲ್ಲರೂ ನೋವುಗಾಯಗಳಿಂದ ಮುಕ್ತರಾಗಿ ಮೊದಲಿನ ಬಲಪೌರುಷಗಳನ್ನು ಪಡೆಯಲಿ (೧೧-೧೨). ಮಲಗಿದವರು ನಿದ್ರೆಯಿಂದ ಎಚ್ಚರಗೊಳ್ಳುವಂತೆ, ಹತರಾದವರು ಜೀವಂತರಾಗಿ ಮೇಲೇಳಲಿ. ಮಿತ್ರ ಬಂಧು ಬಾಂಧವ ಕುಟುಂಬದವರೊಡನೆ ಮೊದಲಿನಂತೆ ಸೇರಿಕೊಂಡು ವಾನರರೆಲ್ಲರೂ ನಲಿಯಲಿ. ಶ್ರೀರಾಮ, ಅವರಿರುವ ಸ್ಥಳಗಳಲ್ಲಿ ವೃಕ್ಷಗಳು ಅಕಾಲದಲ್ಲಿಯೂ ಫಲಪುಷ್ಪಗಳಿಂದ ತುಂಬಿರುತ್ತವೆ. ನದಿಗಳು ತಿಳಿನೀರಿನಿಂದ ಸಮೃದ್ಧವಾಗಿರುತ್ತವೆ. ಜರ್ಝರಿತಗಾತ್ರರಾಗಿ ಹತರಾದವರ ಗಾಯಗಳೆಲ್ಲವೂ ಗುಣಹೊಂದಲಿ ! ” ಎಂದು ಹೇಳಿದನು (೧೩-೧೫). ದೇವೇಂದ್ರನು ಈ ರೀತಿಯಲ್ಲಿ ಹೇಳಿದಕೂಡಲೆ, ಮೃತರಾಗಿದ್ದ ವಾನರರೆಲ್ಲರೂ ಜೀವಂತರಾಗಿ, ನಿದ್ರೆಯಿಂದೆದ್ದಂತೆ ಮೇಲೆದ್ದರು.

ತೇ ಸರ್ವೇ ವಾನರಾಸ್ತಸ್ಮೈ ರಾಘವಾಯಾಭ್ಯವಾದಯನ್ ।
ಕಾಕುತ್ಸ್ಥಂ ಪರಿಪೂರ್ಣಾರ್ಥಂ ದೃಷ್ಟ್ವಾ ಸರ್ವೇ ಸುರೋತ್ತಮಾಃ ॥
ಊಚುಸ್ತೇ ಪ್ರಥಮಂ ಸ್ತುತ್ವಾ ಸ್ತವಾರ್ಹಂ ಸಹಲಕ್ಷ್ಮಣಮ್ ।
ಗಚ್ಛಾಯೋಧ್ಯಾಮಿತೋ ವೀರ ವಿಸರ್ಜಯ ಚ ವಾನರಾನ್ ॥ ೧೮
ಮೈಥಿಲೀಂ ಸಾಂತ್ವಯಸ್ವೈನಾಮನುರಕ್ತಾಂ ತಪಸ್ವಿನೀಮ್ ।
ಶತ್ರುಘ್ನಂ ಚ ಮಹಾತ್ಮಾನಂ ಮಾತೃಃ ಸರ್ವಾಃ ಪರಂತಪ ॥ ೧೯
ಭ್ರಾತರಂ ಪಶ್ಯ ಭರತಂ ತ್ವಚ್ಛೋಕಾದ್ವ್ರತಧಾರಿಣಮ್ ।
ಅಭಿಷೇಚಯ ಚಾತ್ಮಾನಂ ಪೌರಾನ್ ಗತ್ವಾ ಪ್ರಹರ್ಷಯ ॥ ೨೦
ಏವಮುಕ್ತ್ವಾ ತಮಾಮಂತ್ರ್ಯ ರಾಮಂ ಸೌಮಿತ್ರಿಣಾ ಸಹ ।
ವಿಮಾನೈಃ ಸೂರ್ಯಸಂಕಾಶೈರ್ಹೃಷ್ಟಾ ಜಗ್ಮುಃ ಸುರಾ ದಿವಮ್ ॥
ಅಭಿವಾದ್ಯ ಚ ಕಾಕುತ್ಸ್ಥಃ ಸರ್ವಾಂಸ್ತಾಂಸ್ತ್ರಿದಶೋತ್ತಮಾನ್ ।
ಲಕ್ಷ್ಮಣೇನ ಸಹ ಭ್ರಾತ್ರಾ ವಾಸಮಾಜ್ಞಾಪಯತ್ತದಾ ॥ ೨೨

---

'ಆ! ಇದೇನು?' ಎಂದು ವಿಸ್ಮಿತರಾದರು! (೧೬). ಅನಂತರ ಅವರೆಲ್ಲರೂ ಬಂದು ಶ್ರೀರಾಮನಿಗೆ ನಮಸ್ಕರಿಸಿದರು. ಇತ್ತಲಾಗಿ ಸರ್ವಾಭೀಷ್ಟಗಳನ್ನು ಪಡೆದು ಸಂತೃಪ್ತನಾದ ಶ್ರೀರಾಮನನ್ನೂ ಲಕ್ಷ್ಮಣನನ್ನೂ ಸಕಲ ದೇವತೆಗಳೂ ಸ್ತೋತ್ರಮಾಡಿ "ಶ್ರೀರಾಮ, ಇನ್ನು ಅಯೋಧ್ಯೆಗೆ ಪ್ರಯಾಣ ಮಾಡು. ವಾನರರನ್ನು ಅವರ ಸ್ಥಾನಗಳಿಗೆ ಕಳಿಸು (೧೭-೧೮). ನಿನ್ನಲ್ಲಿ ಪೂರ್ಣಾನುರಾಗವುಳ್ಳ ಮೈಥಿಲಿಯು ಬಗೆಬಗೆಯ ಕಷ್ಟಗಳಿಗೆ ಸಿಕ್ಕಿ ನೊಂದಿದ್ದಾಳೆ. ಅವಳನ್ನು ಸಂತೈಸು. ಅಯೋಧ್ಯೆಗೆ ಹೋಗಿ ನಿನಗಾಗಿ ಕಾದಿರುವ ಮಹಾತ್ಮನಾದ ಶತ್ರುಘ್ನನನ್ನೂ ನಿನ್ನ ಎಲ್ಲ ತಾಯಂದಿರನ್ನೂ ಸಂದರ್ಶಿಸು (೧೯). ನಿನ್ನ ವಿರಹಶೋಕದಿಂದ ವಿಷಣ್ಣನಾಗಿ ವ್ರತನಿಷ್ಠನಾಗಿರುವ ನಿನ್ನ ತಮ್ಮನಾದ ಭರತನನ್ನು ಮೊದಲು ನೋಡು. ಕೋಸಲರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ಪ್ರಜೆಗಳನ್ನು ಆನಂದಪಡಿಸು" ಎಂದು ನುಡಿದು, ಶ್ರೀರಾಮನನ್ನೂ ಲಕ್ಷ್ಮಣನನ್ನೂ ಬೀಳ್ಕೊಂಡು ಸೂರ್ಯಸಂಕಾಶಗಳಾದ ವಿಮಾನಗಳನ್ನೇರಿ ದೇವಲೋಕಗಳಿಗೆ ಹೊರಟರು (೨೦-೨೧). ಕಾಕುತ್ಸ್ಥನು ಲಕ್ಷ್ಮಣಸಮೇತನಾಗಿ ಆ ದೇವೋತ್ತಮರಿಗೆ ವಂದಿಸಿ

ತತಸ್ತು ಸಾ ಲಕ್ಷ್ಮಣರಾಮಪಾಲಿತಾ
ಮಹಾಚಮೂರ್ಹೃಷ್ಟಜನಾ ಯಶಸ್ವಿನೀ ।
ಶ್ರಿಯಾ ಜ್ವಲಂತೀ ವಿರರಾಜ ಸರ್ವತೋ
ನಿಶಾ ಪ್ರಣೀತೇವ ಹಿ ಶೀತರಶ್ಮಿನಾ ॥ ೨೩

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಯೋವಿಂಶತ್ಯುತ್ತರಶತತಮಃ ಸರ್ಗಃ



ಬೀಳ್ಕೊಂಡು, ವಾನರಸೇನೆಯು ವಿಶ್ರಮಿಸುವಂತೆ ಆಜ್ಞಾಪಿಸಿದನು. ಶ್ರೀರಾಮಲಕ್ಷ್ಮಣರಿಂದ ಪಾಲಿತವಾದ ಆ ಮಹಾಸೇನೆಯಲ್ಲಿ ಎಲ್ಲೆಲ್ಲಿಯೂ ಹರ್ಷೋಲ್ಲಾಸಗಳೇ! ಶೀತಕಿರಣನಾದ ಪೂರ್ಣಚಂದ್ರನಿಂದ ಉಲ್ಲಾಸಿತವಾದ ರಜನಿಯಂತೆ ಆ ವಾನರಸೇನೆಯು ಶಾಂತಿಸಂತೋಷಗಳಿಂದ ಕಂಗೊಳಿಸಿತು (೨೨-೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತಮೂರನೆಯ ಸರ್ಗ



## ಚತುರ್ವಿಂಶತ್ಯುತ್ತರಶತತಮಃ ಸರ್ಗಃ

### ಪುಷ್ಪಕೋಪಸ್ಥಾಪನಮ್

ತಾಂ ರಾತ್ರಿಮುಷಿತಂ ರಾಮಂ ಸುಖೋತ್ಥಿತಮರಿಂದಮಮ್ ।
ಅಬ್ರವೀತ್ ಪ್ರಾಂಜಲಿರ್ವಾಕ್ಯಂ ಜಯಂ ಪೃಷ್ಟ್ವಾ ವಿಭೀಷಣಃ ॥ ೧

ಸ್ನಾನಾನಿ ಚಾಂಗರಾಗಾಣಿ ವಸ್ತ್ರಾಣ್ಯಾಭರಣಾನಿ ಚ ।
ಚಂದನಾನಿ ಚ ದಿವ್ಯಾನಿ ಮಾಲ್ಯಾನಿ ವಿವಿಧಾನಿ ಚ ॥ ೨

ಅಲಂಕಾರವಿದಶ್ಚೇಮಾ ನಾರ್ಯಃ ಪದ್ಮನಿಭೇಕ್ಷಣಾಃ ।
ಉಪಸ್ಥಿತಾಸ್ತ್ವಾಂ ವಿಧಿವತ್ ಸ್ನಾಪಯಿಷ್ಯಂತಿ ರಾಘವ ॥ ೩

ಪ್ರತಿಗೃಹ್ಣೀಷ್ವ ತತ್ ಸರ್ವಂ ಮದನುಗ್ರಹಕಾಮ್ಯಯಾ ।
ಏವಮುಕ್ತಸ್ತು ಕಾಕುತ್ಸ್ಥಃ ಪ್ರತ್ಯುವಾಚ ವಿಭೀಷಣಮ್ ॥ ೪

### ಸರ್ಗ ೧೨೪

ಶ್ರೀರಾಮನು ವಿಭೀಷಣನ ಸತ್ಕಾರಗಳನ್ನು ಸ್ವೀಕರಿಸದೆ, ಅಯೋಧ್ಯೆಗೆ ಹೋಗುವ ಇಚ್ಛೆಯನ್ನು ವ್ಯಕ್ತಪಡಿಸುವುದು. ವಿಭೀಷಣನು ಪುಷ್ಪಕವಿಮಾನವನ್ನು ತರಿಸುವುದು.

ಬ್ರಹ್ಮಾದಿದೇವತೆಗಳು ಹೊರಟುಹೋದಮೇಲೆ, ಆ ದಿನದ ರಾತ್ರಿಯನ್ನು ಶ್ರೀರಾಮನು ಸುಖನಿದ್ರೆಯಿಂದ ಕಳೆದು ಎಚ್ಚರಗೊಂಡನು. ಅಷ್ಟರಲ್ಲಿ ವಿಭೀಷಣನು ಬಂದು ಜಯಕಾರಮಾಡಿ "ರಾಘವ, ನಿನ್ನ ಸ್ನಾನಾರ್ಥವಾಗಿ ನೀರು ಎಣ್ಣೆ ಮೊದಲಾದವು ಸಿದ್ಧವಾಗಿವೆ. ಅನುಲೇಪನಗಳನ್ನೂ ವಸ್ತ್ರಾಭರಣಗಳನ್ನೂ ತರಿಸಿದ್ದೇನೆ. ದಿವ್ಯಚಂದನವೂ ವಿವಿಧಪುಷ್ಪಮಾಲೆಗಳೂ ಬಂದಿವೆ (೧–೨). ಕಮಲಲೋಚನೆಯರಾದ ಸ್ತ್ರೀಯರು ನಿನ್ನ ಸೇವೆಗಾಗಿ ಬಂದಿದ್ದಾರೆ. ಅಲಂಕರಿಸುವುದರಲ್ಲಿ ಇವರು ದಕ್ಷರು. ಈ ಸ್ತ್ರೀಯರು ಕ್ರಮವರಿತು ನಿನಗೆ ಸ್ನಾನಮಾಡಿಸುವರು. ಶ್ರೀರಾಮ, ಈ ಸತ್ಕಾರವನ್ನು ಸ್ವೀಕರಿಸು. ನನ್ನನ್ನು ಅನುಗ್ರಹಿಸುವ ಉದ್ದೇಶದಿಂದ

ಹರೀನ್ ಸುಗ್ರೀವಮುಖ್ಯಾಂಸ್ತ್ವಂ ಸ್ನಾನೇನಾಭಿನಿಮಂತ್ರಯ ।
ಸ ತು ತಾಮ್ಯತಿ ಧರ್ಮಾತ್ಮಾ ಮಮ ಹೇತೋಃ ಸುಖೋಚಿತಃ ॥ ೫

ಸುಕುಮಾರೋ ಮಹಾಬಾಹುಃ ಕುಮಾರಃ ಸತ್ಯಸಂಶ್ರವಃ ।
ತಂ ವಿನಾ ಕೈಕಯೀಪುತ್ರಂ ಭರತಂ ಧರ್ಮಚಾರಿಣಮ್ ॥ ೬

ನ ಮೇ ಸ್ನಾನಂ ಬಹುಮತಂ ವಸ್ತ್ರಾಣ್ಯಾಭರಣಾನಿ ಚ ।
ಇತ ಏವ ಪಥಾ ಕ್ಷಿಪ್ರಂ ಪ್ರತಿಗಚ್ಛಾಮಿ ತಾಂ ಪುರೀಮ್ ॥ ೭

ಅಯೋಧ್ಯಾಮಾಗತೋ ಹ್ಯೇಷ ಪಂಥಾಃ ಪರಮದುರ್ಗಮಃ ।
ಏವಮುಕ್ತಸ್ತು ಕಾಕುತ್ಸ್ಥಂ ಪ್ರತ್ಯುವಾಚ ವಿಭೀಷಣಃ ॥ ೮

ಅಹ್ನಾ ತ್ವಾಂ ಪ್ರಾಪಯಿಷ್ಯಾಮಿ ತಾಂ ಪುರೀಂ ಪಾರ್ಥಿವಾತ್ಮಜ ।
ಪುಷ್ಪಕಂ ನಾಮ ಭದ್ರಂ ತೇ ವಿಮಾನಂ ಸೂರ್ಯಸಂನಿಭಮ್ ॥ ೯

ಮಮ ಭ್ರಾತುಃ ಕುಬೇರಸ್ಯ ರಾವಣೇನಾಹೃತಂ ಬಲಾತ್ ।
ಹೃತಂ ನಿರ್ಜಿತ್ಯ ಸಂಗ್ರಾಮೇ ಕಾಮಗಂ ದಿವ್ಯಮುತ್ತಮಮ್ ॥ ೧೦

---

ಲಾದರೂ ಅಂಗೀಕರಿಸು" ಎಂದು ಪ್ರಾರ್ಥಿಸಿದನು (೩-೪). ಆಗ ಕಾಕುತ್ಸ್ಥನು ವಿಭೀಷಣನನ್ನು ನೋಡಿ "ವಿಭೀಷಣ, ಸುಗ್ರೀವನೇ ಮೊದಲಾದ ವಾನರೋತ್ತಮರನ್ನು ಸ್ನಾನಾರ್ಥವಾಗಿ ಕರೆದುಕೊಂಡುಹೋಗು (ನನಗೆ ಯಾವ ಸತ್ಕಾರವೂ ಈಗ ಬೇಡ). ಧರ್ಮಾತ್ಮನಾದ ಭರತನು ನನಗಾಗಿ ದುಃಖದಿಂದ ತಳಮಳಿಸುತ್ತಿದ್ದಾನೆ (೫). ಸುಖೋಚಿತನಾದ ಆ ಸುಕುಮಾರನು ಕಷ್ಟಪಡುತ್ತಿದ್ದಾನೆ. ಸತ್ಯಸಂಧನಾದ ಆ ರಾಜಪುತ್ರನು ವ್ರತನಿಷ್ಠೆಯಲ್ಲಿದ್ದಾನೆ. ಕೈಕಯೀಪುತ್ರನೂ ಧರ್ಮಚಾರಿಯೂ ಆದ ಭರತನನ್ನು ನೋಡದೆ, ನನಗೆ ಈ ಸ್ನಾನ ಬೇಕಾಗಿಲ್ಲ! ಯಾವ ವಸ್ತ್ರಾಭರಣಗಳೂ ಬೇಡ. ವಿಭೀಷಣ, ಹೀಗೆಯೇ ನೇರವಾಗಿ ಆದಷ್ಟು ಬೇಗನೆ ಅಯೋಧ್ಯೆಗೆ ಹೋಗಿ ಸೇರುವೆನು (೬-೭). ಆ ನಗರವನ್ನು ಸೇರುವ ದಾರಿ ಬಹು ದೂರ, ದುರ್ಗಮ" ಎಂದನು. ಅದನ್ನು ಕೇಳಿ ವಿಭೀಷಣನು "ರಾಜಪುತ್ರ, ಒಂದೇ ಹಗಲಿನಲ್ಲಿ ನಿನ್ನನ್ನು ಅಯೋಧ್ಯೆಗೆ ಮುಟ್ಟಿಸುವೆನು! ನಿನ್ನ ಕೃಪೆಯಿಂದ ಪುಷ್ಪಕವೆಂಬ ಸೂರ್ಯಸಂಕಾಶವಾದ ವಿಮಾನವು ನನ್ನ ವಶಕ್ಕೆ ಬಂದಿದೆ (೮-೯). ಅದು ನನ್ನ ಅಣ್ಣನಾದ ಕುಬೇರನದು. ರಾವಣನು

ತ್ವದರ್ಥೇ ಪಾಲಿತಂ ಚೈತತ್ತಿಷ್ಠತ್ಯತುಲವಿಕ್ರಮ ।
ತದಿದಂ ಮೇಘಸಂಕಾಶಂ ವಿಮಾನಮಿಹ ತಿಷ್ಠತಿ ॥ ೧೧

ತೇನ ಯಾಸ್ಯಸಿ ಯಾನೇನ ತ್ವಮಯೋಧ್ಯಾಂ ಗತಜ್ವರಃ ।
ಅಹಂ ತೇ ಯದ್ಯನುಗ್ರಾಹ್ಯೋ ಯದಿ ಸ್ಮರಸಿ ಮೇ ಗುಣಾನ್ ॥ ೧೨

ವಸ ತಾವದಿಹ ಪ್ರಾಜ್ಞ ಯದ್ಯಸ್ತಿ ಮಯಿ ಸೌಹೃದಮ್ ।
ಲಕ್ಷ್ಮಣೇನ ಸಹ ಭ್ರಾತ್ರಾ ವೈದೇಹ್ಯಾ ಚಾಪಿ ಭಾರ್ಯಯಾ ॥ ೧೩

ಅರ್ಚಿತಃ ಸರ್ವಕಾಮೈಸ್ತ್ವಂ ತತೋ ರಾಮ ಗಮಿಷ್ಯಸಿ ।
ಪ್ರೀತಿಯುಕ್ತಸ್ಯ ಮೇ ರಾಮ ಸಸೈನ್ಯಃ ಸಸುಹೃದ್ಗಣಃ ॥ ೧೪

ಸತ್ಕ್ರಿಯಾಂ ವಿಹಿತಾಂ ತಾವದ್ಗೃಹಾಣ ತ್ವಂ ಮಯೋದ್ಯತಾಮ್ ।
ಪ್ರಣಯಾದ್ಬಹುಮಾನಾಚ್ಚ ಸೌಹೃದೇನ ಚ ರಾಘವ ॥ ೧೫

ಪ್ರಸಾದಯಾಮಿ ಪ್ರೇಷ್ಯೋಽಹಂ ನ ಖಲ್ವಾಜ್ಞಾಪಯಾಮಿ ತೇ ।
ಏವಮುಕ್ತಸ್ತತೋ ರಾಮಃ ಪ್ರತ್ಯುವಾಚ ವಿಭೀಷಣಮ್ ॥ ೧೬

---

ಸಂಗ್ರಾಮದಲ್ಲಿ ಅವನನ್ನು ಜಯಿಸಿ ಬಲಾತ್ಕಾರದಿಂದ ಆ ವಿಮಾನವನ್ನು ತಂದಿದ್ದನು. ಅದು ಕಾಮಗಾಮಿಯಾದ ದಿವ್ಯವಿಮಾನ. ನಿನಗೋಸ್ಕರ ವಾಗಿಯೇ ಅದನ್ನು ಇನ್ನೂ ಉಳಿಸಿಕೊಂಡಿದ್ದೇನೆ. ಆ ವಿಮಾನವು ಗಗನ ಮಾರ್ಗದಲ್ಲಿ ಮೇಘದಂತೆ ವೇಗವಾಗಿ ಸಂಚರಿಸಬಲ್ಲದು. ಅದು ಸಿದ್ಧ ವಾಗಿದೆ! (೧೦–೧೧). ಆ ವಿಮಾನದಲ್ಲಿ ಕುಳಿತು ನಿಶ್ಚಿಂತೆಯಿಂದ ನೀನು ಅಯೋಧ್ಯೆಗೆ ಹೋಗಬಹುದು. ಶ್ರೀರಾಮ, ನಾನು ಅನುಗ್ರಹಕ್ಕೆ ಅರ್ಹ ನಾಗಿದ್ದರೆ, ನನ್ನ ಗುಣಗಳು ನಿನಗೆ ಗ್ರಾಹ್ಯವಾಗಿದ್ದರೆ, ನನ್ನಲ್ಲಿ ಪ್ರೀತಿ ಇದ್ದರೆ–ಒಂದೆರಡು ದಿನವಾದರೂ ಇಲ್ಲಿ ಉಳಿದುಕೊ. ನಿನ್ನ ತಮ್ಮನಾದ ಲಕ್ಷ್ಮಣನಿಂದಲೂ ಪತ್ನಿಯಾದ ವೈದೇಹಿಯಿಂದಲೂ ಸಮೇತನಾಗಿ ಇಲ್ಲಿರು (೧೨–೧೩). ನನಗೆ ತೋರಿದ ಇಷ್ಟಾರ್ಥಗಳಿಂದ ನಿಮ್ಮನ್ನು ಅರ್ಚಿಸುವೆನು ಅನಂತರ ಪ್ರಯಾಣಮಾಡಬಹುದು. ವಾನರಸೇನೆಯಿಂದಲೂ ಮಿತ್ರವರ್ಗ ದಿಂದಲೂ ಪರಿವೃತನಾಗಿ, ಶ್ರೀರಾಮ, ಸಂತೋಷದಿಂದ ನಾನು ಅರ್ಪಿಸುವ ಸತ್ಕಾರವನ್ನು ಸ್ವೀಕರಿಸು. ನಿನ್ನಲ್ಲಿರುವ ಪ್ರೇಮದಿಂದಲೂ ಗೌರವಬುದ್ಧಿ

ರಕ್ಷಸಾಂ ವಾನರಾಣಾಂ ಚ ಸರ್ವೇಷಾಂ ಚೋಪಶೃಣ್ವತಾಮ್ ।
ಪೂಜಿತೋಽಹಂ ತ್ವಯಾ ಸೌಮ್ಯ ಸಾಚಿವ್ಯೇನ ಪರಂತಪ ॥ ೧೭
ಸರ್ವಾತ್ಮನಾ ಚ ಚೇಷ್ಟಾಭಿಃ ಸೌಹೃದೇನೋತ್ತಮೇನ ಚ ।
ನ ಖಲ್ವೇತನ್ನ ಕುರ್ಯಾಂ ತೇ ವಚನಂ ರಾಕ್ಷಸೇಶ್ವರ ॥ ೧೮
ತಂ ತು ಮೇ ಭ್ರಾತರಂ ದ್ರಷ್ಟುಂ ಭರತಂ ತ್ವರತೇ ಮನಃ ।
ಮಾಂ ನಿವರ್ತಯಿತುಂ ಯೋಽಸೌ ಚಿತ್ರಕೂಟಮುಪಾಗತಃ ॥ ೧೯
ಶಿರಸಾ ಯಾಚತೋ ಯಸ್ಯ ವಚನಂ ನ ಕೃತಂ ಮಯಾ ।
ಕೌಸಲ್ಯಾಂ ಚ ಸುಮಿತ್ರಾಂ ಚ ಕೈಕೇಯೀಂ ಚ ಯಶಸ್ವಿನೀಮ್ ॥
ಗುರೂಂಶ್ಚ ಸುಹೃದಶ್ಚೈವ ಪೌರಾನ್ ಜಾನಪದೈಃ ಸಹ ।
ಉಪಸ್ಥಾಪಯ ಮೇ ಕ್ಷಿಪ್ರಂ ವಿಮಾನಂ ರಾಕ್ಷಸೇಶ್ವರ ॥ ೨೧
ಕೃತಕಾರ್ಯಸ್ಯ ಮೇ ವಾಸಃ ಕಥಂಸ್ವಿದಿಹ ಸಂಮತಃ ।
ಅನುಜಾನೀಹಿ ಮಾಂ ಸೌಮ್ಯ ಪೂಜಿತೋಽಸ್ಮಿ ವಿಭೀಷಣ ॥ ೨೨

---

ಯಿಂದಲೂ ಸುಹೃದ್ಭಾವದಿಂದಲೂ ಬೇಡಿಕೊಳ್ಳುತ್ತೇನೆ ನಾನು ನಿನ್ನ ಭೃತ್ಯ ನಾನು ಆಜ್ಞಾಪಿಸಬಲ್ಲೆನೆ?" ಎಂದು ಅರಿಕೆಮಾಡಿದನು (೧೪-೧೬). ಆಗ–ಸಮಸ್ತ ರಾಕ್ಷಸರೂ ವಾನರರೂ ಕೇಳುತ್ತಿರುವಾಗ, ರಾಘವನು ವಿಭೀಷಣನನ್ನು ಕುರಿತು "ಸೌಮ್ಯ–ರಾಕ್ಷಸೇಶ್ವರ, ಅಮೂಲ್ಯವಾದ ನಿನ್ನ ಮಂತ್ರಾಲೋಚನೆಯಿಂದ ನನ್ನನ್ನು ಸತ್ಕರಿಸಿದ್ದೀಯೆ. ನಿನ್ನ ಕೃತಿ, ನಿಷ್ಕಳಂಕವಾದ ಸೌಹಾರ್ದ–ಮೊದಲಾದ್ದರಿಂದ ಸರ್ವವಿಧದಲ್ಲಿಯೂ ನಾನು ಸಂತೃಪ್ತನಾಗಿದ್ದೇನೆ ನಿನ್ನ ಮಾತನ್ನು ನಾನು ತೆಗೆದುಹಾಕತಕ್ಕವನಲ್ಲ (೧೭–೧೮) ಆದರೆ, ವಿಭೀಷಣ, ತಮ್ಮನಾದ ಭರತನನ್ನು ನೋಡಲು ಮನಸ್ಸು ತವಕಿಸುತ್ತಿದೆ! ನನ್ನನ್ನು ವನವಾಸದಿಂದ ಹಿಂದಿರುಗಿಸಿ ರಾಜಧಾನಿಗೆ ಕರೆದೊಯ್ಯಲು ಅವನು ಚಿತ್ರಕೂಟದವರೆಗೆ ಬಂದಿದ್ದನು(೧೯) ತಲೆಬಾಗಿ ಬೇಡಿಕೊಂಡನು. ಆದರೂ ಅವನ ಮಾತನ್ನು ನಾನು ನಡೆಸಲಿಲ್ಲ. ಕೌಸಲ್ಯೆ, ಸುಮಿತ್ರೆ, ಕೈಕೇಯಿ, ಗುರುಗಳು, ಮಿತ್ರರು, ಪೌರರು, ಪ್ರಜೆಗಳು —ಇವರನ್ನು ನೋಡಬೇಕೆನಿಸುತ್ತದೆ. ರಾಕ್ಷಸೇಂದ್ರ, ಆ ವಿಮಾನವನ್ನು ಬೇಗನೆ ತರಿಸು (೨೦–೨೧). ಉದ್ದಿಷ್ಟವಾದ ಕಾರ್ಯವೆಲ್ಲವೂ ನಡೆದಮೇಲೆ

ಮನ್ಯುರ್ನ ಖಲು ಕರ್ತವ್ಯಸ್ತ್ವರಿತಂ ತ್ವಾನುಮಾನಯೇ ।
ರಾಘವಸ್ಯ ವಚಃ ಶ್ರುತ್ವಾ ರಾಕ್ಷಸೇಂದ್ರೋ ವಿಭೀಷಣಃ ॥ ೨೩

ತದ್ವಿಮಾನಂ ಸಮಾದಾಯ ತೂರ್ಣಂ ಪ್ರತಿನಿವರ್ತತ ।
ತತಃ ಕಾಂಚನಚಿತ್ರಾಂಗಂ ವೈದೂರ್ಯಮಯವೇದಿಕಮ್ ॥ ೨೪

ಕೂಟಾಗಾರೈಃ ಪರಿಕ್ಷಿಪ್ತಂ ಸರ್ವತೋ ರಜತಪ್ರಭಮ್ ।
ಪಾಂಡರಾಭಿಃ ಪತಾಕಾಭಿರ್ಧ್ವಜೈಶ್ಚ ಸಮಲಂಕೃತಮ್ ॥ ೨೫

ಶೋಭಿತಂ ಕಾಂಚನೈರ್ಹರ್ಮ್ಯೈರ್ಹೇಮಪದ್ಮವಿಭೂಷಿತಮ್ ।
ಪ್ರಕೀರ್ಣಂ ಕಿಂಕಿಣೀಜಾಲೈರ್ಮುಕ್ತಾಮಣಿಗವಾಕ್ಷಿತಮ್ ॥ ೨೬

ಘಂಟಾಜಾಲೈಃ ಪರಿಕ್ಷಿಪ್ತಂ ಸರ್ವತೋ ಮಧುರಸ್ವನಮ್ ।
ಯನ್ಮೇರುಶಿಖರಾಕಾರಂ ನಿರ್ಮಿತಂ ವಿಶ್ವಕರ್ಮಣಾ ॥ ೨೭

---

ನಾನು ಇಲ್ಲಿ ವಿಲಂಬಿಸುವುದು ಸರಿಯಾಗದು. ಸೌಮ್ಯ, ನನಗೆ ಅನುಮತಿಯನ್ನು ಕೊಡು. ಸಕಲ ಸತ್ಕಾರಗಳಿಂದಲೂ ಪೂಜಿತನಾದೆನೆಂದು ತಿಳಿ. ವಿಭೀಷಣ, ಬೇಸರಮಾಡಿಕೊಳ್ಳಬೇಡ. ಬೇಗನೆ ಹೊರಡಲು ಒಪ್ಪಿಗೆಯನ್ನು ಕೊಡು" ಎಂದನು (೨೨-೨೩). ರಾಘವನ ನುಡಿಯನ್ನು ಕೇಳಿ, ವಿಭೀಷಣನು ಲಂಕೆಗೆ ಹೋಗಿ ಶೀಘ್ರದಲ್ಲಿ ವಿಮಾನವನ್ನು ತಂದನು. ಆ ಪುಷ್ಪಕವಿಮಾನದ ಸಕಲ ಭಾಗಗಳೂ ಚಿನ್ನದಿಂದ ಚಿತ್ರಿತವಾಗಿದ್ದವು. ಮಧ್ಯದಲ್ಲಿ ವೈಡೂರ್ಯಮಯವಾದ ವೇದಿಕೆ ಇದ್ದಿತು. ಅಲ್ಲಲ್ಲಿ ರಜತಮಯವಾದ ಮಂಟಪಗಳಿದ್ದವು. ಬಿಳಿಯ ಪತಾಕೆಗಳಿಂದಲೂ ಧ್ವಜಸ್ತಂಭಗಳಿಂದಲೂ ಭೂಷಿತವಾಗಿದ್ದಿತು (೨೪-೨೫). ನಡುನಡುವೆ ಕಾಂಚನಮಯವಾದ ಸೌಧಗಳಿದ್ದವು. ಚಿನ್ನದ ತಾವರೆಗಳಿಂದ ಅಲಂಕರಿಸಲಾಗಿದ್ದಿತು. ಆ ವಿಮಾನವನ್ನು ಕಿರುಗೆಜ್ಜೆಗಳಿಂದ ಸಿಂಗರಿಸಲಾಗಿತ್ತು. ಕಿಟಕಿಗಳು ಮುತ್ತಿನಮಣಿಗಳಿಂದ ಭೂಷಿತವಾಗಿದ್ದವು (೨೬). ಎಲ್ಲ ದಿಕ್ಕುಗಳಲ್ಲಿಯೂ ಇಂಪಾಗಿ ಝಣಝಣಿಸುವ ಕಿರುಗಂಟೆಗಳನ್ನು ತೂಗಿಹಾಕಲಾಗಿತ್ತು. ಸುಮೇರು ಪರ್ವತದ ಒಂದು ಶಿಖರವೋ ಎಂದು ಕಾಣುವಂತೆ, ವಿಶ್ವಕರ್ಮನು ಆ ವಿಮಾನವನ್ನು ರಮ್ಯವಾಗಿ ನಿರ್ಮಿಸಿದ್ದನು (೨೭).

ಬಹುಭಿರ್ಭೂಷಿತಂ ಹರ್ಮ್ಯೈರ್ಮುಕ್ತಾರಜತಸಂನಿಭೈಃ ।
ತಲೈಃ ಸ್ಫಾಟಿಕಚಿತ್ರಾಂಗೈರ್ವೈಡೂರ್ಯೈಶ್ಚ ವರಾಸನೈಃ ॥ ೨೮

ಮಹಾರ್ಹಾಸ್ತರಣೋಪೇತೈರುಪಪನ್ನಂ ಮಹಾಧನೈಃ ।
ಉಪಸ್ಥಿತಮನಾಧೃಷ್ಯಂ ತದ್ವಿಮಾನಂ ಮನೋಜವಮ್ ॥ ೨೯
ನಿವೇದಯಿತ್ವಾ ರಾಮಾಯ ತಸ್ಥೌ ತತ್ರ ವಿಭೀಷಣಃ ॥

ತತ್ ಪುಷ್ಪಕಂ ಕಾಮಗಮಂ ವಿಮಾನ-
ಮುಪಸ್ಥಿತಂ ಭೂಧರಸಂನಿಕಾಶಮ್ ।
ದೃಷ್ಟ್ವಾ ತದಾ ವಿಸ್ಮಯಮಾಜಗಾಮ
ರಾಮಃ ಸಸೌಮಿತ್ರಿರುದಾರಸತ್ತ್ವಃ ॥ ೩೦

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ವಿಂಶತ್ಯುತ್ತರಶತತಮಃ ಸರ್ಗಃ

---

ಮುತ್ತಿನ ರಾಶಿಗಳೋ ಬೆಳ್ಳಿಯ ಸಂಚಯಗಳೋ ಎಂಬಂತೆ ನಿರ್ಮಲವಾದ ಅನೇಕ ಪ್ರಾಸಾದಗಳು ಅದರಲ್ಲಿ ಕಂಗೊಳಿಸುತ್ತಿದ್ದವು. ಆ ವಿಮಾನದ ನೆಲವು ಸ್ಫಟಿಕಶಿಲೆಯಿಂದ ಚಿತ್ರಮಯವಾಗಿ ರಚಿತವಾಗಿತ್ತು. ವೈಡೂರ್ಯಮಯವಾದ ಉತ್ತಮಪೀಠಗಳು ವಿರಾಜಿಸುತ್ತಿದ್ದವು (೨೮). ಆ ಪೀಠಗಳಮೇಲೆ ಬಹುಮೂಲ್ಯದ ವಸ್ತ್ರಗಳನ್ನು ಹಾಸಲಾಗಿತ್ತು. ಸರ್ವೋತ್ತಮವಾದ ವಸ್ತುಗಳಿಂದ ಆ ವಿಮಾನವನ್ನು ಅಣಿಗೊಳಿಸಲಾಗಿತ್ತು. ಅಭೇದ್ಯವಾದ ಆ ಪುಷ್ಪಕವಿಮಾನವು ಮನೋವೇಗದಿಂದ ಹಾರುವ ಸಾಮರ್ಥ್ಯವನ್ನು ಪಡೆದಿತ್ತು. ಆ ವಿಮಾನವು ಬಂದು ಸಿದ್ಧವಾಗಿದೆಯೆಂದು ವಿಭೀಷಣನು ಶ್ರೀರಾಮನಿಗೆ ತಿಳಿಸಿದನು (೨೯). ಧೀರೋದಾತ್ತನಾದ ಶ್ರೀರಾಮನು ಸೌಮಿತ್ರಿಯೊಡನೆ ಬಂದು, ವಿಮಾನ ಸ್ವಾಮಿಯ ಇಚ್ಛಾಮಾತ್ರದಿಂದ ಎಲ್ಲೆಂದರಲ್ಲಿಗೆ ಸಂಚರಿಸಬಲ್ಲ ಪರ್ವತ ಸಂಕಾಶವಾದ ಆ ಪುಷ್ಪಕವಿಮಾನವನ್ನು ವೀಕ್ಷಿಸಿ ವಿಸ್ಮಿತನಾದನು (೩೦).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತು ನಾಲ್ಕನೆಯ ಸರ್ಗ

# ಪಂಚವಿಂಶತ್ಯುತ್ತರಶತತಮಃ ಸರ್ಗಃ

## ಪುಷ್ಪಕೋತ್ಪತನಮ್

ಉಪಸ್ಥಿತಂ ತು ತಂ ದೃಷ್ಟ್ವಾ ಪುಷ್ಪಕಂ ಪುಷ್ಪಭೂಷಿತಮ್ ।
ಅವಿದೂರಸ್ಥಿತೋ ರಾಮಂ ಪ್ರತ್ಯುವಾಚ ವಿಭೀಷಣಃ ॥ ೧

ಸ ತು ಬದ್ಧಾಂಜಲಿಃ ಪ್ರಹ್ವೋ ವಿನೀತೋ ರಾಕ್ಷಸೇಶ್ವರಃ ।
ಅಬ್ರವೀತ್ತ್ವರಯೋಪೇತಃ ಕಿಂ ಕರೋಮೀತಿ ರಾಘವಮ್ ॥ ೨

ತಮುಬ್ರವೀನ್ಮಹಾತೇಜಾ ಲಕ್ಷ್ಮಣಸ್ಯೋಪಶೃಣ್ವತಃ ।
ವಿಮೃಶ್ಯ ರಾಘವೋ ವಾಕ್ಯಮಿದಂ ಸ್ನೇಹಪುರಸ್ಕೃತಮ್ ॥ ೩

ಕೃತಪ್ರಯತ್ನಕರ್ಮಾಣೋ ವಿಭೀಷಣ ವನೌಕಸಃ ।
ರತ್ನೈರರ್ಥೈಶ್ಚ ವಿವಿಧೈರ್ಭೂಷಣೈಶ್ಚಾಪಿ ಪೂಜಯ ॥ ೪

## ಸರ್ಗ ೧೨೫

ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಪುಷ್ಪಕವಿಮಾನವನ್ನೇರುವುದು.
ಶ್ರೀರಾಮನ ಅನುಜ್ಞೆಯಂತೆ ಸುಗ್ರೀವಾದಿಗಳೂ ವಿಭೀಷಣನೂ
ಅಯೋಧ್ಯಾಭಿಮುಖರಾಗಿ ವಿಮಾನವನ್ನು ಹತ್ತುವುದು.

ಪುಷ್ಪಾಲಂಕೃತವಾದ ಪುಷ್ಪಕವಿಮಾನವು ಸಿದ್ಧವಾಗಿರುವುದನ್ನು ಕಂಡು, ವಿಭೀಷಣನು ಆ ವಿಷಯವನ್ನು ಶ್ರೀರಾಮನಿಗೆ ಅರಿಕೆ ಮಾಡಿದನು. ಆ ರಾಕ್ಷಸೇಶ್ವರನು ಬದ್ಧಾಂಜಲಿಯಾಗಿ ತಲೆಬಾಗಿ ವಿನಯದಿಂದ "ಶ್ರೀರಾಮ, ಇನ್ನು ನಾನು ಪಾಲಿಸಬೇಕಾದ ಆಜ್ಞೆ ಯಾವುದು ?" ಎಂದು ಕೇಳಿದನು (೧-೨). ಆಗ ತೇಜೋನಿಧಿಯಾದ ರಾಘವನು ಸ್ವಲ್ಪ ಆಲೋಚಿಸಿ ಸಮೀಪದಲ್ಲಿದ್ದ ಲಕ್ಷ್ಮಣನಿಗೆ ಕೇಳಿಸುವಂತೆ ವಿಭೀಷಣನನ್ನು ಕುರಿತು ಸ್ನೇಹದಿಂದ "ವಿಭೀಷಣ, ಈ ವಾನರಯೋಧರು ನನಗೋಸ್ಕರ ಬಹಳ ಶ್ರಮವನ್ನು ವಹಿಸಿದರು. ಸಾಹಸಕೃತ್ಯಗಳನ್ನೆಸಗಿದರು. ಇವರಿಗೆ ರತ್ನಾದಿ ವಿವಿಧವಸ್ತುಗಳನ್ನೂ ಉಡಿಗೆತೊಡಿಗೆಗಳನ್ನೂ ಕೊಟ್ಟು ಸತ್ಕರಿಸು (೩-೪).

ಸಹೈಭಿರಜಿತಾ ಲಂಕಾ ನಿರ್ಜಿತಾ ರಾಕ್ಷಸೇಶ್ವರ ।
ಹೃಷ್ಟೈಃ ಪ್ರಾಣಭಯಂ ತ್ಯಕ್ತ್ವಾ ಸಂಗ್ರಾಮೇಷ್ವನಿವರ್ತಿಭಿಃ ॥ ೫

ತ ಇಮೇ ಕೃತಕರ್ಮಾಣಃ ಪೂಜ್ಯಂತಾಂ ಸರ್ವವಾನರಾಃ ।
ಧನರತ್ನಪ್ರದಾನೇನ ಕರ್ಮೈಷಾಂ ಸಫಲಂ ಕುರು ॥ ೬

ಏವಂ ಸಂಮಾನಿತಾಶ್ಚೈತೇ ಮಾನಾರ್ಹಾ ಮಾನದ ತ್ವಯಾ ।
ಭವಿಷ್ಯಂತಿ ಕೃತಜ್ಞೇನ ನಿರ್ವೃತಾ ಹರಿಯೂಥಪಾಃ ॥ ೭

ತ್ಯಾಗಿನಂ ಸಂಗ್ರಹೀತಾರಂ ಸಾನುಕ್ರೋಶಂ ಯಶಸ್ವಿನಮ್ ।
ಸರ್ವೇ ತ್ವಾಮವಗಚ್ಛಂತಿ ತತಃ ಸಂಬೋಧಯಾಮ್ಯಹಮ್ ॥ ೮

ಹೀನಂ ರತಿಗುಣೈಃ ಸರ್ವೈರಭಿಹಂತಾರಮಾಹವೇ ।
ತ್ಯಜಂತಿ ನೃಪತಿಂ ಸೇನಾಃ ಸಂವಿಗ್ನಾಸ್ತಂ ನರೇಶ್ವರಮ್ ॥ ೯

---

ರಾಕ್ಷಸೇಶ್ವರ, ದುರ್ಜಯವಾದ ಲಂಕೆಯನ್ನು ಇವರ ನೆರವಿನಿಂದಲೇ ಜಯಿಸಿದೆವು. ಈ ಸೈನಿಕರು ಪ್ರಾಣಭಯವನ್ನು ತೊರೆದು ಉತ್ಸಾಹದಿಂದ ಕಾದಾಡಿದ್ದಾರೆ. ಈ ವಾನರರು ಸಂಗ್ರಾಮಗಳಲ್ಲಿ ಹಿಂಜರಿಯದೆ ಹೋರಾಡಿದ್ದಾರೆ (೫). ತಮ್ಮ ಕಾರ್ಯವನ್ನು ಸಾಧಿಸಿ ಕೃತಕೃತ್ಯರಾಗಿದ್ದಾರೆ ಇವರೆಲ್ಲರನ್ನೂ ಯೋಗ್ಯರೀತಿಯಲ್ಲಿ ಆದರಿಸು. ಧನವನ್ನೂ ಉತ್ತಮ ವಸ್ತುಗಳನ್ನೂ ಕೊಟ್ಟು, ಇವರ ಸಾಹಸವು ಸಫಲವಾಗುವಂತೆ ನೋಡಿಕೊ (೬). ವಿಭೀಷಣ, ಈ ವಾನರಯೋಧರು ಸಂಮಾನಕ್ಕೆ ಅರ್ಹರು. ನೀನೂ ಸಹ ಇವರನ್ನು ಸಂಮಾನಿಸಲು ಸಮರ್ಥನೂ ಉದಾರಿಯೂ ಆಗಿದ್ದೀಯೆ. ಇವರನ್ನು ಆದರಿಸಿದರೆ, ನಿನ್ನ ಕೃತಜ್ಞತೆಯನ್ನು ಕಂಡು ವಾನರಯೂಥಪರೆಲ್ಲರೂ ಸಂತೋಷಪಡುವರು (೭). ಆಗ ನೀನು ಉದಾರಿಯೆಂದೂ ಮಿತ್ರಸಂಗ್ರಹತತ್ಪರನೆಂದೂ ಎಲ್ಲರೂ ತಿಳಿಯುತ್ತಾರೆ. ನೀನು ಅನುಕಂಪವುಳ್ಳವನೆಂದೂ ಕೀರ್ತಿಶಾಲಿಯೆಂದೂ ಭಾವಿಸುತ್ತಾರೆ. ಆದ್ದರಿಂದ ನಿನಗೆ ಈ ವಿಷಯವನ್ನು ಜ್ಞಾಪಿಸುತ್ತಿದ್ದೇನೆ (೮). ಲಂಕೇಶ್ವರ, ರಾಜನಲ್ಲಿ ಪ್ರೀತಿಕರವಾದ ಔದಾರ್ಯಾದಿಗುಣಗಳಿಲ್ಲ

ಏವಮುಕ್ತಸ್ತು ರಾಮೇಣ ವಾನರಾಂಸ್ತಾನ್ ವಿಭೀಷಣಃ ।
ರತ್ನಾರ್ಥೈಃ ಸಂವಿಭಾಗೇನ ಸರ್ವಾನೇವಾಭ್ಯಪೂಜಯತ್ ॥ ೧೦

ತತಸ್ತಾನ್ ಪೂಜಿತಾನ್ ದೃಷ್ಟ್ವಾ ರತ್ನೈರರ್ಥೈಶ್ಚ ಯೂಥಪಾನ್ ।
ಆರುರೋಹ ತತೋ ರಾಮಸ್ತದ್ವಿಮಾನಮನುತ್ತಮಮ್ ॥ ೧೧

ಅಂಕೇನಾದಾಯ ವೈದೇಹೀಂ ಲಜ್ಜಮಾನಾಂ ಯಶಸ್ವಿನೀಮ್ ।
ಲಕ್ಷ್ಮಣೇನ ಸಹ ಭ್ರಾತ್ರಾ ವಿಕ್ರಾಂತೇನ ಧನುಷ್ಮತಾ ॥ ೧೨

ಅಬ್ರವೀಚ್ಚ ವಿಮಾನಸ್ಥಃ ಪೂಜಯನ್ ಸರ್ವವಾನರಾನ್ ।
ಸುಗ್ರೀವಂ ಚ ಮಹಾವೀರ್ಯಂ ಕಾಕುತ್ಸ್ಥಃ ಸವಿಭೀಷಣಮ್ ॥ ೧೩

ಮಿತ್ರಕಾರ್ಯಂ ಕೃತಮಿದಂ ಭವದ್ಭಿರ್ವಾನರೋತ್ತಮಾಃ ।
ಅನುಜ್ಞಾತಾ ಮಯಾ ಸರ್ವೇ ಯಥೇಷ್ಟಂ ಪ್ರತಿಗಚ್ಛಥ ॥ ೧೪

---

ದಿದ್ದರೆ, ಸೈನಿಕರು ಉದ್ವಿಗ್ನರಾಗುತ್ತಾರೆ. ಯುದ್ಧದಲ್ಲಿ ಬರಿಯ ಹಿಂಸೆಯೊಂದನ್ನೇ ಕೊಡುತ್ತಿದ್ದರೆ, ಅವನನ್ನು ತ್ಯಜಿಸುತ್ತಾರೆ" ಎಂದು ಹೇಳಿದನು. ಅನಂತರ ವಿಭೀಷಣನು ವಿವಿಧ ರತ್ನಗಳನ್ನೂ ನಾನಾಬಗೆಯ ಉತ್ತಮ ವಸ್ತುಗಳನ್ನೂ ತರಿಸಿ, ಸಮಸ್ತ ವಾನರಯೋಧರಿಗೂ ಹಂಚಿಸಿ ಉಚಿತ ರೀತಿಯಲ್ಲಿ ಸತ್ಕರಿಸಿದನು (೯-೧೦). ಈ ಪ್ರಕಾರವಾಗಿ ಸಕಲ ವಾನರಯೋಧರೂ ಸತ್ಕರಿಸಲ್ಪಟ್ಟುದನ್ನು ಕಣ್ಣಿಂದ ನೋಡಿದ ಮೇಲೆ, ಶ್ರೀರಾಮನು ಪುಷ್ಪಕವಿಮಾನವನ್ನು ಹತ್ತಿದನು. ನಾಚಿಕೆಯಿಂದ ಬಳುಕುತ್ತಿದ್ದ ಕೀರ್ತಿಶಾಲಿನಿಯಾದ ವೈದೇಹಿಯನ್ನು ತನ್ನ ಅಂಕದಲ್ಲಿ ಎತ್ತಿಕೊಂಡು, ವೀರಾಗ್ರಣಿಯೂ ಧನುರ್ಧಾರಿಯೂ ಆದ ಲಕ್ಷ್ಮಣನಿಂದ ಸಮೇತನಾಗಿ ಶ್ರೀರಾಮನು ವಿಮಾನವನ್ನೇರಿದನು! (೧೧-೧೨). ಕಾಕುತ್ಸ್ಥನು ಪುಷ್ಪಕ ವಿಮಾನದಲ್ಲಿ ನಿಂತು, ಮಹಾಸತ್ತ್ವಶಾಲಿಯಾದ ಸುಗ್ರೀವನನ್ನೂ ವಿಭೀಷಣನನ್ನೂ ಸಕಲ ವಾನರರನ್ನೂ ನೋಡಿ ಆದರದಿಂದ "ಮಿತ್ರರೆ-ವಾನರೋತ್ತಮರೆ, ಮಿತ್ರನ ಕಾರ್ಯವೆಂದು ಬಗೆದು ನೀವೆಲ್ಲರೂ ಸೇರಿ ನನ್ನ ಕೆಲಸವನ್ನು ನೆರವೇರಿಸಿಕೊಟ್ಟಿದ್ದೀರಿ. ನಿಮಗೆ ಅನುಜ್ಞೆಯನ್ನು ಕೊಟ್ಟಿದ್ದೇನೆ. ಇನ್ನು ಯಥೇಷ್ಟವಾಗಿ ನಿಮ್ಮ ಸ್ಥಳಗಳಿಗೆ ಹೋಗಬಹುದು

ಯತ್ತು ಕಾರ್ಯಂ ವಯಸ್ಯೇನ ಸುಹೃದಾ ವಾ ಪರಂತಪ ।
ಕೃತಂ ಸುಗ್ರೀವ ತತ್ ಸರ್ವಂ ಭವತಾಧರ್ಮಭೀರುಣಾ ॥ ೧೫

ಕಿಷ್ಕಿಂಧಾಂ ಪ್ರತಿ ಯಾಹ್ಯಾಶು ಸ್ವಸೈನ್ಯೇನಾಭಿಸಂವೃತಃ ।
ಸ್ವರಾಜ್ಯೇ ವಸ ಲಂಕಾಯಾಂ ಮಯಾ ದತ್ತೇ ವಿಭೀಷಣ ॥ ೧೬

ನ ತ್ವಾಂ ಧರ್ಷಯಿತುಂ ಶಕ್ತಾಃ ಸೇಂದ್ರಾ ಅಪಿ ದಿವೌಕಸಃ ।
ಅಯೋಧ್ಯಾಂ ಪ್ರತಿಯಾಸ್ಯಾಮಿ ರಾಜಧಾನೀಂ ಪಿತುರ್ಮಮ ॥ ೧೭

ಅಭ್ಯನುಜ್ಞಾತುಮಿಚ್ಛಾಮಿ ಸರ್ವಾಂಶ್ಚಾಮಂತ್ರಯಾಮಿ ವಃ ।
ಏವಮುಕ್ತಾಸ್ತು ರಾಮೇಣ ವಾನರಾಸ್ತೇ ಮಹಾಬಲಾಃ ॥ ೧೮

ಊಚುಃ ಪ್ರಾಂಜಲಯೋ ರಾಮಂ ರಾಕ್ಷಸಶ್ಚ ವಿಭೀಷಣಃ ।
ಅಯೋಧ್ಯಾಂ ಗಂತುಮಿಚ್ಛಾಮಃ ಸರ್ವಾನ್ನಯತು ನೋ ಭವಾನ್ ॥

ಉದ್ಯುಕ್ತಾ ವಿಚರಿಷ್ಯಾಮೋ ವನಾನಿ ನಗರಾಣಿ ಚ ।
ದೃಷ್ಟ್ವಾ ತ್ವಾಮಭಿಷೇಕಾರ್ದ್ರಂ ಕೌಸಲ್ಯಾಮಭಿವಾದ್ಯ ಚ ॥ ೨೦

---

(೧೫-೧೮). ವೀರಾಗ್ರೇಸರ-ಸುಗ್ರೀವ, ಶುದ್ಧಹೃದಯುದ ಗೆಳೆಯನು ಏನೇನು ಮಾಡಬಹುದೋ ಅದೆಲ್ಲವನ್ನೂ ನನಗಾಗಿ ಮಾಡಿದ್ದೀಯೆ. ಅಧರ್ಮಕ್ಕೆ ಅಂಜಿ ನನ್ನ ಕಾರ್ಯವನ್ನು ಸಾಧಿಸಿದ್ದೀಯೆ. ಸೇನಾಪರಿವೃತನಾಗಿ ಕಿಷ್ಕಿಂಧೆಗೆ ಶೀಘ್ರವಾಗಿ ಹೋಗು (೧೫). ವಿಭೀಷಣ, ನಿನಗೆ ಲಂಕೆಯನ್ನು ಸಂಪಾದಿಸಿಕೊಟ್ಟಿದ್ದೇನೆ. ನಿನ್ನ ಸ್ವರಾಜ್ಯದಲ್ಲಿ ರಾಜ್ಯಭಾರವನ್ನು ನಡೆಸುತ್ತಿರು. ಇಂದ್ರಾದಿ ದೇವತೆಗಳೂ ಸಹ ನಿನ್ನನ್ನು ಅಲ್ಲಾಡಿಸಲಾರರು! ನಾನು ನನ್ನ ತಂದೆಯ ರಾಜಧಾನಿಯಾದ ಅಯೋಧ್ಯೆಗೆ ಪ್ರಯಾಣ ಮಾಡುವೆನು. ನೀವೆಲ್ಲರೂ ನನಗೆ ಅನುಜ್ಞೆಯನ್ನು ಕೊಡಿ. ನಿಮ್ಮೆಲ್ಲರನ್ನೂ ಬೀಳ್ಕೊಳ್ಳುವೆನು" ಎಂದು ನುಡಿದನು (೧೬-೧೮). ಶ್ರೀರಾಮನು ಹೀಗೆನ್ನಲು, ಸಕಲ ವಾನರಯೂಥಪರೂ ವಿಭೀಷಣನೂ ಕೈಮುಗಿದುಕೊಂಡು "ಶ್ರೀರಾಮ, ನಾವೂ ಅಯೋಧ್ಯೆಗೆ ಬರಲು ಅಪೇಕ್ಷಿಸುತ್ತೇವೆ. ನಮ್ಮನ್ನೂ ಕರೆದುಕೊಂಡು ಹೋಗು! (೧೯). ಅಲ್ಲಿಯ ಉಪವನಗಳಲ್ಲಿಯೂ ನಗರಗಳಲ್ಲಿಯೂ ತಿರುಗಾಡಿ ವಿಹರಿಸಬೇಕೆಂದು ನಮಗೆ ಬಯಕೆಯಾಗಿದೆ. ನೀನು ಪಟ್ಟಾಭಿಷಿಕ್ತನಾಗುವುದನ್ನು ಕಣ್ಣಿಂದ ನೋಡಬೇಕೆಂದೂ

ಅಚಿರೇಣಾಗಮಿಷ್ಯಾಮಃ ಸ್ವಾನ್ ಗೃಹಾನ್ನೃಪತೇಃ ಸುತ ।
ಏವಮುಕ್ತಸ್ತು ಧರ್ಮಾತ್ಮಾ ವಾನರೈಃ ಸವಿಭೀಷಣೈಃ ॥ ೨೧

ಅಬ್ರವೀದ್ರಾಘವಃ ಶ್ರೀಮಾನ್ ಸಸುಗ್ರೀವವಿಭೀಷಣಾನ್ ।
ಪ್ರಿಯಾತ್ ಪ್ರಿಯತರಂ ಲಬ್ಧಂ ಯದಹಂ ಸಸುಹೃಜ್ಜನಃ ॥ ೨೨

ಸರ್ವೈರ್ಭವದ್ಭಿಃ ಸಹಿತಃ ಪ್ರೀತಿಂ ಲಪ್ಸ್ಯೇ ಪುರೀಂ ಗತಃ ।
ಕ್ಷಿಪ್ರಮಾರೋಹ ಸುಗ್ರೀವ ವಿಮಾನಂ ವಾನರೈಃ ಸಹ ॥ ೨೩

ತ್ವಮಧ್ಯಾರೋಹ ಸಾಮಾತ್ಯೋ ರಾಕ್ಷಸೇಂದ್ರ ವಿಭೀಷಣ ।
ತತಸ್ತತ್ ಪುಷ್ಪಕಂ ದಿವ್ಯಂ ಸುಗ್ರೀವಃ ಸಹ ಸೇನಯಾ ॥ ೨೪

ಅಧ್ಯಾರೋಹತ್ತ್ವರನ್ ಶೀಘ್ರಂ ಸಾಮಾತ್ಯಶ್ಚ ವಿಭೀಷಣಃ ।
ತೇಷ್ವಾರೂಢೇಷು ಸರ್ವೇಷು ಕೌಬೇರಂ ಪರಮಾಸನಮ್ ॥ ೨೫

ರಾಘವೇಣಾಭ್ಯನುಜ್ಞಾತಮುತ್ಪಪಾತ ವಿಹಾಯಸಮ್ ।
ಯಯೌ ತೇನ ವಿಮಾನೇನ ಹಂಸಯುಕ್ತೇನ ಭಾಸ್ವತಾ ॥ ೨೬

---

ನಿನ್ನ ಜನನಿಯಾದ ಕೌಸಲ್ಯಾದೇವಿಯನ್ನು ಕಂಡು ಅಭಿವಾದನೆ ಮಾಡಬೇಕೆಂದೂ ನಮಗೆ ಆಸೆಯಾಗಿದೆ. ಅನಂತರ, ರಾಜಪುತ್ರ, ನಾವು ನಮ್ಮ ಮನೆಗಳಿಗೆ ಹೋಗುವೆವು" ಎಂದು ನಿವೇದಿಸಿದರು (೨೦-೨೧). ವಾನರರೂ ವಿಭೀಷಣನೂ ಏಕಕಂಠದಿಂದ ಹೀಗೆನ್ನಲು, ಧರ್ಮಾತ್ಮನಾದ ರಾಘವನು ಸುಗ್ರೀವ ವಿಭೀಷಣರನ್ನು ನೋಡಿ "ಬಹಳ ಸಂತೋಷವಾಯಿತು. ಆನಂದದ ಮೇಲೆ ಆನಂದದ ಪ್ರಸಂಗ ಒದಗಿತು! (೨೨). ಮಿತ್ರರಾದ ನಿಮ್ಮೆಲ್ಲರೊಡನೆ ಅಯೋಧ್ಯೆಗೆ ಹೋದರೆ ನನಗೆ ಪರಮಾನಂದವಾಗುವುದು. ಸುಗ್ರೀವ, ಬೇಗನೆ ವಿಮಾನವನ್ನು ಹತ್ತು. ನಿನ್ನ ಸೈನಿಕರೆಲ್ಲರೂ ಹತ್ತಲಿ. ರಾಕ್ಷಸೇಂದ್ರ-ವಿಭೀಷಣ, ನಿನ್ನ ಅಮಾತ್ಯರೊಡನೆ ನೀನೂ ವಿಮಾನವನ್ನೇರು" ಎಂದು ತಿಳಿಸಿದನು (೨೩-೨೪). ಅನಂತರ ಸುಗ್ರೀವನೂ ಅವನ ಸೈನಿಕರೂ, ವಿಭೀಷಣನೂ ಅವನ ಮಂತ್ರಿಗಳೂ-ಎಲ್ಲರೂ ಕುಬೇರನ ದಿವ್ಯವಾದ ಪುಷ್ಪಕವಿಮಾನವನ್ನು ಹತ್ತಿ ಕುಳಿತರು. ಶ್ರೀರಾಮನು ಅನುಜ್ಞೆಯನ್ನೀಯಲು, ಆ ವಿಮಾನವು ಗಗನವನ್ನಡರಿತು. ದಿವ್ಯವಾದ ಆ ವಿಮಾನವನ್ನು ಹೊರುತ್ತಿರುವವೋ ಎಂಬಂತೆ ಅದರ ಕೆಳಗೆ ಹಂಸದ

ಪ್ರಹೃಷ್ಟಶ್ಚ ಪ್ರತೀತಶ್ಚ ಬಭೌ ರಾಮಃ ಕುಬೇರವತ್ ।
ತೇ ಸರ್ವೇ ವಾನರಾ ಹೃಷ್ಟಾ ರಾಕ್ಷಸಾಶ್ಚ ಮಹಾಬಲಾಃ ॥ ೨೭
ಯಥಾಸುಖಮಸಂಬಾಧಂ ದಿವ್ಯೇ ತಸ್ಮಿನ್ನುಪಾವಿಶನ್ ॥

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚವಿಂಶತ್ಯುತ್ತರಶತತಮಃ ಸರ್ಗಃ

---

## ಷಡ್ವಿಂಶತ್ಯುತ್ತರಶತತಮಃ ಸರ್ಗಃ

### ಪ್ರತ್ಯಾವೃತ್ತಿಪಥವರ್ಣನಮ್

ಅನುಜ್ಞಾತಂ ತು ರಾಮೇಣ ತದ್ವಿಮಾನಮನುತ್ತಮಮ್ ।
ಉತ್ಪಪಾತ ಮಹಾಮೇಘಃ ಶ್ವಸನೇನೋದ್ಧತೋ ಯಥಾ ॥ ೧
ಪಾತಯಿತ್ವಾ ತತಶ್ಚಕ್ಷುಃ ಸರ್ವತೋ ರಘುನಂದನಃ ।
ಅಬ್ರವೀನ್ಮೈಥಿಲೀಂ ಸೀತಾಂ ರಾಮಃ ಶಶಿನಿಭಾನನಾಮ್ ॥ ೨

---

ಪ್ರತಿಮೆಗಳು ಅಳವಡಿಸಲ್ಪಟ್ಟಿದ್ದವು (೨೫-೨೬). ಶ್ರೀರಾಮನು ಸರ್ವರಿಂದಲೂ ಪೂಜಿತನಾಗಿ, ಕುಬೇರನಂತೆ ಹರ್ಷದಿಂದ ಪುಷ್ಪಕವಿಮಾನದಲ್ಲಿ ಮಂಡಿಸಿದನು. ಪುಷ್ಪಕವು ದಿವ್ಯವಿಮಾನವಾದ್ದರಿಂದ ಸಕಲ ವಾನರರೂ ರಾಕ್ಷಸರೂ ಇಕ್ಕಟ್ಟಿಲ್ಲದೆ ವಿರಾಮವಾಗಿ ಸಂತೋಷದಿಂದ ಕುಳಿತರು (೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತೈದನೆಯ ಸರ್ಗ

---

## ಸರ್ಗ ೧೨೬

### ವಿಮಾನದಿಂದ ಕಾಣಿಸುತ್ತಿದ್ದ ವಿವಿಧ ಸ್ಥಳಗಳನ್ನು ಶ್ರೀರಾಮನು ವೈದೇಹಿಗೆ ತೋರಿಸುವುದು. ಅಯೋಧ್ಯಾದರ್ಶನ.

ಶ್ರೀರಾಮನು ಅನುಜ್ಞೆಯನ್ನಿತ್ತೊಡನೆ ಆ ದಿವ್ಯ ವಿಮಾನವು, ಗಾಳಿಯಿಂದೆದ್ದ ಮಹಾಮೇಘದಂತೆ ಗಗನಮಾರ್ಗದಲ್ಲಿ ಹೊರಟಿತು. ರಘುನಂದನನು ವಿಮಾನದಿಂದ ಸುತ್ತಲೂ ನೋಡುತ್ತ, ತನ್ನ ಸಮೀಪದಲ್ಲಿ

ಕೈಲಾಸಶಿಖರಾಕಾರೇ ತ್ರಿಕೂಟಶಿಖರೇ ಸ್ಥಿತಾಮ್ ।
ಲಂಕಾಮೀಕ್ಷಸ್ವ ವೈದೇಹಿ ನಿರ್ಮಿತಾಂ ವಿಶ್ವಕರ್ಮಣಾ ॥ ೩

ಏತದಾಯೋಧನಂ ಪಶ್ಯ ಮಾಂಸಶೋಣಿತಕರ್ದಮಮ್ ।
ಹರೀಣಾಂ ರಾಕ್ಷಸಾನಾಂ ಚ ಸೀತೇ ವಿಶಸನಂ ಮಹತ್ ॥ ೪

ಅತ್ರ ದತ್ತವರಃ ಶೇತೇ ಪ್ರಮಾಥೀ ರಾಕ್ಷಸೇಶ್ವರಃ ।
ತವ ಹೇತೋರ್ವಿಶಾಲಾಕ್ಷಿ ರಾವಣೋ ನಿಹತೋ ಮಯಾ ॥ ೫

ಕುಂಭಕರ್ಣೋಽತ್ರ ನಿಹತಃ ಪ್ರಹಸ್ತಶ್ಚ ನಿಶಾಚರಃ ।
ಧೂಮ್ರಾಕ್ಷಶ್ಚಾತ್ರ ನಿಹತೋ ವಾನರೇಣ ಹನೂಮತಾ ॥ ೬

ವಿದ್ಯುನ್ಮಾಲೀ ಹತಶ್ಚಾತ್ರ ಸುಷೇಣೇನ ಮಹಾತ್ಮನಾ ।
ಲಕ್ಷ್ಮಣೇನೇಂದ್ರಜಿಚ್ಚಾತ್ರ ರಾವಣಿರ್ನಿಹತೋ ರಣೇ ॥ ೭

---

ಕುಳಿತಿದ್ದ ಇಂದುವದನೆಯಾದ ಮೈಥಿಲಿಯನ್ನು ಕುರಿತು ಹೀಗೆ ಹೇಳುತ್ತಿದ್ದನು (೧–೨) : “ವೈದೇಹಿ, ಕೈಲಾಸ ಶಿಖರದಂತೆ ಉನ್ನತವಾದ ತ್ರಿಕೂಟಶಿಖರದಲ್ಲಿರುವ ಈ ಲಂಕಾನಗರವನ್ನೊಮ್ಮೆ ವೀಕ್ಷಿಸು! ವಿಶ್ವಕರ್ಮನು ನಿರ್ಮಿಸಿದ ನಗರವಿದು. ಸೀತೆ, ಮಾಂಸಶೋಣಿತಗಳಿಂದ ಕೊಚ್ಚೆಯಾದ ಈ ರಣಭೂಮಿಯನ್ನು ನೋಡು. ವಾನರರಿಗೂ ರಾಕ್ಷಸರಿಗೂ ಕದನವಾಗಿ ಭೀಕರವಾದ ಕೊಲೆಯೇ ಇಲ್ಲಿ ನಡೆಯಿತು (೩–೪). ಅತ್ತನೋಡು; ಬ್ರಹ್ಮನಿಂದ ವರವನ್ನು ಪಡೆದಿದ್ದ ಕ್ರೂರನಾದ ರಾವಣನು ಅಲ್ಲಿ ಸುಟ್ಟು ಬೂದಿಯಾಗಿ ಮಲಗಿದ್ದಾನೆ! ವಿಶಾಲಾಕ್ಷಿ, ನಿನಗೋಸ್ಕರ ಆ ರಾಕ್ಷಸೇಶ್ವರನನ್ನು ನಾನು ಸಂಹರಿಸಿದ್ದೇನೆ. ನಾನು ಕುಂಭಕರ್ಣನನ್ನು ವಧಿಸಿದ ಸ್ಥಳವಿದು. ಪ್ರಹಸ್ತನನ್ನು ನೀಲನೂ ಧೂಮ್ರಾಕ್ಷನನ್ನು ಹನುಮಂತನೂ ಅಲ್ಲಿ ಕೊಂದಿದ್ದಾರೆ (೫–೬). ಮಹಾತ್ಮನಾದ ಸುಷೇಣನು ಈ ಸ್ಥಳದಲ್ಲಿ ವಿದ್ಯುನ್ಮಾಲಿಯನ್ನು ವಧಿಸಿದ್ದಾನೆ. ರಾಣಪುತ್ರನಾದ ಇಂದ್ರಜಿತುವನ್ನು ಲಕ್ಷ್ಮಣನು ಅಲ್ಲಿ ಸಂಹರಿಸಿದ್ದಾನೆ. ವಿಕಟನೆಂಬ ರಾಕ್ಷಸ

ಅಂಗದೇನಾತ್ರ ನಿಹತೋ ವಿಕಟೋ ನಾಮ ರಾಕ್ಷಸಃ ।
ವಿರೂಪಾಕ್ಷಶ್ಚ ದುರ್ಧರ್ಷೋ ಮಹಾಪಾರ್ಶ್ವಮಹೋದರೌ ॥ ೮
ಅಕಂಪನಶ್ಚ ನಿಹತೋ ಬಲಿನೋಽನ್ಯೇ ಚ ರಾಕ್ಷಸಾಃ ।
ಅತ್ರ ಮಂದೋದರೀ ನಾಮ ಭಾರ್ಯಾ ತಂ ಪರ್ಯದೇವಯತ್ ॥
ಸಪತ್ನೀನಾಂ ಸಹಸ್ರೇಣ ಸಾಸ್ರೇಣ ಪರಿವಾರಿತಾ ।
ಏತತ್ತು ದೃಶ್ಯತೇ ತೀರ್ಥಂ ಸಮುದ್ರಸ್ಯ ವರಾನನೇ ॥ ೧೦
ಯತ್ರ ಸಾಗರಮುತ್ತೀರ್ಯ ತಾಂ ರಾತ್ರಿಮುಷಿತಾ ವಯಮ್ ।
ಏಷ ಸೇತುರ್ಮಯಾ ಬದ್ಧಃ ಸಾಗರೇ ಲವಣಾರ್ಣವೇ ॥ ೧೧
ತವ ಹೇತೋರ್ವಿಶಾಲಾಕ್ಷಿ ನಲಸೇತುಃ ಸುದುಷ್ಕರಃ ।
ಪಶ್ಯ ಸಾಗರಮಕ್ಷೋಭ್ಯಂ ವೈದೇಹಿ ವರುಣಾಲಯಮ್ ॥ ೧೨
ಅಪಾರಮಭಿಗರ್ಜಂತಂ ಶಂಖಶುಕ್ತಿನಿಷೇವಿತಮ್ ।
ಹಿರಣ್ಯನಾಭಂ ಶೈಲೇಂದ್ರಂ ಕಾಂಚನಂ ಪಶ್ಯ ಮೈಥಿಲಿ ॥ ೧೩

---

ನನ್ನ* ಅಂಗದನು ಆ ಪ್ರದೇಶದಲ್ಲಿ ಕೊಂದಿದ್ದಾನೆ. ಅಲ್ಲದೆ ವಿರೂಪಾಕ್ಷ, ಮಹಾಪಾರ್ಶ್ವ, ಮಹೋದರ, ಅಕಂಪನ-ಮೊದಲಾದ ಬಲಾಢ್ಯ ರಾಕ್ಷಸರೆಲ್ಲರೂ ಇಲ್ಲಿ ಅಸುವನ್ನು ನೀಗಿದರು (೭-೮). ರಾವಣನ ಪತ್ನಿಯಾದ ಮಂಡೋದರಿಯೂ ಅವಳ ಸಾವಿರಾರು ಸವತಿಯರೂ ಬಂದು ಈ ಸ್ಥಳದಲ್ಲಿ ಆಕ್ರಂದಿಸಿ ಕಣ್ಣೀರು ಹರಿಸಿದರು. ಇರಲಿ ; ವರಾನನೆ, ಈ ಕಡೆ ವೀಕ್ಷಿಸು. ನಾವು ಸಮುದ್ರವನ್ನು ದಾಟಿಬಂದು ಮೊದಲನೆಯ ರಾತ್ರಿ ಇಳಿದುಕೊಂಡ ಸ್ಥಳವಿದು. ವಿಶಾಲಾಕ್ಷಿ, ಮಹಾಸಾಗರದಲ್ಲಿ ನಾನು ನಿರ್ಮಿಸಿದ ಸೇತುವೆ ಇದು (೯-೧೧). ನಳನು ನಿನಗೋಸ್ಕರ ಬಹಳ ಶ್ರಮವನ್ನು ವಹಿಸಿ ಇದನ್ನು ಕಟ್ಟಿದ್ದಾನೆ. ವೈದೇಹಿ, ಅಕ್ಷೋಭ್ಯವಾದ ಈ ಮಹಾಸಮುದ್ರವನ್ನು ನೋಡು. ಅಪಾರವಾದ ಈ ಕಡಲು ಹೇಗೆ ಮೊರೆಯುತ್ತಿದೆ! ಶಂಖಶುಕ್ತಿಗಳಿಂದ ತುಂಬಿದೆ. ಮೈಥಿಲಿ, ಈ ಕಾಂಚನಶೈಲವನ್ನು

---

* ವಿದ್ಯುನ್ಮಾಲಿ ಮತ್ತು ವಿಕಟ ಎಂಬವರನ್ನು ಕೊಂದ ವೃತ್ತಾಂತ ಹಿಂದೆ ಬಂದಿಲ್ಲ. ಇಲ್ಲಿ ಅವರ ಹೆಸರನ್ನು ಅನುವಾದಿಸಿರುವುದರಿಂದ ಅವರೂ ಹತರಾದರೆಂದು ತಿಳಿಯಬೇಕು.

ವಿಶ್ರಮಾರ್ಥಂ ಹನುಮತೋ ಭಿತ್ತ್ವಾ ಸಾಗರಮುತ್ಥಿತಮ್ ।
ಏತತ್ ಕುಕ್ಷೌ ಸಮುದ್ರಸ್ಯ ಸ್ಕಂಧಾವಾರನಿವೇಶನಮ್ ॥ ೧೪

ಏತತ್ತು ದೃಶ್ಯತೇ ತೀರ್ಥಂ ಸಾಗರಸ್ಯ ಮಹಾತ್ಮನಃ ।
ಸೇತುಬಂಧ ಇತಿ ಖ್ಯಾತಂ ತ್ರೈಲೋಕ್ಯೇನಾಭಿಪೂಜಿತಮ್ ॥ ೧೫

ಏತತ್ ಪವಿತ್ರಂ ಪರಮಂ ಮಹಾಪಾತಕನಾಶನಮ್ ।
ಅತ್ರ ಪೂರ್ವಂ ಮಹಾದೇವಃ ಪ್ರಸಾದಮಕರೋತ್ ಪ್ರಭುಃ ॥ ೧೬

ಅತ್ರ ರಾಕ್ಷಸರಾಜೋಽಯಮಾಜಗಾಮ ವಿಭೀಷಣಃ ।
ಏಷ ಸಾ ದೃಶ್ಯತೇ ಸೀತೇ ಕಿಷ್ಕಿಂಧಾ ಚಿತ್ರಕಾನನಾ ॥ ೧೭

ಸುಗ್ರೀವಸ್ಯ ಪುರೀ ರಮ್ಯಾ ಯತ್ರ ವಾಲೀ ಮಯಾ ಹತಃ ।
ಅಥ ದೃಷ್ಟ್ವಾ ಪುರೀಂ ಸೀತಾ ಕಿಷ್ಕಿಂಧಾಂ ವಾಲಿಪಾಲಿತಾಮ್ ॥ ೧೮

---

ಆಲೋಕಿಸು. ಇದೇ ಮೈನಾಕಪರ್ವತ (೧೨-೧೩). ಮೊದಲನೆಯ ಸಲ ಹನುಮಂತನು ಸಮುದ್ರವನ್ನು ಲಂಘಿಸಿ ಬರುವಾಗ, ಆತನಿಗೆ ವಿಶ್ರಾಂತಿಯನ್ನು ಕಲ್ಪಿಸುವುದಕ್ಕಾಗಿ ಈ ಪರ್ವತವು ಸಮುದ್ರದಿಂದ ಮೇಲೆದ್ದು ಬಂದಿತು. ಇತ್ತ ನೋಡು ; ಸಮುದ್ರದ ಈ ಪಾರ್ಶ್ವದಲ್ಲಿ ಮೊದಲು ನಾವು ಸೇನಾಶಿಬಿರವನ್ನು ಸ್ಥಾಪಿಸಿದ್ದೆವು (೧೪). ದೇವಿ, ಮಹಾತ್ಮನಾದ ಸಮುದ್ರರಾಜನ ಉತ್ತರತೀರದಲ್ಲಿರುವ ಪುಣ್ಯತೀರ್ಥವಿದು. ಸೇತುನಿರ್ಮಾಣವನ್ನು ಇಲ್ಲಿಂದ ಆರಂಭಿಸಿದ್ದರಿಂದ ಸೇತುಬಂಧವೆಂದು ಇದು ವಿಖ್ಯಾತವಾಗಿದೆ. ಮೂರು ಲೋಕದವರಿಗೂ ಇದು ಪೂಜ್ಯವಾದ ಕ್ಷೇತ್ರ (೧೫). ಇದು ಮಹಾಪಾತಕಗಳನ್ನು ಹೋಗಲಾಡಿಸುವ ಅತ್ಯಂತ ಪವಿತ್ರವಾದ ಸ್ಥಳ. ಹಿಂದೆ ಇಲ್ಲಿಯೇ ನನಗೆ ಮಹಾಮಹಿಮನಾದ ಮಹಾದೇವನು* ಪ್ರಸನ್ನನಾದನು. ರಾಕ್ಷಸರಾಜನಾದ ಈ ವಿಭೀಷಣನು ಇಲ್ಲಿಯೇ ಬಂದು ನನ್ನನ್ನು ಆಶ್ರಯಿಸಿದನು. ಸೀತೆ, ಎದುರಿಗೆ ನೋಡು ; ಅದೇ ಕಿಷ್ಕಿಂಧೆ. ಬಣ್ಣಬಣ್ಣದ ಹೂಗಳಿಂದ ತುಂಬಿದ ವನಗಳಿಂದ ಪರಿವೃತವಾಗಿದೆ (೧೬-೧೭). ಅದು ಸುಗ್ರೀವನ ರಾಜಧಾನಿ. ವಾಲಿಯನ್ನು ನಾನು ಸಂಹರಿಸಿದ್ದು ಇಲ್ಲಿ" ಎಂದನು.

---

* ಅನುಬಂಧವನ್ನು ನೋಡಿ.

ಅಬ್ರವೀತ್ ಪ್ರಶ್ರಿತಂ ವಾಕ್ಯಂ ರಾಮಂ ಪ್ರಣಯಸಾಧ್ವಸಾ ।
ಸುಗ್ರೀವಪ್ರಿಯಭಾರ್ಯಾಭಿಸ್ತಾರಾಪ್ರಮುಖತೋ ನೃಪ ॥ ೧೯

ಅನ್ಯೇಷಾಂ ವಾನರೇಂದ್ರಾಣಾಂ ಸ್ತ್ರೀಭಿಃ ಪರಿವೃತಾ ಹ್ಯಹಮ್ ।
ಗಂತುಮಿಚ್ಛೇ ಸಹಾಯೋಧ್ಯಾಂ ರಾಜಧಾನೀಂ ತ್ವಯಾನಘ ॥ ೨೦

ಏವಮುಕ್ತೋಽಥ ವೈದೇಹ್ಯಾ ರಾಘವಃ ಪ್ರತ್ಯುವಾಚ ತಾಮ್ ।
ಏವಮಸ್ತ್ವಿತಿ ಕಿಷ್ಕಿಂಧಾಂ ಪ್ರಾಪ್ಯ ಸಂಸ್ಥಾಪ್ಯ ರಾಘವಃ ॥ ೨೧

ವಿಮಾನಂ ಪ್ರೇಕ್ಷ್ಯ ಸುಗ್ರೀವಂ ವಾಕ್ಯಮೇತದುವಾಚ ಹ ।
ಬ್ರೂಹಿ ವಾನರಶಾರ್ದೂಲ ಸರ್ವಾನ್ ವಾನರಪುಂಗವಾನ್ ॥ ೨೨

ಸ್ವದಾರಸಹಿತಾಃ ಸರ್ವೇ ಹ್ಯಯೋಧ್ಯಾಂ ಯಾಂತು ಸೀತಯಾ ।
ತಥಾ ತ್ವಮಪಿ ಸರ್ವಾಭಿಃ ಸ್ತ್ರೀಭಿಃ ಸಹ ಮಹಾಬಲ ॥ ೨೩

ಅಭಿತ್ವರಸ್ವ ಸುಗ್ರೀವ ಗಚ್ಛಾಮಃ ಪ್ಲವಗೇಶ್ವರ ।
ಏವಮುಕ್ತಸ್ತು ಸುಗ್ರೀವೋ ರಾಮೇಣಾಮಿತತೇಜಸಾ ॥ ೨೪

---

ಜಾನಕಿಯು ಕಿಷ್ಕಿಂಧಾನಗರವನ್ನು ನೋಡಿದೊಡನೆ, ಪ್ರಣಯದಿಂದ ಸಂಕೋಚಪಡುತ್ತಲೇ ಮೆಲ್ಲನೆಯಿಂದ ಶ್ರೀರಾಮನನ್ನು ಕುರಿತು "ಆರ್ಯಪುತ್ರ, ಈ ವಾನರೇಂದ್ರರ ಪತ್ನಿಯರೂ ನಮ್ಮೊಡನೆ ಬರಬಹುದಲ್ಲವೆ? ಆ ಸ್ತ್ರೀಯರೊಂದಿಗೆ ನಮ್ಮ ರಾಜಧಾನಿಯಾದ ಅಯೋಧ್ಯೆಗೆ ಹೋಗಬೇಕೆಂದು ನನಗೆ ಆಸೆಯಾಗಿದೆ!" ಎಂದು ಹೇಳಿದಳು (೧೮-೨೦). "ಆಗಬಹುದು" ಎಂದು ರಾಘವನು ನುಡಿದು, ಕಿಷ್ಕಿಂಧೆಯ ಸಮೀಪವನ್ನು ಸೇರಿದೊಡನೆ ವಿಮಾನವನ್ನು ನಿಲ್ಲಿಸಿ, ಸುಗ್ರೀವನನ್ನು ನೋಡಿ "ವಾನರೇಂದ್ರ, ಸಕಲ ಕಪಿವೀರರಿಗೂ ಅವರ ಪತ್ನಿಯರನ್ನು ಕರೆದುಕೊಂಡುಬರುವಂತೆ ತಿಳಿಸು. ಆ ಸ್ತ್ರೀಯರೆಲ್ಲರೂ ಸೀತೆಯೊಡನೆ ಅಯೋಧ್ಯೆಗೆ ಬರಲಿ. ನೀನೂ ಸಹ ನಿನ್ನ ಅಂತಃಪುರ ಸ್ತ್ರೀಯರನ್ನು ಬರಮಾಡು (೨೧-೨೩). ಎಲ್ಲರೂ ಬೇಗನೆ ಬರಲಿ. ಸುಗ್ರೀವ, ನಾವೆಲ್ಲರೂ ಒಟ್ಟಿಗೆ ಪ್ರಯಾಣಮಾಡೋಣ" ಎಂದು ತಿಳಿಸಿದನು. ಸುಗ್ರೀವನು ವಾನರರೆಲ್ಲರಿಗೂ ತಮ್ಮ ಮಡದಿಯರನ್ನು ಕರೆತರಬೇಕೆಂದು ಆದೇಶವನ್ನಿತ್ತು,

ವಾನರಾಧಿಪತಿಃ ಶ್ರೀಮಾಂಸ್ತೈಶ್ಚ ಸರ್ವೈಃ ಸಮಾವೃತಃ ।
ಪ್ರವಿಶ್ಯಾಂತಃಪುರಂ ಶೀಘ್ರಂ ತಾರಾಮುದ್ವೀಕ್ಷ್ಯ ಸೋಽಬ್ರವೀತ್ ॥

ಪ್ರಿಯೇ ತ್ವಂ ಸಹ ನಾರೀಭಿರ್ವಾನರಾಣಾಂ ಮಹಾತ್ಮನಾಮ್ ।
ರಾಘವೇಣಾಭ್ಯನುಜ್ಞಾತಾ ಮೈಥಿಲೀಪ್ರಿಯಕಾಮ್ಯಯಾ ॥ ೨೬

ತ್ವರ ತ್ವಮಭಿಗಚ್ಛಾಮೋ ಗೃಹ್ಯ ವಾನರಯೋಷಿತಃ ।
ಅಯೋಧ್ಯಾಂ ದರ್ಶಯಿಷ್ಯಾಮಃ ಸರ್ವಾ ದಶರಥಸ್ತ್ರಿಯಃ ॥ ೨೭

ಸುಗ್ರೀವಸ್ಯ ವಚಃ ಶ್ರುತ್ವಾ ತಾರಾ ಸರ್ವಾಂಗಶೋಭನಾ ।
ಆಹೂಯ ಚಾಬ್ರವೀತ್ ಸರ್ವಾ ವಾನರಾಣಾಂ ತು ಯೋಷಿತಃ ॥

ಸುಗ್ರೀವೇಣಾಭ್ಯನುಜ್ಞಾತಾ ಗಂತುಂ ಸರ್ವೈಶ್ಚ ವಾನರೈಃ ।
ಮಮ ಚಾಪಿ ಪ್ರಿಯಂ ಕಾರ್ಯಮಯೋಧ್ಯಾದರ್ಶನೇನ ಚ ॥ ೨೯

ಪ್ರವೇಶಂ ಚಾಪಿ ರಾಮಸ್ಯ ಪೌರಜಾನಪದೈಃ ಸಹ ।
ವಿಭೂತಿಂ ಚೈವ ಸರ್ವಾಸಾಂ ಸ್ತ್ರೀಣಾಂ ದಶರಥಸ್ಯ ಚ ॥ ೩೦

---

ಅವರೊಡನೆ ತ್ವರೆಯಿಂದ ಕಿಷ್ಕಿಂಧೆಗೆ ಹೋದನು (೨೪). ಆತನು ತನ್ನ ಅಂತಃಪುರವನ್ನು ಪ್ರವೇಶಿಸಿ ತಾರೆಯನ್ನು ಕಂಡು "ಪ್ರಿಯೆ, ಈಗ ನಾವು ಅಯೋಧ್ಯೆಗೆ ಹೋಗಬೇಕು. ಸಮಸ್ತ ವಾನರರ ಮಡದಿಯರನ್ನೂ ಕರೆದುಕೊಂಡು ನೀನು ಬರಬೇಕೆಂದು ಶ್ರೀರಾಮನ ಆಜ್ಞೆಯಾಗಿದೆ. ಸ್ತ್ರೀಯರು ಬರಬೇಕೆಂದು ಮೈಥಿಲಿಯ ಬಯಕೆ. ನೀವು ಬಂದರೆ ಅವಳು ಸಂತೋಷಪಡುವಳು (೨೫–೨೬). ಆದ್ದರಿಂದ, ತಾರೆ, ಬೇಗನೆ ಹೊರಡು. ವಾನರಸ್ತ್ರೀಯರೆಲ್ಲರನ್ನೂ ಕರೆದುಕೊಂಡುಹೋಗೋಣ. ಅಯೋಧ್ಯಾ ನಗರವನ್ನೂ ದಶರಥಮಹಾರಾಜನ ಪತ್ನಿಯರನ್ನೂ ನೋಡಿಬರೋಣ!" ಎಂದನು. ತಾರೆಯು ಸರ್ವಾಲಂಕಾರಭೂಷಿತಳಾಗಿ ಸಕಲ ವಾನರ ಸ್ತ್ರೀಯರನ್ನೂ ಕರೆಸಿ "ಎಲೌ ಸ್ತ್ರೀಯರೆ, ನೀವೆಲ್ಲರೂ ನಿಮ್ಮ ನಿಮ್ಮ ಪತಿಗಳೊಂದಿಗೆ ಅಯೋಧ್ಯಾನಗರಕ್ಕೆ ಹೊರಡಬೇಕೆಂದು ಸುಗ್ರೀವಮಹಾರಾಜನು ತಿಳಿಸಿದ್ದಾನೆ. ನೀವು ಬರುವುದು ನನಗೆ ಸಂತೋಷಕರವಾದುದು. ಅಯೋಧ್ಯೆಯನ್ನು ನೋಡಿ ಆನಂದಿಸೋಣ (೨೭–೨೯). ಶ್ರೀರಾಮನು ಪ್ರಜೆಗಳೊಡನೆ ಅಯೋಧ್ಯೆಯನ್ನು ಪ್ರವೇಶಿಸುವ ಮಹೋತ್ಸವವನ್ನೂ

ತಾರಯಾ ಚಾಭ್ಯನುಜ್ಞಾತಾಃ ಸರ್ವಾ ವಾನರಯೋಷಿತಃ ।
ನೇಪಥ್ಯಂ ವಿಧಿಪೂರ್ವೇಣ ಕೃತ್ವಾ ಚಾಪಿ ಪ್ರದಕ್ಷಿಣಮ್ ॥ ೩೧

ಅಧ್ಯಾರೋಹನ್ ವಿಮಾನಂ ತತ್ ಸೀತಾದರ್ಶನಕಾಂಕ್ಷಯಾ ।
ತಾಭಿಃ ಸಹೋತ್ಥಿತಂ ಶೀಘ್ರಂ ವಿಮಾನಂ ಪ್ರೇಕ್ಷ್ಯ ರಾಘವಃ ॥ ೩೨

ಋಶ್ಯಮೂಕಸಮೀಪೇ ತು ವೈದೇಹೀಂ ಪುನರಬ್ರವೀತ್ ।
ದೃಶ್ಯತೇಽಸೌ ಮಹಾನ್ ಸೀತೇ ಸವಿದ್ಯುದಿವ ತೋಯದಃ ॥ ೩೩

ಋಶ್ಯಮೂಕೋ ಗಿರಿಶ್ರೇಷ್ಠಃ ಕಾಂಚನೈರ್ಧಾತುಭಿರ್ವೃತಃ ।
ಅತ್ರಾಹಂ ವಾನರೇಂದ್ರೇಣ ಸುಗ್ರೀವೇಣ ಸಮಾಗತಃ ॥ ೩೪

ಸಮಯಶ್ಚ ಕೃತಃ ಸೀತೇ ವಧಾರ್ಥಂ ವಾಲಿನೋ ಮಯಾ ।
ಏಷಾ ಸಾ ದೃಶ್ಯತೇ ಪಂಪಾ ನಲಿನೀ ಚಿತ್ರಕಾನನಾ ॥ ೩೫

---

ದಶರಥರಾಜನ ಸ್ತ್ರೀಯರ ಭಾಗ್ಯವನ್ನೂ ನೋಡಿಬರೋಣ!" ಎಂದು ಹೇಳಿದಳು. ತಾರೆಯು ಅನುಜ್ಞೆಯನ್ನೀಯಲು ಆ ಸ್ತ್ರೀಯರು ಅಲಂಕರಿಸಿಕೊಂಡು ಬಂದರು. ಅವರೆಲ್ಲರೂ ಪುಷ್ಪಕವಿಮಾನದ ಬಳಿಗೆ ಹೋಗಿ, ಪ್ರದಕ್ಷಿಣಾಕಾರವಾಗಿ ಸುತ್ತಿಬಂದು ವಿಮಾನವನ್ನೇರಿದರು (೩೦-೩೧). ಆ ಸ್ತ್ರೀಯರಿಗೆ ಸೀತೆಯನ್ನು ನೋಡಬೇಕೆಂಬುದು ಮುಖ್ಯವಾದ ಬಯಕೆಯಾಗಿತ್ತು ! ಎಲ್ಲರೂ ವಿಮಾನವನ್ನೇರಲು, ಅದು ಮುಂದಕ್ಕೆ ಹೊರಟಿತು. ಪುಷ್ಪಕವಿಮಾನವು ಋಷ್ಯಮೂಕದ ಸಮೀಪಕ್ಕೆ ಬರಲು ಶ್ರೀರಾಮನು ವೈದೇಹಿಯನ್ನು ನೋಡಿ ಹೀಗೆಂದನು : " ಸೀತೆ, ಅಲ್ಲಿ ನೋಡು ; ಅದೇ ಋಷ್ಯಮೂಕಪರ್ವತ. ಸುವರ್ಣಮಯಧಾತುಗಳಿಂದ ಒಪ್ಪುವ ಆ ಶೈಲವು, ಮಿಂಚಿನಿಂದ ಕೂಡಿದ ಮೇಘದಂತೆ ಕಾಣುವುದಲ್ಲವೆ? (೩೨-೩೩). ನಾನು ವಾನರೇಂದ್ರನಾದ ಸುಗ್ರೀವನನ್ನು ಮೊದಲು ಕಂಡದ್ದು ಈ ಸ್ಥಳದಲ್ಲಿ. ವಾಲಿಯನ್ನು ವಧಿಸುವೆನೆಂದು ಪ್ರತಿಜ್ಞೆಮಾಡಿದ್ದು ಇಲ್ಲಿಯೇ. ಅದೋ! ಪಂಪಾಸರೋವರವು ಕಾಣಿಸುತ್ತಿದೆ. ಈ ಸರೋವರವು ತಾವರೆಗಳಿಂದ ತುಂಬಿದೆ! ಬಣ್ಣಬಣ್ಣದ ಹೂಗಳಿಂದ ಸುತ್ತಲಿರುವ

ತ್ವಯಾ ವಿಹೀನೋ ಯತ್ರಾಹಂ ವಿಲಲಾಪ ಸುದುಃಖಿತಃ ।
ಅಸ್ಯಾಸ್ತೀರೇ ಮಯಾ ದೃಷ್ಟಾ ಶಬರೀ ಧರ್ಮಚಾರಿಣೀ ॥ ೩೬

ಅತ್ರ ಯೋಜನಬಾಹುಶ್ಚ ಕಬಂಧೋ ನಿಹತೋ ಮಯಾ ।
ದೃಶ್ಯತೇ ಚ ಜನಸ್ಥಾನೇ ಸೀತೇ ಶ್ರೀಮಾನ್ ವನಸ್ಪತಿಃ ॥ ೩೭

ಯತ್ರ ಯುದ್ಧಂ ಮಹದ್ವೃತ್ತಂ ತವ ಹೇತೋರ್ವಿಲಾಸಿನಿ ।
ರಾವಣಸ್ಯ ನೃಶಂಸಸ್ಯ ಜಟಾಯೋಶ್ಚ ಮಹಾತ್ಮನಃ ॥ ೩೮

ಖರಶ್ಚ ನಿಹತೋ ಯತ್ರ ದೂಷಣಶ್ಚ ನಿಪಾತಿತಃ ।
ತ್ರಿಶಿರಾಶ್ಚ ಮಹಾವೀರ್ಯೋ ಮಯಾ ಬಾಣೈರಜಿಹ್ಮಗೈಃ ॥ ೩೯

ಏತತ್ತದಾಶ್ರಮಪದಮಸ್ಮಾಕಂ ವರವರ್ಣಿನಿ ।
ಪರ್ಣಶಾಲಾ ತಥಾ ಚಿತ್ರಾ ದೃಶ್ಯತೇ ಶುಭದರ್ಶನಾ ॥ ೪೦

ಯತ್ರ ತ್ವಂ ರಾಕ್ಷಸೇಂದ್ರೇಣ ರಾವಣೇನ ಹೃತಾ ಬಲಾತ್ ।
ಏಷಾ ಗೋದಾವರೀ ರಮ್ಯಾ ಪ್ರಸನ್ನಸಲಿಲಾ ಶಿವಾ ॥ ೪೧

---

ಅಡವಿಯು ಚಿತ್ರವರ್ಣವಾಗಿದೆ (೩೪-೩೫). ಜಾನಕಿ, ಈ ಪಂಪಾತೀರದಲ್ಲಿ ನಿನ್ನ ವಿರಹತಾಪದಿಂದ ಎಷ್ಟೆಷ್ಟು ಅತ್ತೆನೋ! ಏನೇನು ಹಲುಬಿದೆನೋ! ಶಬರಿಯೆಂಬ ಧರ್ಮಚಾರಿಣಿಯನ್ನು ನಾನು ಇಲ್ಲಿ ಸಂದರ್ಶಿಸಿದ್ದೆನು. ಇತ್ತ ನೋಡು. ಕಬಂಧನೆಂಬ ಯೋಜನಬಾಹುವಾದ ರಾಕ್ಷಸನನ್ನು ಈ ಸ್ಥಳದಲ್ಲಿ ಸಂಹರಿಸಿದೆನು. ಸೀತೆ, ಇದು ಜನಸ್ಥಾನ! ಇಲ್ಲೊಂದು ಮಹಾವೃಕ್ಷವು ಕಾಣಿಸುವುದಲ್ಲವೆ? (೩೬-೩೭). ಕಾಂತೆ, ಘಾತುಕನಾದ ರಾವಣನಿಗೂ ಮಹಾತ್ಮನಾದ ಜಟಾಯುವಿಗೂ ನಿನಗೋಸ್ಕರವಾಗಿ ಮಹಾಯುದ್ಧವೇ ಇಲ್ಲಿ ನಡೆಯಿತು. ಖರ, ದೂಷಣ, ತ್ರಿಶಿರ-ಮೊದಲಾದ ರಾಕ್ಷಸರನ್ನು ಇಲ್ಲಿ ನಾನು ನಿಶಿತಶರಗಳಿಂದ ಕೊಂದಿರುವೆನು (೩೮-೩೯). ಸುಂದರಿ, ಅದೋ ನಮ್ಮ ಆಶ್ರಮ, ನಮ್ಮ ಪರ್ಣಶಾಲೆ! ಈಗಲೂ ಅದು ಎಷ್ಟು ಸುಂದರವಾಗಿ ಕಂಗೊಳಿಸುತ್ತಿದೆ! ಸೀತೆ, ಇಲ್ಲಿಯೇ ನಿನ್ನನ್ನು ರಾವಣನು ಬಲಾತ್ಕಾರವಾಗಿ ಅಪಹರಿಸಿದನು! ಆಹಾ! ರಮಣೀಯವಾದ ಗೋದಾವರೀನದಿ ಗೋಚರಿಸುತ್ತಿದೆ. ಪವಿತ್ರವಾದ ಇದರ ನೀರು

ಅಗಸ್ತ್ಯಸ್ಯಾಶ್ರಮೋ ಹ್ಯೇಷ ದೃಶ್ಯತೇ ಪಶ್ಯ ಮೈಥಿಲಿ ।
ದೀಪ್ತಶ್ಚೈವಾಶ್ರಮೋ ಹ್ಯೇಷ ಸುತೀಕ್ಷ್ಣಸ್ಯ ಮಹಾತ್ಮನಃ ॥ ೪೨

ವೈದೇಹಿ ದೃಶ್ಯತೇ ಚಾತ್ರ ಶರಭಂಗಾಶ್ರಮೋ ಮಹಾನ್ ।
ಉಪಯಾತಃ ಸಹಸ್ರಾಕ್ಷೋ ಯತ್ರ ಶಕ್ರಃ ಪುರಂದರಃ ॥ ೪೩

ಅಸ್ಮಿನ್ ದೇಶೇ ಮಹಾಕಾಯೋ ವಿರಾಧೋ ನಿಹತೋ ಮಯಾ ।
ಏತೇ ಹಿ ತಾಪಸಾವಾಸಾ ದೃಶ್ಯಂತೇ ತನುಮಧ್ಯಮೇ ॥ ೪೪

ಅತ್ರಿಃ ಕುಲಪತಿರ್ಯತ್ರ ಸೂರ್ಯವೈಶ್ವಾನರಪ್ರಭಃ ।
ಅತ್ರ ಸೀತೇ ತ್ವಯಾ ದೃಷ್ಟಾ ತಾಪಸೀ ಧರ್ಮಚಾರಿಣೀ ॥ ೪೫

ಅಸೌ ಸುತನು ಶೈಲೇಂದ್ರಶ್ಚಿತ್ರಕೂಟಃ ಪ್ರಕಾಶತೇ ।
ಯತ್ರ ಮಾಂ ಕೈಕಯೀಪುತ್ರಃ ಪ್ರಸಾದಯಿತುಮಾಗತಃ ॥ ೪೬

ಏಷಾ ಸಾ ಯಮುನಾ ದೂರಾದ್ದೃಶ್ಯತೇ ಚಿತ್ರಕಾನನಾ ।
ಭರದ್ವಾಜಾಶ್ರಮೋ ಯತ್ರ ಶ್ರೀಮಾನೇಷ ಪ್ರಕಾಶತೇ ॥ ೪೭

---

ಎಷ್ಟು ತಿಳಿಯಾಗಿದೆ! (೪೦-೪೧). ಮೈಥಿಲಿ, ಅಲ್ಲಿ ಕಾಣಿಸುತ್ತಿರುವುದು ಅಗಸ್ತ್ಯಮುನಿಗಳ ಆಶ್ರಮ. ಅದೋ, ಅಲ್ಲಿ ಶೋಭಿಸುತ್ತಿರುವುದು ಮಹಾತ್ಮರಾದ ಸುತೀಕ್ಷ್ಣಮುನಿಗಳ ಆಶ್ರಮ. ವೈದೇಹಿ, ಅತ್ತ ನೋಡು; ಶರಭಂಗಮುನಿಗಳ ಪವಿತ್ರವಾದ ಆಶ್ರಮವು ಗೋಚರಿಸುತ್ತಿದೆ. ಸಹಸ್ರಾಕ್ಷನಾದ ದೇವೇಂದ್ರನು ಬಂದುದು ಇಲ್ಲಿಯೇ ಅಲ್ಲವೆ? (೪೨-೪೩). ಬೃಹತ್ಕಾಯನಾದ ವಿರಾಧನನ್ನು ಸಂಹರಿಸಿದ ಪ್ರದೇಶ ಅದು. ಕೃಶಾಂಗಿ, ಆ ದಿಕ್ಕಿನಲ್ಲಿ ನೋಡು; ತಾಪಸರು ವಾಸವಾಗಿರುವ ಗುಡಿಸಲುಗಳು ಕಾಣಿಸುತ್ತಿವೆ. ಕುಲಪತಿಗಳಾದ ಅತ್ರಿಮಹರ್ಷಿಗಳು ಅಲ್ಲಿದ್ದಾರೆ. ಸೂರ್ಯನೋ ಅಗ್ನಿಯೋ ಎಂಬಂತೆ ಎಷ್ಟು ತೇಜಸ್ವಿಗಳು ಅವರು! ಸೀತೆ, ಅವರ ಧರ್ಮಪತ್ನಿಯಾದ ವೃದ್ಧತಾಪಸಿಯನ್ನು ನೀನು ಸಂದರ್ಶಿಸಿದ ಪ್ರಸಂಗ ನೆನಪಿದೆಯೆ? (೪೪-೪೫). ಆಹಾ! ಚಿತ್ರಕೂಟಗಿರಿಯು ಸ್ಪಷ್ಟವಾಗಿ ಕಾಣುತ್ತಿದೆ. ಸುಂದರಿ, ಭರತನು ನನ್ನನ್ನು ಸಮಾಧಾನಪಡಿಸಿ ಕರೆದೊಯ್ಯಲು ಇಲ್ಲಿಯೇ ಬಂದಿದ್ದನು! ಅದು ಭರದ್ವಾಜಾಶ್ರಮ. ಎಷ್ಟು

ಏಷಾ ತ್ರಿಪಥಗಾ ಗಂಗಾ ದೃಶ್ಯತೇ ವರವರ್ಣಿನಿ ।
ನಾನಾದ್ವಿಜಗಣಾಕೀರ್ಣಾ ಸಂಪ್ರಪುಷ್ಪಿತಕಾನನಾ ॥ ೪೮

ಶೃಂಗಿವೇರಪುರಂ ಚೈತದ್ಗುಹೋ ಯತ್ರ ಸಮಾಗತಃ ।
ಏಷಾ ಸಾ ದೃಶ್ಯತೇ ಸೀತೇ ಸರಯೂರ್ಯೂಪಮಾಲಿನೀ ॥ ೪೯

ನಾನಾತರುಶತಾಕೀರ್ಣಾ ಸಂಪ್ರಪುಷ್ಪಿತಕಾನನಾ ।
ಏಷಾ ಸಾ ದೃಶ್ಯತೇಽಯೋಧ್ಯಾ ರಾಜಧಾನೀ ಪಿತುರ್ಮಮ ॥ ೫೦

ಅಯೋಧ್ಯಾಂ ಕುರು ವೈದೇಹಿ ಪ್ರಣಾಮಂ ಪುನರಾಗತಾ ।
ತತಸ್ತೇ ವಾನರಾಃ ಸರ್ವೇ ರಾಕ್ಷಸಶ್ಚ ವಿಭೀಷಣಃ ॥ ೫೧

ಉತ್ಪತ್ಯೋತ್ಪತ್ಯ ದದೃಶುಸ್ತಾಂ ಪುರೀಂ ಶುಭದರ್ಶನಾಮ್ ॥

ತತಸ್ತು ತಾಂ ಪಾಂಡರಹರ್ಮ್ಯಮಾಲಿನೀಂ
ವಿಶಾಲಕಕ್ಷ್ಯಾಂ ಗಜವಾಜಿಸಂಕುಲಾಮ್ ।

---

ತಪೋವೈಭವದಿಂದ ಬೆಳಗುತ್ತಿದೆ! (೪೬-೪೭). ವರವರ್ಣಿನಿ, ಹೀಗೆ ನೋಡು ; ತ್ರಿಪಥಗಾಮಿನಿಯಾದ ಭಾಗೀರಥಿಯು ಕಾಣಿಸುತ್ತಿರುವಳು ! ಸುತ್ತಲೂ ಅರಳಿದ ವನಗಳು ! ಎಷ್ಟು ಬಗೆಯ ಹಕ್ಕಿಗಳ ಹಿಂಡುಗಳು ! ಇದು ಶೃಂಗಿವೇರಪುರ. ನನ್ನನ್ನು ನೋಡಲು ಗುಹನು ಬಂದುದು ಇಲ್ಲಿಯೇ. ಸೀತೆ, ನೋಡು ನೋಡು ! ಸರಯೂನದಿ ಕಾಣುತ್ತಿದೆ. ತೀರದ ಉದ್ದಕ್ಕೂ ನಮ್ಮ ಹಿರಿಯರು ಮಾಡಿದ ಯಜ್ಞದ ಯೂಪಸ್ತಂಭಗಳು ! (೪೮-೪೯). ನಾನಾಜಾತಿಯ ಮರಗಳಿಂದ ತುಂಬಿದ ಕಾನನಗಳು ! ಮರಗಳೆಲ್ಲವೂ ಅರಳಿನಿಂತಿವೆ ! ಅಲ್ಲಿ ಕಾಣಿಸುವುದೇ ಅಯೋಧ್ಯೆ ! ನನ್ನ ತಂದೆಯ ರಾಜಧಾನಿ. ವೈದೇಹಿ, ಅಯೋಧ್ಯೆಗೆ ನಮಸ್ಕರಿಸು. ಕ್ಷೇಮದಲ್ಲಿ ಹಿಂದಿರುಗಿ ಬಂದಿದ್ದೀಯೆ" ಎಂದು ಹೇಳಿದನು. ಆಗ ಸಕಲ ವಾನರರೂ ವಿಭೀಷಣನೂ ಮೇಲಕ್ಕೆ ಎದ್ದೆದ್ದು, ರಮಣೀಯವಾದ ಅಯೋಧ್ಯಾನಗರವನ್ನು ಕುತೂಹಲದಿಂದ ವೀಕ್ಷಿಸಿದರು (೫೦-೫೧). ಅಯೋಧ್ಯಾನಗರವು ಶುಭ್ರವಾದ ಉನ್ನತಸೌಧ ಪಂಕ್ತಿಗಳಿಂದಲೂ ವಿಶಾಲವಾದ ರಾಜಬೀದಿಗಳಿಂದಲೂ ಬೀದಿಗಳಲ್ಲಿ ಸಂಚರಿಸುವ ಗಜಾಶ್ವಗಳಿಂದಲೂ

ಪುರೀಮಯೋಧ್ಯಾಂ ದದೃಶುಃ ಪ್ಲವಂಗಮಾಃ
ಪುರೀಂ ಮಹೇಂದ್ರಸ್ಯ ಯಥಾಮರಾವತೀಮ್ ॥ ೫೨

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಡ್ವಿಂಶತ್ಯುತ್ತರಶತತಮಃ ಸರ್ಗಃ

---

## ಸಪ್ತವಿಂಶತ್ಯುತ್ತರಶತತಮಃ ಸರ್ಗಃ

### ಭರದ್ವಾಜಾಮಂತ್ರಣಮ್

ಪೂರ್ಣೇ ಚತುರ್ದಶೇ ವರ್ಷೇ ಪಂಚಮ್ಯಾಂ ಲಕ್ಷ್ಮಣಾಗ್ರಜಃ ।
ಭರದ್ವಾಜಾಶ್ರಮಂ ಪ್ರಾಪ್ಯ ವವಂದೇ ನಿಯತೋ ಮುನಿಮ್ ॥ ೧

ಸೋಽಪೃಚ್ಛದಭಿವಾದ್ಯೈನಂ ಭರದ್ವಾಜಂ ತಪೋಧನಮ್ ।
ಶೃಣೋಷಿ ಕಚ್ಚಿದ್ಭಗವನ್ ಸುಭಿಕ್ಷಾನಾಮಯಂ ಪುರೇ ॥ ೨

---

ಭವ್ಯವಾಗಿ ರಾಜಿಸುತ್ತಿತ್ತು. ದೇವೇಂದ್ರನ ಅಮರಾವತಿಯಂತೆ ವೈಭವೋಪೇತವಾದ ಆ ನಗರಿಯನ್ನು ವಾನರರು ಕೌತುಕದಿಂದ ಆಲೋಕಿಸುತ್ತಿದ್ದರು (೫೨).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತಾರನೆಯ ಸರ್ಗ

---

## ಸರ್ಗ ೧೨೭

### ಶ್ರೀರಾಮನು ಭರದ್ವಾಜಮುನಿಗಳನ್ನು ಸಂದರ್ಶಿಸುವುದು

ಶ್ರೀರಾಮನು ವನವಾಸಕ್ಕಾಗಿ ಅಯೋಧ್ಯೆಯಿಂದ ನಿರ್ಗಮಿಸಿ ಹದಿನಾಲ್ಕು ವರ್ಷಗಳು ಗತಿಸಿದ್ದವು. ಚೈತ್ರ ಶುಕ್ಲ ಪಂಚಮಿಯ ದಿನ ಆ ಲಕ್ಷ್ಮಣಾಗ್ರಜನು ಭರದ್ವಾಜಮುನಿಗಳ ಆಶ್ರಮಕ್ಕೆ ಹಿಂದಿರುಗಿ ಬಂದು ಭರದ್ವಾಜಮುನಿಗಳನ್ನು ಕಂಡು ಭಕ್ತಿಯಿಂದ ವಂದಿಸಿದನು (೧). ಶ್ರೀರಾಮನು ಆ ತಪಸ್ವಿಗಳಿಗೆ ಅಭಿವಾದನೆ ಮಾಡಿ "ಮಹರ್ಷಿಗಳೆ,

ಕಚ್ಚಿಚ್ಚ ಯುಕ್ತೋ ಭರತೋ ಜೀವಂತ್ಯಪಿ ಚ ಮಾತರಃ ।
ಏವಮುಕ್ತಸ್ತು ರಾಮೇಣ ಭರದ್ವಾಜೋ ಮಹಾಮುನಿಃ ॥ ೩

ಪ್ರತ್ಯುವಾಚ ರಘುಶ್ರೇಷ್ಠಂ ಸ್ಮಿತಪೂರ್ವಂ ಪ್ರಹೃಷ್ಟವತ್ ।
ಪಂಕದಿಗ್ಧಸ್ತು ಭರತೋ ಜಟಿಲಸ್ತ್ವಾಂ ಪ್ರತೀಕ್ಷತೇ ॥ ೪

ಪಾದುಕೇ ತೇ ಪುರಸ್ಕೃತ್ಯ ಸರ್ವಂ ಚ ಕುಶಲಂ ಗೃಹೇ ।
ತ್ವಾಂ ಪುರಾ ಚೀರವಸನಂ ಪ್ರವಿಶಂತಂ ಮಹಾವನಮ್ ॥ ೫

ಸ್ತ್ರೀತೃತೀಯಂ ಚ್ಯುತಂ ರಾಜ್ಯಾದ್ಧರ್ಮಕಾಮಂ ಚ ಕೇವಲಮ್ ।
ಪದಾತಿಂ ತ್ಯಕ್ತಸರ್ವಸ್ವಂ ಪಿತುರ್ವಚನಕಾರಿಣಮ್ ॥ ೬

ಸರ್ವಭೋಗೈಃ ಪರಿತ್ಯಕ್ತಂ ಸ್ವರ್ಗಚ್ಯುತಮಿವಾಮರಮ್ ।
ದೃಷ್ಟ್ವಾ ತು ಕರುಣಾ ಪೂರ್ವಂ ಮಮಾಸೀತ್ ಸಮಿತಿಂಜಯ ॥ ೭

---

ಅಯೋಧ್ಯೆಯ ವೃತ್ತಾಂತವು ತಮಗೆ ತಿಳಿದಿದೆಯೆ? ಅಲ್ಲಿ ಸುಭಿಕ್ಷವೆ? ಪ್ರಜೆಗಳು ಆರೋಗ್ಯದಿಂದ ಇದ್ದಾರೆಯೆ? ಭರತನು ಪ್ರಜಾಪಾಲನೆಯಲ್ಲಿ ಆಸಕ್ತನಾಗಿರುವನೆ? ಮುನಿಗಳೆ, ನನ್ನ ತಾಯಂದಿರೆಲ್ಲರೂ ಬದುಕಿದ್ದಾರೆಯೆ?" ಎಂದು ಕೇಳಿದನು (೨-೩). ಆಗ ಭರದ್ವಾಜರು ಸಂತುಷ್ಟರಾಗಿ ಮುಗುಳ್ನಗೆಯಿಂದ "ರಘುಕುಲತಿಲಕ, ಭರತನು ಜಟೆಯನ್ನು ಧರಿಸಿ ಮಲಿನಗಾತ್ರನಾಗಿ ನಿನ್ನನ್ನೇ ಎದುರುನೋಡುತ್ತಿದ್ದಾನೆ. ನೀನು ಕೊಟ್ಟಿದ್ದ ಪಾದುಕೆಗಳನ್ನು ಎದುರಿಗಿಟ್ಟುಕೊಂಡು ರಾಜ್ಯದ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಿದ್ದಾನೆ. ಗೃಹದಲ್ಲಿ ಎಲ್ಲರೂ ಕುಶಲದಿಂದಿದ್ದಾರೆ. ರಾಘವ, ನೀನು ನಾರುಬಟ್ಟೆಯನ್ನುಟ್ಟು ಮಹಾರಣ್ಯಕ್ಕೆ ಹೊರಟೆಯಷ್ಟೆ (೪-೫). ಆಗ ನಿನ್ನ ಪತ್ನಿ, ಲಕ್ಷ್ಮಣ-ಇವರಿಬ್ಬರೇ ನಿನ್ನೊಡನಿದ್ದರು. ಕೇವಲ ಧರ್ಮವನ್ನು ನಂಬಿ ರಾಜ್ಯಭ್ರಷ್ಟನಾಗಿ ಹೊರಟಿದ್ದೆ. ತಂದೆಯ ಮಾತನ್ನು ನಡೆಸುವುದಕ್ಕಾಗಿ ಸಕಲ ಬಂಧುಗಳನ್ನೂ ತೊರೆದು ಕಾಲ್ನಡಿಗೆಯಲ್ಲಿ ಕಾಡಿಗೆ ಹೋದೆ. ಸಮಸ್ತ ರಾಜಭೋಗಗಳನ್ನೂ ಪರಿತ್ಯಜಿಸಿದ ನೀನು, ಸ್ವರ್ಗಚ್ಯುತನಾದ ದೇವತೆಯಂತೆ ನನಗೆ ಕಾಣಿಸಿದೆ! ರಾಮ, ನಿನ್ನನ್ನು ನೋಡಿ

ಕೈಕೇಯೀವಚನೇ ಯುಕ್ತಂ ವನ್ಯಮೂಲಫಲಾಶಿನಮ್ ।
ಸಾಂಪ್ರತಂ ಸುಸಮೃದ್ಧಾರ್ಥಂ ಸಮಿತ್ರಗಣಬಾಂಧವಮ್ ॥ ೮

ಸಮೀಕ್ಷ್ಯ ವಿಜಿತಾರಿಂ ತ್ವಾಂ ಮಮ ಪ್ರೀತಿರನುತ್ತಮಾ ।
ಸರ್ವಂ ಚ ಸುಖದುಃಖಂ ತೇ ವಿದಿತಂ ಮಮ ರಾಘವ ॥ ೯

ಯತ್ತ್ವಯಾ ವಿಪುಲಂ ಪ್ರಾಪ್ತಂ ಜನಸ್ಥಾನವಧಾದಿಕಮ್ ।
ಬ್ರಾಹ್ಮಣಾರ್ಥೇ ನಿಯುಕ್ತಸ್ಯ ರಕ್ಷಿತುಃ ಸರ್ವತಾಪಸಾನ್ ॥ ೧೦

ರಾವಣೇನ ಹೃತಾ ಭಾರ್ಯಾ ಬಭೂವೇಯಮನಿಂದಿತಾ ।
ಮಾರೀಚದರ್ಶನಂ ಚೈವ ಸೀತೋನ್ಮಥನಮೇವ ಚ ॥ ೧೧

ಕಬಂಧದರ್ಶನಂ ಚೈವ ಪಂಪಾಭಿಗಮನಂ ತಥಾ ।
ಸುಗ್ರೀವೇಣ ಚ ತೇ ಸಖ್ಯಂ ಯಚ್ಚ ವಾಲೀ ಹತಸ್ತ್ವಯಾ ॥ ೧೨

ಮಾರ್ಗಣಂ ಚೈವ ವೈದೇಹ್ಯಾಃ ಕರ್ಮ ವಾತಾತ್ಮಜಸ್ಯ ಚ ।
ವಿದಿತಾಯಾಂ ಚ ವೈದೇಹ್ಯಾಂ ನಲಸೇತುರ್ಯಥಾ ಕೃತಃ ॥ ೧೩

---

ದಾಗ ನನಗೆ ಬಹಳ ಮರುಕವುಂಟಾಯಿತು (೬–೭). ಕೈಕೇಯಿಯ ವಚನವನ್ನು ಪಾಲಿಸುವುದಕ್ಕಾಗಿ ನೀನು ಕಾಡಿನ ನಾರು ಬೇರು ಹಣ್ಣುಗಳನ್ನು ತಿನ್ನಬೇಕಾಯಿತೆ–ಎಂದು ಮರುಗಿದೆನು. ಆದರೆ, ವೀರಾಗ್ರಣಿ, ಈಗ ವೈರಿಗಳನ್ನು ಸಂಹರಿಸಿ ಸಕಲ ಸಮೃದ್ಧಿಗಳನ್ನೂ ಪಡೆದು ಕೃತಕೃತ್ಯನಾಗಿ ಮಿತ್ರಪರಿವಾರಗಳೊಡನೆ ಬಂದಿರುವ ನಿನ್ನನ್ನು ನೋಡಿ, ರಾಮ, ನನಗೆ ಇನ್ನಿಲ್ಲದ ಆನಂದವಾಗಿದೆ! ಇದುವರೆಗೆ ನಿನಗೊದಗಿದ ಸುಖದುಃಖಗಳೆಲ್ಲವೂ ನನಗೆ ತಿಳಿದಿದ್ದವು! (೮–೯). ಬ್ರಾಹ್ಮಣರ ಕಾರ್ಯದಲ್ಲಿ ಉದ್ಯುಕ್ತನಾಗಿ ಸಕಲ ತಾಪಸರನ್ನೂ ರಕ್ಷಿಸಿದ್ದೀಯೆ. ಅದಕ್ಕಾಗಿ ಜನಸ್ಥಾನದಲ್ಲಿ ನಡೆಸಿದ ಖರವಧಾದಿ ನಿಖಿಲ ಮಹಾಕಾರ್ಯಗಳೂ ನನಗೆ ವಿದಿತವಾಗಿದ್ದವು. ನಿನ್ನ ಪತ್ನಿಯಾದ ಈ ಸಾಧ್ವೀಶಿರೋಮಣಿಯನ್ನು ರಾವಣನು ಅಪಹರಿಸಿದನಲ್ಲವೆ? ನೀನು ಮಾರೀಚನನ್ನು ನೋಡಿದ್ದು, ಸೀತೆಗಾದ ಹಿಂಸೆ, ಕಬಂಧದರ್ಶನ, ಪಂಪಾಗಮನ–ಇವೆಲ್ಲವನ್ನೂ ನಾನು ಬಲ್ಲೆನು. ನಿನಗೆ ಸುಗ್ರೀವನೊಡನಾದ ಸಖ್ಯ, ವಾಲಿಯ ಸಂಹಾರಗಳು ತಿಳಿದಿದ್ದವು (೧೦–೧೨). ವೈದೇಹಿಯನ್ನು ವಾನರರು ಹುಡುಕಿದ ವಿಧಾನ, ವಾಯು

ಯಥಾ ವಾ ದೀಪಿತಾ ಲಂಕಾ ಪ್ರಹೃಷ್ಟೈರ್ಹರಿಯೂಥಪೈಃ ।
ಸಪುತ್ರಬಾಂಧವಾಮಾತ್ಯಃ ಸಬಲಃ ಸಹವಾಹನಃ ॥ ೧೪

ಯಥಾ ವಿನಿಹತಃ ಸಂಖ್ಯೇ ರಾವಣೋ ದೇವಕಂಟಕಃ ।
ಸಮಾಗಮಶ್ಚ ತ್ರಿದಶೈರ್ಯಥಾ ದತ್ತಶ್ಚ ತೇ ವರಃ ॥ ೧೫

ಸರ್ವಂ ಮಮೈತದ್ವಿದಿತಂ ತಪಸಾ ಧರ್ಮವತ್ಸಲ ।
ಅಹಮಪ್ಯತ್ರ ತೇ ದದ್ಮಿ ವರಂ ಶಸ್ತ್ರಭೃತಾಂ ವರ ॥ ೧೬

ಅರ್ಘ್ಯಮದ್ಯ ಗೃಹಾಣೇದಮಯೋಧ್ಯಾಂ ಶ್ವೋ ಗಮಿಷ್ಯಸಿ ।
ತಸ್ಯ ತಚ್ಛಿರಸಾ ವಾಕ್ಯಂ ಪ್ರತಿಗೃಹ್ಯ ನೃಪಾತ್ಮಜಃ ॥ ೧೭

ಬಾಢಮಿತ್ಯೇವ ಸಂಹೃಷ್ಟೋ ಧೀಮಾನ್ ವರಮಯಾಚತ ।
ಅಕಾಲೇ ಫಲಿನೋ ವೃಕ್ಷಾಃ ಸರ್ವೇ ಚಾಪಿ ಮಧುಸ್ರವಾಃ ॥ ೧೮

ಫಲಾನ್ಯಮೃತಕಲ್ಪಾನಿ ಬಹೂನಿ ವಿವಿಧಾನಿ ಚ ।
ಭವಂತು ಮಾರ್ಗೇ ಭಗವನ್ನಯೋಧ್ಯಾಂ ಪ್ರತಿ ಗಚ್ಛತಃ ॥ ೧೯

---

ಪುತ್ರನ ಸಾಹಸ, ವೈದೇಹಿಯನ್ನು ಕಂಡಮೇಲೆ ನಲನಿಂದ ಸಮುದ್ರಕ್ಕೆ ಸೇತುವನ್ನು ಕಟ್ಟಿಸಿದ ಬಗೆ, ವಾನರವೀರರು ಲಂಕೆಯನ್ನಾಕ್ರಮಿಸಿ ಸುಟ್ಟುಹಾಕಿದ ಕ್ರಮ–ಇವೆಲ್ಲವೂ ಗೊತ್ತಿದ್ದವು. ರಾವಣನ ಪುತ್ರಾಮಾತ್ಯ ಬಾಂಧವರು ಹತರಾದುದೂ ಕಡೆಯಲ್ಲಿ ದೇವಕಂಟಕನಾದ ರಾವಣನು ಸಕಲ ಬಲ ವಾಹನಗಳೊಡನೆ ನಾಶಹೊಂದಿದ ವಿಷಯವೂ ನನಗೆ ತಿಳಿದಿವೆ. ಅನಂತರ ದೇವತೆಗಳು ಬಂದು ನಿನ್ನನ್ನು ಸಂದರ್ಶಿಸಿದ ಅಂಶವೂ ಇಂದ್ರನು ನಿನಗೆ ವರವನ್ನಿತ್ತ ವಿಚಾರವೂ ನನಗೆ ವಿದಿತವಾಗಿವೆ (೧೩–೧೫). ಧರ್ಮವತ್ಸಲ–ಶ್ರೀರಾಮ, ತಪೋಬಲದಿಂದ ಎಲ್ಲವನ್ನೂ ನಾನು ಬಲ್ಲೆ. ವೀರಾಗ್ರಗಣ್ಯ, ನಿನಗೆ ನಾನೂ ಒಂದು ವರವನ್ನು ಕೊಡುವೆನು. ಈ ದಿನ ನನ್ನ ಸತ್ಕಾರವನ್ನು ಸ್ವೀಕರಿಸು. ನಾಳೆ ಅಯೋಧ್ಯೆಗೆ ಹೋಗಬಹುದು" ಎಂದು ಹೇಳಿದರು. ಶ್ರೀರಾಮನು ಹಾಗೆಯೇ ಆಗಲೆಂದು ತಲೆಬಾಗಿ ಭರದ್ವಾಜರ ಆಜ್ಞೆಯನ್ನು ಮನ್ನಿಸಿದನು (೧೬–೧೭). ಮತ್ತು ಅವರ ಇಚ್ಛೆಯಂತೆ ಆ ಮಹಾಪ್ರಾಜ್ಞನು ಸಂತೋಷದಿಂದ "ಮಹಾತ್ಮರೆ, ನಾನು ಅಯೋಧ್ಯೆಗೆ ಹೋಗುವಾಗ, ದಾರಿಯಲ್ಲಿರುವ ಸಕಲವೃಕ್ಷಗಳೂ ಅಕಾಲದಲ್ಲಿಯೂ ಫಲಪುಷ್ಪಗಳಿಂದ ಶೋಭಿಸಲಿ. ಪ್ರತಿಯೊಂದು ಮರದಲ್ಲಿಯೂ

ತಥೇತಿ ಚ ಪ್ರತಿಜ್ಞಾತೇ ವಚನಾತ್ ಸಮನಂತರಮ್ ।
ಅಭವನ್ ಪಾದಪಾಸ್ತತ್ರ ಸ್ವರ್ಗಪಾದಪಸಂನಿಭಾಃ ॥ ೨೦

ನಿಷ್ಫಲಾಃ ಫಲಿನಶ್ಚಾಸನ್ ವಿಪುಷ್ಪಾಃ ಪುಷ್ಪಶಾಲಿನಃ ।
ಶುಷ್ಕಾಃ ಸಮಗ್ರಪತ್ರಾಸ್ತೇ ನಗಾಶ್ಚೈವ ಮಧುಸ್ರವಾಃ ॥ ೨೧

ಸರ್ವತೋ ಯೋಜನಾ ತ್ರೀಣಿ ಗಚ್ಛತಾಮಭವಂಸ್ತದಾ ॥

ತತಃ ಪ್ರಹೃಷ್ಟಾಃ ಪ್ಲವಗರ್ಷಭಾಸ್ತೇ
ಬಹೂನಿ ದಿವ್ಯಾನಿ ಫಲಾನಿ ಚೈವ ।
ಕಾಮಾದುಪಾಶ್ನಂತಿ ಸಹಸ್ರಶಸ್ತೇ
ಮುದಾನ್ವಿತಾಃ ಸ್ವರ್ಗಜಿತೋ ಯಥೈವ ॥ ೨೨

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತವಿಂಶತ್ಯುತ್ತರಶತತಮಃ ಸರ್ಗಃ



ಜೇನು ತುಂಬಿರಲಿ. ಬಗೆಬಗೆಯ ಹಣ್ಣುಗಳು ಅಮೃತದಂತೆ ಸವಿಯಾಗಿರಲಿ" ಎಂದು ವರವನ್ನು ಬೇಡಿದನು (೧೮–೧೯). ಭರದ್ವಾಜರು 'ತಥಾಸ್ತು !' ಎಂದರು. ಏನಚ್ಚರಿ! ಆ ಪ್ರಾಂತದಲ್ಲಿದ್ದ ಸಕಲ ವೃಕ್ಷಗಳೂ ಕಲ್ಪವೃಕ್ಷಗಳಂತಾದವು! ಹಣ್ಣಿಲ್ಲದ ಮರಗಳಲ್ಲಿ ಹಣ್ಣುಗಳು ತುಂಬಿದವು. ಹೂವಿಲ್ಲದ ಗಿಡಗಳಲ್ಲಿ ಹೂಗಳರಳಿದವು ಎಲೆಗಳಿಲ್ಲದ ತರುಲತೆಗಳಲ್ಲಿ ಎಲೆಗಳು ಚಿಗುರಿದವು. ಎಲ್ಲೆಲ್ಲಿಯೂ ಜೇನು ಹರಿಯಿತು. ಭರದ್ವಾಜಾಶ್ರಮದಿಂದ ಅಯೋಧ್ಯೆಯವರೆಗೆ ಮೂರು ಯೋಜನಗಳಲ್ಲಿದ್ದ ಸಮಸ್ತ ವೃಕ್ಷಗಳೂ ಫಲಪುಷ್ಪಮಧುಗಳಿಂದ ರಂಜಿಸಿದವು (೨೦–೨೧). ಕಪಿನಾಯಕರಿಗೆ ಆನಂದವಾಯಿತು! ಸಾವಿರಗಟ್ಟಲೆ ಗುಂಪುಗುಂಪಾಗಿ ಹೋಗಿ, ಬಗೆಬಗೆಯ ದಿವ್ಯಫಲಗಳನ್ನು ಯಥೇಷ್ಟವಾಗಿ ತಿಂದು, ಸ್ವರ್ಗಕ್ಕೆ ಬಂದೆವೋ ಎಂದು ಆ ವಾನರರು ಸಂತೋಷದಿಂದ ನಲಿದಾಡಿದರು (೨೨–೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತೇಳನೆಯ ಸರ್ಗ



## ಅಷ್ಟಾವಿಂಶತ್ಯುತ್ತರಶತತಮಃ ಸರ್ಗಃ

### ಭರತಪ್ರಿಯಾಖ್ಯಾನಮ್

ಅಯೋಧ್ಯಾಂ ತು ಸಮಾಲೋಕ್ಯ ಚಿಂತಯಾಮಾಸ ರಾಘವಃ ।
ಚಿಂತಯಿತ್ವಾ ಹನೂಮಂತಮುವಾಚ ಪ್ಲವಗೋತ್ತಮಮ್ ॥ ೧

ಜಾನೀಹಿ ಕಚ್ಚಿತ್ ಕುಶಲೀ ಜನೋ ನೃಪತಿಮಂದಿರೇ ।
ಶೃಂಗಿವೇರಪುರಂ ಪ್ರಾಪ್ಯ ಗುಹಂ ಗಹನಗೋಚರಮ್ ॥ ೨

ನಿಷಾದಾಧಿಪತಿಂ ಬ್ರೂಹಿ ಕುಶಲಂ ವಚನಾನ್ಮಮ ।
ಶ್ರುತ್ವಾ ತು ಮಾಂ ಕುಶಲಿನಮರೋಗಂ ವಿಗತಜ್ವರಮ್ ॥ ೩

ಭವಿಷ್ಯತಿ ಗುಹಃ ಪ್ರೀತಃ ಸ ಮಮಾತ್ಮಸಮಃ ಸಖಾ ।
ಅಯೋಧ್ಯಾಯಾಶ್ಚ ತೇ ಮಾರ್ಗಂ ಪ್ರವೃತ್ತಿಂ ಭರತಸ್ಯ ಚ ॥ ೪

### ಸರ್ಗ ೧೨೮

ಶ್ರೀರಾಮನು ಭರತನ ಬಳಿಗೆ ಹನುಮಂತನನ್ನು ಕಳಿಸುವುದು. ಹನುಮಂತನು ನಂದಿಗ್ರಾಮಕ್ಕೆ ಹೋಗಿ ಶ್ರೀರಾಮನ ಕುಶಲವಾರ್ತೆಯನ್ನು ತಿಳಿಸುವುದು. ಭರತನ ಆನಂದ.

ಅಯೋಧ್ಯೆಯನ್ನು ವಿಮಾನದಿಂದ ವೀಕ್ಷಿಸಿದಮೇಲೆ, ಶ್ರೀರಾಮನಿಗೆ ಒಂದು ಆಲೋಚನೆಯುಂಟಾಯಿತು. ಅವನು ವಾನರೋತ್ತಮನಾದ ಆಂಜನೇಯನನ್ನು ಕರೆದು "ಕಪಿಶ್ರೇಷ್ಠ, ಅಯೋಧ್ಯೆಯ ನಮ್ಮ ಅರಮನೆಯಲ್ಲಿ ಎಲ್ಲರೂ ಕುಶಲದಿಂದಿರುವರೆ–ಎಂಬುದನ್ನು ತಿಳಿದು ಬಾ. ಮೊದಲು ಶೃಂಗಿವೇರಪುರಕ್ಕೆ ಹೋಗಿ ವನೇಚರನಾದ ಗುಹನನ್ನು ಕಾಣು (೧–೨). ಆ ನಿಷಾದರಾಜನಿಗೆ ನನ್ನ ಕುಶಲವಾರ್ತೆಯನ್ನರುಹು. ನಾನು ಯಾವ ಆತಂಕವೂ ಇಲ್ಲದೆ ಆರೋಗ್ಯಶಾಲಿಯಾಗಿ ಕುಶಲದಲ್ಲಿದ್ದೇನೆಂದು ಕೇಳಿ, ಗುಹನು ಬಹಳ ಸಂತೋಷಪಡುವನು. ಹನುಮಂತ, ಗುಹನು ನನ್ನ ಪ್ರಾಣಮಿತ್ರ. ಆತನು ಅಯೋಧ್ಯೆಗೆ ಹೋಗುವ ಮಾರ್ಗವನ್ನೂ ಭರತನ

ನಿವೇದಯಿಷ್ಯತಿ ಪ್ರೀತೋ ನಿಷಾದಾಧಿಪತಿರ್ಗುಹಃ ।
ಭರತಸ್ತು ತ್ವಯಾ ವಾಚ್ಯಃ ಕುಶಲಂ ವಚನಾನ್ಮಮ ॥ ೫
ಸಿದ್ಧಾರ್ಥಂ ಶಂಸ ಮಾಂ ತಸ್ಮೈ ಸಭಾರ್ಯಂ ಸಹಲಕ್ಷ್ಮಣಮ್ ।
ಹರಣಂ ಚಾಪಿ ವೈದೇಹ್ಯಾ ರಾವಣೇನ ಬಲೀಯಸಾ ॥ ೬
ಸುಗ್ರೀವೇಣ ಚ ಸಂಸರ್ಗಂ ವಾಲಿನಶ್ಚ ವಧಂ ರಣೇ ।
ಮೈಥಿಲ್ಯನ್ವೇಷಣಂ ಚೈವ ಯಥಾ ಚಾಧಿಗತಾ ತ್ವಯಾ ॥ ೭
ಲಂಘಯಿತ್ವಾ ಮಹಾತೋಯಮಾಪಗಾಪತಿಮವ್ಯಯಮ್ ।
ಉಪಾಯಾನಂ ಸಮುದ್ರಸ್ಯ ಸಾಗರಸ್ಯ ಚ ದರ್ಶನಮ್ ॥ ೮
ಯಥಾ ಚ ಕಾರಿತಃ ಸೇತೂ ರಾವಣಶ್ಚ ಯಥಾ ಹತಃ ।
ವರದಾನಂ ಮಹೇಂದ್ರೇಣ ಬ್ರಹ್ಮಣಾ ವರುಣೇನ ಚ ॥ ೯
ಮಹಾದೇವಪ್ರಸಾದಾಚ್ಚ ಪಿತ್ರಾ ಮಮ ಸಮಾಗಮಮ್ ।
ಉಪಯಾತಂ ಚ ಮಾಂ ಸೌಮ್ಯ ಭರತಸ್ಯ ನಿವೇದಯ ॥ ೧೦
ಸಹ ರಾಕ್ಷಸರಾಜೇನ ಹರೀಣಾಂ ಪ್ರವರೇಣ ಚ ।
ಜಿತ್ವಾ ಶತ್ರುಗಣಾನ್ ರಾಮಃ ಪ್ರಾಪ್ಯ ಚಾನುತ್ತಮಂ ಯಶಃ ॥ ೧೧

---

ವೃತ್ತಾಂತವನ್ನೂ ಹರ್ಷದಿಂದ ನಿನಗೆ ತಿಳಿಸುವನು (೩-೪) ಆಮೇಲೆ ಭರತನನ್ನು ಕಂಡು ನನ್ನ ಕುಶಲವಾರ್ತೆಯನ್ನು ತಿಳಿಸು. ನಾನು ವನವಾಸವನ್ನು ಮುಗಿಸಿ ಪತ್ನೀಸಮೇತನಾಗಿ ಲಕ್ಷ್ಮಣನೊಡನೆ ಬಂದಿದ್ದೇನೆಂದು ಹೇಳು. ಬಲಾಢ್ಯನಾದ ರಾವಣನು ವೈದೇಹಿಯನ್ನಪಹರಿಸಿದ ಸಂದರ್ಭವನ್ನೂ ತಿಳಿಸು (೫-೬). ಅನಂತರ ಸುಗ್ರೀವನ ಸಖ್ಯ, ವಾಲಿವಧೆ, ವಿಶಾಲವಾದ ಮಹಾಸಾಗರವನ್ನು ನೀನು ಲಂಘಿಸಿ ಮೈಥಿಲಿಯನ್ನು ಅನ್ವೇಷಿಸಿ ಕಂಡುಬಂದ ಬಗೆ, ನಾವು ಸಮುದ್ರತೀರಕ್ಕೆ ಹೋದದ್ದು, ಸಮುದ್ರರಾಜನ ದರ್ಶನ - ಇವುಗಳನ್ನೂ ಹೇಳು (೭-೮). ಸೇತುಬಂಧನ, ರಾವಣಸಂಹಾರ, ಬ್ರಹ್ಮವರುಣಾದಿಗಳೊಡನೆ ಬಂದು ದೇವೇಂದ್ರನು ಅನುಗ್ರಹಿಸಿದ ವರದಾನ, ನನ್ನ ತಂದೆಯಾದ ದಶರಥಮಹಾರಾಜನನ್ನು ಪರಮೇಶ್ವರನ ಕರುಣೆಯಿಂದ ನಾನು ಸಂದರ್ಶಿಸಿದ್ದು, ಈಗ ನಾನು ಇಲ್ಲಿಗೆ ಆಗಮಿಸಿರುವುದು—ಇದೆಲ್ಲವನ್ನೂ ಭರತನಿಗೆ ನಿವೇದಿಸು (೯-೧೦). ರಾಕ್ಷಸೇಂದ್ರನಾದ ವಿಭೀಷಣ, ವಾನರೇಂದ್ರನಾದ ಸುಗ್ರೀವ—ಇವರೊಡನೆ ಸೇರಿ, ಶತ್ರುಗಣಗಳನ್ನು ಸದೆ

ಉಪಯಾತಿ ಸಮೃದ್ಧಾರ್ಥಃ ಸಹ ಮಿತ್ರೈರ್ಮಹಾಬಲೈಃ ।
ಏತಚ್ಛ್ರುತ್ವಾ ಯಮಾಕಾರಂ ಭಜತೇ ಭರತಸ್ತದಾ ॥ ೧೨

ಸ ಚ ತೇ ವೇದಿತವ್ಯಃ ಸ್ಯಾತ್ ಸರ್ವಂ ಯಚ್ಚಾಪಿ ಮಾಂ ಪ್ರತಿ ।
ಜ್ಞೇಯಾಶ್ಚ ಸರ್ವೇ ವೃತ್ತಾಂತಾ ಭರತಸ್ಯೇಂಗಿತಾನಿ ಚ ॥ ೧೩

ತತ್ತ್ವೇನ ಮುಖವರ್ಣೇನ ದೃಷ್ಟ್ಯಾ ವ್ಯಾಭಾಷಣೇನ ಚ ।
ಸರ್ವಕಾಮಸಮೃದ್ಧಂ ಹಿ ಹಸ್ತ್ಯಶ್ವರಥಸಂಕುಲಮ್ ॥ ೧೪

ಪಿತೃಪೈತಾಮಹಂ ರಾಜ್ಯಂ ಕಸ್ಯ ನಾವರ್ತಯೇನ್ಮನಃ ।
ಸಂಗತ್ಯಾ ಭರತಃ ಶ್ರೀಮಾನ್ ರಾಜ್ಯಾರ್ಥೀ ಚೇತ್ ಸ್ವಯಂ ಭವೇತ್

ಪ್ರಶಾಸ್ತು ವಸುಧಾಂ ಕೃತ್ಸ್ನಾಮಖಿಲಾಂ ರಘುನಂದನಃ ।
ತಸ್ಯ ಬುದ್ಧಿಂ ಚ ವಿಜ್ಞಾಯ ವ್ಯವಸಾಯಂ ಚ ವಾನರ ॥ ೧೬

---

ಬಡಿದು, ಅಸಾಧಾರಣವಾದ ಕೀರ್ತಿಯನ್ನು ಗಳಿಸಿ, ಸರ್ವಸಮೃದ್ಧಿಯಿಂದ ಕೃತಕೃತ್ಯನಾಗಿ, ಅಸದೃಶಪರಾಕ್ರಮಿಗಳಾದ ಮಿತ್ರರೊಡಗೂಡಿ ರಾಮನು ಬರುತ್ತಿದ್ದಾನೆಂದು ಹೇಳು! ಈ ವೃತ್ತಾಂತವನ್ನು ಕೇಳಿದಾಗ, ಸೌಮ್ಯ, ಭರತನ ಮುಖದಲ್ಲಿ ಯಾವ ಬದಲಾವಣೆಯಾಗುವುದೆಂದು ಸೂಕ್ಷ್ಮವಾಗಿ ಗಮನಿಸು! (೧೧-೧೨). ನನ್ನ ವಿಷಯದಲ್ಲಿ ಆತನ ಅಭಿಪ್ರಾಯವೇನೆಂಬುದನ್ನು ನೀನು ತಿಳಿಯಬೇಕು. ಅವನ ಮುಖವರ್ಣ, ನೋಟ, ಮಾತಾಡುವ ವಿಧಾನ–ಇವುಗಳಿಂದ ಭರತನ ಇಂಗಿತಗಳನ್ನೂ ಇತರ ವೃತ್ತಾಂತಗಳನ್ನೂ ತಾತ್ತ್ವಿಕವಾಗಿ ಗ್ರಹಿಸು. ಏಕೆಂದರೆ, ಹಸ್ತ್ಯಶ್ವರಥಗಳಿಂದ ಪರಿಪೂರ್ಣವಾಗಿಯೂ ಸರ್ವಸಮೃದ್ಧಿಗಳಿಂದ ತುಂಬಿಯೂ ಇರುವ ಪಿತೃಪಿತಾಮಹ ಪರಂಪರೆಯಿಂದ ಬಂದ ರಾಜ್ಯವು ಯಾರ ಮನಸ್ಸನ್ನು ಆಕರ್ಷಿಸದೆ ಇದ್ದೀತು! (೧೩-೧೪). ರಾಜ್ಯದ ಆಡಳಿತದಲ್ಲಿ ದೀರ್ಘಕಾಲದ ಸಂಬಂಧವುಂಟಾದ್ದರಿಂದ ಶ್ರೀಮಾನ್ ಭರತನು ತಾನೇ ರಾಜ್ಯಾರ್ಥಿಯಾಗಿರುವ ಪಕ್ಷದಲ್ಲಿ, ಹನುಮಂತ, ನಿಖಿಲಕೋಸಲರಾಜ್ಯವನ್ನೂ ಆ ರಘುನಂದನನೇ ಪಾಲಿಸಲಿ!* (೧೫) ವಾನರೋತ್ತಮ, ಭರತನ ಉದ್ದೇಶವನ್ನೂ ಮತ್ತು ಯಾವ

---

* 'ನಾನು ಹೀಗೆಯೇ ವನಕ್ಕೆ ಹಿಂದಿರುಗಿ ತಪಶ್ಚರಣೆಯಿಂದ ಕಾಲವನ್ನು ಕಳೆಯುವೆನು' ಎಂದು ಆಶಯ.

ಯಾವನ್ನ ದೂರಂ ಯಾತಾಃ ಸ್ಮ ಕ್ಷಿಪ್ರಮಾಗಂತುಮರ್ಹಸಿ ।
ಇತಿ ಪ್ರತಿಸಮಾದಿಷ್ಟೋ ಹನುಮಾನ್ ಮಾರುತಾತ್ಮಜಃ ॥ ೧೭

ಮಾನುಷಂ ಧಾರಯನ್ ರೂಪಮಯೋಧ್ಯಾಂ ತ್ವರಿತೋ ಯಯೌ ।
ಅಥೋತ್ಪಪಾತ ವೇಗೇನ ಹನುಮಾನ್ ಮಾರುತಾತ್ಮಜಃ ॥ ೧೮

ಗರುತ್ಮಾನಿವ ವೇಗೇನ ಜಿಘೃಕ್ಷನ್ ಭುಜಗೋತ್ತಮಮ್ ।
ಲಂಘಯಿತ್ವಾ ಪಿತೃಪಥಂ ಭುಜಗೇಂದ್ರಾಲಯಂ ಶುಭಮ್ ॥ ೧೯

ಗಂಗಾಯಮುನಯೋರ್ಮಧ್ಯಂ ಸನ್ನಿಪಾತಮತೀತ್ಯ ಚ ।
ಶೃಂಗಿವೇರಪುರಂ ಪ್ರಾಪ್ಯ ಗುಹಮಾಸಾದ್ಯ ವೀರ್ಯವಾನ್ ॥ ೨೦

ಸ ವಾಚಾ ಶುಭಯಾ ಹೃಷ್ಟೋ ಹನುಮಾನಿದಮಬ್ರವೀತ್ ।
ಸಖಾ ತು ತವ ಕಾಕುತ್ಸ್ಥೋ ರಾಮಃ ಸತ್ಯಪರಾಕ್ರಮಃ ॥ ೨೧

ಸಹಸೀತಃ ಸಸೌಮಿತ್ರಿಃ ಸ ತ್ವಾಂ ಕುಶಲಮಬ್ರವೀತ್ ।
ಪಂಚಮೀಮದ್ಯ ರಜನೀಮುಷಿತ್ವಾ ವಚನಾನ್ಮುನೇಃ ॥ ೨೨

---

ಉದ್ಯೋಗದಲ್ಲಿರುವನೆಂಬುದನ್ನೂ ತಿಳಿದುಕೊಂಡು, ಬೇಗನೆ ಬಾ. ನಾವು ಭರದ್ವಾಜಾಶ್ರಮದಿಂದ ಹೊರಟು ದೂರ ಬರುವಷ್ಟರಲ್ಲಿ ನೀನು ಹಿಂದಿರುಗಿ ಬರಬೇಕು" ಎಂದು ತಿಳಿಸಿದನು (೧೭). ಒಡನೆಯೇ ಮಾರುತಾತ್ಮಜನು ಮಾನುಷರೂಪವನ್ನು ಧರಿಸಿ, ಸರ್ಪವನ್ನು ಹಿಡಿಯಲೆರಗುವ ಗರುಡನಂತೆ ಅತಿವೇಗದಿಂದ, ಅಯೋಧ್ಯಾಭಿಮುಖನಾಗಿ ಥೀಂಕಿಟ್ಟು ನೆಗೆದನು. ತನ್ನ ಪಿತನಾದ ಮಾರುತನು ಸಂಚರಿಸುವ ಅಂತರಿಕ್ಷವನ್ನಡರಿ, ಭುಜಗೇಂದ್ರಗಳ ವಾಸಸ್ಥಾನವೂ ಪವಿತ್ರವೂ ಆದ ಗಂಗಾಯಮುನಾಸಂಗಮವನ್ನು ದಾಟಿ, ಆ ವೀರಾಗ್ರಗಣ್ಯನು ಶೃಂಗಿವೇರಪುರವನ್ನು ಸೇರಿದನು (೧೭-೨೦). ಅಲ್ಲಿ ಹನುಮಂತನು ಸಂತೋಷದಿಂದ ಹೋಗಿ ಗುಹನನ್ನು ಕಂಡು ಶುಭ ವಾಕ್ಯಗಳಿಂದ "ನಿಷಾದರಾಜ, ನಿನ್ನ ಮಿತ್ರನಾದ ಶ್ರೀರಾಮನು ಕುಶಲ ವನ್ನು ವಿಚಾರಿಸಿದ್ದಾನೆ! ಸತ್ಯಪರಾಕ್ರಮನಾದ ಕಾಕುತ್ಸ್ಥನು ಸೀತಾ ಲಕ್ಷ್ಮಣಸಮೇತನಾಗಿ ಭರದ್ವಾಜಾಶ್ರಮಕ್ಕೆ ಬಂದಿದ್ದಾನೆ. ಆ ಮುನಿಗಳ ಆಜ್ಞೆಯಂತೆ ಈ ಪಂಚಮೀದಿನದ ರಾತ್ರಿಯನ್ನು ಅಲ್ಲಿಯೇ ಕಳೆಯುವನು

ಭರದ್ವಾಜಾಭ್ಯನುಜ್ಞಾತಂ ದ್ರಕ್ಷ್ಯಸ್ಯದ್ಯೈವ ರಾಘವಮ್ ।
ಏವಮುಕ್ತ್ವಾ ಮಹಾತೇಜಾಃ ಸಂಪ್ರಹೃಷ್ಟತನೂರುಹಃ ॥ ೨೩

ಉತ್ಪಪಾತ ಮಹಾವೇಗೋ ವೇಗವಾನವಿಚಾರಯನ್ ।
ಸೋಽಪಶ್ಯದ್ರಾಮತೀರ್ಥಂ ಚ ನದೀಂ ವಾಲುಕಿನೀಂ ತಥಾ ॥ ೨೪

ಗೋಮತೀಂ ತಾಂ ಚ ಸೋಽಪಶ್ಯದ್ಭೀಮಂ ಸಾಲವನಂ ತಥಾ ।
ಪ್ರಜಾಶ್ಚ ಬಹುಸಾಹಸ್ರಾಃ ಸ್ಫೀತಾನ್ ಜನಪದಾನಪಿ ॥ ೨೫

ಸ ಗತ್ವಾ ದೂರಮಧ್ವಾನಂ ತ್ವರಿತಃ ಕಪಿಕುಂಜರಃ ।
ಆಸಸಾದ ದ್ರುಮಾನ್ ಫುಲ್ಲಾನ್ನಂದಿಗ್ರಾಮಸಮೀಪಗಾನ್ ॥ ೨೬

ಸ್ತ್ರೀಭಿಃ ಸಪುತ್ರೈರ್ವೃದ್ಧೈಶ್ಚ ರಮಮಾಣೈರಲಂಕೃತಾನ್ ।
ಸುರಾಧಿಪಸ್ಯೋಪವನೇ ಯಥಾ ಚೈತ್ರರಥೇ ದ್ರುಮಾನ್ ॥ ೨೭

---

(೨೧-೨೨). ನಾಳೆ ಭರದ್ವಾಜರ ಅನುಮತಿಯನ್ನು ಪಡೆದು, ಇತ್ತ ಬರುವನು. ಶೀಘ್ರದಲ್ಲಿಯೇ ನೀನು ರಾಘವನನ್ನು ನೋಡಬಹುದು" ಎಂದು ತಿಳಿಸಿದನು. ಮಹಾತೇಜಸ್ವಿಯಾದ ಆಂಜನೇಯನು ಗುಹನಿಗೆ ಆ ಸುದ್ದಿಯನ್ನು ಹೇಳಿ, ಯಾವ ಮಾತನ್ನೂ ಬೆಳಸದೆ ಏನನ್ನೂ ವಿಚಾರಿಸದೆ, ನಂದಿಗ್ರಾಮದ ಕಡೆಗೆ ತ್ವರೆಯಿಂದ ಹಾರಿದನು. ಭರತನಿಗೆ ಸಂತೋಷದ ಸುದ್ದಿಯನ್ನು ಹೇಳುವೆನೆಂಬ ಆನಂದೋತ್ಸಾಹಗಳಿಂದ ಹನುಮಂತನು ಪುಳಕಿತನಾಗಿದ್ದನು. ದಾರಿಯಲ್ಲಿ ಪರಶುರಾಮತೀರ್ಥವನ್ನೂ ವಾಲುಕಿನಿ, ಗೋಮತಿ—ಎಂಬ ನದಿಗಳನ್ನೂ ಬಹಳ ದಟ್ಟವಾಗಿದ್ದ ಸಾಲವೃಕ್ಷಗಳ ವನವನ್ನೂ ಕಂಡನು (೨೩-೨೪). ಸಸ್ಯಸಮೃದ್ಧವಾದ ಕೋಸಲರಾಜ್ಯವನ್ನೂ ಅಲ್ಲಲ್ಲಿ ಸಂಚರಿಸುತ್ತಿದ್ದ ಸಾವಿರಾರು ಪ್ರಜೆಗಳನ್ನೂ ನೋಡುತ್ತ ಹೋದನು. ಹೀಗೆ ಆ ಕಪಿಕುಂಜರನು ಬಹುದೂರದವರೆಗೆ ತ್ವರಿತವಾಗಿ ಹೋದಮೇಲೆ ನಂದಿಗ್ರಾಮದ ಸಮೀಪದಲ್ಲಿ ಹೂವರಳಿದ ವೃಕ್ಷಗಳ ಸಾಲನ್ನು ವೀಕ್ಷಿಸಿದನು (೨೫-೨೬). ಇಂದ್ರನ ನಂದನವನದಂತೆಯೂ ಕುಬೇರನ ಚೈತ್ರರಥವನದಂತೆಯೂ ಇದ್ದ ಹೂದೋಟಗಳ ಆ ವೃಕ್ಷಗಳ ಕೆಳಗೆ ಸ್ತ್ರೀಬಾಲವೃದ್ಧರು ಉಲ್ಲಾಸದಿಂದ ಸಂಚರಿಸುತ್ತಿದ್ದರು. ನಂದಿಗ್ರಾಮವು ಅಯೋಧ್ಯೆಗೆ

**ಕ್ರೋಶಮಾತ್ರೇ ತ್ವಯೋಧ್ಯಾಯಾಶ್ಚೀರಕೃಷ್ಣಾಜಿನಾಂಬರಮ್ ।**
**ದದರ್ಶ ಭರತಂ ದೀನಂ ಕೃಶಮಾಶ್ರಮವಾಸಿನಮ್ ॥ ೨೮**

**ಜಟಿಲಂ ಮಲದಿಗ್ಧಾಂಗಂ ಭ್ರಾತೃವ್ಯಸನಕರ್ಶಿತಮ್ ।**
**ಫಲಮೂಲಾಶಿನಂ ದಾಂತಂ ತಾಪಸಂ ಧರ್ಮಚಾರಿಣಮ್ ॥ ೨೯**

**ಸಮುನ್ನತಜಟಾಭಾರಂ ವಲ್ಕಲಾಜಿನವಾಸಸಮ್ ।**
**ನಿಯತಂ ಭಾವಿತಾತ್ಮಾನಂ ಬ್ರಹ್ಮರ್ಷಿಸಮತೇಜಸಮ್ ॥ ೩೦**

**ಪಾದುಕೇ ತೇ ಪುರಸ್ಕೃತ್ಯ ಶಾಸತಂ ವೈ ವಸುಂಧರಾಮ್ ।**
**ಚಾತುರ್ವರ್ಣ್ಯಸ್ಯ ಲೋಕಸ್ಯ ತ್ರಾತಾರಂ ಸರ್ವತೋ ಭಯಾತ್ ॥ ೩೧**

**ಉಪಸ್ಥಿತಮಮಾತ್ಯೈಶ್ಚ ಶುಚಿಭಿಶ್ಚ ಪುರೋಹಿತೈಃ ।**
**ಬಲಮುಖ್ಯೈಶ್ಚ ಯುಕ್ತೈಶ್ಚ ಕಾಷಾಯಾಂಬರಧಾರಿಭಿಃ ॥ ೩೨**

---

ಒಂದು ಹರದಾರಿ ದೂರದಲ್ಲಿತ್ತು. ಹನುಮಂತನು ನಂದಿಗ್ರಾಮಕ್ಕೆ ಹೋಗಿ ಆಶ್ರಮವಾಸಿಯಾಗಿದ್ದ ಭರತನನ್ನು ಕಂಡನು. ಭರತನು ನಾರುಬಟ್ಟೆಯನ್ನುಟ್ಟು ಕೃಷ್ಣಾಜಿನವನ್ನು ಹೊದೆದು ತಾಪಸವೇಷದಲ್ಲಿದ್ದನು. ಶ್ರೀರಾಮನ ಚಿಂತೆಯಿಂದ ದೀನನಾಗಿದ್ದನು. ದೇಹವು ಕೃಶವಾಗಿತ್ತು (೨೭-೨೮). ತಲೆಯಲ್ಲಿ ಜಟೆಯು ಬೆಳೆದಿತ್ತು. ಸಂಸ್ಕಾರವಿಲ್ಲದೆ ಶರೀರವು ಮಲಿನವಾಗಿತ್ತು. ಅಣ್ಣನ ವಿರಹವ್ಯಸನವು ಅವನನ್ನು ಕೊರೆಯುತ್ತಿತ್ತು. ಫಲಮೂಲಗಳನ್ನು ಮಾತ್ರವೇ ತಿನ್ನುತ್ತ ಜಿತೇಂದ್ರಿಯನಾಗಿ ಧರ್ಮನಿಷ್ಠನಾಗಿದ್ದ ಭರತನು ಒಬ್ಬ ತಪಸ್ವಿಯೇ ಆಗಿದ್ದನು (೨೯). ಉನ್ನತ ಜಟಾಭಾರವನ್ನು ಹೊತ್ತು, ವಲ್ಕಲಾಜಿನಗಳನ್ನು ಧರಿಸಿ, ನಿಯಮಪೂರ್ವಕವಾದ ಜೀವನವಿಧಾನವನ್ನನುಸರಿಸಿ, ಭಗವಚ್ಚಿಂತನೆಯಲ್ಲಿ ತತ್ಪರನಾಗಿದ್ದ ಭರತನ ಮುಖದಲ್ಲಿ ಬ್ರಹ್ಮರ್ಷಿಸಮಾನವಾದ ತೇಜಸ್ಸು ಬೆಳಗುತ್ತಿತ್ತು (೩೦). ಶ್ರೀರಾಮನು ಕೊಟ್ಟಿದ್ದ ಪಾದುಕೆಗಳನ್ನು ಮುಂದಿಟ್ಟುಕೊಂಡು ಅವುಗಳ ಹೆಸರಿನಲ್ಲಿ ರಾಜ್ಯವನ್ನು ಆಳುತ್ತಿದ್ದ ಭರತನು, ಚಾತುರ್ವರ್ಣ್ಯದ ಧರ್ಮಕ್ಕೆ ಲೋಪವಾಗದಂತೆ ಯಾರಿಗೂ ಯಾವ ಭಯವೂ ಸಂಭವಿಸದಂತೆ, ಪ್ರಜೆಗಳನ್ನು ಪಾಲಿಸುತ್ತಿದ್ದನು (೩೧). ಶುದ್ಧಾತ್ಮರಾದ ಅಮಾತ್ಯರು, ಪುರೋಹಿತರು ಮತ್ತು ಸೇನಾಪತಿಗಳಿಂದ ಯುಕ್ತನಾಗಿ, ಭರತನು ರಾಜ್ಯ

ನ ಹಿ ತೇ ರಾಜಪುತ್ರಂ ತಂ ಚೀರಕೃಷ್ಣಾಜಿನಾಂಬರಮ್ ।
ಪರಿಭೋಕ್ತುಂ ವ್ಯವಸ್ಯಂತಿ ಪೌರಾ ವೈ ಧರ್ಮವತ್ಸಲಮ್ ॥ ೩೩

ತಂ ಧರ್ಮಮಿವ ಧರ್ಮಜ್ಞಂ ದೇಹವಂತಮಿವಾಪರಮ್ ।
ಉವಾಚ ಪ್ರಾಂಜಲಿರ್ವಾಕ್ಯಂ ಹನುಮಾನ್ ಮಾರುತಾತ್ಮಜಃ ॥ ೩೪

ವಸಂತಂ ದಂಡಕಾರಣ್ಯೇ ಯಂ ತ್ವಂ ಚೀರಜಟಾಧರಮ್ ।
ಅನುಶೋಚಸಿ ಕಾಕುತ್ಸ್ಥಂ ಸ ತ್ವಾಂ ಕುಶಲಮಬ್ರವೀತ್ ॥ ೩೫

ಪ್ರಿಯಮಾಖ್ಯಾಮಿ ತೇ ದೇವ ಶೋಕಂ ತ್ಯಜ ಸುದಾರುಣಮ್ ।
ಅಸ್ಮಿನ್ ಮುಹೂರ್ತೇ ಭ್ರಾತ್ರಾ ತ್ವಂ ರಾಮೇಣ ಸಹ ಸಂಗತಃ ॥ ೩೬

ನಿಹತ್ಯ ರಾವಣಂ ರಾಮಃ ಪ್ರತಿಲಭ್ಯ ಚ ಮೈಥಿಲೀಮ್ ।
ಉಪಯಾತಿ ಸಮೃದ್ಧಾರ್ಥಃ ಸಹ ಮಿತ್ರೈರ್ಮಹಾಬಲೈಃ ॥ ೩೭

---

ರಕ್ಷಣೆಯನ್ನು ನೋಡಿಕೊಳ್ಳುತ್ತಿದ್ದನು. ಅಮಾತ್ಯಾದಿಗಳೂ ಕೂಡ ಭರತನಂತೆ ಕಾಷಾಯವಸ್ತ್ರಗಳನ್ನು ಧರಿಸಿ ವ್ರತನಿಷ್ಠರಾಗಿದ್ದರು. ಏಕೆಂದರೆ, ಧರ್ಮವತ್ಸಲನಾದ ರಾಜಪುತ್ರನು ವಲ್ಕಲಕೃಷ್ಣಾಜಿನಗಳನ್ನು ಧರಿಸಿ ನಿಯಮಪಾಲನೆಯಲ್ಲಿರುವಾಗ, ಅವನನ್ನು ಬಿಟ್ಟು ತಾವು ಮಾತ್ರ ಭೋಗವನ್ನನುಭವಿಸಲು ಅಮಾತ್ಯಾದಿ ಪೌರರಿಗೆ ಮನಸ್ಸು ಬರಲಿಲ್ಲ (೩೨-೩೩). ಈ ಪ್ರಕಾರವಾಗಿ, ದೇಹಧಾರಿಯಾದ ಸಾಕ್ಷಾತ್ ಧರ್ಮವೋ ಎಂಬಂತೆ ಕಾಣುತ್ತಿದ್ದ ಧರ್ಮಜ್ಞನಾದ ಭರತನನ್ನು ನೋಡಿ, ವಾಯುಪುತ್ರನಾದ ಹನುಮಂತನು ಕೈಮುಗಿದುಕೊಂಡು ಹೀಗೆಂದನು (೩೪): "ರಾಜಪುತ್ರ, ಶ್ರೀರಾಮನು ತನ್ನ ಕುಶಲವನ್ನು ನಿನಗೆ ಹೇಳಿಕಳಿಸಿದ್ದಾನೆ! ಚೀರಜಟಾಧಾರಿಯಾಗಿ ದಂಡಕಾರಣ್ಯದಲ್ಲಿ ವಾಸಿಸುತ್ತಿದ್ದ ಯಾವ ಕಾಕುತ್ಸ್ಥನಿಗಾಗಿ ನೀನು ಶೋಕಿಸುತ್ತಿರುವೆಯೋ, ಆತನು ನಿನ್ನ ಕುಶಲವನ್ನು ವಿಚಾರಿಸಿದ್ದಾನೆ (೩೫). ರಾಜಕುಮಾರ, ನಿನಗೆ ಸಂತೋಷದ ಸುದ್ದಿಯನ್ನು ಹೇಳುತ್ತಿದ್ದೇನೆ. ದಾರುಣವಾದ ಈ ಶೋಕವನ್ನು ಪರಿತ್ಯಜಿಸು. ಇನ್ನೇನು, ಒಂದು ಮುಹೂರ್ತಕಾಲದಲ್ಲಿಯೇ ನಿನ್ನ ಅಣ್ಣನಾದ ಶ್ರೀರಾಮನೊಡನೆ ಸೇರಿಕೊಳ್ಳುವೆ! ಶ್ರೀರಾಮನು ರಾವಣನನ್ನು ಸಂಹರಿಸಿ ಮೈಥಿಲಿಯನ್ನು ಪಡೆದು ಕೃತಕೃತ್ಯನಾಗಿದ್ದಾನೆ. ಸಕಲ ಸಮೃದ್ಧಿಗಳಿಂದಲೂ ಯುಕ್ತನಾಗಿ

ಲಕ್ಷ್ಮಣಶ್ಚ ಮಹಾತೇಜಾ ವೈದೇಹೀ ಚ ಯಶಸ್ವಿನೀ ।
ಸೀತಾ ಸಮಗ್ರಾ ರಾಮೇಣ ಮಹೇಂದ್ರೇಣ ಯಥಾ ಶಚೀ ॥ ೩೮

ಏವಮುಕ್ತೋ ಹನುಮತಾ ಭರತೋ ಭ್ರಾತೃವತ್ಸಲಃ ।
ಪಪಾತ ಸಹಸಾ ಹೃಷ್ಟೋ ಹರ್ಷಾನ್ಮೋಹಂ ಜಗಾಮ ಹ ॥ ೩೯

ತತೋ ಮುಹೂರ್ತಾದುತ್ಥಾಯ ಪ್ರತ್ಯಾಶ್ವಸ್ಯ ಚ ರಾಘವಃ ।
ಹನುಮಂತಮುವಾಚೇದಂ ಭರತಃ ಪ್ರಿಯವಾದಿನಮ್ ॥ ೪೦

ಅಶೋಕಜೈಃ ಪ್ರೀತಿಮಯೈಃ ಕಪಿಮಾಲಿಂಗ್ಯ ಸಂಭ್ರಮಾತ್ ।
ಸಿಷೇಚ ಭರತಃ ಶ್ರೀಮಾನ್ ವಿಪುಲೈರಸ್ರಬಿಂದುಭಿಃ ॥ ೪೧

ದೇವೋ ವಾ ಮಾನುಷೋ ವಾ ತ್ವಮನುಕ್ರೋಶಾದಿಹಾಗತಃ ।
ಪ್ರಿಯಾಖ್ಯಾನಸ್ಯ ತೇ ಸೌಮ್ಯ ದದಾಮಿ ಬ್ರುವತಃ ಪ್ರಿಯಮ್ ॥ ೪೨

---

ಬಲಾಢ್ಯರಾದ ವಾನರಮಿತ್ರರೊಡಗೂಡಿ ಬರುತ್ತಿದ್ದಾನೆ (೩೬-೩೭). ಮಹಾತೇಜಸ್ವಿಯಾದ ಲಕ್ಷ್ಮಣನೂ ಆಗಮಿಸಿದ್ದಾನೆ. ಕೀರ್ತಿಶಾಲಿನಿಯಾದ ವೈದೇಹಿಯು, ದೇವೇಂದ್ರನೊಡನಿರುವ ಶಚೀದೇವಿಯಂತೆ, ಶ್ರೀರಾಮನೊಡನೆ ವಿರಾಜಿಸುತ್ತಿದ್ದಾಳೆ" ಎಂದನು (೩೮). ಹನುಮಂತನು ಹೀಗೆಂದುದೇ ತಡ, ಅಣ್ಣನಿಗಾಗಿ ಹಂಬಲಿಸುತ್ತಿದ್ದ ಭ್ರಾತೃವತ್ಸಲನಾದ ಭರತನು ಆನಂದಪರವಶನಾಗಿ ನೆಲದಮೇಲೊರಗಿದನು. ಹರ್ಷಾತಿರೇಕದಿಂದ ಎಚ್ಚರದಪ್ಪಿದಂತಾದನು (೩೯). ಸ್ವಲ್ಪಹೊತ್ತಿನಮೇಲೆ ಚೇತರಿಸಿಕೊಂಡೆದ್ದು, ಆ ರಘುಕುಲೋತ್ತಮನು ಆನಂದವಾರ್ತೆಯನ್ನು ತಂದ ಹನುಮಂತನನ್ನು ಬಿಗಿದಪ್ಪಿಕೊಂಡನು. ಪ್ರೀತಿಮಯವಾದ ಆನಂದಬಾಷ್ಪಗಳು ಭರತನ ಕಣ್ಣುಗಳಿಂದ ಬಳಬಳನೆ ಹರಿದವು. ಹನುಮಂತನ ಮೈಯೆಲ್ಲವೂ ಒದ್ದೆಯಾಯಿತು (೪೦-೪೧). ಆಮೇಲೆ ಭರತನು ಪ್ರಿಯವಾರ್ತೆಯನ್ನು ಹೇಳಿದ ಹನುಮಂತನನ್ನು ನೋಡಿ "ಸೌಮ್ಯ, ನನ್ನಲ್ಲಿ ಇಷ್ಟು ಅನುಕಂಪೆಯನ್ನಿಟ್ಟು ಬಂದಿರುವೆಯಲ್ಲ, ನೀನು ಯಾರು? ದೇವತೆಯೊ ಮಾನವನೊ? ಈ ಪರಮಾನಂದದ ಸುದ್ದಿಯನ್ನು ಹೇಳಿದ

ಗವಾಂ ಶತಸಹಸ್ರಂ ಚ ಗ್ರಾಮಾಣಾಂ ಚ ಶತಂ ಪರಮ್ ।
ಸುಕುಂಡಲಾಃ ಶುಭಾಚಾರಾ ಭಾರ್ಯಾಃ ಕನ್ಯಾಶ್ಚ ಷೋಡಶ ॥ ೪೩

ಹೇಮವರ್ಣಾಃ ಸುನಾಸೋರೂಃ ಶಶಿಸೌಮ್ಯಾನನಾಃ ಸ್ತ್ರಿಯಃ ।
ಸರ್ವಾಭರಣಸಂಪನ್ನಾಃ ಸಂಪನ್ನಾಃ ಕುಲಜಾತಿಭಿಃ ॥ ೪೪

ನಿಶಮ್ಯ ರಾಮಾಗಮನಂ ನೃಪಾತ್ಮಜಃ
ಕಪಿಪ್ರವೀರಸ್ಯ ತದದ್ಭುತೋಪಮಮ್ ।
ಪ್ರಹರ್ಷಿತೋ ರಾಮದಿದೃಕ್ಷಯಾಭವತ್
ಪುನಶ್ಚ ಹರ್ಷಾದಿದಮಬ್ರವೀದ್ವಚಃ ॥ ೪೫

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಾವಿಂಶತ್ಯುತ್ತರಶತತಮಃ ಸರ್ಗಃ



ನಿನಗೆ ಯಾವ ಪಾರಿತೋಷಿಕವನ್ನೀಯಲಿ! (೪೨). ಒಂದು ಲಕ್ಷ ಗೋವುಗಳನ್ನೂ ನೂರು ಗ್ರಾಮಗಳನ್ನೂ ಕೊಡುವೆನು. ಕುಂಡಲಾಲಂಕೃತೆಯರೂ ಸದಾಚಾರಸಂಪನ್ನೆಯರೂ ಆದ ಹದಿನಾರು ಮಂದಿ ಕನ್ಯೆಯರನ್ನು ನಿನಗೆ ಕೊಟ್ಟು ಮದುವೆಮಾಡಿಸುವೆನು! ಬಂಗಾರದ ಮೈಬಣ್ಣದ ಚಂದ್ರಮುಖಿಯರಾದ ಸುಂದರಾಂಗಿಯರನ್ನು ಕೊಡಿಸುವೆನು! ಉತ್ತಮಕುಲಜಾತಿಪ್ರಸೂತರಾಗಿ ಸರ್ವಾಭರಣಭೂಷಿತರಾದ ತರುಣಿಯರನ್ನು ನಿನಗೆ ಧಾರೆಯೆರೆಯುವೆನು!" ಎಂದು ಉದ್ಗರಿಸಿದನು (೪೩-೪೪). ಆ ರಾಜಕುಮಾರನು ಶ್ರೀರಾಮಾಗಮನವೆಂಬ ಅಸದೃಶವಾದ ಪ್ರಿಯವೃತ್ತಾಂತವನ್ನು ಆ ಕಪಿವೀರನ ಬಾಯಿಂದ ಕೇಳಿ ಹರ್ಷೋಲ್ಲಸಿತನಾದನು. ಶ್ರೀರಾಮನನ್ನು ಸಂದರ್ಶಿಸುವೆನೆಂಬ ಆನಂದಸಂಭ್ರಮದಿಂದ ಮತ್ತೆ ಹೀಗೆಂದನು (೪೫).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತೆಂಟನೆಯ ಸರ್ಗ



## ಏಕೋನತ್ರಿಂಶದುತ್ತರಶತತಮಃ ಸರ್ಗಃ

### ಹನೂಮದ್ಭರತಸಂಭಾಷಣಮ್

ಬಹೂನಿ ನಾಮ ವರ್ಷಾಣಿ ಗತಸ್ಯ ಸುಮಹದ್ವನಮ್ ।
ಶೃಣೋಮ್ಯಹಂ ಪ್ರೀತಿಕರಂ ಮಮ ನಾಥಸ್ಯ ಕೀರ್ತನಮ್ ॥ ೧

ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ ।
ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ ॥ ೨

ರಾಘವಸ್ಯ ಹರೀಣಾಂ ಚ ಕಥಮಾಸೀತ್ ಸಮಾಗಮಃ ।
ಕಸ್ಮಿನ್ ದೇಶೇ ಕಿಮಾಶ್ರಿತ್ಯ ತತ್ತ್ವಮಾಖ್ಯಾಹಿ ಪೃಚ್ಛತಃ ॥ ೩

ಸ ಪೃಷ್ಟೋ ರಾಜಪುತ್ರೇಣ ಬೃಸ್ಯಾಂ ಸಮುಪವೇಶಿತಃ ।
ಆಚಚಕ್ಷೇ ತತಃ ಸರ್ವಂ ರಾಮಸ್ಯ ಚರಿತಂ ವನೇ ॥ ೪

## ಸರ್ಗ ೧೨೯

### ಭರತನು ಕೇಳಲಾಗಿ, ಶ್ರೀರಾಮನ ವನವಾಸಕಾಲದಲ್ಲಿ ನಡೆದ ವೃತ್ತಾಂತಗಳನ್ನು ಹನುಮಂತನು ತಿಳಿಸುವುದು.

ಭರತನು ಹನುಮಂತನನ್ನು ನೋಡಿ "ಸೌಮ್ಯ, ನನ್ನ ಅಣ್ಣನು ಘೋರಾರಣ್ಯವನ್ನು ಪ್ರವೇಶಿಸಿ ಬಹು ವರ್ಷಗಳು ಸಂದುಹೋದವು. ಇಷ್ಟು ದೀರ್ಘಕಾಲವಾದಮೇಲೆ ನನ್ನ ಸ್ವಾಮಿಯ ಕ್ಷೇಮವಾರ್ತೆಯನ್ನು–ಸಂತಸದ ಸುದ್ದಿಯನ್ನು–ಈಗ ಕೇಳುತ್ತಿದ್ದೇನೆ! (೧). ಆಹಾ! 'ಮನುಷ್ಯನು ಬದುಕಿದ್ದರೆ ನೂರು ವರ್ಷಗಳ ಮೇಲಾದರೂ ಒಂದುಸಲ ಆನಂದಪ್ರಸಂಗವು ಸಂಭವಿಸುವುದು' ಎಂಬ ನಾಣ್ಣುಡಿ ನೆನಪಾಗುತ್ತಿದೆ. ಎಷ್ಟು ಸತ್ಯವಾದ ಕಲ್ಯಾಣಕರವಾದ ನುಡಿ! ಮಿತ್ರ, ಶ್ರೀರಾಮನಿಗೂ ವಾನರರಿಗೂ ಸಖ್ಯವಾದದ್ದು ಹೇಗೆ? ಎಲ್ಲಿ ಏಕಾಗಿ ಆಯಿತು? ನಡೆದ ಸಂದರ್ಭವನ್ನು ತಿಳಿಸು" ಎಂದು ಕೇಳಿದನು (೨–೩). ಭರತನು ಹನುಮಂತನಿಗೆ ತಾಪಸಯೋಗ್ಯವಾದ ಒಂದು ಆಸನವನ್ನು ಕೊಟ್ಟು ಕುಳ್ಳಿರಿಸಿದನು ಹನುಮಂತನು ಆಸನದಲ್ಲಿ ಕುಳಿತು, ವನದಲ್ಲಿ ನಡೆದ

ಯಥಾ ಪ್ರವ್ರಾಜಿತೋ ರಾಮೋ ಮಾತುರ್ದತ್ತ್ವೋ ವರಸ್ತವ ।
ಯಥಾ ಚ ಪುತ್ರಶೋಕೇನ ರಾಜಾ ದಶರಥೋ ಮೃತಃ ॥ ೫

ಯಥಾ ದೂತೈಸ್ತ್ವಮಾನೀತಸ್ತೂರ್ಣಂ ರಾಜಗೃಹಾತ್ ಪ್ರಭೋ ।
ತ್ವಯಾಯೋಧ್ಯಾಂ ಪ್ರವಿಷ್ಟೇನ ಯಥಾ ರಾಜ್ಯಂ ನ ಚೇಪ್ಸಿತಮ್ ॥

ಚಿತ್ರಕೂಟಂ ಗಿರಿಂ ಗತ್ವಾ ರಾಜ್ಯೇನಾಮಿತ್ರಕರ್ಶನ ।
ನಿಮಂತ್ರಿತಸ್ತ್ವಯಾ ಭ್ರಾತಾ ಧರ್ಮಮಾಚರತಾ ಸತಾಮ್ ॥ ೭

ಸ್ಥಿತೇನ ರಾಜ್ಞೋ ವಚನೇ ಯಥಾ ರಾಜ್ಯಂ ವಿಸರ್ಜಿತಮ್ ।
ಆರ್ಯಸ್ಯ ಪಾದುಕೇ ಗೃಹ್ಯ ಯಥಾಸಿ ಪುನರಾಗತಃ ॥ ೮

ಸರ್ವಮೇತನ್ಮಹಾಬಾಹೋ ಯಥಾವದ್ವಿದಿತಂ ತವ ।
ತ್ವಯಿ ಪ್ರತಿಪ್ರಯಾತೇ ತು ಯದ್ವೃತ್ತಂ ತನ್ನಿಬೋಧ ಮೇ ॥ ೯

ಅಪಯಾತೇ ತ್ವಯಿ ತದಾ ಸಮುದ್ಭ್ರಾಂತಮೃಗದ್ವಿಜಮ್ ।
ಪರಿದ್ಯೂನಮಿವಾತ್ಯರ್ಥಂ ತದ್ವನಂ ಸಮುಪದ್ಯತ ॥ ೧೦

---

ಶ್ರೀರಾಮಚರಿತೆಯನ್ನು ಹೇಳಲಾರಂಭಿಸಿದನು (೪) : "ರಾಜಪುತ್ರ–ಭರತ, ಆರಂಭದ ಕಥೆ ನಿನಗೆ ಗೊತ್ತೇ ಇದೆ. ನಿನ್ನ ತಾಯಿಗೆ ವರವನ್ನು ಕೊಟ್ಟದ್ದು, ಅದರ ಪ್ರಕಾರ ಶ್ರೀರಾಮನನ್ನು ವನಕ್ಕೆ ಕಳಿಸಿದ್ದು, ಪುತ್ರಶೋಕದಿಂದ ದಶರಥಮಹಾರಾಜನ ಮರಣ, ದೂತರನ್ನು ಕಳಿಸಿ ರಾಜಗೃಹದಿಂದ ಶೀಘ್ರದಲ್ಲಿ ನಿನ್ನನ್ನು ಕರೆಸಿದ್ದು, ನೀನು ಅಯೋಧ್ಯೆಗೆ ಬಂದು ರಾಜ್ಯವನ್ನು ನಿರಾಕರಿಸಿದ್ದು—ಇದೆಲ್ಲವೂ ನಿನಗೆ ತಿಳಿದಿದೆ (೫–೬). ಅನಂತರ ನೀನು ಸಜ್ಜನರ ಧರ್ಮಮಾರ್ಗವನ್ನನುಸರಿಸಿ ಚಿತ್ರಕೂಟಗಿರಿಗೆ ಹೋಗಿ, ರಾಜ್ಯವನ್ನು ಸ್ವೀಕರಿಸಬೇಕೆಂದು ಅಣ್ಣನನ್ನು ಪ್ರಾರ್ಥಿಸಿಕೊಂಡಿದ್ದೀಯೆ. ಆದರೂ ಮಹಾರಾಜನಿಗೆ ಕೊಟ್ಟ ವಚನವನ್ನು ಪಾಲಿಸಬೇಕೆಂದು ಶ್ರೀರಾಮನು ರಾಜ್ಯವನ್ನು ಅಂಗೀಕರಿಸಲಿಲ್ಲ. ಆಮೇಲೆ ನೀನು ಅಣ್ಣನ ಪಾದುಕೆಗಳನ್ನು ತೆಗೆದುಕೊಂಡು ಇಲ್ಲಿಗೆ ಬಂದಿದ್ದೀಯೆ (೭–೮). ಇದೆಲ್ಲವೂ, ರಾಜಪುತ್ರ, ನಿನಗೆ ವಿದಿತವಾಗಿಯೇ ಇದೆ. ನೀನು ಚಿತ್ರಕೂಟಗಿರಿಯಿಂದ ಇತ್ತ ಬಂದಮೇಲೆ ಏನು ನಡೆಯಿತೆಂಬುದನ್ನು ಹೇಳುವೆನು, ಕೇಳು : ನೀನು ಹೊರಟುಬಂದಮೇಲೆ ಆ ಚಿತ್ರಕೂಟವನದಲ್ಲಿದ್ದ ಮೃಗಪಕ್ಷಿಗಳು ಹೆದರಿ

ತದ್ಧಸ್ತಿಮೃದಿತಂ ಘೋರಂ ಸಿಂಹವ್ಯಾಘ್ರಮೃಗಾಯುತಮ್ ।
ಪ್ರವಿವೇಶಾಥ ವಿಜನಂ ಸುಮಹದ್ದಂಡಕಾವನಮ್ ॥ ೧೧

ತೇಷಾಂ ಪುರಸ್ತಾದ್ಬಲವಾನ್ ಗಚ್ಛತಾಂ ಗಹನೇ ವನೇ ।
ನಿನದನ್ ಸುಮಹಾನಾದಂ ವಿರಾಧಃ ಪ್ರತ್ಯದೃಶ್ಯತ ॥ ೧೨

ತಮುತ್ಕ್ಷಿಪ್ಯ ಮಹಾನಾದಮೂರ್ಧ್ವಬಾಹುಮಧೋಮುಖಮ್ ।
ನಿಖಾತೇ ಪ್ರಕ್ಷಿಪಂತಿ ಸ್ಮ ನದಂತಮಿವ ಕುಂಜರಮ್ ॥ ೧೩

ತತ್ ಕೃತ್ವಾ ದುಷ್ಕರಂ ಕರ್ಮ ಭ್ರಾತರೌ ರಾಮಲಕ್ಷ್ಮಣೌ ।
ಸಾಯಾಹ್ನೇ ಶರಭಂಗಸ್ಯ ರಮ್ಯಮಾಶ್ರಮಮೀಯತುಃ ॥ ೧೪

ಶರಭಂಗೇ ದಿವಂ ಪ್ರಾಪ್ತೇ ರಾಮಃ ಸತ್ಯಪರಾಕ್ರಮಃ ।
ಅಭಿವಾದ್ಯ ಮುನೀನ್ ಸರ್ವಾನ್ ಜನಸ್ಥಾನಮುಪಾಗಮತ್ ॥ ೧೫

ತತಃ ಪಶ್ಚಾಚ್ಛೂರ್ಪಣಖಾ ರಾಮಪಾರ್ಶ್ವಮುಪಾಗತಾ ।
ತತೋ ರಾಮೇಣ ಸಂದಿಷ್ಟೋ ಲಕ್ಷ್ಮಣಃ ಸಹಸೋತ್ಥಿತಃ ॥ ೧೬

---

ಅತ್ತಿತ್ತ ಚದರಿದವು. ವನವು ಸೇನಾಸಂಚಾರದಿಂದ ಪೀಡಿತವಾಗಿ ಹಾಳು ಬಿದ್ದಂತೆ ತೋರಿತು (೯–೧೦). ಆದ್ದರಿಂದ ಶ್ರೀರಾಮನು, ಕಾಡಾನೆಗಳ ತುಳಿತದಿಂದಲೂ ಸಿಂಹವ್ಯಾಘ್ರಾದಿ ಮೃಗಗಳ ಸಂಚಾರದಿಂದಲೂ ಆಕುಲವಾಗಿ ನಿರ್ಜನವಾಗಿದ್ದ ದಂಡಕಾರಣ್ಯವನ್ನು ಪ್ರವೇಶಿಸಿದನು. ಆ ಮೂವರೂ ಅರಣ್ಯದಲ್ಲಿ ಹೋಗುತ್ತಿರುವಾಗ, ಭೀಕರವಾಗಿ ಗರ್ಜಿಸುತ್ತಿದ್ದ ಬಲಾಢ್ಯನಾದ ವಿರಾಧನೆಂಬ ರಾಕ್ಷಸನು ಗೋಚರಿಸಿದನು (೧೧–೧೨). ಮತ್ತಮಾತಂಗದಂತೆ ಗಟ್ಟಿಯಾಗಿ ಕೂಗುತ್ತ ದಾರಿಯನ್ನಡ್ಡಗಟ್ಟಿದ ಆ ರಾಕ್ಷಸನನ್ನು, ಶ್ರೀರಾಮಲಕ್ಷ್ಮಣರು ಕೈಮೇಲಾಗಿ ತಲೆಕೆಳಗಾಗಿ ಹಿಡಿದೆತ್ತಿ ಒಂದು ಹಳ್ಳದಲ್ಲಿ ಹೂತುಬಿಟ್ಟರು. ಅಣ್ಣತಮ್ಮಂದಿರು ಆ ಸಾಹಸಕೃತ್ಯವನ್ನು ಮಾಡಿ, ಸಾಯಂಕಾಲದ ಹೊತ್ತಿಗೆ ಶರಭಂಗಮುನಿಗಳ ರಮಣೀಯವಾದ ಆಶ್ರಮವನ್ನು ಸೇರಿದರು (೧೩–೧೪). ಶರಭಂಗಮುನಿಗಳು ಶ್ರೀರಾಮನನ್ನು ಸಂದರ್ಶಿಸಿ, ತಮ್ಮ ದೇಹವನ್ನು ತ್ಯಜಿಸಿ ಸ್ವರ್ಗವನ್ನಡರಿದರು. ಅನಂತರ ಸತ್ಯಪರಾಕ್ರಮನಾದ ರಾಘವನು ಆಶ್ರಮವಾಸಿಗಳಾದ ಋಷಿಗಳೆಲ್ಲರನ್ನೂ ಕಂಡು ವಂದಿಸಿ ಜನಸ್ಥಾನಕ್ಕೆ ಹೋದನು.

ಪ್ರಗೃಹ್ಯ ಖಡ್ಗಂ ಚಿಚ್ಛೇದ ಕರ್ಣನಾಸಂ ಮಹಾಬಲಃ ।
ಚತುರ್ದಶ ಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಮ್ ॥ ೧೭

ಹತಾನಿ ವಸತಾ ತತ್ರ ರಾಘವೇಣ ಮಹಾತ್ಮನಾ ।
ಏಕೇನ ಸಹ ಸಂಗಮ್ಯ ರಣೇ ರಾಮೇಣ ಸಂಗತಾಃ ॥ ೧೮

ಅಹ್ನಶ್ಚತುರ್ಥಭಾಗೇನ ನಿಃಶೇಷಾ ರಾಕ್ಷಸಾಃ ಕೃತಾಃ ।
ಮಹಾಬಲಾ ಮಹಾವೀರ್ಯಾಸ್ತಪಸೋ ವಿಘ್ನಕಾರಿಣಃ ॥ ೧೯

ನಿಹತಾ ರಾಘವೇಣಾಜೌ ದಂಡಕಾರಣ್ಯವಾಸಿನಃ ।
ರಾಕ್ಷಸಾಶ್ಚ ವಿನಿಷ್ಪಿಷ್ಟಾಃ ಖರಶ್ಚ ನಿಹತೋ ರಣೇ ॥ ೨೦

ತತಸ್ತೇನಾರ್ದಿತಾ ಬಾಲಾ ರಾವಣಂ ಸಮುಪಾಗತಾ ।
ರಾವಣಾನುಚರೋ ಘೋರೋ ಮಾರೀಚೋ ನಾಮ ರಾಕ್ಷಸಃ ॥

---

ಆ ಮೂವರೂ ಜನಸ್ಥಾನದಲ್ಲಿರುವಾಗ, ಶೂರ್ಪಣಖಿಯೆಂಬ ರಾಕ್ಷಸಿಯೊಬ್ಬಳು ಶ್ರೀರಾಮನ ಬಳಿಗೆ ಬಂದಳು (೧೫–೧೬). (ಅವಳ ದುಶ್ಚೇಷ್ಟೆಯಿಂದ ನೊಂದ) ಶ್ರೀರಾಮನ ಸೂಚನೆಯಂತೆ ಲಕ್ಷ್ಮಣನು ತಟ್ಟನೆ ಮುಂದೆ ಬಂದು ಖಡ್ಗವನ್ನು ಹಿರಿದು, ಶೂರ್ಪಣಖಿಯ ಕಿವಿಮೂಗುಗಳನ್ನು ಕತ್ತರಿಸಿಬಿಟ್ಟನು. ಮಹಾತ್ಮನಾದ ರಾಘವನು ಜನಸ್ಥಾನದಲ್ಲಿರುವಾಗ ಭೀಮಕರ್ಮಿಗಳಾದ ಹದಿನಾಲ್ಕುಸಾವಿರ ರಾಕ್ಷಸರನ್ನು ಸಂಹರಿಸಿದನು (೧೭–೧೮). ಆ ರಾಕ್ಷಸರೆಲ್ಲರೂ ಒಟ್ಟುಗೂಡಿ ಶ್ರೀರಾಮನಮೇಲೆ ಯುದ್ಧಕ್ಕೆ ಬಂದಿದ್ದರು. ಹಗಲಿನ ನಾಲ್ಕನೆಯ ಒಂದಂಶದ ಕಾಲದಲ್ಲಿ* ಶ್ರೀರಾಮನು ಸಮಸ್ತ ರಾಕ್ಷಸರನ್ನೂ ನಿಶ್ಶೇಷವಾಗಿ ವಧಿಸಿದನು. ಬಲಾಢ್ಯರೂ ಮಹಾಪರಾಕ್ರಮಿಗಳೂ ಆದ ರಾಕ್ಷಸರು ಋಷಿಗಳ ತಪಸ್ಸಿಗೆ ವಿಘ್ನವನ್ನುಂಟುಮಾಡುತ್ತ ದಂಡಕಾರಣ್ಯದಲ್ಲಿ ನೆಲೆಸಿದ್ದರು. ರಾಘವನೊಬ್ಬನೇ ಆ ರಾಕ್ಷಸರನ್ನೂ ಅವರಿಗೆ ನಾಯಕನಾದ ಖರನನ್ನೂ ರಣರಂಗದಲ್ಲಿದುರಿಸಿ ಕೊಂದುಹಾಕಿದನು (೧೯–೨೦). ಆಮೇಲೆ ಮೂರ್ಖಳಾದ ಶೂರ್ಪಣಖಿಯು ಖಿನ್ನಳಾಗಿ ತನ್ನ ಅಣ್ಣನಾದ ರಾವಣನ ಬಳಿಗೆ ಹೋಗಿ

---

* 'ಅರ್ಧಾಧಿಕಮುಹೂರ್ತೇನ....' ಎಂದು ಅರಣ್ಯಕಾಂಡದಲ್ಲಿ ಹೇಳಿದೆ (ಸರ್ಗ ೩೦, ಶ್ಲೋಕ ೩೪). 'ಅತ್ಯಲ್ಪಕಾಲದಲ್ಲಿ' ಎಂಬುದು ಮುಖ್ಯತಾತ್ಪರ್ಯವಾದ್ದರಿಂದ ವಿರೋಧವೇನೂ ಇಲ್ಲ.

ಲೋಭಯಾಮಾಸ ವೈದೇಹೀಂ ಭೂತ್ವಾ ರತ್ನಮಯೋ ಮೃಗಃ ।
ಅಥೈನಮಬ್ರವೀದ್ರಾಮಂ ವೈದೇಹೀ ಗೃಹ್ಯತಾಮಿತಿ ॥ ೨೨

ಅಹೋ ಮನೋಹರಃ ಕಾಂತ ಆಶ್ರಮೋ ನೋ ಭವಿಷ್ಯತಿ ।
ತತೋ ರಾಮೋ ಧನುಷ್ಪಾಣಿರ್ಧಾವಂತಮನುಧಾವತಿ ॥ ೨೩

ಸ ತಂ ಜಘಾನ ಧಾವಂತಂ ಶರೇಣಾನತಪರ್ವಣಾ ।
ಅಥ ಸೌಮ್ಯ ದಶಗ್ರೀವೋ ಮೃಗಂ ಯಾತೇ ತು ರಾಘವೇ ॥ ೨೪

ಲಕ್ಷ್ಮಣೇ ಚಾಪಿ ನಿಷ್ಕ್ರಾಂತೇ ಪ್ರವಿವೇಶಾಶ್ರಮಂ ತದಾ ।
ಜಗ್ರಾಹ ತರಸಾ ಸೀತಾಂ ಗ್ರಹಃ ಖೇ ರೋಹಿಣೀಮಿವ ॥ ೨೫

ತ್ರಾತುಕಾಮಂ ತತೋ ಯುದ್ಧೇ ಹತ್ವಾ ಗೃಧ್ರಂ ಜಟಾಯುಷಮ್ ।
ಪ್ರಗೃಹ್ಯ ಸೀತಾಂ ಸಹಸಾ ಜಗಾಮಾಶು ಸ ರಾವಣಃ ॥ ೨೬

---

ಮೊರೆಯಿಟ್ಟಳು. ಆಗ ರಾವಣನ ಪ್ರೇರಣೆಯಿಂದ, ಮಾರೀಚನೆಂಬ ಭಯಂಕರನಾದ ರಾಕ್ಷಸನೊಬ್ಬನು ಮಾಯಾಬಲದಿಂದ ರತ್ನಮಯವಾದ ಜಿಂಕೆಯ ರೂಪವನ್ನು ಧರಿಸಿ ಬಂದು, ವೈದೇಹಿಗೆ ಆಸೆಯನ್ನು ಹುಟ್ಟಿಸಿದನು. ಅವಳು ಆ ಜಿಂಕೆಯನ್ನು ಹಿಡಿದುಕೊಡಬೇಕೆಂದು ಶ್ರೀರಾಮನನ್ನು ಪ್ರಾರ್ಥಿಸಿದಳು (೨೧-೨೨) ಅವಳು ಶ್ರೀರಾಮನಿಗೆ "ಕಾಂತ, ಎಷ್ಟು ಸುಂದರವಾಗಿದೆ ಈ ಜಿಂಕೆ! ಅಹಾ! ಇದನ್ನು ಹಿಡಿದು ತಂದರೆ ನಮ್ಮ ಆಶ್ರಮಕ್ಕೆ ಒಂದು ಶೋಭೆಯುಂಟಾಗುತ್ತದೆ" ಎಂದಳು. ಆಗ ರಾಘವನು ಧನುಷ್ಪಾಣಿಯಾಗಿ ಹೊರಟು, ಮುಂದೆ ಮುಂದೆ ಓಡುತ್ತಿದ್ದ ಆ ಮೃಗವನ್ನು ಬೆನ್ನಟ್ಟಿಹೋದನು (೨೩). ಕೈಗೆ ಸಿಕ್ಕದೆ ಓಡಿ ಓಡಿ ಹೋಗುತ್ತಿದ್ದ ಆ ಜಿಂಕೆಯನ್ನು ಶ್ರೀರಾಮನು ಒಂದು ಕೂರಂಬಿನಿಂದ ಕೊಂದುಹಾಕಿದನು. ಸೌಮ್ಯ-ಭರತ, ಇತ್ತ ಲಕ್ಷ್ಮಣನೂ ಶ್ರೀರಾಮನನ್ನು ಹುಡುಕುವುದಕ್ಕಾಗಿ ಆಶ್ರಮದಿಂದ ಹೊರಟುಹೋದನು. ಆ ಸಮಯದಲ್ಲಿ ದಶಕಂಠನಾದ ರಾವಣನು ಆಶ್ರಮವನ್ನು ಪ್ರವೇಶಿಸಿ, ಅಂಗಾರಕನು ಆಕಾಶದಲ್ಲಿ ರೋಹಿಣಿಯನ್ನು ತುಡುಕುವಂತೆ ಸೀತಾದೇವಿಯನ್ನು ತುಡುಕಿ, ಬಲಾತ್ಕಾರದಿಂದ ಅಪಹರಿಸಿದನು (೨೪-೨೫). ದಾರಿಯಲ್ಲಿ ಜಟಾಯುವೆಂಬ ಗೃಧ್ರರಾಜನು ಜಾನಕಿಯನ್ನು ರಕ್ಷಿಸುವುದಕ್ಕಾಗಿ ರಾವಣನನ್ನು ಅಡ್ಡಗಟ್ಟಿದನು.

ತತಸ್ತ್ವದ್ಭುತಸಂಕಾಶಾಃ ಸ್ಥಿತಾಃ ಪರ್ವತಮೂರ್ಧನಿ ।
ಸೀತಾಂ ಗೃಹೀತ್ವಾ ಗಚ್ಛಂತಂ ವಾನರಾಃ ಪರ್ವತೋಪಮಾಃ ॥ ೨೭

ದದೃಶುರ್ವಿಸ್ಮಿತಾಸ್ತತ್ರ ರಾವಣಂ ರಾಕ್ಷಸಾಧಿಪಮ್ ।
ಪ್ರವಿವೇಶ ತತೋ ಲಂಕಾಂ ರಾವಣೋ ಲೋಕರಾವಣಃ ॥ ೨೮

ತಾಂ ಸುವರ್ಣಪರಿಕ್ರಾಂತೇ ಶುಭೇ ಮಹತಿ ವೇಶ್ಮನಿ ।
ಪ್ರವೇಶ್ಯ ಮೈಥಿಲೀಂ ವಾಕ್ಯೈಃ ಸಾಂತ್ವಯಾಮಾಸ ರಾವಣಃ ॥ ೨೯

ತೃಣವದ್ಭಾಷಿತಂ ತಸ್ಯ ತಂ ಚ ನೈರ್ಋತಪುಂಗವಮ್ ।
ಅಚಿಂತಯಂತೀ ವೈದೇಹೀ ಅಶೋಕವನಿಕಾಂ ಗತಾ ॥ ೩೦

ನ್ಯವರ್ತತ ತತೋ ರಾಮೋ ಮೃಗಂ ಹತ್ವಾ ಮಹಾವನೇ ।
ನಿವರ್ತಮಾನಃ ಕಾಕುತ್ಸ್ಥೋ ದೃಷ್ಟ್ವಾ ಗೃಧ್ರಂ ಪ್ರವಿವ್ಯಥೇ ॥ ೩೧

ಗೃಧ್ರಂ ಹತಂ ತತೋ ದಗ್ಧ್ವಾ ರಾಮಃ ಪ್ರಿಯಸಖಂ ಪಿತುಃ ।
ಮಾರ್ಗಮಾಣಸ್ತು ವೈದೇಹೀಂ ರಾಘವಃ ಸಹಲಕ್ಷ್ಮಣಃ ॥ ೩೨

---

ಆದರೆ ರಾವಣನು ಯುದ್ಧದಲ್ಲಿ ಜಟಾಯುವನ್ನು ಸಂಹರಿಸಿ, ಸೀತಾದೇವಿಯನ್ನು ಎತ್ತಿಕೊಂಡು ವೇಗವಾಗಿ ಗಗನಮಾರ್ಗದಲ್ಲಿ ಸಾಗಿದನು (೨೬). ಆಗ ಋಷ್ಯಮೂಕಗಿರಿಯ ಶಿಖರದಲ್ಲಿ ಕುಳಿತಿದ್ದ ಆಶ್ಚರ್ಯಸ್ವರೂಪರೂ ಪರ್ವತಸಂಕಾಶರೂ ಆದ ಕೆಲವು ವಾನರರು, ಸೀತಾದೇವಿಯನ್ನು ಅಪಹರಿಸಿಕೊಂಡು ಹೋಗುತ್ತಿದ್ದ ರಾವಣನನ್ನು ವಿಸ್ಮಯದಿಂದ ನೋಡಿದರು (೨೭). ಲೋಕರಾವಣನಾದ ರಾವಣನು ಲಂಕೆಗೆ ಹೋಗಿ ಸುವರ್ಣಪರಿಷ್ಕಾರಗಳಿಂದ ರಮ್ಯವಾದ ಭವ್ಯಮಂದಿರದಲ್ಲಿ ಮೈಥಿಲಿಯನ್ನಿರಿಸಿ, ವಿವಿಧ ಸಾಂತ್ವವಚನಗಳಿಂದ ಅವಳನ್ನು ವಶಪಡಿಸಿಕೊಳ್ಳಲು ಯತ್ನಿಸಿದನು. ಆದರೆ ವೈದೇಹಿಯು ಆ ರಾಕ್ಷಸರಾಜನನ್ನು ಲೆಕ್ಕಿಸದೆ, ಅವನ ನುಡಿಯನ್ನು ಹುಲ್ಲಿನಂತೆ ಹಗುರವಾಗಿ ಕಂಡು ಧಿಕ್ಕರಿಸಿದಳು. ರಾವಣನು ಅವಳನ್ನು ಅಶೋಕವನದಲ್ಲಿ ಇರಿಸಿದನು (೨೮-೩೦). ಇತ್ತಲಾಗಿ ಶ್ರೀರಾಮನು ಆ ಮಾಯಾಮೃಗವನ್ನು ವಧಿಸಿ ಆಶ್ರಮಕ್ಕೆ ಹಿಂದಿರುಗಲು ಸೀತೆ ಇರಲಿಲ್ಲ. ಆತನು ಲಕ್ಷ್ಮಣಸಮೇತನಾಗಿ ವನದಲ್ಲಿ ವೈದೇಹಿಯನ್ನರಸುತ್ತ ಬರಲು, ಜಟಾಯುವೆಂಬ ಗೃಧ್ರರಾಜನು ಹತನಾಗಿ ಬಿದ್ದಿರುವುದು ಗೋಚರಿಸಿತು. ಜಟಾಯುವು ನಿಮ್ಮ ತಂದೆಯಾದ ದಶರಥಮಹಾರಾಜನಿಗೆ ಆಪ್ತಮಿತ್ರ

ಗೋದಾವರೀಮನ್ವಚರದ್ವನೋದ್ದೇಶಾಂಶ್ಚ ಪುಷ್ಪಿತಾನ್ ।
ಆಸೇದತುರ್ಮಹಾರಣ್ಯೇ ಕಬಂಧಂ ನಾಮ ರಾಕ್ಷಸಮ್ ॥ ೩೩

ತತಃ ಕಬಂಧವಚನಾದ್ರಾಮಃ ಸತ್ಯಪರಾಕ್ರಮಃ ।
ಋಶ್ಯಮೂಕಂ ಗಿರಿಂ ಗತ್ವಾ ಸುಗ್ರೀವೇಣ ಸಮಾಗತಃ ॥ ೩೪

ತಯೋಃ ಸಮಾಗಮಃ ಪೂರ್ವಂ ಪ್ರೀತ್ಯಾ ಹಾರ್ದೋ ವ್ಯಜಾಯತ ।
ಭ್ರಾತ್ರಾ ನಿರಸ್ತಃ ಕ್ರುದ್ಧೇನ ಸುಗ್ರೀವೋ ವಾಲಿನಾ ಪುರಾ ॥ ೩೫

ಇತರೇತರಸಂವಾದಾತ್ ಪ್ರಗಾಢಃ ಪ್ರಣಯಸ್ತಯೋಃ ।
ರಾಮಸ್ಯ ಬಾಹುವೀರ್ಯೇಣ ಸ್ವರಾಜ್ಯಂ ಪ್ರತ್ಯಪಾದಯತ್ ॥ ೩೬

ವಾಲಿನಂ ಸಮರೇ ಹತ್ವಾ ಮಹಾಕಾಯಂ ಮಹಾಬಲಮ್ ।
ಸುಗ್ರೀವಃ ಸ್ಥಾಪಿತೋ ರಾಜ್ಯೇ ಸಹಿತಃ ಸರ್ವವಾನರೈಃ ॥ ೩೭

---

ನಾಗಿದ್ದನಂತೆ. ಅವನ ದುಃಸ್ಥಿತಿಯನ್ನು ಕಂಡು ಕಾಕುತ್ಸ್ಥನು ಬಹಳ ದುಃಖಿಸಿ, ಅವನಿಗೆ ಅಗ್ನಿಸಂಸ್ಕಾರವನ್ನು ಮಾಡಿದನು (೩೧-೩೨). ಅನಂತರ ಶ್ರೀರಾಮಲಕ್ಷ್ಮಣರಿಬ್ಬರೂ ಗೋದಾವರೀತೀರದ ಕುಸುಮಿತ ಕಾನನಗಳಲ್ಲಿ ವೈದೇಹಿಯನ್ನು ಅನ್ವೇಷಿಸುತ್ತ ಮಹಾರಣ್ಯದಲ್ಲಿ ಬರುತ್ತಿರಲು, ಕಬಂಧ ನೆಂಬ ರಾಕ್ಷಸನೊಬ್ಬನು ಇವರಿಗೆ ಅಡ್ಡಲಾದನು. ಕಡೆಗೆ ಆ ರಾಕ್ಷಸನ ಸೂಚನೆಯಂತೆ ಸತ್ಯಪರಾಕ್ರಮನಾದ ರಾಘವನು ಋಷ್ಯಮೂಕಗಿರಿಗೆ ಬಂದು ಸುಗ್ರೀವನನ್ನು ನಂದರ್ಶಿಸಿದನು (೩೩-೩೪). ಅವರೀರ್ವರ ಸಮಾಗಮವು ಪ್ರೀತಿಪೂರ್ವಕವಾಗಿ ಹಾರ್ದಿಕವಾಗಿತ್ತು. ಸುಗ್ರೀವನ ಅಣ್ಣನು ಕಪಿರಾಜನಾದ ವಾಲಿ. ಕಾರಣಾಂತರದಿಂದ ವಾಲಿಯು ಕ್ರುದ್ಧ ನಾಗಿ ಸುಗ್ರೀವನನ್ನು ರಾಜ್ಯದಿಂದ ಹೊರಡಿಸಿದ್ದನು. ಶ್ರೀರಾಮನೂ ಸುಗ್ರೀವನೂ ತಮ್ಮ ತಮ್ಮ ಸುಖದುಃಖಗಳನ್ನು ಹೇಳಿಕೊಂಡಮೇಲೆ, ಅವರಿಬ್ಬರಿಗೂ ಸ್ನೇಹವು ಗಾಢವಾಯಿತು. ಶ್ರೀರಾಮನ ಭುಜಬಲದಿಂದ ಸುಗ್ರೀವನಿಗೆ ಕಿಷ್ಕಿಂಧಾರಾಜ್ಯವು ದೊರೆಯಿತು (೩೫-೩೬). ಮಹಾ ಕಾಯನೂ ಮಹಾಬಲನೂ ಆದ ವಾಲಿಯನ್ನು ರಾಘವನು ಸಂಹರಿಸಿ, ಸುಗ್ರೀವನನ್ನು ಕಿಷ್ಕಿಂಧಾರಾಜ್ಯದಲ್ಲಿ ಸ್ಥಾಪಿಸಿದನು. ಸಕಲ ವಾನರರೂ

ರಾಮಾಯ ಪ್ರತಿಜಾನೀತೇ ರಾಜಪುತ್ರ್ಯಾಶ್ಚ ಮಾರ್ಗಣಮ್ ।
ಆದಿಷ್ಟಾ ವಾನರೇಂದ್ರೇಣ ಸುಗ್ರೀವೇಣ ಮಹಾತ್ಮನಾ ॥ ೩೮

ದಶ ಕೋಟ್ಯಃ ಪ್ಲವಂಗಾನಾಂ ಸರ್ವಾಃ ಪ್ರಸ್ಥಾಪಿತಾ ದಿಶಃ ।
ತೇಷಾಂ ನೋ ವಿಪ್ರಕೃಷ್ಟಾನಾಂ ವಿಂಧ್ಯೇ ಪರ್ವತಸತ್ತಮೇ ॥ ೩೯

ಭೃಶಂ ಶೋಕಾಭಿತಪ್ತಾನಾಂ ಮಹಾನ್ ಕಾಲೋಽತ್ಯವರ್ತತ ।
ಭ್ರಾತಾ ತು ಗೃಧ್ರರಾಜಸ್ಯ ಸಂಪಾತಿರ್ನಾಮ ವೀರ್ಯವಾನ್ ॥ ೪೦

ಸಮಾಖ್ಯಾತಿ ಸ್ಮ ವಸತಿಂ ಸೀತಾಯಾ ರಾವಣಾಲಯೇ ।
ಸೋಽಹಂ ಶೋಕಪರೀತಾನಾಂ ದುಃಖಂ ತಜ್ಜ್ಞಾತಿನಾಂ ನುದನ್ ॥

ಆತ್ಮವೀರ್ಯಂ ಸಮಾಸ್ಥಾಯ ಯೋಜನಾನಾಂ ಶತಂ ಪ್ಲುತಃ ।
ತತ್ರಾಹಮೇಕಾಮದ್ರಾಕ್ಷಮಶೋಕವನಿಕಾಂ ಗತಾಮ್ ॥ ೪೨

---

ಸುಗ್ರೀವನ ಅಧೀನರಾದರು. ಸುಗ್ರೀವನು ರಾಜಪುತ್ರಿಯಾದ ಜಾನಕಿಯನ್ನು ಹುಡುಕಿಸುವೆನೆಂದು ಶ್ರೀರಾಮನಿಗೆ ಮಾತು ಕೊಟ್ಟಿದ್ದನು. ಅದರ ಪ್ರಕಾರ ಆ ವಾನರೇಂದ್ರನು ಸೀತಾನ್ವೇಷಣೆಗಾಗಿ ಹತ್ತುಕೋಟಿ ವಾನರರನ್ನು ಸಕಲ ದಿಕ್ಕುಗಳಿಗೂ ಕಳಿಸಿದನು (೩೭-೩೮). ಹೀಗೆ ಅನ್ವೇಷಿಸುತ್ತ ಬಹುದೂರ ಹೋದ ನಮಗೆ ವಿಂಧ್ಯಪರ್ವತಶ್ರೇಣಿಯಲ್ಲಿ* ಬಹುಕಾಲ ಕಳೆಯಿತು. ಮುಂದೇನು ಮಾಡುವುದೆಂದು ನಾವು ಚಿಂತಾಗ್ರಸ್ತರಾದೆವು. ಆಗ ಜಟಾಯುವಿನ ಅಣ್ಣನಾದ ಸಂಪಾತಿಯೆಂಬ ವೀರನು, ರಾವಣನ ವಾಸಸ್ಥಾನವಾದ ಲಂಕೆಯಲ್ಲಿ ಸೀತಾದೇವಿಯು ಇರುವಳೆಂದು ತಿಳಿಸಿದನು (೩೯-೪೦). ಆಗ ಶೋಕಾರ್ತರಾಗಿದ್ದ ನನ್ನ ಬಂಧುಗಳ ಚಿಂತೆಯನ್ನು ಪರಿಹರಿಸುವುದಕ್ಕಾಗಿ, ನಾನು ನನ್ನ ಬಲವನ್ನೇ ಅವಲಂಬಿಸಿ ನೂರು ಯೋಜನದಷ್ಟು ವಿಶಾಲವಾಗಿದ್ದ ಸಮುದ್ರವನ್ನು ಲಂಘಿಸಿ ಲಂಕೆಯನ್ನು ಸೇರಿದೆನು. ಅಲ್ಲಿ ವೈದೇಹಿಯನ್ನು ಅನ್ವೇಷಿಸುತ್ತ, ಅಶೋಕವನದಲ್ಲಿ ಏಕಾಕಿನಿಯಾಗಿ ಶೋಕಸಂತಪ್ತಳಾಗಿದ್ದ ಆ ದೇವಿಯನ್ನು ಕಂಡೆನು

---

* ಭರತಖಂಡದ ದಕ್ಷಿಣಭಾಗವೆಲ್ಲವೂ ವಿಂಧ್ಯಪರ್ವತಶ್ರೇಣಿಗೆ ಸೇರಿದ್ದೆಂದು ರಾಮಾಯಣದಲ್ಲಿ ವ್ಯವಹರಿಸಲಾಗಿದೆ. ಕಿಷ್ಕಿಂಧಾಕಾಂಡದ ೫೩ನೆಯ ಸರ್ಗವನ್ನೂ ಅಲ್ಲಿರುವ ಅಡಿಟಿಪ್ಪಣಿಯನ್ನೂ ನೋಡಿ (ಪು. ೪೦೮).

ಕೌಶೇಯವಸ್ತ್ರಾಂ ಮಲಿನಾಂ ನಿರಾನಂದಾಂ ದೃಢವ್ರತಾಮ್ ।
ತಯಾ ಸಮೇತ್ಯ ವಿಧಿವತ್ ಪೃಷ್ಟ್ವಾ ಸರ್ವಮನಿಂದಿತಾಮ್ ॥ ೪೩

ಅಭಿಜ್ಞಾನಂ ಮಯಾ ದತ್ತಂ ರಾಮನಾಮಾಂಗುಲೀಯಕಮ್ ।
ಅಭಿಜ್ಞಾನಂ ಮಣಿಂ ಲಬ್ಧ್ವಾ ಚರಿತಾರ್ಥೋಽಹಮಾಗತಃ ॥ ೪೪

ಮಯಾ ಚ ಪುನರಾಗಮ್ಯ ರಾಮಸ್ಯಾಕ್ಲಿಷ್ಟಕರ್ಮಣಃ ।
ಅಭಿಜ್ಞಾನಂ ಮಯಾ ದತ್ತಮರ್ಚಿಷ್ಮಾನ್ ಸ ಮಹಾಮಣಿಃ ॥ ೪೫

ಶ್ರುತ್ವಾ ತು ಮೈಥಿಲೀಂ ಹೃಷ್ಟಸ್ತ್ವಾಶಶಂಸೇ ಚ ಜೀವಿತಮ್ ।
ಜೀವಿತಾಂತಮನುಪ್ರಾಪ್ತಃ ಪೀತ್ವಾಮೃತಮಿವಾತುರಃ ॥ ೪೬

ಉದ್ಯೋಜಯಿಷ್ಯನ್ನುದ್ಯೋಗಂ ದಧ್ರೇ ಕಾಮಂ ವಧೇ ಮನಃ ।
ಜಿಘಾಂಸುರಿವ ಲೋಕಾಂತೇ ಸರ್ವಾನ್ ಲೋಕಾನ್ ವಿಭಾವಸುಃ ॥

---

(೪೧-೪೨). ಆ ಸಾಧ್ವಿಯು ಹಿಂದೆ ಧರಿಸಿದ್ದ ಕೌಶೇಯವಸ್ತ್ರವನ್ನೇ ಮೈಗೆ ಸುತ್ತಿಕೊಂಡು ಮಲಿನಗಾತ್ರಳಾಗಿ ಸಂತೋಷದ ಲೇಶವೂ ಇಲ್ಲದಿದ್ದಳು. ಸದಾ ಶ್ರೀರಾಮನನ್ನೇ ನಿಷ್ಠೆಯಿಂದ ಧ್ಯಾನಿಸುತ್ತಿದ್ದಳು. ಆ ಮಂಗಳಾಂಗಿಯನ್ನು ನಾನು ಕ್ರಮವರಿತು ಸಂದರ್ಶಿಸಿ, ಅವಳ ವೃತ್ತಾಂತವನ್ನು ಕೇಳಿ ತಿಳಿದುಕೊಂಡೆನು (೪೩). ಅನಂತರ ರಾಘವನು ನನಗೆ ಕೊಟ್ಟಿದ್ದ ರಾಮನಾಮಾಂಕಿತವಾದ ಅಂಗುಲೀಯಕವನ್ನು ಗುರುತಿಗಾಗಿ ವೈದೇಹಿಗೆ ಕೊಟ್ಟೆನು. ಚೂಡಾಮಣಿಯೆಂಬ ಅಭಿಜ್ಞಾನವನ್ನು ಅವಳಿಂದ ನಾನು ಪಡೆದು ಕೃತಕೃತ್ಯನಾಗಿ, ಸಮುದ್ರವನ್ನು ಲಂಘಿಸಿ ಹಿಂದಕ್ಕೆ ಬಂದೆನು. ಥಳಥಳಿಸುತ್ತಿದ್ದ ಆ ಮಹಾರತ್ನವನ್ನು ಶ್ರೀರಾಮನಿಗೆ ಒಪ್ಪಿಸಿದೆನು (೪೪-೪೫). ಮೈಥಿಲಿಯ ವೃತ್ತಾಂತವನ್ನು ಕೇಳಿದಮೇಲೆ, ಭರತ, ಶ್ರೀರಾಮನು ಸಂತುಷ್ಟನಾಗಿ ತನ್ನ ಜೀವಿತದಲ್ಲಿ ಮತ್ತೆ ಆಸೆಯನ್ನಿಟ್ಟುಕೊಂಡನು. ಪ್ರಾಣೋತ್ಕ್ರಮಣಕಾಲದಲ್ಲಿರುವ ರೋಗಿಗೆ ಅಮೃತವನ್ನು ಕುಡಿಸಿದಂತಾಗಿ, ರಾಘವನಿಗೆ ಮತ್ತೆ ಚೈತನ್ಯವು ತಲೆದೋರಿತು (೪೬). ರಾವಣನನ್ನು ವಧಿಸಬೇಕೆಂದು ನಿಶ್ಚಯಿಸಿ, ಸಮರೋದ್ಯೋಗವನ್ನಾರಂಭಿಸಿದನು. ಪ್ರಳಯಕಾಲದಲ್ಲಿ ಸರ್ವಲೋಕಗಳನ್ನು ವಿಧ್ವಂಸಗೊಳಿಸಲು

ತತಃ ಸಮುದ್ರಮಾಸಾದ್ಯ ನಲಂ ಸೇತುಮಕಾರಯತ್ ।
ಅತರತ್ ಕಪಿವೀರಾಣಾಂ ವಾಹಿನೀ ತೇನ ಸೇತುನಾ ॥ ೪೮

ಪ್ರಹಸ್ತಮವಧೀನ್ನೀಲಃ ಕುಂಭಕರ್ಣಂ ತು ರಾಘವಃ ।
ಲಕ್ಷ್ಮಣೋ ರಾವಣಸುತಂ ಸ್ವಯಂ ರಾಮಸ್ತು ರಾವಣಮ್ ॥ ೪೯

ಸ ಶಕ್ರೇಣ ಸಮಾಗಮ್ಯ ಯಮೇನ ವರುಣೇನ ಚ ।
ಮಹೇಶ್ವರಸ್ವಯಂಭೂಭ್ಯಾಂ ತಥಾ ದಶರಥೇನ ಚ ॥ ೫೦

ತೈಶ್ಚ ದತ್ತವರಃ ಶ್ರೀಮಾನೃಷಿಭಿಶ್ಚ ಸಮಾಗತಃ ।
ಸುರರ್ಷಿಭಿಶ್ಚ ಕಾಕುತ್ಸ್ಥೋ ವರಾನ್ ಲೇಭೇ ಪರಂತಪಃ ॥ ೫೧

ಸ ತು ದತ್ತವರಃ ಪ್ರೀತ್ಯಾ ವಾನರೈಶ್ಚ ಸಮಾಗತಃ ।
ಪುಷ್ಪಕೇಣ ವಿಮಾನೇನ ಕಿಷ್ಕಿಂಧಾಮಭ್ಯುಪಾಗಮತ್ ॥ ೫೨

---

ಹೊರಟ ಕಾಲಾಗ್ನಿಯಂತೆ ಶ್ರೀರಾಮನು ವಿಜೃಂಭಿಸಿದನು. ಆಮೇಲೆ ದಕ್ಷಿಣಸಾಗರವನ್ನು ಸೇರಿ ನಲನಿಂದ ಸೇತುವೆಯನ್ನು ಕಟ್ಟಿಸಿದನು. ಕಪಿಯೋಧರ ಸಮಸ್ತ ಸೇನೆಯೂ ಸೇತುವೆಯ ಮೂಲಕ ಸಮುದ್ರವನ್ನು ದಾಟಿತು (೪೭-೪೮). ಮುಂದೆ ನಡೆದ ಘೋರಸಂಗ್ರಾಮದಲ್ಲಿ ಸೇನಾಪತಿಯಾದ ನೀಲನು ಪ್ರಹಸ್ತನನ್ನೂ, ರಾಘವನು ಕುಂಭಕರ್ಣನನ್ನೂ, ಲಕ್ಷ್ಮಣನು ರಾವಣಪುತ್ರನಾದ ಇಂದ್ರಜಿತುವನ್ನೂ ವಧಿಸಿದರು. ಸ್ವಯಂ ಶ್ರೀರಾಮನೇ ರಾವಣನನ್ನು ಸಂಹರಿಸಿದನು (೪೯). ಆಮೇಲೆ ದೇವೇಂದ್ರ, ಯಮ, ವರುಣ, ಮಹೇಶ್ವರ, ಬ್ರಹ್ಮ, ನಿಮ್ಮ ತಂದೆಯಾದ ದಶರಥ ಮಹಾರಾಜ, ಋಷಿಗಳು, ದೇವರ್ಷಿಗಳು–ಎಲ್ಲರೂ ಬಂದು ಕಾಕುತ್ಸ್ಥನಿಗೆ ವರಗಳನ್ನನುಗ್ರಹಿಸಿದರು. ದೇವತೆಗಳ ವರಪ್ರಸಾದದಿಂದ ಶ್ರೀರಾಮನು, ಯುದ್ಧದಲ್ಲಿ ಹತರಾದ ವಾನರರನ್ನು ಬದುಕಿಸಿಕೊಂಡನು. ರಾಜಪುತ್ರ-ಭರತ, ಅವರೆಲ್ಲರಿಂದ ಪರಿವೃತನಾಗಿ ಶ್ರೀರಾಮನು ಪುಷ್ಪಕವಿಮಾನವನ್ನೇರಿ ಕಿಷ್ಕಿಂಧೆಗೆ ಆಗಮಿಸಿದನು (೫೦-೫೧). ಅಲ್ಲಿಂದ ಗಂಗಾತೀರಕ್ಕೆ ಬಂದು ಭರದ್ವಾಜಮುನಿಗಳ ಆಶ್ರಮದಲ್ಲಿ ಈಗ ಇಳಿದುಕೊಂಡಿದ್ದಾನೆ.

ತಂ ಗಂಗಾಂ ಪುನರಾಸಾದ್ಯ ವಸಂತಂ ಮುನಿಸಂನಿಧೌ ।
ಅವಿಘ್ನಂ ಪುಷ್ಯಯೋಗೇನ ಶ್ವೋ ರಾಮಂ ದ್ರಷ್ಟುಮರ್ಹಸಿ ॥ ೫೩

ತತಸ್ತು ಸತ್ಯಂ ಹನುಮದ್ವಚೋ ಮಹ-
ನ್ನಿಶಮ್ಯ ಹೃಷ್ಟೋ ಭರತಃ ಕೃತಾಂಜಲಿಃ ।
ಉವಾಚ ವಾಣೀಂ ಮನಸಃ ಪ್ರಹರ್ಷಿಣೀಂ
ಚಿರಸ್ಯ ಪೂರ್ಣಃ ಖಲು ಮೇ ಮನೋರಥಃ ॥ ೫೪

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನತ್ರಿಂಶದುತ್ತರಶತತಮಃ ಸರ್ಗಃ



ಭರತ, ನಾಳೆ ಪುಷ್ಯನಕ್ಷತ್ರದಲ್ಲಿ ಯಾವ ಆತಂಕವೂ ಇಲ್ಲದೆ ನೀನು ಶ್ರೀರಾಮನನ್ನು ಸಂದರ್ಶಿಸಬಹುದು!" ಎಂದು ಹೇಳಿದನು (೫೨-೫೩). ಈ ರೀತಿಯಲ್ಲಿ ಯಥಾರ್ಥವೂ ಅಮೂಲ್ಯವೂ ಆದ ಹನುಮಂತನ ಹೇಳಿಕೆಯನ್ನಾಲಿಸಿ ಭರತನು ಆನಂದಿಸಿದನು. ಅವನು ಕೈಮುಗಿದುಕೊಂಡು "ಮಹಾತ್ಮ, ಬಹುಕಾಲದಮೇಲೆ ನನ್ನ ಮನೋರಥವು ಸಿದ್ಧಿಸಿತು!" ಎಂದು ಹರ್ಷದಿಂದ ಉದ್ಗರಿಸಿದನು (೫೪).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಿಪ್ಪತ್ತೊಂಬತ್ತನೆಯ ಸರ್ಗ





‘ ಮಹಾತ್ಮ, ಬಹುಕಾಲದಮೇಲೆ ನನ್ನ ಮನೋರಥವು ಸಿದ್ಧಿಸಿತು ’

## ತ್ರಿಂಶದುತ್ತರಶತತಮಃ ಸರ್ಗಃ

### ಭರತಸಮಾಗಮಃ

ಶ್ರುತ್ವಾ ತು ಪರಮಾನಂದಂ ಭರತಃ ಸತ್ಯವಿಕ್ರಮಃ ।
ಹೃಷ್ಟಮಾಜ್ಞಾಪಯಾಮಾಸ ಶತ್ರುಘ್ನಂ ಪರವೀರಹಾ ॥ ೧

ದೈವತಾನಿ ಚ ಸರ್ವಾಣಿ ಚೈತ್ಯಾನಿ ನಗರಸ್ಯ ಚ ।
ಸುಗಂಧಮಾಲ್ಯೈರ್ವಾದಿತ್ರೈರರ್ಚಂತು ಶುಚಯೋ ನರಾಃ ॥ ೨

ಸೂತಾಃ ಸ್ತುತಿಪುರಾಣಜ್ಞಾಃ ಸರ್ವೇ ವೈತಾಲಿಕಾಸ್ತಥಾ ।
ಸರ್ವೇ ವಾದಿತ್ರಕುಶಲಾ ಗಣಿಕಾಶ್ಚಾಪಿ ಸಂಘಶಃ ॥ ೩

ಅಭಿನಿರ್ಯಾಂತು ರಾಮಸ್ಯ ದ್ರಷ್ಟುಂ ಶಶಿನಿಭಂ ಮುಖಮ್ ।
ಭರತಸ್ಯ ವಚಃ ಶ್ರುತ್ವಾ ಶತ್ರುಘ್ನಃ ಪರವೀರಹಾ ॥ ೪

### ಸರ್ಗ ೧೩೦

**ಭರತನು ಅಯೋಧ್ಯಾನಗರವನ್ನಲಂಕರಿಸುವಂತೆ ಆಜ್ಞಾಪಿಸಿ, ಶ್ರೀರಾಮದರ್ಶನಾರ್ಥವಾಗಿ ಪರಿವಾರದೊಂದಿಗೆ ಹೊರಡುವುದು. ದಾರಿಯಲ್ಲಿ ಶ್ರೀರಾಮನ ಸಂದರ್ಶನ. ಎಲ್ಲರೂ ಸಂಭ್ರಮದಿಂದ ನಂದಿಗ್ರಾಮಕ್ಕೆ ಆಗಮಿಸುವುದು.**

ಸತ್ಯಸಂಧನಾದ ಭರತನು ಪರಮಾನಂದಕರವಾದ ಹನುಮಂತನ ವಚನವನ್ನಾಲಿಸಿ ಹರ್ಷೋಲ್ಲಸಿತನಾದನು. ಅವನು ತನ್ನಂತೆಯೇ ಹರ್ಷೋದ್ರಿಕ್ತನಾದ ಶತ್ರುಘ್ನನನ್ನು ನೋಡಿ "ಶತ್ರುಘ್ನ, ನಗರವಾಸಿಗಳಿಗೆ ಸೂಚನೆಯನ್ನು ಕೊಡು. ಪೌರರೆಲ್ಲರೂ ಶುಚೀಭೂತರಾಗಿ ಗಂಧಮಾಲ್ಯಗಳಿಂದ ಕುಲದೇವತೆಗಳನ್ನೂ ಸಕಲದೇವಾಲಯಗಳನ್ನೂ ಅಲಂಕರಿಸಿ ದೇವತಾರ್ಚನೆಯನ್ನು ನಡೆಸಲಿ. ಮಂಗಳವಾದ್ಯಗಳು ಭೋರ್ಗರೆಯಲಿ! (೧-೨). ಸ್ತೋತ್ರಗಳಲ್ಲಿಯೂ ಪುರಾಣಪಠನದಲ್ಲಿಯೂ ನಿಪುಣರಾದ ಸ್ತುತಿಪಾಠಕರೂ ವೈತಾಲಿಕರೂ ವೇಶ್ಯೆಯರೂ ಶ್ರೀರಾಮನನ್ನು ಸ್ವಾಗತಿಸಲು ಹೊರಟುಬರಲಿ. ಶ್ರೀರಾಮನ ಚಂದ್ರಸಮಾನವಾದ ಮುಖವನ್ನು ನೋಡಿ ನಲಿಯುವುದಕ್ಕಾಗಿ ಎಲ್ಲರೂ ಬರಲಿ!" ಎಂದು ಆದೇಶವನ್ನಿತ್ತನು

ವಿಷ್ಟೀರನೇಕಸಾಹಸ್ರೀಶ್ಚೋದಯಾಮಾಸ ವೀರ್ಯವಾನ್ ।
ಸಮೀಕುರುತ ನಿಮ್ನಾನಿ ವಿಷಮಾಣಿ ಸಮಾನಿ ಚ ॥ ೫

ಸ್ಥಲಾನಿ ಚ ನಿರಸ್ಯಂತಾಂ ನಂದಿಗ್ರಾಮಾದಿತಃ ಪರಮ್ ।
ಸಿಂಚಂತು ಪೃಥಿವೀಂ ಕೃತ್ಸ್ನಾಂ ಹಿಮಶೀತೇನ ವಾರಿಣಾ ॥ ೬

ತತೋಽಭ್ಯವಕಿರಂತ್ವನ್ಯೇ ಲಾಜೈಃ ಪುಷ್ಪೈಶ್ಚ ಸರ್ವಶಃ ।
ಸಮುಚ್ಛ್ರಿತಪತಾಕಾಸ್ತು ರಥ್ಯಾಃ ಪುರವರೋತ್ತಮೇ ॥ ೭

ಶೋಭಯಂತು ಚ ವೇಶ್ಮಾನಿ ಸೂರ್ಯಸ್ಯೋದಯನಂ ಪ್ರತಿ ।
ಸ್ರಗ್ದಾಮಭಿರ್ಮುಕ್ತಪುಷ್ಪೈಃ ಸುಗಂಧೈಃ ಪಂಚವರ್ಣಕೈಃ ॥ ೮

ರಾಜಮಾರ್ಗಮಸಂಬಾಧಂ ಕಿರಂತು ಶತಶೋ ನರಾಃ ।
ರಾಜದಾರಾಸ್ತಥಾಮಾತ್ಯಾಃ ಸೈನ್ಯಾಃ ಸೇನಾಗಣಾಂಗನಾಃ ॥ ೯

---

(೩-೪). ಭರತನ ಆಜ್ಞೆಯನ್ನು ಕೇಳಿ ವೀರಾಗ್ರಗಣ್ಯನಾದ ಶತ್ರುಘ್ನನು ಸಾವಿರಾರು ಮಂದಿ ಭೃತ್ಯರನ್ನು ಕರೆಸಿ "ಎಲೈ ಸೇವಕರೆ, ನಂದಿಗ್ರಾಮದಿಂದ ಅಯೋಧ್ಯೆಯವರೆಗಿನ ಮಾರ್ಗವನ್ನು ನೀವು ಸರಿಪಡಿಸತಕ್ಕದ್ದು. ನಿಮ್ನೋನ್ನತಸ್ಥಳಗಳನ್ನು ಕೆತ್ತಿ ಸಮತಳವನ್ನಾಗಿ ಮಾಡಬೇಕು. ದಾರಿಯುದ್ದಕ್ಕೂ ಶೀತಳಜಲವನ್ನೆರಚಿ ನೆಲವನ್ನು ಹದಪಡಿಸಿರಿ (೫-೬). ಇನ್ನು ಕೆಲವರು ಪರಿಷ್ಕೃತವಾದ ಮಾರ್ಗದಲ್ಲಿ ಅರಳನ್ನೂ ಹೂಗಳನ್ನೂ ಚೆಲ್ಲುತ್ತ ಹೋಗಲಿ! ನಮ್ಮ ರಾಜಧಾನಿಯ ಬೀದಿಗಳಲ್ಲಿ ಧ್ವಜಪಟಗಳು ಹಾರಾಡಲಿ. ನಗರದ ಮನೆಮನೆಗಳನ್ನೂ ಪೌರರು ಹೂಮಾಲೆಗಳಿಂದಲೂ ಸುಗಂಧಿಯಾದ ಬಿಡಿಹೂಗಳಿಂದಲೂ ಅಲಂಕರಿಸಲಿ. ರಾಜಮಾರ್ಗದಲ್ಲಿ ಎಲ್ಲೆಲ್ಲಿಯೂ ಪಂಚವರ್ಣದ ರಂಗವಲ್ಲಿಯನ್ನಿಟ್ಟು ಸಿಂಗರಿಸಲಿ! ನಾಳೆ ಬೆಳಗಾಗುವುದರೊಳಗೆ ಇಷ್ಟು ಕೆಲಸವು ನಡೆಯತಕ್ಕದ್ದು" ಎಂದು ಆಜ್ಞಾಪಿಸಿದನು (೭-೮). ಶ್ರೀರಾಮನ ಆಗಮನವಾರ್ತೆಯನ್ನೂ ಶತ್ರುಘ್ನನ ಆದೇಶವನ್ನೂ ಕೇಳಿ ಮಾರನೆಯ ದಿನ, ರಾಜಪತ್ನಿಯರೂ ಅಮಾತ್ಯರೂ ಸೈನಿಕರೂ ಸೈನಿಕರ ಮಡದಿಯರೂ ಶ್ರೀರಾಮನನ್ನು ಎದುರುಗೊಳ್ಳಲು

ಬ್ರಾಹ್ಮಣಾಶ್ಚ ಸರಾಜನ್ಯಾಃ ಶ್ರೇಣೀಮುಖ್ಯಾಸ್ತಥಾ ಗಣಾಃ ।
ಧೃಷ್ಟಿರ್ಜಯಂತೋ ವಿಜಯಃ ಸಿದ್ಧಾರ್ಥೋ ಹ್ಯರ್ಥಸಾಧಕಃ ॥

ಅಶೋಕೋ ಮಂತ್ರಪಾಲಶ್ಚ ಸುಮಂತ್ರಶ್ಚಾಪಿ ನಿರ್ಯಯುಃ ।
ಮತ್ತೈರ್ನಾಗಸಹಸ್ರೈಶ್ಚ ಶಾತಕುಂಭವಿಭೂಷಿತೈಃ ॥ ೧೧

ಅಪರೇ ಹೇಮಕಕ್ಷ್ಯಾಭಿಃ ಸಗಜಾಭಿಃ ಕರೇಣುಭಿಃ ।
ನಿರ್ಯಯುಸ್ತುರಗಾಕ್ರಾಂತೈ ರಥೈಶ್ಚ ಸುಮಹಾರಥಾಃ ॥ ೧೨

ಶಕ್ತ್ಯೃಷ್ಟಿಪ್ರಾಸಹಸ್ತಾನಾಂ ಸಧ್ವಜಾನಾಂ ಪತಾಕಿನಾಮ್ ।
ತುರಗಾಣಾಂ ಸಹಸ್ರೈಶ್ಚ ಮುಖ್ಯೈರ್ಮುಖ್ಯನರಾನ್ವಿತೈಃ ॥ ೧೩

ಪದಾತೀನಾಂ ಸಹಸ್ರೈಶ್ಚ ವೀರಾಃ ಪರಿವೃತಾ ಯಯುಃ ।
ತತೋ ಯಾನಾನ್ಯುಪಾರೂಢಾಃ ಸರ್ವಾ ದಶರಥಸ್ತ್ರಿಯಃ ॥ ೧೪

ಕೌಸಲ್ಯಾಂ ಪ್ರಮುಖೇ ಕೃತ್ವಾ ಸುಮಿತ್ರಾಂ ಚಾಪಿ ನಿರ್ಯಯುಃ ।
ಕೈಕೇಯ್ಯಾ ಸಹಿತಾಃ ಸರ್ವಾ ನಂದಿಗ್ರಾಮಮುಪಾಗಮನ್ ॥ ೧೫

---

ಹೊರಟರು. ಹಾಗೆಯೇ ಬ್ರಾಹ್ಮಣರೂ ಸಾಮಂತರಾಜರೂ ವಿವಿಧಪಂಗಡಗಳ ಪ್ರಮುಖರೂ ಹೊರಟರು. ಧೃಷ್ಟಿ, ಜಯಂತ, ವಿಜಯ, ಸಿದ್ಧಾರ್ಥ, ಅರ್ಥಸಾಧಕ, ಅಶೋಕ, ಮಂತ್ರಪಾಲ, ಸುಮಂತ್ರ–ಎಂಬ ಅಷ್ಟಸಚಿವರೂ ಆಗಮಿಸಿದರು(೯–೧೦). ಕೆಲವರು ಕನಕಾಭರಣಭೂಷಿತಗಳಾದ ಮದಿಸಿದ ಸಾವಿರಾರು ಗಂಡಾನೆಗಳನ್ನೂ, ಕೆಲವರು ಚಿನ್ನದ ಪಟ್ಟಿಗಳಿಂದ ಸಿಂಗರಿಸಲ್ಪಟ್ಟ ಹೆಣ್ಣಾನೆಗಳನ್ನೂ ಏರಿ ಆಗಮಿಸಿದರು. ಕೆಲವು ಮಹಾರಥರು ಅಶ್ವಗಳನ್ನು ಹೂಡಿದ ದಿವ್ಯರಥಗಳನ್ನೇರಿ ಬಂದರು (೧೧–೧೨). ಕೆಲವು ಮುಖ್ಯಯೋಧರು ಶಕ್ತಿ, ಖುಷ್ಟಿ, ಪ್ರಾಸ–ಮುಂತಾದ ಆಯುಧಗಳನ್ನೂ ಬಾವುಟವನ್ನೇರಿಸಿದ ಧ್ವಜದಂಡಗಳನ್ನೂ ಹಿಡಿದು, ಅಶ್ವಾರೋಹಿಗಳಾಗಿ ಸಾವಿರಾರು ಸಂಖ್ಯೆಯಲ್ಲಿ ಹೊರಟರು. ಸಾವಿರಗಟ್ಟಲೆ ವೀರಯೋಧರು ಕಾಲ್ನಡಿಗೆಯಲ್ಲಿ ಬಂದರು (೧೩–೧೪). ದಶರಥರಾಜನ ಅಂತಃಪುರಸ್ತ್ರೀಯರೆಲ್ಲರೂ ಕೌಸಲ್ಯೆಯನ್ನೂ ಸುಮಿತ್ರೆಯನ್ನೂ ಮುಂದಿಟ್ಟುಕೊಂಡು ಪಲ್ಲಕ್ಕಿ ಮುಂತಾದ ವಾಹನಗಳನ್ನೇರಿ ಹೊರಟರು. ಸಕಲ ಸ್ತ್ರೀಯರೂ ಕೈಕೇಯಿ

ಕೃತ್ಸ್ನಂ ಚ ನಗರಂ ತತ್ತು ನಂದಿಗ್ರಾಮಮುಪಾಗಮತ್ ।
ಅಶ್ವಾನಾಂ ಖುರಶಬ್ದೇನ ರಥನೇಮಿಸ್ವನೇನ ಚ ॥ ೧೬

ಶಂಖದುಂದುಭಿನಾದೇನ ಸಂಚಚಾಲೇವ ಮೇದಿನೀ ।
ದ್ವಿಜಾತಿಮುಖ್ಯೈರ್ಧರ್ಮಾತ್ಮಾ ಶ್ರೇಣೀಮುಖ್ಯೈಃ ಸನೈಗಮೈಃ ॥
ಮಾಲ್ಯಮೋದಕಹಸ್ತೈಶ್ಚ ಮಂತ್ರಿಭಿರ್ಭರತೋ ವೃತಃ ।
ಶಂಖಭೇರೀನಿನಾದೈಶ್ಚ ಬಂದಿಭಿಶ್ಚಾಭಿವಂದಿತಃ ॥ ೧೮

ಆರ್ಯಪಾದೌ ಗೃಹೀತ್ವಾ ತು ಶಿರಸಾ ಧರ್ಮಕೋವಿದಃ ।
ಪಾಂಡರಂ ಛತ್ರಮಾದಾಯ ಶುಕ್ಲಮಾಲ್ಯೋಪಶೋಭಿತಮ್ ॥ ೧೯

ಶುಕ್ಲೇ ಚ ವಾಲವ್ಯಜನೇ ರಾಜಾರ್ಹೇ ಹೇಮಭೂಷಿತೇ ।
ಉಪವಾಸಕೃಶೋ ದೀನಶ್ಚೀರಕೃಷ್ಣಾಜಿನಾಂಬರಃ ॥ ೨೦

---

ಯೊಡನೆ* ನಂದಿಗ್ರಾಮಕ್ಕೆ ಬಂದು ಸೇರಿದರು (೧೫). ಅಯೋಧ್ಯಾ ನಗರವೇ ನಂದಿಗ್ರಾಮಕ್ಕೆ ಬಂದಂತೆ ತೋರಿತು! ಅಶ್ವಗಳ ಖುರಪುಟಧ್ವನಿ, ರಥನೇಮಿಗಳ ಚೀತ್ಕಾರ, ಶಂಖಗಳ ಭೋಂಕಾರ, ದುಂದುಭಿಗಳ ಝಂಕಾರ ಗಳಿಂದ ಭೂಮಿಯೇ ನಡುಗಿದಂತೆ ಕಾಣಿಸಿತು (೧೬). ಬ್ರಾಹ್ಮಣೋತ್ತಮರೂ ವಿವಿಧಸಂಘಗಳ ಮುಖ್ಯರೂ ವರ್ತಕರೂ ಮಂತ್ರಿಗಳೂ ಪುಷ್ಪ, ಮೋದಕ ಮುಂತಾದ ಮಂಗಳದ್ರವ್ಯಗಳನ್ನು ಹಿಡಿದುಕೊಂಡು ಹೊರಟರು. ಧರ್ಮಾತ್ಮನಾದ ಭರತನು ಅವರಿಂದ ಪರಿವೃತನಾಗಿ, ಶಂಖ, ಭೇರಿ ಮುಂತಾದ ವಾದ್ಯಗಳು ಮೊಳಗುತ್ತಿರಲು, ವಂದಿಮಾಗಧರು ಹೊಗಳುತ್ತಿರಲು, ಅಣ್ಣನ ಪಾದುಕೆಗಳನ್ನು ತನ್ನ ಶಿರಸ್ಸಿನಮೇಲೆ ಇರಿಸಿಕೊಂಡನು (೧೭-೧೮). ಬಿಳಿಯ ಹೂಮಾಲೆಗಳಿಂದ ಶೋಭಿತವಾದ ಶ್ವೇತಛತ್ರವನ್ನು ಪಾದುಕೆಗಳ ಮೇಲೆ ಹಿಡಿಸಿ, ಹೇಮಭೂಷಿತಗಳೂ ರಾಜಯೋಗ್ಯಗಳೂ ಆದ ಬಿಳಿಯ ಚಾಮರಗಳನ್ನು ಎರಡು ಪಾರ್ಶ್ವಗಳಲ್ಲಿಯೂ ಪಾದುಕೆಗಳಿಗೆ ಬೀಸುತ್ತ ನಂದಿಗ್ರಾಮದಿಂದ ಹೊರಟನು. ಧರ್ಮನಿಷ್ಠ

---

* ಇಲ್ಲಿ ಕೈಕೇಯಿಯ ಆಗಮನವನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ, ಭರತನು ಅವಳನ್ನು ಕರೆಯದೆ ಉಪೇಕ್ಷಿಸಿದನೆಂದೂ ಅವಳು ಸ್ವಪ್ರೇರಣೆಯಿಂದ ಬಂದಳೆಂದೂ ಶ್ರೀ ಗೋವಿಂದರಾಜರು ಅಭಿಪ್ರಾಯಪಡುತ್ತಾರೆ.

ಭ್ರಾತುರಾಗಮನಂ ಶ್ರುತ್ವಾ ತತ್ಪೂರ್ವಂ ಹರ್ಷಮಾಗತಃ ।
ಪ್ರತ್ಯುದ್ಯಯೌ ತತೋ ರಾಮಂ ಮಹಾತ್ಮಾ ಸಚಿವೈಃ ಸಹ ॥ ೨೧

ಸಮೀಕ್ಷ್ಯ ಭರತೋ ವಾಕ್ಯಮುವಾಚ ಪವನಾತ್ಮಜಮ್ ।
ಕಚ್ಚಿನ್ನ ಖಲು ಕಾಪೇಯೀ ಸೇವ್ಯತೇ ಚಲಚಿತ್ತತಾ ॥ ೨೨

ನ ಹಿ ಪಶ್ಯಾಮಿ ಕಾಕುತ್ಸ್ಥಂ ರಾಮಮಾರ್ಯಂ ಪರಂತಪಮ್ ।
ಕಚ್ಚಿನ್ನ ಖಲು ದೃಶ್ಯಂತೇ ವಾನರಾಃ ಕಾಮರೂಪಿಣಃ ॥ ೨೩

ಅಥೈವಮುಕ್ತೇ ವಚನೇ ಹನುಮಾನಿದಮಬ್ರವೀತ್ ।
ಅರ್ಥಂ ವಿಜ್ಞಾಪಯನ್ನೇವ ಭರತಂ ಸತ್ಯವಿಕ್ರಮಮ್ ॥ ೨೪

---

ನಾದ ಭರತನಾದರೋ ನಾರುಬಟ್ಟೆಯನ್ನುಟ್ಟು ಕೃಷ್ಣಾಜಿನವನ್ನು ಹೊದೆದಿದ್ದನು. ಉಪವಾಸದಿಂದ ಕೃಶನಾಗಿ ದೀನನಾಗಿದ್ದನು (೧೯-೨೦). ಅಣ್ಣನ ಆಗಮನವಾರ್ತೆಯನ್ನು ಕೇಳಿದಮೇಲೆಯೇ, ಈ ಹದಿನಾಲ್ಕು ವರ್ಷಗಳಲ್ಲಿ ಹರ್ಷವೆಂಬುದನ್ನು ಭರತನು ಕಂಡಿದ್ದನು. ಆ ಮಹಾತ್ಮನು ಸಚಿವರಿಂದ ಪರಿವೃತನಾಗಿ ಶ್ರೀರಾಮನ ಸಂದರ್ಶನಕ್ಕಾಗಿ ಹೊರಟನು. ನಂದಿಗ್ರಾಮದಿಂದ ಭರದ್ವಾಜಾಶ್ರಮದ ದಿಕ್ಕಿಗೆ ಸ್ವಲ್ಪದೂರ ಪ್ರಯಾಣ ಮಾಡಿದರೂ ಶ್ರೀರಾಮನ ಸುಳಿವು ಕಾಣಿಸಲಿಲ್ಲ (೨೧). ಆಗ ಭರತನು ಹನುಮಂತನನ್ನು* ನೋಡಿ "ಏನಯ್ಯ ಇದು ? ಚಪಲಸ್ವಭಾವದ ನಿನ್ನ ಮಂಗತನವನ್ನೇನೂ ತೋರಿಸಿಲ್ಲವಷ್ಟೆ! ಕಕುತ್ಸ್ಥಕುಲತಿಲಕನೂ ನನ್ನ ಅಣ್ಣನೂ ಆದ ಶ್ರೀರಾಮನನ್ನು ಕಾಣೆನಲ್ಲ. ಕಾಮರೂಪಿಗಳಾದ ವಾನರರಾದರೂ ಏಕೆ ಗೋಚರಿಸುವುದಿಲ್ಲ ? " ಎಂದು ಕೇಳಿದನು (೨೨-೨೩) ಭರತನ ನುಡಿಯನ್ನು ಕೇಳಿ, ಹನುಮಂತನು ಶ್ರೀರಾಮನ ಆಗಮನಕ್ಕೆ ತಡವಾದ

---

* 'ಹನುಮಂತನು ಭರತವೃತ್ತಾಂತವನ್ನು ಶ್ರೀರಾಮನಿಗೆ ತಿಳಿಸಿ, ಅವನ ಅಜ್ಞೆಯಂತೆ ಮತ್ತೆ ಭರತನ ಬಳಿಗೆ ಬಂದಿದ್ದನು' ಎಂದು ತಿಲಕವ್ಯಾಖ್ಯಾನದಲ್ಲಿ ಬರೆದಿದೆ. 'ನನ್ನ ಆಗಮನದಿಂದ ಭರತನಿಗೆ ಸಂತೃಪ್ತಿಯಾಗಿದ್ದರೆ, ಅದನ್ನು ತಿಳಿಸುವುದಕ್ಕಾಗಿ ಮರಳಿ ಬರಬೇಕಾಗಿಲ್ಲ. ಭರತನಿಗೆ ಅಸಮಾಧಾನವಾದರೆ ಮಾತ್ರ ಬಂದು ನನಗೆ ತಿಳಿಸಬೇಕು' ಎಂದು ಶ್ರೀರಾಮನು ಹನುಮಂತನಿಗೆ ಸೂಚಿಸಿದ್ದನೆಂದು ಗೋವಿಂದರಾಜೀಯದಲ್ಲಿ ಬರೆದಿದೆ.

ಸದಾಫಲಾನ್ ಕುಸುಮಿತಾನ್ ವೃಕ್ಷಾನ್ ಪ್ರಾಪ್ಯ ಮಧುಸ್ರವಾನ್ ।
ಭರದ್ವಾಜಪ್ರಸಾದೇನ ಮತ್ತಭ್ರಮರನಾದಿತಾನ್ ॥ ೨೫

ತಸ್ಯ ಚೈಷ ವರೋ ದತ್ತೋ ವಾಸವೇನ ಪರಂತಪ ।
ಸಸೈನ್ಯಸ್ಯ ತಥಾತಿಥ್ಯಂ ಕೃತಂ ಸರ್ವಗುಣಾನ್ವಿತಮ್ ॥ ೨೬

ನಿಃಸ್ವನಃ ಶ್ರೂಯತೇ ಭೀಮಃ ಪ್ರಹೃಷ್ಟಾನಾಂ ವನೌಕಸಾಮ್ ।
ಮನ್ಯೇ ವಾನರಸೇನಾ ಸಾ ನದೀಂ ತರತಿ ಗೋಮತೀಮ್ ॥ ೨೭

ರಜೋವರ್ಷಂ ಸಮುದ್ಭೂತಂ ಪಶ್ಯ ವಾಲುಕಿನೀಂ ಪ್ರತಿ ।
ಮನ್ಯೇ ಸಾಲವನಂ ರಮ್ಯಂ ಲೋಲಯಂತಿ ಪ್ಲವಂಗಮಾಃ ॥ ೨೮

ತದೇತದ್ದೃಶ್ಯತೇ ದೂರಾದ್ವಿಮಲಂ ಚಂದ್ರಸನ್ನಿಭಮ್ ।
ವಿಮಾನಂ ಪುಷ್ಪಕಂ ದಿವ್ಯಂ ಮನಸಾ ಬ್ರಹ್ಮನಿರ್ಮಿತಮ್ ॥ ೨೯

---

ಕಾರಣವನ್ನು ಯಥಾಸ್ಥಿತವಾಗಿ ವಿವರಿಸಿದನು : “ಭರತ, ಭರದ್ವಾಜರ ಅನುಗ್ರಹದಿಂದ ದಾರಿಯ ಮರಗಳಲ್ಲಿ ಹೂಹಣ್ಣುಗಳು ತುಂಬಿವೆ. ಜೇನು ಹರಿಯುತ್ತಿದೆ. ಮದಿಸಿದ ದುಂಬಿಗಳು ಝೇಂಕರಿಸುತ್ತಿವೆ. ದೇವೇಂದ್ರನೂ ಇದೇ ಬಗೆಯ ವರವನ್ನು ಕೊಟ್ಟಿದ್ದಾನೆ. (ಈ ಸಮೃದ್ಧಿಯನ್ನು ಕಂಡು ವಾನರರು ತಡಮಾಡುತ್ತಿರಬಹುದು.) ಅಲ್ಲದೆ ಶ್ರೀರಾಮನಿಗೂ ವಾನರ ಯೋಧರಿಗೂ ಭರದ್ವಾಜಮುನಿಗಳು ಆಶ್ರಮದಲ್ಲಿ ಸರ್ವೋತ್ತಮವಾದ ಔತಣವನ್ನೇರ್ಪಡಿಸಿದ್ದರು (೨೫-೨೬). (ಆದ್ದರಿಂದ ಸ್ವಲ್ಪ ಕಾಲಾತಿಕ್ರಮವಾಗಿರಬಹುದು.) ಅದೋ, ಕೇಳು! ಆನಂದತುಂದಿಲರಾದ ವಾನರರು ಕೋಲಾಹಲಮಾಡುತ್ತಿದ್ದಾರೆ! ವಾನರಸೇನೆಯು ಗೋಮತೀನದಿಯನ್ನು ದಾಟಿ ಬರುತ್ತಿರಬೇಕು. ಮೇಲೇಳುವ ಧೂಳಿಯನ್ನು ನೋಡು. ಈಗ ವಾಲುಕಿನೀನದಿಯನ್ನು ದಾಟಿದರೆಂದು ತೋರುತ್ತದೆ. ರಮಣೀಯವಾದ ಸಾಲವನವನ್ನು ಪ್ರವೇಶಿಸಿ ಅಲ್ಲಿರುವ ವೃಕ್ಷಗಳನ್ನು ವಾನರರು ಅಲ್ಲಾಡಿಸುತ್ತಿರುವರೆಂದು ತರ್ಕಿಸುತ್ತೇನೆ! (೨೭-೨೮). ಆಹಾ! ರಾಜಪುತ್ರ, ಮೇಲೆ ನೋಡು! ಚಂದ್ರನಂತೆ ನಿರ್ಮಲವಾಗಿ ಹೊಳೆಯುವ ಅದೇ ಪುಷ್ಪಕವಿಮಾನ! ಬ್ರಹ್ಮನು ತನ್ನ ಇಚ್ಛೆಗನುಗುಣವಾಗಿ ವಿಶ್ವಕರ್ಮನಿಂದ

ರಾವಣಂ ಬಾಂಧವೈಃ ಸಾರ್ಧಂ ಹತ್ವಾ ಲಬ್ಧಂ ಮಹಾತ್ಮನಾ ।
ತರುಣಾದಿತ್ಯಸಂಕಾಶಂ ವಿಮಾನಂ ರಾಮವಾಹನಮ್ ॥ ೩೦

ಧನದಸ್ಯ ಪ್ರಸಾದೇನ ದಿವ್ಯಮೇತನ್ಮನೋಜವಮ್ ।
ಏತಸ್ಮಿನ್ ಭ್ರಾತರೌ ವೀರೌ ವೈದೇಹ್ಯಾ ಸಹ ರಾಘವೌ ॥ ೩೧

ಸುಗ್ರೀವಶ್ಚ ಮಹಾತೇಜಾ ರಾಕ್ಷಸಶ್ಚ ವಿಭೀಷಣಃ ।
ತತೋ ಹರ್ಷಸಮುದ್ಭೂತೋ ನಿಃಸ್ವನೋ ದಿವಮಸ್ಪೃಶತ್ ॥ ೩೨

ಸ್ತ್ರೀಬಾಲಯುವವೃದ್ಧಾನಾಂ ರಾಮೋಽಯಮಿತಿ ಕೀರ್ತಿತೇ ।
ರಥಕುಂಜರವಾಜಿಭ್ಯಸ್ತೇಽವತೀರ್ಯ ಮಹೀಂ ಗತಾಃ ॥ ೩೩

ದದೃಶುಸ್ತಂ ವಿಮಾನಸ್ಥಂ ನರಾಃ ಸೋಮಮಿವಾಂಬರೇ ।
ಪ್ರಾಂಜಲಿರ್ಭರತೋ ಭೂತ್ವಾ ಪ್ರಹೃಷ್ಟೋ ರಾಘವೋನ್ಮುಖಃ ॥

---

ಈ ದಿವ್ಯವಿಮಾನವನ್ನು ನಿರ್ಮಿಸಿದ್ದಾನೆ. ಮಹಾತ್ಮನಾದ ಶ್ರೀರಾಮನು ರಾವಣನನ್ನೂ ಅವನ ಬಂಧುಗಳನ್ನೂ ಸದೆಬಡಿದು ಈ ವಿಮಾನವನ್ನು ಪಡೆದಿದ್ದಾನೆ. ಬಾಲಾರ್ಕನಂತೆ ಬೆಳಗುವ ಈ ಪುಷ್ಪಕವು ಶ್ರೀರಾಮನ ವಾಹನವಾಗಿದೆ (೨೯-೩೦). ಕುಬೇರನನ್ನು ಅನುಗ್ರಹಿಸುವುದಕ್ಕಾಗಿ ಮನೋವೇಗವುಳ್ಳ ಈ ದಿವ್ಯವಾಹನವನ್ನು ಬ್ರಹ್ಮನು ಕೊಟ್ಟಿದ್ದನು. ಇದರಲ್ಲಿ ವೀರಾಗ್ರಣಿಗಳಾದ ಶ್ರೀರಾಮಲಕ್ಷ್ಮಣರೂ ವೈದೇಹಿಯೂ ಮಂಡಿಸಿದ್ದಾರೆ. ಮಹಾತೇಜಸ್ವಿಯಾದ ಸುಗ್ರೀವನೂ ರಾಕ್ಷಸರಾಜನಾದ ವಿಭೀಷಣನೂ ಇದರಲ್ಲಿ ಕುಳಿತಿದ್ದಾರೆ" ಎಂದನು (೩೧-೩೨). "ಶ್ರೀರಾಮನು ಬಂದನು" ಎಂಬುದನ್ನು ಕೇಳಿದೊಡನೆ, ಅಲ್ಲಿ ನೆರೆದಿದ್ದ ಹೆಂಗಸರು ಹುಡುಗರು ಯುವಕರು ವೃದ್ಧರು–ಸಮಸ್ತರೂ ಹರ್ಷಘೋಷಮಾಡಿದರು. ಆ ಹರ್ಷಘೋಷವು ನಭೋಮಂಡಲವನ್ನು ಭೇದಿಸಿತು (೩೩). ಆನೆ, ಕುದುರೆ, ರಥಗಳನ್ನೇರಿ ಕುಳಿತಿದ್ದ ಸಕಲರೂ ಇಳಿದು ನೆಲದಮೇಲೆ ನಿಂತರು. ವಿಮಾನವು ಸಮೀಪಿಸಿತು. ಸಮಸ್ತರೂ ವಿಮಾನದಲ್ಲಿ ಮಂಡಿಸಿದ್ದ ಶ್ರೀರಾಮನನ್ನು ವೀಕ್ಷಿಸಿದರು. ಅಂಬರದಲ್ಲಿ ಉದಿಸಿಬಂದ ಪೂರ್ಣಚಂದ್ರನನ್ನು ನೋಡುವಂತೆ, ಶ್ರೀರಾಮಚಂದ್ರನನ್ನು ನೋಡಿದರು. ಭರತನು ಆನಂದದಿಂದ ರೋಮಾಂಚಿತಗಾತ್ರನಾಗಿ ಕೈಮುಗಿದುಕೊಂಡು ತಲೆಯೆತ್ತಿ ರಾಘವ

**ಸ್ವಾಗತೇನ ಯಥಾರ್ಥೇನ ತತೋ ರಾಮಮಪೂಜಯತ್ ।**
**ಮನಸಾ ಬ್ರಹ್ಮಣಾ ಸೃಷ್ಟೇ ವಿಮಾನೇ ಭರತಾಗ್ರಜಃ ॥** ೩೫
**ರರಾಜ ಪೃಥುದೀರ್ಘಾಕ್ಷೋ ವಜ್ರಪಾಣಿರಿವಾಪರಃ ।**
**ತತೋ ವಿಮಾನಾಗ್ರಗತಂ ಭರತೋ ಭ್ರಾತರಂ ತದಾ ॥** ೩೬
**ವವಂದೇ ಪ್ರಯತೋ ರಾಮಂ ಮೇರುಸ್ಥಮಿವ ಭಾಸ್ಕರಮ್ ।**
**ತತೋ ರಾಮಾಭ್ಯನುಜ್ಞಾತಂ ತದ್ವಿಮಾನಮನುತ್ತಮಮ್ ॥** ೩೭
**ಹಂಸಯುಕ್ತಂ ಮಹಾವೇಗಂ ನಿಷ್ಪಪಾತ ಮಹೀತಲೇ ।**
**ಆರೋಪಿತೋ ವಿಮಾನಂ ತದ್ಭರತಃ ಸತ್ಯವಿಕ್ರಮಃ ॥** ೩೮
**ರಾಮಮಾಸಾದ್ಯ ಮುದಿತಃ ಪುನರೇವಾಭ್ಯವಾದಯತ್ ।**
**ತಂ ಸಮುತ್ಥಾಪ್ಯ ಕಾಕುತ್ಸ್ಥಶ್ಚಿರಸ್ಯಾಕ್ಷಿಪಥಂ ಗತಮ್ ॥** ೩೯
**ಅಂಕೇ ಭರತಮಾರೋಪ್ಯ ಮುದಿತಃ ಪರಿಷಸ್ವಜೇ ।**
**ತತೋ ಲಕ್ಷ್ಮಣಮಾಸಾದ್ಯ ವೈದೇಹೀಂ ಚಾಭ್ಯವಾದಯತ್ ॥** ೪೦

---

ನನ್ನು ನೋಡುತ್ತ ನಿಂತನು (೩೪). "ಅಣ್ಣ-ಅಣ್ಣ, ಸ್ವಾಗತ-ನಿನಗೆ ಸ್ವಾಗತ. ನನ್ನ ಮೇಲೆ ಕೃಪೆಯಿಟ್ಟು ಬಂದೆಯಲ್ಲವೆ?" ಎಂದು ಉದ್ಗರಿಸುತ್ತ ಮನಸಾ ಶ್ರೀರಾಮನನ್ನು ಪೂಜಿಸಿದನು. ಬ್ರಹ್ಮನಿರ್ಮಿತವಾದ ಪುಷ್ಪಕ ವಿಮಾನದಲ್ಲಿ ಕುಳಿತಿದ್ದ ವಿಶಾಲನೇತ್ರನಾದ ಶ್ರೀರಾಮನು ವಜ್ರಪಾಣಿಯಾದ ದೇವೇಂದ್ರನೋ ಎಂಬಂತೆ ವಿರಾಜಿಸುತ್ತಿದ್ದನು (೩೫-೩೬). ಮೇರುಶಿಖರಾರೂಢನಾದ ಭಾಸ್ಕರನಂತೆ ವಿಮಾನಾರೂಢನಾಗಿದ್ದ ಅಗ್ರಜನನ್ನು ನೋಡಿ, ಭರತನು ವಿನಯದಿಂದ ವಂದಿಸಿದನು. ಅನಂತರ ಹಂಸವಿಗ್ರಹಾಲಂಕೃತವೂ ವೇಗಶಾಲಿಯೂ ಆದ ಆ ದಿವ್ಯವಿಮಾನವು, ಶ್ರೀರಾಮನ ಇಚ್ಛೆಯಂತೆ ಧರೆಗಿಳಿಯಿತು. ಸತ್ಯವಿಕ್ರಮನಾದ ಭರತನನ್ನು ರಾಘವನು ವಿಮಾನದೊಳಗೆ ಬರಮಾಡಿಕೊಂಡನು (೩೭-೩೮). ಭರತನು ಆನಂದದಿಂದ ಹೋಗಿ ರಾಘವನಿಗೆ ಮತ್ತೆ ಅಭಿವಾದನೆ ಮಾಡಿದನು. ಬಹುಕಾಲದ ಮೇಲೆ ದೃಷ್ಟಿಗೋಚರನಾದ ಭರತನನ್ನು ಕಾಕುತ್ಸ್ಥನು ಪ್ರೀತಿಯಿಂದೆತ್ತಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಹರ್ಷದಿಂದ ಬಿಗಿದಪ್ಪಿಕೊಂಡನು. ಆಮೇಲೆ ಭರತನು ಲಕ್ಷ್ಮಣನ ಬಳಿಗೆ ಹೋಗಿ ಆಲಿಂಗನಾದಿಗಳಿಂದ

ಅಭಿವಾದ್ಯ ತತಃ ಪ್ರೀತೋ ಭರತೋ ನಾಮ ಚಾಬ್ರವೀತ್ ।
ಸುಗ್ರೀವಂ ಕೈಕಯೀಪುತ್ರೋ ಜಾಂಬವಂತಂ ತಥಾಂಗದಮ್ ॥ ೪೧

ಮೈಂದಂ ಚ ದ್ವಿವಿದಂ ನೀಲಮೃಷಭಂ ಪರಿಷಸ್ವಜೇ ।
ಸುಷೇಣಂ ಚ ನಲಂ ಚೈವ ಗವಾಕ್ಷಂ ಗಂಧಮಾದನಮ್ ॥ ೪೨

ಶರಭಂ ಪನಸಂ ಚೈವ ಭರತಃ ಪರಿಷಸ್ವಜೇ ।
ತೇ ಕೃತ್ವಾ ಮಾನುಷಂ ರೂಪಂ ವಾನರಾಃ ಕಾಮರೂಪಿಣಃ ॥ ೪೩

ಕುಶಲಂ ಪರ್ಯಪೃಚ್ಛಂಸ್ತೇ ಪ್ರಹೃಷ್ಟಾ ಭರತಂ ತದಾ ।
ಅಥಾಬ್ರವೀದ್ರಾಜಪುತ್ರಃ ಸುಗ್ರೀವಂ ವಾನರರ್ಷಭಮ್ ॥ ೪೪

ಪರಿಷ್ವಜ್ಯ ಮಹಾತೇಜಾ ಭರತೋ ಧರ್ಮಿಣಾಂ ವರಃ ।
ತ್ವಮಸ್ಮಾಕಂ ಚತುರ್ಣಾಂ ತು ಭ್ರಾತಾ ಸುಗ್ರೀವ ಪಂಚಮಃ ॥ ೪೫

ಸೌಹೃದಾಜ್ಜಾಯತೇ ಮಿತ್ರಮಪಕಾರೋಽರಿಲಕ್ಷಣಮ್ ।
ವಿಭೀಷಣಂ ಚ ಭರತಃ ಸಾಂತ್ವವಾಕ್ಯಮಥಾಬ್ರವೀತ್ ॥ ೪೬

---

ಆದರಿಸಿ,* ಸೀತಾದೇವಿಗೆ ತನ್ನ ಹೆಸರನ್ನು ಹೇಳಿ ನಮಸ್ಕರಿಸಿದನು (೩೯–೪೦). ಅನಂತರ ಕೈಕೇಯೀತನಯನು ಕ್ರಮವಾಗಿ ಸುಗ್ರೀವ, ಜಾಂಬವಂತ, ಅಂಗದ, ಮೈಂದ, ದ್ವಿವಿದ, ನೀಲ, ಋಷಭ, ಸುಷೇಣ, ನಲ, ಗವಾಕ್ಷ, ಗಂಧಮಾದನ, ಶರಭ, ಪನಸ–ಮುಂತಾದ ಪ್ರಮುಖರನ್ನು ಕಂಡು ಆಲಿಂಗನಾದಿಗಳಿಂದ ಗೌರವಿಸಿದನು (೪೧–೪೨). ಮನುಷ್ಯಾಕೃತಿಯಲ್ಲಿದ್ದ ಕಾಮರೂಪಿಗಳಾದ ಆ ವಾನರೋತ್ತಮರು ಸಂತುಷ್ಟರಾಗಿ ಭರತನೊಡನೆ ಕುಶಲಸಂಭಾಷಣೆಯನ್ನು ನಡೆಸಿದರು. ರಾಜಕುಮಾರನೂ ಮಹಾತೇಜಸ್ವಿಯೂ ಧರ್ಮನಿಷ್ಠನೂ ಆದ ಭರತನು ವಾನರೇಂದ್ರನಾದ ಸುಗ್ರೀವನನ್ನು ಆಲಿಂಗಿಸಿಕೊಂಡು "ಸುಗ್ರೀವ, ನಾವು ನಾಲ್ವರು ಅಣ್ಣತಮ್ಮಂದಿರಾಗಿದ್ದೆವು. ಈಗ ನೀನು ಐದನೆಯ ಸೋದರನಾಗಿ ನಮ್ಮಲ್ಲಿ ಸೇರಿದೆ. ಒಳ್ಳೆಯ ಹೃದಯದಿಂದ ಉಪಕಾರ ಮಾಡುವವನೇ ಮಿತ್ರ. ಅಪಕಾರವು ಶತ್ರುಲಕ್ಷಣ" ಎಂದನು (೪೩–೪೫). ಅನಂತರ ವಿಭೀಷಣನ ಕಡೆಗೆ ತಿರುಗಿ ಒಳ್ಳೆಯ ಮಾತಿನಿಂದ ಆದರಿಸಿ "ನಮ್ಮ ಭಾಗ್ಯದಿಂದ

---

* ಅನುಬಂಧವನ್ನು ನೋಡಿ.

ದಿಷ್ಟ್ಯಾ ತ್ವಯಾ ಸಹಾಯೇನ ಕೃತಂ ಕರ್ಮ ಸುದುಷ್ಕರಮ್ ।
ಶತ್ರುಘ್ನಶ್ಚ ತದಾ ರಾಮಮಭಿವಾದ್ಯ ಸಲಕ್ಷ್ಮಣಮ್ ॥ ೪೭
ಸೀತಾಯಾಶ್ಚರಣೌ ಪಶ್ಚಾದ್ವಿನಯಾದಭ್ಯವಾದಯತ್ ।
ರಾಮೋ ಮಾತರಮಾಸಾದ್ಯ ವಿಷಣ್ಣಾಂ ಶೋಕಕರ್ಶಿತಾಮ್ ॥ ೪೮
ಜಗ್ರಾಹ ಪ್ರಣತಃ ಪಾದೌ ಮನೋ ಮಾತುಃ ಪ್ರಸಾದಯನ್ ।
ಅಭಿವಾದ್ಯ ಸುಮಿತ್ರಾಂ ಚ ಕೈಕೇಯೀಂ ಚ ಯಶಸ್ವಿನೀಮ್ ॥ ೪೯
ಸ ಮಾತೄಶ್ಚ ತತಃ ಸರ್ವಾಃ ಪುರೋಹಿತಮುಪಾಗತಮ್ ।
ಸ್ವಾಗತಂ ತೇ ಮಹಾಬಾಹೋ ಕೌಸಲ್ಯಾನಂದವರ್ಧನ ॥ ೫೦
ಇತಿ ಪ್ರಾಂಜಲಯಃ ಸರ್ವೇ ನಾಗರಾ ರಾಮಮಬ್ರುವನ್ ।
ತಾನ್ಯಂಜಲಿಸಹಸ್ರಾಣಿ ಪ್ರಗೃಹೀತಾನಿ ನಾಗರೈಃ ॥ ೫೧
ವ್ಯಾಕೋಶಾನೀವ ಪದ್ಮಾನಿ ದದರ್ಶ ಭರತಾಗ್ರಜಃ ।
ಪಾದುಕೇ ತೇ ತು ರಾಮಸ್ಯ ಗೃಹೀತ್ವಾ ಭರತಃ ಸ್ವಯಮ್ ॥ ೫೨

---

ಶ್ರೀರಾಮನಿಗೆ ನಿನ್ನ ನೆರವು ದೊರೆಯಿತು. ನೀನು ಸಹಾಯಕನಾಗಿ ದುಷ್ಕರವಾದ ಕಾರ್ಯವನ್ನೆಸಗಿದ್ದೀಯೆ" ಎಂದು ಅವನನ್ನು ಸಂಭಾವಿಸಿದನು (೪೬). ಅಷ್ಟರಲ್ಲಿ ಶತ್ರುಘ್ನನು ಬಂದು ಶ್ರೀರಾಮಲಕ್ಷ್ಮಣರಿಗೆ ಅಭಿವಾದನೆಮಾಡಿ ಜಾನಕಿಯ ಪಾದಗಳಿಗೆ ವಿನಯದಿಂದ ವಂದಿಸಿದನು. ಆಮೇಲೆ ಶ್ರೀರಾಮನು ತನ್ನ ತಾಯಿಯಾದ ಕೌಸಲ್ಯೆಯ ಬಳಿಗೆ ಹೋಗಿ, ತನ್ನ ವಿರಹವ್ಯಥೆಯಿಂದ ಕಂದಿ ಕುಂದಿ ಶೋಕಾಕುಲಳಾಗಿದ್ದ ಅವಳ ಪಾದಗಳನ್ನು ಹಿಡಿದು ಅಭಿವಾದನೆ ಮಾಡಿದನು (೪೭-೪೮). "ಅಮ್ಮ, ನಿನ್ನ ಆಜ್ಞೆಯನ್ನುಲ್ಲಂಘಿಸಿ ಕಾಡಿಗೆ ಹೋದುದಕ್ಕಾಗಿ ನನ್ನನ್ನು ಮನ್ನಿಸು" ಎಂದು ಹೇಳುತ್ತ ಅವಳನ್ನು ಸಂತೈಸಿದನು. ಆಮೇಲೆ ರಾಘವನು ಸುಮಿತ್ರೆಯನ್ನೂ ಕೀರ್ತಿಶಾಲಿನಿಯಾದ ಕೈಕೇಯಿಯನ್ನೂ ಅಭಿವಂದಿಸಿ, ಸಮಸ್ತ ಮಾತೆಯರಿಗೂ ಪ್ರಣಾಮಗಳನ್ನರ್ಪಿಸಿ, ಕುಲಪುರೋಹಿತರಾದ ವಸಿಷ್ಠರಿಗೆ ಅಭಿವಾದನೆ ಮಾಡಿದನು (೪೯-೫೦). ನೆರೆದಿದ್ದ ಪುರಜನರೆಲ್ಲರೂ ಶ್ರೀರಾಮನನ್ನು ನೋಡಿ ಕೈಮುಗಿದು "ಓ ಮಹಾಬಾಹು-ಕೌಸಲ್ಯಾನಂದವರ್ಧನ, ನಿನಗೆ ಸುಖಾಗಮನವನ್ನು ಬಯಸುತ್ತೇವೆ" ಎಂದು ಸ್ವಾಗತವನ್ನು ನೀಡಿದರು. ನಗರವಾಸಿಗಳು ಬದ್ಧಾಂಜಲಿಗಳಾಗಿ ನಿಂತಿರಲು, ಅವರ

ಚರಣಾಭ್ಯಾಂ ನರೇಂದ್ರಸ್ಯ ಯೋಜಯಾಮಾಸ ಧರ್ಮವಿತ್ ।
ಅಬ್ರವೀಚ್ಚ ತದಾ ರಾಮಂ ಭರತಃ ಸ ಕೃತಾಂಜಲಿಃ ॥ ೫೩

ಏತತ್ತೇ ರಕ್ಷಿತಂ ರಾಜನ್ ರಾಜ್ಯಂ ನಿರ್ಯಾತಿತಂ ಮಯಾ ।
ಅದ್ಯ ಜನ್ಮ ಕೃತಾರ್ಥಂ ಮೇ ಸಂವೃತ್ತಶ್ಚ ಮನೋರಥಃ ॥ ೫೪

ಯಸ್ತ್ವಾಂ ಪಶ್ಯಾಮಿ ರಾಜಾನಮಯೋಧ್ಯಾಂ ಪುನರಾಗತಮ್ ।
ಅವೇಕ್ಷತಾಂ ಭವಾನ್ ಕೋಶಂ ಕೋಷ್ಠಾಗಾರಂ ಪುರಂ ಬಲಮ್ ॥

ಭವತಸ್ತೇಜಸಾ ಸರ್ವಂ ಕೃತಂ ದಶಗುಣಂ ಮಯಾ ।
ತಥಾ ಬ್ರುವಾಣಂ ಭರತಂ ದೃಷ್ಟ್ವಾ ತಂ ಭ್ರಾತೃವತ್ಸಲಮ್ ॥ ೫೬

ಮುಮುಚುರ್ವಾನರಾ ಬಾಷ್ಪಂ ರಾಕ್ಷಸಶ್ಚ ವಿಭೀಷಣಃ ।
ತತಃ ಪ್ರಹರ್ಷಾದ್ಭರತಮಂಕಮಾರೋಪ್ಯ ರಾಘವಃ ॥ ೫೭

---

ಅಂಜಲಿಗಳು ಅರಳಿದ ಸಾವಿರಾರು ತಾವರೆಹೂಗಳಂತೆ ಶ್ರೀರಾಮನಿಗೆ ಗೋಚರಿಸಿದವು (೫೧-೫೨). ಅಷ್ಟರಲ್ಲಿ ಧರ್ಮವಿದನಾದ ಭರತನು ಶ್ರೀರಾಮನ ಪಾದುಕೆಗಳನ್ನು ಅವನ ಪಾದಗಳಿಗೆ ತೊಡಿಸಿ ಕೃತಾಂಜಲಿಯಾಗಿ "ಮಹಾರಾಜ, ನನ್ನಲ್ಲಿ ನ್ಯಾಸವಾಗಿಟ್ಟಿದ್ದ ನಿನ್ನ ರಾಜ್ಯವನ್ನು ಇದುವರೆಗೆ ರಕ್ಷಿಸಿಕೊಂಡು ಬಂದೆನು. ಈಗ ನಿನಗೆ ಒಪ್ಪಿಸಿದ್ದೇನೆ. ಕೋಸಲಾಧಿಪತಿಯಾದ ನೀನು ಅಯೋಧ್ಯೆಗೆ ಪುನರಾಗಮಿಸಿರುವುದನ್ನು ನೋಡುತ್ತಿದ್ದೇನೆ. ಈ ದಿನ ನನ್ನ ಜನ್ಮ ಕೃತಾರ್ಥವಾಯಿತು. ನನ್ನ ಮನೋರಥವು ಸಿದ್ಧಿಸಿತು. ನಿನ್ನ ರಾಜಭಂಡಾರ, ಧಾನ್ಯಾಗಾರ, ರಾಜಧಾನಿ, ಚತುರಂಗಬಲ—ಇವೆಲ್ಲವುಗಳ ಮೇಲ್ವಿಚಾರಣೆಯನ್ನು ನೀನು ವಹಿಸಿಕೊಳ್ಳಬಹುದು (೫೩-೫೫). ಅಣ್ಣಾ, ನಿನ್ನ ತೇಜೋಮಹಿಮೆಯಿಂದ ಅವೆಲ್ಲವನ್ನೂ ಹತ್ತರಷ್ಟಾಗಿ ಹೆಚ್ಚಿಸಿರುವೆನು" ಎಂದು ನಿವೇದಿಸಿದನು. ಭ್ರಾತೃವತ್ಸಲನಾದ ಭರತನು ಈ ಪ್ರಕಾರವಾಗಿ ವಿಜ್ಞಾಪಿಸುವುದನ್ನು ಕಂಡು, ವಾನರರ ಮತ್ತು ವಿಭೀಷಣನ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದವು (೫೬). ಶ್ರೀರಾಮನು ಪರಮಹರ್ಷದಿಂದ ಭರತನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ವಾನರಸೇನಾಪರಿವೃತನಾಗಿ ಪುಷ್ಪಕ

ಯಯೌ ತೇನ ವಿಮಾನೇನ ಸಸೈನ್ಯೋ ಭರತಾಶ್ರಮಮ್ ।
ಭರತಾಶ್ರಮಮಾಸಾದ್ಯ ಸಸೈನ್ಯೋ ರಾಘವಸ್ತದಾ ॥ ೫೮

ಅವತೀರ್ಯ ವಿಮಾನಾಗ್ರಾದವತಸ್ಥೇ ಮಹೀತಲೇ ।
ಅಬ್ರವೀಚ್ಚ ತದಾ ರಾಮಸ್ತದ್ವಿಮಾನಮನುತ್ತಮಮ್ ॥ ೫೯

ವಹ ವೈಶ್ರವಣಂ ದೇವಮನುಜಾನಾಮಿ ಗಮ್ಯತಾಮ್ ।
ತತೋ ರಾಮಾಭ್ಯನುಜ್ಞಾತಂ ತದ್ವಿಮಾನಮನುತ್ತಮಮ್ ॥ ೬೦

ಉತ್ತರಾಂ ದಿಶಮಾಗಮ್ಯ ಜಗಾಮ ಧನದಾಲಯಮ್ ॥

ಪುರೋಹಿತಸ್ಯಾತ್ಮಸಮಸ್ಯ ರಾಘವೋ
ಬೃಹಸ್ಪತೇಃ ಶಕ್ರ ಇವಾಮರಾಧಿಪಃ ।
ನಿಪೀಡ್ಯ ಪಾದೌ ಪೃಥಗಾಸನೇ ಶುಭೇ
ಸಹೈವ ತೇನೋಪವಿವೇಶ ರಾಘವಃ ॥ ೬೧

ಇತಿ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಿಂಶದುತ್ತರಶತತಮಃ ಸರ್ಗಃ

---

ವಿಮಾನದಲ್ಲಿ ಭರತಾಶ್ರಮವಾದ ನಂದಿಗ್ರಾಮಕ್ಕೆ ಬಂದನು. ಅಲ್ಲಿ ರಾಘವನು ವಾನರಸೇನೆಯೊಂದಿಗೆ ವಿಮಾನದಿಂದ ಧರೆಗಿಳಿದನು(೫೭-೫೮). ಅನಂತರ ಆ ದಿವ್ಯ ವಿಮಾನವನ್ನು ಕುರಿತು ಶ್ರೀರಾಮನು "ಎಲೈ ಪುಷ್ಪಕ ವಿಮಾನವೆ, ನಿನಗೆ ಅನುಜ್ಞೆಯನ್ನು ಕೊಟ್ಟಿದ್ದೇನೆ. ನೀನು ಹೊರಡಬಹುದು. ಕುಬೇರನ ಸನ್ನಿಧಿಯನ್ನು ಸೇರಿ ಆತನಿಗೆ ವಾಹನವಾಗಿರು" ಎಂದನು. ಶ್ರೀರಾಮನ ಅನುಮತಿಯನ್ನು ಪಡೆದು ಆ ದಿವ್ಯ ವಿಮಾನವು ಉತ್ತರದಿಕ್ಕಿಗೆ ಪ್ರಯಾಣಮಾಡಿ ಕುಬೇರಾಲಯವನ್ನು ಸೇರಿತು (೫೯-೬೦). ಅನಂತರ ಶ್ರೀರಾಮನು, ಬ್ರಹ್ಮಜ್ಞರಾದ್ದರಿಂದ ಪರಮಾತ್ಮಸಮಾನರೂ* ಪುರೋಹಿತರೂ ಆದ ವಸಿಷ್ಠಮುನಿಗಳ ಪಾದಗಳನ್ನು ಮುಟ್ಟಿ, ದೇವೇಂದ್ರನು ಬೃಹಸ್ಪತಿಯನ್ನು ವಂದಿಸುವಂತೆ, ಅವರಿಗೆ ವಂದಿಸಿದನು. ಅವರಿಬ್ಬರೂ ಪವಿತ್ರವಾದ ಬೇರೆ ಬೇರೆ ಆಸನಗಳಲ್ಲಿ ಕುಳಿತರು (೬೧).

ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಮೂವತ್ತನೆಯ ಸರ್ಗ

---

* 'ಆತ್ಮಸಮಸ್ಯ' ಎಂದು ಮೂಲದಲ್ಲಿದೆ. 'ತನಗೆ ಅನುರೂಪರಾದ' ಎಂದೂ ಅರ್ಥವನ್ನು ಹೇಳಬಹುದು. 'ಆತ್ಮಸಖಸ್ಯ' ಎಂದು ಪಾಠಾಂತರವಿದೆ. ಆಗ 'ತನ್ನ ಮಿತ್ರನಾದ ಸುಯಜ್ಞ'ನೆಂದು ಹೇಳಬಹುದು. ಸುಯಜ್ಞನು ವಸಿಷ್ಠರ ಮಗ.

## ಏಕತ್ರಿಂಶದುತ್ತರಶತತಮಃ ಸರ್ಗಃ

### ಶ್ರೀರಾಮಪಟ್ಟಾಭಿಷೇಕಃ

ಶಿರಸ್ಯಂಜಲಿಮಾಧಾಯ ಕೈಕೇಯ್ಯಾನಂದವರ್ಧನಃ ।
ಬಭಾಷೇ ಭರತೋ ಜ್ಯೇಷ್ಠಂ ರಾಮಂ ಸತ್ಯಪರಾಕ್ರಮಮ್ ॥ ೧

ಪೂಜಿತಾ ಮಾಮಿಕಾ ಮಾತಾ ದತ್ತಂ ರಾಜ್ಯಮಿದಂ ಮಮ ।
ತದ್ದದಾಮಿ ಪುನಸ್ತುಭ್ಯಂ ಯಥಾ ತ್ವಮದದಾ ಮಮ ॥ ೨

ಧುರಮೇಕಾಕಿನಾ ನ್ಯಸ್ತಾಮೃಷಭೇಣ ಬಲೀಯಸಾ ।
ಕಿಶೋರವದ್ಗುರುಂ ಭಾರಂ ನ ವೋಢುಮಹಮುತ್ಸಹೇ ॥ ೩

ವಾರಿವೇಗೇನ ಮಹತಾ ಭಿನ್ನಃ ಸೇತುರಿವ ಕ್ಷರನ್ ।
ದುರ್ಬಂಧನಮಿದಂ ಮನ್ಯೇ ರಾಜ್ಯಚ್ಛಿದ್ರಮಸಂವೃತಮ್ ॥ ೪

### ಸರ್ಗ ೧೩೧

#### ಶ್ರೀರಾಮನ ಪಟ್ಟಾಭಿಷೇಕ.

ಆಗ ಭರತನು ತನ್ನ ಶಿರಸ್ಸಿನಮೇಲೆ ಕೈಜೋಡಿಸಿಕೊಂಡು ತಾಯಿಯಾದ ಕೈಕೇಯಿಯ ಆನಂದವನ್ನು ವರ್ಧಿಸುತ್ತ, ಜ್ಯೇಷ್ಠನೂ ಸತ್ಯಸಂಧನೂ ಆದ ಶ್ರೀರಾಮನನ್ನು ಕುರಿತು ಈ ರೀತಿಯಲ್ಲಿ ವಿಜ್ಞಾಪಿಸಿದನು (೧): "ಅಣ್ಣ, ನನ್ನ ಮಾತೆಯ ನುಡಿಗೆ ಬೆಲೆ ಕೊಟ್ಟು ಆದರಿಸಿದ್ದಾಯಿತು. ಈ ರಾಜ್ಯವನ್ನು ಯಾವ ಪ್ರಕಾರದಲ್ಲಿ ನನ್ನ ವಶಕ್ಕೆ ಕೊಟ್ಟೆಯೋ ಅದೇ ರೂಪದಲ್ಲಿ ಇದನ್ನು ನಿನಗೆ ಅರ್ಪಿಸುತ್ತೇನೆ. ಪ್ರಬಲವಾದ ಮಹಾವೃಷಭವು ಹೊರಬಲ್ಲ ಮಹಾಭಾರವನ್ನು ಒಂದು ಕರು ಹೊರಬಲ್ಲುದೆ? ರಾಜ್ಯದ ಈ ಭಾರವನ್ನು ನಿರ್ವಹಿಸಲು ನಾನು ಶಕ್ತನಲ್ಲ (೨-೩). ರಾಜ್ಯನಿರ್ವಹಣೆ ಬಹು ತೊಡಕಾದುದು. ಉತ್ತಮವಾದ ಪ್ರಭುಶಕ್ತಿಯ ಬಲವಿಲ್ಲದೆ ತೊಡಕನ್ನು ಪರಿಹರಿಸಿ ರಾಜ್ಯವನ್ನು ಪಾಲಿಸುವುದು ಅಶಕ್ಯವೆಂದು ತಿಳಿಯುತ್ತೇನೆ. ರಾಜ್ಯಪಾಲನೆಯೆಂಬುದು ಮಹಾವೇಗದಿಂದೆರಗುವ ಜಲಪ್ರವಾಹದ ಹೊಡೆತಕ್ಕೆ ಒಡೆದುಹೋದ ಅಣೆಕಟ್ಟನ್ನು ಸರಿಪಡಿಸಿದಂತೆಯೇ ಸರಿ!

ಗತಿಂ ಖರ ಇವಾಶ್ವಸ್ಯ ಹಂಸಸ್ಯೇವ ಚ ವಾಯಸಃ ।
ನಾನ್ವೇತುಮುತ್ಸಹೇ ರಾಮ ತವ ಮಾರ್ಗಮರಿಂದಮ ॥ ೫

ಯಥಾ ಚಾರೋಪಿತೋ ವೃಕ್ಷೋ ಜಾತಶ್ಚಾಂತರ್ನಿವೇಶನೇ ।
ಮಹಾಂಶ್ಚ ಸುದುರಾರೋಹೋ ಮಹಾಸ್ಕಂಧಪ್ರಶಾಖವಾನ್ ॥ ೬

ಶೀರ್ಯೇತ ಪುಷ್ಪಿತೋ ಭೂತ್ವಾ ನ ಫಲಾನಿ ಪ್ರದರ್ಶಯನ್ ।
ತಸ್ಯ ನಾನುಭವೇದರ್ಥಂ ಯಸ್ಯ ಹೇತೋಃ ಸ ರೋಪ್ಯತೇ ॥ ೭

ಏಷೋಪಮಾ ಮಹಾಬಾಹೋ ತ್ವಮರ್ಥಂ ವೇತ್ತುಮರ್ಹಸಿ ।
ಯದ್ಯಸ್ಮಾನ್ಮನುಜೇಂದ್ರ ತ್ವಂ ಭಕ್ತಾನ್ ಭೃತ್ಯಾನ್ನ ಶಾಧಿ ಹಿ ॥ ೮

---

ನನ್ನಂತಹ ಸಾಮಾನ್ಯರಿಂದ ಇದು ಆಗತಕ್ಕದ್ದಲ್ಲ (೪) ಶ್ರೀರಾಮ, ನಿನ್ನ ಮಾರ್ಗವನ್ನು ತುಳಿಯಲು—ನಿನ್ನ ನಿರ್ವಾಹದಕ್ಷತೆಯನ್ನನುಕರಿಸಲು—ನನಗೆ ಶಕ್ತಿಯಿಲ್ಲ. ಅಶ್ವದ ನಡೆಯನ್ನು ಕತ್ತೆಯೂ ಹಂಸದ ಗಮನವಿಧಾನವನ್ನು ಕಾಗೆಯೂ ಅನುಕರಿಸಿದಂತಾಗುವುದು (೫). ಮನೆಯ ತೋಟದಲ್ಲಿ ಹುಟ್ಟಿದ ಗಿಡವನ್ನು ಸಾಕಿ ಬೆಳೆಸಿದಾಗ, ಅದು ದೊಡ್ಡದಾಗಿ ಶಾಖೋಪಶಾಖೆಗಳಿಂದ ಕೂಡಿ ದುರಾರೋಹವಾದ ವೃಕ್ಷವಾಗುತ್ತದೆ ಅದರಲ್ಲಿ ಬೇಕಾದಷ್ಟು ಹೂಗಳು ಅರಳುತ್ತವೆ. ಆದರೆ ಆ ವೃಕ್ಷವು ಹಣ್ಣುಗಳನ್ನು ಕೊಡದೆ ಹಾಗೆಯೇ ನಶಿಸಿಹೋದ ಪಕ್ಷದಲ್ಲಿ, ಅದನ್ನು ಬೆಳೆಸಿದವನಿಗೆ ಎಷ್ಟು ಖೇದವಾದೀತು? ಯಾವ ಫಲದ ಅಪೇಕ್ಷೆಯಿಂದ ಆ ವೃಕ್ಷವನ್ನು ಪೋಷಿಸಿದನೋ, ಅದು ಪೋಷಕನಿಗೆ ಲಭಿಸದೆ ಹೋಗುವುದು (೬-೭). ಓ ಮಹಾಬಾಹು, ಭಕ್ತರೂ ಭೃತ್ಯರೂ ಆದ ನಮ್ಮನ್ನು ನರೇಂದ್ರನಾಗಿ ನೀನು ಪಾಲಿಸದಿದ್ದಲ್ಲಿ, ಇದೇ ನಾನು ಕೊಡುವ ಹೋಲಿಕೆ! ಈ ವೃಕ್ಷೋಪಮೆಯ * ಅರ್ಥವೇನೆಂಬುದನ್ನು ನೀನೇ ತಿಳಿದುಕೊ. ಅಣ್ಣ,

---

* ದಶರಥನು ಬಹುಕಾಲದವರೆಗೆ ಪರಿತಪಿಸಿ ಪುತ್ರಕಾಮೇಷ್ಟಿಯನ್ನು ಮಾಡಿ ಶ್ರೀರಾಮನನ್ನು ಪಡೆದನು. ಶ್ರೀರಾಮನು ಮಹಾರಾಜನಾಗಿ ರಾಜ್ಯವನ್ನು ಪಾಲಿಸಬೇಕೆಂಬುದು ದಶರಥನ ಉದ್ದೇಶವಾಗಿತ್ತು. ಈಗ ಶ್ರೀರಾಮನು ರಾಜ್ಯಪಾಲನಾಕಾರ್ಯವನ್ನು ಅಂಗೀಕರಿಸದಿದ್ದಲ್ಲಿ, ದಶರಥನ ಮುಖ್ಯೋದ್ದೇಶವೇ ಭಗ್ನವಾಗುವುದೆಂದೂ ಸಕಲ ಪ್ರಜೆಗಳಿಗೂ ದುಃಖವಾಗುವುದೆಂದೂ ಭರತನ ಅಭಿಪ್ರಾಯ. ಇಲ್ಲಿ ಶ್ರೀರಾಮನಿಗೂ ವೃಕ್ಷಕ್ಕೂ ಹೋಲಿಕೆ.

ಜಗದದ್ಯಾಭಿಷಿಕ್ತಂ ತ್ವಾಮನುಪಶ್ಯತು ಸರ್ವತಃ ।
ಪ್ರತಪಂತಮಿವಾದಿತ್ಯಂ ಮಧ್ಯಾಹ್ನೇ ದೀಪ್ತತೇಜಸಮ್ ॥ ೯

ತೂರ್ಯಸಂಘಾತನಿರ್ಘೋಷೈಃ ಕಾಂಚೀನೂಪುರನಿಃಸ್ವನೈಃ ।
ಮಧುರೈರ್ಗೀತಶಬ್ದೈಶ್ಚ ಪ್ರತಿಬುಧ್ಯಸ್ವ ರಾಘವ ॥ ೧೦

ಯಾವದಾವರ್ತತೇ ಚಕ್ರಂ ಯಾವತೀ ಚ ವಸುಂಧರಾ ।
ತಾವತ್ತ್ವಮಿಹ ಸರ್ವಸ್ಯ ಸ್ವಾಮಿತ್ವಮನುವರ್ತಯ ॥ ೧೧

ಭರತಸ್ಯ ವಚಃ ಶ್ರುತ್ವಾ ರಾಮಃ ಪರಪುರಂಜಯಃ ।
ತಥೇತಿ ಪ್ರತಿಜಗ್ರಾಹ ನಿಷಸಾದಾಸನೇ ಶುಭೇ ॥ ೧೨

ತತಃ ಶತ್ರುಘ್ನವಚನಾನ್ನಿಪುಣಾಃ ಶ್ಮಶ್ರುವರ್ಧಕಾಃ ।
ಸುಖಹಸ್ತಾಃ ಸುಶೀಘ್ರಾಶ್ಚ ರಾಘವಂ ಪರ್ಯುಪಾಸತ ॥ ೧೩

ಪೂರ್ವಂ ತು ಭರತೇ ಸ್ನಾತೇ ಲಕ್ಷ್ಮಣೇ ಚ ಮಹಾಬಲೇ ।
ಸುಗ್ರೀವೇ ವಾನರೇಂದ್ರೇ ಚ ರಾಕ್ಷಸೇಂದ್ರೇ ವಿಭೀಷಣೇ ॥ ೧೪

---

ಈ ದಿನ ನೀನು ಪಟ್ಟಾಭಿಷಿಕ್ತನಾಗುವುದನ್ನು ಜಗತ್ತು ನೋಡಬೇಕು. ಮಧ್ಯಾಹ್ನದಲ್ಲಿ ರಾರಾಜಿಸುವ ಆದಿತ್ಯನಂತೆ ರಾಜತೇಜಸ್ಸಿನಿಂದ ಬೆಳಗುವ ನಿನ್ನನ್ನು ಲೋಕವು ಕಾಣಬೇಕು (೮–೯). ರಘುಕುಲತಿಲಕ, (ಇನ್ನುಮೇಲೆ ನಾಳೆಯ ಬೆಳಗಿನಿಂದಲೇ) ಮಂಗಳವಾದ್ಯಘೋಷಗಳನ್ನೂ ಕಾಂಚೀ ನೂಪುರಗಳ ಇಂಪಾದ ಜಣಜಣತ್ಕಾರಗಳನ್ನೂ ಮಧುರವಾದ ಸಂಗೀತ ವನ್ನೂ ಕೇಳುತ್ತ ನೀನು ಸುಖನಿದ್ರೆಯಿಂದ ಎಚ್ಚರಗೊಳ್ಳುವಂತಾಗಬೇಕು! (೧೦). ಎಂದಿನವರೆಗೆ ಈ ಜ್ಯೋತಿಶ್ಚಕ್ರವು ಸುತ್ತುವುದೋ, ಎಂದಿನವರೆಗೆ ಈ ಭೂಮಿ ಇರುವುದೋ ಅಂದಿನವರೆಗೆ, ಅಣ್ಣ, ಈ ಸಮಸ್ತ ರಾಜ್ಯಕ್ಕೂ ಪ್ರಭುವಾಗಿ ಪಾಲಿಸುತ್ತಿರು" ಎಂದು ನಿವೇದಿಸಿದನು (೧೧). ಭರತನ ನುಡಿಯನ್ನು ಕೇಳಿ ಶ್ರೀರಾಮನು "ವತ್ಸ, ಹಾಗೆಯೇ ಆಗಲಿ" ಎಂದು ಸಮ್ಮತಿಸಿದನು. ಆಮೇಲೆ ಭರತನು ಒಂದು ಶುಭಾಸನದಲ್ಲಿ ಕುಳಿತನು. ಆಗ ಶತ್ರುಘ್ನನು ಶೀಘ್ರದಲ್ಲಿ ಮೃದುವಾಗಿ ಕೆಲಸಮಾಡಬಲ್ಲ ನಿಪುಣರಾದ ಕ್ಷೌರಿಕರನ್ನು ಕರೆಸಿದನು. ಅವರು ಶ್ರೀರಾಮ, ಭರತ ಮೊದಲಾದವರಿಗೆ ಕ್ಷೌರಕರ್ಮವನ್ನು ನಡೆಸಿದರು (೧೨–೧೩). ಮೊದಲು ಭರತನು ಸ್ನಾನ ಮಾಡಿದಮೇಲೆ ಲಕ್ಷ್ಮಣನು ಸ್ನಾನಮಾಡಿದನು. ಆಮೇಲೆ ಸುಗ್ರೀವನೂ

ವಿಶೋಧಿತಜಟಃ ಸ್ನಾತಶ್ಚಿತ್ರಮಾಲ್ಯಾನುಲೇಪನಃ ।
ಮಹಾರ್ಹವಸನೋ ರಾಮಸ್ತಸ್ಥೌ ತತ್ರ ಶ್ರಿಯಾ ಜ್ವಲನ್ ॥ ೧೫

ಪ್ರತಿಕರ್ಮ ಚ ರಾಮಸ್ಯ ಕಾರಯಾಮಾಸ ವೀರ್ಯವಾನ್ ।
ಲಕ್ಷ್ಮಣಸ್ಯ ಚ ಲಕ್ಷ್ಮೀವಾನಿಕ್ಷ್ವಾಕುಕುಲವರ್ಧನಃ ॥ ೧೬

ಪ್ರತಿಕರ್ಮ ಚ ಸೀತಾಯಾಃ ಸರ್ವಾ ದಶರಥಸ್ತ್ರಿಯಃ ।
ಆತ್ಮನೈವ ತದಾ ಚಕ್ರುರ್ಮನಸ್ವಿನ್ಯೋ ಮನೋಹರಮ್ ॥ ೧೭

ತತೋ ವಾನರಪತ್ನೀನಾಂ ಸರ್ವಾಸಾಮೇವ ಶೋಭನಮ್ ।
ಚಕಾರ ಯತ್ನಾತ್ ಕೌಸಲ್ಯಾ ಪ್ರಹೃಷ್ಟಾ ಪುತ್ರಲಾಲಸಾ ॥ ೧೮

ತತಃ ಶತ್ರುಘ್ನವಚನಾತ್ ಸುಮಂತ್ರೋ ನಾಮ ಸಾರಥಿಃ ।
ಯೋಜಯಿತ್ವಾಭಿಚಕ್ರಾಮ ರಥಂ ಸರ್ವಾಂಗಶೋಭನಮ್ ॥ ೧೯

---

ವಿಭೀಷಣನೂ ಸ್ನಾನಮಾಡಿದರು.* ಅನಂತರ ಶ್ರೀರಾಮನು ಜಟೆಯನ್ನು ತೆಗೆಸಿ ಕೂದಲನ್ನು ನಯಪಡಿಸಿಕೊಂಡು ಸ್ನಾನಮಾಡಿ ಚಿತ್ರಮಾಲ್ಯಗಳನ್ನು ಧರಿಸಿ ದಿವ್ಯಗಂಧವನ್ನು ಹಚ್ಚಿಕೊಂಡು, ಶ್ರೇಷ್ಠವಾದ ಪೀತಾಂಬರವನ್ನು ಉಟ್ಟನು. ಆಗ ಶ್ರೀರಾಮನ ದಿವ್ಯತೇಜಸ್ಸನ್ನು ಏನೆಂದು ವರ್ಣಿಸುವುದು! (೧೪–೧೫). ಇಕ್ಷ್ವಾಕುವಂಶೋತ್ತಮನೂ ತೇಜಸ್ವಿಯೂ ಆದ ಶತ್ರುಘ್ನನು ವಿವಿಧಾಭರಣಗಳನ್ನು ತರಿಸಿ ಶ್ರೀರಾಮನಿಗೂ ಲಕ್ಷ್ಮಣನಿಗೂ ಅಲಂಕಾರ ಮಾಡಿಸಿದನು. ಶುಭಹೃದಯರಾದ ದಶರಥನ ಅಂತಃಪುರಸ್ತ್ರೀಯರೆಲ್ಲರೂ ಬಂದು ತಮ್ಮ ಕೈಯಿಂದಲೇ ಜಾನಕಿಗೆ ಸ್ನಾನಮಾಡಿಸಿ ದಿವ್ಯವಸ್ತ್ರವನ್ನುಡಿಸಿ ಆಭರಣಗಳನ್ನು ತೊಡಿಸಿ ಮನೋಹರವಾಗಿ ಶೃಂಗರಿಸಿದರು (೧೬–೧೭). ಪುತ್ರವತ್ಸಲೆಯಾದ ಕೌಸಲ್ಯೆಯು ಸಂತುಷ್ಟಳಾಗಿ ವಾನರಪತ್ನಿಯರೆಲ್ಲರಿಗೂ ಆಸ್ಥೆಯಿಂದ ಅಲಂಕಾರಮಾಡಿಸಿದಳು! ಅಷ್ಟರಲ್ಲಿ ಶತ್ರುಘ್ನನ ಸೂಚನೆ ಯಂತೆ ಸುಮಂತ್ರನು ಸರ್ವಾಂಗಸುಂದರವಾದ ರಥಕ್ಕೆ ಅಶ್ವಗಳನ್ನು ಹೂಡಿ

---

* ಶತ್ರುಘ್ನನೂ ಕ್ಷೌರಮಾಡಿಸಿಕೊಂಡು ಸ್ನಾನಮಾಡಿದನೆಂದು ಉಪಲಕ್ಷಣ ವಾಗಿ ತಿಳಿಯಬೇಕು.

ಅರ್ಕಮಂಡಲಸಂಕಾಶಂ ದಿವ್ಯಂ ದೃಷ್ಟ್ವಾ ರಥೋತ್ತಮಮ್ ।
ಆರುರೋಹ ಮಹಾಬಾಹೂ ರಾಮಃ ಸತ್ಯಪರಾಕ್ರಮಃ ॥ ೨೦

ಸುಗ್ರೀವೋ ಹನುಮಾಂಶ್ಚೈವ ಮಹೇಂದ್ರಸದೃಶದ್ಯುತೀ ।
ಸ್ನಾತೌ ದಿವ್ಯನಿಭೈರ್ವಸ್ತ್ರೈರ್ಜಗ್ಮತುಃ ಶುಭಕುಂಡಲೌ ॥ ೨೧

ವರಾಭರಣಸಂಪನ್ನಾ ಯಯುಸ್ತಾಃ ಶುಭಕುಂಡಲಾಃ ।
ಸುಗ್ರೀವಪತ್ನ್ಯಃ ಸೀತಾ ಚ ದ್ರಷ್ಟುಂ ನಗರಮುತ್ಸುಕಾಃ ॥ ೨೨

ಅಯೋಧ್ಯಾಯಾಂ ತು ಸಚಿವಾ ರಾಜ್ಞೋ ದಶರಥಸ್ಯ ಯೇ ।
ಪುರೋಹಿತಂ ಪುರಸ್ಕೃತ್ಯ ಮಂತ್ರಯಾಮಾಸುರರ್ಥವತ್ ॥ ೨೩

ಅಶೋಕೋ ವಿಜಯಶ್ಚೈವ ಸುಮಂತ್ರಶ್ಚೈವ ಸಂಗತಾಃ ।
ಮಂತ್ರಯನ್ ರಾಮವೃದ್ಧ್ಯರ್ಥಮೃದ್ಧ್ಯರ್ಥಂ ನಗರಸ್ಯ ಚ ॥ ೨೪

ಸರ್ವಮೇವಾಭಿಷೇಕಾರ್ಥಂ ಜಯಾರ್ಹಸ್ಯ ಮಹಾತ್ಮನಃ ।
ಕರ್ತುಮರ್ಹಸಿ ರಾಮಸ್ಯ ಯದ್ಯನ್ಮಂಗಲಪೂರ್ವಕಮ್ ॥ ೨೫

---

ತಂದು ನಿಲ್ಲಿಸಿದನು (೧೮-೧೯). ಮಹಾಬಾಹುವೂ ಸತ್ಯಪರಾಕ್ರಮನೂ ಆದ ಶ್ರೀರಾಮನು ಸೂರ್ಯಮಂಡಲದಂತೆ ಬೆಳಗುತ್ತಿದ್ದ ಆ ದಿವ್ಯರಥವನ್ನೇರಿ ಕುಳಿತನು. ಅಷ್ಟರಲ್ಲಿ ಸುಗ್ರೀವನೂ ಹನುಮಂತನೂ ಸ್ನಾನಮಾಡಿ ದಿವ್ಯವಸ್ತ್ರಗಳನ್ನುಟ್ಟು ಅಂದವಾದ ಕುಂಡಲಗಳನ್ನು ಧರಿಸಿ, ದೇವೇಂದ್ರ ಸಮಾನವಾದ ತೇಜಸ್ಸಿನಿಂದ ರಾರಾಜಿಸುತ್ತ ಶ್ರೀರಾಮನೊಡನೆ ಹೊರಟರು (೨೦-೨೧). ಹಾಗೆಯೇ ಸುಗ್ರೀವಪತ್ನಿಯರೂ ಶ್ರೇಷ್ಠವಾದ ಒಡವೆಗಳನ್ನು ತೊಟ್ಟು ಶುಭಕುಂಡಲಗಳನ್ನು ಧರಿಸಿ, ಅಯೋಧ್ಯೆಯನ್ನು ನೋಡುವ ಕುತೂಹಲದಿಂದ ಸೀತಾದೇವಿಯೊಡನೆ ಬಂದರು. ಇತ್ತ ಅಯೋಧ್ಯಾನಗರದಲ್ಲಿ ದಶರಥರಾಜನಿಗೆ ಸಚಿವರಾಗಿದ್ದ ಅಶೋಕ, ವಿಜಯ, ಸುಮಂತ್ರ-ಮುಂತಾದವರು ಕುಲಪುರೋಹಿತರಾದ ವಸಿಷ್ಠರನ್ನು ಕಂಡು ಶ್ರೀರಾಮನ ಪಟ್ಟಾಭಿಷೇಕದ ವಿಷಯವಾಗಿ ಸಮಾಲೋಚಿಸಿದರು (೨೨-೨೩). ಶ್ರೀರಾಮನಿಗೂ ರಾಜಧಾನಿಗೂ ಶ್ರೇಯಸ್ಸಾಗುವಂತೆ ಯಾವ ಕ್ರಮದಲ್ಲಿ ಪಟ್ಟಾಭಿಷೇಕವನ್ನು ನಡೆಸಬೇಕೆಂದು ವಿಚಾರಮಾಡಿದರು. ಅವರು ವಸಿಷ್ಠರೊಡನೆ "ಮಾನ್ಯರೆ, ಶ್ರೇಯೋಭಾಗಿಯೂ ಮಹಾತ್ಮನೂ ಆದ

ಇತಿ ತೇ ಮಂತ್ರಿಣಃ ಸರ್ವೇ ಸಂದಿಶ್ಯ ತು ಪುರೋಹಿತಮ್ ।
ನಗರಾನ್ನಿರ್ಯಯುಸ್ತೂರ್ಣಂ ರಾಮದರ್ಶನಬುದ್ಧಯಃ ॥ ೨೬

ಹರಿಯುಕ್ತಂ ಸಹಸ್ರಾಕ್ಷೋ ರಥಮಿಂದ್ರ ಇವಾನಘಃ ।
ಪ್ರಯಯೌ ರಥಮಾಸ್ಥಾಯ ರಾಮೋ ನಗರಮುತ್ತಮಮ್ ॥ ೨೭

ಜಗ್ರಾಹ ಭರತೋ ರಶ್ಮೀನ್ ಶತ್ರುಘ್ನಶ್ಛತ್ರಮಾದದೇ ।
ಲಕ್ಷ್ಮಣೋ ವ್ಯಜನಂ ತಸ್ಯ ಮೂರ್ಧ್ನಿ ಸಂಪರ್ಯವೀಜಯತ್ ॥ ೨೮

ಶ್ವೇತಂ ಚ ವಾಲವ್ಯಜನಂ ಜಗ್ರಾಹ ಪುರತಃ ಸ್ಥಿತಃ ।
ಅಪರಂ ಚಂದ್ರಸಂಕಾಶಂ ರಾಕ್ಷಸೇಂದ್ರೋ ವಿಭೀಷಣಃ ॥ ೨೯

ಋಷಿಸಂಘೈಸ್ತದಾಕಾಶೇ ದೇವೈಶ್ಚ ಸಮರುದ್ಗಣೈಃ ।
ಸ್ತೂಯಮಾನಸ್ಯ ರಾಮಸ್ಯ ಶುಶ್ರುವೇ ಮಧುರಧ್ವನಿಃ ॥ ೩೦

ತತಃ ಶತ್ರುಂಜಯಂ ನಾಮ ಕುಂಜರಂ ಪರ್ವತೋಪಮಮ್ ।
ಆರುರೋಹ ಮಹಾತೇಜಾಃ ಸುಗ್ರೀವಃ ಪ್ಲವಗರ್ಷಭಃ ॥ ೩೧

---

ಶ್ರೀರಾಮನ ಪಟ್ಟಾಭಿಷೇಕಕ್ಕೆ ಯಾವ ಯಾವ ಮಂಗಳದ್ರವ್ಯಗಳು ಬೇಕೋ, ಅವೆಲ್ಲವನ್ನೂ ಸಿದ್ಧಪಡಿಸಿಕೊಳ್ಳಿರಿ" ಎಂದು ತಿಳಿಸಿ, ಶ್ರೀರಾಮನನ್ನು ಸಂದರ್ಶಿಸುವುದಕ್ಕಾಗಿ ಅಯೋಧ್ಯೆಯಿಂದ ಹೊರಟುಬಂದರು (೨೪-೨೬). ಶ್ರೀರಾಮನು ಅಶ್ವಗಳನ್ನು ಹೂಡಿದ ಉತ್ತಮರಥವನ್ನೇರಿ, ದಿವ್ಯರಥದಲ್ಲಿ ಮಂಡಿಸಿದ ದೇವೇಂದ್ರನಂತೆ ಅಯೋಧ್ಯಾಭಿಮುಖನಾಗಿ ಬಂದನು. ಭರತನು ಅಶ್ವಗಳ ಹಗ್ಗವನ್ನು ಹಿಡಿದು ತಾನೇ ಶ್ರೀರಾಮನ ರಥವನ್ನು ನಡೆಸಿದನು. ಶತ್ರುಘ್ನನು ಶ್ವೇತಚ್ಛತ್ರವನ್ನು ಹಿಡಿದನು. ಲಕ್ಷ್ಮಣನು ಚಾಮರವನ್ನು ಹಿಡಿದು ಶ್ರೀರಾಮನ ಶಿರಸ್ಸಿನ ಬಳಿ ಬೀಸುತ್ತಿದ್ದನು (೨೭-೨೮). ರಾಕ್ಷಸೇಂದ್ರನಾದ ವಿಭೀಷಣನು ಚಂದ್ರಸಂಕಾಶವಾದ ಮತ್ತೊಂದು ಬಿಳಿಯ ಚಾಮರವನ್ನು ಬೀಸುತ್ತ ಮುಂದೆ ನಿಂತನು. ವೈಭವೋಪೇತವಾದ ಆ ಮೆರವಣಿಗೆಯ ಸಮಯದಲ್ಲಿ ಋಷಿಗಳೂ ದೇವತೆಗಳೂ ಮರುತ್ತುಗಳೂ ಆಕಾಶದಲ್ಲಿ ನಿಂತು, ರಾಘವನ ಗುಣಪರಾಕ್ರಮಗಳನ್ನು ಮಂಜುಲಧ್ವನಿಯಿಂದ ಹೊಗಳಿ ಹಾಡುತ್ತಿದ್ದರು (೨೯-೩೦). ವಾನರೇಶ್ವರನೂ ಮಹಾತೇಜಸ್ವಿಯೂ ಆದ ಸುಗ್ರೀವನು ಶತ್ರುಂಜಯ

**ನವನಾಗಸಹಸ್ರಾಣಿ ಯಯುರಾಸ್ಥಾಯ ವಾನರಾಃ ।**
**ಮಾನುಷಂ ವಿಗ್ರಹಂ ಕೃತ್ವಾ ಸರ್ವಾಭರಣಭೂಷಿತಾಃ ॥** ೩೨

**ಶಂಖಶಬ್ದಪ್ರಣಾದೈಶ್ಚ ದುಂದುಭೀನಾಂ ಚ ನಿಃಸ್ವನೈಃ ।**
**ಪ್ರಯಯೌ ಪುರುಷವ್ಯಾಘ್ರಸ್ತಾಂ ಪುರೀಂ ಹರ್ಮ್ಯಮಾಲಿನೀಮ್ ॥**

**ದದೃಶುಸ್ತೇ ಸಮಾಯಾಂತಂ ರಾಘವಂ ಸಪುರಸ್ಸರಮ್ ।**
**ವಿರಾಜಮಾನಂ ವಪುಷಾ ರಥೇನಾತಿರಥಂ ತದಾ ॥** ೩೪

**ತೇ ವರ್ಧಯಿತ್ವಾ ಕಾಕುತ್ಸ್ಥಂ ರಾಮೇಣ ಪ್ರತಿನಂದಿತಾಃ ।**
**ಅನುಜಗ್ಮುರ್ಮಹಾತ್ಮಾನಂ ಭ್ರಾತೃಭಿಃ ಪರಿವಾರಿತಮ್ ॥** ೩೫

**ಅಮಾತ್ಯೈರ್ಬ್ರಾಹ್ಮಣೈಶ್ಚೈವ ತಥಾ ಪ್ರಕೃತಿಭಿರ್ವೃತಃ ।**
**ಶ್ರಿಯಾ ವಿರುರುಚೇ ರಾಮೋ ನಕ್ಷತ್ರೈರಿವ ಚಂದ್ರಮಾಃ ॥** ೩೬

**ಸ ಪುರೋಗಾಮಿಭಿಸ್ತೂರ್ಯೈಸ್ತಾಲಸ್ವಸ್ತಿಕಪಾಣಿಭಿಃ ।**
**ಪ್ರವ್ಯಾಹರದ್ಭಿರ್ಮುದಿತೈರ್ಮಂಗಲಾನಿ ಯಯೌ ವೃತಃ ॥** ೩೭

---

ವೆಂಬ ಪರ್ವತಾಕಾರವಾದ ಆನೆಯನ್ನೇರಿ ಬಂದನು. ಮಾನವರೂಪವನ್ನು ಧರಿಸಿದ ವಾನರರು ಸರ್ವಾಭರಣಭೂಷಿತರಾಗಿ ಒಂಬತ್ತುಸಾವಿರ ಆನೆಗಳನ್ನೇರಿ ಬಂದರು! (೩೧-೩೨) ಶಂಖಗಳ ಭೋಂಕಾರ, ಜನಗಳ ಜಯಕಾರ, ದುಂದುಭಿಗಳ ಝಂಕಾರಗಳೊಡನೆ ಪುರುಷೋತ್ತಮನಾದ ರಘುವೀರನು ಉನ್ನತಸೌಧಪಂಕ್ತಿಗಳಿಂದ ವಿರಾಜಿಸುವ ಅಯೋಧ್ಯಾನಗರದ ಕಡೆಗೆ ಪ್ರಯಾಣಮಾಡಿದನು (೩೩). ಅಯೋಧ್ಯೆಯಿಂದ ಬರುತ್ತಿದ್ದ ಸುಮಂತ್ರಾದಿ ಮಂತ್ರಿಗಳು ಮಾರ್ಗಮಧ್ಯದಲ್ಲಿ, ಭವ್ಯಾಕೃತಿಯಿಂದ ಬೆಳಗುತ್ತ ಪರಿವಾರಸಮೇತನಾಗಿ ಆಗಮಿಸುತ್ತಿದ್ದ ವೀರಾಗ್ರಣಿಯಾದ ರಘುಕುಲತಿಲಕನನ್ನು ಸಂದರ್ಶಿಸಿದರು. ಅವರು ಜಯಕಾರದೊಡನೆ ಕಾಕುತ್ಸ್ಥನನ್ನು ಅಭಿನಂದಿಸಲಾಗಿ, ಆತನು ಮಂತ್ರಿಗಳನ್ನು ಕುಶಲಪ್ರಶ್ನೆಯಿಂದ ಆದರಿಸಿದನು. ಸೋದರರಿಂದ ಪರಿವೃತನಾದ ಆ ಮಹಾಭಾಗನನ್ನು ಹಿಂಬಾಲಿಸಿ ಅವರೆಲ್ಲರೂ ನಡೆದರು (೩೪-೩೫). ಅಮಾತ್ಯರಿಂದಲೂ ಬ್ರಾಹ್ಮಣರಿಂದಲೂ ಪ್ರಜೆಗಳಿಂದಲೂ ಸಮಾವೃತನಾದ ಶ್ರೀರಾಮನು ನಕ್ಷತ್ರಗಳಿಂದ ಸಮಾವೃತನಾದ ಚಂದ್ರಮನಂತೆ ಕಂಗೊಳಿಸುತ್ತಿದ್ದನು. ಮುಂದುಗಡೆಯಲ್ಲಿ ತೂರ್ಯ, ತಾಳ, ಸ್ವಸ್ತಿಕ ಮುಂತಾದ ವಾದ್ಯಗಳನ್ನು

ಅಕ್ಷತಂ ಜಾತರೂಪಂ ಚ ಗಾವಃ ಕನ್ಯಾಸ್ತಥಾ ದ್ವಿಜಾಃ ।
ನರಾ ಮೋದಕಹಸ್ತಾಶ್ಚ ರಾಮಸ್ಯ ಪುರತೋ ಯಯುಃ ॥ ೩೮

ಸಖ್ಯಂ ಚ ರಾಮಃ ಸುಗ್ರೀವೇ ಪ್ರಭಾವಂ ಚಾನಿಲಾತ್ಮಜೇ ।
ವಾನರಾಣಾಂ ಚ ತತ್ ಕರ್ಮ ರಾಕ್ಷಸಾನಾಂ ಚ ತದ್ಬಲಮ್ ॥ ೩೯

ವಿಭೀಷಣಸ್ಯ ಸಂಯೋಗಮಾಚಚಕ್ಷೇ ಚ ಮಂತ್ರಿಣಾಮ್ ।
ಶ್ರುತ್ವಾ ತು ವಿಸ್ಮಯಂ ಜಗ್ಮುರಯೋಧ್ಯಾಪುರವಾಸಿನಃ ॥ ೪೦

ದ್ಯುತಿಮಾನೇತದಾಖ್ಯಾಯ ರಾಮೋ ವಾನರಸಂವೃತಃ ।
ಹೃಷ್ಟಪುಷ್ಟಜನಾಕೀರ್ಣಾಮಯೋಧ್ಯಾಂ ಪ್ರವಿವೇಶ ಹ ॥ ೪೧

ತತೋ ಹ್ಯಭ್ಯುಚ್ಛ್ರಯನ್ ಪೌರಾಃ ಪತಾಕಾಸ್ತೇ ಗೃಹೇ ಗೃಹೇ ।
ಐಕ್ಷ್ವಾಕಾಧ್ಯುಷಿತಂ ರಮ್ಯಮಾಸಸಾದ ಪಿತುರ್ಗೃಹಮ್ ॥ ೪೨

---

ಬಾರಿಸುತ್ತ, ಮಂಗಳಸ್ತೋತ್ರಗಳನ್ನು ಪಠಿಸುತ್ತ ಜನರು ಸಂತೋಷದಿಂದ ಸಾಗಿದರು (೩೬-೩೭). ಶ್ರೀರಾಮನ ಎದುರಿಗೆ ಗೋವುಗಳೂ ಹೊಂಬಣ್ಣದ ಮಂಗಳಾಕ್ಷತೆಯನ್ನು ಹಿಡಿದ ಕನ್ಯೆಯರೂ ದ್ವಿಜರೂ ಮೋದಕಹಸ್ತರಾದ ಜನರೂ ಮೆರವಣಿಗೆಯಲ್ಲಿ ಹೋಗುತ್ತಿದ್ದರು. ಹೀಗೆ ಹೋಗುತ್ತಿರುವಾಗ ರಾಘವನು, ತನ್ನಲ್ಲಿ ಸುಗ್ರೀವನಿಗಿದ್ದ ದೃಢಸ್ನೇಹವನ್ನೂ ಹನುಮಂತನ ಅಗಾಧ ಸಾಮರ್ಥ್ಯವನ್ನೂ ವಾನರಯೋಧರ ಸಾಹಸಕೃತ್ಯವನ್ನೂ ರಾಕ್ಷಸರ ಬಲಾತಿಶಯವನ್ನೂ ವಿಭೀಷಣನು ತನ್ನೊಡನೆ ಬಂದು ಸೇರಿಕೊಂಡ ವಿಧಾನವನ್ನೂ ಮಂತ್ರಿಗಳಿಗೆ ವಿವರಿಸುತ್ತಿದ್ದನು. ಮಂತ್ರಿಗಳೂ ಅಯೋಧ್ಯಾಪುರವಾಸಿಗಳೂ ಆ ವೃತ್ತಾಂತವನ್ನು ಕೇಳಿ ವಿಸ್ಮಿತರಾದರು (೩೮-೪೦). ತೇಜೋನಿಧಿಯಾದ ಕಾಕುತ್ಸ್ಥನು ಈ ರೀತಿಯಲ್ಲಿ ನಡೆದ ಪ್ರಕರಣವನ್ನು ಹೇಳುತ್ತ, ಹೃಷ್ಟಪುಷ್ಟ ಜನರಿಂದ ತುಂಬಿದ ಅಯೋಧ್ಯಾ ನಗರವನ್ನು ಪ್ರವೇಶಿಸಿದನು. ಪೌರರು ಮನೆಮನೆಗಳಲ್ಲಿಯೂ ಬಾವುಟಗಳನ್ನು ಹಾರಿಸಿದರು. ಶ್ರೀರಾಮನು ಅಯೋಧ್ಯಾನಗರವನ್ನು ಪ್ರವೇಶಿಸಿ, ಬಹುಕಾಲದಿಂದ ಇಕ್ಷ್ವಾಕುವಂಶದ ದೊರೆಗಳು ವಾಸಿಸುತ್ತಿದ್ದ ರಮಣೀಯವಾದ ತನ್ನ ತಂದೆಯ ಅರಮನೆಯ ಸಮೀಪಕ್ಕೆ ಆಗಮಿಸಿದನು (೪೧-೪೨).

ಅಥಾಬ್ರವೀದ್ರಾಜಪುತ್ರೋ ಭರತಂ ಧರ್ಮಿಣಾಂ ವರಮ್ ।
ಅರ್ಥೋಪಹಿತಯಾ ವಾಚಾ ಮಧುರಂ ರಘುನಂದನಃ ॥ ೪೩

ಪಿತುರ್ಭವನಮಾಸಾದ್ಯ ಪ್ರವಿಶ್ಯ ಚ ಮಹಾತ್ಮನಃ ।
ಕೌಸಲ್ಯಾಂ ಚ ಸುಮಿತ್ರಾಂ ಚ ಕೈಕೇಯೀಮಭಿವಾದ್ಯ ಚ ॥ ೪೪

ಯಚ್ಚ ಮದ್ಭವನಂ ಶ್ರೇಷ್ಠಂ ಸಾಶೋಕವನಿಕಂ ಮಹತ್ ।
ಮುಕ್ತಾವೈದೂರ್ಯಸಂಕೀರ್ಣಂ ಸುಗ್ರೀವಾಯ ನಿವೇದಯ ॥ ೪೫

ತಸ್ಯ ತದ್ವಚನಂ ಶ್ರುತ್ವಾ ಭರತಃ ಸತ್ಯವಿಕ್ರಮಃ ।
ಪಾಣೌ ಗೃಹೀತ್ವಾ ಸುಗ್ರೀವಂ ಪ್ರವಿವೇಶ ತಮಾಲಯಮ್ ॥ ೪೬

ತತಸ್ತೈಲಪ್ರದೀಪಾಂಶ್ಚ ಪರ್ಯಂಕಾಸ್ತರಣಾನಿ ಚ ।
ಗೃಹೀತ್ವಾ ವಿವಿಶುಃ ಕ್ಷಿಪ್ರಂ ಶತ್ರುಘ್ನೇನ ಪ್ರಚೋದಿತಾಃ ॥ ೪೭

ಉವಾಚ ಚ ಮಹಾತೇಜಾಃ ಸುಗ್ರೀವಂ ರಾಘವಾನುಜಃ ।
ಅಭಿಷೇಕಾಯ ರಾಮಸ್ಯ ದೂತಾನಾಜ್ಞಾಪಯ ಪ್ರಭೋ ॥ ೪೮

---

ರಘುನಂದನನಾದ ಆ ರಾಜಕುಮಾರನು ಮಹಾತ್ಮನಾದ ತನ್ನ ತಂದೆಯ ಭವನವನ್ನು ಪ್ರವೇಶಿಸಿ, ಕೌಸಲ್ಯೆ ಸುಮಿತ್ರೆ ಮತ್ತು ಕೈಕೇಯಿಯರಿಗೆ ಅಭಿವಾದನೆಮಾಡಿದನು. ಅನಂತರ ಧರ್ಮನಿಷ್ಠನಾದ ಭರತನನ್ನು ನೋಡಿ ಮಧುರವಚನದಿಂದ "ಭರತ, ಅಶೋಕವೃಕ್ಷಗಳಿರುವ ಅಂತಃಪುರೋದ್ಯಾನದಿಂದ ಸಮೇತವಾಗಿಯೂ ಮುಕ್ತಾವೈಡೂರ್ಯಗಳಿಂದ ಭೂಷಿತವಾಗಿಯೂ ಇರುವ ಶ್ರೇಷ್ಠವಾದ ನನ್ನ ಮಹಾಭವನ ಉಂಟಷ್ಟೆ, ಅದನ್ನು ತಂಗುವುದಕ್ಕಾಗಿ ಸುಗ್ರೀವನಿಗೆ ಬಿಡಿಸಿಕೊಡು" ಎಂದು ತಿಳಿಸಿದನು (೪೩-೪೫). ಶ್ರೀರಾಮನ ಆಜ್ಞೆಯನ್ನು ಕೇಳಿ ಸತ್ಯವಿಕ್ರಮನಾದ ಭರತನು ಸುಗ್ರೀವನನ್ನು ಕೈಹಿಡಿದು ಕರೆದುಕೊಂಡು ಆ ಭವನಕ್ಕೆ ಹೋದನು. ಅಷ್ಟರಲ್ಲಿ ಶತ್ರುಘ್ನನ ಆದೇಶದಂತೆ ಪರಿಚಾರಕರು ತೈಲದೀಪಗಳನ್ನೂ ಮಂಚಗಳನ್ನೂ ವಿವಿಧ ಪೀಠೋಪಕರಣಗಳನ್ನೂ ತೆಗೆದುಕೊಂಡುಹೋಗಿ ಆ ಭವನವನ್ನು ಸಜ್ಜುಪಡಿಸಿದರು (೪೬-೪೭). ಹೀಗೆ ವಾನರಾದಿಗಳೆಲ್ಲರೂ ತಂಗಿದಮೇಲೆ ಭರತನು ಸುಗ್ರೀವನನ್ನು ನೋಡಿ "ಸುಗ್ರೀವ, ಶ್ರೀರಾಮನ ಪಟ್ಟಾಭಿಷೇಕಾರ್ಥವಾಗಿ ಮಂಗಳಜಲವನ್ನು ತರುವುದಕ್ಕೋಸ್ಕರ ನಿನ್ನ

ಸೌವರ್ಣಾನ್ ವಾನರೇಂದ್ರಾಣಾಂ ಚತುರ್ಣಾಂ ಚತುರೋ ಘಟಾನ್
ದದೌ ಕ್ಷಿಪ್ರಂ ಸ ಸುಗ್ರೀವಃ ಸರ್ವರತ್ನವಿಭೂಷಿತಾನ್ ॥ ೪೯

ಯಥಾ ಪ್ರತ್ಯೂಷಸಮಯೇ ಚತುರ್ಣಾಂ ಸಾಗರಾಂಭಸಾಮ್ ।
ಪೂರ್ಣೈರ್ಘಟೈಃ ಪ್ರತೀಕ್ಷಧ್ವಂ ತಥಾ ಕುರುತ ವಾನರಾಃ ॥ ೫೦

ಏವಮುಕ್ತಾ ಮಹಾತ್ಮಾನೋ ವಾನರಾ ವಾರಣೋಪಮಾಃ ।
ಉತ್ಪೇತುರ್ಗಗನಂ ಶೀಘ್ರಂ ಗರುಡಾನಿಲಶೀಘ್ರಗಾಃ ॥ ೫೧

ಜಾಂಬವಾಂಶ್ಚ ಸುಷೇಣಶ್ಚ ವೇಗದರ್ಶೀ ಚ ವಾನರಃ ।
ಋಷಭಶ್ಚೈವ ಕಲಶಾನ್ ಜಲಪೂರ್ಣಾನಥಾನಯನ್ ॥ ೫೨

ನದೀಶತಾನಾಂ ಪಂಚಾನಾಂ ಜಲಂ ಕುಂಭೇಷು ಚಾಹರನ್ ।
ಪೂರ್ವಾತ್ ಸಮುದ್ರಾತ್ ಕಲಶಂ ಜಲಪೂರ್ಣಮಥಾನಯತ್ ॥

ಸುಷೇಣಃ ಸತ್ತ್ವಸಂಪನ್ನಃ ಸರ್ವರತ್ನವಿಭೂಷಿತಮ್ ।
ಋಷಭೋ ದಕ್ಷಿಣಾತ್ತೂರ್ಣಂ ಸಮುದ್ರಾಜ್ಜಲಮಾಹರತ್ ॥ ೫೪

---

ದೂತರಿಗೆ ಆಜ್ಞಾಪಿಸು. ಈ ಕಾರ್ಯದಲ್ಲಿ ನೀನೇ ಸಮರ್ಥ" ಎಂದನು (೪೮). ಆಗ ಸುಗ್ರೀವನು ಸರ್ವರತ್ನಾಲಂಕೃತಗಳಾದ ನಾಲ್ಕು ಸುವರ್ಣ ಕಲಶಗಳನ್ನು ನಾಲ್ವರು ವಾನರ ಶ್ರೇಷ್ಠರಿಗೆ ಕೊಟ್ಟು "ವಾನರೋತ್ತಮರೆ, ಈ ಕಲಶಗಳಲ್ಲಿ ನಾಲ್ಕು ಸಮುದ್ರಗಳಿಂದಲೂ ವಿವಿಧ ಪುಣ್ಯತೀರ್ಥಗಳಿಂದಲೂ ಜಲವನ್ನು ತುಂಬಿಕೊಂಡು ಬನ್ನಿರಿ. ನಾಳೆ ಬೆಳಗಾಗುವಷ್ಟರಲ್ಲಿ ಬಂದು ನೀವು ಕಾದಿರಬೇಕು" ಎಂದು ತಿಳಿಸಿದನು (೪೯-೫೦). ಸುಗ್ರೀವನ ಆಜ್ಞೆಯನ್ನು ಕೇಳಿ, ಆನೆಗಳಂತೆ ದೃಢಕಾಯರೂ ಗರುಡ ವಾಯುಗಳಂತೆ ಶೀಘ್ರಗಾಮಿಗಳೂ ಆದ ಬಹುಮಂದಿ ವಾನರರು ಬೇರೆ ಬೇರೆ ಕಲಶಗಳನ್ನು ತೆಗೆದುಕೊಂಡು ಗಗನಮಾರ್ಗವನ್ನಡರಿ ಸಾಗಿದರು. ಅವರೊಡನೆ ಜಾಂಬವಂತ, ಸುಷೇಣ, ವೇಗದರ್ಶಿ ಮತ್ತು ಋಷಭ–ಎಂಬ ಪ್ರಮುಖರೂ ಹೋದರು (೫೧-೫೨). ಆ ವಾನರರು ಐದುನೂರು ಪುಣ್ಯನದಿಗಳಿಂದ ಕಲಶಗಳಲ್ಲಿ ಜಲವನ್ನು ತುಂಬಿ ತಂದರು. ಸತ್ತ್ವಶಾಲಿಯಾದ ಸುಷೇಣನು ಸರ್ವರತ್ನಾಲಂಕೃತವಾದ ಕಲಶದಲ್ಲಿ ಪೂರ್ವಸಮುದ್ರದಿಂದ ಜಲವನ್ನು ತಂದನು. ಋಷಭನು ಸುವರ್ಣಕುಂಭ

ರಕ್ತಚಂದನಶಾಖಾಭಿಃ ಸಂವೃತಂ ಕಾಂಚನಂ ಘಟಮ್ ।
ಗವಯಃ ಪಶ್ಚಿಮಾತ್ತೋಯಮಾಜಹಾರ ಮಹಾರ್ಣವಾತ್ ॥ ೫೫

ರತ್ನಕುಂಭೇನ ಮಹತಾ ಶೀತಂ ಮಾರುತವಿಕ್ರಮಃ ।
ಉತ್ತರಾಚ್ಚ ಜಲಂ ಶೀಘ್ರಂ ಗರುಡಾನಿಲವಿಕ್ರಮಃ ॥ ೫೬

ಆಜಹಾರ ಸ ಧರ್ಮಾತ್ಮಾ ನಲಃ ಸರ್ವಗುಣಾನ್ವಿತಃ ।
ತತಸ್ತೈರ್ವಾನರಶ್ರೇಷ್ಠೈರಾನೀತಂ ಪ್ರೇಕ್ಷ್ಯ ತಜ್ಜಲಮ್ ॥ ೫೭

ಅಭಿಷೇಕಾಯ ರಾಮಸ್ಯ ಶತ್ರುಘ್ನಃ ಸಚಿವೈಃ ಸಹ ।
ಪುರೋಹಿತಾಯ ಶ್ರೇಷ್ಠಾಯ ಸುಹೃದ್ಭ್ಯಶ್ಚ ನ್ಯವೇದಯತ್ ॥ ೫೮

ತತಃ ಸ ಪ್ರಯತೋ ವೃದ್ಧೋ ವಸಿಷ್ಠೋ ಬ್ರಾಹ್ಮಣೈಃ ಸಹ ।
ರಾಮಂ ರತ್ನಮಯೇ ಪೀಠೇ ಸಹಸೀತಂ ನ್ಯವೇಶಯತ್ ॥ ೫೯

---

ದಲ್ಲಿ ದಕ್ಷಿಣಸಮುದ್ರದ ಜಲವನ್ನು ತುಂಬಿ, ರಕ್ತಚಂದನಶಾಖೆಗಳಿಂದ ಆ ಕುಂಭವನ್ನು ಅಲಂಕರಿಸಿಕೊಂಡು ತಂದನು (೫೩-೫೪). ಮಾರುತ ವಿಕ್ರಮನಾದ ಗವಯನು ದೊಡ್ಡದಾದ ರತ್ನಕುಂಭದಲ್ಲಿ ಪಶ್ಚಿಮಸಾಗರ ದಿಂದ ಶೀತಲವಾದ ಜಲವನ್ನು ತಂದನು. ಧರ್ಮಾತ್ಮನೂ ಸರ್ವಗುಣಾ ನ್ವಿತನೂ ಆದ ನಲನು ಗರುಡನಂತೆಯೂ ವಾಯುವಿನಂತೆಯೂ ಅತಿಶೀಘ್ರವಾಗಿ ಹಾರುತ್ತಹೋಗಿ ಉತ್ತರಸಾಗರದಿಂದ ಜಲವನ್ನು ತಂದನು (೫೫-೫೬). ಹೀಗೆ ವಾನರೋತ್ತಮರು ಪುಣ್ಯತೀರ್ಥವನ್ನು ತರಲಾಗಿ, ಶತ್ರುಘ್ನನು ಸಚಿವರೊಡನೆ ಹೋಗಿ ಪುರೋಹಿತರಾದ ವಸಿಷ್ಠ ರಿಗೂ ಮಿತ್ರರಿಗೂ ಶ್ರೀರಾಮನ ಪಟ್ಟಾಭಿಷೇಕವನ್ನು ನೆರವೇರಿಸಬೇಕೆಂದು ನಿವೇದಿಸಿದನು (೫೭-೫೮).

## ಶ್ರೀರಾಮ ಪಟ್ಟಾಭಿಷೇಕ

ಅನಂತರ ಪವಿತ್ರಾತ್ಮರೂ ವೃದ್ಧರೂ ಆದ ವಸಿಷ್ಠಮುನಿಗಳು ಬ್ರಾಹ್ಮಣರೊಡನೆ ಬಂದು, ಸೀತಾಸಮೇತನಾದ ಶ್ರೀರಾಮಚಂದ್ರನನ್ನು ರತ್ನಮಯವಾದ ಪೀಠದಲ್ಲಿ ಕುಳ್ಳಿರಿಸಿದರು. ವಸಿಷ್ಠ, ವಾಮದೇವ,

ವಸಿಷ್ಠೋ ವಾಮದೇವಶ್ಚ ಜಾಬಾಲಿರಥ ಕಾಶ್ಯಪಃ ।
ಕಾತ್ಯಾಯನಃ ಸುಯಜ್ಞಶ್ಚ ಗೌತಮೋ ವಿಜಯಸ್ತಥಾ ॥ ೬೦

ಅಭ್ಯಷಿಂಚನ್ನರವ್ಯಾಘ್ರಂ ಪ್ರಸನ್ನೇನ ಸುಗಂಧಿನಾ ।
ಸಲಿಲೇನ ಸಹಸ್ರಾಕ್ಷಂ ವಸವೋ ವಾಸವಂ ಯಥಾ ॥ ೬೧

ಋತ್ವಿಗ್ಭಿರ್ಬ್ರಾಹ್ಮಣೈಃ ಪೂರ್ವಂ ಕನ್ಯಾಭಿರ್ಮಂತ್ರಿಭಿಸ್ತಥಾ ।
ಯೋಧೈಶ್ಚೈವಾಭ್ಯಷಿಂಚಂಸ್ತೇ ಸಂಪ್ರಹೃಷ್ಟಾಃ ಸನೈಗಮೈಃ ॥ ೬೨

ಸರ್ವೌಷಧಿರಸೈರ್ದಿವ್ಯೈರ್ದೈವತೈರ್ನಭಸಿ ಸ್ಥಿತೈಃ ।
ಚತುರ್ಭಿರ್ಲೋಕಪಾಲೈಶ್ಚ ಸರ್ವೈರ್ದೇವೈಶ್ಚ ಸಂಗತೈಃ ॥ ೬೩

ಬ್ರಹ್ಮಣಾ ನಿರ್ಮಿತಂ ಪೂರ್ವಂ ಕಿರೀಟಂ ರತ್ನಶೋಭಿತಮ್ ।
ಅಭಿಷಿಕ್ತಃ ಪುರಾ ಯೇನ ಮನುಸ್ತಂ ದೀಪ್ತತೇಜಸಮ್ ॥ ೬೪

ತಸ್ಯಾನ್ವವಾಯೇ ರಾಜಾನಃ ಕ್ರಮಾದ್ಯೇನಾಭಿಷೇಚಿತಾಃ ।
ಸಭಾಯಾಂ ಹೇಮಕ್ಲೃಪ್ತಾಯಾಂ ಶೋಭಿತಾಯಾಂ ಮಹಾಜನೈಃ ॥

ಜಾಬಾಲಿ, ಕಾಶ್ಯಪ, ಕಾತ್ಯಾಯನ, ಸುಯಜ್ಞ, ಗೌತಮ ಮತ್ತು ವಿಜಯ ಎಂಬ ಮಹರ್ಷಿಗಳು ಶುದ್ಧವೂ ಸುಗಂಧಿಯೂ ಆದ ಪುಣ್ಯಜಲದಿಂದ, ಅಷ್ಟವಸುಗಳು ಸಹಸ್ರಾಕ್ಷನಾದ ಇಂದ್ರನಿಗೆ ಅಭಿಷೇಕ ಮಾಡಿದಂತೆ, ಶ್ರೀರಾಮನಿಗೆ ಅಭಿಷೇಕ ಮಾಡಿದರು (೫೯-೬೦). ಋತ್ವಿಜರಾದ ಬ್ರಾಹ್ಮಣರೂ ಆ ಮಹಾಭಾಗನನ್ನು ಅಭಿಷೇಚಿಸಿದರು. ಅನಂತರ ಕನ್ಯೆಯರು, ಮಂತ್ರಿಗಳು, ಯೋಧರು ಮತ್ತು ವಣಿಗ್ಜನರು ಸಂತೋಷ ದಿಂದ ಬಂದು ಆ ಪುರುಷೋತ್ತಮನಿಗೆ ಅಭಿಷೇಕ ಮಾಡಿದರು (೬೧-೬೨). ಹಾಗೆಯೇ ನಾಲ್ವರು ದಿಕ್ಪಾಲಕರು ಸಮಸ್ತದೇವತೆಗಳೊಡನೆ ಗಗನಮಾರ್ಗ ದಲ್ಲಿ ಬಂದು, ಸರ್ವೌಷಧಿಗಳ ದಿವ್ಯರಸದಿಂದ ಸಂಮಿಲಿತವಾದ ಪವಿತ್ರ ಜಲದಿಂದ ಶ್ರೀರಾಮನನ್ನು ಅಭಿಷೇಚಿಸಿದರು (೬೩). ಬ್ರಹ್ಮದೇವನು ನಿರ್ಮಿಸಿದ ರತ್ನಶೋಭಿತವಾದ ಒಂದು ದಿವ್ಯ ಕಿರೀಟವಿತ್ತು. ಹಿಂದೆ ಮನುಚಕ್ರವರ್ತಿಯು ಪಟ್ಟಾಭಿಷಿಕ್ತನಾದಾಗ ಆ ಕಿರೀಟವನ್ನು ಧರಿಸಿದ್ದನು. ಆ ಮನುವಂಶದಲ್ಲಿ ಜನಿಸಿದ ನಿಖಿಲನರಪತಿಗಳೂ ಆ ಕಿರೀಟವನ್ನು ಧರಿಸಿ ಪಟ್ಟಾಭಿಷಿಕ್ತರಾಗಿದ್ದರು. ಸುವರ್ಣದಿಂದಲೂ ನಾನಾರತ್ನಗಳಿಂದಲೂ

ರತ್ನೈರ್ನಾನಾವಿಧೈಶ್ಚೈವ ಚಿತ್ರಿತಾಯಾಂ ಸುಶೋಭನೈಃ ।
ನಾನಾರತ್ನಮಯೇ ಪೀಠೇ ಕಲ್ಪಯಿತ್ವಾ ಯಥಾವಿಧಿ ॥ ೬೬

ಕಿರೀಟೇನ ತತಃ ಪಶ್ಚಾದ್ವಸಿಷ್ಠೇನ ಮಹಾತ್ಮನಾ ।
ಋತ್ವಿಗ್ಭಿರ್ಭೂಷಣೈಶ್ಚೈವ ಸಮಯೋಕ್ಷ್ಯತ ರಾಘವಃ ॥ ೬೭

ಛತ್ರಂ ತು ತಸ್ಯ ಜಗ್ರಾಹ ಶತ್ರುಘ್ನಃ ಪಾಂಡರಂ ಶುಭಮ್ ।
ಶ್ವೇತಂ ಚ ವಾಲವ್ಯಜನಂ ಸುಗ್ರೀವೋ ವಾನರೇಶ್ವರಃ ॥ ೬೮

ಅಪರಂ ಚಂದ್ರಸಂಕಾಶಂ ರಾಕ್ಷಸೇಂದ್ರೋ ವಿಭೀಷಣಃ ।
ಮಾಲಾಂ ಜ್ವಲಂತೀಂ ವಪುಷಾ ಕಾಂಚನೀಂ ಶತಪುಷ್ಕರಾಮ್ ॥ ೬೯

ರಾಘವಾಯ ದದೌ ವಾಯುರ್ವಾಸವೇನ ಪ್ರಚೋದಿತಃ ।
ಸರ್ವರತ್ನಸಮಾಯುಕ್ತಂ ಮಣಿರತ್ನವಿಭೂಷಿತಮ್ ॥ ೭೦

---

ಭೂಷಿತವಾದ ಸಭಾಮಂದಿರದಲ್ಲಿ ಮಹಾಜನರು ಬಂದು ನೆರೆದಿದ್ದರು (೬೪-೬೫). ಅನಂತರ ನವರತ್ನಖಚಿತವಾದ ಸಿಂಹಾಸನವನ್ನು ಆ ಸಭಾಮಂದಿರದಲ್ಲಿ ತಂದಿರಿಸಿ, ತೇಜೋನಿಧಿಯಾದ ರಘುವೀರನನ್ನು ಮಹಾತ್ಮರಾದ ವಸಿಷ್ಠಮುನಿಗಳು ಶಾಸ್ತ್ರೋಕ್ತ ವಿಧಾನದಿಂದ ಕರೆತಂದು ಆ ಪೀಠದಲ್ಲಿ ಕುಳ್ಳಿರಿಸಿದರು. ಪೂರ್ವೋಕ್ತವಾದ ದಿವ್ಯಕಿರೀಟವನ್ನು ವಸಿಷ್ಠರು ಶ್ರೀರಾಮಚಂದ್ರನ ಶಿರಸ್ಸಿನಲ್ಲಿಟ್ಟು ಪಟ್ಟಾಭಿಷೇಕವಿಧಿಯನ್ನು ನಡೆಸಿದರು. ಋತ್ವಿಜರು ವಿವಿಧಭೂಷಣಗಳಿಂದ ರಘುಕುಲತಿಲಕನನ್ನು ಅಲಂಕರಿಸಿದರು (೬೬-೬೭). ಶತ್ರುಘ್ನನು ಶ್ವೇತಚ್ಛತ್ರವನ್ನು ಹಿಡಿದನು. ವಾನರೇಂದ್ರನಾದ ಸುಗ್ರೀವನು ಶ್ರೀರಾಮನ ಒಂದು ಪಾರ್ಶ್ವದಲ್ಲಿ ಬಿಳಿಯ ಚಾಮರವನ್ನು ಬೀಸುತ್ತಿದ್ದನು. ರಾಕ್ಷಸೇಂದ್ರನಾದ ವಿಭೀಷಣನು ಮತ್ತೊಂದು ಪಾರ್ಶ್ವದಲ್ಲಿ ಚಂದ್ರಸಂಕಾಶವಾದ ಚಾಮರವನ್ನು ಬೀಸುತ್ತಿದ್ದನು (೬೮-೬೯). ಆಗ ವಾಯುದೇವನು ದೇವೇಂದ್ರನಿಂದ ಪ್ರೇರಿತನಾಗಿ ಬಂದು, ನೂರು ಚಿನ್ನದ ಕಮಲಗಳಿಂದ ಭೂಷಿತವೂ ಸುವರ್ಣಮಯವೂ ಆದ ಒಂದು

**ಮುಕ್ತಾಹಾರಂ ನರೇಂದ್ರಾಯ ದದೌ ಶಕ್ರಪ್ರಚೋದಿತಃ ।**
**ಪ್ರಜಗುರ್ದೇವಗಂಧರ್ವಾ ನನೃತುಶ್ಚಾಪ್ಸರೋಗಣಾಃ ॥ ೭೧**

**ಅಭಿಷೇಕೇ ತದರ್ಹಸ್ಯ ತದಾ ರಾಮಸ್ಯ ಧೀಮತಃ ।**
**ಭೂಮಿಃ ಸಸ್ಯವತೀ ಚೈವ ಫಲವಂತಶ್ಚ ಪಾದಪಾಃ ॥ ೭೨**

**ಗಂಧವಂತಿ ಚ ಪುಷ್ಪಾಣಿ ಬಭೂವುೂ ರಾಘವೋತ್ಸವೇ ।**
**ಸಹಸ್ರಶತಮಶ್ವಾನಾಂ ಧೇನೂನಾಂ ಚ ಗವಾಂ ತಥಾ ॥ ೭೩**

**ದದೌ ಶತಂ ವೃಷಾನ್ ಪೂರ್ವಂ ದ್ವಿಜೇಭ್ಯೋ ಮನುಜರ್ಷಭಃ ।**
**ತ್ರಿಂಶತ್ಕೋಟೀರ್ಹಿರಣ್ಯಸ್ಯ ಬ್ರಾಹ್ಮಣೇಭ್ಯೋ ದದೌ ಪುನಃ ॥ ೭೪**

**ನಾನಾಭರಣವಸ್ತ್ರಾಣಿ ಮಹಾರ್ಹಾಣಿ ಚ ರಾಘವಃ ।**
**ಅರ್ಕರಶ್ಮಿಪ್ರತೀಕಾಶಾಂ ಕಾಂಚನೀಂ ಮಣಿವಿಗ್ರಹಾಮ್ ॥ ೭೫**

---

ಮುಕ್ತಾಹಾರವನ್ನು ಶ್ರೀರಾಮನಿಗೆ ಸಮರ್ಪಿಸಿದನು. ಜಗಜಗಿಸುತ್ತಿದ್ದ ಆ ಮುತ್ತಿನಸರವು ನವರತ್ನಗಳಿಂದ ಅಲಂಕೃತವಾಗಿತ್ತು*. ಅದರ ಮಧ್ಯದಲ್ಲಿ ಶ್ರೇಷ್ಠವಾದ ಒಂದು ನಾಯಕಮಣಿಯು ವಿರಾಜಿಸುತ್ತಿತ್ತು. ಆ ಮಹೋತ್ಸವದಲ್ಲಿ ದೇವಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು (೭೦-೭೧). ಧೀಮಂತನಾದ ಶ್ರೀರಾಮಚಂದ್ರನು ರಾಜಾಧಿರಾಜನಾಗಿ ಪಟ್ಟಾಭಿಷಿಕ್ತನಾಗಲು, ಭೂಮಿಯು ಸಸ್ಯಸಮೃದ್ಧವಾಯಿತು. ಮರಗಳಲ್ಲಿ ಹಣ್ಣುಗಳು ತುಂಬಿದವು. ಸುಗಂಧಮಯವಾದ ಹೂಗಳು ಅರಳಿದವು. ಆ ಮಹೋತ್ಸವದ ಸಮಯಲ್ಲಿ ಪುರುಷೋತ್ತಮನಾದ ಶ್ರೀರಾಮನು ದ್ವಿಜೋತ್ತಮರಿಗೆ ಅಶ್ವಗಳು, ಹಾಲುಕರೆಯುವ ಹಸುಗಳು ಮತ್ತು ವೃಷಭಗಳನ್ನು ಲಕ್ಷಗಟ್ಟಲೆ ದಾನಮಾಡಿದನು. ಮೂವತ್ತುಕೋಟಿ ಚಿನ್ನದ ನಾಣ್ಯಗಳನ್ನು ಬ್ರಾಹ್ಮಣರಿಗೆ ಕೊಟ್ಟು ಸಂಭಾವಿಸಿದನು (೭೨-೭೪). ಅಲ್ಲದೆ ನಾನಾ ಬಗೆಯ ಒಡವೆಗಳನ್ನೂ ಬೆಲೆಬಾಳುವ ವಸ್ತ್ರಗಳನ್ನೂ ದಾನಮಾಡಿದನು. ಅನಂತರ ಸೂರ್ಯರಶ್ಮಿಯಂತೆ ಹೊಳೆಹೊಳೆ

---

*** ಚಿನ್ನದ ಸರ, ಮುತ್ತಿನ ಸರ-ಹೀಗೆ ಎರಡು ಹಾರಗಳನ್ನು ವಾಯುವು ಕೊಟ್ಟನೆಂದು ಕೆಲವರು ಹೇಳುತ್ತಾರೆ.**

**ಸುಗ್ರೀವಾಯ ಸ್ರಜಂ ದಿವ್ಯಾಂ ಪ್ರಾಯಚ್ಛನ್ಮನುಜರ್ಷಭಃ ।**
**ವೈದೂರ್ಯಮಣಿಚಿತ್ರೇ ಚ ಚಂದ್ರರಶ್ಮಿವಿಭೂಷಿತೇ ॥ ೭೬**

**ವಾಲಿಪುತ್ರಾಯ ಧೃತಿಮಾನಂಗದಾಯಾಂಗದೇ ದದೌ ।**
**ಮಣಿಪ್ರವರಜುಷ್ಟಂ ಚ ಮುಕ್ತಾಹಾರಮನುತ್ತಮಮ್ ॥ ೭೭**

**ಸೀತಾಯೈ ಪ್ರದದೌ ರಾಮಶ್ಚಂದ್ರರಶ್ಮಿಸಮಪ್ರಭಮ್ ।**
**ಅರಜೇ ವಾಸಸೀ ದಿವ್ಯೇ ಶುಭಾನ್ಯಾಭರಣಾನಿ ಚ ॥ ೭೮**

**ಅವೇಕ್ಷಮಾಣಾ ವೈದೇಹೀ ಪ್ರದದೌ ವಾಯುಸೂನವೇ ।**
**ಅವಮುಚ್ಯಾತ್ಮನಃ ಕಂಠಾದ್ಧಾರಂ ಜನಕನಂದಿನೀ ॥ ೭೯**

**ಅವೈಕ್ಷತ ಹರೀನ್ ಸರ್ವಾನ್ ಭರ್ತಾರಂ ಚ ಮುಹುರ್ಮುಹುಃ ।**
**ತಾಮಿಂಗಿತಜ್ಞಃ ಸಂಪ್ರೇಕ್ಷ್ಯ ಬಭಾಷೇ ಜನಕಾತ್ಮಜಾಮ್ ॥ ೮೦**

**ಪ್ರದೇಹಿ ಸುಭಗೇ ಹಾರಂ ಯಸ್ಯ ತುಷ್ಟಾಸಿ ಭಾಮಿನಿ ।**
**ತೇಜೋ ಧೃತಿರ್ಯಶೋ ದಾಕ್ಷ್ಯಂ ಸಾಮರ್ಥ್ಯಂ ವಿನಯೋ ನಯಃ ॥**

---

ಯುಕ್ತವಾದ ಮಣಿಖಚಿತವಾದ ಒಂದು ದಿವ್ಯಕಾಂಚನಮಾಲೆಯನ್ನು ಸುಗ್ರೀವನಿಗೆ ಕೊಟ್ಟು ಸಮ್ಮಾನಿಸಿದನು. ರಾಘವನು ಅಂಗದನಿಗೆ ವೈಡೂರ್ಯಮಣಿರಂಜಿತವೂ ಚಂದ್ರರಶ್ಮಿಯಂತೆ ರಮಣೀಯವೂ ಆದ ಎರಡು ಭುಜಕೀರ್ತಿಗಳನ್ನು ನೀಡಿ ಬಹುಮಾನಿಸಿದನು (೭೫-೭೬). ಆಮೇಲೆ ಶ್ರೀರಾಮನು ದಿವ್ಯರತ್ನವಿಭೂಷಿತವೂ ಶಶಿಕಿರಣದಂತೆ ಶುಭ್ರವೂ ಅತ್ಯುತ್ತಮವೂ ಆದ ಒಂದು ಮುತ್ತಿನಸರವನ್ನು ಜಾನಕಿಯ ಕೊರಳಿಗೆ ಹಾಕಿ, ಸ್ವಚ್ಛವೂ ದೇವಯೋಗ್ಯವೂ ಆದ ಎರಡು ಸೀರೆಗಳನ್ನೂ ಶ್ರೇಷ್ಠವಾದ ಆಭರಣಗಳನ್ನೂ ಅವಳಿಗೆ ನೀಡಿದನು (೭೭-೭೮). ಆಗ ಜನಕನಂದಿನಿಯು ಆ ಮುತ್ತಿನಸರವನ್ನು ತನ್ನ ಕೊರಳಿಂದ ತೆಗೆದು, ಒಮ್ಮೆ ಪತಿಯ ಮುಖವನ್ನೂ ಒಮ್ಮೆ ವಾನರಸಮೂಹವನ್ನೂ ನೋಡತೊಡಗಿದಳು! ಇಂಗಿತಜ್ಞನಾದ ಶ್ರೀರಾಮನು ಜಾನಕಿಯ ಆಶಯವನ್ನೂಹಿಸಿ "ದೇವಿ, ಯಾರ ವಿಷಯದಲ್ಲಿ ನೀನು ಸಂತುಷ್ಟಳಾಗಿರುವೆಯೋ ಅವನಿಗೆ ಈ ಹಾರವನ್ನು ಅರ್ಪಿಸು! (೭೯-೮೦). ಯಾರಲ್ಲಿ ತೇಜಸ್ಸು, ಧೈರ್ಯ, ಯಶಸ್ಸು, ದಕ್ಷತೆ, ಸಾಮರ್ಥ್ಯ, ನಯ, ವಿನಯಗಳೂ ಬುದ್ಧಿ,

ಪೌರುಷಂ ವಿಕ್ರಮೋ ಬುದ್ಧಿರ್ಯಸ್ಮಿನ್ನೇತಾನಿ ನಿತ್ಯದಾ ।
ದದೌ ಸಾ ವಾಯುಪುತ್ರಾಯ ತಂ ಹಾರಮಸಿತೇಕ್ಷಣಾ ॥ ೮೨

ಹನುಮಾಂಸ್ತೇನ ಹಾರೇಣ ಶುಶುಭೇ ವಾನರರ್ಷಭಃ ।
ಚಂದ್ರಾಂಶುಚಯಗೌರೇಣ ಶ್ವೇತಾಭ್ರೇಣ ಯಥಾಚಲಃ ॥ ೮೩

ತತೋ ದ್ವಿವಿದಮೈಂದಾಭ್ಯಾಂ ನೀಲಾಯ ಚ ಪರಂತಪಃ ।
ಸರ್ವಾನ್ ಕಾಮಗುಣಾನ್ ವೀಕ್ಷ್ಯ ಪ್ರದದೌ ವಸುಧಾಧಿಪಃ ॥ ೮೪

ಸರ್ವೇ ವಾನರವೃದ್ಧಾಶ್ಚ ಯೇ ಚಾನ್ಯೇ ವಾನರೇಶ್ವರಾಃ ।
ವಾಸೋಭಿರ್ಭೂಷಣೈಶ್ಚೈವ ಯಥಾರ್ಹಂ ಪ್ರತಿಪೂಜಿತಾಃ ॥ ೮೫

ವಿಭೀಷಣೋಽಥ ಸುಗ್ರೀವೋ ಹನುಮಾನ್ ಜಾಂಬವಾಂಸ್ತಥಾ ।
ಸರ್ವೇ ವಾನರಮುಖ್ಯಾಶ್ಚ ರಾಮೇಣಾಕ್ಲಿಷ್ಟಕರ್ಮಣಾ ॥ ೮೬

---

ಪೌರುಷ, ಪರಾಕ್ರಮಗಳೂ ನದಾ ನೆಲೆಸಿವೆಯೋ ಆತನಿಗೆ ಈ ಹಾರವನ್ನು ಬಹುಮಾನಿಸು" ಎಂದು ನುಡಿದನು. ಆ ನೀಲಲೋಚನೆಯು ಹನುಮಂತನನ್ನು ಕರೆದು ದಿವ್ಯವಾದ ಆ ಮುಕ್ತಾಹಾರವನ್ನು ನೀಡಿದಳು! (೮೧-೮೨). ವಾನರೋತ್ತಮನಾದ ಹನುಮಂತನು ಚಂದ್ರಕಿರಣಗಳ ಸಮುದಾಯವೋ ಎಂಬಂತೆ ಶುಭ್ರವಾದ ಆ ಮುಕ್ತಾಹಾರವನ್ನು ತನ್ನ ಕೊರಳಲ್ಲಿ ಧರಿಸಿ, ಬಿಳಿಯ ಮೋಡದಿಂದೊಪ್ಪುವ ಗಿರಿರಾಜನಂತೆ ಕಂಗೊಳಿಸಿದನು (೮೩). ಅನಂತರ ವಸುಧೇಶ್ವರನಾದ ಶ್ರೀರಾಮನು ಮೈಂದ, ದ್ವಿವಿದ, ನೀಲ–ಮೊದಲಾದ ವಾನರವೀರರಿಗೂ, ವಾನರವೃದ್ಧರಿಗೂ, ಯೂಥಪಾಲರಿಗೂ ಶ್ರೇಷ್ಠವಾದ ವಸ್ತ್ರಭೂಷಣಾದಿಗಳನ್ನಿತ್ತು ಯಥಾಯೋಗ್ಯವಾಗಿ ಸತ್ಕರಿಸಿದನು (೮೪-೮೫). ವಿಭೀಷಣ, ಸುಗ್ರೀವ, ಹನುಮಂತ, ಜಾಂಬವಂತ ಮೊದಲಾದ ಪ್ರಮುಖರೂ ಸಮಸ್ತ ವಾನರಯೋಧರೂ ಧರ್ಮಾತ್ಮನಾದ

---

* ಲಂಕೆಯಲ್ಲಿ ಸೀತೆಯನ್ನು ಕಾಣದೆ ಹನುಮಂತನು ನಿರ್ವಿಣ್ಣನಾಗಿ 'ನನಗೆ ಯಶೋಮಾಲಿಕೆಯು ಲಭಿಸಲಿಲ್ಲ' ಎಂದು ಚಿಂತಿಸುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು (ಸುಂದರ. ೧೩-೪೪, ೪೫. ಪುಟ-೧೧೫).

**ಯಥಾರ್ಹಂ ಪೂಜಿತಾಃ ಸರ್ವೇ ಕಾಮೈ ರತ್ನೈಶ್ಚ ಪುಷ್ಕಲೈಃ ।**
**ಪ್ರಹೃಷ್ಟಮನಸಃ ಸರ್ವೇ ಜಗ್ಮುರೇವ ಯಥಾಗತಮ್ ॥ ೮೭**

**ನತ್ವಾ ಸರ್ವೇ ಮಹಾತ್ಮಾನಂ ತತಸ್ತೇ ಪ್ಲವಗರ್ಷಭಾಃ ।**
**ವಿಸೃಷ್ಟಾಃ ಪಾರ್ಥಿವೇಂದ್ರೇಣ ಕಿಷ್ಕಿಂಧಾಮಭ್ಯುಪಾಗಮನ್ ॥ ೮೮**

**ಸುಗ್ರೀವೋ ವಾನರಶ್ರೇಷ್ಠೋ ದೃಷ್ಟ್ವಾ ರಾಮಾಭಿಷೇಚನಮ್ ।**
**ಪೂಜಿತಶ್ಚೈವ ರಾಮೇಣ ಕಿಷ್ಕಿಂಧಾಂ ಪ್ರಾವಿಶತ್ ಪುರೀಮ್ ॥ ೮೯**

**ವಿಭೀಷಣೋಽಪಿ ಧರ್ಮಾತ್ಮಾ ಸಹ ತೈರ್ನೈಋತರ್ಷಭೈಃ ।**
**ಲಬ್ಧ್ವಾ ಕುಲಧನಂ ರಾಜಾ ಲಂಕಾಂ ಪ್ರಾಯಾದ್ವಿಭೀಷಣಃ ॥ ೯೦**

**ಸ ರಾಜ್ಯಮಖಿಲಂ ಶಾಸನ್ನಿಹತಾರಿರ್ಮಹಾಯಶಾಃ ।**
**ರಾಘವಃ ಪರಮೋದಾರೋ ರರಾಜ ಪರಯಾ ಮುದಾ ॥ ೯೧**

**ಉವಾಚ ಲಕ್ಷ್ಮಣಂ ರಾಮೋ ಧರ್ಮಜ್ಞಂ ಧರ್ಮವತ್ಸಲಃ ॥**

---

ಶ್ರೀರಾಮನಿಂದ ಯಥಾರ್ಹವಾದ ಪಾರಿತೋಷಿಕಗಳನ್ನು ಪಡೆದು ಸನ್ಮಾನಿತರಾದರು. ಸಮಸ್ತರೂ ಅಭೀಷ್ಟವಾದ ರತ್ನಾದಿ ದ್ರವ್ಯಗಳನ್ನು ಪುಷ್ಕಳವಾಗಿ ಪಡೆದು ಸಂತೃಪ್ತರಾದರು (೮೬-೮೭). ಪಟ್ಟಾಭಿಷೇಕ ಮಹೋತ್ಸವವು ಮುಗಿದಮೇಲೆ ನಿಖಿಲ ವಾನರರೂ ಸಂತುಷ್ಟಹೃದಯರಾಗಿ, ಮಹಾರಾಜನಾದ ಶ್ರೀರಾಮನನ್ನು ಕಂಡು ವಂದಿಸಿ ಬೀಳ್ಕೊಂಡು, ಕಿಷ್ಕಿಂಧೆಯೇ ಮೊದಲಾದ ತಮ್ಮ ಸ್ಥಳಗಳಿಗೆ ತೆರಳಿದರು (೮೮). ಕಪೀಂದ್ರನಾದ ಸುಗ್ರೀವನು ಶ್ರೀರಾಮನ ಪಟ್ಟಾಭಿಷೇಕ ವಿಧಿಯನ್ನು ವೀಕ್ಷಿಸಿ, ಶ್ರೀರಾಮನಿಂದ ಸತ್ಕೃತನಾಗಿ, ತನ್ನ ನಗರಿಯಾದ ಕಿಷ್ಕಿಂಧೆಗೆ ಪ್ರಯಾಣ ಮಾಡಿದನು. ಧರ್ಮಾತ್ಮನಾದ ವಿಭೀಷಣನೂ ತನ್ನ ಸಚಿವರೊಡನೆ ರಾಘವನನ್ನು ಬೀಳ್ಕೊಂಡು, ಆತನ ಅನುಗ್ರಹದಿಂದ ಲಭಿಸಿದ ಕುಲಧನವಾದ* ಲಂಕಾರಾಜ್ಯಕ್ಕೆ ನಿರ್ಗಮಿಸಿದನು (೮೯-೯೦). ಈ ಪ್ರಕಾರದಲ್ಲಿ ಪರಮೋದಾರನೂ ಮಹಾಕೀರ್ತಿಶಾಲಿಯೂ ಆದ ರಘುಕುಲೋತ್ತಮನು ಪಟ್ಟಾಭಿಷಿಕ್ತನಾಗಿ ನಿಖಿಲ ಕೋಸಲರಾಜ್ಯವನ್ನೂ ಪಾಲಿಸುತ್ತ ಆನಂದದಿಂದಿದ್ದನು

---

* **ಅನುಬಂಧವನ್ನು ನೋಡಿ.**

ಆತಿಷ್ಠ ಧರ್ಮಜ್ಞ ಮಯಾ ಸಹೇಮಾಂ
ಗಾಂ ಪೂರ್ವರಾಜಾಧ್ಯುಷಿತಾಂ ಬಲೇನ ।
ತುಲ್ಯಂ ಮಯಾ ತ್ವಂ ಪಿತೃಭಿರ್ಧೃತಾ ಯಾ
ತಾಂ ಯೌವರಾಜ್ಯೇ ಧುರಮುದ್ವಹಸ್ವ ॥ ೯೨

ಸರ್ವಾತ್ಮನಾ ಪರ್ಯನುನೀಯಮಾನೋ
ಯದಾ ನ ಸೌಮಿತ್ರಿರುಪೈತಿ ಯೋಗಮ್ ।
ನಿಯುಜ್ಯಮಾನೋಽಪಿ ಚ ಯೌವರಾಜ್ಯೇ
ತತೋಽಭ್ಯಷಿಂಚದ್ಭರತಂ ಮಹಾತ್ಮಾ ॥ ೯೩

ಪೌಂಡರೀಕಾಶ್ವಮೇಧಾಭ್ಯಾಂ ವಾಜಪೇಯೇನ ಚಾಸಕೃತ್ ।
ಅನ್ಯೈಶ್ಚ ವಿವಿಧೈರ್ಯಜ್ಞೈರಯಜತ್ ಪಾರ್ಥಿವಾತ್ಮಜಃ ॥ ೯೪

ರಾಜ್ಯಂ ದಶ ಸಹಸ್ರಾಣಿ ಪ್ರಾಪ್ಯ ವರ್ಷಾಣಿ ರಾಘವಃ ।
ಶತಾಶ್ವಮೇಧಾನಾಜಹ್ರೇ ಸದಶ್ವಾನ್ ಭೂರಿದಕ್ಷಿಣಾನ್ ॥ ೯೫

---

(೯೧). ಅನಂತರ ಧರ್ಮಶೀಲನಾದ ಶ್ರೀರಾಮನು ಧರ್ಮಜ್ಞನಾದ ಲಕ್ಷ್ಮಣನನ್ನು ನೋಡಿ "ವತ್ಸ-ಲಕ್ಷ್ಮಣ, ಈ ರಾಜ್ಯವು ನಮ್ಮ ಪೂರ್ವಜರಿಂದ ಆಳಲ್ಪಡುತ್ತ ಬಂದಿದೆ. ಇದರ ಆಡಳಿತದಲ್ಲಿ ನನಗೆ ನೆರವಾಗು. ಶೌರ್ಯದಲ್ಲಿ ನೀನು ನನಗೆ ಸಮನಾಗಿದ್ದೀಯೆ. ಆದ್ದರಿಂದ, ಲಕ್ಷ್ಮಣ, ಯುವರಾಜಪದವಿಯನ್ನು* ಸ್ವೀಕರಿಸು" ಎಂದನು (೯೨). ಆದರೆ ಸುಮಿತ್ರಾತನಯನು ಅದಕ್ಕೊಪ್ಪಲಿಲ್ಲ. ಎಷ್ಟು ಅನುನಯದಿಂದ ಹೇಳಿದರೂ ಯುವರಾಜನಾಗುವುದಕ್ಕೆ ಲಕ್ಷ್ಮಣನು ಸಮ್ಮತಿಸಲಿಲ್ಲ. ಆಗ ಶ್ರೀರಾಮನು ಭರತನಿಗೆ ಯುವರಾಜಪದವಿಯನ್ನಿತ್ತನು (೯೩). ಹೀಗೆ ರಾಜ್ಯವನ್ನಾಳುತ್ತ ಶ್ರೀರಾಮನು ಪೌಂಡರೀಕ, ಅಶ್ವಮೇಧ, ವಾಜಪೇಯ ಮುಂತಾದ ಅನೇಕ ಯಾಗಗಳನ್ನಾಚರಿಸಿದನು. ಹತ್ತು ಸಾವಿರ ವರ್ಷಗಳವರೆಗೆ ರಾಘವನು ರಾಜ್ಯವನ್ನು ಪಾಲಿಸುತ್ತ ನೂರು ಅಶ್ವಮೇಧಗಳನ್ನಾ

---

* 'ಲಕ್ಷ್ಮಣೇಮಾಂ ಮಯಾ ಸಾರ್ಧಂ ಪ್ರಶಾಧಿ ತ್ವಂ ವಸುಂಧರಾಮ್' ಎಂದು ಅಯೋಧ್ಯಾಕಾಂಡದಲ್ಲಿ (ಸ. ೫, ಶ್ಲೋ. ೪೩) ಶ್ರೀರಾಮನು ಆಡಿದ ವಚನವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಆಜಾನುಲಂಬಬಾಹುಃ ಸ ಮಹಾಸ್ಕಂಧಃ ಪ್ರತಾಪವಾನ್ ।
ಲಕ್ಷ್ಮಣಾನುಚರೋ ರಾಮಃ ಪೃಥಿವೀಮನ್ವಪಾಲಯತ್ ॥ ೯೬

ರಾಘವಶ್ಚಾಪಿ ಧರ್ಮಾತ್ಮಾ ಪ್ರಾಪ್ಯ ರಾಜ್ಯಮನುತ್ತಮಮ್ ।
ಈಜೇ ಬಹುವಿಧೈರ್ಯಜ್ಞೈಃ ಸಸುಹೃಜ್ಞಾತಿಬಾಂಧವೈಃ ॥ ೯೭

ನ ಪರ್ಯದೇವನ್ ವಿಧವಾ ನ ಚ ವ್ಯಾಲಕೃತಂ ಭಯಮ್ ।
ನ ವ್ಯಾಧಿಜಂ ಭಯಂ ವಾಪಿ ರಾಮೇ ರಾಜ್ಯಂ ಪ್ರಶಾಸತಿ ॥ ೯೮

ನಿರ್ದಸ್ಯುರಭವಲ್ಲೋಕೋ ನಾನರ್ಥಃ ಕಂಚಿದಸ್ಪೃಶತ್ ।
ನ ಚ ಸ್ಮ ವೃದ್ಧಾ ಬಾಲಾನಾಂ ಪ್ರೇತಕಾರ್ಯಾಣಿ ಕುರ್ವತೇ ॥ ೯೯

ಸರ್ವಂ ಮುದಿತಮೇವಾಸೀತ್ ಸರ್ವೋ ಧರ್ಮಪರೋಽಭವತ್ ।
ರಾಮಮೇವಾನುಪಶ್ಯಂತೋ ನಾಭ್ಯಹಿಂಸನ್ ಪರಸ್ಪರಮ್ ॥ ೧೦೦

---

ಚರಿಸಿ ಭೂರಿದಕ್ಷಿಣೆಗಳನ್ನಿತ್ತನು (೯೪–೯೫). ಆಜಾನುಬಾಹುವೂ ಮಹಾಸ್ಕಂಧನೂ ಪ್ರತಾಪಶಾಲಿಯೂ ಆದ ಶ್ರೀರಾಮಭದ್ರನು ವಿಶೇಷವಾಗಿ ಲಕ್ಷ್ಮಣಸಮೇತನಾಗಿಯೇ ಇರುತ್ತ ಪ್ರಜಾಪಾಲನೆಯಲ್ಲಿ ನಿರತನಾಗಿದ್ದನು. ಆ ಧರ್ಮಾತ್ಮನು ಪರಂಪರಾಪ್ರಾಪ್ತವಾದ ತನ್ನ ಉತ್ತಮರಾಜ್ಯವನ್ನು ಪಡೆದು, ಮಿತ್ರರಿಂದಲೂ ಬಂಧುಬಾಂಧವರಿಂದಲೂ ಪರಿವೃತನಾಗಿ, ಬಹುವಿಧ ಯಜ್ಞಗಳನ್ನು ನಡೆಸಿದನು (೯೬–೯೭). ಶ್ರೀರಾಮಚಂದ್ರನು ರಾಜ್ಯಭಾರವನ್ನು ಮಾಡುತ್ತಿರುವಾಗ, ರಾಷ್ಟ್ರದಲ್ಲಿ ಸ್ತ್ರೀಯರು ವಿಧವೆಯರಾಗಿ ಶೋಕಿಸುವ ಪ್ರಸಂಗವು ಬರಲಿಲ್ಲ. ಕ್ರೂರಜಂತುಗಳ ಹಾವಳಿ ಇರಲಿಲ್ಲ. ಪ್ರಜೆಗಳಿಗೆ ರೋಗಗಳ ಭಯವು ಸಂಭವಿಸಲಿಲ್ಲ (೯೮). ದೇಶದಲ್ಲಿ ಕಳ್ಳಕಾಕರು ಸುಳಿಯಲಿಲ್ಲ. ಯಾರಿಗೂ ಯಾವ ವಿಪತ್ತೂ ಒದಗಲಿಲ್ಲ. ಹಿರಿಯರು ಕಿರಿಯರ ಉತ್ತರಕ್ರಿಯೆಗಳನ್ನು ನಡೆಸಬೇಕಾದ ದುಃಖ ಸಂದರ್ಭವೇ ಘಟಿಸಲಿಲ್ಲ (೯೯). ರಾಮರಾಜ್ಯದಲ್ಲಿ ಸಕಲವೂ ಸಂತೋಷದ ನೆಲೆಯಾಗಿತ್ತು. ನಿಖಿಲ ಜನರೂ ಧರ್ಮನಿಷ್ಠರಾಗಿ ಬಾಳುತ್ತಿದ್ದರು. ಅಖಿಲ ಪ್ರಜೆಗಳೂ ಶ್ರೀರಾಮನನ್ನು ಆದರ್ಶಪುರುಷನನ್ನಾಗಿ ತಿಳಿದು, ಆತನ ಮನಸ್ಸಿಗೆ ವಿಷಾದವಾದೀತೆಂದು ಎಣಿಸಿ, ಯಾವ ಸಂದರ್ಭದಲ್ಲಿಯೂ

ಆಸನ್ ವರ್ಷಸಹಸ್ರಾಣಿ ತಥಾ ಪುತ್ರಸಹಸ್ರಿಣಃ ।
ನಿರಾಮಯಾ ವಿಶೋಕಾಶ್ಚ ರಾಮೇ ರಾಜ್ಯಂ ಪ್ರಶಾಸತಿ ॥ ೧೦೧

ರಾಮೋ ರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾಃ ।
ರಾಮಭೂತಂ ಜಗದಭೂದ್ರಾಮೇ ರಾಜ್ಯಂ ಪ್ರಶಾಸತಿ ॥ ೧೦೨

ನಿತ್ಯಪುಷ್ಪಾ ನಿತ್ಯಫಲಾಸ್ತರವಃ ಸ್ಕಂಧವಿಸ್ತೃತಾಃ ।
ಕಾಲೇ ವರ್ಷೀ ಚ ಪರ್ಜನ್ಯಃ ಸುಖಸ್ಪರ್ಶಶ್ಚ ಮಾರುತಃ ॥ ೧೦೩

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಲೋಭವಿವರ್ಜಿತಾಃ ।
ಸ್ವಕರ್ಮಸು ಪ್ರವರ್ತಂತೇ ತುಷ್ಟಾಃ ಸ್ವೈರೇವ ಕರ್ಮಭಿಃ ॥ ೧೦೪

ಆಸನ್ ಪ್ರಜಾ ಧರ್ಮರತಾ ರಾಮೇ ಶಾಸತಿ ನಾನೃತಾಃ ।
ಸರ್ವೇ ಲಕ್ಷಣಸಂಪನ್ನಾಃ ಸರ್ವೇ ಧರ್ಮಪರಾಯಣಾಃ ॥ ೧೦೫

---

ಒಬ್ಬರಿಗೊಬ್ಬರು ತೊಂದರೆ ಕೊಡುತ್ತಿರಲಿಲ್ಲ (೧೦೦). ಶ್ರೀರಾಮಭದ್ರನ ರಾಜ್ಯಭಾರದಲ್ಲಿ ಜನರು ಸಾವಿರಾರು ವರ್ಷಗಳವರೆಗೆ ದೀರ್ಘಾಯುಷ್ಕರಾಗಿ ಬಾಳಿದರು. ಸಾವಿರಾರು ಮಕ್ಕಳನ್ನೂ ಮೊಮ್ಮಕ್ಕಳನ್ನೂ ಕಂಡರು. ಆಧಿವ್ಯಾಧಿಗಳ ಅಂಜಿಕೆಯಿಲ್ಲದೆ ಸುಖದಿಂದ ಜೀವಿಸಿದರು (೧೦೧). ಶ್ರೀರಾಮಚಂದ್ರನು ರಾಜ್ಯವನ್ನಾಳುತ್ತಿರುವಾಗ ಪ್ರಜೆಗಳು ಎಲ್ಲೆಲ್ಲಿಯೂ 'ರಾಮ, ರಾಮ, ರಾಮ!' ಎಂದು ಕೊಂಡಾಡಿ ನಲಿಯುತ್ತಿದ್ದರು. ಜಗತ್ತೇ ರಾಮಮಯವಾಯಿತು! ರಾಷ್ಟ್ರದಲ್ಲಿ ಸಕಲವೃಕ್ಷಗಳೂ ಶಾಖೋಪಶಾಖೆಗಳೊಡನೆ ವಿಸ್ತೃತವಾಗಿ ಬೆಳೆದು, ಸದಾ ಫಲಪುಷ್ಪಗಳಿಂದ ತುಂಬಿದವು. ಮೋಡವು ಕಾಲಕಾಲದಲ್ಲಿ ಮಳೆಯನ್ನು ಸುರಿಸುತ್ತಿತ್ತು. ಗಾಳಿಯು ಹಿತಕರವಾಗಿ ಬೀಸುತ್ತಿತ್ತು (೧೦೨-೧೦೩). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ-ಇವರೆಲ್ಲರೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿ, ತಮ್ಮ ವರ್ಣೋಚಿತ ಕರ್ಮಗಳಿಂದ ಸಂತುಷ್ಟರಾಗಿ, ಸಲ್ಲದ ಆಸೆಯನ್ನಿಟ್ಟುಕೊಳ್ಳದೆ ತೃಪ್ತಿಯಿಂದ ಬದುಕುತ್ತಿದ್ದರು (೧೦೪). ಶ್ರೀರಾಮನು ರಾಜ್ಯವನ್ನು ಪಾಲಿಸುತ್ತಿರುವಾಗ, ಪ್ರಜೆಗಳು ಧರ್ಮತತ್ಪರರಾಗಿದ್ದರು. ಅನೃತವೆಂಬುದು ಅವರ ಬಳಿ ಸುಳಿಯಲಿಲ್ಲ. ಸಕಲರೂ ಧರ್ಮಲಕ್ಷಣಸಂಪನ್ನ

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ।
ಭ್ರಾತೃಭಿಃ ಸಹಿತಃ ಶ್ರೀಮಾನ್ ರಾಮೋ ರಾಜ್ಯಮಕಾರಯತ್ ॥

ಧನ್ಯಂ ಯಶಸ್ಯಮಾಯುಷ್ಯಂ ರಾಜ್ಞಾಂ ಚ ವಿಜಯಾವಹಮ್ ।
ಆದಿಕಾವ್ಯಮಿದಂ ತ್ವಾರ್ಷಂ ಪುರಾ ವಾಲ್ಮೀಕಿನಾ ಕೃತಮ್ ॥ ೧೦೭

ಯಃ ಪಠೇಚ್ಛೃಣುಯಾಲ್ಲೋಕೇ ನರಃ ಪಾಪಾದ್ವಿಮುಚ್ಯತೇ ।
ಪುತ್ರಕಾಮಸ್ತು ಪುತ್ರಾನ್ ವೈ ಧನಕಾಮೋ ಧನಾನಿ ಚ ॥ ೧೦೮

ಲಭತೇ ಮನುಜೋ ಲೋಕೇ ಶ್ರುತ್ವಾ ರಾಮಾಭಿಷೇಚನಮ್ ।
ಮಹೀಂ ವಿಜಯತೇ ರಾಜಾ ರಿಪೂಂಶ್ಚಾಪ್ಯಧಿತಿಷ್ಠತಿ ॥ ೧೦೯

---

ರಾಗಿ ಧರ್ಮವೇ ತಮಗೆ ಪರಮಲಕ್ಷ್ಯವೆಂದು ಬಗೆದು ಜೀವನವನ್ನು ನಡೆಸಿದರು. ಹೀಗೆ ಮಹಾತ್ಮನಾದ ಶ್ರೀರಾಮಚಂದ್ರನು ತನ್ನ ಸೋದರರಿಂದ ಪರಿವೃತನಾಗಿ, ಹನ್ನೊಂದುಸಾವಿರ ವರ್ಷಗಳ* ಕಾಲ ರಾಜ್ಯವನ್ನು ಪಾಲಿಸಿದನು (೧೦೫-೧೦೬).

## ಫಲಶ್ರುತಿ

ವೇದಾರ್ಥಪ್ರತಿಪಾದಕವಾದ ಈ ಆದಿಕಾವ್ಯವನ್ನು ವಾಲ್ಮೀಕಿಮಹರ್ಷಿಗಳು ಎಲ್ಲ ಕವಿಗಳಿಗಿಂತಲೂ ಮೊದಲು ವಿರಚಿಸಿದರು. ಈ ರಾಮಾಯಣ ಗ್ರಂಥವು ಧನಸಮೃದ್ಧಿಯನ್ನುಂಟುಮಾಡತಕ್ಕದ್ದು ಯಶಸ್ಕರವೂ ಆಯುರ್ವರ್ಧಕವೂ ಆಗಿದೆ. ರಾಜರಿಗೆ ವಿಜಯಸಂಪಾದಕವಾಗಿದೆ (೧೦೭). ಲೋಕದಲ್ಲಿ ಯಾರು ಈ ಗ್ರಂಥವನ್ನು ಪಠಿಸುವರೋ ಅವರು ಸರ್ವಪಾಪಗಳಿಂದಲೂ ವಿಮುಕ್ತರಾಗುವರು. ಶ್ರೀರಾಮಪಟ್ಟಾಭಿಷೇಕದ ಪ್ರಕರಣವನ್ನು ಭಕ್ತಿಯಿಂದ ಆಲಿಸಿದರೆ, ಪುತ್ರಾರ್ಥಿಗಳು ಪುತ್ರರನ್ನೂ ಧನಾರ್ಥಿಗಳು ಧನವನ್ನೂ ಪಡೆಯುತ್ತಾರೆ. ರಾಜನು ತನ್ನ ವೈರಿಗಳನ್ನು ಜಯಿಸಿ

---

* ೯೭ನೆಯ ಶ್ಲೋಕದಲ್ಲಿ ಹತ್ತುಸಾವಿರ ವರ್ಷಗಳೆಂದು ಹೇಳಿದೆ. ಶ್ರೀರಾಮನು ಸೀತಾಸಮೇತನಾಗಿ ಹತ್ತುಸಾವಿರ ವರ್ಷವೂ ಸೀತಾಪರಿತ್ಯಾಗವಾದಮೇಲೆ ಒಂದು ಸಾವಿರ ವರ್ಷವೂ ರಾಜ್ಯಭಾರ ಮಾಡಿದನು. ಈ ರೀತಿಯಾಗಿ ಪೂರ್ವಾಪರವಿರೋಧವನ್ನು ಪರಿಹರಿಸಿಕೊಳ್ಳಬೇಕು.

ರಾಘವೇಣ ಯಥಾ ಮಾತಾ ಸುಮಿತ್ರಾ ಲಕ್ಷ್ಮಣೇನ ಚ ।
ಭರತೇನ ಚ ಕೈಕೇಯೀ ಜೀವಪುತ್ರಾಸ್ತಥಾ ಸ್ತ್ರಿಯಃ ॥ ೧೧೦

ಭವಿಷ್ಯಂತಿ ಸದಾನಂದಾಃ ಪುತ್ರಪೌತ್ರಸಮನ್ವಿತಾಃ ।
ಶ್ರುತ್ವಾ ರಾಮಾಯಣಮಿದಂ ದೀರ್ಘಮಾಯುಶ್ಚ ವಿಂದತಿ ॥ ೧೧೧

ರಾಮಸ್ಯ ವಿಜಯಂ ಚೈವ ಸರ್ವಮಕ್ಲಿಷ್ಟಕರ್ಮಣಃ ।
ಶೃಣೋತಿ ಯ ಇದಂ ಕಾವ್ಯಮಾರ್ಷಂ ವಾಲ್ಮೀಕಿನಾ ಕೃತಮ್ ॥

ಶ್ರದ್ದಧಾನೋ ಜಿತಕ್ರೋಧೋ ದುರ್ಗಾಣ್ಯತಿತರತ್ಯಸೌ ।
ಸಮಾಗಮಂ ಪ್ರವಾಸಾಂತೇ ಲಭತೇ ಚಾಪಿ ಬಾಂಧವೈಃ ॥ ೧೧೩

ಪ್ರಾರ್ಥಿತಾಂಶ್ಚ ವರಾನ್ ಸರ್ವಾನ್ ಪ್ರಾಪ್ನುಯಾದಿಹ ರಾಘವಾತ್
ಶ್ರವಣೇನ ಸುರಾಃ ಸರ್ವೇ ಪ್ರೀಯಂತೇ ಸಂಪ್ರಶೃಣ್ವತಾಮ್ ॥ ೧೧೪

---

ವಿಶಾಲವಾದ ರಾಜ್ಯವನ್ನಾಳುವನು (೧೦೮-೧೦೯) ಈ ಪುಣ್ಯಕಥೆಯನ್ನು ಕೇಳುವ ಸ್ತ್ರೀಯರು, ಶ್ರೀರಾಮಸಮೇತಳಾದ ಕೌಸಲ್ಯೆಯಂತೆಯೂ ಲಕ್ಷ್ಮಣಯುಕ್ತಳಾದ ಸುಮಿತ್ರೆಯಂತೆಯೂ, ಭರತಸಹಿತಳಾದ ಕೈಕೇಯಿಯಂತೆಯೂ ದೀರ್ಘಾಯುಷ್ಮಂತರಾದ ಪುತ್ರರೊಡನೆ ಬಾಳುವರು (೧೧೦). ಯಾವಾಗಲೂ ಆನಂದಯುಕ್ತರಾಗಿ ಪುತ್ರಪೌತ್ರರೊಡನೆ ನೆಮ್ಮದಿಯಿಂದ ಜೀವಿಸುವರು. ಸತ್ಕಾರ್ಯನಿರತನಾದ ರಾಘವನ ದಿವ್ಯಚರಿತವಾದ ಶ್ರೀಮದ್ರಾಮಾಯಣವನ್ನೂ ಅವನ ವಿಜಯವೃತ್ತಾಂತವನ್ನೂ ಪಠಿಸತಕ್ಕವನು ದೀರ್ಘಾಯುಸ್ಸನ್ನು ಪಡೆಯುವನು (೧೧೧). ವೇದೋಪಬೃಂಹಣರೂಪವಾಗಿ ವಾಲ್ಮೀಕಿಮುನಿಗಳಿಂದ ರಚಿತವಾದ ಈ ರಾಮಾಯಣ ಕಾವ್ಯವನ್ನು ಯಾವನು ಶ್ರದ್ಧೆಯಿಂದ ಕೇಳುವನೋ, ಅವನು ಕಾಮಕ್ರೋಧಾದಿಗಳನ್ನು ಜಯಿಸಿ ಸಕಲವಿಪತ್ತುಗಳನ್ನೂ ದಾಟುವನು. ದೇಶಾಂತರಕ್ಕೆ ಹೋದವನು ತನ್ನ ಬಂಧುಗಳೊಡನೆ ಸೇರಿ ಸುಖಿಸುವನು (೧೧೨-೧೧೩). ಶ್ರೀರಾಮನ ಅನುಗ್ರಹದಿಂದ ಸಕಲಾಭೀಷ್ಟಗಳನ್ನೂ ಪಡೆಯುವನು. ಶ್ರೀಮದ್ರಾಮಾಯಣವನ್ನು ಭಕ್ತಿಪೂರ್ವಕವಾಗಿ ಕೇಳು

ವಿನಾಯಕಾಶ್ಚ ಶಾಮ್ಯಂತಿ ಗೃಹೇ ತಿಷ್ಠಂತಿ ಯಸ್ಯ ವೈ ।
ವಿಜಯೇತ ಮಹೀಂ ರಾಜಾ ಪ್ರವಾಸೀ ಸ್ವಸ್ತಿಮಾನ್ ವ್ರಜೇತ್ ॥

ಸ್ತ್ರಿಯೋ ರಜಸ್ವಲಾಃ ಶ್ರುತ್ವಾ ಪುತ್ರಾನ್ ಸೂಯುರನುತ್ತಮಾನ್
ಪೂಜಯಂಶ್ಚ ಪಠಂಶ್ಚೇಮಮಿತಿಹಾಸಂ ಪುರಾತನಮ್ ॥ ೧೧೬

ಸರ್ವಪಾಪೈಃ ಪ್ರಮುಚ್ಯೇತ ದೀರ್ಘಮಾಯುರವಾಪ್ನುಯಾತ್ ।
ಪ್ರಣಮ್ಯ ಶಿರಸಾ ನಿತ್ಯಂ ಶ್ರೋತವ್ಯಂ ಕ್ಷತ್ರಿಯೈರ್ದ್ವಿಜಾತ್ ॥ ೧೧೭

ಐಶ್ವರ್ಯಂ ಪುತ್ರಲಾಭಶ್ಚ ಭವಿಷ್ಯತಿ ನ ಸಂಶಯಃ ।
ರಾಮಾಯಣಮಿದಂ ಕೃತ್ಸ್ನಂ ಶೃಣ್ವತಃ ಪಠತಃ ಸದಾ ॥ ೧೧೮

ಪ್ರೀಯತೇ ಸತತಂ ರಾಮಃ ಸ ಹಿ ವಿಷ್ಣುಃ ಸನಾತನಃ ।
ಆದಿದೇವೋ ಮಹಾಬಾಹುರ್ಹರಿರ್ನಾರಾಯಣಃ ಪ್ರಭುಃ ॥ ೧೧೯

---

ವುದರಿಂದ ನಿಖಿಲದೇವತೆಗಳೂ ಪ್ರಸನ್ನರಾಗುವರು (೧೧೪). ಮನೆಗಳಲ್ಲಿ ವಿಘ್ನಕಾರಿಗಳಾದ ಭೂತಾದಿಗಳ ಬಾಧೆ ಅಡಗುವುದು. ರಾಜನು ವಿಶಾಲವಾದ ಭೂಮಿಯನ್ನು ಗೆಲ್ಲುವನು. ಪ್ರವಾಸಿಯು ಕ್ಷೇಮದಿಂದ ಪ್ರವಾಸವನ್ನು ಮುಗಿಸಿ ಬರುವನು. ಕನ್ಯೆಯರು ರಜಸ್ವಲೆಯರಾದಮೇಲೆ ಈ ಪುಣ್ಯಕಥೆಯನ್ನು ಕೇಳಿದ ಪಕ್ಷದಲ್ಲಿ, ಶ್ರೇಷ್ಠರಾದ ಪುತ್ರರನ್ನು ಪಡೆಯುವರು (೧೧೫-೧೧೬). ಪುರಾತನವಾದ ಈ ಪವಿತ್ರಗ್ರಂಥವನ್ನು ಆದರದಿಂದ ಪೂಜಿಸಿ ಪಾರಾಯಣ ಮಾಡತಕ್ಕವನು ಸರ್ವಪಾಪಗಳಿಂದಲೂ ವಿಮುಕ್ತನಾಗಿ ದೀರ್ಘಾಯುಸ್ಸನ್ನು ಹೊಂದುವನು. ಕ್ಷತ್ರಿಯಾದಿಗಳು ಶ್ರದ್ಧೆಯಿಂದ ತಲೆಬಾಗಿ ವಂದಿಸಿ, ಬ್ರಾಹ್ಮಣರ ಮುಖದಿಂದ ಈ ಗ್ರಂಥವನ್ನು ಕೇಳಬೇಕು (೧೧೭). ಅಂಥವರಿಗೆ ಐಶ್ವರ್ಯವು ಲಭಿಸುವುದು. ಪುತ್ರಲಾಭವಾಗುವುದು. ಇದರಲ್ಲಿ ಸಂದೇಹವಿಲ್ಲ. ಸಮಗ್ರ ರಾಮಾಯಣವನ್ನು ಸರ್ವದಾ ಯಾರು ಕೇಳುವರೋ ಯಾರು ಪಾರಾಯಣಮಾಡುವರೋ, ಅವರಲ್ಲಿ ಶ್ರೀರಾಮನು ಸಂಪ್ರೀತನಾಗುವನು. ಆತನು ಸನಾತನಪುರುಷನಾದ ಶ್ರೀಮನ್ನಾರಾಯಣನಲ್ಲವೆ? ಮಹಾಬಾಹುವಾದ ಶ್ರೀರಾಮಚಂದ್ರನು ಆದಿದೇವನೂ ಸರ್ವ

ಕುಟುಂಬವೃದ್ಧಿಂ ಧನಧಾನ್ಯವೃದ್ಧಿಂ
ಸ್ತ್ರಿಯಶ್ಚ ಮುಖ್ಯಾಃ ಸುಖಮುತ್ತಮಂ ಚ ।
ಶ್ರುತ್ವಾ ಶುಭಂ ಕಾವ್ಯಮಿದಂ ಮಹಾರ್ಥಂ
ಪ್ರಾಪ್ನೋತಿ ಸರ್ವಾಂ ಭುವಿ ಚಾರ್ಥಸಿದ್ಧಿಮ್ ॥ ೧೨೦

ಆಯುಷ್ಯಮಾರೋಗ್ಯಕರಂ ಯಶಸ್ಯಂ
ಸೌಭ್ರಾತೃಕಂ ಬುದ್ಧಿಕರಂ ಶುಭಂ ಚ ।
ಶ್ರೋತವ್ಯಮೇತನ್ನಿಯಮೇನ ಸದ್ಭಿ
ರಾಖ್ಯಾನಮೋಜಸ್ಕರಮೃದ್ಧಿಕಾಮೈಃ ॥ ೧೨೧

ಏವಮೇತತ್ ಪುರಾವೃತ್ತಮಾಖ್ಯಾನಂ ಭದ್ರಮಸ್ತು ವಃ ।
ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಮ್ ॥ ೧೨೨

ದೇವಾಶ್ಚ ಸರ್ವೇ ತುಷ್ಯಂತಿ ಗ್ರಹಣಾಚ್ಛ್ರವಣಾತ್ತಥಾ ।
ರಾಮಾಯಣಸ್ಯ ಶ್ರವಣಾತ್ತುಷ್ಯಂತಿ ಪಿತರಸ್ತಥಾ ॥ ೧೨೩

---

ಲೋಕೇಶ್ವರನೂ ಆಗಿದ್ದಾನೆ (೧೧೮-೧೧೯). ಮಹಾರ್ಥಗರ್ಭಿತವಾದ ಈ ಶುಭಕಾವ್ಯವನ್ನು ಕೇಳತಕ್ಕವರು ಉತ್ತಮಸ್ತ್ರೀಯರನ್ನು ಕೈಹಿಡಿದು, ಕುಟುಂಬವೃದ್ಧಿ ಧನಧಾನ್ಯಸಮೃದ್ಧಿಗಳನ್ನು ಪಡೆದು, ಪರಮ ಸುಖವನ್ನನುಭವಿಸುತ್ತಾರೆ. ಈ ಜಗತ್ತಿನಲ್ಲಿ ಸಮಸ್ತ ಕಾರ್ಯವೂ ಅವರಿಗೆ ಸಿದ್ಧಿಸುತ್ತದೆ (೧೨೦). ಶ್ರೀಮದ್ರಾಮಾಯಣವು ಆಯುರಾರೋಗ್ಯಗಳನ್ನು ವರ್ಧಿಸುತ್ತದೆ. ಕೀರ್ತಿಕರವಾಗಿದೆ. ಸೋದರವಾತ್ಸಲ್ಯವನ್ನು ದೃಢಗೊಳಿಸಿ ಬುದ್ಧಿಬಲವನ್ನೂ ಸೌಖ್ಯವನ್ನೂ ಕೊಡುತ್ತದೆ. ತೇಜಸ್ಸನ್ನು ಹೆಚ್ಚಿಸುತ್ತದೆ. ಆದ್ದರಿಂದ ಶ್ರೇಯಸ್ಕಾಮರಾದ ಸಕಲ ಸಜ್ಜನರೂ ಅವಶ್ಯವಾಗಿ ಈ ಆಖ್ಯಾನವನ್ನು ಕೇಳುತ್ತಿರಬೇಕು (೧೨೧).

ಎಲೈ ಮಹಾಜನರೆ, ಈ ರೀತಿಯಲ್ಲಿ ಪುರಾತನವಾದ ಒಂದು ಪುಣ್ಯ ಚರಿತೆಯು ನಡೆಯಿತು. ನಿಮ್ಮೆಲ್ಲರಿಗೂ ಮಂಗಳವಾಗಲಿ! ಎಲ್ಲರೂ ಶ್ರದ್ಧೆಯಿಂದ ಈ ಗ್ರಂಥವನ್ನು ಪಠಿಸಿರಿ. ಮಹಾವಿಷ್ಣುವಿನ ಮಹಿಮೆಯು ಪ್ರಚುರವಾಗಲಿ (೧೨೨). ಶ್ರೀಮದ್ರಾಮಾಯಣದ ಶ್ರವಣದಿಂದಲೂ ಅದರ ಅರ್ಥವನ್ನು ಗ್ರಹಿಸುವುದರಿಂದಲೂ ಸಕಲದೇವತೆಗಳೂ ಸಂತುಷ್ಟ

**ಭಕ್ತ್ಯಾ ರಾಮಸ್ಯ ಯೇ ಚೇಮಾಂ ಸಂಹಿತಾಮೃಷಿಣಾ ಕೃತಾಮ್ ।**
**ಲೇಖಯಂತೀಹ ಚ ನರಾಸ್ತೇಷಾಂ ವಾಸಸ್ತ್ರಿವಿಷ್ಟಪೇ* ॥　　೧೨೪**

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಚತುರ್ವಿಂಶತಿಸಹಸ್ರಿಕಾಯಾಂ ಸಂಹಿತಾಯಾಂ ಯುದ್ಧಕಾಂಡೇ
ಏಕತ್ರಿಂಶದುತ್ತರಶತತಮಃ ಸರ್ಗಃ

**ಶ್ರೀಮದ್ವಾಲ್ಮೀಕಿರಾಮಾಯಣೇ ಯುದ್ಧಕಾಂಡಃ ಸಂಪೂರ್ಣಃ**



ರಾಗುವರು. ಪಿತೃಗಳು ಸಂತೃಪ್ತರಾಗುವರು. ಋಷಿಪ್ರಣೀತವಾದ ಈ ಶ್ರೀರಾಮಚರಿತೆಯನ್ನು ಯಾರು ಭಕ್ತಿಯಿಂದ ಬರೆಯಿಸುವರೋ, ಅವರಿಗೆ ಸದ್ಗತಿಯು ಲಭಿಸುವುದು (೧೨೩-೧೨೪).

**ಇಲ್ಲಿಗೆ ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ನೂರಮೂವತ್ತೊಂದನೆಯ ಸರ್ಗ**

**॥ ಶ್ರೀರಾಮಚಂದ್ರಾರ್ಪಣಮಸ್ತು ॥**

ರಾವಣಾದಿನಿಹಂತಾರಂ ಶ್ರೀಶರುದ್ರಾದಿಸೇವಿತಮ್ ।
ಸೀತಾದೇವೀಯುತಂ ಯೌದ್ಧೇ ರಾಮಂ ಧ್ಯಾಯೇತ್ ಹೃದಂಬುಜೇ ॥



---

* **ಸಮಾಪ್ತಿಯಲ್ಲಿ ಈ ಎರಡು ಶ್ಲೋಕಗಳನ್ನು ಪಠಿಸುವ ಸಂಪ್ರದಾಯವುಂಟು :**

**ಪ್ರಾಪ್ತರಾಜ್ಯಸ್ಯ ರಾಮಸ್ಯ ರಾಕ್ಷಸಾನಾಂ ವಧೇ ಕೃತೇ ।**
**ಆಜಗ್ಮುರ್ಮುನಯಃ ಸರ್ವೇ ರಾಘವಂ ಪ್ರತಿನಂದಿತುಮ್ ॥**

**ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।**
**ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥**

ಕಲ್ಯಾಣೋಲ್ಲಾಸಸೀಮಾ ಕಲಯತು ಕುಶಲಂ ಕಾಲಮೇಘಾಭಿರಾಮಾ
ಕಾಚಿತ್ ಸಾಕೇತಧಾಮಾ ಭವಗಹನಗತಿಕ್ಲಾಂತಿಹಾರಿಪ್ರಣಾಮಾ |
ಸೌಂದರ್ಯಹ್ರೀಣಕಾಮಾ ಧೃತಜನಕಸುತಾಸಾದರಾಪಾಂಗದಾಮಾ
ದಿಕ್ಷು ಪ್ರಖ್ಯಾತಭೂಮಾ ದಿವಿಷದಭಿನುತಾ ದೇವತಾ ರಾಮನಾಮಾ ||

ಕನಕನಿಕಷಭಾಸಾ ಸೀತಯಾಲಿಂಗಿತಾಂಗೋ
ನವಕುವಲಯದಾಮಶ್ಯಾಮವರ್ಣಾಭಿರಾಮಃ |
ಅಭಿನವ ಇವ ವಿದ್ಯುನ್ಮಂಡಿತೋ ಮೇಘಖಂಡಃ
ಶಮಯತು ಮಮ ತಾಪಂ ಸರ್ವತೋ ರಾಮಚಂದ್ರಃ ||

ಮಂಗಲಂ ಕೋಸಲೇಂದ್ರಾಯ ಮಹನೀಯಗುಣಾತ್ಮನೇ |
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಲಮ್ ||

# ಅನುಬಂಧ

## ೧

**ಸರ್ವೌಷಧೀಭಿರ್ಗಂಧೈಶ್ಚ ಸಮಾಲಭ್ಯ ಮಹಾಬಲಾಃ**

—ಪುಟ ೧೦

ಯುದ್ಧಕಾಲದಲ್ಲಿ ಯೋಧರು ಕೆಲವು ಮೂಲಿಕೆಗಳನ್ನು ತೆಯ್ದು ಗಂಧವನ್ನು ದೇಹಕ್ಕೆ ಬಳಿದುಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ. ಆಯುಧಗಳ ಪೆಟ್ಟಿನಿಂದ ದೇಹಕ್ಕೆ ನಂಜೇರದಂತೆ ಈ ಗಂಧವು ತಡೆಯುತ್ತಿತ್ತು. ಅಥವಾ ಗಾಯದಮೇಲೆ ಇದನ್ನು ಹಚ್ಚುತ್ತಿದ್ದರೂ ಇರಬಹುದು.

ಕೋಷ್ಠಂ ಮಾಂಸೀ ಹರಿದ್ರೇ ದ್ವೇ ಮುರಾ ಶೈಲೇಯಚಂದನೇ |
ವಚಾಚಂಪಕಮುಸ್ತಾಶ್ಚ ಸರ್ವೌಷಧ್ಯೋ ದಶ ಸ್ಮೃತಾಃ ||

ಎಂದು ವೈದ್ಯಶಾಸ್ತ್ರದಲ್ಲಿರುವುದಾಗಿ ತಿಳಿದುಬರುತ್ತದೆ. 'ಕೋಷ್ಠ, ಜಟಾಮಾಂಸಿ, ಅರಿಸಿನ, ಮರದರಿಸಿನ, ಮುರಾ, ಕಲ್ನಾರು, ಚಂದನ, ಬಜೆ, ಸಂಪಗೆ, ತುಂಗೆಗಡ್ಡೆ–ಈ ಹತ್ತು ಮೂಲಿಕೆಗಳಿಗೆ ಸರ್ವೌಷಧಿಗಳೆಂದು ಹೆಸರು.

## ೨

**ದಿವಸಸ್ಯಾಷ್ಟಮೇ ಭಾಗೇ ಶರೈರಗ್ನಿಶಿಖೋಪಮೈಃ**

—ಪುಟಗಳು ೨೬೭–೨೬೮

ಏಕೇಭೈಕರಥಾ ತ್ರ್ಯಶ್ವಾ ಪತ್ತಿಃ ಪಂಚಪದಾತಿಕಾ |
ಪತ್ತ್ಯಂಗೈಸ್ತ್ರಿಗುಣೈಃ ಸರ್ವೈಃ ಕ್ರಮಾದಾಖ್ಯಾ ಯಥೋತ್ತರಮ್ |
ಸೇನಾಮುಖಂ ಗುಲ್ಮಗಣೌ ವಾಹಿನೀ ಪೃತನಾ ಚಮೂಃ |
ಅನೀಕಿನೀ ದಶಾನೀಕಿನ್ಯೋಽಕ್ಷೌಹಿಣೀ (ಅಥ ಸಂಪದಿ) ||

—ಅಮರಕೋಶ, ಕ್ಷತ್ರಿಯವರ್ಗ

ಇದರ ಪ್ರಕಾರ ಸೇನೆಯ ಗಣನೆ ಈ ರೀತಿಯಲ್ಲಿದೆ: ಒಂದು ಆನೆ, ಒಂದು ರಥ, ಮೂರು ಕುದುರೆಗಳು, ಐವರು ಪದಾತಿಗಳು—ಹೀಗೆ ಹತ್ತು ಚತುರಂಗಬಲವುಳ್ಳ ಸೇನೆಯ ತುಕಡಿಗೆ 'ಪತ್ತಿ' ಎಂದು ಹೆಸರು.

| | |
|---|---|
| ೩ ಪತ್ತಿ=೧ ಸೇನಾಮುಖ | ೩ ವಾಹಿನೀ=೧ ಪೃತನಾ |
| ೩ ಸೇನಾಮುಖ=೧ ಗುಲ್ಮ | ೩ ಪೃತನಾ=೧ ಚಮೂ |
| ೩ ಗುಲ್ಮ=೧ ಗಣ | ೩ ಚಮೂ=೧ ಅನೀಕಿನೀ |
| ೩ ಗಣ=೧ ವಾಹಿನೀ | ೧೦ ಅನೀಕಿನೀ=೧ ಅಕ್ಷೌಹಿಣೀ |

ಈ ಗಣನೆಯಂತೆ ಒಂದು ಅಕ್ಷೌಹಿಣಿಯಲ್ಲಿ ಕೆಳಗೆ ಕಂಡಂತೆ ಚತುರಂಗ ಬಲಗಳಿರುತ್ತವೆ :

| | | |
|---|---|---|
| ಆನೆಗಳು | = | ೨೧,೮೭೦ |
| ರಥಗಳು | = | ೨೧,೮೭೦ |
| ಕುದುರೆಗಳು | = | ೬೫,೬೧೦ |
| ಪದಾತಿಗಳು | = | ೧,೦೯,೩೫೦ |
| ಒಟ್ಟು | | ೨,೧೮,೭೦೦ |

ಈ ಕ್ರಮದಲ್ಲಿ ಒಂದು ಚಮೂವಿಗೆ ಚತುರಂಗಬಲಗಳ ಸಂಖ್ಯೆ ಒಟ್ಟು ೭,೨೯೦ ಆಗುತ್ತದೆ. ಈ 'ಚಮೂ'ವನ್ನೇ ಮೂಲದಲ್ಲಿ 'ಅನೀಕ' ಎಂಬ ಶಬ್ದದಿಂದ ವ್ಯವಹರಿಸಿದ್ದಾರೆಂದು ವ್ಯಾಖ್ಯಾನಕಾರರು ಹೇಳುತ್ತಾರೆ. ಇದನ್ನನುಸರಿಸಿ ಕನ್ನಡ ಅನುವಾದದಲ್ಲಿ ಸಂಖ್ಯೆಯನ್ನು ಗೊತ್ತುಮಾಡಿ ಬರೆಯಲಾಗಿದೆ.

ಈ ಸಂದರ್ಭದಲ್ಲಿ ಪ್ರಾಚೀನರು ಹೇಳುವ ಒಂದು ಶ್ಲೋಕ ಉಂಟು :

ನಾಗಾನಾಮಯುತಂ ತುರಂಗನಿಯುತಂ ಸಾರ್ಧಂ ರಥಾನಾಂ ಶತಂ
ಪಾದಾತಂ ಶತಕೋಟಿಕರ್ತನವಿಧಾವೇಕಃ ಕಬಂಧೋ ರಣೇ |
ಏವಂ ಕೋಟಿಕಬಂಧನರ್ತನವಿಧೌ ಕಿಂಚಿದ್ಧ್ವನಿಃ ಕಿಂಕಿಣೀ-
ರ್ಯಾವಾರ್ಧಂ ಪರಮಾತ್ಮನೋ ರಘುಪತೇಃ ಕೋದಂಡಘಂಟಾರವಃ ||

ಅನನ್ವಿತವಾದ ಈ ಶ್ಲೋಕದ ತಾತ್ಪರ್ಯ ಇಷ್ಟು :

ಹತ್ತು ಸಾವಿರ ಆನೆಗಳೂ, ಒಂದು ಲಕ್ಷ ಕುದುರೆಗಳೂ, ನೂರೈವತ್ತು ರಥಗಳೂ, ಶತಕೋಟಿ ಪದಾತಿಗಳೂ ಕತ್ತರಿಸಲ್ಪಟ್ಟಾಗ ಶಿರೋಹೀನವಾದ ಒಂದು ಕಬಂಧವು ರಣಭೂಮಿಯಲ್ಲಿ ಕುಣಿಯುತ್ತಿತ್ತು. ಒಂದು ಕೋಟಿ ಕಬಂಧಗಳು ನರ್ತನಮಾಡಿದಾಗ ರಘುವೀರನ ಕೋದಂಡದಲ್ಲಿದ್ದ ಕಿರುಗೆಜ್ಜೆಯು ಒಂದುಸಲ ಜಣಗುಟ್ಟುತ್ತಿತ್ತು. ಹೀಗಿರುವಾಗ ಅರ್ಧಯಾಮದ ವರೆಗೆ ಶ್ರೀರಾಮನ ಕೋದಂಡದಲ್ಲಿದ್ದ ಕಿರುಗೆಜ್ಜೆಗಳು ಅಖಂಡವಾಗಿ ಜಣಗುಟ್ಟಿದವು !

೩

## ಋಕ್ಷೇಣ ಗೀತಃ ಶ್ಲೋಕೋ ಮೇ ತನ್ನಿಬೋಧ ಪ್ಲವಂಗಮ

—ಪುಟ ೪೪೭

ಇಲ್ಲಿ ಒಂದು ಕಥೆಯುಂಟು : ಕಾಡಿನಲ್ಲಿ ಒಬ್ಬ ವ್ಯಾಧನನ್ನು ಒಂದು ಹುಲಿ ಅಟ್ಟಿಸಿಕೊಂಡು ಬಂದಿತು. ಅವನು ಭಯದಿಂದ ಒಂದು ಮರವನ್ನು ಹತ್ತಿದನು. ಹುಲಿ ಆ ಮರದ ಬುಡಕ್ಕೆ ಬಂದಾಗ ಮರದಮೇಲೆ ಒಂದು ಕರಡಿ ಕುಳಿತಿದ್ದುದು ಕಾಣಿಸಿತು. ಹುಲಿಯು ಕರಡಿಯನ್ನು ಕುರಿತು "ಮಿತ್ರ, ಆ ವ್ಯಾಧನು ನಮ್ಮೆಲ್ಲರಿಗೂ ಶತ್ರು. ಅವನನ್ನು ಕೆಳಗೆ ತಳ್ಳಿ ಬಿಡು. ಆತನನ್ನು ಕೊಲ್ಲುತ್ತೇನೆ" ಎಂದಿತು. ಆಗ ಕರಡಿಯು "ಅಯ್ಯಾ, ಈ ವ್ಯಾಧನು ನನ್ನ ವಾಸಸ್ಥಳಕ್ಕೆ ಬಂದಿದ್ದಾನೆ. ಇವನಿಗೆ ನಾನು ಆಶ್ರಯ ವನ್ನು ಕೊಡುವುದು ಧರ್ಮ. ಇವನನ್ನು ತಳ್ಳುವುದು ಪಾಪಕೃತ್ಯ. ಆದ್ದರಿಂದ ಇವನನ್ನು ನಾನು ಕೆಳಗೆ ಉರುಳಿಸುವುದಿಲ್ಲ" ಎಂದಿತು. ಅದು ವ್ಯಾಧನಿಗೆ ಧೈರ್ಯವನ್ನು ಹೇಳಿ ಸ್ವಲ್ಪ ಹೊತ್ತಿನಮೇಲೆ ನಿದ್ರೆಮಾಡಿತು. ಆಗ ಹುಲಿಯು ವ್ಯಾಧನನ್ನು ನೋಡಿ "ಅಯ್ಯ, ಆ ಕರಡಿಯನ್ನು ಕೆಳಗೆ ತಳ್ಳಿಬಿಡು ! ಅದನ್ನು ತಳ್ಳಿದರೆ ನಿನ್ನನ್ನು ಕೊಲ್ಲದೆ ಉಳಿಸುವೆನು !" ಎಂದು ಆಶ್ವಾಸನೆಯನ್ನಿತ್ತಿತು. ಆಗ ವ್ಯಾಧನು ನಿದ್ರಿಸುತ್ತಿದ್ದ ಆ ಕರಡಿಯನ್ನು ಕೆಳಗೆ ತಳ್ಳಿದನು. ಕರಡಿಯು ಅಭ್ಯಾಸಬಲದಿಂದ ಕೆಳಗೆ ಬೀಳದೆ, ಮತ್ತೊಂದು ಕೊಂಬೆಯನ್ನು ಹಿಡಿದುಕೊಂಡು ಮರದಲ್ಲಿಯೇ ಕುಳಿತಿತು.

ಆಗ ಹುಲಿಯು "ನೋಡಿದೆಯಾ, ಭಲ್ಲೂಕರಾಜ! ಆ ವ್ಯಾಧನು ಪಾಪಿ; ಕೃತಘ್ನ. ಈಗಲಾದರೂ ಅವನನ್ನು ಕೆಳಗುರುಳಿಸು!" ಎಂದಿತು. ಕರಡಿಯು "ವ್ಯಾಘ್ರರಾಜ, ಇಲ್ಲ; ವ್ಯಾಧನನ್ನು ತಳ್ಳಲಾರೆ. ಅವನು ಅಪರಾಧಿಯಾದರೂ ಅವನಿಗೆ ಅಪಕಾರವನ್ನು ಮಾಡಲಾರೆ" ಎಂದು ನುಡಿದು ವ್ಯಾಧನನ್ನು ರಕ್ಷಿಸಿತು. ಇದೊಂದು ಪುರಾಣಪ್ರಸಿದ್ಧವಾದ ಕಥೆಯೆಂದು ಶ್ರೀ ಮಹೇಶ್ವರತೀರ್ಥರು ಬರೆದಿದ್ದಾರೆ.

೪

## ಯೋಽಹಂ ಯಸ್ಯ ಯತಶ್ಚಾಹಂ ಭಗವಾಂಸ್ತದ್ಬ್ರವೀತು ಮೇ

—ಪುಟ ೪೭೦

ಶ್ರೀರಾಮನು "ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಮ್" ಎಂದು ಹೇಳಿದನಷ್ಟೆ. ಇಲ್ಲಿ ಶ್ರುತಿಸ್ಮೃತಿ ಪ್ರಸಿದ್ಧವಾದ ಬ್ರಹ್ಮವಿದ್ಯೋಪದೇಶಮಾರ್ಗವು ಸೂಚಿತವಾಗಿದೆಯೆಂದು ತಿಲಕ ವ್ಯಾಖ್ಯಾನಕಾರರು ಬರೆಯುತ್ತಾರೆ: "ನಾನು ದಶರಥನ ಪುತ್ರನೆಂದೂ ರಾಮ ಎಂಬ ಹೆಸರಿನ ಒಬ್ಬ ಮನುಷ್ಯನೆಂದೂ ತಿಳಿದುಕೊಂಡಿದ್ದೇನೆ. ನೀವಾದರೋ 'ತ್ರಯಾಣಾಂ ತ್ವಂ ಹಿ ಲೋಕನಾಮಾದಿಕರ್ತಾ ಸ್ವಯಂ ಪ್ರಭುಃ' ಇತ್ಯಾದಿಯಾಗಿ ಹೇಳುತ್ತೀರಿ. ನಾನೇ ಪರಮಾತ್ಮಸ್ವರೂಪನೆಂದು ಹೇಳುತ್ತೀರಿ. 'ಆತ್ಮಾನಂ ನಾವಬುಧ್ಯಸೇ=ನಿನ್ನ ನಿಜವಾದ ಆತ್ಮಸ್ವರೂಪವನ್ನು ತಿಳಿದುಕೊಂಡಿಲ್ಲ' ಎಂದು ತಿಳಿಸುತ್ತೀರಿ. ಇದು ಹೇಗೆ?" ಎಂದು ಶ್ರೀರಾಮನ ಪ್ರಶ್ನೆ. 'ಬ್ರಹ್ಮವಿದಾಂ ವರಃ' ಎಂದು ಬ್ರಹ್ಮನಿಗೆ ವಿಶೇಷಣವನ್ನು ಕೊಟ್ಟಿರುವುದು ಸದ್ಗುರು ಲಕ್ಷಣವನ್ನು ತಿಳಿಸುವುದಕ್ಕಾಗಿ. ಆದ್ದರಿಂದಲೇ ಈ ವಿಶೇಷಣವು ಪ್ರಕೃತದಲ್ಲಿ ಸಮರ್ಥನೀಯವಾಗುತ್ತದೆ. ಶಿಷ್ಯನಿಗೆ ಜಿಜ್ಞಾಸೆಯುಂಟಾಗಲು ಗುರುವು ಪರಮಾರ್ಥವನ್ನು ತಿಳಿಸುತ್ತಾನೆ. ಅನಂತರ ಬ್ರಹ್ಮನು ಶ್ರೀರಾಮನಿಗೆ ನೀನೇ ಪರಬ್ರಹ್ಮನೆಂದು ಬೋಧಿಸಿದ್ದಾನೆ. 'ತತ್ತ್ವಮಸಿ' ಎಂಬ ಮಹಾವಾಕ್ಯದ ಅರ್ಥವು ಈ ಪ್ರಕರಣದಲ್ಲಿ ವ್ಯಕ್ತವಾಗಿದೆ.

೫

## ಅಷ್ಟಾವಕ್ರೇಣ ಧರ್ಮಾತ್ಮಾ ಕಹೋಲೋ ಬ್ರಾಹ್ಮಣೋ ಯಥಾ

—ಪುಟಗಳು ೪೮೧-೪೮೩

ಈ ಕಥೆಯು ಮಹಾಭಾರತದ ವನಪರ್ವದಲ್ಲಿ ಬಂದಿದೆ: ಕಹೋಲ-ಕಹೋಡ ಎಂದು ಅಲ್ಲಿ ಪಾಠಾಂತರವಿದೆ. ಉದ್ದಾಲಕನೆಂಬ ಮಹರ್ಷಿಗೆ ಕಹೋಡನೆಂಬ ಶಿಷ್ಯನಿದ್ದನು. ಉದ್ದಾಲಕನ ಮಗನಾದ ಶ್ವೇತಕೇತು ಮತ್ತು ಕಹೋಡ ಇಬ್ಬರೂ ಸಹಪಾಠಿಗಳು. ಕಹೋಡನ ವಿದ್ಯಾಭ್ಯಾಸವು ಮುಗಿದಮೇಲೆ ಉದ್ದಾಲಕನು ಆತನ ಗುಣಗಳಿಗೆ ಮೆಚ್ಚಿ ತನ್ನ ಮಗಳಾದ ಸುಜಾತೆಯನ್ನು ಅವನಿಗೆ ಕೊಟ್ಟು ಮದುವೆಮಾಡಿದನು. ಸುಜಾತೆ ಗರ್ಭಿಣಿಯಾದಳು. ಆಗ ಸಂಸಾರದ ತೊಂದರೆಯಿಂದ ಕಹೋಡನು ಹಣವನ್ನು ಸಂಪಾದಿಸುವುದಕ್ಕಾಗಿ ಜನಕನ ಆಸ್ಥಾನಕ್ಕೆ ಹೋದನು. ಅಲ್ಲಿ ವರುಣಪುತ್ರನಾದ ಬಂದಿ ಎಂಬ ಪಂಡಿತನಿದ್ದನು. ಅವನು ವಾದದಲ್ಲಿ ಅಗ್ರಗಣ್ಯ. ತನ್ನೊಡನೆ ವಾದಮಾಡಿ ಸೋತವರನ್ನು ಸಮುದ್ರದಲ್ಲಿ ಮುಳುಗಿಸಿಬಿಡುತ್ತಿದ್ದನು. ಕಹೋಡನು ಬಂದಿಯೊಡನೆ ವಾದಮಾಡಿ ಸೋತುಹೋದನು. ಕಹೋಡನನ್ನು ಸಮುದ್ರದಲ್ಲಿ ಮುಳುಗಿಸಲಾಯಿತು.

ಇತ್ತ ಸುಜಾತೆ ಅಷ್ಟಾವಕ್ರನನ್ನು ಹಡೆದಳು. ಅಷ್ಟಾವಕ್ರನಿಗೆ ಅವನ ತಂದೆಯ ವೃತ್ತಾಂತವು ತಿಳಿಯದಂತೆ ರಹಸ್ಯವಾಗಿ ಇಡಲ್ಪಟ್ಟಿತು. ಮಾತಾಮಹನಾದ ಉದ್ದಾಲಕನೇ ಅವನನ್ನು ಸಾಕಿ ಬೆಳೆಸಿದನು. ಬಾಲ್ಯದಲ್ಲಿಯೇ ಅವನು ಮಹಾವಿದ್ವಾಂಸನೆಂದೂ ಜ್ಞಾನಿಯೆಂದೂ ಖ್ಯಾತಿ ಗಳಿಸಿದನು. ಒಂದು ದಿನ ಅವನಿಗೆ ತಂದೆಯಾದ ಕಹೋಡನ ವೃತ್ತಾಂತವು ತಿಳಿಯಿತು. ಕೂಡಲೆ ಅಷ್ಟಾವಕ್ರನು ಜನಕನ ಆಸ್ಥಾನಕ್ಕೆ ಹೋಗಿ ಬಂದಿಯೊಡನೆ ವಾದವನ್ನು ಹೂಡಿ, ಸಭಾಮಧ್ಯದಲ್ಲಿ ಅವನನ್ನು ಸೋಲಿಸಿದನು. ಸಭಾನಿಯಮದಂತೆ ಬಂದಿಯನ್ನೇ ಸಮುದ್ರದಲ್ಲಿ ಮುಳುಗಿಸಬೇಕಾಗಿ ಬಂದಿತು. ಆಗ ಬಂದಿಯು ಸಮುದ್ರದಲ್ಲಿ ಮುಳುಗಿಸಿದ್ದ ಕಹೋಡನನ್ನು ತನ್ನ ತಂದೆಯಾದ ವರುಣನ ಅನುಗ್ರಹದಿಂದ ಬದುಕಿಸಿಕೊಟ್ಟು ತಾನು ಸಮುದ್ರದಲ್ಲಿ ಮುಳುಗಿದನು. ಈ ರೀತಿಯಲ್ಲಿ ಅಷ್ಟಾವಕ್ರನು ತನ್ನ ವಂಶದ ಕೀರ್ತಿಯನ್ನುಳಿಸಿ ತಂದೆಯನ್ನು ಬದುಕಿಸಿಕೊಂಡನು.

೬

## ಅತ್ರ ಪೂರ್ವಂ ಮಹಾದೇವಃ ಪ್ರಸಾದಮಕರೋತ್ ಪ್ರಭುಃ

—ಪುಟ ೫೦೫

ಸೇತುಬಂಧನಕ್ಕೆ ಪೂರ್ವದಲ್ಲಿ ಶ್ರೀರಾಮನಿಗೆ ಶಿವನು ಪ್ರಸನ್ನನಾದ ನೆಂದೂ ಅದೇ ಸ್ಥಳದಲ್ಲಿ ಶ್ರೀರಾಮನು ಶಿವಲಿಂಗವನ್ನು ಪ್ರತಿಷ್ಠಾಪಿಸಿ ಪೂಜಿಸಿದನೆಂದೂ ರಾಮೇಶ್ವರದ ವೃತ್ತಾಂತವು ಇಲ್ಲಿ ಸೂಚಿತವಾಗುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ಹಿಂದೆ ಇದರ ವರ್ಣನೆ ಬಂದಿಲ್ಲ. ಆದ್ದರಿಂದ ಸಾಮಂಜಸ್ಯ ಹೇಗೆ? ಎಂಬ ಪ್ರಶ್ನೆ ಹುಟ್ಟುತ್ತದೆ. ಶ್ರೀ ಗೋವಿಂದರಾಜರು ಹೀಗೆ ಹೇಳುತ್ತಾರೆ:

ಮಹಾದೇವನೆಂದರೆ ಸಮುದ್ರರಾಜ. ಅವನು ಕುಪಿತನಾದ ಶ್ರೀರಾಮನಿಗೆ, ಪ್ರಸಾದಂ=ಪ್ರಸನ್ನತೆಯನ್ನು ಉಂಟುಮಾಡಿದನು. ಸಮುದ್ರವನ್ನು ಒಣಗಿಸುವೆನೆಂದು ಕ್ರುದ್ಧನಾದ ಶ್ರೀರಾಮನನ್ನು ವಿನಯವಚನಗಳಿಂದ ಪ್ರಸನ್ನನನ್ನಾಗಿ ಮಾಡಿಕೊಂಡನು. ಈ ಅರ್ಥವೇ ಇಲ್ಲಿ ವಿವಕ್ಷಿತ. ಮಹಾದೇವನೆಂದರೆ ರುದ್ರನಲ್ಲ. ಏಕೆಂದರೆ, ಆ ಸಂದರ್ಭದ ವರ್ಣನೆ ಹಿಂದೆ ಬಂದಿಲ್ಲ. 'ಹಿಂದೆ ಬರದಿದ್ದರೂ ಇಲ್ಲಿ ವರ್ಣಿಸಿರುವುದರಿಂದ ರುದ್ರನು ಪ್ರಸನ್ನನಾದನೆಂಬ ಕಥೆಯನ್ನು ಊಹಿಸಿಕೊಳ್ಳಬಹುದಲ್ಲವೆ? ಈ ಪ್ರಕರಣದಲ್ಲಿಯೇ ಅಂಗದನು ವಿಕಟನನ್ನು ಕೊಂದನೆಂದು ಹೇಳಿದೆ. ಅದು ಹಿಂದೆ ಉಕ್ತವಾಗಿಲ್ಲ. ಆದರೂ ಇಲ್ಲಿ ಅನುವಾದಮಾಡಿದ್ದರಿಂದ, ವಿಕಟನನ್ನು ಅಂಗದನು ಕೊಂದನೆಂದು ಒಪ್ಪಿಕೊಳ್ಳುತ್ತೇವೆ, ಅಲ್ಲವೆ?' ಎಂದು ಯಾರಾದರೂ ಕೇಳಬಹುದು. ಅದು ಸರಿಯಲ್ಲ. ರುದ್ರನು ಶ್ರೀರಾಮನಿಗೆ ಪ್ರಸನ್ನನಾಗಲು ಅಥವಾ ಅವನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳಲು ಯಾವ ನಿಮಿತ್ತವೂ ಇರಲಿಲ್ಲ. ಕೂರ್ಮಪುರಾಣ, ಪದ್ಮಪುರಾಣ ಮೊದಲಾದವುಗಳಲ್ಲಿ ರಾಮೇಶ್ವರಲಿಂಗಪ್ರತಿಷ್ಠೆಯ ವಿಷಯವು ಹೇಳಲ್ಪಟ್ಟಿದೆಯಾದ್ದರಿಂದ, ಇಲ್ಲಿಯೂ ಮಹಾದೇವನೆಂದರೆ ರುದ್ರನೆಂದು ಹೇಳುವುದು ಯುಕ್ತವಲ್ಲವೆ? ಅಲ್ಲ. ವಾಲ್ಮೀಕಿ ಪುರಾಣವು ಇತಿಹಾಸ. ಇದು ವೇದೋಪಬೃಂಹಣವೆನಿಸಿಕೊಂಡಿದೆ. ಪುರಾಣಕ್ಕಿಂತ ಇತಿಹಾಸವೂ

ವೇದವೂ ಶ್ರೇಷ್ಠವಾದದ್ದು. ಕೂರ್ಮಪುರಾಣಗಳು ತಾಮಸಪುರಾಣಗಳು. ರಾಮಾಯಣಕ್ಕೆ ವಿರುದ್ಧವಾದ ತಾಮಸಪುರಾಣಗಳು ಪ್ರಾಮಾಣಿಕವಲ್ಲ, ಇತ್ಯಾದಿ.

ಒಂದು ವ್ಯಾಖ್ಯಾನದಲ್ಲಂತೂ 'ಅತ್ರ ಪೂರ್ವಂ ಮಹಾದೇವಃ' ಎಂಬಲ್ಲಿ, ಅತ್ರಪೂರು ಅಮ್ಮಹಾದೇವಃ ಎಂದು ಪದವಿಭಾಗಮಾಡಿದ್ದಾರೆ. ತ್ರಪು ಎಂದರೆ ತವರ ಅಥವಾ ಸೀಸ. ಅತ್ರಪು=ಚಿನ್ನ! ಅತ್ರಪುವಿನಂತೆ ಊರುಗಳುಳ್ಳವಳು ಸೀತೆ. ಅವಳ ಸಂಬೋಧನೆ-ಹೇ ಅತ್ರಪೂರು! ಅಮ್ಮಹಾದೇವಃ-ಅಪ್ ಮಹಾದೇವ=ಜಲಾಧಿದೇವತೆಯಾದ ವರುಣ.

ಈ ವ್ಯಾಖ್ಯಾತೃಗಳಿಗೆ ಶಿವನನ್ನು ಮಹಾದೇವನೆಂದು ಕರೆಯಲೂ ಅವನು ಶ್ರೀರಾಮನಿಗೆ ಪ್ರಸನ್ನನಾದನೆಂಬುದನ್ನು ಒಪ್ಪಲೂ ಮನಸ್ಸಿಲ್ಲ. ವರುಣನನ್ನು ಮಹಾದೇವನೆಂದು ಕರೆಯಬಹುದು. ಅವನು ಶ್ರೀರಾಮನಿಗೆ ಪ್ರಸನ್ನನಾಗಬಹುದು.

ಮಹಾದೇವ ಪದವು ಶಿವನಲ್ಲಿ ಯೋಗರೂಢವಾದದ್ದು. 'ವಾಮದೇವೋ ಮಹಾದೇವಃ ಸ್ಥಾಣೂ ರುದ್ರ ಉಮಾಪತಿಃ' ಎಂದು ಅಮರಕೋಶದಲ್ಲಿದೆ. ಯುದ್ಧಕಾಂಡದಲ್ಲಿಯೇ 'ಷಡರ್ಧನಯನಃ ಶ್ರೀಮಾನ್ ಮಹಾದೇವೋ ವೃಷಧ್ವಜಃ', 'ಮಹಾದೇವಪ್ರಸಾದಾಚ್ಚ' ಎಂಬಲ್ಲಿ ಶಿವನೆಂಬ ಅರ್ಥವು ಸ್ಪಷ್ಟವಾಗಿದೆ. ಈ ಅರ್ಥವನ್ನು ಪ್ರಕೃತದಲ್ಲಿ ತ್ಯಜಿಸಲು ಯುಕ್ತವಾದ ಕಾರಣವಿಲ್ಲ. ಸೇತುಬಂಧನವನ್ನಾರಂಭಿಸುವಾಗ ನಿರ್ವಿಘ್ನತಾಸಿದ್ಧಿಗಾಗಿ ಶಿವಪ್ರತಿಷ್ಠೆಯನ್ನು ಶ್ರೀರಾಮನು ಮಾಡಿರಬಹುದು. ಕೆಲವು ಪುರಾಣಗಳಲ್ಲಿ ಲಂಕೆಯಿಂದ ಹಿಂದಿರುಗುವಾಗ ರಾಮೇಶ್ವರಪ್ರತಿಷ್ಠೆಯಾಯಿತೆಂದು ಹೇಳಿದೆ. ಈ ಎರಡು ಪಕ್ಷಗಳಲ್ಲದೆ, ಕಾಲಾಂತರದಲ್ಲಿ ಶ್ರೀರಾಮನು ಸೇತುಬಂಧನಸ್ಥಳದಲ್ಲಿ ಲಿಂಗಸ್ಥಾಪನೆಯನ್ನು ಮಾಡಿದನೆಂದು ಸ್ಕಾಂದಪುರಾಣದಲ್ಲಿದೆ. ಈ ಮೂರು ಪಕ್ಷಗಳಲ್ಲಿಯೂ 'ಶಿವನು ಪ್ರಸನ್ನನಾದನು' ಎಂಬ ವಚನವು ಯುಕ್ತವಾಗಿಯೇ ಇದೆ. ಈ ಪ್ರಮಾಣಗಳನ್ನು ಗಮನಿಸಬಹುದು:

(೧) ಸೇತುಮಧ್ಯೇ ಮಹಾದೇವಮೀಶಾನಂ ಕೃತ್ತಿವಾಸಸಮ್ |
ಸ್ಥಾಪಯಾಮಾಸ ರಾಘವಃ ಸಮಸೋಮಲಸತ್ಫಾಲಂ ||
ತಸ್ಯ ದೇವೋ ಮಹಾದೇವಃ ಪಾರ್ವತ್ಯಾ ಸಹ ಶಂಕರಃ |
ಪ್ರತ್ಯಕ್ಷ ಏವ ಭಗವಾನ್ ದತ್ತವಾನ್ ವರಮುತ್ತಮಮ್ ||

—ಕೂರ್ಮಪುರಾಣ

(೨) ಸೇತುಮಾರಭಮಾಣಸ್ತು ತತ್ರ ರಾಮೇಶ್ವರಂ ಶಿವಮ್ |
ಸಂಸ್ಥಾಪ್ಯ ಪೂಜಯಾಮಾಸ ರಾಮೋ ಲೋಕಹಿತಾಯ ಚ ||
ಪ್ರಣಮೇತ್ ಸೇತುಬಂಧಂ ಯೋ ದೃಷ್ಟ್ವಾ ರಾಮೇಶ್ವರಂ ಶಿವಮ್
ಬ್ರಹ್ಮಹತ್ಯಾದಿ ಪಾಪೇಭ್ಯೋ ಮುಚ್ಯತೇ ತದನುಗ್ರಹಾತ್ ||

ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ಹಿಂದಿರುಗುವಾಗ—

ಅತ್ರ ರಾಮೇಶ್ವರೋ ದೇವೋ ಮಯಾ ಶಂಭುಃ ಪ್ರತಿಷ್ಠಿತಃ ||

—ಅಧ್ಯಾತ್ಮರಾಮಾಯಣ

(೩) ಪದ್ಮಪುರಾಣದಲ್ಲಿ ಶ್ರೀರಾಮನು ಪುಷ್ಪಕದಿಂದಿಳಿದು ಶಿವಲಿಂಗವನ್ನು ಸ್ಥಾಪಿಸಿದನೆಂದು ಹೇಳಿದೆ.

(೪) ರಾಮೋ ವೈ ಸ್ಥಾಪಯಾಮಾಸ ಶಿವಲಿಂಗಮನುತ್ತಮಮ್ |
ಲಿಂಗಸ್ಥಂ ಪೂಜಯಾಮಾಸ ರಾಘವಸ್ತಂ ಸ ಈಶ್ವರಮ್ ||

—ಸ್ಕಾಂದಪುರಾಣ

(೫) ಆಗ್ನೇಯ ಪುರಾಣದಲ್ಲಿ ಶಿವನು ಶ್ರೀರಾಮನನ್ನುದ್ದೇಶಿಸಿ "ವಿಶ್ವಾತ್ಮ, ಸರ್ವವೂ ನಿನ್ನ ಲೀಲೆ. ನಿನ್ನ ಇಷ್ಟದಂತಾಗಲಿ. ರಾಮನಾಥ ಎಂಬ ಹೆಸರಿನಲ್ಲಿ ನನ್ನ ಲಿಂಗವನ್ನು ಇಲ್ಲಿ ಸ್ಥಾಪಿಸು" ಎಂದು ನುಡಿದನೆಂದೂ ಅದರಂತೆ ರಾಮನಾಥ ಪ್ರತಿಷ್ಠೆಯಾಯಿತೆಂದೂ ಕಥೆ ಇದೆ.

(೬) ರಾಮಾಯಣಶಿರೋಮಣಿ ಎಂಬ ವ್ಯಾಖ್ಯಾನದಲ್ಲಿ ಹೀಗೆ ಬರೆದಿದೆ: "ರಾಮೇಶ್ವರ ದೇವಸ್ಥಾನದ ಒಂದು ಹಳೆಯ ಗೋಡೆಯು ಕುಸಿದಾಗ, ಒಂದು ತಾಮ್ರಶಾಸನವು ದೊರೆಯಿತು. ರಾಮೇಶ್ವರದ ರಾಜನು ಆ ಶಾಸನವನ್ನು ಕಾಶಿಗೆ ಕಳಿಸಿದನು. ಅದರಲ್ಲಿ ಈ ಶ್ಲೋಕವಿದೆ:

ಶಂಭೋಃ ಪ್ರೀತ್ಯೈ ಯೋ ಮಯಾಕಾರಿ ಧರ್ಮಃ
ಸ್ವೇ ಸ್ವೇ ಕಾಲೇ ಮಾನನೀಯೋ ಭವದ್ಭಿಃ |
ನಾನಾವರ್ಣಾನ್ ಭಾವಿನೋ ಭೂಮಿಪಾಲಾನ್
ಭೂಯೋ ಭೂಯೋ ಯಾಚತೇ ರಾಮಚಂದ್ರಃ ||

೭

## ತತೋ ಲಕ್ಷ್ಮಣಮಾಸಾದ್ಯ ವೈದೇಹೀಂ ಚಾಭ್ಯವಾದಯತ್

—ಪುಟಗಳು ೫೪೪-೫೪೫

ಭರತನು ಲಕ್ಷ್ಮಣನನ್ನು ವಂದಿಸಿದನು ಎಂಬ ಅರ್ಥವು ಈ ಮಾತಿನಿಂದ ಸರಳವಾಗಿ ಹೊರಡುತ್ತದೆ. ಈ ಪಕ್ಷದಲ್ಲಿ 'ವೈದೇಹೀಂ ಚ' ಎಂಬಲ್ಲಿರುವ 'ಚ' ಶಬ್ದವೂ ಉಪಪನ್ನವಾಗುತ್ತದೆ. ತಿಲಕವ್ಯಾಖ್ಯಾನದಲ್ಲಿ "ಲಕ್ಷ್ಮಣನು ಭರತನಿಗಿಂತ ವಯಸ್ಸಿನಲ್ಲಿ ಚಿಕ್ಕವನೆಂಬುದು ದಿಟ. ಆದರೆ ಶ್ರೀರಾಮನೊಡನೆ ಹದಿನಾಲ್ಕು ವರ್ಷಗಳವರೆಗಿದ್ದು ಅವನನ್ನು ಸೇವಿಸಿದ್ದರಿಂದಲೂ ಹಿರಿಯರನ್ನು ಈ ರೀತಿಯಲ್ಲಿ ಸೇವಿಸಬೇಕೆಂದು ತನ್ನ ಆಚರಣೆಯಿಂದ ಮಾರ್ಗದರ್ಶನವನ್ನು ನೀಡಿದ್ದರಿಂದಲೂ ಪೂಜ್ಯನಾಗಿದ್ದಾನೆಂದು ಭರತನು ಲಕ್ಷ್ಮಣನನ್ನು ವಂದಿಸಿದ್ದು ಉಚಿತವೇ ಸರಿ" ಎಂದು ಬರೆದಿದೆ.

ಕಾಳಿದಾಸನು ಈ ಸಂದರ್ಭವನ್ನು ವರ್ಣಿಸುತ್ತ ರಘುವಂಶದ ಹದಿಮೂರನೆಯ ಸರ್ಗದಲ್ಲಿ—

ಸೌಮಿತ್ರಿಣಾ ತದನು ಸಂಸಸೃಜೇ ಸ ಚೈನ-
ಮುತ್ಥಾಪ್ಯ ನಮ್ರಶಿರಸಂ ಭೃಶಮಾಲಿಲಿಂಗ ||

ಎಂದು ಹೇಳಿದ್ದಾನೆ. ಇಲ್ಲಿಯೂ ಸಹ "ಭರತನು ಲಕ್ಷ್ಮಣನಿಗೆ ವಂದಿಸಿದನು. ನಮ್ರಶಿರಸ್ಕನಾದ ಭರತನನ್ನು ಮೇಲೆತ್ತಿ ಲಕ್ಷ್ಮಣನು ಆಲಿಂಗಿಸಿಕೊಂಡನು" ಎಂಬುದು ಯಥಾಶ್ರುತವಾಗಿ ಹೊರಡುವ ಅರ್ಥ. ಮಲ್ಲಿನಾಥರು ಈ ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆಯುತ್ತ "ಭರತನು ಲಕ್ಷ್ಮಣನೊಡನೆ ಬಂದು ಸೇರಿದನು. ಆಗ ನಮಸ್ಕರಿಸಿದ ಲಕ್ಷ್ಮಣನನ್ನು ಭರತನು ಮೇಲೆತ್ತಿ ಆಲಿಂಗಿಸಿಕೊಂಡನು" ಎಂದು ಹೇಳಿದ್ದು

ಅರ್ಥಮಾಡಿದ್ದಾರೆ. ಈ ವ್ಯಾಖ್ಯಾನವು ಕ್ಲಿಷ್ಟವೆಂಬುದು ಅವರಿಗೂ ಗೊತ್ತು. ಆದ್ದರಿಂದಲೇ, 'ಅನಾರ್ಜವ'ದಿಂದ ಹೀಗೇಕೆ ವ್ಯಾಖ್ಯಾನ ಮಾಡಿದ್ದು ? ಎಂದು ತಾವೇ ಆಶಂಕಿಸಿ, 'ತತೋ ಲಕ್ಷ್ಮಣಮಾಸಾದ್ಯ....' ಎಂಬ ರಾಮಾಯಣ ಶ್ಲೋಕದ ಟೀಕಾಕಾರರನ್ನವಲಂಬಿಸಿ ತಾವು ಹಾಗೆ ಬರೆದಿರುವುದಾಗಿ ತಿಳಿಸಿದ್ದಾರೆ.

೮

## ಲಬ್ಧ್ವಾ ಕುಲಧನಂ ರಾಜಾ ಲಂಕಾಂ ಪ್ರಾಯಾದ್ವಿಭೀಷಣಃ

—ಪುಟ ೫೬೫

ಕುಲಧನವೆಂದರೆ ಇಕ್ಷ್ವಾಕುವಂಶದ ರಾಜರು ಪೂಜಿಸುತ್ತಿದ್ದ ಶ್ರೀರಂಗ ವಿಗ್ರಹವೆಂದು ಕೆಲವರು ಹೇಳುತ್ತಾರೆ. ಆದರೆ ಇಕ್ಷ್ವಾಕುವೆಂಬ ಶಬ್ದವು ಮೂಲದಲ್ಲಿಲ್ಲ. ಅಲ್ಲದೆ ಮುಂದೆ ಅವತಾರ ಸಮಾಪ್ತಿಯ ಸಮಯದಲ್ಲಿ ಶ್ರೀರಾಮನು ವಿಭೀಷಣನನ್ನು ಕುರಿತು—

ಕಿಂಚಾನ್ಯದ್ವಕ್ತುಮಿಚ್ಛಾಮಿ ರಾಕ್ಷಸೇಂದ್ರ ಮಹಾಮತೇ |
ಆರಾಧಯ ಜಗನ್ನಾಥಮಿಕ್ಷ್ವಾಕುಕುಲದೈವತಮ್ ||

—ಉತ್ತರ. ಸ. ೧೦೮, ಶ್ಲೋ. ೩೦

ಎಂದು ಹೇಳಿ ಶ್ರೀರಂಗವಿಗ್ರಹವನ್ನು ಕೊಟ್ಟನೆಂದು ಸೂಚನೆ ಇದೆ.

ಪದ್ಮಪುರಾಣದಲ್ಲಿಯೂ ಅವತಾರಸಮಾಪ್ತಿಸಮಯದಲ್ಲಿ—

ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ |
ತಾವದ್ರಾಮಸ್ಯ ರಾಜ್ಯಸ್ಥಃ ಕಾಲೇ ಮಮ ಪದಂ ವ್ರಜ ||

ಇತ್ಯುಕ್ತ್ವಾ ಪ್ರದದೌ ತಸ್ಮೈ ಸ್ವವಿಶ್ಲೇಷಾಸಹಿಷ್ಣವೇ |
ಶ್ರೀರಂಗಶಾಯಿನಂ ಸ್ವಾರ್ಚ್ಯಮಿಕ್ಷ್ವಾಕುಕುಲದೈವತಮ್ ||

ರಂಗಂ ವಿಮಾನಮಾದಾಯ ಲಂಕಾಂ ಪ್ರಾಯಾದ್ವಿಭೀಷಣಃ ||

ಎಂದು ಹೇಳಿದೆ. ಆದ್ದರಿಂದ ಪ್ರಕೃತದಲ್ಲಿ ಕುಲಧನವೆಂದರೆ ರಾಕ್ಷಸವಂಶದ ಆಸ್ತಿಯಾದ ಲಂಕಾರಾಜ್ಯವೆಂದು ಹೇಳುವುದು ಯುಕ್ತವಾಗಿ ತೋರುತ್ತದೆ.

# ಪರಿಶಿಷ್ಟ

ಸಮಗ್ರವಾದ ಶ್ರೀಮದ್ರಾಮಾಯಣದ ಮತ್ತು ಸುಂದರಕಾಂಡದ ಪಾರಾಯಣ ವಿಧಿಗಳನ್ನು ಬಾಲಕಾಂಡ ಮತ್ತು ಸುಂದರಕಾಂಡದ ಸಂಪುಟಗಳಲ್ಲಿ ತಿಳಿಸಲಾಗಿದೆ. ಭಕ್ತಜನರ ಸೌಕರ್ಯಾರ್ಥವಾಗಿ ಇಲ್ಲಿ ಕೆಲವು ಪರಿಶಿಷ್ಟವಿಷಯಗಳನ್ನು ಬರೆಯಲಾಗಿದೆ.

ವಾಸಂತಂ ಶಾರದಂ ಚೇತಿ ನವರಾತ್ರಂ ದ್ವಿಧಾ ಭವೇತ್ ।

ದ್ವಯೋರವಶ್ಯಂ ಶ್ರೋತವ್ಯಂ ಪಾಠ್ಯಂ ರಾಮಾಯಣಂ ಭವೇತ್ ॥

ಎಂದು ಪಾರಾಶರ್ಯೋಪಪುರಾಣದಲ್ಲಿ ಹೇಳಿದೆ. ಅದರ ಪ್ರಕಾರ ಚೈತ್ರ ಶುದ್ಧ ಪಾಡ್ಯದಿಂದಲೂ ಆಶ್ವಯುಜ ಶುದ್ಧ ಪಾಡ್ಯದಿಂದಲೂ ಒಂಬತ್ತು ದಿನಗಳು ರಾಮಾಯಣದ ಶ್ರವಣ ಮತ್ತು ಪಾರಾಯಣಗಳಿಗೆ ಪ್ರಶಸ್ತವಾದವು. ದಶಮಿಯ ದಿನ ಶ್ರೀರಾಮ ಪಟ್ಟಾಭಿಷೇಕೋತ್ಸವವನ್ನು ಆಚರಿಸಬೇಕು.

**ಸಾಮ್ರಾಜ್ಯ ಪಟ್ಟಾಭಿಷೇಕ :** ಶುಕ್ಲಪಕ್ಷದ ಪುನರ್ವಸುನಕ್ಷತ್ರದಿಂದಾರಂಭಿಸಿ ಮುಂದಿನ ಪುನರ್ವಸುವಿನವರೆಗೆ ಪ್ರತಿದಿನವೂ ೨೦ ಸರ್ಗಗಳಂತೆ ಪಾರಾಯಣಮಾಡುವುದು. ಒಂದು ಸಮಗ್ರ ಪಾರಾಯಣವು ಮುಗಿದೊಡನೆ ಪಟ್ಟಾಭಿಷೇಕ. ಅದೇ ಪುನರ್ವಸುವಿನಲ್ಲಿ ಮತ್ತೆ ಮುಂದಿನ ಪಾರಾಯಣದ ಆರಂಭ. ಹೀಗೆ ಮಾಡುತ್ತಹೋದಾಗ ೧೦೮ನೆಯ ಪಟ್ಟಾಭಿಷೇಕವು ಸಾಮ್ರಾಜ್ಯ ಪಟ್ಟಾಭಿಷೇಕವೆನಿಸಿಕೊಳ್ಳುವುದು. ಇದಕ್ಕೆ ಬಹುದೀರ್ಘಕಾಲ ಬೇಕು. ಆದ್ದರಿಂದ, ಚೈತ್ರ ಶುದ್ಧ ನವಮಿಯಿಂದ ಆರಂಭಿಸಿ ಬಹುಳ ನವಮಿಗೆ ಒಂದು ಪಾರಾಯಣ; ಪಟ್ಟಾಭಿಷೇಕ. ಮತ್ತೆ ಪಾರಾಯಣದ ಆರಂಭ. ಈ ಕ್ರಮದಂತೆ ಒಂದು ವರ್ಷದಲ್ಲಿ ೨೪ ಪಾರಾಯಣಗಳನ್ನು ಮುಗಿಸಿ ಆಚರಿಸುವ ಪಟ್ಟಾಭಿಷೇಕಕ್ಕೂ ಸಾಮ್ರಾಜ್ಯ ಪಟ್ಟಾಭಿಷೇಕವೆಂಬ ಹೆಸರಿದೆ.

ಪುಷ್ಯವನ್ನು ಹೊರತಾಗಿ ಯಾವ ಮಾಸದಲ್ಲಾದರೂ ಆರಂಭಿಸಿ, ಒಟ್ಟು ೧೦೮ ಅಥವಾ ೨೮ ಪಾರಾಯಣಗಳನ್ನು ಮುಗಿಸಿ ಆಚರಿಸುವ ಪಟ್ಟಾಭಿಷೇಕವನ್ನೂ ಸಾಮ್ರಾಜ್ಯಪಟ್ಟಾಭಿಷೇಕವೆಂದು ಹೇಳುವುದುಂಟು.

**ಪುನರ್ವಸುತ್ರಯ ಪಾರಾಯಣ :** ಪುನರ್ವಸುವಿನಲ್ಲಿ ಆರಂಭಿಸಿ ದಿನಕ್ಕೆ ಹತ್ತು ಸರ್ಗಗಳಂತೆ ಎರಡು ತಿಂಗಳು (ಸುಮಾರು ೫೪ ದಿನ) ಕಾಲದಲ್ಲಿ ಸಮಗ್ರಪಾರಾಯಣವನ್ನು ಮುಗಿಸಿ ಮೂರನೆಯ ಪುನರ್ವಸುವಿನಲ್ಲಿ ಪಟ್ಟಾಭಿಷೇಕವನ್ನಾಚರಿಸಬಹುದು.

**ವಸಂತ ನವರಾತ್ರ ಪಾರಾಯಣ :** ಚೈತ್ರ ಶುದ್ಧ ಪಾಡ್ಯದಿಂದ ಒಂಬತ್ತು ದಿನ ಪಾರಾಯಣ. ದಶಮಿಯಂದು ಪಟ್ಟಾಭಿಷೇಕ. ಸಪ್ತಮಿಗೆ ಪಾರಾಯಣವನ್ನು ಮುಗಿಸಿ ಅಷ್ಟಮಿಯಂದು ಸೀತಾಜನ್ಮೋತ್ಸವ. ನವಮಿಯಲ್ಲಿ ಸೀತಾಕಲ್ಯಾಣೋತ್ಸವ ಪರ್ಯಂತವಾಗಿ ಬಾಲಕಾಂಡದ ಪಾರಾಯಣ ಮತ್ತು ಶ್ರೀರಾಮ ಜನ್ಮೋತ್ಸವ. ದಶಮಿಯಲ್ಲಿ ಬಾಲಕಾಂಡದ ಅವಶಿಷ್ಟಭಾಗ ಪಾರಾಯಣ, ಸೀತಾಕಲ್ಯಾಣೋತ್ಸವ ಮತ್ತು ಪಟ್ಟಾಭಿಷೇಕ.

ಜನಕರಾಜನು ಯಾಗಕ್ಕಾಗಿ ಭೂಮಿಯನ್ನು ಅಗೆಸಿ ಸ್ವಚ್ಛಮಾಡು ತ್ತಿರುವಾಗ ಅಯೋನಿಜೆಯಾದ ಸೀತೆ ದೊರಕಿದಳಷ್ಟೆ. ಅವಳು ಜನಕನಿಗೆ ದೊರಕಿದ ದಿನ ಚೈತ್ರ ಶುಕ್ಲಾಷ್ಟಮಿ.

**ಶರನ್ನವರಾತ್ರ ಪಾರಾಯಣ :** ಪಾಡ್ಯದಿಂದ ಒಂಬತ್ತು ದಿನ ಪಾರಾಯಣ. ವಿಜಯದಶಮಿಯಲ್ಲಿ ಪಟ್ಟಾಭಿಷೇಕ. ರಾಮಜನ್ಮ ಸರ್ಗದ ಪಾರಾಯಣದ ದಿನ ರಾಮಜನ್ಮೋತ್ಸವ. ಸೀತಾಕಲ್ಯಾಣದ ಘಟ್ಟದ ದಿನ ಕಲ್ಯಾಣೋತ್ಸವ. ಅಷ್ಟಮಿಯಲ್ಲಿ ಸೀತಾಜನ್ಮೋತ್ಸವ.

ಉತ್ತರಕಾಂಡವನ್ನು ಈ ಪ್ರಾಂತದಲ್ಲಿ ಪಾರಾಯಣಮಾಡುವ ಸಂಪ್ರದಾಯವಿಲ್ಲ. ಪಾರಾಯಣ ಮಾಡಿದರೆ ದೋಷವೇನೂ ಇಲ್ಲವೆಂದೂ ಮುಮುಕ್ಷುಗಳು ಉತ್ತರಕಾಂಡವನ್ನೂ ಪಠಿಸಬೇಕೆಂದೂ ಕೆಳಗಿನ ಪ್ರಮಾಣದಿಂದ ತಿಳಿದುಬರುತ್ತದೆ.

ನಿತ್ಯಪಾಠೇ ಚ ಪಾಠೇ ಚ ಮುಮುಕ್ಷೂಣಾಂ ಯಥಾಕ್ರಮಮ್ ।
ಕಾಂಡಾಃ ಸಪ್ತಾಪಿ ಪಾಠ್ಯಾಃ ಸ್ಯುರನ್ಯಥಾ ನಿಷ್ಫಲಂ ಭವೇತ್ ॥
ಕಾಮ್ಯಪಾಠೇ ತು ಷಟ್ಕಾಂಡಮಿತಂ ರಾಮಾಯಣಂ ಪಠೇತ್ ।
ನ ತತ್ರೋತ್ತರಕಾಂಡಸ್ಯ ಪಠನೇ ಶ್ರೇಯಸಾಂ ಕ್ಷತಿಃ ॥

—ಸ್ಕಾಂದೋಪಪುರಾಣ, ಪುರಾಣವೈಭವ ಖಂಡ

ಮೇಲ್ಕಂಡ ವಿಷಯಗಳನ್ನು ಶ್ರೀ ನಾರಾಯಣಾಧ್ವರಿಗಳು ಸಂಗ್ರಹಿಸಿದ ರಾಮೋತ್ಸವರತ್ನದರ್ಶಿನಿಯಿಂದಲೂ ಶ್ರೀ ಸೋಮಸುಂದರದೀಕ್ಷಿತರು ಸಂಪಾದಿಸಿದ ವಾಲ್ಮೀಕಿರಾಮಾಯಣ ಮಾಹಾತ್ಮ್ಯದಿಂದಲೂ ಸಂಗ್ರಹಿಸಿ ಕೊಡಲಾಗಿದೆ. ಪಟ್ಟಾಭಿಷೇಕದ ಪ್ರಯೋಗಾದಿವಿಧಿಗಳನ್ನು ಅಭಿಜ್ಞರಾದ ವೈದಿಕರಿಂದ ತಿಳಿದುಕೊಳ್ಳಬೇಕು.